ಸಂಶೋಧನ ಗ್ರಂಥಮಾಲೆ : ೩೬

# ಗಳಗನಾಥರು
ಮತ್ತು
# ಅವರ ಕಾದಂಬರಿಗಳು

ಕೃಷ್ಣಮೂರ್ತಿ ಕಿತ್ತೂರ




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೭೮

" ಅಗತ್ಯವಾಗಿ ಆಗಬೇಕಾಗಿದ್ದ ವಿಷಯವೊಂದರ ಮೇಲೆ ಸಮರ್ಥವಾದ ಮತ್ತು ಬಹುಮಟ್ಟಿಗೆ ಸಮಗ್ರವಾದ ಕೆಲಸ ನಡೆದಿರುವುದನ್ನು ಈ ಪ್ರಬಂಧದಲ್ಲಿ ಕಾಣಬಹುದಾಗಿದೆ. ಆಧುನಿಕ ಕನ್ನಡ ಸಾಹಿತ್ಯದ, ಮುಖ್ಯವಾಗಿ ಕಾದಂಬರಿ ಸಾಹಿತ್ಯದ, ರೂವಾರಿಗಳಾದ ಗಳಗನಾಥರ ಮೇಲೆ ಅಭ್ಯಾಸಪೂರ್ಣವಾದ, ಪ್ರೌಢವಾದ, ಸಂಶೋಧನಾತ್ಮಕವಾದ ಗ್ರಂಥ ಈ ವರೆಗೂ ಪ್ರಕಟವಾಗದೇ ಇರುವುದು ಒಂದು ಕೊರತೆಯೇ ಸರಿ. ಈ ಪ್ರಬಂಧ ಅದನ್ನು ನೀಗುವ ಪ್ರಯತ್ನದಲ್ಲಿ ಬಹು ದೊಡ್ಡ ಹೆಜ್ಜೆಯಾಗಿದೆ. ಗಳಗನಾಥರು ಬದುಕಿದ್ದ ಕಾಲದ ಪರಿಸರ, ಅವರ ಜೀವನದ ವಿವರಗಳು, ಅವರ ಕೃತಿ ರಚನೆಯ ಸಮೃದ್ಧ ಶಕ್ತಿ, ಅವರ ಕೃತಿಗಳ ಸಂಖ್ಯೆ, ಅದರಲ್ಲಿ ಕಾದಂಬರಿಗಳು ಅನುವಾದಿತ, ಸ್ವತಂತ್ರ-ಇತ್ಯಾದಿ ವಿಷಯಗಳನ್ನು ದೀರ್ಘವಾಗಿ ಚರ್ಚಿಸಿ ವಿವೇಚಿಸಿ ಪ್ರಮುಖವಾದ ನಿರ್ಣಯಗಳಿಗೆ ಬಂದಿದ್ದಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಉಪಲಬ್ಧವಿದ್ದ ಎಲ್ಲ ಆಕರಗಳನ್ನೂ ಶೋಧಿಸಿರುವುದು, ಮತ್ತು ಫಲಪ್ರದವಾಗಿ ಅವನ್ನು ಬಳಿಸಿಕೊಂಡಿರುವುದು...

... ಅಧಿಕೃತ ಆಕರಗಳನ್ನು ಅತಿ ಎಚ್ಚರಿಕೆಯಿಂದ ಬಳಸಿಕೊಂಡು ಇದನ್ನು ರಚಿಸಿರುವುದರಿಂದ ಪ್ರಾಮಾಣಿಕವೂ ವಿಶ್ವಾಸಾರ್ಹವೂ ಆಗಿದ್ದು ಅನೇಕ ಸಂಗತಿಗಳ ಮೇಲೆ ಹೊಸ ಬೆಳಕನ್ನು ಬೀರುವಂತಿದೆ. ಆದರ್ಶ ಶಿಕ್ಷಕರಾಗಿ, ಪತ್ರಕರ್ತರಾಗಿ, ತತ್ವನಿಷ್ಠ ಸಾಧಕರಾಗಿ, ನಿಷ್ಠಾವಂತ ಬರಹಗಾರರಾಗಿ, ಕಾದಂಬರಿಕಾರರಾಗಿ ಅವರು ಬೆಳೆದುಬಂದ ಬಗೆ ಬಹುಶಃ ಮೊಟ್ಟ ಮೊದಲ ಬಾರಿಗೆ ಇಷ್ಟು ವಿವರವಾಗಿ ಒಂದೇ ಕಡೆಗೆ ದೊರೆಯುವಂತಾಗಿರುವುದು ಈ ಪ್ರಬಂಧದ ಸ್ತುತ್ಯರ್ಹ ಸಾಧನೆ.

ಒಟ್ಟಿನಲ್ಲಿ ಗಳಗನಾಥರನ್ನು ಕುರಿತ ಈ ಅಧ್ಯಯನ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯ ಅಧ್ಯಯನಕ್ಕೆ ಹೊಸದೊಂದು ಅಧ್ಯಾಯವನ್ನು ಸೇರಿಸಿದೆ, ಲೇಖಕರ ವಿಷಯಸಂಗ್ರಹಣೆ, ವಿಶ್ಲೇಷಣೆ, ಸಂಯೋಜನೆ ಮತ್ತು ಇದರಿಂದ ಸಂಭವಿಸುವ ಸಮತೋಲದ ತೀರ್ಮಾನಗಳು ಮೆಚ್ಚುತಕ್ಕವು; ಸಂಶೋಧನ ವಿದ್ಯಾರ್ಥಿಗೆ ಅನುಕರಣೀಯವಾದವುಗಳು ".

–ಎಚ್. ತಿಪ್ಪೇರುದ್ರಸ್ವಾಮಿ

" ....ಗಳಗನಾಥರ ಪರಿಸರ ಮತ್ತು ಅವರ ಸಂಕ್ಷಿಪ್ತ ಜೀವನ ಕತೆಯನ್ನೊಳಗೊಂಡ ಪ್ರಾರಂಭದ ಪ್ರಕರಣಗಳನ್ನು ರಚಿಸುವಾಗ ನಿಬಂಧಕಾರರು ಅನೇಕ ಆಕರಗಳನ್ನು ಶೋಧಿಸಿ, ವಿಷಯಗಳನ್ನು ಸಂಗ್ರಹಿಸಿ, ಸಮರ್ಪಕವಾಗಿ ನಿರೂಪಿಸಿದ್ದಾರೆ...

... ಆಧುನಿಕ ಕನ್ನಡದ ಗದ್ಯಕ್ಕೆ ಬುನಾದಿ ಹಾಕಿದವರಲ್ಲಿ ಗಳಗನಾಥರು ಅಗ್ರಗಣ್ಯರೆನ್ನುವುದನ್ನು ಸಾಕ್ಷ್ಯಾಧಾರಗಳಿಂದ ತೋರಿಸಿಕೊಟ್ಟಿದ್ದಾರೆ. ವ್ಯಕ್ತಿತ್ವ ನಿರೂಪಣೆಯಲ್ಲಿ ಎಲ್ಲಿಯೂ ಭಾವುಕತೆಯ ಪಕ್ಷಪಾತವನ್ನು ತೋರದೆ ಮಮಕಾರಕ್ಕೆಡೆಗೊಡದೆ ಸಾಕ್ಷಿಪ್ರಜ್ಞೆಯನ್ನು ಮೆರೆದಿದ್ದಾರೆ...

ಸ್ವತಂತ್ರ ಕಾದಂಬರಿಗಳನ್ನು ವಿಮರ್ಶಿಸುವಾಗಲೂ ನಿಬಂಧಕಾರರು ಸಾಕಷ್ಟು ಸಂಯಮವನ್ನು ತೋರಿದ್ದಾರೆ. ಪಾತ್ರರಚನೆಯಲ್ಲಿನ ನ್ಯೂನತೆಗಳನ್ನು, ವರ್ಣನೆಗಳ ಅತಿತ್ವವನ್ನು ಟೀಕಿಸಿದ್ದಾರೆ; ಸಮಕಾಲೀನ ವಿಮರ್ಶಕರ ಪ್ರಶಂಸೆ ಹೆಚ್ಚಾಯಿತೆಂದು ಹೇಳುತ್ತಾರೆ...

ಒಟ್ಟಿನಲ್ಲಿ ಗಳಗನಾಥರನ್ನು ಕುರಿತ ಈ ನಿಬಂಧ ಪ್ರೌಢವಾಗಿದೆ, ವಿಚಾರಪರಿಪ್ಲುತವಾಗಿದೆ, ಕನ್ನಡ ವಿಮರ್ಶಾ ಕ್ಷೇತ್ರಕ್ಕೆ ಇದೊಂದು ಉತ್ತಮ ಕೊಡುಗೆ ಎನ್ನುವುದರಲ್ಲಿ ಸಂದೇಹವಿಲ್ಲ..."

–ದೇ. ಜವರೇಗೌಡ

# ಗಳಗನಾಥರು ಮತ್ತು ಅವರ ಕಾದಂಬರಿಗಳು






ಕೃಷ್ಣಮೂರ್ತಿ ಕಿತ್ತೂರ

ವ್ಯಾಸಂಗ ವಿಸ್ತರಣ-ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ



ಸಂಶೋಧನ ಗ್ರಂಥಮಾಲೆ : ೩೬

# ಗಳಗನಾಥರು

ಮತ್ತು

# ಅವರ ಕಾದಂಬರಿಗಳು

ಕೃಷ್ಣಮೂರ್ತಿ ಕಿತ್ತೂರ







ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯೭೮

ಪ್ರಕಾಶಕರು :

**ಸಿ. ಎಸ್. ಕಣವಿ,**
ನಿರ್ದೇಶಕರು,
ವ್ಯಾಸಂಗವಿಸ್ತರಣ – ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೩

ಪ್ರಥಮ ಮುದ್ರಣ : ೧೦೦೦ ಪ್ರತಿಗಳು
ಅಗಸ್ಟ, ೧೯೭೮







**ಬೆಲೆ : ರೂ. ೨೪/-**

ಮುದ್ರಕರು :

**ಪಿ. ಎಸ್. ಹೊಂಬಾಳಿ**
ಹೊಂಬಾಳಿ ಪ್ರಿಂಟರಿ,
ಕೊಯಿನ್ ರೋಡ,
ಹುಬ್ಬಳ್ಳಿ - ೫೮೦ ೦೨೦.

ದಿ. ಗಳಗನಾಥರ ಪುಣ್ಯಸ್ಮರಣೆಗೆ

## ಕನ್ನಡ ಕಾದಂಬರೀ ಪಿತಾಮಹ



ಗಳಗನಾಥರು

5 - 1 - 1869 22 - 4 - 1942

## ACKNOWLEDGEMENT

The Karnatak University, Dharwad is grateful to the University Grants Commission, New Delhi for the financial assistance towards the publication of this thesis under the scheme of Publication of Research Works including Doctoral Theses. (Development Scheme under 5th plan period.)

KARNATAK UNIVERSITY
DHARWAD
1-8-1978

A. K. AGARWAL
REGISTRAR

# ಮುನ್ನುಡಿ

ಹೊಸಗನ್ನಡ ಭಾಷೆ-ಸಾಹಿತ್ಯಗಳಿಗೆ ಭದ್ರ ಬುನಾದಿ ಹಾಕಿದ ಪುಣ್ಯಪುರುಷರಲ್ಲಿ ಗಳಗನಾಥರೂ ಒಬ್ಬರು. ವೆಂಕಟೇಶ ತಿರಕೋ ಕುಲಕರ್ಣಿ (ಗಳಗನಾಥ) ಎಂಬ ಹೆಸರು ನಾಲ್ಕು ದಶಕಗಳ ಹಿಂದೆ ಉತ್ತರ ಕರ್ನಾಟಕದ ಮನೆಮಾತಾಗಿದ್ದಿತು. ಆಗ ಜನಸಾಮಾನ್ಯರು ಓದಿ ಆನಂದಪಟ್ಟು ಮೈಮರೆಯುತ್ತಿದ್ದ ಸಾಹಿತ್ಯವೆಂದರೆ ಗಳಗನಾಥರ ಸಾಹಿತ್ಯ. ಅವರ 'ಮಾಧವ ಕರುಣಾವಿಲಾಸ', 'ಕನ್ನಡಿಗರ ಕರ್ಮಕಥೆ' ಮುಂತಾದ ಹೊತ್ತಗೆಗಳು ಅಂದು ಎಲ್ಲೆಲ್ಲಿಯೂ ಕಂಡುಬರುತ್ತಿದ್ದವು.

ವಿಜಯನಗರ ಸಾಮ್ರಾಜ್ಯದ ಪತನಾನಂತರ ಕರ್ನಾಟಕವನ್ನು ವಿಶೇಷತಃ ಉತ್ತರ ಕರ್ನಾಟಕವನ್ನು ಆವರಿಸಿದ್ದ ದಟ್ಟವಾದ ಕಗ್ಗತ್ತಲೆಯಲ್ಲಿ ಕನ್ನಡಿಗರು ತಮ್ಮದೆನ್ನುವುದೆಲ್ಲ-ವನ್ನೂ ಮರೆತು ಬಿಟ್ಟಿದ್ದರು. ಪಂಪ–ರನ್ನ, ಹರಿಹರ–ರಾಘವಾಂಕ, ಚಾಮರಸ–ಕುಮಾರವ್ಯಾಸ ಈ ಕವಿಗಳನ್ನು ಜನರು ಪೂರ್ಣ ಕೈಬಿಟ್ಟಿದ್ದಂತೆ ತೋರುತ್ತದೆ. ಅದು ಹೇಗೊ 'ಜೈಮಿನಿ ಭಾರತ', 'ರಾಜಶೇಖರವಿಳಾಸ' ಈ ಎರಡು ಗ್ರಂಥಗಳು ಕತ್ತಲೆಯಿಂದ ನುಸುಳಿಕೊಂಡು ತಮ್ಮ ಬೆಳಕನ್ನು ಬೀರುತ್ತಲಿದ್ದವು. ಸಾಹಿತ್ಯಾಭಿರುಚಿಯುಳ್ಳ ಪಂಡಿತರು 'ಜೈಮಿನಿ ಭಾರತ'ವನ್ನು ಓದಿ ಮುಗಿಸಿ, 'ರಾಜಶೇಖರವಿಳಾಸ'ವನ್ನು ಕರಗತಮಾಡಿಕೊಂಡರೆ ಕನ್ನಡ ಸಾಹಿತ್ಯದ ಅಧ್ಯಯನ ಮುಗಿಯಿತೆಂಬ ಭಾವನೆ ಆ ಕಾಲದಲ್ಲಿತ್ತು.

ಈ ಸಂಧಿಕಾಲದಲ್ಲಿ ಹೊಸಗನ್ನಡವನ್ನು ಉದ್ಧರಿಸುವ ಅನೇಕ ಜನ ಸಾಹಿತಿಗಳು ಉದಯವಾದರು. ರಸೆಲ್‌ರವರು, ಕರ್ನಾಟಕದಲ್ಲಿ ಕನ್ನಡಿಗರ ಮನೆಮಾತು ಕನ್ನಡವಾಗಿದ್ದು ಇಲ್ಲಿಯ ಶಾಲೆಗಳಲ್ಲಿ ಕನ್ನಡವನ್ನೇ ಕಲಿಸಬೇಕಲ್ಲದೆ ಮರಾಠಿಯನ್ನಲ್ಲವೆಂದು ಸ್ಪಷ್ಟವಾಗಿ ಆಜ್ಞೆ ಹೊರಡಿಸಿ, ಆ ದಿಸೆಯಲ್ಲಿ ಹೊಸ ನಾಂದಿ ಹಾಕಿದರು. ಟ್ರೇನಿಂಗ ಕಾಲೇಜು ಪ್ರಾರಂಭ ವಾಯಿತು. ಡೆಪ್ಯುಟಿ ಚನ್ನಬಸಪ್ಪ, ಗಂಗಾಧರ ಮಡಿವಾಳೇಶ್ವರ ತೂರಮರಿ, ವೆಂಕಟ ರಂಗೋ ಕಟ್ಟಿ, ಭುಜಂಗರಾವ ಹುಯಿಲಗೋಳ ಮೊದಲಾದವರು ಕನ್ನಡ ಸಾಹಿತ್ಯದ, ವಿಶೇಷತಃ ಗದ್ಯದ ಬೆಳವಣಿಗೆಗೆ ಕಂಕಣಕಟ್ಟಿದರು. ತೂರಮರಿಯವರ 'ಬಾಣಕಾದಂಬರಿ' ಕನ್ನಡ ಗದ್ಯಕ್ಕೆ ಇಂದಿಗೂ ಉತ್ತಮ ನಿದರ್ಶನವೆಂಬಂತೆ ಸೃಷ್ಟಿಯಾಯಿತು. ಸಹಿಗಾಗಿ ಮೋಡಿಯನ್ನು ಉಪ ಯೋಗಿಸುತ್ತಿದ್ದ ಜನತೆಯನ್ನು, ವಿಶೇಷತಃ ಅಧಿಕಾರಿಗಳನ್ನು ಬಡಿದೆಚ್ಚರಿಸಿ ಕನ್ನಡದಲ್ಲಿಯೇ ಸಹಿ ಹಾಕಬೇಕು, ಕನ್ನಡದಲ್ಲಿಯೇ ಬರೆಯಬೇಕೆಂಬ ಡೆಪ್ಯುಟಿ ಚನ್ನಬಸಪ್ಪನವರ ಸಿಂಹನಾದ ಕನ್ನಡವನ್ನು ಅಯ್ಯನವರ ಮಠದಿಂದ ಸರಕಾರಿ ಶಾಲೆ ಕಾಲೇಜುಗಳ ಮಟ್ಟಕ್ಕೆ ತಂದಿತು.

ಕರ್ನಾಟಕ, 19ನೆಯ ಶತಮಾನದ ಮಧ್ಯಭಾಗದಲ್ಲಿ ಆಂಗ್ಲ ಸಾಹಿತ್ಯದ ಪ್ರಭಾವಕ್ಕೆ ಒಳಗಾದಂತೆ ತೋರುತ್ತದೆ. ಮುದ್ದಣನ 'ರಾಮಾಶ್ವಮೇಧ' ಹಳಗನ್ನಡವಲ್ಲಿದ್ದರೂ ಹೊಸ

ಸಾಹಿತ್ಯದ ಸ್ಫೂರ್ತಿಯಿಂದ ತುಂಬಿತುಳುಕುತ್ತದೆ. ಈ ಕೃತಿ ಪ್ರಾರಂಭವಾದುದು ಹಳಗನ್ನಡ ಸಾಹಿತ್ಯದ ಪರಂಪರೆಯಿಂದಲ್ಲ. ಯಾವ ದೇವತಾಸ್ತುತಿಯೂ ಅಲ್ಲಿ ಕಾಣುವದಿಲ್ಲ. ಆಧುನಿಕ ಕಾದಂಬರಿ ಮಹತ್ವಪೂರ್ಣ ಘಟನಾನಿರೂಪಣೆಯಿಂದ ಸಹೃದಯರ ಚಿತ್ತವನ್ನು ಸೆಳೆವಂತೆ 'ರಾಮಾಶ್ವಮೇಧ' ಮಳೆಗಾಲದ ವರ್ಣನೆಯಿಂದ ಪ್ರಾರಂಭವಾಗುತ್ತದೆ. ಹೀಗೆ ಆಂಗ್ಲಸಾಹಿತ್ಯದ ಅತ್ಯಂತ ಪ್ರಭಾವೀ ಪ್ರಕಾರವೆನಿಸಿದ ಕಾದಂಬರಿ ಕರ್ನಾಟಕದಲ್ಲಿ ಕಾಲಿಟ್ಟಿತು.

ಹೊಸ ಸಾಹಿತ್ಯಪ್ರಕಾರ ಬೇರೂರಿ ನಿಲ್ಲಬೇಕಾದರೆ ಭಾಷಾಂತರ, ಅನುವಾದ, ಸೃಜನ ಕೃತಿ–ಈ ಮೂರು ಕ್ರಿಯಾಘಟ್ಟಗಳು ಅನಿವಾರ್ಯವೆಂದು ತೋರುತ್ತದೆ. ಕನ್ನಡ ಈ ನಿಯಮಕ್ಕೆ ಅಪವಾದವಾಗಿಲ್ಲ. ಜನತೆ ಆಂಗ್ಲ ಸಾಹಿತ್ಯಕೃತಿಗಳನ್ನು ಅಭ್ಯಸಿಸತೊಡಗಿದಂತೆ ಅಂತಹ ಕೃತಿಗಳನ್ನು ಕನ್ನಡಕ್ಕೆ ತರಬೇಕೆಂಬ ಲವಲವಿಕೆ ಆ ಕಾಲದ ಸಾಹಿತಿಗಳ ಮನದಲ್ಲಿ ಮೂಡಿನಿಂತಿದೆ. ಇಂತಹ ಮಹನೀಯರಲ್ಲಿ ಕಾದಂಬರಿ ಕ್ಷೇತ್ರಕ್ಕೆ ಮೊಸಲಾದ ಎರಡು ಹೆಸರುಗಳು ಚಿರಸ್ಮರಣೀಯವಾಗಿವೆ- ಉತ್ತರ ಕರ್ನಾಟಕದಲ್ಲಿ ಗಳಗನಾಥ, ಮೈಸೂರು ಭಾಗದಲ್ಲಿ ಬಿ. ವೆಂಕಟಾಚಾರ್ಯ. ಇಬ್ಬರೂ ಕನ್ನಡ ಕಾದಂಬರೀ ಸಾಹಿತ್ಯಸೌಧಕ್ಕೆ ಭದ್ರವಾದ ಅಡಿಪಾಯವನ್ನು ಹಾಕಿದರು. ಈ ಅವಧಿಯಲ್ಲಿ ಮರಾಠಿ ಮತ್ತು ಬಂಗಾಲಿ ಸಾಹಿತ್ಯ ಗಳಲ್ಲಿ ಕಾದಂಬರಿ ಸಾಹಿತ್ಯ ವಿಪುಲವಾಗಿ ಬೆಳೆದು ಜನಪ್ರಿಯತೆಯನ್ನು ಗಳಿಸಿದ್ದಿತು. ಗಳಗ ನಾಥರು ಮರಾಠಿಯಿಂದ, ಬಿ. ವೆಂಕಟಾಚಾರ್ಯರು ಬಂಗಾಲಿಯಿಂದ ಕಾದಂಬರಿ ಸಾಹಿತ್ಯ ವನ್ನು ಕನ್ನಡಿಸಿ ಕನ್ನಡ ಜನತೆಯಲ್ಲಿ ಓದುವ ಅಭಿರುಚಿ, ಸಾಹಿತ್ಯಾಭಿರುಚಿಗಳನ್ನು ಹೆಚ್ಚಿ ಸಿದರು. ಆ ಕಾಲದಲ್ಲಿ ಅವರು ಪಟ್ಟ ಪರಿಶ್ರಮ, ಗೈದ ಮಹತ್ಕಾರ್ಯಗಳನ್ನು ಸ್ಮರಿಸಿದರೆ ರೋಮಾಂಚನವೆನಿಸುತ್ತದೆ. ಇಂಥವರನ್ನು ನಮ್ಮ ಜನ ಮರೆಯದ ಮುನ್ನ ಅವರ ಜೀವನ, ಸಾಹಿತ್ಯಗಳ ವಿಷಯವಾಗಿ ಸಂಶೋಧನ ಅಭ್ಯಾಸವನ್ನು ನಡೆಸಿ ಪ್ರಬಂಧವನ್ನು ಬರೆಯುವುದು ಅವಶ್ಯವೆಂದು ತೋರುತ್ತದೆ. ಈ ಉದ್ದೇಶಕ್ಕಾಗಿ ಡಾ. ಕೃಷ್ಣಮೂರ್ತಿ ಕಿತ್ತೂರ ಅವರು 'ಗಳಗನಾಥರು ಮತ್ತು ಅವರ ಕಾದಂಬರಿಗಳು' ಎಂಬ ವಿಷಯವನ್ನು ಪಿಎಚ್. ಡಿ. ಅಧ್ಯ ಯನಕ್ಕಾಗಿ ಎತ್ತಿಕೊಂಡರು.

ಡಾ. ಕಿತ್ತೂರ ಅವರು ಒಳ್ಳೆಯ ಅಭ್ಯಾಸಿಗಳು; ನಿಷ್ಠೆಯಿಂದ ಕಾರ್ಯ ಮಾಡುವವರು. ವಿಮರ್ಶೆಯ ಮೂಲತತ್ತ್ವಗಳನ್ನು ಅಳವಡಿಸಿಕೊಂಡವರು; ಗಳಗನಾಥರ ಸಮಗ್ರ ಜೀವನವನ್ನೂ ಸಾಹಿತ್ಯಕೃತಿಗಳನ್ನೂ ಆಳವಾಗಿ ಅಧ್ಯಯನ ಮಾಡಿದವರು. ಗಳಗನಾಥರು ಆಗ ತಮ್ಮ ಸುರಸ ಗ್ರಂಥಮಾಲೆಯ ಹೊತ್ತಗೆಗಳನ್ನೂ 'ಸದ್ಬೋಧಚಂದ್ರಿಕೆ' ಪತ್ರಿಕೆಯ ಪ್ರತಿಗಳನ್ನೂ ಮಾರಲು ಊರೂರಿಗೆ ಹೋದಂತೆ ಕೃಷ್ಣಮೂರ್ತಿ ಕಿತ್ತೂರ ಅವರು ಅನೇಕ ಸ್ಥಳಗಳಿಗೆ ಹೋಗಿ ಗಳಗನಾಥರ ಆಪ್ತಮಿತ್ರರನ್ನು ಪರಿಚಿತರನ್ನು ಸಂದರ್ಶಿಸಿ, ಅವರ ಜೀವನಕ್ಕೆ ಸಂಬಂಧಪಟ್ಟ ವಿಷಯಗಳನ್ನು ಅರಿತು, ಅರೆದು ಗಳಗನಾಥರ ವ್ಯಕ್ತಿತ್ವವನ್ನು ಕಂಡುಕೊಂಡವರು. ಅವರ ಸಾಹಿತ್ಯಕೃತಿಗಳನ್ನು ಕೂಲಂಕಷವಾಗಿ ಅಧ್ಯಯನಮಾಡಿ ಅವುಗಳ ನೆಲೆ, ಭಾಷಾಂತರ ಕಲೆ ಮುಂತಾದುವನ್ನು ವಿವರ ವಿವರವಾಗಿ ಅಭ್ಯಸಿಸಿದವರು. ಹೀಗಾಗಿ ಮೌಲ್ಯಮಾಪನ ದೃಷ್ಟಿ ಯಿಂದ, ನಿರೂಪಣೆಯ ದೃಷ್ಟಿಯಿಂದ ಈ ಮಹಾಪ್ರಬಂಧ ಸುಂದರ ಕೃತಿಯಾಗಿ ಹೊರ

ಬರುತ್ತಲಿದೆ. ಕನ್ನಡ ವಿಮರ್ಶನ ಸಾಹಿತ್ಯಕ್ಕೆ ಇಂಥ ಒಂದು ಉತ್ತಮ ಕೃತಿ ಕಾಣಿಕೆಯನ್ನು ನೀಡಿದ ಡಾ. ಕಿತ್ತೂರ ಅವರನ್ನು ಅಭಿನಂದಿಸಿ ಈ ಮುನ್ನುಡಿಯನ್ನು ಮುಗಿಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೨೦ ಜುಲೈ, ೧೯೭೮

**—ಆರ್. ಸಿ. ಹಿರೇಮಠ**

# ನಿವೇದನೆ

ಕರ್ನಾಟಕ ವಿಶ್ವವಿದ್ಯಾಲಯದ ಪಿಎಚ್. ಡಿ. ಪದವಿಗಾಗಿ ನಾನು ಬರೆದು ಸಾದರ ಪಡಿಸಿದ ಪ್ರಬಂಧವೇ ಈ ಗ್ರಂಥ. ಪ್ರಾಥಮಿಕ ಶಾಲೆಯ ವಿದ್ಯಾರ್ಥಿಯಾಗಿರುವಾಗಿನಿಂದಲೇ ಗಳಗನಾಥರ ಕಾದಂಬರಿಗಳನ್ನು ಓದಿ ಮೆಚ್ಚಿದ್ದೆನಾದರೂ, 1969ರಲ್ಲಿ ಅವರ ಶತ ಸಾಂವತ್ಸರಿಕವು ನನಗೆ ಗಳಗನಾಥರ ಬಗ್ಗೆ ಹೆಚ್ಚಿನ ಅಭ್ಯಾಸವನ್ನು ಮಾಡುವ ಅವಕಾಶವನ್ನು ಕಲ್ಪಿಸಿಕೊಟ್ಟಿತು. ಆಗ ನಮ್ಮ ನಾಡಿನ ಅನೇಕ ಸಂಘಸಂಸ್ಥೆಗಳಲ್ಲದೆ ವಿಶ್ವವಿದ್ಯಾಲಯಗಳಂತಹ ಪ್ರಮುಖ ವಿದ್ಯಾಕೇಂದ್ರಗಳೂ ಕೂಡ ಗಳಗನಾಥರ ಬಗ್ಗೆ ಭಾಷಣಗಳನ್ನೂ ವಿಚಾರ ಸಂಕಿರಣಗಳನ್ನೂ ಏರ್ಪಡಿಸಿದುವು. ಅನೇಕ ನಿಯತಕಾಲಿಕೆಗಳು ಗಳಗನಾಥರನ್ನು ಕುರಿತು ವಿಶೇಷ ಲೇಖನಗಳನ್ನು ಪ್ರಕಟಿಸಿದುವು. 'ಕರ್ನಾಟಕ ಭಾರತಿ', 'ಕರ್ಮವೀರ', 'ಸದ್ಬೋಧ ಚಂದ್ರಿಕೆ'ಗಳಲ್ಲಿ ನಾನು ಲೇಖನಗಳನ್ನು ಬರೆಯಬೇಕಾಯಿತು. ಮೈಸೂರ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಆಶ್ರಯದಲ್ಲಿ ನಡೆದ ವಿಚಾರ ಸಂಕಿರಣ ದಲ್ಲೂ, ಕರ್ನಾಟಕ ವಿಶ್ವವಿದ್ಯಾಲಯದ ಉಪನ್ಯಾಸ ಶಿಬಿರದಲ್ಲಿಯೂ ಭಾಗವಹಿಸುವ ಅವಕಾಶ ನನಗೆ ಒದಗಿ ಬಂದಿತು. ಈ ಎಲ್ಲ ಅವಕಾಶವನ್ನು ಒದಗಿಸಿಕೊಟ್ಟ ಮಹನೀಯರಿಗೆ ನಾನು ಋಣಿಯಾಗಿರಬೇಕು. ಯಾಕೆಂದರೆ ಈ ಅವಕಾಶಗಳಿಂದಲೇ ನಾನು ಮತ್ತೆ ಗಳಗ ನಾಥರ ಸಾಹಿತ್ಯದತ್ತ ಆಕರ್ಷಿತನಾಗಿ, ಹೆಚ್ಚಿನ ಅಭ್ಯಾಸವನ್ನು ಮಾಡಿ ಪ್ರೌಢಪ್ರಬಂಧವನ್ನೇಕೆ ಬರೆಯಬಾರದೆಂದು ಯೋಚಿಸತೊಡಗಿದೆ.

ನನ್ನ ವಿಚಾರವನ್ನು ಡಾ. ಆರ್. ಸಿ. ಹಿರೇಮಠ ಅವರ ಮುಂದೆ ಇಟ್ಟಾಗ, ವಿದ್ಯಾ ಪಕ್ಷಪಾತಿಯಾದ ಅವರು ಸಂತೋಷದಿಂದ ನನ್ನನ್ನು ತಮ್ಮ ವಿದ್ಯಾರ್ಥಿಯನ್ನಾಗಿ ಸ್ವೀಕರಿಸಿ ಪ್ರೋತ್ಸಾಹಿಸಿ ಈ ಪ್ರಬಂಧವನ್ನು ಬರೆಯಲು ಮಾರ್ಗದರ್ಶನವನ್ನು ನೀಡಿದರು. ಅವರ ಉದಾರಾಂತಃಕರಣದ ಫಲವಾಗಿಯೇ ಈ ಪ್ರಬಂಧವು ಪೂರ್ಣಗೊಂಡು, ಕರ್ನಾಟಕ ವಿಶ್ವ ವಿದ್ಯಾಲಯದಿಂದ ನನಗೆ ಪಿಎಚ್. ಡಿ. ಪದವಿಯನ್ನು ದೊರಕಿಸಿಕೊಟ್ಟು ಈಗ ಅವರ 'ಮುನ್ನುಡಿ'ಯ ಹರಕೆಯೊಂದಿಗೆ ಪ್ರಕಟವಾಗುತ್ತಿದೆ. ನನ್ನ ವಿದ್ಯಾಗುರುಗಳೂ ಶಿಷ್ಯವತ್ಸಲರೂ ಆದ ಡಾ. ಆರ್. ಸಿ. ಹಿರೇಮಠ ಅವರಿಗೆ ನಾನು ಚಿರಋಣಿಯಾಗಿದ್ದೇನೆಂದು ಬೇರೆ ಹೇಳಬೇಕಾಗಿಲ್ಲ.

ಈ ಪ್ರಬಂಧವನ್ನು ಬರೆಯುವಂತೆ ನನ್ನನ್ನು ಪ್ರೋತ್ಸಾಹಿಸಿ, ಹಲವು ರೀತಿಯ ಸಹಾಯ - ಸಹಕಾರಗಳನ್ನು ನೀಡಿದ ಗುರುವರ್ಯ ಡಾ. ಎಂ. ಎಸ್. ಸುಂಕಾಪುರ ಅವರಿಗೂ, ಅನೇಕ ರೀತಿ ನೆರವಾದ ಡಾ. ಹಾ. ಮಾ. ನಾಯಕ, ಡಾ. ಶ್ರೀನಿವಾಸ ಹಾವನೂರ ಅವ ರಿಗೂ ನನ್ನ ವಂದನೆಗಳು. ನಾನು ಬರೆದ ಪ್ರಬಂಧದ ಭಾಗಗಳನ್ನೆಲ್ಲ ಆಗಾಗ ಓದುತ್ತ

ಡಾ. ಬಿ. ಬಿ. ಹೆಂಡಿ. ಶ್ರೀ ಗಿರಡ್ಡಿ ಗೋವಿಂದರಾಜ ಮತ್ತು ಡಾ. ಎಂ. ಎಂ. ಕಲಬುರ್ಗಿ ಅವರು ಸೂಕ್ತವಾದ ಸಲಹೆಗಳನ್ನಿತ್ತು ನೆರವಾಗಿರುವರು. ಗಳಗನಾಥರನ್ನು ಕುರಿತು ಹತ್ತಾರು ಉಪಯುಕ್ತ ವಿವರಗಳನ್ನಿತ್ತು ಉಪಕರಿಸಿದ ಡಾ. ಬೆಟಗೇರಿ ಕೃಷ್ಣಶರ್ಮಾ ಅವರನ್ನೂ ಇಲ್ಲಿ ಸ್ಮರಿಸುತ್ತೇನೆ. ಅದೇ ರೀತಿ ಪುಣೆ ವಿಶ್ವವಿದ್ಯಾಲಯದ ಮರಾಠೀ ವಿಭಾಗದ ಮುಖ್ಯಸ್ಥರಾದ ಡಾ. ಆರ್. ಎಸ್. ವಾಳಿಂಬೆ, ಕಲಬುರ್ಗಿಯ ಸರಕಾರೀ ಕಾಲೇಜಿನ ಮರಾಠೀ ಪ್ರಾಧ್ಯಾಪಕರಾದ ಶ್ರೀ ಚಂದ್ರಶೇಖರ ಕಪಾಳೆ ಅವರು ಮರಾಠೀ ಕಾದಂಬರೀ ಸಾಹಿತ್ಯದ ಬಗ್ಗೆ ಮತ್ತು ಹರಿ ನಾರಾಯಣ ಆಪಟೆ ಅವರ ಬಗ್ಗೆ ಅನೇಕ ಉಪಯುಕ್ತ ಗ್ರಂಥಗಳನ್ನು ಸೂಚಿಸಿ, ಹಲವು ಸಲಹೆಗಳನ್ನಿತ್ತು ಉಪಕರಿಸಿರುವರು. ಅದರಂತೆ ಗಳಗನಾಥರ ಅನೇಕ ಆಪ್ತರು, ಮಿತ್ರರು, ಶಿಷ್ಯರು, ಜೊತೆಗಾರರು ನನಗೆ ಗಳಗನಾಥರ ಜೀವನ ಮತ್ತು ವ್ಯಕ್ತಿತ್ವದ ಬಗ್ಗೆ ಅನೇಕ ಸಂಗತಿಗಳನ್ನು ತಿಳಿಸಿ ಉಪಕರಿಸಿರುವರು.

ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನ ವಿಭಾಗದ ನಿರ್ದೇಶಕರಾದ ಶ್ರೀ ಚೆನ್ನವೀರ ಕಣವಿ ಅವರೂ, ಉಪ-ನಿರ್ದೇಶಕರಾದ ಶ್ರೀ ಎಸ್. ಬಿ. ನಾಯಕ ಅವರೂ ಈ ಗ್ರಂಥವು ಅಚ್ಚುಕಟ್ಟಾಗಿ ಹೊರಬರುವಂತೆ ಹೆಚ್ಚಿನ ಆಸ್ಥೆವಹಿಸಿರುವರು. ಪ್ರೂಫು ತಿದ್ದಿ ಕಳಿಸುವಲ್ಲಿ ನನ್ನಿಂದ ಆಗುತ್ತಿದ್ದ ವಿಲಂಬವನ್ನು ತಾಳ್ಮೆಯಿಂದ ಸಹಿಸಿ ಈ ಗ್ರಂಥವನ್ನು ತುಂಬ ಮುದ್ದಾಗಿ ಅಚ್ಚುಮಾಡಿದ ಹುಬ್ಬಳ್ಳಿಯ 'ಹೊಂಬಾಳಿ ಪ್ರಿಂಟರಿ'ಯ ಶ್ರೀ ಪ್ರಹ್ಲಾದ ಹೊಂಬಾಳಿ ಅವರನ್ನು ಇಲ್ಲಿ ನೆನೆಯದಿರಲಾರೆ. ಈ ಎಲ್ಲ ಸ್ನೇಹಿತರಿಗೂ ನನ್ನ ಕೃತಜ್ಞತೆಗಳು.

ಒಟ್ಟಿನಲ್ಲಿ ಈ ಗ್ರಂಥಲೇಖನಕ್ಕೂ ಪ್ರಕಟನೆಗೂ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಾಯ ಮಾಡಿದ ಸಹೃದಯರೆಲ್ಲರಿಗೂ ನನ್ನ ನಮನಗಳು.

ಕರ್ನಾಟಕ ವಿಶ್ವವಿದ್ಯಾಲಯ,
ಸ್ನಾತಕೋತ್ತರ ಕೇಂದ್ರ, ಕಲಬುರ್ಗಿ
15 - 8 - 1978

—ಕೃಷ್ಣಮೂರ್ತಿ ಕಿತ್ತೂರ

# ಪರಿವಿಡಿ

# ಅಧ್ಯಯನದ ಅಗತ್ಯ

ಬೇಲೂರಿನ ಚೆನ್ನಕೇಶವ ದೇವಾಲಯದಂತಹ ಒಂದು ಕಲಾಕೃತಿಯನ್ನು ಕಂಡಾಗ ನಾವು ಅದರ ಸೌಂದರ್ಯವನ್ನೂ ಔನ್ನತ್ಯವನ್ನೂ ಭವ್ಯತೆಯನ್ನೂ ಅನುಭವಿಸಿ, ಆನಂದವನ್ನೂ ಆಶ್ಚರ್ಯವನ್ನೂ ಪಡುತ್ತೇವೆ. ಆದರೆ ಅದೇ ಕಾಲಕ್ಕೆ ಅದರ ತಳಪಾಯದ ವಿಚಾರ ನಮಗೆ ಬರುವುದು ತೀರ ಅಪರೂಪ; ಬಂದರೂ ಅದರ ಮಹತ್ತ್ವವನ್ನು ಮನವರಿಕೆ ಮಾಡಿಕೊಳ್ಳುವವರು ನಮ್ಮಲ್ಲಿ ಇನ್ನೂ ಅಪರೂಪ; ಆದರೆ ಅದನ್ನು ಅರಿತುಕೊಳ್ಳುವುದು ಅವಶ್ಯವಾಗಿರುತ್ತದೆ.

ಅದರಂತೆ ಇಂದು ಭವ್ಯವಾಗಿ, ವೈವಿಧ್ಯಮಯವಾಗಿ, ಸರ್ವಾಂಗಸುಂದರವಾಗಿ ಬೆಳೆದು ನಿಂತಿರುವ, ಇನ್ನೂ ಬೆಳೆಯುತ್ತಿರುವ ಕನ್ನಡ ಕಾದಂಬರೀ ಸೌಧವನ್ನು ಕಂಡು ಆಶ್ಚರ್ಯವನ್ನೂ ಹೆಮ್ಮೆಯನ್ನೂ ಪಡುವ ನಾವು, ಈ ಸೌಧದ ತಳಪಾಯವನ್ನು ಗಟ್ಟಿಮುಟ್ಟಾಗಿ ಹಾಕಿದ ಪುಣ್ಯ ಪುರುಷರನ್ನೂ, ಅವರ ಅನುಪಮ ಸೇವೆಯನ್ನೂ ಸ್ಮರಿಸುವುದು ಮತ್ತು ಅವರ ಮಹತ್ತ್ವವನ್ನು ಮನವರಿಕೆ ಮಾಡಿಕೊಳ್ಳುವುದು ನಮ್ಮ ಆದ್ಯ ಕರ್ತವ್ಯವಾಗಿದೆ.

ಇಂದಿನ ಕಾದಂಬರಿಯ ಸಮೀಕ್ಷೆಯನ್ನು ನಡೆಸುವಾಗ ಅನೇಕ ವಿದ್ವಾಂಸರು ಬಿ. ವೆಂಕಟಾ-ಚಾರ್ಯ ಮತ್ತು ಗಳಗನಾಥ ಇವರನ್ನು ಜ್ಞಾಪಿಸಿಕೊಂಡಿದ್ದಾರೆ. ಆದರೆ ಅದು ಕೇವಲ ನೆನಿಕೆ ಮಾತ್ರವಾಗಿದೆ. ಈ ಇಬ್ಬರೂ ಮಹಾನುಭಾವರ ಬಗ್ಗೆ ಆಳವಾದ ಅಭ್ಯಾಸ ಇನ್ನೂವರೆಗೂ ನಡೆದಿಲ್ಲ. ಅವರಿಗೆ ಕೇವಲ ನಮ್ಮ ಕೃತಜ್ಞತೆಗಳನ್ನು ಸಲ್ಲಿಸಿದರೆ ಅಥವಾ ಗೌರವವನ್ನು ಸೂಚಿಸಿದರೆ ಸಾಲದು. ಅವರು ಎಂಥ ಪರಿಸರದಲ್ಲಿ ಈ ಕಾದಂಬರೀ ಲೇಖನ ಕಾರ್ಯವನ್ನು ಕೈಕೊಂಡರು, ಅವರ ಅಡಚಣೆಗಳೇನು, ಅವುಗಳನ್ನು ಎದುರಿಸಿ ಅವರು ಜನರಲ್ಲಿ ಕಾದಂಬರೀವಾಚನದ ಅಭಿ-ರುಚಿಯನ್ನು ಹೇಗೆ ಹುಟ್ಟಿಸಿದರು, ಅವರ ಕಾದಂಬರಿಗಳ ಗುಣದೋಷಗಳೇನು, ಕನ್ನಡ ಸಾಹಿತ್ಯದಲ್ಲಿ ಅವರ ಸ್ಥಾನವೇನು ಎಂದು ಮುಂತಾಗಿ ಅಭ್ಯಾಸಮಾಡುವ ಕಾಲ ಈಗ ಸನ್ನಿಹಿತವಾಗಿದೆ. ಅದರಲ್ಲೂ ಗಳಗನಾಥರ ಕೂಲಂಕಷವಾದ ಅಭ್ಯಾಸವು ಉತ್ತರ ಕರ್ನಾಟಕದಲ್ಲಿ ಎಂದೋ ಆಗಬೇಕಾಗಿದ್ದಿತು. ಅವರು ಕರ್ನಾಟಕಕ್ಕೆ ಅದರಲ್ಲೂ ವಿಶೇಷವಾಗಿ ಉತ್ತರ ಕರ್ನಾಟಕಕ್ಕೆ ಸಲ್ಲಿಸಿದ ಸೇವೆ ಅಪಾರವಾಗಿದೆ, ಅನುಪಮವಾಗಿದೆ.

ಇಂಥ ಪುಣ್ಯಪುರುಷರಾದ ಗಳಗನಾಥರನ್ನು ಕುರಿತು ಅಭ್ಯಾಸಪೂರ್ಣವಾದ ಒಂದೂ ಪ್ರೌಢ ಗ್ರಂಥ ಇನ್ನೂವರೆಗೆ ಪ್ರಕಟವಾಗಿಲ್ಲ. ಅವರು (1942ರಲ್ಲಿ) ತೀರಿಕೊಂಡು ನಾಲ್ಕು ವರ್ಷಗಳ ನಂತರ ಧಾರವಾಡದ ವಿದ್ಯಾವರ್ಧಕ ಸಂಘದಿಂದ 'ಗಳಗನಾಥ' ಎಂಬ ಒಂದು ಚಿಕ್ಕ ಪುಸ್ತಕ ಪ್ರಕಟವಾಯಿತು. ಗಳಗನಾಥರನ್ನು ಕುರಿತು ಪ್ರಕಟವಾದ ಪ್ರಥಮ ಗ್ರಂಥವೆಂಬ ಪ್ರಶಸ್ತಿ ಅದಕ್ಕೆ ದೊರೆತರೂ, ಅದು ಅಪೂರ್ಣವೂ ಆಗಿದೆ; ಕೆಲವೆಡೆ ದೋಷಪೂರ್ಣವೂ ಆಗಿದೆ.

1969ನೆಯ ವರ್ಷದ ಜನೇವರಿ 5ನೆಯ ತಾರೀಖಿನಂದು ಗಳಗನಾಥರ ಜನ್ಮಶತಾಬ್ದಿಯ ನಿಮಿತ್ತವಾಗಿ ಕರ್ನಾಟಕದಲ್ಲಿ ಕೆಲವೆಡೆ ಸಭೆಗಳೂ ವಿಚಾರಗೋಷ್ಠಿಗಳೂ ನಡೆದುವು. ಆ ಕಾಲಕ್ಕೆ ಕೆಲವು ದಿನಪತ್ರಿಕೆ ಮತ್ತು ವಾರಪತ್ರಿಕೆಗಳು ಗಳಗನಾಥರ ಬಗ್ಗೆ ಕೆಲವು ಲೇಖನಗಳನ್ನು ಪ್ರಕಟಿಸಿ-ದುವು. ಅಂಥವುಗಳಲ್ಲಿ 'ಕರ್ಮವೀರ' ಮತ್ತು 'ಸದ್ಬೋಧ ಚಂದ್ರಿಕೆ'ಗಳ ವಿಶೇಷ ಸಂಚಿಕೆಗಳು ಗಣ್ಯವಾಗಿವೆ. ಅದರಂತೆ ಕರ್ನಾಟಕ ವಿಶ್ವವಿದ್ಯಾಲಯದ 'ಕರ್ನಾಟಕ ಭಾರತಿ' ಆ ವರ್ಷದ ತನ್ನ ಅಕ್ಷಯ ತೃತೀಯಾ ಸಂಚಿಕೆಯಲ್ಲಿ 'ಗಳಗನಾಥರ ಕೃತಿಗಳು–ಸಂಖ್ಯಾನಿರ್ಣಯ' ಮತ್ತು 'ಗಳಗನಾಥ ಕೃತ ಕನ್ನಡಿಗರ ಕಾದಂಬರಿಗಳು' ಎಂಬೆರಡು ಪ್ರೌಢ ಲೇಖನಗಳನ್ನು ಪ್ರಕಟಿಸಿತು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ತಾನು ಏರ್ಪಡಿಸಿದ ವಿಚಾರಸಂಕಿರಣದ ಭಾಷಣ ಗಳನ್ನು 'ಗಳಗನಾಥ' ಎಂಬ ಹೆಸರಿನಿಂದ 1970ರಲ್ಲಿ ಪ್ರಕಟಿಸಿತು. ಇದು ಗಳಗನಾಥರನ್ನು ಕುರಿತ ಎರಡನೆಯ ಗ್ರಂಥ. ಕರ್ನಾಟಕ ವಿಶ್ವವಿದ್ಯಾಲಯದ ಪ್ರಚಾರೋಪನ್ಯಾಸ ಮಾಲೆಯಲ್ಲಿ 'ಗಳಗನಾಥರ ಕಾದಂಬರಿಗಳು' ಎಂಬ ಪರಿಚಯಾತ್ಮಕ ಚಿಕ್ಕ ಪುಸ್ತಿಕೆಯೂ ಪ್ರಕಟವಾಯಿತು. ಇವನ್ನು ಬಿಟ್ಟರೆ ಅಲ್ಲಲ್ಲಿ ಪ್ರಕಟವಾದ ಕೆಲವು ಬಿಡಿ ಲೇಖನಗಳು ಮಾತ್ರ ದೊರೆಯುತ್ತವೆ.

1969–70ರಲ್ಲಿ ಪ್ರಕಟವಾದ ಲೇಖನಗಳೂ ಗ್ರಂಥಗಳೂ ಸ್ಥೂಲವಾಗಿ ಪರಿಚಯಾತ್ಮಕ ವಾದವುಗಳೇ ಎಂದು ಹೇಳಬೇಕು. ಇವುಗಳಿಂದ ಗಳಗನಾಥರ ಪರಿಪೂರ್ಣ ಅಭ್ಯಾಸವಾಗಲಿಲ್ಲ. ಅವುಗಳ ಉದ್ದೇಶವೂ ಹಾಗಿರಲಿಲ್ಲ. ಮುಂದೆ 1972ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನವರು 'ಗಳಗನಾಥ ಮಾಸ್ತರರು' ಎಂಬ ಸುಮಾರು 120 ಪುಟಗಳ ಗ್ರಂಥವನ್ನು ಪ್ರಕಟಿಸಿದರು. ಲೇಖಕರಾದ ಡಾ. ಶ್ರೀನಿವಾಸ ಹಾವನೂರ ಅವರು ಹೆಚ್ಚಿನ ಆಸ್ಥೆ ಮತ್ತು ಶ್ರಮ ತೆಗೆದುಕೊಂಡು ಬರೆದಿದ್ದರೂ ಗಳಗನಾಥರ ಜೀವನ ಮತ್ತು ಕಾರ್ಯಗಳ ಪರಿಚಯವನ್ನೇ ಅವರು ಹೆಚ್ಚಾಗಿ ಮಾಡಿಕೊಟ್ಟಿರುವುದರಿಂದ ಗಳಗನಾಥರ ಕೃತಿವಿಮರ್ಶೆ–ವಿಶ್ಲೇಷಣೆಗಳಿಗೆ ಅಲ್ಲಿ ಹೆಚ್ಚಿನ ಅವಕಾಶ ದೊರೆಯಲಿಲ್ಲ.

ಮೇಲೆ ಹೇಳಿದ ಪ್ರಕಟಣೆಗಳೆಲ್ಲ ಶ್ಲಾಘನೀಯವೇ ಆಗಿದ್ದರೂ, ಗಳಗನಾಥರ ಸಂಪೂರ್ಣ ಪ್ರಮಾಣಭೂತವಾದ ಅಭ್ಯಾಸ ನಡೆಯುವುದು ಅವಶ್ಯವಾಗಿಯೇ ಉಳಿಯಿತು. 19ನೆಯ ಶತಮಾನದ 6ನೆಯ ದಶಕದಲ್ಲಿಯೇ ಜನಿಸಿದ, ಮರಾಠಿಯ ಕಾದಂಬರೀ ಪಿತಾಮಹರೆಂದು ಖ್ಯಾತರಾದ ಹರಿ ನಾರಾಯಣ ಆಪಟೆಯವರ ಜನ್ಮಶತಾಬ್ದಿಯು 1964ರಲ್ಲಿ ನಡೆಯಿತು. ಆ ಕಾಲಕ್ಕೆ ಆಪಟೆಯವರ ಬಗ್ಗೆ ಕೂಲಂಕಷವಾದ ಅಭ್ಯಾಸ ನಡೆಯಿತು. ಅದಕ್ಕಿಂತ ಮೊದಲೇ ಡಾ. ಲ. ಮ. ಭಿಂಗಾರೆ ಎಂಬ ಪಂಡಿತರು ಆಪಟೆಯವರ ಸಮಗ್ರ ಅಭ್ಯಾಸವನ್ನು ಮಾಡಿ 'ಹರಿಭಾವು' ಎಂಬ ಮಹಾ ಪ್ರಬಂಧವನ್ನೇ ಬರೆದಿದ್ದರು.

ಅಷ್ಟೇ ಏಕೆ, ಗಳಗನಾಥರಿಗಿಂತ ಮೂರೇ ವರ್ಷ ಮೊದಲು ಜನಿಸಿದ, ಕನ್ನಡದ ಇನ್ನೊಬ್ಬ ಪುಣ್ಯಪುರುಷರಾದ ಕೆರೂರ ವಾಸುದೇವಾಚಾರ್ಯರನ್ನು ಕುರಿತು ಅಭ್ಯಾಸಪೂರ್ಣವಾದ, ಪ್ರೌಢ ವಾದ 'ವಾಸುದೇವ ಪ್ರಶಸ್ತಿ' ಎಂಬ ಗ್ರಂಥವು 1964ರಲ್ಲಿಯೇ ಪ್ರಕಟವಾಗಿತ್ತು. ಆ ಗ್ರಂಥದ ಸಂಪಾದಕರು "ಕೆರೂರರಿಗಿಂತ ಮೂರು ವರ್ಷ ಮಾತ್ರ ಹಿರಿಯರಾಗಿದ್ದ ಮಹಾರಾಷ್ಟ್ರದ ಕಾದಂಬರಿಕಾರರಾದ ಹರಿ ನಾರಾಯಣ ಆಪಟೆಯವರನ್ನು[1] ಕುರಿತು ಅನೇಕ ಗ್ರಂಥಗಳು ಹೊರ

1. ಈ ಹೇಳಿಕೆ ಸರಿಯಲ್ಲ. ಕೆರೂರರು 15-10-1866 ರಂದು ಜನಿಸಿದ್ದರೆ, ಆಪಟೆಯವರು 8-3-1864 ರಂದು ಜನಿಸಿದ್ದರು.

ಬಿದ್ದಿವೆ. ಸಾಹಿತ್ಯ ಅಕಾಡೆಮಿಯವರು ಅವರ ಒಂದು ಕಾದಂಬರಿಯನ್ನು ಭಾರತದ ಹದಿನಾಲ್ಕು ಭಾಷೆಗಳಲ್ಲಿ ಅನುವಾದ ಮಾಡಿಸಿದ್ದಾರೆ. ಎಂ. ಎಸ್. ಪುಟ್ಟಣ್ಣ, ಪಂಜೆ ಮಂಗೇಶರಾಯರು, ಗಳಗನಾಥರು, ಶಾಂತಕವಿಗಳು, ಕೆರೂರ ವಾಸುದೇವಾಚಾರ್ಯರು ಇಂಥ ಹಳೆಯ ತಲೆಮಾರಿನ ಕನ್ನಡ ಲೇಖಕರ ಗ್ರಂಥಗಳೂ ಹೀಗೆ ಉಳಿದ ಭಾಷೆಗಳಲ್ಲಿ ಭಾಷಾಂತರವಾಗಬೇಕು. ಕನ್ನಡದಲ್ಲಿಯೇ ಇಂಥ ಲೇಖಕರನ್ನು ಕುರಿತು ವಿಮರ್ಶೆಯ ಗ್ರಂಥಗಳು ಬರಬೇಕು"[1] ಎಂದು ಬರೆದಿರುವುದು ಗಳಗನಾಥರಂಥ ಲೇಖಕರ ಬಗ್ಗೆ ನಡೆಯಬೇಕಾದ ಅಧ್ಯಯನದ ಅಗತ್ಯವನ್ನು ಸೂಚಿಸುತ್ತದೆ. ಡಾ. ದ. ರಾ. ಬೇಂದ್ರೆಯವರೂ, "ಕೆರೂರ ವಾಸುದೇವಾಚಾರ್ಯರನ್ನು ಕುರಿತಾದ ವಿಮರ್ಶಕ ಪ್ರಯತ್ನ ಗಳಗನಾಥರ ಬಗ್ಗೆಯೂ ಆಗಬೇಕಾಗಿದೆ" ಎಂದು 1969ರಲ್ಲಿಯೇ ಸೂಚಿಸಿದ್ದರು.[2]

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಗಳಗನಾಥರ ಬಗ್ಗೆ 1969 ರಲ್ಲಿ ಏರ್ಪಡಿಸಿದ್ದ ವಿಚಾರ ಸಂಕಿರಣದ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀರಂಗರು, "ಒಬ್ಬ ಸಾಹಿತಿಯ ಬಗ್ಗೆ ಈ ರೀತಿ ಅಭ್ಯಾಸಪೂರ್ಣವಾದ ಭಾಷಣಗಳನ್ನು ಏರ್ಪಡಿಸಿದ್ದು ಅತ್ಯಂತ ಶ್ಲಾಘನೀಯವಾಗಿದೆ. ಈ ದೃಷ್ಟಿಯಿಂದ ವಿಮರ್ಶಾಪೂರ್ವಕವಾದ, ಸಂಶೋಧನಾತ್ಮಕವಾದ ಅಭ್ಯಾಸ ಅತ್ಯಂತ ಅಗತ್ಯವಾಗಿದೆ.... ಇಂದಿನ ಮೂವರು ಭಾಷಣಕಾರರೂ[3] ಆ ದೃಷ್ಟಿಯಿಂದ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ; ಅವರ ದಕ್ಷತೆಯೇ ನಮ್ಮ ಅತೃಪ್ತಿಗೆ ಕಾರಣವಾಗಿದೆ. ಇದು ಉಪಯುಕ್ತವಾದುದು, ಇನ್ನೂ ಎಷ್ಟೋ ಹೆಚ್ಚು ಪ್ರಮಾಣದಲ್ಲಿ, ಆಮೂಲಾಗ್ರವಾಗಿ ಆಗಬೇಕಾದ ಕೆಲಸ– ಎಂಬ ಉತ್ಕಟ ಭಾವನೆಯನ್ನು ಈ ಮೂವರೂ ನಮ್ಮಲ್ಲಿ ಕೆರಳಿಸಿದ್ದಕ್ಕೆ ಅವರನ್ನು ನಾನು ಅಭಿನಂದಿಸುತ್ತೇನೆ"[4] ಎಂದು ಪ್ರಶಂಸಾಪರವಾಗಿ ನುಡಿದಿರುವಲ್ಲಿಯೂ, ಗಳಗನಾಥರ ಅಭ್ಯಾಸದ ಅಗತ್ಯವನ್ನು ಪ್ರತಿಪಾದಿಸಿದ್ದಾರೆ.

1975ರಲ್ಲಿ ಪ್ರಕಟಿಸಿದ ತಮ್ಮ ಮಹಾಪ್ರಬಂಧ 'ಹೊಸಗನ್ನಡ ಸಾಹಿತ್ಯದ ಉದಯಕಾಲ' ದಲ್ಲಿ ಡಾ. ರಾ. ಯ. ಧಾರವಾಡಕರ ಅವರು ಗಳಗನಾಥರನ್ನು ಕುರಿತು 11 ಪುಟಗಳನ್ನು ಬರೆದು "ಇವರ ಬಗೆಗೆ ಒಂದು ಮಹಾಪ್ರಬಂಧವನ್ನು ಬರೆಯುವಷ್ಟು ಸಾಮಗ್ರಿ ಇರುವುದರಿಂದ ಇಲ್ಲಿ ಸ್ಥೂಲ ವಿವರಣೆಯನ್ನು ಮಾತ್ರ ಕೊಡಲಾಗಿದೆ"[5] ಎಂದಿರುವಲ್ಲಿಯೂ, ಗಳಗನಾಥರ ಅಧ್ಯಯನದ ಅಗತ್ಯವನ್ನು ಸೂಚಿಸಿದ್ದಾರೆ.

ಹೀಗೆ ಅನೇಕ ಪಂಡಿತರು ಗಳಗನಾಥರ ಅಧ್ಯಯನದ ಅಗತ್ಯವನ್ನು ಎತ್ತಿ ತೋರಿಸಿರುವರು. ಈ ಅಧ್ಯಯನವು ಇನ್ನೊಂದು ಕಾರಣದಿಂದಲೂ ಅವಶ್ಯವಾಗಿತ್ತು. ಈಗಾಗಲೇ ಪ್ರಕಟವಾಗಿದ್ದ ಲೇಖನಗಳಲ್ಲಿ ಗಳಗನಾಥರ ಬಗ್ಗೆ ಅನೇಕ ತಪ್ಪು ಅಭಿಪ್ರಾಯಗಳು ವ್ಯಕ್ತವಾಗಿದ್ದವು. ಇವುಗಳಲ್ಲಿ ಕೆಲವು ಅಭಿಪ್ರಾಯಗಳನ್ನು ನಿರ್ಲಕ್ಷಿಸಬಹುದಾಗಿದ್ದರೂ, ಇನ್ನು ಕೆಲವು ಗಂಭೀರವಾದ ತಪ್ಪು ಅಭಿಪ್ರಾಯಗಳೂ ಇದ್ದುವು. ನಿದರ್ಶನಕ್ಕಾಗಿ ಕೆಲವನ್ನು ಇಲ್ಲಿ ನೋಡಬಹುದು.

---

1. ಕೆ. ಡಿ. ಕುರ್ತಕೋಟಿ ಮತ್ತು ಜಿ. ಬಿ. ಜೋಶಿ (ಸಂ.) : ವಾಸುದೇವ ಪ್ರಶಸ್ತಿ, ಸಂಪಾದಕೀಯ.
2. ಸದ್ಬೋಧ ಚಂದ್ರಿಕೆ, ವಿಶೇಷಾಂಕ 1969, ಪುಟ 103.
3. ಅವರಲ್ಲಿ ಈ ಪ್ರಬಂಧ ಲೇಖಕನೂ ಒಬ್ಬ.
4. ಡಾ. ಹಾ. ಮಾ. ನಾಯಕ (ಸಂ.) : ಗಳಗನಾಥ, ಪುಟ 84.
5. ಡಾ. ರಾ. ಯ. ಧಾರವಾಡಕರ : ಹೊಸಗನ್ನಡ ಸಾಹಿತ್ಯದ ಉದಯಕಾಲ, ಪುಟ 407 (ಅಡಿಟಿಪ್ಪಣಿ)

ಹಾವನೂರು ಗ್ರಾಮದಲ್ಲಿ ಜನಿಸಿದ್ದ ಗಳಗನಾಥರು 'ಗಳಗನಾಥ ಗ್ರಾಮದಲ್ಲಿ ಜನಿಸಿದರು'[1] ಎಂದು ಅನೇಕ ಗ್ರಂಥಗಳಲ್ಲಿ ಹೇಳಲಾಗಿದೆ. ಗಳಗನಾಥರ ಜನ್ಮಶತಾಬ್ದಿಯ ಕಾಲಕ್ಕೆ 'ಸಂಯುಕ್ತ ಕರ್ನಾಟಕ' 'ಪ್ರಜಾವಾಣಿ' 'ಕನ್ನಡ ಪ್ರಭ' ಮೊದಲಾದ ಕೆಲವು ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳಲ್ಲಿಯೂ ಈ ಮಾತೇ ಪುನರುಕ್ತವಾಗಿದೆ. ಅದರಂತೆ "ಮಾಧವ ಕರುಣಾವಿಲಾಸವು ಅವರ ಕೊನೆಯ ಕಾದಂಬರಿ; ಅವರ ಮೊದಲ ಕಾದಂಬರಿ ಪ್ರಕಟವಾದುದು 1891ರಲ್ಲಿ" ಎಂಬಂಥ ತಪ್ಪು ಅಭಿಪ್ರಾಯಗಳೂ ಬಂದಿವೆ.[2] ಇಂಥ ಹಲವು ರೀತಿಯ ತಪ್ಪುಗಳು ಉಂಟಾಗಿವೆ.

ಗಳಗನಾಥರು ಕೇವಲ ಭಾಷಾಂತರಕಾರರು, ಅವರು ಮರಾಠಿಯ ಹರಿ ನಾರಾಯಣ ಆಪಟೆ ಎಂಬವರ ಕಾದಂಬರಿಗಳನ್ನು ಕನ್ನಡದಲ್ಲಿ ಭಾಷಾಂತರಿಸಿದರು—ಎಂಬ ಅಭಿಪ್ರಾಯವೇ ಸಾಮಾನ್ಯವಾಗಿ ರೂಢವಾಗಿದೆ. ಅಲ್ಲದೆ ಪಂಡಿತ ವಿಮರ್ಶಕರು ಕೂಡ ಗಳಗನಾಥರ ಸ್ವತಂತ್ರ ಕೃತಿಗಳಲ್ಲಿ 'ಮಾಧವ ಕರುಣಾವಿಲಾಸ'ವೊಂದನ್ನೇ ಗಣಿಸಿದ್ದಾರೆ.[3] ಗಳಗನಾಥರು ಬರೆದ ಸ್ವತಂತ್ರ ಕಾದಂಬರಿಗಳೆಷ್ಟು, ಭಾಷಾಂತರಗಳೆಷ್ಟು ? ಅವರು ಕನ್ನಡಿಸಿದ ಎಲ್ಲ ಕಾದಂಬರಿಗಳನ್ನು ಭಾಷಾಂತರಗಳೆಂದು ಕರೆಯುವುದು ನ್ಯಾಯವೇ ? ಭಾಷಾಂತರ, ಅನುವಾದಗಳಲ್ಲಿ ಏನೂ ವ್ಯತ್ಯಾಸವಿಲ್ಲವೇ ? ಅವರು ಅನುವಾದಿಸಿದ ಕಾದಂಬರಿಗಳಲ್ಲಿ ಅವರ ಸ್ವೋಪಜ್ಞತೆಯೆಷ್ಟು, ಮೂಲ ಕಾದಂಬರಿಗಳಿಗೆ ಎಷ್ಟು ಋಣಿಯಾಗಿರುವರು ? ಎಂಬಿವೇ ಮೊದಲಾದ ಮಾತುಗಳನ್ನು ಯಾರೂ ಅಭ್ಯಸಿಸಿಲ್ಲ. ಈ ಅಭ್ಯಾಸ ನಡೆಯುವದು ಅತ್ಯವಶ್ಯವಾಗಿದೆ.

ಇನ್ನೊಂದು ಮಹತ್ತ್ವದ ವಿಷಯವೆಂದರೆ ಅವರು ಬರೆದ ಗ್ರಂಥಗಳ ಸಂಖ್ಯಾನಿರ್ಣಯ. ಗಳಗನಾಥರು 60 ಕೃತಿಗಳನ್ನು ಬರೆದಿರುವರೆಂದೂ, ಅವರ ಅಪ್ರಕಟಿತ ಕೃತಿಗಳೇ 20 ಇರುವವೆಂದೂ ಹೇಳಲಾಗಿದೆ.[4] ಇದು ತಪ್ಪು ಕಲ್ಪನೆ. ಡಾ. ಬೆಟಗೇರಿ ಕೃಷ್ಣಶರ್ಮಾ ಅವರು ಗಳಗನಾಥರ ಒಟ್ಟು ಕೃತಿಗಳ ಸಂಖ್ಯೆ 44 ಎಂದು ನಿರ್ಣಯಿಸಿರುವರು.[5] ಇದೇ ಪಟ್ಟಿಯನ್ನು 'ಕನ್ನಡ ವಿಶ್ವಕೋಶ'ಕಾರರೂ, ಮತ್ತು ಬೇರೆ ಕೆಲವರೂ ಸರಿಯೆಂದು ಗ್ರಹಿಸಿರುವರಾದರೂ, ಇದೂ ಕೂಡ ಸಂಪೂರ್ಣವಾಗಿ ನಿರ್ದುಷ್ಟವಾಗಿಲ್ಲ. ಆದ್ದರಿಂದ ಅವರ ನಿಜವಾದ ಕೃತಿಗಳ ಸಂಖ್ಯಾನಿರ್ಣಯವನ್ನು ಮಾಡುವುದೂ ಅವಶ್ಯವಾಗಿತ್ತು.

ಅಲ್ಲದೆ ಈಗ ಪ್ರಕಟಿತವಾದ ಲೇಖನ ಮತ್ತು ಗ್ರಂಥಗಳಲ್ಲಿ ಗಳಗನಾಥರನ್ನು ಕೆಲವು ಸಲ ವಿನಾಕಾರಣ ಹೊಗಳಿ ಹೊನ್ನಶೂಲಕ್ಕೆ ಏರಿಸಲಾಗಿದೆ. "ಶ್ರೀ ಗಳಗನಾಥರ ಬರಹ ಎಂದರೆ ಅದೊಂದು ಮಹಾಸಾಗರವಿದ್ದಂತೆ. ಆ ಸಮುದ್ರದಲ್ಲಿ ಹುಡುಕಿದಷ್ಟು ಹೊಸ ಹೊಸ ಮುತ್ತುಗಳು ಹೊರಡುವವು; ಅದನ್ನು ಕಡೆದಷ್ಟು ತರತರದ ಕೌಸ್ತುಭಗಳು ಅದರೊಳಗೆ ಕಾಣಿಸುವವು"[6]

---

1. ಗಳಗನಾಥ (1946) ಪುಟ 18; ಗಳಗನಾಥ (1970) ಪುಟ 7; "ಹೊಸಗನ್ನಡ ಸಾಹಿತ್ಯದ ಉದಯ ಕಾಲ" (1975), ಪುಟ 408.
2. ಎನ್. ಕೆ. ಕುಲಕರ್ಣಿ : 'ಕಾದಂಬರಿ–ಅಂದು' ಕಾದಂಬರಿ ದರ್ಶನ (1974).
3. ಕೆ. ಡಿ. ಕುರ್ತಕೋಟಿ : ಯುಗಧರ್ಮ ಹಾಗು ಸಾಹಿತ್ಯ ದರ್ಶನ (1962), ಪುಟ 185.
4. ನೋಡಿರಿ – 'ಗಳಗನಾಥ' (1946), ಪರಿಶಿಷ್ಟ–4; 'ಗ್ರಂಥಕರ್ತರ ಚರಿತ್ರಕೋಶ' (1960) ಪುಟ 166–167; 'ಹೊಸಗನ್ನಡ ಸಾಹಿತ್ಯದ ಉದಯ ಕಾಲ' (1975), ಪುಟ 411–12.
5. ಕರ್ನಾಟಕ ಭಾರತಿ, 1–2, ಪುಟ 110–113.
6. 'ಗಳಗನಾಥ' (1946), ಪುಟ 33

ಎಂಬಂಥ ಅತಿಪ್ರಶಂಸೆಯ ಮಾತುಗಳು ಬಂದಿವೆ. ಅಥವಾ ಕೆಲವು ಲೇಖನಗಳಲ್ಲಿ ಅವರ ಬಗ್ಗೆ ಅತಿ ಉಪೇಕ್ಷೆಯನ್ನೂ ನಿರ್ಲಕ್ಷವನ್ನೂ ತೋರಲಾಗಿದೆ; ಕೃತಿನಿಷ್ಠ ವಿಮರ್ಶೆಯ ಹೆಸರಿನಿಂದ ಬಹಳ ಹಗುರವಾದ, ಬೀಸುನುಡಿಗಳನ್ನು ಹೇಳಲಾಗಿದೆ. ಆದರೆ ಹಾಗೆ ಅಸಡ್ಡೆಯ, ಮತ್ತು ಅದರಂತೆ ಪ್ರಶಂಸಾಪರ ಮಾತುಗಳಿಂದ ಗಳಗನಾಥರ ನಿಜವಾದ ಮೌಲ್ಯಮಾಪನವಾಗುವುದಿಲ್ಲ. ಅನೇಕ ಕಾರಣಗಳಿಂದ ಸಾಹಿತ್ಯಚರಿತ್ರೆಯಲ್ಲಿ ಮಹತ್ತ್ವವನ್ನು ಪಡೆದ ಈ ವ್ಯಕ್ತಿಯ ಸರಿಯಾದ ಅಭ್ಯಾಸ ಮತ್ತು ಮೌಲ್ಯಮಾಪನ ಅವಶ್ಯವಾಗಿತ್ತು.

ಇವೆಲ್ಲ ಗಳಗನಾಥರ ಅಧ್ಯಯನಕ್ಕೆ ಇರುವ ವೈಯಕ್ತಿಕ ಕಾರಣಗಳಾದರೆ, ಇಂದಿನ ಕಾದಂಬರೀ ಸಾಹಿತ್ಯದ ದೃಷ್ಟಿಯಿಂದಲೂ ಗಳಗನಾಥರ ಅಧ್ಯಯನದ ಅಗತ್ಯವಿದೆ. ಇಂದಿಗೂ ಕನ್ನಡದಲ್ಲಿ ಬೇರೆ ಬೇರೆ ಭಾಷೆಗಳಿಂದ ಭಾಷಾಂತರಗಳೂ, ಅನುವಾದಗಳೂ, ರೂಪಾಂತರಗಳೂ ಬರುತ್ತಿವೆ; ಅನೇಕ ಸ್ವತಂತ್ರ ಐತಿಹಾಸಿಕ ಕಾದಂಬರಿಗಳ ರಚನೆಯೂ ಆಗುತ್ತಲಿದೆ. ಇವೆಲ್ಲವುಗಳ ನಿಜವಾದ ಮೌಲ್ಯಮಾಪನ ನಡೆಯಬೇಕಾದರೆ ಇದೇ ಮಾದರಿಯ ಕಾದಂಬರಿಗಳನ್ನು ಪೂರ್ವದಲ್ಲಿ ಬರೆದವರ ಅಧ್ಯಯನವೂ ಅವಶ್ಯ. ಇದು ಐತಿಹಾಸಿಕ ವಿಮರ್ಶೆಯ ದೃಷ್ಟಿಯಿಂದಲ್ಲದೆ, ನಿಜವಾದ ಕಲಾವಿಮರ್ಶೆಯ ದೃಷ್ಟಿಯಿಂದಲೂ ಅವಶ್ಯವಾಗುತ್ತದೆ. ಟಿ. ಎಸ್. ಎಲಿಯೆಟ್ ಅವರು ಕವಿಯ ಅಥವಾ ಯಾವುದೇ ಕಲಾವಿದನ ಬಗ್ಗೆ ಹೇಳಿದ ಮಾತುಗಳನ್ನು ಇಲ್ಲಿ ನೆನೆಯಬೇಕು.

"No poet, no artist of any art, has his complete meaning alone. His significance, his appreciation is the appreciation of his relation to the dead poets and artists. You cannot value him alone; you must set him for contrast and comparison, among the dead."[1]

ಈ ಮಾತು ಕಾದಂಬರಿಕಾರನಿಗೂ ಅನ್ವಯಿಸುತ್ತದೆ. ಆದ್ದರಿಂದ ಇಂದಿನ ಕಾದಂಬರಿಯ ಮೌಲ್ಯವನ್ನು ನಾವು ಸರಿಯಾಗಿ ಗ್ರಹಿಸಬೇಕಾದರೆ ಗಳಗನಾಥರಂತಹ ಹಳೆಯ ತಲೆಮಾರಿನ ಕಾದಂಬರಿಕಾರರ ಅಧ್ಯಯನವೂ ಅವಶ್ಯವಾಗುತ್ತದೆ.

ಇಂಥ ಹಲವು ಕಾರಣಗಳಿಂದ ಗಳಗನಾಥರ ಅಧ್ಯಯನ ಅಗತ್ಯವಾಗುತ್ತದೆ. ಆದ್ದರಿಂದ ನಾನು ಗಳಗನಾಥರ ಜೀವನ ಮತ್ತು ಅವರ ಕಾದಂಬರಿಗಳ ಅಧ್ಯಯನಕ್ಕೆ ತೊಡಗಬೇಕಾಯಿತು.

ಈ ಪ್ರಬಂಧದಲ್ಲಿ ಗಳಗನಾಥರ ಪೂರ್ವದ ಸುಮಾರು ಐವತ್ತು ವರ್ಷಗಳಲ್ಲಿ ಉತ್ತರ ಕರ್ನಾಟಕದಲ್ಲಿದ್ದ ಕನ್ನಡಿಗರ ಸ್ಥಿತಿಯೇನು, ಅದನ್ನು ಸರಿಪಡಿಸಲು ನಡೆದ ಪ್ರಯತ್ನಗಳೇನು, ಗಳಗನಾಥರು ಎಂಥ ಪರಿಸರದಲ್ಲಿ ಕಾರ್ಯಪ್ರವೃತ್ತರಾದರು, ಅವರಿಗೆ ದೊರೆತ ಅಹಲ್ಯಭೂಮಿಯಲ್ಲಿ ಕಾದಂಬರಿಯ ಕೃಷಿಯನ್ನು ಅವರು ಹೇಗೆ ಸಮೃದ್ಧವಾಗಿ ಬೆಳೆದುಕೊಂಡರು, ಅದರಲ್ಲಿ ಕಾಳು ಎಷ್ಟು, ಕಸವೆಷ್ಟು ಎಂಬುದರ ಮೌಲ್ಯಮಾಪನ ಮಾಡಲಾಗಿದೆ. ಗಳಗನಾಥರು ಭಾಷಾಂತರ ಕಲೆಯಲ್ಲಿ ಎಷ್ಟು ಯಶಸ್ಸನ್ನು ಪಡೆದರು, ಹೇಗೆ ಪಡೆದರು, ಅವರ ಅನುವಾದಗಳ ಕ್ರಮವೇನು, ಅವುಗಳ ವೈಶಿಷ್ಟ್ಯಗಳೇನು, ಗುಣದೋಷಗಳೇನು, ಅನುವಾದಗಳಲ್ಲಿ ಅವರು ತಮ್ಮ

1. T. S. Eliot : *Selected Prose*, page 23.

ಸ್ವೋಪಜ್ಞತೆಯನ್ನು ಹೇಗೆ ಮೆರೆದರು, ಅವರ ಸ್ವತಂತ್ರ ಕಾದಂಬರಿಗಳು ಯಾವುವು, ಅವುಗಳ ಗುಣದೋಷಗಳೇನು ಎಂಬುದನ್ನು ವಿಚಾರಿಸಲು ಯತ್ನಿಸಲಾಗಿದೆ. ಅನುವಾದಕರೆಂದೇ ಖ್ಯಾತರಾದ ಗಳಗನಾಥರು ಕೆಲವಾದರೂ ಸ್ವತಂತ್ರ ಕಾದಂಬರಿಗಳನ್ನು ಬರೆದರೆಂಬುದನ್ನೂ ಅವುಗಳ ವೈಶಿಷ್ಟ್ಯಗಳನ್ನೂ ಎತ್ತಿ ತೋರಿಸಲಾಗಿದೆ. ಅದರಂತೆ ಕಾದಂಬರಿಕಾರರೆಂದು ಖ್ಯಾತರಾದ ಗಳಗನಾಥರು ಬರೆದ ಉಳಿದ ಸಾಹಿತ್ಯವೇಥದೆಂಬುದರ ಸ್ಥೂಲವಾದ ಪರಿಚಯವನ್ನೂ ಇಲ್ಲಿ ಮಾಡಿಕೊಡಲಾಗಿದೆ.

ಅದರಂತೆ, ಗಳಗನಾಥರ ಇತರ ಕಾರ್ಯಕ್ಷೇತ್ರಗಳೇನು, ಅವರ ಮನೋಧರ್ಮ ಎಂತಹದು, ಅದು ಅವರ ಕೃತಿಗಳಲ್ಲಿ ಎಷ್ಟರ ಮಟ್ಟಿಗೆ ಪ್ರತಿಬಿಂಬಿತವಾಗಿದೆ, ಹೇಗೆ ಪ್ರತಿಬಿಂಬಿತವಾಗಿದೆ ಎಂಬುದನ್ನು ಕುರಿತು ಈ ಪ್ರಬಂಧದಲ್ಲಿ ಚರ್ಚಿಸಲಾಗಿದೆ. ಹೊಸಗನ್ನಡ ಗದ್ಯಪ್ರವರ್ತಕರೆಂದು ಕರೆಯಿಸಿಕೊಂಡ ಗಳಗನಾಥರ ಗದ್ಯಶೈಲಿಯ ಲಕ್ಷಣಗಳನ್ನು ಗುರುತಿಸಲೂ ಯತ್ನಿಸಲಾಗಿದೆ. ಮತ್ತು ಕೊನೆಗೆ ಕನ್ನಡಕ್ಕೆ ಅವರ ಕಾಣಿಕೆ ಏನು, ಕನ್ನಡ ಕಾದಂಬರಿಯ ಇತಿಹಾಸದಲ್ಲಿ ಅವರ ಸ್ಥಾನವೇನು ಎಂಬುದನ್ನು ನಿರ್ಣಯಿಸಲು ಸಹೃದಯಪೂರ್ವಕವಾದರೂ, ವಸ್ತುನಿಷ್ಠ ದೃಷ್ಟಿಯಿಂದ ಯತ್ನಿಸಲಾಗಿದೆ.

ಇದಕ್ಕಾಗಿ ಗಳಗನಾಥರ ಲಭ್ಯವಿದ್ದ ಎಲ್ಲ ಗ್ರಂಥಗಳನ್ನೂ, ಪತ್ರಿಕೆಗಳನ್ನೂ, ದೊರಕಿಸುವುದರೊಂದಿಗೆ, ಅವರ ಭಾಷಾಂತರ ಮತ್ತು ಅನುವಾದಗಳಿಗೆ ಮೂಲಧನವನ್ನು ಒದಗಿಸಿದ, ಸಾಧ್ಯವಿದ್ದ ಎಲ್ಲ ಮರಾಠಿ ಕೃತಿಗಳನ್ನು ನೋಡಿ, ತುಲನಾತ್ಮಕವಾಗಿ ಪರೀಕ್ಷಿಸಬೇಕಾಯಿತು. ಅದರಂತೆ ಗಳಗನಾಥರನ್ನು ಮತ್ತು ಅವರ ಕೃತಿಗಳನ್ನು ಕುರಿತು ಕನ್ನಡದಲ್ಲಿ ಇಲ್ಲಿಯವರೆಗೆ ಪ್ರಕಟವಾದ ಎಲ್ಲ ಗ್ರಂಥಗಳನ್ನೂ ಹುಡುಕಿ ತೆಗೆಯಬೇಕಾಯಿತು. ಅಲ್ಲದೆ ಅವರ ಸಂಬಂಧಿಕರನ್ನು, ಅವರ ಸಹವಾಸದಲ್ಲಿದ್ದವರನ್ನು ಕಂಡು, ಕೇಳಿ ಅನೇಕ ವಿಷಯಗಳನ್ನೂ ತಿಳಿದುಕೊಳ್ಳಬೇಕಾಯಿತು. ಇಷ್ಟೆಲ್ಲ ಪ್ರಯತ್ನ ಮಾಡಿದರೂ ಮಾಡಬೇಕಾದುದು ಇನ್ನೂ ಉಳಿದಿರಬಹುದು.

ಒಟ್ಟಿನಲ್ಲಿ ಗಳಗನಾಥರ ಕಾದಂಬರಿಗಳನ್ನು ಕುರಿತು ವಿವರವಾದ ಅಭ್ಯಾಸ–ವಿಮರ್ಶೆ ನಡೆಯಬೇಕಾದ ಆವಶ್ಯಕತೆ ಇದ್ದಿತು. ಈ ಪ್ರಬಂಧದಿಂದ ಅದು ಬಹುಮಟ್ಟಿಗೆ ಪೂರೈಸಿದೆ ಎನ್ನಬಹುದು. ಬಹುಮಟ್ಟಿಗೆ ಎಂದು ಹೇಳಲಿಕ್ಕೆ ಕಾರಣವೆಂದರೆ, ಈ ಪ್ರಬಂಧದಲ್ಲಿ ಗಳಗನಾಥರ ಜೀವನ ಮತ್ತು ಕಾದಂಬರಿಗಳ ಕೂಲಂಕಷ ವಿವೇಚನೆ ನಡೆದಂತೆ, ಅವರ ಇತರ ಕೃತಿಗಳ ವಿಚಾರ ವಿಮರ್ಶೆ ವಿವರವಾಗಿ ನಡೆದಿಲ್ಲ. ಅಂಥ ಗ್ರಂಥಗಳ ಸಂಖ್ಯೆ ಕೂಡ ಸಾಕಷ್ಟು ಹೆಚ್ಚಿದೆಯೆಂಬುದೂ, ಅವುಗಳೂ ಕೂಡ ಗಳಗನಾಥರ ಮನೋಧರ್ಮವನ್ನು ಪ್ರಾಮಾಣಿಕವಾಗಿ ಪ್ರತಿಬಿಂಬಿಸುತ್ತವೆಯೆಂಬುದೂ, ಆ ಗ್ರಂಥಗಳೂ ಕೂಡ ಆಗ ಅವಶ್ಯವೇ ಆಗಿದ್ದವೆಂಬುದೂ ಮಾತ್ರ ಈ ಅಭ್ಯಾಸದಿಂದ ವ್ಯಕ್ತವಾಗಿದೆ. ಅವುಗಳ ವಿವರವಾದ ಅಧ್ಯಯನವೇ ಇನ್ನೊಂದು ಪ್ರೌಢ ಪ್ರಬಂಧದ ವಿಷಯವಾಗಬಹುದು. ಅದರಂತೆ ಗಳಗನಾಥರ ಗದ್ಯ ಮತ್ತು ಶೈಲಿಗಳು ಮುಂದಿನವರ ಮೇಲೆ ಹೇಗೆ ಮತ್ತು ಎಷ್ಟರ ಮಟ್ಟಿಗೆ, ಮತ್ತು ಎಲ್ಲಿಯವರೆಗೆ ಪ್ರಭಾವ ಬೀರಿವೆಯೆಂಬುದರ ವಿವರವಾದ ಅಧ್ಯಯನವೂ ಸಾಕಷ್ಟು ಉಪಯುಕ್ತವಾಗಬಹುದು. ಆದರೆ ಇವುಗಳೆಲ್ಲ ‘ ಗಳಗನಾಥರು ಮತ್ತು ಅವರ ಕಾದಂಬರಿಗಳು ’ ಎಂಬ ಈ ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಮೀರಿದವುಗಳು.

# ಗಳಗನಾಥರ ಪರಿಸರ

ಸಾಹಿತಿ ಪರಿಸರದ ಕೂಸು. ಕಾಲದೇಶಗಳಿಗನುಗುಣವಾಗಿಯೇ ಸಾಹಿತ್ಯ ನಿರ್ಮಾಣ-ಗೊಳ್ಳುತ್ತದೆ. ಕಾಲಿದಾಸನ ಪ್ರತಿಭೆಯ ಲೇಖಕ ಈ ಶತಮಾನದಲ್ಲಿ ಜನಿಸಿದರೂ ಆತ ಮತ್ತೆ 'ಶಾಕುಂತಲ', 'ಮೇಘದೂತ' ಗಳನ್ನು ಬರೆಯಲಾರ. ಗಾರ್ಕಿ, ಟಾಲ್‌ಸ್ಟಾಯ್, ಪಾಸ್ಟರನಾಕ್ ಅವರು ರಶಿಯದಲ್ಲಿ ಹುಟ್ಟದೆ ಇಂಗ್ಲಂಡ–ಅಮೇರಿಕಗಳಲ್ಲಿ ಜನಿಸಿದ್ದರೆ ಅವರಿಂದ ಈಗ ಬಂದಂಥ ಸಾಹಿತ್ಯ ಸೃಷ್ಟಿಯಾಗುತ್ತಿರಲಿಲ್ಲ. ಹರಿಹರನೇ ಹತ್ತನೆಯ ಶತಮಾನದಲ್ಲಿದ್ದರೆ ಅಂಥ ರಗಳೆ-ಗಳನ್ನು ಬರೆಯುತ್ತಿದ್ದನೆ? ಕವಿ ಜನಿಸಿದ ದೇಶ, ಆತ ಬಾಳಿದ ಕಾಲ–ಇವು ಅವನ ಸಾಹಿತ್ಯದ ವಸ್ತು ಮತ್ತು ಅದರ ಸ್ವರೂಪವನ್ನು ನಿರ್ಧರಿಸುವಲ್ಲಿ ಮುಖ್ಯ ಕಾರಣವಾಗುತ್ತವೆ. ಅದು ಕಾರಣವೇ, ಸಾಹಿತಿ ಪರಿಸರದ ಕೂಸು ಎಂದು ಹೇಳಿದ್ದು.

ಹೀಗಿರುವದರಿಂದ ಒಬ್ಬ ಲೇಖಕನ ಕೃತಿಗಳ ಬೆಲೆಯನ್ನು ಕಟ್ಟುವಾಗ ಆ ಕೃತಿಗಳು ನಿರ್ಮಾಣವಾದ ಹಿನ್ನೆಲೆ, ಆ ಲೇಖಕನ ಸಮಕಾಲೀನ ಸಾಹಿತ್ಯಿಕ ಸ್ಥಿತಿಯ ಪರಿಜ್ಞಾನ ಆವಶ್ಯಕವಾಗುತ್ತವೆ. ಗಳಗನಾಥರ ಕಾದಂಬರಿಗಳ ಇತಿಮಿತಿಯನ್ನು ಗುರುತಿಸಲಿಕ್ಕೆ ಆ ಕಾಲದ ಕನ್ನಡ ಭಾಷೆ ಹಾಗೂ ಸಾಹಿತ್ಯಗಳ ಸ್ವರೂಪವನ್ನು–ಅಂದರೆ ಸಾಹಿತ್ಯಿಕ ಪರಿಸರವನ್ನು ಅರಿಯುವುದು ಅವಶ್ಯವಾಗುತ್ತದೆ.

ಗಳಗನಾಥರು 1869ರಲ್ಲಿ ಧಾರವಾಡ ಜಿಲ್ಲೆಯಲ್ಲಿ ಜನಿಸಿದರು. ಅವರ ಮೊದಲ ಸಾಹಿತ್ಯಿಕ ಕೃತಿ, 'ಪದ್ಮನಯನಾ' 1898ರಲ್ಲಿ ಪ್ರಕಟವಾಯಿತು. ಅವರು ಕಾಲವಶರಾಗುವ ವರೆಗೆ ಅಂದರೆ 1942ರ ವರೆಗೆ ಬರೆಯುತ್ತಲೇ ಇದ್ದರೂ, ಅವರ ಕೊನೆಯ ಕೃತಿ—'ದುರ್ಗದ ಬಿಚ್ಚುಗತ್ತಿ'—1938ರಲ್ಲಿ ಪ್ರಕಟವಾಯಿತು. ಆ ಕಾಲಕ್ಕೆ ಕನ್ನಡದಲ್ಲಿ ಬೇಕಾದಷ್ಟು ಅನುಕೂಲ ವಾತಾವರಣವುಂಟಾಗಿ ಅನೇಕ ಕಾದಂಬರಿಗಳು, ಕಾದಂಬರಿಕಾರರು ಜನಿಸಿದ್ದರೂ ಗಳಗ-ನಾಥರು ಸಾಹಿತ್ಯನಿರ್ಮಿತಿಗೆ ತೊಡಗಿದಾಗ ಮಾತ್ರ ಕನ್ನಡ ಕಾದಂಬರಿ ಇನ್ನೂ ತೀರ ಶೈಶವಾವಸ್ಥೆಯಲ್ಲಿಯೇ ಇದ್ದಿತು. 1898ರಲ್ಲಿ ಅವರು ತಮ್ಮ ಮೊದಲ ಕಾದಂಬರಿಯನ್ನು ಬರೆದಾಗ, ಅಂಥ ಸಾಹಿತ್ಯವನ್ನು ಕನ್ನಡದಲ್ಲಿ ನಿರ್ಮಿಸಿದ ಮುಂಬಯಿ ಕರ್ನಾಟಕದ ಮೊದಲಿಗರಲ್ಲಿ ಅವರೂ ಒಬ್ಬರಾಗಿದ್ದರೆಂಬುದು ಐತಿಹಾಸಿಕ ಸತ್ಯವಾಗಿದೆ. ಆದ್ದರಿಂದ 19ನೆಯ ಶತಮಾನದ ಕೊನೆಯಲ್ಲಿದ್ದ ಕನ್ನಡ ಭಾಷೆ ಹಾಗೂ ಸಾಹಿತ್ಯದ ರೂಪರೇಷೆಗಳನ್ನು ಅರಿತರೆ, ಗಳಗನಾಥರ ಪರಿಸರದ ಕಲ್ಪನೆ ಬರುವುದು.

19ನೆಯ ಶತಮಾನದ ಮಧ್ಯಭಾಗದಲ್ಲಿಯೇ ಹೊಸಗನ್ನಡ ಸಾಹಿತ್ಯದ ಅರುಣೋದಯದ ಚಿಹ್ನಗಳು ಕಾಣಲಾರಂಭಿಸಿದ್ದುವೆನ್ನಬಹುದಾದರೂ ಆ ಶತಮಾನದ ಕೊನೆಯ ಭಾಗದಲ್ಲಿ ಮಾತ್ರ ಈ ಚಿಹ್ನಗಳು ಸ್ಪಷ್ಟವಾದುವು. ಆಗ ಗದ್ಯಪ್ರಾಧಾನ್ಯ ಮತ್ತು ಹೊಸ ಸಾಹಿತ್ಯದ ಆಕರ್ಷಣೆಗಳು

ಪ್ರಮುಖವಾಗಿ ಗೋಚರಿಸುತ್ತವೆ. ಕನ್ನಡ ಮಾತನಾಡುವ ಪ್ರದೇಶವು ಮುಖ್ಯವಾಗಿ ಮುಂಬೈ, ಮದ್ರಾಸ ಪ್ರಾಂತಗಳಲ್ಲಿಯೂ, ಮೈಸೂರು, ನಿಜಾಮ ಮೊದಲಾದ ಸಂಸ್ಥಾನಗಳಲ್ಲಿಯೂ ಹರಿದು ಹಂಚಿಹೋಗಿತ್ತು. ಆದರೆ ಕನ್ನಡ ನುಡಿ ಮತ್ತು ಸಾಹಿತ್ಯಗಳ ದೃಷ್ಟಿಯಿಂದ ಮೈಸೂರು ಸಂಸ್ಥಾನದಲ್ಲಿಯೇ ಹೆಚ್ಚಿನ ಪ್ರೋತ್ಸಾಹವಿದ್ದಿತು.

ಈ ನಾಲ್ಕು ಪ್ರಮುಖ ಭಾಗಗಳಲ್ಲಿ 19ನೆಯ ಶತಮಾನದಲ್ಲಿ ನಡೆದ ಸಾಹಿತ್ಯಕೃಷಿಯನ್ನು ನೋಡಿದರೆ ಮೈಸೂರು ಸಂಸ್ಥಾನದ ಅನಂತರ, ಆಗ ಮದ್ರಾಸ ಪ್ರಾಂತದ ಭಾಗವಾಗಿದ್ದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೆಲವು ಮಟ್ಟಿನ ಕೃಷಿ ಕಾಣುತ್ತದೆ. ನಿಜಾಮ ಕರ್ನಾಟಕವು ತೀರ ಹಿಂದುಳಿದಿತ್ತು; ಮುಂಬಯಿ ಕರ್ನಾಟಕದಲ್ಲಿ ಸಾಹಿತ್ಯ ನಿರ್ಮಿತಿ ತಡವಾಗಿ ಆರಂಭವಾಯಿತು. ಅಲ್ಲಿ ರಾಜಾಶ್ರಯವಿರಲಿಲ್ಲವಷ್ಟೇ ಅಲ್ಲ, ಮರಾಠಿ ಭಾಷೆಯ ಅತಿವ್ಯಾಪ್ತ ಪ್ರಭಾವವು ಕನ್ನಡದ ಬೆಳವಣಿಗೆಗೆ ಮುಖ್ಯ ಆತಂಕವಾಗಿ ಪರಿಣಮಿಸಿದ್ದಿತು. ಧಾರವಾಡ ಜಿಲ್ಲೆಯೇ ಗಳಗನಾಥರ ಕಾರ್ಯಕ್ಷೇತ್ರವಾಗಿರುವುದರಿಂದ, ಧಾರವಾಡ ಜಿಲ್ಲೆಯ ಆ ಕಾಲದ ಸಾಹಿತ್ಯಿಕ ಪರಿಸರವನ್ನು ಗಮನಿಸುವದು ಮುಖ್ಯವಾಗಿದೆ. ಆದರೂ ಕರ್ನಾಟಕದ ಉಳಿದ ಭಾಗದಲ್ಲಿ ಆ ಕಾಲಕ್ಕಿದ್ದ ಸಾಹಿತ್ಯಿಕ ಚಟುವಟಿಕೆಗಳ ಹಿನ್ನೆಲೆಯನ್ನು ಅರಿತರೆ, ಗಳಗನಾಥರು ಎಂಥ ಪರಿಸರದಲ್ಲಿ ಕಾರ್ಯಪ್ರವೃತ್ತರಾದರೆಂಬುದನ್ನು ತಿಳಿಯಲು ಮತ್ತು ಗಳಗನಾಥರ ಕಾರ್ಯದ ಮಹತಿಯನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗುತ್ತದೆ.

ವಿಜಯನಗರ ರಾಜರ ಅನಂತರ ಕನ್ನಡ ಸಾಹಿತ್ಯಕ್ಕೆ ಮುಖ್ಯ ರಾಜಾಶ್ರಯವು ಮೈಸೂರು ಸಂಸ್ಥಾನದಲ್ಲಿಯೇ ಸಿಕ್ಕಿತು. ಅದರಿಂದ ಅಲ್ಲಿ ಸಾಹಿತ್ಯಿಕ ಚಟುವಟಿಕೆಗಳು ನಡೆಯುತ್ತಲೇ ಇದ್ದು 19ನೆಯ ಶತಮಾನದಲ್ಲಿ ಕೂಡ ಗಣ್ಯಪ್ರಮಾಣದಲ್ಲಿ ಸಾಹಿತ್ಯ ಸೃಷ್ಟಿಯಾಗುತ್ತಲೇ ಇದ್ದಿತು. ಮುಮ್ಮಡಿ ಕೃಷ್ಣರಾಜರು ಸ್ವತಃ ಪಂಡಿತರೂ ಕವಿಗಳೂ ಆಗಿದ್ದು ಸಂಸ್ಕೃತ-ಕನ್ನಡ ಎರಡೂ ಭಾಷೆಗಳಲ್ಲಿ ಅನೇಕ ಧಾರ್ಮಿಕ ಮತ್ತು ಶಾಸ್ತ್ರಗ್ರಂಥಗಳನ್ನಲ್ಲದೆ 'ಸೌಗಂಧಿಕಾ ಪರಿಣಯ'ದಂಥ ರಮ್ಯ ಕೃತಿಗಳನ್ನೂ ಬರೆದಿರುವರು. ಕೃಷ್ಣರಾಜರು ದೇವಚಂದ್ರ, ಯಾದವ ಕಬ್ಬಿಗ, ಕೆಂಪುನಾರಾಯಣ, ದೇವಲಾಪುರದ ನಂಜುಂಡ, ಲಿಂಗರಾಜ ಮೊದಲಾದ ಹಲವು ಪಂಡಿತರಿಗೆ ಉದಾರಾಶ್ರಯವನ್ನು ಇತ್ತು ಸಾಹಿತ್ಯಸೃಷ್ಟಿಗೆ ಪ್ರೇರಕರಾದರು. ಅನಂತರ ಚಾಮರಾಜರು ಕೂಡ ಈ ಉದಾರಾಶ್ರಯದ ಪರಂಪರೆಯನ್ನು ಮುಂದುವರಿಸಿಕೊಂಡು ಬಂದರು. ಅವರು ಸ್ವತಃ ಗ್ರಂಥಗಳನ್ನು ರಚಿಸಲಿಲ್ಲವಾದರೂ ಅವರಿಂದ ಪೋಷಿತರಾದ ಹಲವು ವಿದ್ವಾಂಸರು ಗ್ರಂಥ ರಚನೆ ಮಾಡುತ್ತ ಬಂದರು. ಅವರಲ್ಲಿ ಬಸವಪ್ಪ ಶಾಸ್ತ್ರಿಗಳಂತೂ ಅತ್ಯಂತ ಪ್ರಖ್ಯಾತರಾದರು. ಹೀಗೆ ಮೈಸೂರು ಪ್ರಾಂತದಲ್ಲಿ ಗ್ರಂಥ ರಚನೆಯ ಕಾರ್ಯವು ಅವ್ಯಾಹತವಾಗಿ ನಡೆಯುತ್ತ ಬಂದಿತು.

ಆಂಗ್ಲರ ಆಗಮನವು ಭಾರತಕ್ಕೆ ರಾಜಕೀಯವಾಗಿ ಅನೇಕ ಹಾನಿಗಳನ್ನು ತಂದಿದ್ದರೂ, ಅವರ ಸಂಪರ್ಕದಿಂದ ನಮಗೆ ಕೆಲವು ಪ್ರಯೋಜನಗಳೂ ಆಗಿವೆಯೆಂಬಲ್ಲಿ ಸಂದೇಹವಿಲ್ಲ. ಅವುಗಳಲ್ಲಿ ಸಾಹಿತ್ಯಿಕ ಪ್ರಯೋಜನಗಳನ್ನು ಇಲ್ಲಿ ನೆನೆಯಬಹುದಾಗಿದೆ. ಆಂಗ್ಲ ಭಾಷೆ ಮತ್ತು ಸಾಹಿತ್ಯಗಳ ಅಭ್ಯಾಸದಿಂದ ಭಾರತೀಯ ಸಾಹಿತ್ಯಕ್ಕೆ ಒಂದು ಹೊಸ ತಿರುವು ಉಂಟಾಯಿತೆಂಬುದು ಸುಸ್ಪಷ್ಟವೇ ಇದೆ. ಆ ವಿವರಗಳಿಗೆ ಇಲ್ಲಿ ಅವಕಾಶವಿಲ್ಲವಾದರೂ ಉಳಿದ ಪ್ರಾದೇಶಿಕ ಭಾಷೆಗಳಂತೆ ಕನ್ನಡದಲ್ಲೂ ಆಂಗ್ಲ ಸಾಹಿತ್ಯದ ಪ್ರಭಾವ ಕ್ರಮವಾಗಿ ಕಂಡು

ಬರತೊಡಗಿತೆಂಬುದನ್ನು ನೆನೆಯಬೇಕು. 'ಶಾಕುಂತಲ' 'ವಿಕ್ರಮೋರ್ವಶೀಯ' 'ಉತ್ತರ ರಾಮಚರಿತ' 'ಮಾಲತೀ ಮಾಧವ' ಮತ್ತು 'ರತ್ನಾವಳೀ' ನಾಟಕಗಳನ್ನು ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರ ಮಾಡಿ 'ಅಭಿನವ ಕಾಳಿದಾಸ'ನೆಂಬ ಬಿರುದನ್ನು ಪಡೆದ ಬಸವಪ್ಪ ಶಾಸ್ತ್ರಿಗಳು (1843-1891) ಶೇಕ್ಸ್‌ಪಿಯರನ 'ಒಥೆಲೊ'ವನ್ನೂ 'ಶೂರಸೇನ ಚರಿತ್ರೆ' ಎಂಬ ಹೆಸರಿನಿಂದ ಕನ್ನಡಕ್ಕೆ ಅನುವಾದ ಮಾಡಿದರು. 'ಶಾಕುಂತಲ'ದಂಥ ಶ್ರೇಷ್ಠ ನಾಟಕವನ್ನು ಕನ್ನಡದಲ್ಲಿ ಅನುವಾದ ಮಾಡಿದವರಲ್ಲಿ ಮೊದಲಿಗರಾದ ಶ್ರೇಯಸ್ಸು ಬಸವಪ್ಪ ಶಾಸ್ತ್ರಿಗಳಿಗಿದ್ದಂತೆ, 'ಒಥೆಲೊ'ದಂಥ ಶ್ರೇಷ್ಠ ದುರಂತ ನಾಟಕವನ್ನು ಇಂಗ್ಲೀಷಿನಿಂದ ಮೊದಲು ಅನುವಾದ ಮಾಡಿದ ಶ್ರೇಯಸ್ಸೂ ಅವರದಾಯಿತು. "ಹೊಸಗನ್ನಡ ಸಾಹಿತ್ಯಕ್ಕೆ ಇಂಗ್ಲೀಷ ಸಾಹಿತ್ಯ ಕೊಟ್ಟ ಸ್ಫೂರ್ತಿ ಇಲ್ಲಿ ಎದ್ದು ಕಾಣುತ್ತದೆ".[1] ಈ ಆಂಗ್ಲ ನಾಟಕದ ಅನುವಾದ ಆಕಸ್ಮಿಕವಾಗಿರಲಿಲ್ಲ. ಬಸವಪ್ಪ ಶಾಸ್ತ್ರಿಗಳ ಕೆಲವು ಸಮಕಾಲೀನರೂ ಅವರನ್ನು ಅನುಸರಿಸಿ ಆಂಗ್ಲ ನಾಟಕಗಳನ್ನು ಕನ್ನಡಕ್ಕೆ ತಂದರು. ಇದರಿಂದ 19ನೆಯ ಶತಮಾನದ ಉತ್ತರಾರ್ಧದಲ್ಲಿ ಕನ್ನಡಿಗರಿಗೆ ಆಂಗ್ಲ ಸಾಹಿತ್ಯದ ಆಕರ್ಷಣೆಯುಂಟಾಗಿತ್ತೆಂಬುದು ಸ್ಪಷ್ಟವಾಗುತ್ತದೆ.

ಇಂಥ ಅನುವಾದಕರಲ್ಲಿ ಎಂ. ಎಲ್. ಶ್ರೀಕಂಠೇಶಗೌಡರು (1852-1926) ಪ್ರಮುಖರು. ವೃತ್ತಿಯಿಂದ ವಕೀಲರಾಗಿದ್ದರೂ ಸಾಹಿತ್ಯಪ್ರೇಮಿಯಾದ ಅವರು ಶೇಕ್ಸ್‌ಪಿಯರನ 'ಮ್ಯಾಕಬೆಥ್' 'ಮಿಡ್ ಸಮರ ನೈಟ್ಸ ಡ್ರೀಮ' ನಾಟಕಗಳನ್ನು 'ಪ್ರತಾಪ ರುದ್ರದೇವ', 'ಪ್ರಮೀಳಾರ್ಜುನೀಯ' ಎಂಬ ಹೆಸರಿನಿಂದ ರೂಪಾಂತರಿಸಿದರು. ಅವರು ಕನ್ನಡ ವಾಚಕರಿಗಾಗಿ ಆಂಗ್ಲ ಅನುವಾದಗಳ ಒಂದು ಮಾಲಿಕೆಯನ್ನೇ ಆರಂಭಿಸಿ, 'ಕನ್ಯಾವಿತಂತು' 'ಚಿಕ್ಕ ಬಣಜಿಗರು' ಎಂಬಂಥ ಬೇರೆ ಕೆಲವು ಭಾಷಾಂತರಗಳನ್ನೂ ಮಾಡಿದರೆಂಬುದನ್ನು ನೆನೆದರೆ, ಇಂಗ್ಲೀಷ ಕೃತಿಗಳಿಂದ ಕನ್ನಡವನ್ನು ಪುಷ್ಟಿಗೊಳಿಸಬೇಕೆಂಬ ಅವರ ಕಳಕಳಿ ವ್ಯಕ್ತವಾಗುತ್ತದೆ. ಇನ್ನೊಬ್ಬ ವಕೀಲರಾದ ಎ. ಆನಂದರಾವ್ ಎಂಬವರು ಕೂಡ ಶೇಕ್ಸ್‌ಪಿಯರನ 'ಮರ್ಚಂಟ್ ಆಫ್ ವ್ಹೆನಿಸ್', 'ರೋಮಿಯೋ ಎಂಡ್ ಜೂಲಿಯಟ್' ನಾಟಕಗಳನ್ನು 'ಪಾಂಚಾಲೀ ಪರಿಣಯ' (1889), 'ರಾಮವರ್ಮಲೀಲಾವತಿ ಚರಿತ್ರೆ' (1890) ಎಂಬ ಹೆಸರಿನಿಂದ ಅನುವಾದಿಸಿ ರಂಗಭೂಮಿಯ ಮೇಲೆ ಪ್ರಯೋಗಿಸಿದರು. ಅಲ್ಲದೆ ಶೇಕ್ಸ್‌ಪಿಯರನ 'ಹ್ಯಾಮ್ಲೆಟ್' ನಾಟಕವನ್ನು 'ಮೈಸೂರು ದೇಶೀಯ' ಎಂಬ ಗುಪ್ತನಾಮದಿಂದ 1905 ರಲ್ಲಿ ಭಾಷಾಂತರಿಸಿದರು. 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯ ಖ್ಯಾತ ಎಂ. ಎಸ್. ಪುಟ್ಟಣ್ಣನವರು ಕೂಡ ಕೆಲವು ನಾಟಕಗಳನ್ನು ಅನುವಾದಿಸಿರುವರು. ಅವರು ಶೇಕ್ಸ್‌ಪಿಯರನ 'ಕಿಂಗ್ ಲಿಯರ್' ನಾಟಕವನ್ನು ಸಂಪೂರ್ಣವಾಗಿ ಗದ್ಯದಲ್ಲಿಯೇ ರೂಪಾಂತರಿಸಿರುವುದು ಗಣನೀಯವಾಗಿದೆ.

ಆಂಗ್ಲ ನಾಟಕಗಳಂತೆ ಕಾದಂಬರಿಗಳು ಕೂಡ ಭಾಷಾಂತರವಾಗಿಯೋ ರೂಪಾಂತರಗೊಂಡೋ ಕನ್ನಡಕ್ಕೆ ಬರತೊಡಗಿದುವು. ಇಂಥ ಕಾದಂಬರಿಗಳನ್ನು ಕೆಲವರು ನೇರವಾಗಿ ಆಂಗ್ಲದಿಂದ ಅನುವಾದಿಸಿದರು. ಕೆಲವು ಸಲ ಈ ಆಂಗ್ಲ ಕಾದಂಬರಿಗಳು ಬಂಗಾಲಿ, ತೆಲುಗು, ಮರಾಠಿ, ಮಲೆಯಾಳಿಗಳಿಗೆ ಹೋಗಿ ಅಲ್ಲಿಂದ ಕನ್ನಡಕ್ಕೆ ಬಂದುವು. ಹೀಗೆ ಅನುವಾದಗೊಂಡ ಇಂಗ್ಲೀಷ ಕಾದಂಬರಿಗಳಲ್ಲಿ ಡೀಫೋನ 'ರಾಬಿನ್‌ಸನ್ ಕ್ರೂಸೋ' ಗಣ್ಯವಾಗಿದೆ. 1850ರ

---

1. ರಂ. ಶ್ರೀ. ಮುಗಳಿ. ಕನ್ನಡ ಸಾಹಿತ್ಯ ಚರಿತ್ರೆ, ಪುಟ 407.

ದಶಕದಲ್ಲಿಯೇ ಅವನ್ನು ಎಸ್. ಬಿ. ಕೃಷ್ಣಸ್ವಾಮಿ ಎಂಬವರು ಕನ್ನಡಕ್ಕೆ ಅನುವಾದಿಸಿದರು. ಜಾನ್ ಬನಿಯನ್ನನ 'ಪಿಲ್‌ಗ್ರಿಮ್ಸ್ ಪ್ರೊಗ್ರೆಸ್'ನ್ನು ರೆ. ವೀಗಲ್ ಎಂಬವರು 'ಯಾತ್ರಿಕನ ಸಂಚಾರ'ವೆಂದು 1847 ರಲ್ಲಿ ಭಾಷಾಂತರಿಸಿದ್ದರು. "ಸುದೀರ್ಘ ಕಥೆ ಅಥವಾ ಕಾದಂಬರಿಯಾಗಿ ಕನ್ನಡದಲ್ಲಿ ಇದೇ ಮೊದಲನೆಯದಾಗಿ ಪರಿಣಮಿಸಿತು."[1] ಬೆಂಗಳೂರಿನ ಕಂಟ್ರೋಲರ್ ಕಚೇರಿಯಲ್ಲಿ ಸುಪರಿಂಟೆಂಡೆಂಟರಾಗಿದ್ದ ಅಣ್ಣಾಜಿರಾವ್ ಆರ್. ಮಲ್ಲೇಶ್ವರ ಅವರು ಡಿಕನ್ಸ್‌ನ 'ಆಲಿವ್ಹರ್ ಟ್ವಿಸ್ಟ್' ಮತ್ತು ಫೀಲ್ಡಿಂಗನ 'ಟಾಮ್ ಜೋನ್ಸ್' ಕಾದಂಬರಿಗಳನ್ನು ತಿಳಿಯಾದ ಗದ್ಯದಲ್ಲಿ ಅನುವಾದಿಸಿದರು. ಇಂಥ ಅನೇಕ ಅನುವಾದಗಳಲ್ಲಿ 1897ರಲ್ಲಿ ಪ್ರಕಟವಾದ ಎಂ. ಎಸ್. ಪುಟ್ಟಣ್ಣನವರ 'ಸುಮತಿ ಹಾಗೂ ಮದನಕುಮಾರ ಚರಿತ್ರೆ' ತುಂಬ ಗಣ್ಯವಾಗಿದೆ. ಅದು ಥಾಮಸ್ ಡೇ ಅವರ 'ಸ್ಯಾನಫೋರ್ಡ್ ಎಂಡ್ ಮೇಟ್ರನ್' ಎಂಬುದರ ಅನುಕರಣೆಯಾಗಿದೆ.

ಕ್ರೈಸ್ತ ಮತದ ಮೇಲ್ಮೆಯನ್ನು ಎತ್ತಿ ತೋರಿಸುವ ಉದ್ದೇಶದಿಂದ ಮರಾಠಿಯಲ್ಲಿ ಬಾಬಾ ಪದುಮನಜೀ ಎಂಬುವರು 1857ರಲ್ಲಿ ಬರೆದ 'ಯಮುನಾ ಪರ್ಯಟನ' ಎಂಬುದನ್ನು ಬಾಸೆಲ್ ಮಿಶನ್ನಿನವರು 1869ರಲ್ಲಿಯೇ 'ಯಮುನಾಬಾಯಿಯ ಸಂಚಾರ' ಎಂಬ ಹೆಸರಿನಿಂದ ಭಾಷಾಂತರಿಸಿ ಪ್ರಕಟಿಸಿದರು.

**ಬಿ. ವೆಂಕಟಾಚಾರ್ಯರು** (1845–1914)ರಂತೂ ತಮಗೆ ಬಂಗಾಲಿ ಭಾಷೆಯನ್ನು ಕಲಿಸಿದ ಈಶ್ವರಚಂದ್ರ ವಿದ್ಯಾಸಾಗರ ಅವರ ಅನೇಕ ಕೃತಿಗಳನ್ನು ಭಾಷಾಂತರಿಸಿದರು. ಅವುಗಳಲ್ಲಿ 'ಭ್ರಾಂತಿ ವಿಲಾಸ' (1876)ವು ಪ್ರಥಮ ಅನುವಾದವು. ಮುಂದೆ 1885ರಲ್ಲಿ 'ದುರ್ಗೇಶ ನಂದಿನಿ' ಯಿಂದ ಆರಂಭವಾದ ಅವರ ಬಂಕಿಮಚಂದ್ರರ ಕಾದಂಬರಿಗಳ ಭಾಷಾಂತರ ಕಾರ್ಯವು ಅವ್ಯಾಹತವಾಗಿ ನಡೆಯಿತು. ಅವರ ಕೃತಿಗಳ ಸಂಖ್ಯೆ 65ಕ್ಕೂ ಮೀರಿದೆಯೆಂಬುದು ತುಂಬ ಗಮನಾರ್ಹವಾದ ವಿಚಾರವಾಗಿದೆ.[2] ಅವುಗಳಲ್ಲಿ 36ರಷ್ಟು ಕಾದಂಬರಿಗಳೇ ಇವೆ. ಈಶ್ವರಚಂದ್ರ ವಿದ್ಯಾಸಾಗರ, ಬಂಕಿಮಚಂದ್ರರಲ್ಲದೆ, ಅವರು ಹರಪ್ರಸಾದ ಶಾಸ್ತ್ರೀ, ರಮೇಶ ಚಂದ್ರದತ್ತ, ಯೋಗೀಂದ್ರ ಬಸು, ಸತೀಶಚಂದ್ರ ಬಾಬು, ನನಿಲಾಲ ವಂಧ್ಯೋಪಾಧ್ಯಾಯ ಅವರ ಕೃತಿಗಳನ್ನು ಭಾಷಾಂತರಿಸಿದರು. ಬಂಗಾಲಿಯಿಂದ ಕನ್ನಡಕ್ಕೆ ಕಾದಂಬರಿಗಳನ್ನು ಭಾಷಾಂತರಿಸಿದ ಪ್ರಥಮ ವ್ಯಕ್ತಿಯಾಗಿ ವೆಂಕಟಾಚಾರ್ಯರ ಸೇವೆ ಅನುಪಮವಾಗಿದೆ. ಅವರ ಕಾದಂಬರಿಗಳಲ್ಲಿ ಕನ್ನಡಿಗರು ನವೀನ ಪ್ರಪಂಚವನ್ನೇ ಕಂಡು ಮೋಹಿತರಾದರು. ನಡುಗನ್ನಡದ ಜನಪ್ರಿಯ ಕಾವ್ಯಗಳು ಮತ್ತು 'ಬತ್ತೀಸಪುತ್ಥಳಿ'ಯಂಥ ಕಥನಗಳಿಗೆ ಸೀಮಿತವಾಗಿದ್ದ ಅಂದಿನ ಕನ್ನಡಿಗರ ವಾಚನಾಭಿರುಚಿಯನ್ನು ಹೆಚ್ಚಿಸುವುದಕ್ಕೆ ವೆಂಕಟಾಚಾರ್ಯರು ಮುಖ್ಯ ಕಾರಣ-ಕರ್ತರಾದರು. 'ನಾವೆಲು' ಎಂಬ ಹೆಸರಿನಿಂದ ಕಾದಂಬರಿಯನ್ನು ಪ್ರಚಾರಕ್ಕೆ ತಂದವರೇ ವೆಂಕಟಾಚಾರ್ಯರು. ಅವರ ಭಾಷಾಂತರಗಳಲ್ಲಿ 'ಆನಂದಮಠ', 'ದೇವೀಚೌಧುರಾಣಿ', 'ರಜನಿ' ಮತ್ತು 'ವಿಷವೃಕ್ಷ' ಇವು ತುಂಬ ಸುಂದರವಾದವುಗಳು.

---

1. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯದ ಇತಿಹಾಸ, ಪುಟ 193

2. ನೋಡಿರಿ – ಶ್ರೀನಿವಾಸ ಹಾವನೂರ : ಬಿ. ವೆಂಕಟಾಚಾರ್ಯರ ಕೃತಿಗಳು–'ಕನ್ನಡ ನುಡಿ' 4–5, ಪುಟ 50–52.

ಚನ್ನಪಟ್ಟಣದ ವಾಸುದೇವಯ್ಯನವರೂ ಬಂಗಾಲಿಯಿಂದ ಕೆಲವು ಕೃತಿಗಳನ್ನು ಅನುವಾದಿಸಿದರು. ಅವುಗಳಲ್ಲಿ 'ಆರ್ಯಕೀರ್ತಿ' (1898) ಮತ್ತು 'ಭೀಷ್ಮಚರಿತ್ರೆ' ತುಂಬ ಗಣ್ಯವಾಗಿವೆ. ಬಿ. ವೆಂಕಟಾಚಾರ್ಯರ ಭಾಷಾಂತರಗಳ ರೀತಿ ಸಂಸ್ಕೃತ ಭೂಯಿಷ್ಠವಾಗಿ ಒಂದು ರೀತಿ ಕೃತ್ರಿಮವೆನಿಸಿದರೆ, ಚ. ವಾಸುದೇವಯ್ಯನವರ ಗದ್ಯ ತುಂಬ ಸರಳ, ಸುಂದರವಾದುದು. ಆ ದೃಷ್ಟಿಯಿಂದ ಇವರನ್ನು ಹೊಸಗನ್ನಡ 'ಗದ್ಯಶಿಲ್ಪಿ' ಎನ್ನುವುದು ಸಮುಚಿತವಾಗಿದೆ.

ಮೈಸೂರು ಭಾಗದಲ್ಲಿ ಕೆಲವರು ತೆಲುಗಿನಿಂದ ಕೂಡ ಕಾದಂಬರಿಗಳನ್ನು ಭಾಷಾಂತರಿಸಿರುವರು. ತೆಲುಗಿನ ಸುಪ್ರಸಿದ್ಧ ಲೇಖಕರಾದ ವೀರೇಶಲಿಂಗಂ ಅವರ 'ವಿವೇಕ ಚಂದ್ರಿಕೆ' (1898), 'ಸತ್ಯವತೀ ಚರಿತ್ರೆ' (1897), 'ಸತ್ಯರಾಜಾ ಪೂರ್ವದೇಶಯಾತ್ರೆ' (1899)ಗಳು ಕನ್ನಡಕ್ಕೆ ಭಾಷಾಂತರಗೊಂಡವು. ಅದರಂತೆ ಮದ್ರಾಸಿನಲ್ಲಿ ಹೈಕೋರ್ಟ ವಕೀಲರಾಗಿದ್ದ ರೆಂಟಾಲ ವೆಂಕಟಸುಬ್ಬರಾಯ ಎಂಬವರು 1895ರಲ್ಲಿಯೇ 'ಕೇಸರಿ ವಿಲಾಸ' ಎಂಬ ಸ್ವತಂತ್ರ ಕಾದಂಬರಿಯನ್ನು ಕನ್ನಡದಲ್ಲಿ ಬರೆದರು.[1] ಅದೇ ಹೆಸರಿನಿಂದ ಅದು ತೆಲುಗಿನಲ್ಲಿಯೂ ಅದೇ ವರ್ಷ ಪ್ರಕಟವಾಯಿತು. ಅವರ 'ಆನಂದದೀಪಿಕೆ' ಎಂಬ – ತೆಲುಗಿನಿಂದ ಅನುವಾದಿತ— ಕಾದಂಬರಿಯು 1901ರಲ್ಲಿ ಪ್ರಕಟವಾಯಿತು. ಮಲೆಯಾಳಿಯ 'ಸುಕುಮಾರಿ' ಎಂಬುದನ್ನು 1899ರಲ್ಲಿ ಬಾಸೆಲ್ ಮಿಶನ್ನಿನವರು ಕನ್ನಡಕ್ಕೆ ತಂದರು. ಮುನ್ನುಡಿಯಲ್ಲಿ "ಈ ಕಾಲದಲ್ಲಿ ಇಂಗ್ಲೀಷ ಕಲಿತವರಿಗೆ ನೋವೆಲ್ಸ ಎಂಬ ಕಾದಂಬರಿಗಳನ್ನು ಓದುವ ಅಭಿರುಚಿ ಶಾನೆ ಹತ್ತಿಯಿದೆ. ಅವುಗಳನ್ನು ಓದಿ ರುಚಿಸಬಲ್ಲವರು ಮಲೆಯಾಳದಲ್ಲಿಯೂ ಕನ್ನಡದಲ್ಲಿಯೂ ಇಂಥಾ ಪುಸ್ತಕಗಳನ್ನು ತರ್ಜುಮೆ ಮಾಡಲಿಕ್ಕೂ ರಚಿಸಲಿಕ್ಕೂ ಸುರುಮಾಡಿದ್ದಾರೆ. ಯಾವ ಭಾಷೆಯಾಗಲಿ ಕಾದಂಬರಿಗಳು ಓದುವವರೆಲ್ಲರ, ಮುಖ್ಯತಾ ಯೌವನ ಪ್ರಾಯದವರ ಮನಸ್ಸನ್ನು ಕೆಡಿಸುವ ವಿಷಬೆರಸಿದ್ದಾಗಿರುತ್ತದೆ. ಇದನ್ನು ತಡಿಯುವ ಉದ್ದೇಶದಿಂದ ಈ 'ಸುಕುಮಾರಿ' ಎಂಬ ಪುಸ್ತಕವನ್ನು ರಚಿಸಿದ್ದಾರೆ" ಎಂದು ಹೇಳುವುದನ್ನು ಗಮನಿಸಿದರೆ, ಆ ಕಾಲಕ್ಕಾಗಲೇ ಜನಕ್ಕೆ ಹೊಸ ಕಾದಂಬರಿಗಳ ರುಚಿ ಹತ್ತಿತ್ತೆಂದು ಹೇಳಬೇಕಾಗುತ್ತದೆ.

ಹೀಗೆ ಭಾಷಾಂತರಗಳ ಜೊತೆಗೆ ಸ್ವತಂತ್ರ ಕಾದಂಬರಿಗಳೂ 19ನೆಯ ಶತಮಾನದ ಕೊನೆಯ ದಶಕದಲ್ಲಿ ಕಾಣಿಸಿಕೊಂಡುವು. ಕೆಂಪುನಾರಾಯಣನ 'ಮುದ್ರಾಮಂಜೂಷ'(1823)ವೇ ಕನ್ನಡದ ಪ್ರಥಮ ಸ್ವತಂತ್ರ ಕಾದಂಬರಿಯೆಂದು ಬಹುಕಾಲ ಕರೆಯಲ್ಪಡುತ್ತಿತ್ತು. ಆದರೆ ಗೋವಿಂದ ಪೈಗಳು ಮುಂಬಯಿಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ (1950) ಯಾದವ ಕಬ್ಬಿಗನ 'ಕಲಾವತೀ ಪರಿಣಯ'ವೇ ಕನ್ನಡದ ಪ್ರಥಮ ಕಾದಂಬರಿಯೆಂದು ಅಭಿಪ್ರಾಯಪಟ್ಟರು. ಮೈಸೂರು ಅರಸರಾದ ಮುಮ್ಮಡಿ ಕೃಷ್ಣರಾಜರ ಆಸ್ಥಾನಕವಿ ಯಾದವ ಕಬ್ಬಿಗನು ಸುಮಾರು 1815 ರಲ್ಲಿ ಈ ಕೃತಿಯನ್ನು ರಚಿಸಿದನು. ಪೌರಾಣಿಕ ಹಿನ್ನೆಲೆಯ ಈ ಕಥೆಯಲ್ಲಿ ಪ್ರೇಮಾಖ್ಯಾನವೇ ಪ್ರಧಾನವಾಗಿದೆ. ಅದೃಶ್ಯಾಂಜನ ಪ್ರಯೋಗ, ರೂಪಬದಲಾವಣೆ ಮೊದಲಾದ ಅಘಟಿತ ಘಟನೆಗಳಿಂದೊಡಗೂಡಿದ ಈ ರಮ್ಯ ಕಥೆಯನ್ನು ಕಬ್ಬಿಗನು ದಂಡಕವೃತ್ತದಲ್ಲಿ ಬರೆದಿರುವನು. "ಇದನ್ನು ತಿಳಿಯಾದ ಹೊಸಗನ್ನಡದಲ್ಲಿ ಬರೆದಿದ್ದಾದರೆ ಇಂದಿನ ವಾಚಕರನ್ನು ಸಹ ರಂಜಿಸಬಲ್ಲ ಕೃತಿಯಿದು. ಇದನ್ನು ಕನ್ನಡದ ಆದ್ಯ ಕಾದಂಬರಿ ಎಂಬುದರಲ್ಲಿ ಔಚಿತ್ಯವಿದೆ."[2]

---

1. ವೆಂಕಟೇಶ ಸಾಂಗಲಿ : ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಪುಟ 160.
2. ಶ್ರೀನಿವಾಸ ಹಾವನೂರ : ಹೊಸಗನ್ನಡದ ಅರುಣೋದಯ, ಪುಟ 529.

ಎಂದು ಡಾ. ಹಾವನೂರರೂ ಅಭಿಪ್ರಾಯಪಡುವರು. ಇಂಥದೇ ಇನ್ನೊಂದು ಕೃತಿ ಮುಮ್ಮಡಿ ಕೃಷ್ಣರಾಜರ 'ಸೌಗಂಧಿಕಾ ಪರಿಣಯ' (1821). ಇದನ್ನು ಪೌರಾಣಿಕ ಕಥೆಯೆಂದು ಕರೆಯಬಹುದು. ಇಂದ್ರ-ಶಚಿಯರು ಭೂಲೋಕದಲ್ಲಿ ಜನಿಸಿದ ಕಥಾನಕ ಇದರಲ್ಲಿದೆ. ಇದು ಯಾವ ಸಂಸ್ಕೃತ ಕಾವ್ಯದ ಅನುವಾದವಾಗಿರದೆ. ಬಹುಮಟ್ಟಿಗೆ ನೂತನ ಕಥೆಯನ್ನು ಒಳಗೊಂಡು 'ರಸಿಕ ಜನಾನಂದಕರವಾಗುವಂತೆ' ಗದ್ಯದಲ್ಲಿಯೇ ರಚಿಸಲ್ಪಟ್ಟಿದೆ.

ಆದರೂ 'ಕಲಾವತಿ ಪರಿಣಯ', 'ಸೌಗಂಧಿಕಾ ಪರಿಣಯ' ಮತ್ತು 'ಮುದ್ರಾಮಂಜೂಷ' ಈ ಮೂರು ಕೃತಿಗಳನ್ನು ಆಧುನಿಕ ಕಾದಂಬರಿ ಎಂದು ಕರೆಯುವುದು ಉಚಿತವೇ ಎಂದು ವಿಚಾರಿಸಬೇಕು. ಕೇವಲ ಕಥೆಯನ್ನು--ಕಲ್ಪಿತ ಕಥೆಯನ್ನು—ಹೇಳುವುದೇ ಕಾದಂಬರಿಯಾಗಲಾರದು. ಕಾದಂಬರಿಯಲ್ಲೂ ಕಥೆ ಇರುತ್ತದೆ. ಆದರೆ ಕಥೆಯೇ ಕಾದಂಬರಿಯಲ್ಲ. ಕಾದಂಬರಿಯಲ್ಲಿ ವಸ್ತುವಿನಂತೆ ನಿರೂಪಣೆಯ ವಿಧಾನಕ್ಕೂ ಪ್ರಾಮುಖ್ಯವಿದೆ. ನಿಜವಾಗಿ ಹೇಳಬೇಕೆಂದರೆ ಕಾದಂಬರಿ ಎಂಬ ಸಾಹಿತ್ಯರೂಪವು ಮೊದಲು ಕನ್ನಡದಲ್ಲಿ, ಅಷ್ಟೇ ಏಕೆ, ಇಡೀ ಭಾರತೀಯ ಸಾಹಿತ್ಯದಲ್ಲಿಯೇ ಇರಲಿಲ್ಲ; ಅದು ಆಂಗ್ಲ ಸಾಹಿತ್ಯದ ಕೊಡುಗೆ ಎಂದು ಒಪ್ಪಿಕೊಳ್ಳುವಲ್ಲಿ ಏನೂ ಸಂಕೋಚಪಡಬೇಕಾಗಿಲ್ಲ. ಆದ್ದರಿಂದ ಮೇಲೆ ಹೇಳಿದ ಮೂರೂ ಕೃತಿಗಳನ್ನು ಮೊದಲ ಕಾದಂಬರಿಗಳೆಂದು ಕರೆಯುವದು ಅನುಚಿತವೇ ಆದೀತು.

ತೀರ ಹೆಸರಿಗೆ ಮಾತ್ರ ಕಥಾಸೂತ್ರವುಳ್ಳ. ಆದರೆ ಜನಜೀವನವನ್ನು ಅತ್ಯಂತ ವಾಸ್ತವವಾಗಿ ಚಿತ್ರಿಸಿದ 'ಹಿಂದೂ ದೇಶದ ಜನರು ಮಾತನಾಡುವ ಪದ್ಧತಿ' ಎಂಬ ಹೆಸರಿನ ಕೃತಿಯನ್ನು ಒಂದು ಅರ್ಥದಲ್ಲಿ ಕಾದಂಬರಿಯೆಂದು ಕರೆಯಬಹುದು. ಇದನ್ನು ವೆಸ್ಲಿಯನ್ ಮಿಶನರಿಗಳಿಗೆ ಕನ್ನಡವನ್ನು ಹೇಳಿಕೊಡುತ್ತಿದ್ದ ಮುನಶಿ ಶ್ರೀನಿವಾಸಯ್ಯ ಎಂಬುವರು 1847ರಲ್ಲಿಯೇ ಬರೆದರು. ವಿದೇಶೀಯ ಅಧಿಕಾರಿಯೊಬ್ಬನು ಬೆಂಗಳೂರಿನಿಂದ ಸೇಲಂಗೆ ಹೊರಟಾಗ ಆತ ಹಲವು ಬಗೆಯ ಜನರನ್ನು ಭೆಟ್ಟಿಯಾಗಿ ಅವರ ಜೊತೆ ಸಂಭಾಷಣೆ ನಡೆಸುವನು. ಈ ಮಾತುಕತೆಗಳಲ್ಲಿ ಮತ್ತು ಅಲ್ಲಲ್ಲಿ ಬಂದ ವರ್ಣನೆಗಳಲ್ಲಿ ಪ್ರಾದೇಶಿಕ ಕಾದಂಬರಿಯ ಕುರುಹುಗಳನ್ನು ಕಾಣಬಹುದಾಗಿದೆ. "ಹೀಗೆ ಹೊಸಗನ್ನಡ ಸಾಹಿತ್ಯದ ಲಕ್ಷಣಗಳಾದ ವಾಸ್ತವತೆ, ಸ್ವವಿಚಾರದ ಅಭಿವ್ಯಕ್ತಿ ಮತ್ತು ಸಾಮಾಜಿಕ ಪ್ರಜ್ಞೆ—ಇವು ಬಲು ಪೂರ್ವದಲ್ಲಿಯೇ ಕಂಡುಬಂದುವೆಂಬುದು ಮಹತ್ತ್ವದ್ದು. ಗ್ರಂಥಕರ್ತನು ಇವನ್ನು ಗಮನದಲ್ಲಿರಿಸಿಕೊಂಡು ಹಾಗೆ ಬರೆದುದೇನಲ್ಲ. ಮತ್ತು ಆ ಕಾಲಕ್ಕೆ ಅದೊಂದು ಪರಂಪರೆಯಾಗಿ ಮುಂದುವರಿಯಲೂ ಇಲ್ಲ."[1]

ನಿಜವಾದ ಸ್ವತಂತ್ರ ಸಾಮಾಜಿಕ ಕಾದಂಬರಿಯು ಕನ್ನಡದಲ್ಲಿ 19ನೆಯ ಶತಮಾನದ ಕೊನೆಯ ದಶಕದಲ್ಲಿ ಕಾಣಿಸಿಕೊಂಡಿತು. ಬೋಳಾರ ಬಾಬೂರಾಯರ 'ವಾಗ್ದೇವಿ' (1895), ಗುಳವಾಡಿ ಅಣ್ಣಾಜಿರಾಯರ 'ರೋಹಿಣಿ' ಇಲ್ಲವೆ 'ಸಾರಸ್ವತ ಮಂಡಳ' (1896) ಮತ್ತು ಗುಳವಾಡಿ ವೆಂಕಟರಾಯರ 'ಇಂದಿರಾಬಾಯಿ' ಅಥವಾ 'ಸದ್ಧರ್ಮವಿಜಯ' ಇವು ಮೂರೂ ಸ್ವತಂತ್ರ ಕಾದಂಬರಿಗಳಾಗಿದ್ದು. ಈ ಮೂವರೂ ಲೇಖಕರೂ ದಕ್ಷಿಣಕನ್ನಡ ಜಿಲ್ಲೆಯವರೇ ಆಗಿರುವರು. ಆದರೆ ಮೈಸೂರಿಗರಾದ ಎಂ. ಎಸ್. ಪುಟ್ಟಣ್ಣನವರು 1915ರಲ್ಲಿ ಪ್ರಕಟಿಸಿದ 'ಮಾಡಿದ್ದುಣ್ಣೋ ಮಹಾರಾಯ' ಎಂಬ ಕಾದಂಬರಿ ಆದ್ಯ ಕಾದಂಬರಿಗಳಲ್ಲಿಯೇ ಶ್ರೇಷ್ಠವಾಗಿ,

1. ಶ್ರೀನಿವಾಸ ಹಾವನೂರ . ಹೊಸಗನ್ನಡದ ಅರುಣೋದಯ, ಪುಟ 544.

ಕನ್ನಡ ಸಾಮಾಜಿಕ ಕಾದಂಬರಿಗೆ ಒಂದು ಗಟ್ಟಿಮುಟ್ಟಾದ ಸ್ಥಾನವನ್ನು ಒದಗಿಸಿಕೊಟ್ಟಿತು. ಇದರಲ್ಲಿ ಕೆಲವು ದೋಷಗಳಿದ್ದರೂ ಜನಜೀವನವನ್ನು ವಾಸ್ತವವಾಗಿ ಚಿತ್ರಿಸಿದ ರೀತಿ ಮತ್ತು ಶಕ್ತಶೈಲಿಗಳಿಂದ ಇದು ಕನ್ನಡ ಕಾದಂಬರಿಯ ಇತಿಹಾಸದಲ್ಲಿ ಒಂದು ಚಿರಂತನ ಸ್ಥಾನವನ್ನು ಪಡೆಯಿತು.

ಮುಂಬಯಿಯಲ್ಲಿ ನೆಲೆಸಿದ್ದ ದಕ್ಷಿಣ ಕನ್ನಡದ ಅನೇಕರು ಹಲವು ವಿಧವಾಗಿ ಕನ್ನಡದ ಕಾರ್ಯವನ್ನು ಕೈಕೊಂಡರು. ಅವರಲ್ಲಿ ಕರ್ಕಿ ವೆಂಕಟರಮಣಶಾಸ್ತ್ರಿ ಸೂರಿ ಅವರು ತುಂಬ ಗಣ್ಯರು. ವೆಂಕಟರಮಣಶಾಸ್ತ್ರಿಗಳು ಅನೇಕ ಗ್ರಂಥಗಳನ್ನು ಬರೆದಿರುವರು. ಅವುಗಳಲ್ಲಿ 'ಇಗ್ಗಪ್ಪ ಹೆಗಡೆ ವಿವಾಹ ಪ್ರಸಂಗ' (1887) ಎಂಬ ಪ್ರಹಸನವು ತುಂಬ ಮಹತ್ತ್ವದ ಕೃತಿಯಾಗಿದೆ. ಅದೇ ಕಾಲಕ್ಕೆ ಶಿವರಾಮ ನಾರಣಪ್ಪ ಧಾರೇಶ್ವರ ಎಂಬುವರು 'ಕನ್ಯಾವಿಕ್ರಯ'ವೆಂಬ (1887) ನಾಟಕವನ್ನು ಬರೆದರು. ಹೊಸ ರೀತಿಯ ಪ್ರಹಸನಗಳನ್ನು ಮೊದಲು ಬರೆದವರಲ್ಲಿ ವೆಂಕಟರಮಣಶಾಸ್ತ್ರಿ ಮತ್ತು ಧಾರೇಶ್ವರ ಅವರು ಪ್ರಮುಖರಾಗಿರುವರು.

ಹೀಗೆ 19ನೆಯ ಶತಮಾನದ ಕೊನೆಯ ಭಾಗದಲ್ಲಿ ಮೈಸೂರು ಪ್ರಾಂತದಲ್ಲಿಯೂ, ಮಂಗಳೂರು ಜಿಲ್ಲೆಯಲ್ಲಿಯೂ, ಮಂಗಳೂರಿಗರಿಂದ ಮುಂಬಯಿಯಲ್ಲಿಯೂ ಹೊಸ ಸಾಹಿತ್ಯ ನಿರ್ಮಿತಿಯ ಕಾರ್ಯ ನಡೆದಿದ್ದಿತು. ಅವರಲ್ಲಿ ಹಳೆಯ ರೀತಿಯ ಗದ್ಯಪದ್ಯಗಳ ಕರ್ತೃಗಳೂ ಅನೇಕರಿದ್ದಾರೆ. ಕರಿಬಸವಶಾಸ್ತ್ರಿಗಳಂಥ ಹಳೆಯ ಪಂಡಿತರು ಗ್ರಂಥರಚನೆ ಮಾಡಿದರೂ ಹೊಸ ಗದ್ಯಸಾಹಿತ್ಯಕ್ಕೆ ಅವರೇನೂ ಕೊಡಲಿಲ್ಲ. 'ಶಬ್ದಾನುಶಾಸನ'ಕ್ಕೆ ವ್ಯಾಖ್ಯಾನ ಬರೆದ ಕುಂಡಲಗಿರಿ ಆಚಾರ್ಯರನ್ನೂ ಇಲ್ಲಿ ನೆನೆಯಬಹುದು. ಆದರೆ ಇಂಥ ಹಳೆಯ ಪಂಡಿತರಲ್ಲಿ ಹೊಸ ದೃಷ್ಟಿಕೋನವನ್ನು ಪಡೆದ, 'ರಾಮಾಶ್ವಮೇಧ'ದಂಥ ಕಾವ್ಯಗಳನ್ನಲ್ಲದೆ ಕೆಲವು ಯಕ್ಷಗಾನಗಳನ್ನು ಬರೆದು ಮುದ್ದಣನೆಂದು ಖ್ಯಾತನಾದ ನಂದಳಿಕೆ ಲಕ್ಷ್ಮೀನಾರಣಪ್ಪ (1870–1901) ಪ್ರಮುಖನು. ಆತ ಕೂಡ ಹೊಸ ಮಾದರಿಯ ಸಾಹಿತ್ಯಕ್ಕೆ ಒಲಿದಿದ್ದನೆಂಬುದಕ್ಕೆ ಆತನ ಅಪೂರ್ಣಕೃತಿ 'ಗೋದಾವರಿ' ಎಂಬ ಕಾದಂಬರಿ ಸಾಕ್ಷಿಯಾಗಿದೆ.

ಆ ಕಾಲಕ್ಕೆ ಅನೇಕ ವಾರ್ತಾಪತ್ರಿಕೆ, ಮಾಸಪತ್ರಿಕೆಗಳಲ್ಲದೆ ಗ್ರಂಥಪ್ರಕಾಶನದ ಅನುಕೂಲತೆಗಳೂ ಇದ್ದುದು ತುಂಬ ಮಹತ್ತ್ವದ ವಿಚಾರವಾಗಿದೆ. ಕನ್ನಡ ಕಾವ್ಯಗಳನ್ನು ಧಾರಾವಾಹಿಯಾಗಿ ಕೊಡಬೇಕೆನ್ನುವ ಉದ್ದೇಶದಿಂದ 'ಕರ್ನಾಟಕ ಕಾವ್ಯಮಂಜರಿ', 'ಕರ್ನಾಟಕ ಗ್ರಂಥಮಾಲಾ', 'ಕರ್ನಾಟಕ ಕಾವ್ಯಕಲಾನಿಧಿ'ಯಂಥ ಪತ್ರಿಕೆಗಳು ಆರಂಭವಾದುವು. ಮೈಸೂರಿನ ಕೆಲವು ಪದವೀಧರರು 'ಗ್ರ್ಯಾಜುಯೇಟ್ ಟ್ರೇಡಿಂಗ್ ಅಸೋಸಿಯೇಶನ್' ಸ್ಥಾಪಿಸಿದರು. ಅನಂತರ ಅವರು ಮುದ್ರಣಾಲಯವನ್ನೂ ಆರಂಭಿಸಿದರು. ಈ ಪತ್ರಿಕೆಗಳಲ್ಲಿ ಹಳೆಯ ಕಾವ್ಯಗಳಲ್ಲದೆ ಸಂಸ್ಕೃತ, ಇಂಗ್ಲೀಷ, ಬಂಗಾಳಿ ಕೃತಿಗಳ ಭಾಷಾಂತರಗಳೂ ಕ್ರಮೇಣ ಪ್ರಕಟವಾದುವು. ಮುದ್ದಣನ 'ರಾಮಾಶ್ವಮೇಧ' ಗದ್ಯಕಾವ್ಯವು 1894 ರಲ್ಲಿ 'ಕರ್ನಾಟಕ ಕಾವ್ಯಕಲಾನಿಧಿ'ಯಲ್ಲಿ ಪ್ರಕಟವಾದುದನ್ನು ಇಲ್ಲಿ ನೆನೆಯಬಹುದಾಗಿದೆ. 'ಕರ್ನಾಟಕ ಗ್ರಂಥಮಾಲೆ'ಯನ್ನು ಆರಂಭಿಸಿ, ಮುನ್ನಡೆಯಿಸಿದವರಲ್ಲಿ ಎಲ್. ಜಯರಾವ್ ಮತ್ತು ಎಂ. ಶಾಮರಾವ್ ಅವರು ಪ್ರಮುಖರು. ಶಾಮರಾಯರು ಮೈಸೂರು ಸಂಸ್ಥಾನದ ವಿದ್ಯಾ ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದರು. ಅವರು ಅನೇಕ ಕನ್ನಡ ಲೇಖಕರನ್ನು, ಸಂಸ್ಥೆಗಳನ್ನು ಎತ್ತಿಹಿಡಿದರು. ಗಳಗನಾಥರೂ ಕೂಡ ಇವರ ಔದಾರ್ಯ

ವನ್ನು ಹೃತ್ಪೂರ್ವಕವಾಗಿ ಸ್ಮರಿಸಿರುವರು.[1] ಶಾಮರಾಯರು ಸ್ವತಃ ಲೇಖಕರೂ ಆಗಿದ್ದರು. 'ಚಂಡಮಾರುತ', 'ಸಿಂದಬಾದದ ನಾವಿಕ', 'ನಿರ್ಭಾಗ್ಯ ಮುರಾದ' ಅವರ ಕೃತಿಗಳು. 'ಚಂಡ ಮಾರುತ'ವು 'ಕರ್ನಾಟಕ ಗ್ರಂಥಮಾಲೆ'ಯ ಪ್ರಥಮ ಪ್ರಕಟಣೆಯಾಗಿದೆ.

ಶ್ರೇಷ್ಠ ವಿದ್ವಾಂಸರಾದ ಎಂ. ವಿ. ರಾಮಾನುಜಯ್ಯಂಗಾರ್ ಮತ್ತು ಎಸ್. ಜಿ. ನರಸಿಂಹಾ ಚಾರ್ಯ ಅವರು 'ಕರ್ನಾಟಕ ಕಾವ್ಯಮಂಜರಿ'ಯ ಬೆನ್ನೆಲುಬಾಗಿದ್ದರು. ಅವರು ಅನೇಕ ಹಳಗನ್ನಡ ಕೃತಿಗಳನ್ನು 'ಕಾವ್ಯಮಂಜರಿ'ಯ ಮುಖಾಂತರ ಬೆಳಕಿಗೆ ತಂದರು. 'ಕರ್ನಾಟಕ ಕಾವ್ಯ ಮಂಜರಿ'ಯೇ ಮುಂದೆ 'ಕರ್ನಾಟಕ ಕಾವ್ಯಕಲಾನಿಧಿ' ಎಂಬ ಹೆಸರಿನಿಂದ ಬಹುಕಾಲ ಮುಂದು ವರಿಯಿತು.

ಇದಕ್ಕೆ ತೀರ ವಿರುದ್ಧವಾದ ವಾತಾವರಣವು ಮುಂಬಯಿ ಕರ್ನಾಟಕದಲ್ಲಿ ಕಂಡುಬರುತ್ತಿತ್ತು- ಸಾಹಿತ್ಯವಿರಲಿ, ಕನ್ನಡ ಭಾಷೆ ಕೂಡ ಅಲ್ಲಿ ಹಿಂದೆ ಬಿದ್ದುಬಿಟ್ಟಿತ್ತು. ಅಚ್ಚ ಕನ್ನಡಿಗರಾದವರು ಕೂಡ ಮರಾಠಿ ಮೋಹಕ್ಕೆ ಸಿಲುಕಿ, ಕನ್ನಡವನ್ನು ಮರೆತಿದ್ದರು. ಕೆಲವು ಸಲ ಅನಿವಾರ್ಯ ವಾಗಿಯಾದರೆ, ಹಲವು ಸಲ ಪ್ರೀತಿಯಿಂದ ಮಕ್ಕಳಿಗೆ ಮರಾಠಿಯನ್ನು ಕಲಿಸುವ ಜನಕ್ಕೆ ಉತ್ತರ ಕರ್ನಾಟಕದಲ್ಲಿ ಕೊರತೆಯಿರಲಿಲ್ಲ.

ಉತ್ತರ ಕರ್ನಾಟಕದಲ್ಲಿ ಈ ರೀತಿ ಮರಾಠಿ ಪ್ರಾಬಲ್ಯವುಂಟಾಗಲು ಕಾರಣಗಳೂ ಇದ್ದುವು. 17-18ನೆಯ ಶತಮಾನದಲ್ಲಿ ಉತ್ತರ ಕರ್ನಾಟಕವು ಪೇಶ್ವೆಯವರ ಆಳಿಕೆಗೆ ಒಳಪಟ್ಟಿತ್ತು. ಆಗ ರಾಜಭಾಷೆಯಾದ ಮರಾಠಿಗೆ ಸಹಜವಾಗಿಯೇ ಪ್ರಾಧಾನ್ಯವುಂಟಾಯಿತು. ಪೇಶ್ವೆಯವರ ಅಧಿಕಾರಿಗಳೆಲ್ಲ ಮರಾಠಿ ಜನರೇ ಆಗಿದ್ದರು. ಜನರು ಅನಿವಾರ್ಯವಾಗಿ ಮರಾಠಿಯನ್ನು ಕಲಿಯ ಬೇಕಾಯಿತು. ಮುಂದೆ 19ನೆಯ ಶತಮಾನದಲ್ಲಿ ಬ್ರಿಟಿಶರ ಅಧೀನಕ್ಕೆ ಒಳಪಟ್ಟಾಗ ಉತ್ತರ ಕರ್ನಾಟಕದ ಕನ್ನಡ ಜಿಲ್ಲೆಗಳು ಮುಂಬಯಿ ಪ್ರಾಂತಕ್ಕೆ ಸೇರಿ, ಮರಾಠಿಯ ಸಹವಾಸ ಹಾಗೆಯೆ ಮುಂದುವರಿಯಿತು. ರಾಜಭಾಷೆ ಇಂಗ್ಲೀಷಾದರೂ ಆ ಭಾಗದಲ್ಲಿ ಮರಾಠಿಯ ಪ್ರಾಬಲ್ಯ ಹಾಗೆಯೆ ಉಳಿದುಕೊಂಡಿತು. ಈ ಭಾಗದ ಭಾಷೆ ಮರಾಠಿಯಲ್ಲ, ಕನ್ನಡವೆಂದು ಆಂಗ್ಲ ಅಧಿ ಕಾರಿಗಳಿಗೆ ತಿಳಿಯಲಿಕ್ಕೆ ಎಷ್ಟೋ ದಶಕಗಳು ಬೇಕಾದುವು. ಅದು ತಿಳಿದ ಮೇಲೆಯೂ ಮರಾಠಿ ಯನ್ನು ತೆಗೆದುಹಾಕಿ ಕನ್ನಡಕ್ಕೆ ಸ್ಥಾನಕೊಡುವುದು ಅಷ್ಟು ಸುಲಭವಾಗಿರಲಿಲ್ಲ. ಏಕೆಂದರೆ ಆಗಲೇ ಮರಾಠಿ ಭಾಷೆಯ ವೃಕ್ಷ ಇಲ್ಲಿ ಬಹು ಆಳವಾಗಿ ಬೇರೂರಿ ಬಿಟ್ಟಿತ್ತು.

"ಉತ್ತರ ಕರ್ನಾಟಕವೆಂದು ಕರೆಯುತ್ತಿರುವ ಈ ಭಾಗವನ್ನು ಆಗ ದಕ್ಷಿಣ ಮಹಾರಾಷ್ಟ್ರ ವೆಂದು ಕರೆಯುತ್ತಿದ್ದರು. ಈ ಹೆಸರು ಮೊನ್ನೆ ಮೊನ್ನೆಯವರೆಗೂ ಉಳಿದುದು ಅನೇಕರ ಅವ ಗಾಹನೆಯಲ್ಲಿರಬಹುದು. ಈ ನಾಡಿನ ಜನತೆಯ ಭಾಷೆ ಕನ್ನಡವಾಗಿದ್ದರೂ ಮರಾಠಿಯ ಪ್ರಭಾವ ಎಲ್ಲೆಲ್ಲಿಯೂ ಕಂಡುಬರುತ್ತಿತ್ತು. ಇದು ಪೇಶ್ವೆಯವರ ಆಳಿಕೆಯ ಪ್ರಭಾವವೆಂದು ಬೇರೆ ಹೇಳಬೇಕಾಗಿಲ್ಲ. ಮಳೆ ನಿಂತರೂ ಮರದ ಹನಿ ನಿಲ್ಲದೆಂಬಂತೆ ಪೇಶ್ವೆಯವರ ಆಳ್ವಿಕೆ ನಿಂತು ಬ್ರಿಟಿಶರ ಅರಸೊತ್ತಿಗೆ ಆರಂಭವಾದರೂ ಮರಾಠಿಯ ಪ್ರಭಾವ ನಿಂತಿರಲಿಲ್ಲ. ಎಲ್ಲ ಅಧಿಕಾರಿಗಳು ಮಹಾರಾಷ್ಟ್ರದವರು. ಮಕ್ಕಳು ಶಾಲೆಯಲ್ಲಿ ಕಲಿಯುವ ಭಾಷೆ ಮರಾಠಿ, ಯುರೋಪಿಯನ್ ಅಧಿಕಾರಿಗಳೊಡನೆ ಅವರ ಕೈಕೆಳಗಿನ ಅಧಿಕಾರಿಗಳೂ ಮತ್ತಿತರರೂ ಮಾತ ನಾಡುತ್ತಿದ್ದ ಭಾಷೆ ಮರಾಠಿ. ಸರಕಾರೀ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳಿಸುತ್ತಿದ್ದ ಪಾಲಕರು

1. ಗಳಗನಾಥ : ಸದ್ಗುರು - ಪ್ರಭಾವ, ಪುಟ 25, 26.

ತಮ್ಮ ಮಕ್ಕಳು ಮರಾಠಿಯನ್ನೇ ಕಲಿಯಬೇಕೆಂದು ಅಪೇಕ್ಷಿಸುತ್ತಿದ್ದರು. ಕನ್ನಡಕ್ಕೆ ಸಾಹಿತ್ಯವಿದೆ, ಸಂಸ್ಕೃತಿಯಿದೆ, ಎಂಬುದರ ಅರಿವೇ ಆಗ ಯಾರಿಗೂ ಇರಲಿಲ್ಲ."[1]

" 'ಆರೇ ಅರಸು, ಕನ್ನಡ ಬಿರುಸು, ಹಿಂದಿ ಆಡಲಿಕ್ಕೆ ಬಲು ಸರಸು' ಎಂಬ ಗಾದೇ ಮಾತಾದರೂ ಇದೇ ಕಾಲದಲ್ಲಿ ಜನಿಸಿತು. ಪೂರ್ವಕರ್ಮಬಲದಿಂದ ಮರಾಠಿಗರು ಇನ್ನೂ ಕನ್ನಡದೇಶವನ್ನು ಆಳಿಯೇ ಆಳುತ್ತಿದ್ದರು; ತಮ್ಮ ದೇಹದಿಂದಲ್ಲ, ಆದರೆ ಛಾಯೆಯಿಂದ. ಇದಂತೂ ಹೆಚ್ಚು ಶೋಚನೀಯವು!"[2]

1898ನೆಯ ಇಸವಿಯ ಅಕ್ಟೋಬರ ತಿಂಗಳ 'ವಾಗ್ಭೂಷಣ'ದಲ್ಲಿ 'ಪೇಶ್ವೆಯರ ದಕ್ಷಿಣ' ಎಂಬ ಲೇಖನವೊಂದಿದೆ.

"ನಮ್ಮ ಈ ಮುಂಬಯಿ ಕರ್ನಾಟಕವು ವಸ್ತುತಃ ಕನ್ನಡಿಗರ ಪ್ರದೇಶವೇ. ಆದಾಗ್ಯೂ ಪೇಶ್ವೆಯರ ಆಳ್ವಿಕೆಯಲ್ಲಿ ಇದಕ್ಕೆ ದಕ್ಷಿಣ ಮಹಾರಾಷ್ಟ್ರವೆಂಬ ಹೆಸರು ಬಂದದ್ದಲ್ಲದೆ, ಆ ಹೆಸರಿಗೊಪ್ಪುವಂತೆ ವಿಕೃತ ಮರಾಠಿಯೆ (ಇಲ್ಲಿಯ) ನಿವಾಸಿಗಳ ಹಾಗೂ ದರ್ಬಾರದ ಭಾಷೆಯಾಗಿದ್ದರಿಂದ ಕನ್ನಡವು ನಿರ್ನಾಮವಾಗುವ ಪ್ರಸಂಗ ಬಂದಿತ್ತು" ಎಂದು ಜ್ಞಾಪಿಸಿಕೊಳ್ಳಲಾಗಿದೆ. "ಆದರೆ ಮುಂದೆ ಬ್ರಿಟಿಷ ಆಡಳಿತದಲ್ಲಿ ದರ್ಬಾರದ ಪತ್ರವ್ಯವಹಾರವು ಕನ್ನಡದಲ್ಲಿ ನಡಿಯಬೇಕೆಂದು ಗೊತ್ತಾದ್ದರಿಂದಲೂ, ಸಾಲೆಗಳಲ್ಲಿ ಕನ್ನಡವು ಕಲಿಸಲ್ಪಡಲಾರಂಭಿಸಿದ್ದರಿಂದಲೂ ಕನ್ನಡದ ಪುನರುಜ್ಜೀವನವಾಯಿತು"[3] ಎಂದು ಸಮಾಧಾನದ ನಿಟ್ಟುಸಿರುಬಿಡಲಾಗಿದೆ.

"ಕೋರ್ಟು ಕಚೇರಿಗಳಲ್ಲಿ, ವಿದ್ವನ್ಮಾನ್ಯ ಸಭೆ–ಸಮಾಜಗಳಲ್ಲಿ, ಕನ್ನಡ ತಿರಸ್ಕೃತವಾಗುತ್ತಿತ್ತು. ಇಷ್ಟೇ ಅಲ್ಲ, ಕೆಲಮಟ್ಟಿಗೆ ಬಹಿಷ್ಕೃತವೂ ಆಗುತ್ತಿತ್ತು. ಕನ್ನಡಕ್ಕಿಂತ ಹೆಚ್ಚಿನ ಸಂಖ್ಯೆಯ ಮರಾಟೀ ಶಾಲೆಗಳೇ ಧಾರವಾಡದಂಥ ಕನ್ನಡದ ಗಂಡುಮೆಟ್ಟಿನಲ್ಲೂ ಇದ್ದವು. . . . 1825–50ರ ಕಾಲದಲ್ಲಿ, ಧಾರವಾಡದ ಪ್ರಾಂತದಲ್ಲಿ 116 ಕನ್ನಡ ಶಾಲೆಗಳಿದ್ದರೆ, 146 ಮರಾಟೀ ಶಾಲೆಗಳಿದ್ದವು. 1860ರಲ್ಲಿ ಧಾರವಾಡ ಪ್ರಾಂತದ ವಿದ್ಯಾಧಿಕಾರಿಯಾಗಿದ್ದ ವಿಲಿಯಂ ಅಲೆನ್ ರಸೆಲ್‌ರು ತಮ್ಮ ವಿಭಾಗದಲ್ಲಿ 'ಒಂದೂ ಸರಕಾರಿ ಕನ್ನಡ ಶಾಲೆ ಇಲ್ಲ' ಎಂದು ವರದಿ ಮಾಡಿದ್ದರು. ಅಂದರೆ ಆ ಸರಕಾರೀ ಶಾಲೆಗಳೆಲ್ಲ ಮರಾಟೀ ಶಾಲೆಗಳೇ ಆಗಿದ್ದವು. ಇದ್ದ ಬಿದ್ದ ಕನ್ನಡ ಶಾಲೆಗಳು ಖಾಸಗೀ 'ಅಯ್ಯನವರ ಶಾಲೆಗಳು,' ಹೀಗಾಗಿ ಅಚ್ಚ ಕನ್ನಡದ ಅಭಿಮಾನವಿದ್ದ ಎಷ್ಟೋ ಮನೆತನದವರು ಕೂಡ ತಮ್ಮ ಮಕ್ಕಳನ್ನು ಮರಾಟೀ ಶಾಲೆಗೇ ಕಳಿಸುತ್ತಿದ್ದರು. ಹೆಣ್ಣು ಹುಡಿಗೆಯರಂತೂ ವಿದ್ಯಾವತಿಯರೆನಿಸಿಕೊಳ್ಳಲು ಮರಾಠಿಯನ್ನೇ ಕಲಿಯಬೇಕಾಗುತ್ತಿತ್ತು."[4]

ಹೀಗಿರುವಾಗ 19ನೆಯ ಶತಮಾನದ ಉತ್ತರಾರ್ಧದ ಕಾಲದಲ್ಲಿ ಈ ಭಾಗದಲ್ಲಿ ಕನ್ನಡವನ್ನು ಪುನಃ ಸ್ಥಾಪಿಸಲು ಅನೇಕ ಪ್ರಯತ್ನಗಳು ನಡೆದುವು. ಈ ಪ್ರಯತ್ನವನ್ನು ಅತ್ಯಂತ ಕಳಕಳಿಯಿಂದ, ಆಸ್ಥೆಯಿಂದ ಮಾಡಿದವರಲ್ಲಿ ಆಂಗ್ಲ ಅಧಿಕಾರಿಗಳಾದ **ವಿಲಿಯಂ ಅಲೆನ್ ರಸೆಲ್**

---

1. ಆರ್. ಸಿ. ಹಿರೇಮಠ, ಜೀವನ ಶಿಕ್ಷಣ, ವಿಶೇಷ ಸಂಚಿಕೆ 1957, ಪುಟ 28.
2. ದ. ರಾ. ಬೇಂದ್ರೆ : 'ಶಾಂತಕವಿಗಳೂ ಅವರ ಕಾಲವೂ'; ಸಾಹಿತ್ಯ ಸಂಶೋಧನ, ಪುಟ 172–73.
3. ವಾಗ್ಭೂಷಣ, ಅಕ್ಟೋಬರ, 1898.
4. ವೆಂಕಟೇಶ ಸಾಂಗಲಿ : ಹೊಸಗನ್ನಡದ ಪುಣ್ಯಪುರುಷರು, ಮುನ್ನುಡಿ, ಪುಟ 5

ಅವರ ಹೆಸರು ಅಗ್ರಗಣ್ಯವಾಗಿದೆ. "ಉತ್ತರ ಕರ್ನಾಟಕದ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಪುನರುಜ್ಜೀವನವನ್ನು ಎಸಗಿದ ಮಹಾಪುರುಷರಲ್ಲಿ ರಸೆಲ್ ಸಾಹೇಬರಿಗೆ ಅಗ್ರಸ್ಥಾನ ಸಲ್ಲುತ್ತದೆ."[1] ಎಂದು ಡಾ. ಆರ್. ಸಿ. ಹಿರೇಮಠ ಅವರು ಹೇಳಿರುವಲ್ಲಿ ಅತಿಶಯೋಕ್ತಿಯಿಲ್ಲವೆಂಬುದು, ರಸೆಲ್‌ರ ಕಾರ್ಯವನ್ನು ಗಮನಿಸಿದ ಯಾರಿಗೂ ಮನದಟ್ಟಾಗುತ್ತದೆ. ಅವರು 1864ರಲ್ಲಿ ಧಾರವಾಡದ ವಿಭಾಗದ ವಿದ್ಯಾಧಿಕಾರಿಯಾಗಿ ಬಂದು ಸುಮಾರು 20 ವರ್ಷ ಅದೇ ಹುದ್ದೆಯಲ್ಲಿ ಮುಂದು ವರಿದರು. ಈ ಭಾಗದ ಜನರ ಮಾತೃಭಾಷೆ ಕನ್ನಡವೆಂದೂ ಮರಾಠಿಯಲ್ಲವೆಂದೂ, ಇಲ್ಲಿ ಕನ್ನಡ ಶಾಲೆಗಳನ್ನೇ ಹೆಚ್ಚಾಗಿ ತೆಗೆದು ಕನ್ನಡ ಶಿಕ್ಷಕರನ್ನು ನೇಮಿಸಬೇಕೆಂದೂ ಅವರು ಮುಂಬಯಿ ಸರಕಾರಕ್ಕೆ ಶಿಫಾರಸು ಮಾಡಿ, ಅದನ್ನು ಅನುಷ್ಠಾನಕ್ಕೆ ತರಲು ಹೃತ್ಪೂರ್ವಕವಾಗಿ ಪ್ರಯತ್ನಿಸಿದರು. ಅವರ ಕನ್ನಡ ಸೇವೆ ಬಹುಮುಖವಾದುದು. ಅವರೂ ಅವರ ಸಹಾಯಕ ಅಧಿಕಾರಿಯಾದ ವೆಂಕಟ ರಂಗೋ ಕಟ್ಟಿ ಅವರೂ ಪ್ರಯತ್ನಪಟ್ಟು ಧಾರವಾಡದಲ್ಲಿ ಕನ್ನಡ ಅಚ್ಚುಕೂಟಕ್ಕಾಗಿ ಮೊಳೆಗಳನ್ನು ಸಿದ್ಧಪಡಿಸಿದರು. ಅದಕ್ಕಾಗಿ ರಸೆಲ್ಲರು ಧನ ಸಹಾಯವನ್ನು ಕೂಡ ಮಾಡಿದರೆಂಬುದು ಅವರ ಕಳಕಳಿಯ ದ್ಯೋತಕವಾಗಿದೆ. ಅವರ ಮಾರ್ಗದರ್ಶನದಲ್ಲಿ ವೆಂಕಟ ರಂಗೋ ಕಟ್ಟಿ ಮತ್ತು ಗಂಗಾಧರ ಮಡಿವಾಳೇಶ್ವರ ತುರಮರಿ ಅವರು ಕನ್ನಡ ಪಠ್ಯಪುಸ್ತಕಗಳನ್ನು ತಯಾರಿಸುವ ಕಾರ್ಯದಲ್ಲಿ ತೊಡಗಿದರು. ಆರಂಭ ಕಾಲದಲ್ಲಿ ಪ್ರಾಥಮಿಕ ಕ್ರಮಿಕ ಪುಸ್ತಕಗಳು ಮರಾಠಿಯಿಂದ ಭಾಷಾಂತರಗೊಳ್ಳಬೇಕಾದರೂ, ಮುಂದೆ ಕೆಲಕೆಲವು ಮೂಲ ಕನ್ನಡ ಪಾಠಗಳೂ ಅವುಗಳಲ್ಲಿ ಸಮಾವೇಶಗೊಳ್ಳತೊಡಗಿದುವು.

ಧಾರವಾಡದಲ್ಲಿ 1956ರಲ್ಲಿ ಸ್ಥಾಪನೆಯಾದ ನಾರ್ಮಲ್ ಸ್ಕೂಲು ಕನ್ನಡ ಶಿಕ್ಷಕರನ್ನು ತರಬೇತುಗೊಳಿಸುವ ಉದ್ದೇಶವನ್ನಿಟ್ಟುಕೊಂಡಿತ್ತು. ಚನ್ನಬಸಪ್ಪ, ವೆಂಕಟ ರಂಗೋ ಕಟ್ಟಿ, ಹುಯಿಲಗೋಳ ಭುಜಂಗರಾಯ, ಶಾಂತವೀರ ರಾಚಿದೇವ ಕಿತ್ತೂರ ಅವರಂಥ ಶಿಕ್ಷಕರು ಈ ಟ್ರೇನಿಂಗ ಸ್ಕೂಲಿನಲ್ಲಿ ಕನ್ನಡವನ್ನು ಬೆಳೆಸಿದ ಮಹನೀಯರು. ಮುಂದೆ 1875ರಲ್ಲಿ ಇದುವೆ ಟ್ರೇನಿಂಗ ಕಾಲೇಜಾಗಿ ಬೆಳೆಯಿತು. ಇದಕ್ಕೂ ರಸೆಲ್ ಸಾಹೇಬರ ಸಹಾಯವೇ ಕಾರಣವಾಯಿತು. ಆ ಕಾಲದ ಕನ್ನಡ ಲೇಖಕರನ್ನು ಸೃಷ್ಟಿಮಾಡಿದ ಶ್ರೇಯಸ್ಸಿನ ಬಹುಭಾಗವು ಈ ಟ್ರೇನಿಂಗ ಕಾಲೇಜಿಗೇ ಮೀಸಲಾಯಿತು. ಕಟ್ಟಿ, ತುರಮರಿ ಮೊದಲಾದ ಅನೇಕರು ಕನ್ನಡದಲ್ಲಿ ಬರೆಯ ತೊಡಗಲು ರಸೆಲ್ ಮತ್ತು ಚನ್ನಬಸಪ್ಪ ಅವರ ಪ್ರೇರಣೆ-ಪ್ರೋತ್ಸಾಹಗಳೇ ಕಾರಣವಾದುವು.

"ಉತ್ತರ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಧಾರವಾಡದ ಗಂಡು ಮಕ್ಕಳ ಸರಕಾರೀ ಟ್ರೇನಿಂಗ ಕಾಲೇಜು ಬಹು ಮಹತ್ವದ ಪಾತ್ರವನ್ನಾಡಿದೆ. ಸುಮಾರು ಒಂದು ಒಂದೂವರೆ ಶತಮಾನದ ಹಿಂದೆ ಉತ್ತರ ಕರ್ನಾಟಕದ ಈ ಭಾಗದಲ್ಲಿ ಮರಾಠಿಯ ಪ್ರಭಾವ ವಿಶೇಷವಾಗಿದ್ದಿತು. ....ಕನ್ನಡಿಗರ ಸುದೈವದಿಂದ, ರಸೆಲ್ಲರವರ ನಿಷ್ಪಕ್ಷಪಾತ ದೃಷ್ಟಿ. ಡೆಪ್ಯೂಟಿ ಚನ್ನಬಸಪ್ಪನವರ ಕನ್ನಡದ ಅಭಿಮಾನ ಇವು ಒಂದುಗೂಡಿ ಕನ್ನಡದ ನಂದಾದೀವಿಗೆ ಮತ್ತೆ ಬೆಳಗುವಂತಾಯಿತು."[2]

ಹೀಗೆ ರಸೆಲ್ ಸಾಹೇಬರು ಧಾರವಾಡಕ್ಕೆ ವಿದ್ಯಾಧಿಕಾರಿಗಳಾಗಿ ಬಂದುದು ಕನ್ನಡ ನಾಡಿನ ಭಾಗ್ಯವೆಂದೇ ಹೇಳಬೇಕು. ಮುಂಬಯಿಯ 'ಇಂಡಿಯನ್ ಎಜ್ಯುಕೇಶನ್' ಎಂಬ ನಿಯತ

1. ಜೀವನ ಶಿಕ್ಷಣ— ವಿಶೇಷ ಸಂಚಿಕೆ 1957, ಪುಟ 28
2. ಸಿ. ಚ. ನಂದಿಮಠ : ಅದೇ, ಪುಟ 2

ಕಾಲಿಕೆಯಲ್ಲಿ 1912ನೆಯ ವರ್ಷದ ಅಕ್ಟೋಬರ ಸಂಚಿಕೆಯಲ್ಲಿ ರಸೆಲ್‌ರ ಬಗ್ಗೆ ಉಕ್ತವಾದ ಮಾತುಗಳು ಮನನೀಯವಾಗಿವೆ.

"At the time Mr. Russell took charge of the (Dharwar) Division, a veritable chaos prevailed in it. The language of the people was Kanarese, but Marathi was taught in schools in preference to the mother tongue.... Mr. Russell put his foot down and said that the language of the people must be taught to the people"[1]..... ಅವರ ಕನ್ನಡದ ಕಳಕಳಿ ಅನುಪಮವಾದುದು.

ಈ ಮಹನೀಯರ ಬಗ್ಗೆ ಕೃಷ್ಣಕುಮಾರ ಕಲ್ಲೂರ ಅವರು "ರಸೆಲ್ಲರಿಗೂ ಕನ್ನಡಕ್ಕೆ ಜೀವದಾನ ಮಾಡಿದ ಪುಣ್ಯವಿದೆ. ತಮ್ಮ ಅಧಿಕಾರಾವಧಿಯಲ್ಲಿ ಧಾರವಾಡದ ಪ್ರಾಂತದಲ್ಲಿ ಸುತ್ತಾಡಿ, ಜನರ ಮಾತೊಂದು, ಅವರು ಕಲಿಯುತ್ತಿರುವದಿನ್ನೊಂದು (ಮರಾಠಿ) ಎಂಬುದನ್ನು ಕಣ್ಗಂಡು, ಅದು ಅನೈಸರ್ಗಿಕ, ಅಸಾಂಸ್ಕೃತಿಕ ಎಂದು ಮನಗಂಡು, ಅವರು ಸರಕಾರದೊಂದಿಗೂ ಅದರ ಸೂತ್ರಧಾರಿಗಳಾದ ಅನೇಕ ಪ್ರಭಾವೀ ಮರಾಟಿಗರೊಂದಿಗೂ ಹೊಡೆದಾಡಿ, ಹೋರಾಡಿ, ಸರಕಾರೀ ಶಾಲೆಗಳಲ್ಲಿ ಕನ್ನಡಕ್ಕೆ ಸ್ಥಾನಮಾನವನ್ನು ಕಲ್ಪಿಸಿ, ಮರಾಟಿಯನ್ನು ಹಿಮ್ಮೆಟ್ಟಿಸಿದ ಹಿರಿಮೆ ಅವರದು. ಡೆಪ್ಯೂಟಿ ಚನ್ನಬಸಪ್ಪ, ತುರಮರಿ ಮೊದಲಾದವರನ್ನು ಅಭಿಮಾನದಿಂದ ಮುಂದೆ ತಂದವರು ಅವರೇ! ನೀಲಾಂಜನಕ್ಕಿದ್ದ ಮಹತ್ವ ಆರತಿಯ ತಟ್ಟೆಗೂ ಇದ್ದರೆ, ರಸೆಲ್ಲರೇ ಕನ್ನಡದ ಆರತಿಯ ತಟ್ಟೆ"[2] ಎಂದು ಉದ್ಗರಿಸಿರುವರು.

ಅವರು ಆಗಿನ ಅನೇಕ ತರುಣ ಪದವೀಧರರನ್ನು ಕನ್ನಡದ ಕೆಲಸಕ್ಕಾಗಿ ಪ್ರೋತ್ಸಾಹಿಸಿದ ರೆಂಬುದು ಅವರ ಕಳಕಳಿಯ ಆಳವನ್ನು ಸೂಚಿಸುತ್ತದೆ. ಹೀಗೆ ರಸೆಲ್ ಅವರಿಂದ ಪ್ರೇರಣೆ ಪಡೆದವರಲ್ಲಿ ರಾ. ಹ. ದೇಶಪಾಂಡೆ, ಪ್ರಿನ್ಸಿಪಾಲ ಭುಜಂಗರಾಯರು, ರೊದ್ದ ಶ್ರೀನಿವಾಸ ರಾಯರು ಮೊದಲಾದವರು ಗಣ್ಯರು.

ರಸೆಲ್‌ರಿಂದ ಪ್ರೋತ್ಸಾಹಿತರಾದ ಅನೇಕರು ನಿಜವಾಗಿಯೂ ಕನ್ನಡದ ಕೆಲಸಕ್ಕಾಗಿ ನಿಸ್ವಾರ್ಥಸೇವೆ ಸಲ್ಲಿಸಿದರು. ಇಂಥ ಹನ್ನೆರಡು ಜನರ ಜೀವನಚರಿತ್ರೆ ಹಾಗೂ ಅವರ ಕಾರ್ಯಕ್ಷೇತ್ರಗಳ ಪರಿಚಯವನ್ನು ಮಾಡಿಕೊಡುವ ತಮ್ಮದೊಂದು ಗ್ರಂಥಕ್ಕೆ ಶ್ರೀ ವೆಂಕಟೇಶ ಸಾಂಗಲಿಯವರು 'ಹೊಸಗನ್ನಡದ ಪುಣ್ಯಪುರುಷರು' ಎಂದು ಕರೆದಿರುವುದು ಸಾರ್ಥಕವಾಗಿದೆ. ಆ ಗ್ರಂಥದಲ್ಲಿ ಸೇರಲು ಕಿತ್ತೂರ, ಗಳಗನಾಥರಂಥ ಅರ್ಹರಾದ ಇನ್ನೂ ಕೆಲವು ಹೆಸರುಗಳೂ ಇವೆಯೆಂಬುದನ್ನು ಮರೆಯಬಾರದು.

ಇಂಥವರಲ್ಲಿ **ಧಾರವಾಡ ಚನ್ನಬಸಪ್ಪ**ನವರ (1824–1881) ಹೆಸರು ಅಗ್ರಗಣ್ಯ ವಾಗಿದೆ. ಇಂಜನಿಯರಿಂಗ ಕಲಿತು ವಿದ್ಯಾಖಾತೆಯನ್ನು ಸೇರಿ, ಡೆಪ್ಯೂಟಿ ಇನ್ಸ್‌ಪೆಕ್ಟರರಾಗಿ ಇಪ್ಪತ್ತು ವರ್ಷ ಸೇವೆ ಸಲ್ಲಿಸಿದ ಇವರು ಕನ್ನಡ ಜನಕ್ಕೆಲ್ಲ ಡೆಪ್ಯೂಟಿ ಚನ್ನಬಸಪ್ಪನವರೆಂದೇ ಪರಿಚಿತರಾದರು. ಕೆಲಕಾಲ ಬೆಳಗಾವಿಯ ನಾರ್ಮಲ್ ಸ್ಕೂಲಿನಲ್ಲಿ ಅಧ್ಯಾಪಕರಾಗಿ, ಅನಂತರ

1. *Indian Education*, 11– 3, page 130.
2. ವೆಂಕಟೇಶ ಸಾಂಗಲಿ : ಹೊಸಗನ್ನಡದ ಪುಣ್ಯಪುರುಷರು, ಮುನ್ನುಡಿ, ಪುಟ 9

ಮುಖ್ಯಾಧ್ಯಾಪಕರಾಗಿ ಕೆಲಸ ಮಾಡಿದರು. 1861ರಲ್ಲಿ ಡೆಪ್ಯೂಟಿ ಇನ್ಸ್‌ಪೆಕ್ಟರ ಹುದ್ದೆಯನ್ನು ಸ್ವೀಕರಿಸಿ ಎರಡು ದಶಕಗಳ ಕಾಲ ಆ ಹುದ್ದೆಯಲ್ಲಿ ಮುಂದುವರಿದರು. ಆಗ ಅವರು ಕನ್ನಡದ ಉದ್ಧಾರಕ್ಕಾಗಿ ಮಾಡಿದ ಕಾರ್ಯಗಳು ಅವರ ನಿಷ್ಠೆ ಮತ್ತು ಕೆಚ್ಚನ್ನು ತೋರಿಸುತ್ತವೆ. ಚೆನ್ನಬಸಪ್ಪನವರು ಪ್ರಾಥಮಿಕ ಶಾಲೆಗಳ ಸ್ಥಾಪನೆ, ಕನ್ನಡದಲ್ಲಿ ಶಿಕ್ಷಕರ ತರಬೇತಿ, ಪಠ್ಯಪುಸ್ತಕ ರಚನೆ, ಮುದ್ರಣ ಮುಂತಾದ ಕನ್ನಡ ಕಾರ್ಯಸೌಧದ ಭೂಮಿಪೂಜೆಯನ್ನು ಮಾಡಿದ ಆಚಾರ್ಯ ಪುರುಷರು. ಮುಖ್ಯತಃ ಕನ್ನಡವೆಂದರೆ ಸಂಪೂರ್ಣ ಅಸಡ್ಡೆಯಿರುವ ಕಾಲದಲ್ಲಿ ತಮ್ಮ ಸಂಪರ್ಕಕ್ಕೆ ಬಂದವರೆಲ್ಲರಿಗೂ ಕನ್ನಡದ ದೀಕ್ಷೆಯನ್ನು ಕೊಟ್ಟದ್ದು ಅವರ ಹೆಚ್ಚುಗಾರಿಕೆಯಾಗಿದೆ. ಚೆನ್ನಬಸಪ್ಪನವರು ಶೇಕ್ಸ್‌ಪಿಯರ್‌ನ 'ಮ್ಯಾಕ್‌ಬೆಥ್'ವನ್ನು ಕನ್ನಡಕ್ಕೆ ಅನುವಾದಿಸಿದ ಮೊದಲಿಗರು. ಅವರ 'ನಗದವರನ್ನು ನಗಿಸುವ ಕಥೆ' ಕೂಡ ಶೇಕ್ಸ್‌ಪಿಯರನ ಅನುವಾದವೇ ಆಗಿದೆ. ಆದರೆ ಸ್ವತಃ ಬರೆದುದಕ್ಕಿಂತ ಹೆಚ್ಚಾಗಿ ಅವರು ಉಳಿದವರಿಂದ ಬರೆಯಿಸಿದರು. ಅವರು ಇತರರಿಗೆ ಬರೆಯಲು ಕೊಟ್ಟ ಪ್ರೋತ್ಸಾಹ ಮತ್ತು ಮಾರ್ಗದರ್ಶನ ಹೆಚ್ಚಿನವು. ಅವರು ಬೆಳಗಾವಿಯಿಂದ 1867ರಲ್ಲಿ ಹೊರಡಿಸಿದ 'ಮಠ ಪತ್ರಿಕೆ'ಯೇ ಮುಂದೆ 'ಶಾಲಾಪತ್ರಕ'ವೆಂದು ಖ್ಯಾತವಾಯಿತು. ಈ ಮಾಸಪತ್ರಿಕೆಯು ಇಂದಿಗೂ 'ಜೀವನ ಶಿಕ್ಷಣ'ವೆಂಬ ಹೆಸರಿನಿಂದ ನಡೆದುಕೊಂಡು ಬಂದಿದೆ.

ಚೆನ್ನಬಸಪ್ಪನವರ ಪ್ರಯತ್ನದಿಂದ ಬೆಳಗಾವಿಯಲ್ಲಿ ಲಿಂಗಾಯತ ವಿದ್ಯಾರ್ಥಿಗಳಿಗಾಗಿ ಫ್ರೀ ಬೋರ್ಡಿಂಗಿನ ಸ್ಥಾಪನೆಯಾಯಿತು. ಅದಕ್ಕೆ ಚಿತ್ರದುರ್ಗ ಮಠದ ಸ್ವಾಮಿಗಳು ಪ್ರತಿ ತಿಂಗಳೂ ಮೂರು ನೂರು ರೂಪಾಯಿ ಕೊಡಲಿಕ್ಕೆ ಮುಂದಾದುದೂ ಕೂಡ ಚೆನ್ನಬಸಪ್ಪನವರ ಪ್ರಯತ್ನದಿಂದಲೇ ಎಂಬುದು ಗಮನಾರ್ಹವಾಗಿದೆ. ಶ್ರೀ ಶಿಂತ್ರಿ ಬಸಪ್ಪನವರು ಚೆನ್ನಬಸಪ್ಪನವರು ಕನ್ನಡ ಭಾಷೆಗೆ ಸಲ್ಲಿಸಿದ ಕಾಣಿಕೆಯನ್ನು ನೆನೆಯುತ್ತ "ಸುತ್ತಲೂ ಆವರಿಸಿದ್ದ ನಿರುತ್ತೇಜಕ ಪರಿಸ್ಥಿತಿಯನ್ನು, ಕನ್ನಡಕ್ಕೆ ಪ್ರಾಪ್ತವಾದ ಗಂಡಾಂತರವನ್ನು ಮನದಂದು ಹೆಚ್ಚೆಚ್ಚು ಕನ್ನಡ ಶಾಲೆಗಳನ್ನು ತೆರೆದು ಶಿಕ್ಷಣವೆಲ್ಲ ಕನ್ನಡದಲ್ಲಿಯೇ ಸಾಗಬೇಕೆಂಬ ನಿಯಮವನ್ನು ಮಾಡಿದರು. ಕನ್ನಡವು ಬರುತ್ತಿದ್ದರೂ ಸಹ ಮರಾಠಿಯಲ್ಲಿ ಮಾತನಾಡಲು ಹವಣಿಸುವವರನ್ನು ಕೂಡಲೇ ನಿರ್ಬಂಧಿಸಿ ಕನ್ನಡದಲ್ಲಿ ಮಾತನಾಡಲು ಹೇಳುತ್ತಿದ್ದರು. ಆಗಿನ ಕನ್ನಡ ಶಿಕ್ಷಕರಿಗೆ ಮೋಡಿ ಲಿಪಿಯಲ್ಲಿ ಸಹಿಮಾಡುವ ಚಟವಿತ್ತು.[1] ಅವರಿಗೆಲ್ಲ ಕನ್ನಡದಲ್ಲಿಯೇ ಸಹಿಮಾಡಬೇಕೆಂದು ಕಟ್ಟಾಜ್ಞೆಯನ್ನು ಕೊಟ್ಟರು. ಕನ್ನಡ ಶಾಲೆಗಳಲ್ಲಿ ಅಂಕಿ ಮಗ್ಗಿಗಳನ್ನು ಆಗ ಮರಾಠಿಯಲ್ಲಿ ಕಲಿಸುತ್ತಿದ್ದರು. ಅವುಗಳನ್ನು ಕನ್ನಡದಲ್ಲಿಯೇ ಕಲಿಸಬೇಕೆಂಬ ಒತ್ತಾಯವನ್ನು ಹೇರಿದರು. ಜನರಲ್ಲಿ ಕನ್ನಡದ ಬಗ್ಗೆ ಪ್ರೇಮವೂ ಆಸಕ್ತಿಯೂ ಹುಟ್ಟುವಂತೆ ಮಾಡಿದರು. ಕನ್ನಡ ಶಾಲೆಗಳಲ್ಲಿ ಪಠ್ಯಪುಸ್ತಕಗಳ ಕೊರತೆಯಿತ್ತು. ಅದನ್ನು ನೀಗುವದಕ್ಕಾಗಿ ದೊಡ್ಡ ದೊಡ್ಡ ಪಂಡಿತರನ್ನೂ ಬರಹಗಾರರನ್ನು ಕಲೆಹಾಕಿ ಅವರ ಕಡೆಯಿಂದ ಪಠ್ಯ ಹಾಗೂ ಪಠ್ಯೇತರ ಹೊತ್ತಿಗೆಗಳನ್ನು ಬರೆಯಿಸಿದರು. ತಾವೂ ಗಣಿತವನ್ನು ಕುರಿತು ಎರಡು ಪಠ್ಯಪುಸ್ತಕಗಳನ್ನು ಬರೆದಿದ್ದಾರೆ."[2] ಅಷ್ಟೇ ಅಲ್ಲದೆ

1. ಗಳಗನಾಥರೂ ಈ ಚಟದಿಂದ ಮುಕ್ತರಾಗಿರಲಿಲ್ಲ. ಟ್ರೇನಿಂಗ ಕಾಲೇಜಿನಲ್ಲಿ ಅವರು ಅಧ್ಯಾಪಕರಾಗಿದ್ದಾಗ, ಪಗಾರ ತೆಗೆದುಕೊಂಡ ಬಗ್ಗೆ ಮೋಡೀ ಲಿಪಿಯಲ್ಲಿಯೇ ಸಹಿಮಾಡಿರುವರು. ಬೇರೆಡೆಗಳಲ್ಲಿ ಮಾತ್ರ ಅವರು ಕನ್ನಡ ಸಹಿ ಮಾಡಿದ್ದು ಕಂಡುಬರುತ್ತದೆ.
2. ಜೀವನಶಿಕ್ಷಣ–ವಿಶೇಷ ಸಂಚಿಕೆ, 1957, ಪುಟ 27

ಶಾಲೆಯ ಕಾಗದ ಪತ್ರಗಳನ್ನೆಲ್ಲ ಕನ್ನಡದಲ್ಲಿಯೇ ಇಡಬೇಕೆಂದು ಅವರು ಲೇಖೀ ಆಜ್ಞೆಯನ್ನು ಹೊರಡಿಸಿದ್ದಾರೆಂಬುದೂ ಗಮನಾರ್ಹವಾಗಿದೆ. ಚನ್ನಬಸಪ್ಪನವರ ಕನ್ನಡಾಭಿಮಾನವನ್ನು ಗುರುತಿಸಲು ಅಂಥ ಒಂದು ನೋಟೀಸು ಸಹಾಯಕವಾಗಿದೆ.

"ನೋಟೀಸು: ಗೋಕಾಂವಿ, ಸವದತ್ತಿ ಮತ್ತು ಸಂಪಗಾಂವಿ ತಾಲೂಕಿನಲ್ಲಿರುವ ಯಾವತ್ತು ಮಾಸ್ತರರಿಗೆ ತಿಳಿಸುವದೇನೆಂದರೆ ನೀವು ನಿಮ್ಮ ದಪ್ತರಗಳನ್ನು ಕನ್ನಡಿನಲ್ಲಿ ಇಡ್ರಿ. ಯಿತ್ತ ಕಡೆಯಿಂದಾಗಲಿ ಅಥವಾ ಮತ್ಯಾವ ಕಡೆಯಿಂದಾಗಲಿ ನಿಮಗೆ ಆರೆ ಬರದು ಬಂದರು ಸಹಾ ನೀವು ಕನ್ನಡಿನಲ್ಲಿ ಉತ್ತರ ಕೊಡುತ್ತ ಬರ್ರಿ. ಯಿನ್ನು ಮೇಲೆ ನಂಮ ಕಡಿಗೆ ಬರುವ ಕಾಗದಗಳು ಆರೇದಲ್ಲಿ ಬರಬಾರದು. ತಾರೀಖು 16 ಸಪಟಂಬರ 1868, ಮು. ಬೆಳಗಾಂವಿ"[1]

ಅದರಂತೆ 1868ರಲ್ಲಿ ಬೆಳಗಾವಿಯ ಟ್ರೇನಿಂಗ ಶಾಲೆಗೆ ಹಾಜರಾದ ಬಗ್ಗೆ ಪ್ರಿನ್ಸಿಪಾಲರ ಮುಖಾಂತರ ಡೆಪ್ಯೂಟಿ ಇನ್‌ಸ್ಪೆಕ್ಟರರಿಗೆ ರಿಪೋರ್ಟ ಮಾಡಿಕೊಂಡ ವಿದ್ಯಾರ್ಥಿಯೊಬ್ಬ ಮರಾಠಿಯಲ್ಲಿ ಸಹಿ ಮಾಡಿದ್ದನ್ನು ಗಮನಿಸಿದ ಚನ್ನಬಸಪ್ಪನವರು ಕೂಡಲೇ ಪ್ರಿನ್ಸಿಪಾಲರಿಗೆ ಪತ್ರ ಬರೆದು ಕನ್ನಡದಲ್ಲಿಯೇ ಸಹಿ ಮಾಡಬೇಕೆಂದು ಆಜ್ಞೆ ಮಾಡಿದರು.[2]

ಚನ್ನಬಸಪ್ಪನವರ ಸಮಕಾಲೀನರೂ, ಸ್ನೇಹಿತರೂ ಆದ **ಚುರಮುರಿ ಶೇಷಗಿರಿ ರಾಯರು** (1827–1884) ಕೂಡ ಇಂಜಿನೀಯರರೇ ಆಗಿದ್ದರು. ಆದರೆ ಚನ್ನಬಸಪ್ಪನವರ ಆದೇಶದಂತೆ ಕನ್ನಡ ಸಾಹಿತ್ಯನಿರ್ಮಿತಿಗೆ ತೊಡಗಿದರು. ಅವರು 1870 ರಲ್ಲಿ ಶಾಕುಂತಲ ನಾಟಕವನ್ನು ಅನುವಾದಿಸಿದರು. ಅದು ಶಾಕುಂತಲದ ಪ್ರಥಮ ಅನುವಾದವಾಗಿರುವುದಲ್ಲದೆ ಅದು ಆ ಕಾಲಕ್ಕೆ ಅತ್ಯಂತ ಜನಪ್ರಿಯವಾಗಿತ್ತು. ಚುರಮುರಿಯವರು ಬೇರೆ ಒಂದೆರಡು ಕೃತಿಗಳನ್ನೂ ಬರೆದಿರುವರು.

ಬಾಣಕಾದಂಬರಿಯ ಕನ್ನಡ ಸಂಕ್ಷಿಪ್ತಾನುವಾದದಿಂದ ಇಂದಿಗೂ ಚಿರಪರಿಚಿತವಾದ ವ್ಯಕ್ತಿ **ಗಂಗಾಧರ ಮಡಿವಾಳೇಶ್ವರ ತುರಮುರಿಯವರು** (1827–1877). ಕನ್ನಡ ಪಂಡಿತರಾದ ಇವರು ಕೆಲಕಾಲ ಶಿಕ್ಷಕರಾಗಿದ್ದು ಅನಂತರ ಬೆಳಗಾವಿಯ ನಾರ್ಮಲ್ ಸ್ಕೂಲಿನಲ್ಲಿ ಪ್ರಾಧ್ಯಾಪಕರಾಗಿ ಮತ್ತು ಪಠ್ಯಪುಸ್ತಕ ಭಾಷಾಂತರಕಾರರಾಗಿ ಕೆಲಸ ಮಾಡಿದರು. ಕನ್ನಡ ಪಠ್ಯಪುಸ್ತಕಗಳಲ್ಲಿ ಕೇವಲ ಮರಾಠಿ ಭಾಷಾಂತರಗಳನ್ನಲ್ಲದೆ ಮೂಲ ಕನ್ನಡ ಲೇಖನಗಳನ್ನು ಮೊದಲಿಗೆ ಸೇರಿಸಿದ ಶ್ರೇಯಸ್ಸು ಇವರದು. ಮುಂದೆ ಈ ಪದ್ಧತಿಯನ್ನು ವೆಂಕಟ ರಂಗೋ ಕಟ್ಟಿ ಅವರು ಮುಂದುವರಿಸಿದರು. ಶುದ್ಧ ಕನ್ನಡದ ಪ್ರತಿಪಾದಕರಾದ ಇವರ 1870ರ ದಶಕದ ಕಾದಂಬರಿಯ ಅನುವಾದವು ಹೊಸಗನ್ನಡದ ಶ್ರೇಷ್ಠ ಗದ್ಯ ಕೃತಿಗಳಲ್ಲಿ ಒಂದಾಗಿದ್ದು, ಬಹುಕಾಲ ಮಾದರಿಯ ಗ್ರಂಥವಾಗಿ ಉಳಿಯಿತು. ಇಂದಿನ ಹೊಸಗನ್ನಡ ಗದ್ಯಶೈಲಿಯ ಕುರುಹುಗಳು ಅದರಲ್ಲಿ ಸ್ಪಷ್ಟವಾಗಿ ಗೋಚರಿಸಿವೆ. ತುರಮರಿಯವರು ಸ್ವತಃ ಕನ್ನಡಕ್ಕಾಗಿ ಶ್ರಮಿಸಿದರಲ್ಲದೆ ಅವರು ಅನೇಕ ಶಿಷ್ಯರಿಗೆ ಈ ಕನ್ನಡದ ದೀಕ್ಷೆಯನ್ನು ಕೊಟ್ಟರು. "ನಾರ್ಮಲ್ ಸ್ಕೂಲಿನಲ್ಲಿ ಗಂಗಾಧರಯ್ಯನವರು ಹೊತ್ತಿಸಿದ ಕನ್ನಡ ಕಿಡಿಯನ್ನು ಅಲ್ಲಿಯ ವಿದ್ಯಾರ್ಥಿಗಳು ಹೋದಲ್ಲೆಲ್ಲ ಕೊಂಡೊಯ್ದರು. ಕನ್ನಡ ಕಾವ್ಯಸಂಪತ್ತನ್ನು ಜನತೆಗೆ ಪರಿಚಯ ಮಾಡಿ-

1. ಶಾಲಾ ಪತ್ರಿಕೆ, ಅಕ್ಟೋಬರ 1868.
2. ಜೀವನ-ಶಿಕ್ಷಣ, ವಿಶೇಷ ಸಂಚಿಕೆ- 1957, ಪುಟ 30

ಕೊಡುವದು, ಭಾಷಾಶುದ್ಧಿಯನ್ನು ಬೆಳೆಸಿ ಮರಾಠಿ ಪ್ರಭಾವದಿಂದ ಕನ್ನಡವನ್ನು ಮುಕ್ತ-ಮಾಡುವದು—ಗಂಗಾಧರಯ್ಯನವರ ಶಿಷ್ಯರು ಮಾಡಿದ ಮಹತ್ವದ ಕೆಲಸವಾಗಿದೆ. ಶಾಂತವೀರ ರಾಚಿದೇವ ಕಿತ್ತೂರ, ಧೋ. ನ. ಮುಳಬಾಗಲ ಅವರು ತುರಮರಿಯವರ ವಿದ್ಯಾರ್ಥಿಗಳು" [1] ಮುಳಬಾಗಲರ ಶಿಷ್ಯರೇ ಗಳಗನಾಥರು.

ತುರಮರಿಯವರ ಸಮಕಾಲೀನರೂ, ಅಷ್ಟೇ ಪಂಡಿತರೂ ಆದ **ಶಾಂತವೀರ ರಾಚಿದೇವ ಕಿತ್ತೂರ** (1820-1885) ಅವರೂ ಕೂಡ ಶಿಕ್ಷಕರೇ. ಡೆಪ್ಯೂಟಿ ಚನ್ನಬಸಪ್ಪನವರು ಇವರ ಪಾಂಡಿತ್ಯವನ್ನು ಮೆಚ್ಚಿ ಇವರನ್ನು ಬೆಳಗಾವಿಯ ಸರದಾರ್ಸ ಹೈಸ್ಕೂಲಿನಲ್ಲಿ (1850-ಆರಂಭ) 1861ರಲ್ಲಿ ಕನ್ನಡ ಶಿಕ್ಷಕರೆಂದು ನೇಮಿಸಿದರು. ಮುಂದೆ ಇವರು ನಾರ್ಮಲ್ ಸ್ಕೂಲಿನಲ್ಲಿ ಮತ್ತು ಧಾರವಾಡದ ಟ್ರೇನಿಂಗ ಕಾಲೇಜಿನಲ್ಲಿ ಕನ್ನಡ ಪಂಡಿತರೆಂದು ಕೆಲಸ ಮಾಡಿದರು. ಕಿತ್ತೂರ ಅವರ ಜೊತೆಗೆ ತುರಮರಿಯವರೂ, ಅನ್ನದಾನೀಶ್ವರ ಅರಳೆಲೆ ಮಠ ಎಂಬವರೂ ಕನ್ನಡದ ಅಭ್ಯಾಸ, ಲೇಖನಗಳಲ್ಲಿ ನಿರತರಾಗಿರುತ್ತಿದ್ದರು.

ಶಾಂತವೀರ ಕಿತ್ತೂರ ಅವರು ಅನೇಕ ಶಾಲೋಪಯೋಗಿ ಪುಸ್ತಕಗಳನ್ನಲ್ಲದೆ, ಷಡಕ್ಷರಿಯ 'ರಾಜಶೇಖರ ವಿಳಾಸದ ಎರಡನೆಯ ಆಶ್ವಾಸಕ್ಕೆ ಟೀಕೆ', 'ಶಾಂತವೀರ ಛಂದಸ್ಸು', 'ಶಾಂತವೀರ ನಿಘಂಟು'ಗಳನ್ನು ಬರೆದಿರುವರು. ಫ್ಲೀಟ್, ಕಿಟೆಲ್ ಮೊದಲಾದವರಿಗೆ ಕನ್ನಡದ ಅಭ್ಯಾಸದಲ್ಲಿ ಸಹಾಯ ಮಾಡಿದ ಶಾಂತವೀರಯ್ಯನವರು ಫ್ಲೀಟ್ ಸಾಹೇಬರನ್ನು ಕುರಿತು 'ನವರತ್ನ ಹಾರ'ವೆಂಬ ಕವಿತೆಯನ್ನು ಬರೆದರು. ಸುಪ್ರೀತರಾದ ಫ್ಲೀಟ್‌ರು ಇವರಿಗೆ 1875 ನೆಯ ಜುಲೈ 5 ರಂದು ಕಿಟೆಲ್ ಅವರು ಸಂಪಾದಿಸಿದ ನಾಗವರ್ಮನ ಛಂದಸ್ಸಿನ ಒಂದು ಪ್ರತಿಯನ್ನು ಕಾಣಿಕೆಯಾಗಿ ಕೊಟ್ಟಿದ್ದರು.

ಮುಖ್ಯವಾಗಿ ಕಿತ್ತೂರ ಅವರು ಕನ್ನಡದ ಶ್ರೇಷ್ಠ ಪಂಡಿತರೂ, ಶ್ರೇಷ್ಠ ಶಿಕ್ಷಕರೂ ಆಗಿದ್ದು ಶಿಷ್ಯರಲ್ಲಿ ಕನ್ನಡಾಭಿಮಾನವನ್ನು ಕೆರಳಿಸಿದಂಥ ಹಿರಿಯರು ಎಂದು ನೆನೆಯಬೇಕು.

ಮುಧೋಳದಲ್ಲಿ ಜನಿಸಿ ಪುಣೆಯಲ್ಲಿ ಶಿಕ್ಷಣ ಪಡೆದ ವಿಶಾಲ ದೃಷ್ಟಿಕೋನವುಳ್ಳ **ವೆಂಕಟ ರಂಗೋ ಕಟ್ಟಿ** (1833–1909) ಯವರು ಆ ಕಾಲಕ್ಕೆ ಹೆಚ್ಚು ಸಂಖ್ಯೆಯ ಗ್ರಂಥಗಳನ್ನು ಬರೆದಿರುವರು. ಅವರು ಶಿಕ್ಷಕರಾಗಿ, ಭಾಷಾಂತರಕಾರರಾಗಿ, ಕೊನೆಗೆ ಧಾರವಾಡದ ಟ್ರೇನಿಂಗ ಕಾಲೇಜಿನ ಮುಖ್ಯಾಧ್ಯಾಪಕರಾಗಿ ನಿವೃತ್ತರಾದರು(1890). ಅವರ ಕಾರ್ಯ ಬಹುಮುಖವಾದುದು. ಅವರು ಅರೇಬಿಯನ್ ನೈಟ್ಸ್‌ದ ಭಾಷಾಂತರದಿಂದ ಹಿಡಿದು 'ವಿಧವೆಗಳ ಮುಂಡನ ಅನಾಚಾರವು' ಎಂಬಂಥ ಹಲವು ಗ್ರಂಥಗಳನ್ನು ಬರೆದರಲ್ಲದೆ, ಮರಾಠಿಯಲ್ಲಿ ಕೂಡ ನಾಲ್ಕು ಗ್ರಂಥಗಳನ್ನು ಬರೆದಿರುವರು. ಇತಿಹಾಸದ ಕೆಲವು ಗ್ರಂಥಗಳನ್ನು ಬರೆದ ಇವರ 'ಮುಂಬಯಿ ಕರ್ನಾಟಕದ ಗೆಝೆಟ್ಟು' ಭಾಷಾಂತರ ಕೃತಿಯಾದರೂ ಮಹತ್ತ್ವದ ಕೊಡುಗೆಯಾಗಿದೆ. ಕರ್ನಾಟಕದ ಇತಿಹಾಸವನ್ನು ಮೊದಲಿಗೆ ಬರೆದ ಶ್ರೇಯಸ್ಸು ಇವರಿಗೇ ಸಲ್ಲಬೇಕು. 'ಶಾಲಾಪತ್ರಕ' ಮಾಸಪತ್ರಿಕೆಗೆ ಅವರು ವಿಶೇಷ ಸಹಾಯಕರಾಗಿದ್ದರು. 'ಶೋಧಕ'ವನ್ನು ಅವರೇ ನಡೆಸಿದರು. ಅದು ಮೂರೇ ವರ್ಷ ನಡೆಯಿತು(1875–78). ಧಾರವಾಡದಲ್ಲಿ 'ಜ್ಞಾನವರ್ಧಕ ಮುದ್ರಣಾಲಯ'ವೆಂಬ ಸ್ವಂತ ಅಚ್ಚುಕೂಟವನ್ನು ಸ್ಥಾಪಿಸಿ 'ಲೋಕ ಶಿಕ್ಷಕ'

1. ವೆಂಕಟೇಶ ಸಾಂಗಲಿ : ಹೊಸಗನ್ನಡದ ಪುಣ್ಯಪುರುಷರು, ಪುಟ 25–26.

ವೆಂಬ ಪತ್ರಿಕೆಯನ್ನು ಅವರು ಕೆಲಕಾಲ ನಡೆಸಿದರು. "ಪತ್ರಿಕೆಗಳಿಗಾಗಿ ಸುಮಾರು ಇಪ್ಪತ್ತೈದು ವರ್ಷಗಳಿಗೂ ಮೇಲ್ಪಟ್ಟು ಅವರು ಮಾಡಿದ ಲೇಖನ ವ್ಯವಸಾಯವು ಹೊಸಗನ್ನಡದ ಆರಂಭದ ಚರಿತ್ರೆಯೇ ಆಗಿದೆ."[1] ಪತ್ರಿಕೆಗಳು ಒಳ್ಳೆಯ ಶೈಕ್ಷಣಿಕ ಸಾಧನಗಳೆಂದು ಅವರು ನಂಬಿದ್ದರು. ಕಟ್ಟಿಯವರು ಸಮಾಜ ಸುಧಾರಕರೂ ಆಗಿದ್ದರು. ವಿಧವಾ ವಿವಾಹದ ಪುರಸ್ಕರ್ತರೂ ಆಗಿದ್ದ ಅವರು ಆ ಬಗ್ಗೆ ಲೇಖನಗಳನ್ನೂ ಗ್ರಂಥಗಳನ್ನೂ ಬರೆದರು. ಅವರ 'ಆರು ಬೆರಳಿನ ಕುರುಹು ಅಥವಾ ಸುಧಾರಿಸತಕ್ಕ ಆಚರಣೆಗಳು'(1898) ಎಂಬುದು ವಿಧವಾ ವಿವಾಹವನ್ನು ಎತ್ತಿ ಹಿಡಿಯುತ್ತದೆ.

ಕಟ್ಟಿಯವರು ಧಾರವಾಡದಲ್ಲಿ 1890ರಲ್ಲಿ ಸ್ಥಾಪಿತವಾದ 'ಕರ್ನಾಟಕ ವಿದ್ಯಾವರ್ಧಕ ಸಂಘ'ದ ಕಾರ್ಯಗಳಲ್ಲಿ ವಿಶೇಷ ಆಸ್ಥೆವಹಿಸಿ ಕೆಲಕಾಲ ಉಪಾಧ್ಯಕ್ಷರೂ, ಅಧ್ಯಕ್ಷರೂ ಆಗಿದ್ದರು. ಕನ್ನಡದ ಬಗ್ಗೆ ಅವರ ಕಳಕಳಿ ಹೆಚ್ಚಿದ್ದರೂ ಅವರು ಮರಾಠಿ ದ್ವೇಷಿಗಳಾಗಿರಲಿಲ್ಲ. ಆಗ ಸಾಕಷ್ಟು ಪ್ರಗತಿಹೊಂದಿದ ಮರಾಠಿಯನ್ನು ಕಲಿತು, ಕನ್ನಡಿಗರು ಅದರ ಲಾಭ ಪಡೆಯಬೇಕೆಂದು ಅವರ ವಾದವಾಗಿತ್ತು. ಕನ್ನಡ ಶಾಲೆಗಳಲ್ಲಿ ಮರಾಠಿ ಕಲಿಸಬಾರದೆಂಬ ಸಂಘದ ಗೊತ್ತುವಳಿಯನ್ನು ಅವರು ವಿರೋಧಿಸಿದರು.[2] ಇಷ್ಟರಿಂದ ಅವರು ಮರಾಠಿ ಪಕ್ಷಪಾತಿ ಎಂದು ಹೇಳಲಾಗದು. ಅವರ 'ಕನ್ನಡ ಲಘುವ್ಯಾಕರಣ' (1880)ದ ಪೀಠಿಕೆಯಲ್ಲಿ ಕೂಡ ಅವರ ಕನ್ನಡದ ಕಳಕಳಿ ವ್ಯಕ್ತವಾಗಿದೆ.[3] ಅಂತೂ ಸಮಾಜ ಸುಧಾರಕ, ಶಿಕ್ಷಕ, ಪತ್ರಿಕೋದ್ಯಮಿ, ಗ್ರಂಥಕರ್ತ ಹೀಗೆ ಬಹುಮುಖ ವ್ಯಕ್ತಿತ್ವದ ಕಟ್ಟಿ ಅವರ ಬಗ್ಗೆ ಹೆಚ್ಚಿನ ಅಭ್ಯಾಸ ಮಾಡುವದು ಅವಶ್ಯವಿದೆ. ಅದರಿಂದ ಆ ಕಾಲದ ಕನ್ನಡ ನಾಡು-ನುಡಿಗಳ ಮೇಲೆ ಹೆಚ್ಚಿನ ಬೆಳಕು ಬೀಳುವಲ್ಲಿ ಸಂದೇಹವಿಲ್ಲ.

**ಧೋಂಡೋ ನರಸಿಂಹ ಮುಳಬಾಗಲರು** (1848–1898) ಪ್ರಾಥಮಿಕ ಮಾಧ್ಯಮಿಕ ಶಾಲೆಗಳಲ್ಲದೆ ಧಾರವಾಡದ ಟ್ರೇನಿಂಗ ಕಾಲೇಜಿನಲ್ಲಿಯೂ ಶಿಕ್ಷಕರಾಗಿ ಕೆಲಸ ಮಾಡಿದ ಕನ್ನಡದ ಪಂಡಿತರು. ವ್ಯಾಕರಣ, ಛಂದಸ್ಸುಗಳ ಮೇಲೆ ಗ್ರಂಥಗಳನ್ನು ಬರೆದುದಲ್ಲದೆ, ಸಂಸ್ಕೃತದಿಂದ 'ಉತ್ತರರಾಮ ಚರಿತ' 'ಮೃಚ್ಛಕಟಿಕ' 'ಮಾಲವಿಕಾಗ್ನಿ ಮಿತ್ರ' ನಾಟಕಗಳನ್ನೂ 'ಹಿತೋಪದೇಶ'ವನ್ನೂ ಕನ್ನಡಕ್ಕೆ ಭಾಷಾಂತರಿಸಿದರು. ಅವರ ಎಲ್ಲಕ್ಕಿಂತ ಹೆಚ್ಚಿನ ಸೇವೆಯೆಂದರೆ ತಮ್ಮ ವಿದ್ಯಾರ್ಥಿಗಳಲ್ಲಿ ಕನ್ನಡಾಭಿಮಾನವನ್ನು ತುಂಬಿದ್ದು. ಅವರ ಕನ್ನಡಾಭಿಮಾನವು ತುಂಬ ಹೆಚ್ಚಿನದು. "ನಮ್ಮ ಕನ್ನಡ ನುಡಿಯಲ್ಲಿ ಒಂದಾದರೂ ಇಂಥ (ಸಂಸ್ಕೃತ ನಾಟಕಗಳಂಥ) ನಾಟಕವಿಲ್ಲದ್ದು ಕನ್ನಡಿಗರಿಗೆ ನಾಚಿಕೆಯೆ ಸರಿ ಎಂದು ಎಣಿಸಿ, ಮೊದಲು ಉತ್ತರ ರಾಮಚರಿತವನ್ನು ಕನ್ನಡಿಸುವ ಕೆಲಸದಲ್ಲಿ ತೊಡಗಿದೆನು." ಎಂದು ಹೇಳಿದ ಮುಳಬಾಗಲರು ಅದನ್ನು 1879ರಲ್ಲಿ ಅನುವಾದಿಸಿದರು. ಮುಂದೆ 1883ರಲ್ಲಿ ಅವರು 'ವೇಣೀಸಂಹಾರ'ದ

---

1. ವೆಂಕಟೇಶ ಸಾಂಗಲಿ : ಹೊಸಗನ್ನಡದ ಪುಣ್ಯಪುರುಷರು, ಪುಟ 36.
2. ಕರ್ನಾಟಕ ವಿದ್ಯಾವರ್ಧಕ ಸಂಘದ ದಿ. 22–11–1896ರ ಸಭೆಯ ನಿರ್ಣಯ.
3. "ಕನ್ನಡದ ಅಭಿಮಾನಿಗಳೆಂದು ಎದೆಗೆ ಕೈಹಚ್ಚಿಕೊಳ್ಳುವವರು ಕನ್ನಡ ವಾಕ್ಯಗಳನ್ನು ಮರಾಠೀ ಶಬ್ದಗಳಿಂದ ಬರೆಯುವರು. ಮರಾಠೀ ಶಬ್ದಗಳನ್ನು ಎಗ್ಗಿಲ್ಲದೆ ಉಪಯೋಗಿಸುವರು. ಆದರೂ ತಾವು ಬರೆಯುವ ಭಾಷೆಯು ಅಚ್ಚಗನ್ನಡವೆಂದು ಅವರು ಅಭಿಮಾನ ವಹಿಸುವರು." ಬಹುಶಃ ಈ ಮಾತುಗಳು ಅವರ ವಿಮರ್ಶಕರನ್ನು ಕುರಿತು ಇದ್ದರೂ ಇರಬಹುದು.

ಗದ್ಯಾನುವಾದವನ್ನು ಮಾಡಿದರು. ಆಗ ಅವರು, "ಕನ್ನಡ ಭಾಷೆಯ ಈಗಿನ ಸ್ಥಿತಿಯನ್ನು ನೋಡಿದರೆ ಈ ಭಾಷೆಯಲ್ಲಿ ಎಲ್ಲಾ ವಿಷಯಗಳ ಗದ್ಯಾತ್ಮಕ ಗ್ರಂಥಗಳು ತೀರ ಕಡಿಮೆಯಾಗಿವೆ. ಒಂದು ಪಕ್ಷದಲ್ಲಿ ಇಲ್ಲೆಂದರೂ ಚಿಂತೆಯಿಲ್ಲ. ಸಾಧಾರಣ ಜನರ ಮನೋರಂಜನಾರ್ಥವಾಗಿ ಏನಾದರೂ ಓದಬೇಕೆಂದರೆ ಯೋಗ್ಯವಾದ ಪುಸ್ತಕಗಳು ಇರುವದಿಲ್ಲ"ವೆಂದು ಗ್ರಂಥದ ಪ್ರಸ್ತಾವನೆಯಲ್ಲಿ ತಮ್ಮ ಗದ್ಯಾನುವಾದದ ಆವಶ್ಯಕತೆಯನ್ನು ಸಮರ್ಥಿಸಿಕೊಂಡಿರುವರು.

ಸಾಹಿತ್ಯಿಕ ನಾಟಕಗಳನ್ನು ಮುಂಬಯಿ ಕರ್ನಾಟಕ ಭಾಗದಲ್ಲಿ ಬರೆದವರಲ್ಲಿ ಮುಳಬಾಗಲರೇ ಮೊದಲಿಗರೆನ್ನಬೇಕು. "ಕೈ. ವಾ. ರಾ. ಸಾ. ಚನ್ನಬಸಪ್ಪನವರು ಬೆಳಗಾವ, ಧಾರವಾಡ ಜಿಲ್ಲೆಗಳ ಶಾಲಾಧಿಕಾರಿಗಳಾದ ಸಮಯಕ್ಕೆ ಕನ್ನಡವು ಅಲ್ಪಸ್ವಲ್ಪ ಬೆಳವಣಿಗೆಗೆ ಬಂದಿತು. ರಾ. ಸಾ. ವೆಂಕಟ ರಂಗೋ ಕಟ್ಟಿ ಮುಂತಾದವರು ಅಚ್ಚಗನ್ನಡ ಪದ್ಧತಿಯಿಂದ ಕ್ರಮಿಕ ಪುಸ್ತಕಗಳನ್ನು ಬರೆದು ಕನ್ನಡದ ಬೆಳವಣಿಗೆಗೆ ಸಹಾಯ ಮಾಡಿದರು. ಆದರೆ ಶಾಲೋಪಯೋಗಿ ಪುಸ್ತಕಗಳ ಹೊರ್ತು ನಾಟಕಾದಿಗಳನ್ನು ನಿಜಗನ್ನಡದಲ್ಲಿ ಬರೆಯುವ ಪರಿಪಾಠವು.... ಮುಳಬಾಗಲರಿಂದಲೇ ಆರಂಭವಾಯಿತೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ"[1] ಮುಳಬಾಗಲರ 'ಕನ್ನಡ ಕೈಪಿಡಿ' (1890) ಮತ್ತು 'ನುಡಿಗಟ್ಟು'ಗಳು (1892) ಶ್ರೇಷ್ಠವಾದ ವ್ಯಾಕರಣ ಗ್ರಂಥಗಳಾಗಿವೆ. ಅವು ವಿದ್ಯಾರ್ಥಿಗಳಿಗೂ ಶಿಕ್ಷಕರಿಗೂ ವ್ಯಾಕರಣದ ಕೈಪಿಡಿಗಳೇ ಆಗಿದ್ದುವು. ಅಚ್ಚುಕಟ್ಟಾದ ನಿರೂಪಣೆ ಮತ್ತು ಸ್ವತಂತ್ರ ವಿಚಾರ ಸರಣಿಗಳಿಂದ ಕೂಡಿದ 'ನುಡಿಗಟ್ಟು' ತುಂಬ ಉತ್ತಮವಾದ ವ್ಯಾಕರಣ ಗ್ರಂಥ. "ನುಡಿಗಟ್ಟು ವ್ಯಾಕರಣವು ಕನ್ನಡ ಭಾಷಾ ಚರಿತ್ರೆಯಲ್ಲಿ ತುಂಬ ಗಮನಾರ್ಹವಾದುದು, ಕುತೂಹಲಕಾರಿಯಾದುದು ಮತ್ತು ಉಪಯುಕ್ತವಾದುದು."[2] ಒಟ್ಟಿನಲ್ಲಿ ಶಾಲೋಪಯೋಗಿ ಪುಸ್ತಕಗಳನ್ನಲ್ಲದೆ ನಾಟಕಾದಿ ಸಾಹಿತ್ಯವನ್ನೂ ಅಚ್ಚ ಕನ್ನಡದಲ್ಲಿ ಬರೆಯುವ ಪರಿಪಾಠವನ್ನು ಹಾಕಿದವರಲ್ಲಿ ಮುಳಬಾಗಲರು ಅಗ್ರಗಣ್ಯರು.

ಅದೇ ತಲೆಮಾರಿನ ಇನ್ನೊಬ್ಬ ಶಿಕ್ಷಕರೂ, ನಾಟಕಕಾರರೂ ಆದ **ಸಕ್ಕರಿ ಬಾಳಾಚಾರ್ಯ** ಅಥವಾ **ಶಾಂತಕವಿಗಳು** (1856–1920) ಕನ್ನಡದ ಕಟ್ಟಾಳುಗಳಲ್ಲಿ ಒಬ್ಬರು. ಕನ್ನಡದ ಅಭಿಮಾನದಿಂದಲೇ ಅವರು ಲೇಖನ ಕಾರ್ಯಕ್ಕೆ ತೊಡಗಿದರು. ಕನ್ನಡ ಶಾಲೆಯ ಶಿಕ್ಷಕರಾದ ಅವರ ಸಾಹಿತ್ಯ ಸೇವೆಯು ಕೀರ್ತನಗಳಿಂದ ಆರಂಭವಾಯಿತು. ಮರಾಠಿ ಮಿಶ್ರಿತ ಕನ್ನಡ ಕೀರ್ತನವನ್ನು ಕೇಳಿ, ಅವರ ಕನ್ನಡಾಭಿಮಾನವು ಸಿಡಿದೆದ್ದು, ಅಚ್ಚ ಕನ್ನಡದಲ್ಲಿ ಕೀರ್ತನಗಳನ್ನು ಬರೆಯತೊಡಗಿದರು. ತಮ್ಮ 'ಗಜೇಂದ್ರ ಮೋಕ್ಷ'ದ ಪ್ರಸ್ತಾವನೆಯಲ್ಲಿ ಅವರು ತಾವು ಕೀರ್ತನಗಳನ್ನು ಬರೆದ ಹಿನ್ನೆಲೆಯನ್ನು ವಿವರಿಸುತ್ತ, ಶ್ರೀಮನ್ನಾರಾಯಣನ ಗುಣಗಳನ್ನು ಕೊಂಡಾಡುವ ಮಾರ್ಗಗಳಲ್ಲಿ ಕೀರ್ತನಗಳದೂ ಒಂದು ಮಾರ್ಗ. ಆದರೆ ಅಂಥ ಕೀರ್ತನದ ಗ್ರಂಥಗಳು "ದುರ್ದೈವಿಗಳಾದ ನಮ್ಮ ಕನ್ನಡ ಭಾಷೆಗಳಲ್ಲಿ ಇಲ್ಲದಿರುವದರಿಂದ ನಮ್ಮ ದೇಶದ ಹರಿದಾಸರು ಮೋರೋಪಂತರ ಮಹಾರಾಷ್ಟ್ರ ಆರ್ಯ, ಅಮೃತರಾಯರ ಮಹಾರಾಷ್ಟ್ರ ಕಟಾವ, ಕಬೀರದಾಸರ ಹಿಂದುಸ್ಥಾನೀ ದೋಹರೇ ಮುಂತಾದವುಗಳನ್ನು ತೆಗೆದುಕೊಂಡು ಅವುಗಳ ಅರ್ಥವನ್ನು ಕನ್ನಡ ಮಾತಿನಿಂದ ಹೇಳುತ್ತ ಕೀರ್ತನ ಮಾಡುತ್ತಾರೆ. ಹೀಗೆ

1. ವಾಗ್ಭೂಷಣ–ಅಕ್ಟೋಬರ, 1898.
2. ಕೆ. ಕೆಂಪೇಗೌಡ: 'ಕನ್ನಡ ಭಾಷಾ ವಿಜ್ಞಾನದ ಚರಿತ್ರೆ'- ಪ್ರಬುದ್ಧ ಕರ್ನಾಟಕ-53-3, ಪುಟ 105.

ಬತ್ತ ಮೊಸರು ಕಲಿಸಿದಂತೆ ಕೀರ್ತನೆ ಮಾಡುವದರಿಂದ ಕನ್ನಡ ಭಾಷೆಯ ಗೌರವವು ಕಡಿಮೆ ಆಗುತ್ತದೆ. ಅದು ಆಗಬಾರದೆಂಬ ಅಭಿಮಾನದಿಂದ ನಾವು ಈ ಗ್ರಂಥವನ್ನು ರಚಿಸುತ್ತೇವೆ". ಎಂದು ಹೇಳಿರುವುದನ್ನು ಗಮನಿಸಿದರೆ ಅವರ ಕನ್ನಡದ ಕಳಕಳಿ ವ್ಯಕ್ತವಾಗುತ್ತದೆ. ಅವರು ಕೇವಲ ಕೀರ್ತನಕಾರರಾಗಿ ಉಳಿಯದೆ ನಾಟಕಗಳನ್ನೂ ಬರೆದರು.

ಶಾಂತ ಕವಿಗಳು ನಾಟಕವನ್ನು ಬರೆಯುವ ಪೂರ್ವದಲ್ಲಿ ಮರಾಠಿ ನಾಟಕಗಳಲ್ಲದೆ ಕನ್ನಡ ನಾಟಕಗಳ ಹೆಸರೇ ಕೇಳಿಬರುತ್ತಿರಲಿಲ್ಲವೆಂಬುದನ್ನು ಅವರದೇ ಒಂದು ಪದ್ಯವು ಸೂಚಿಸುತ್ತದೆ.

ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕ ಕೀರ್ತಿ
ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕ-ದರ್ಥಿ
ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕನಟರ ಮೂರ್ತಿಗಳ ಸಂಚಾರವು !
ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕದಾಟ
ಎಲ್ಲಿ ನೋಡಲು ಮಹಾರಾಷ್ಟ್ರ ನಾಟಕಕೂಟ
ಎಲ್ಲಿ ನೋಡಲು ಮಹಾರಾಷ್ಟ್ರ ಭಾಷಾಮಯಂ ತಾನಾಯ್ತು ಕರ್ನಾಟಕಂ !!

ಇಂಥ ಸ್ಥಿತಿಯಲ್ಲಿ ಶಾಂತಕವಿಗಳು ಕನ್ನಡ ನಾಟಕಗಳನ್ನು ಬರೆದರಷ್ಟೇ ಅಲ್ಲದೆ ಅವುಗಳನ್ನು ರಂಗಭೂಮಿಯ ಮೇಲೆ ಪ್ರಯೋಗಿಸಿ ಕನ್ನಡದ ಆದ್ಯ ನಾಟಕಕಾರರೆನಿಸಿಕೊಂಡರು. ಚುರಮರಿ ಶೇಷಗಿರಿರಾಯರು 'ಶಾಕುಂತಲ'ವನ್ನು(1870) ಮೊದಲೇ ಬರೆದಿದ್ದರೂ, ಶಾಂತಕವಿಗಳ ಮೊದಲ ನಾಟಕ— 'ಉಷಾಹರಣ'ವು 1873ರಲ್ಲಿ ರಂಗಭೂಮಿಯ ಮೇಲೆ ಬಂದು, ಅವರಿಗೆ ಹೆಚ್ಚಿನ ಕೀರ್ತಿಯನ್ನೂ ಜನಾನುರಾಗವನ್ನೂ ಗಳಿಸಿಕೊಟ್ಟಿತು. ಶಾಲೆಯ ಕೆಲಸದಲ್ಲಿ ನಾಟಕ ಬರೆಯಲು ವೇಳೆ ದೊರೆಯುವುದಿಲ್ಲವೆಂದು ತಕರಾರು ಮಾಡುತ್ತಲೇ ಅವರು ಅರುವತ್ತಕ್ಕೂ ಹೆಚ್ಚು ಕೃತಿಗಳನ್ನು ಬರೆದರು. ಬಸವಪ್ಪ ಶಾಸ್ತ್ರಿಗಳು ಮತ್ತು ಚುರಮರಿ ಶೇಷಗಿರಿರಾಯರಂತೆ ಇವರು ಅನುವಾದಕ್ಕೆ ತೊಡಗದೆ ಸ್ವತಂತ್ರ ನಾಟಕಗಳನ್ನೇ ಬರೆದರು. "ಕ್ರಿ. ಶ. 1875ರಿಂದ ನಾಟಕ ರಚನೆಯಲ್ಲಿ ತೊಡಗಿದ ಶಾಂತಕವಿಯು ಸಮಗ್ರ ಕರ್ನಾಟಕದ ಸ್ವತಂತ್ರ ನಾಟಕಕಾರರಲ್ಲಿ ಆದ್ಯನೆನ್ನಬೇಕು"[1] ಒಟ್ಟಿನಲ್ಲಿ ಅವರ ಕನ್ನಡ ಸೇವೆ ಹೆಚ್ಚಿನದು. ಅವರ "ಏಳು ಸಾಯಣ ಕಟ್ಟು ಗ್ರಂಥವ" ಮತ್ತು "ರಕ್ಷಿಸು ಕರ್ನಾಟಕ ದೇವಿ" ಮೊದಲಾದ ಹಾಡುಗಳು ಬಹುಕಾಲ ಕನ್ನಡ ನಾಲಿಗೆಯ ಮೇಲೆ ನರ್ತಿಸಿದುವು. ಧಾರವಾಡದಲ್ಲಿ ಒಮ್ಮೆ ಕನ್ನಡ–ಮರಾಠಿ ವಾದವು ಉಲ್ಬಣಿಸಿದ ಕಾಲದಲ್ಲಿ ಕನ್ನಡ ಸಾಹಿತ್ಯ ಸಮ್ಮೇಲನವನ್ನು ಸಂಘಟಿಸಲಾಯಿತು(1918). ಆ ಕಾಲಕ್ಕೆ ಶಾಂತಕವಿಗಳು "ಬೇಡಲು ಬಂದಿಹ ಕನ್ನಡದ ದಾಸಯ್ಯ" ಎಂದು ಅಕ್ಷರಶಃ ಜೋಳಿಗೆ ಹಿಡಿದುಕೊಂಡು ಮನೆಮನೆಗೆ ಹೋಗಿ ಸಮ್ಮೇಲನಕ್ಕಾಗಿ ಹಣವನ್ನು ಶೇಖರಿಸಿಕೊಟ್ಟು "ಕನ್ನಡದ ಧ್ವಜವನ್ನು ಎತ್ತಿ ಹಿಡಿಯಬಲ್ಲ ಇಂಥ ಎಷ್ಟು ಸಮ್ಮೇಲನಗಳನ್ನೂ ನಾನು ಮಾಡಬಲ್ಲೆ" ಎಂಬ ಉತ್ಸಾಹವನ್ನು ತೋರಿದರು.

ಒಟ್ಟಿನಲ್ಲಿ "ಸಂಗೀತದಲ್ಲಿ ತಕ್ಕ ಪರಿಶ್ರಮವುಳ್ಳ ಇವರು (ಶಾಂತಕವಿಗಳು) ರಾಷ್ಟ್ರೀಯ ಕೀರ್ತನಕಾರರೆಂದು ಹೆಸರಾಗಿದ್ದರು. ಸುಪ್ತಾವಸ್ಥೆಯಲ್ಲಿದ್ದ ಅಂದಿನ ಕರ್ನಾಟಕವನ್ನು ಬಡಿದೆಬ್ಬಿಸಿ ನಾಡು-ನುಡಿಯ ಸೇವೆಗಾಗಿ ಜನತೆಯನ್ನು ಹುರಿದುಂಬಿಸುವ ಕಾರ್ಯವನ್ನು ಅತ್ಯಂತ ನಿಷ್ಠೆ

1. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ 398.

ಪರಿವರ್ತಿತವಾಯಿತು. ಚೆನ್ನಬಸಪ್ಪ, ಕಟ್ಟಿ, ತುರಮರಿ, ಕಿತ್ತೂರ, ಮುಳಬಾಗಿಲ, ರಾ. ಹ. ದೇಶಪಾಂಡೆ, ರೊದ್ದ ಶ್ರೀನಿವಾಸರಾವ್ ಅವರಂಥ ನಿಷ್ಠಾವಂತ ಶಿಕ್ಷಕರಿಂದ ಟ್ರೇನಿಂಗ ಕಾಲೇಜಿನಲ್ಲಿ ಕನ್ನಡವು ಕಾಲೂರಿ ನಿಂತಿತು. "ಉಚ್ಚ ಶಿಕ್ಷಣದ ಕಾಲೇಜುಗಳು ಈ ಭಾಗದಲ್ಲಿ ಇಲ್ಲದಾಗ, ಇದ್ದ ಪ್ರಾಥಮಿಕ ಶಾಲೆಗಳಲ್ಲಿ ಕನ್ನಡಕ್ಕೆ ಅಂತಹ ಸ್ಥಾನವಿಲ್ಲದಾಗ, ಟ್ರೇನಿಂಗ ಕಾಲೇಜಿನ ಶಿಕ್ಷಕರೂ, ವಿದ್ಯಾರ್ಥಿಗಳೂ ಕನ್ನಡದ ಪರಂಪರೆಯನ್ನು ಕಾಯ್ದುಕೊಂಡು ಬಂದರು. ಇಲ್ಲದಿದ್ದರೆ ಕನ್ನಡದ ಪುನರುಜ್ಜೀವನಕ್ಕೆ ಹೆಚ್ಚು ಕಾಲ ಹಿಡಿಯಬಹುದಾಗಿತ್ತು. ಸರ್ವಶ್ರೀ ಗಳಗನಾಥ, ತುರಮರಿ, ಶಾಂತಕವಿ, ಮ. ಪ್ರ. ಪೂಜಾರ, ಶಂ. ಬಾ. ಜೋಶಿ ಇವರೇ ಮೊದಲಾದ ಲೇಖಕರ ಕೃತಿಗಳು ಈ ಪರಂಪರೆಗೆ ಸಾಕ್ಷಿಯಾಗಿವೆ."[1] ಎಂದು ಡಾ. ವಿ. ಕೃ. ಗೋಕಾಕರೂ, ಅದರಂತೆ "ಕನ್ನಡ ನಾಡಿನಲ್ಲಿ ಕನ್ನಡತನವು ಅಳಿದುಹೋಗುವ ಕಾಲದಲ್ಲಿ ಈ ಸಂಸ್ಥೆಯು ಜನ್ಮತಾಳಿ ಅದ್ವಿತೀಯ ಸಾಹಸಿಗಳಾದ ದಿವಂಗತ ಡೆಪ್ಯೂಟಿ ಚೆನ್ನಬಸಪ್ಪನವರು, ಆಗಿನ ಇನ್‌ಸ್ಪೆಕ್ಟರರಾದ ರಸೆಲ್ ಸಾಹೇಬರು ಮುಂತಾದ ಮಹಾನುಭಾವರ ಪರಿಶ್ರಮದಿಂದ ಪೋಷಿಸಲ್ಪಟ್ಟು, ಕರ್ನಾಟಕ ಕಾಲೇಜು ಪ್ರಾರಂಭವಾಗುವ ವರೆಗೆ ಇದೊಂದೇ ಉಚ್ಚ ಶಿಕ್ಷಣ ಸಂಸ್ಥೆಯಾಗಿ ಆಧುನಿಕ ಕನ್ನಡ ಸಾಹಿತ್ಯಕ್ಕೆ, ಕನ್ನಡಿಗರ ಜಾಗ್ರತಿಗೆ ಭದ್ರವಾದ ಅಡಿಗಲ್ಲನ್ನು ಹಾಕಿತು."[2] ಎಂದು ಚೆನ್ನಪ್ಪ ಉತ್ತಂಗಿಯವರೂ ನುಡಿದಿರುವುದು ಸತ್ಯವಾಗಿದೆ.

"ಮುಂಬಯಿ ಕರ್ನಾಟಕದಲ್ಲಿ ಕನ್ನಡ ಸಸಿಯು ನಿಜವಾದ ಪರಾಮರಿಕೆಯು ಟ್ರೇನಿಂಗ ಕಾಲೇಜಿನ ಆವಾರದಲ್ಲಿಯೇ ನಡೆಯಿತು. ಅಲ್ಲಿಯ ಅಧ್ಯಾಪಕರೂ, ಶಿಕ್ಷಕ ವಿದ್ಯಾರ್ಥಿಗಳೂ ಕನ್ನಡದ ಪ್ರೇಮವನ್ನು ಮೈಗೂಡಿಸಿಕೊಂಡರು. ಮುಂದಿನ ಗ್ರಂಥರಚನೆಗೆ ಅಣಿಯಾದರು. ಚೆನ್ನಬಸಪ್ಪನ ಅನಂತರ ಟ್ರೇನಿಂಗ ಕಾಲೇಜಿಗೆ ಮುಖ್ಯಸ್ಥರಾಗಿ ಬಂದ ಹುಯಿಲಗೋಳ ಭುಜಂಗರಾವ ಮತ್ತು ಅನಂತರದ ಪ್ರಿನ್ಸಿಪಾಲ, ವೈಸ ಪ್ರಿನ್ಸಿಪಾಲ ಹಾಗೂ ಇತರ ಅಧ್ಯಾಪಕರೆಲ್ಲರೂ ಕನ್ನಡ ಭಾಷೆ, ಸಾಹಿತ್ಯಗಳನ್ನು ಪೋಷಿಸಿಕೊಂಡು ಬಂದಿದ್ದಾರೆ. ಅವರಲ್ಲಿ ಅನೇಕರು ಸ್ವತಃ ಪುಸ್ತಕಗಳನ್ನು ರಚಿಸಿದ್ದಾರೆ. ಕಾಲೇಜಿನಲ್ಲಿ ಮೊದಲು ಕಾರಕೂನರಾಗಿದ್ದ ಗುರುಬಸಪ್ಪ ಫಕೀರಪ್ಪ ಹಳಕಟ್ಟಿ[3]—ಇವನು ಸಹ ಕನ್ನಡ ಗ್ರಂಥಗಳ ರಚನೆಗೆ ಮನಸ್ಸುಗೊಟ್ಟಿದ್ದನು. ಇತ್ತ ಶಿಕ್ಷಣ ಖಾತೆಯ ಡೆಪ್ಯೂಟಿ, ಅಸಿಸ್ಟಂಟ ಇನ್‌ಸ್ಪೆಕ್ಟರರು ಚೆನ್ನಬಸಪ್ಪನು ಹಾಕಿಕೊಟ್ಟಿದ್ದ ಕನ್ನಡ ನಿಷ್ಠೆಯ ಹಾದಿಯಲ್ಲಿಯೇ ಮುನ್ನಡೆದಿದ್ದಾರೆ. ಅವರಲ್ಲಿ ರಾವಜೀ ಬಾಳಾಜಿ ಕರಂದೀಕರ, ಪಾ. ವೆಂ. ಚಿಂತಾಮಣಿ, ಪೇಟಕರ, ವಿನಾಯಕರಾವ ಜೋಶಿ ಮುಂತಾದ ಶೈಕ್ಷಣಿಕ ಅಧಿಕಾರಿಗಳ ಮನೆಮಾತು ಮರಾಠಿಯಾಗಿದ್ದರೂ, ಕನ್ನಡದ ಬೆಳವಣಿಗೆಗಾಗಿ ಅವರು ಪರಿಶ್ರಮಿಸಿದುದು ಗಮನಾರ್ಹವಾಗಿದೆ."[4] ಇವರಲ್ಲಿ ಕರಂದೀಕರ ಅವರು ಗಳಗನಾಥರಿಗೆ ಹಲವು ರೀತಿಯಲ್ಲಿ ಸಹಾಯ ಮಾಡಿ ಲೇಖನ ಕೆಲಸಕ್ಕೆ ಪ್ರೋತ್ಸಾಹಿಸಿದರಲ್ಲದೆ ಗ್ರಂಥ ಪ್ರಕಟಣೆಗೆ ಧನಸಹಾಯವನ್ನೂ ಮಾಡಿದ್ದಾರೆ. ಒಂದು

1. ಜೀವನ ಶಿಕ್ಷಣ (ವಿಶೇಷ ಸಂಚಿಕೆ) 1957, ಪುಟ 3
2. ಅದೇ, ಪುಟ 3
3. ಶ್ರೀ ಹಳಕಟ್ಟಿ (1854–1926) ಅವರು ವಿದ್ಯಾಖಾತೆಯ ಕಚೇರಿಯಲ್ಲಿ ಕೆಲಸ ಮಾಡಿದರಲ್ಲದೆ ಕೆಲ ಕಾಲ ಪ್ರಾಥಮಿಕ ಶಾಲೆಯಲ್ಲೂ, ಟ್ರೇನಿಂಗ ಕಾಲೇಜಿನಲ್ಲೂ ಶಿಕ್ಷಕರೆಂದು ಕೆಲಸ ಮಾಡಿದ್ದರು. 'ಇಂಗ್ಲಂಡ ದೇಶದ ಇತಿಹಾಸ' (1898), 'ಫ್ರಾನ್ಸದೇಶದ ರಾಜ್ಯಕ್ರಾಂತಿ' (1914) ಮೊದಲಾದ ಐದಾರು ಇತಿಹಾಸ ಗ್ರಂಥಗಳನ್ನೂ ಬರೆದಿರುವರು.
4. ಶ್ರೀನಿವಾಸ ಹಾವನೂರ : ಹೊಸಗನ್ನಡದ ಅರುಣೋದಯ, ಪುಟ 294.

ರೀತಿ ಪಾಲಕರೇ ಆಗಿದ್ದ ಕರಂದೀಕರರನ್ನು ಗಳಗನಾಥರೂ ಬಹು ಕೃತಜ್ಞತೆಯಿಂದ ಕಂಡರು.

ಟ್ರೇನಿಂಗ ಕಾಲೇಜಿನ ಇನ್ನೊಂದು ಮಹತ್ತ್ವದ ಕೆಲಸವೆಂದರೆ ಅದು ಆರಂಭಿಸಿದ ಮಾಸ ಪತ್ರಿಕೆ. ಡೆಪ್ಯೂಟಿ ಚನ್ನಬಸಪ್ಪನವರು 1865ರಲ್ಲಿ ಆರಂಭಿಸಿದ ಮಠ ಪತ್ರಿಕೆಯೇ 1867ರಲ್ಲಿ 'ಶಾಲಾ ಪತ್ರಕ'ವಾಯಿತು. 1871ರಿಂದ ಅದು 'ಕನ್ನಡ ಶಾಲಾಪತ್ರಕ'ವಾಗಿ 1926ರ ವರೆಗೂ ಅದೇ ಹೆಸರಿನಿಂದ ಪ್ರಕಟವಾಗುತ್ತಿದ್ದು, ಈಗ ಅದುವೇ 'ಜೀವನ ಶಿಕ್ಷಣ'ವಾಗಿದೆ. ಈ ಪತ್ರಿಕೆ ಮುಖ್ಯವಾಗಿ ಶಿಕ್ಷಣಕ್ಕೆ ಸಂಬಂಧಿಸಿದ ವಿಷಯಗಳನ್ನೇ ಹೆಚ್ಚಾಗಿ ಪ್ರಕಟಿಸುತ್ತಿತ್ತು. ಅನೇಕ ಶಿಕ್ಷಕರು ಈ ಪತ್ರಿಕೆಯ ಮುಖಾಂತರ ಲೇಖಕರಾಗಿ ಬೆಳಕುಕಂಡರು. 'ಶಾಲಾ ಪತ್ರಿಕೆ'ಯಲ್ಲಿ ಗಳಗನಾಥರೂ ಕೆಲವು ನಿಬಂಧಗಳನ್ನು ಬರೆದಿರುವರು.

ಧಾರವಾಡದ ಈ ವಿದ್ಯಾಲಯದಲ್ಲಿ ಟ್ರೇನಿಂಗ ಪಡೆದು ಲೇಖಕರಾದ ಅನೇಕರಲ್ಲಿ **ವಲ್ಲಭ ಮಹಲಿಂಗ ತಟ್ಟಿ** ಅವರೂ ಗಣ್ಯರು. ಶಾಂತಕವಿಗಳ ಸಹಕಾರಿಗಳಾದ ಇವರು ಗಳಗನಾಥರ 'ಸದ್ಬೋಧ ಚಂದ್ರಿಕೆ'ಗೂ ಧಾರವಾಡದ 'ಪ್ರಭಾತ'ಕ್ಕೂ ಲೇಖನಗಳನ್ನೂ ಕವಿತೆಗಳನ್ನೂ ಬರೆಯುತ್ತಿದ್ದರು. ಅಷ್ಟೇ ಅಲ್ಲದೆ, 'ಬಾಲಮಿತ್ರ' (ಧಾರವಾಡ 1921) ಎಂಬ ಮಾಸಪತ್ರಿಕೆಯ ಸಂಪಾದಕರೂ ಆಗಿದ್ದರು. ಒಂದು ಕಾಲಕ್ಕೆ ಕರ್ನಾಟಕದಲ್ಲಿ ಜನರಿಗೆಲ್ಲ ಸುಪರಿಚಿತವಾದ 'ಮಾತೃಭೂಮಿ ಜನನಿ ನಿನ್ನ ಚರಣಸೇವೆ ಮಾಡುವಾ' ಎಂಬ ರಾಷ್ಟ್ರಗೀತೆಯನ್ನು ಬರೆದವರು ಇವರೇ. 'ಕನ್ನಡಿಗರ ಜನ್ಮಸಾರ್ಥಕತೆ'ಯಂಥ ಚಿಕ್ಕ ಗ್ರಂಥಗಳನ್ನಲ್ಲದೆ 'ಗುರುಪ್ರಸಾದ', 'ಪುನರ್ಜನ್ಮ', 'ಲಕ್ಷ್ಮೀಬಾಯಿ' ಮೊದಲಾದ ಕಾದಂಬರಿಗಳನ್ನೂ ಬರೆದಿರುವರು.

ಹೀಗೆ ಕಾವ್ಯ, ನಾಟಕ, ಕಥೆಕಾದಂಬರಿಗಳನ್ನು ಬರೆದ ಆ ಕಾಲದ ಲೇಖಕರಲ್ಲಿ ಬಹಳ ಜನರು ಟ್ರೇನಿಂಗ ಕಾಲೇಜಿನಿಂದ ಹೊರಬಂದ ಶಿಕ್ಷಕರೇ ಆಗಿದ್ದರು. ಅಂಥವರಲ್ಲಿ **ವಾಮನ ರಾವ ಸವಣೂರ** (1883–1935) ಅವರು ರಬಕವಿಯಲ್ಲಿ ಕೆಲವು ಕಾಲ ಶಿಕ್ಷಕರಾಗಿದ್ದರು. ನಾಟಕಕ್ಕೆ ಒಲಿದ ಅವರು 1907ರಲ್ಲಿ ಶಿರಹಟ್ಟಿಯ 'ಸಂಗೀತ ನಾಟಕ ಮಂಡಲ'ವನ್ನು ಸೇರಿ 'ನಾಟಕದ ಮಾಸ್ತರ'ರಾದರು, ಅನೇಕ ನಾಟಕಗಳನ್ನು ಬರೆದರು, ದಿಗ್ದರ್ಶಕರೂ ಆದರು. ಮುಂದೆ 1914ರಲ್ಲಿ ಸ್ವಂತ 'ವಿಶ್ವಗುಣಾದರ್ಶ ನಾಟಕ ಸಂಘ'ವನ್ನು ಕಟ್ಟಿದರು. ರಂಗಭೂಮಿಯ ಉನ್ನತಿಗಾಗಿ ಬಹಳಷ್ಟು ಹೆಣಗಿದ ಇವರು 'ಲಂಕಾದಹನ', 'ವೀರ ಅಭಿಮನ್ಯು', 'ದ್ರೌಪದೀ ವಸ್ತ್ರಾಪಹರಣ', 'ಕೃಷ್ಣಾರ್ಜುನ ಯುದ್ಧ' ಮೊದಲಾದ 10–12 ನಾಟಕಗಳನ್ನು ಬರೆದರು. ಇಂದಿಗೂ 'ಕಂಪನಿ' ನಾಟಕಕಾರರು ಅವುಗಳಲ್ಲಿ ಕೆಲವನ್ನು ರಂಗಭೂಮಿಯ ಮೇಲೆ ಪ್ರಯೋಗಿಸುತ್ತಿರುವರು.

ಟ್ರೇನಿಂಗ ಕಾಲೇಜಿನಿಂದ ತರಬೇತಿ ಹೊಂದಿದ ಧಾರವಾಡದ **ಉಪೇಂದ್ರ ಶರ್ಮಾ ತೋಳಮಟ್ಟಿ** (ಮರಣ 1929) ಎಂಬುವರು ಪಂಡಿತ ಕವಿಗಳಾಗಿದ್ದರು. ಸ್ವಂತ ಪರಿಶ್ರಮದಿಂದ ಸಂಸ್ಕೃತ, ಬಂಗಾಲಿ ಕಲಿತು ವಂಗಕಾವ್ಯದ ಆಧಾರದಿಂದ 'ಪೃಥ್ವೀರಾಜ ಯುದ್ಧಸಿದ್ಧತೆ' ಎಂಬ ಪದ್ಯ ಗ್ರಂಥವನ್ನು ರಚಿಸಿದ್ದರು. ಅದರ ಒಂದೆರಡು ಪರ್ವಗಳು 'ವಾಗ್ಭೂಷಣ'ದಲ್ಲಿ ಪ್ರಕಟವಾಗಿದ್ದು 1923ರಲ್ಲಿ ಈ ಗ್ರಂಥಕ್ಕೆ 'ಕರ್ನಾಟಕ ವಿದ್ಯಾವರ್ಧಕ ಸಂಘ'ದಿಂದ ಬಹುಮಾನ ದೊರೆತಿದೆ. ಕುವಲಯಾನಂದ ಕೃತ 'ಅಲಂಕಾರದರ್ಪಣ'ದೊಳಗಿನ ಕೆಲವು ಪದ್ಯಗಳನ್ನು ಕನ್ನಡಿಸಿ 1914ರಲ್ಲಿ 'ಕನ್ನಡ ಶಾಲಾ ಪತ್ರಕ'ದಲ್ಲಿ ಪ್ರಕಟಿಸಿದ್ದರು.

**ಕಲ್ಲೋ ಗಣೇಶ ಬಿಜಾಪುರ** ಅವರಂತೂ 3ನೆಯ ವರ್ಷದ ಪರೀಕ್ಷೆಯಲ್ಲಿ ಪ್ರಥಮ ವರ್ಗದಲ್ಲಿ ಪಾಸಾಗಿ ಬೆಳಗಾವಿ ಜಿಲ್ಲೆಯಲ್ಲಿ ಹೆಡ್‌ಮಾಸ್ತರರೆಂದು ನೇಮಕಗೊಂಡರು. ಬೆಳಗಾವಿಯ ಕನ್ನಡ ಚಟುವಟಿಕೆಗಳಲ್ಲಿ ಆಸಕ್ತಿಯಿಂದ ಕಾರ್ಯಮಾಡಿದರು. ಬೆಳಗಾವಿಯ 'ವಾಙ್ಮಯ ವರ್ಧಕ ಗ್ರಂಥಮಾಲೆ' ಮತ್ತು 'ಭುವನೇಶ್ವರೀ ಗ್ರಂಥಮಾಲೆ'ಗಳ ಸಂಚಾಲಕರಾಗಿದ್ದರು. ಶಿಕ್ಷಣ, ಇತಿಹಾಸ, ಕಥೆ, ನಾಟಕ ಮೊದಲಾದ ಸುಮಾರು 25 ಗ್ರಂಥಗಳನ್ನು ಬರೆದಿರುವರು. ಅವರ 'ಭೀಷಣ ಚಿತ್ರ', 'ಕನ್ನಡ ಕೇಸರಿ', 'ಕರ್ಮವೀರ', 'ವಿಚಿತ್ರ ಕೊಲೆ', 'ವರದಕ್ಷಿಣೆ' ಮೊದಲಾದ ಚಿಕ್ಕ ಕಾದಂಬರಿಗಳು ವಾಚನೀಯವಾಗಿವೆ.

ಆದರ್ಶ ಶಿಕ್ಷಕರೆಂದು ಹೆಸರಾದ ಸವಣೂರಿನ ಗೋವಿಂದ ವೆಂಕಟೇಶ ದೇಶಪಾಂಡೆ (1860–1945)ಯವರೂ ಧಾರವಾಡದ ಟ್ರೇನಿಂಗ ಕಾಲೇಜಿನಲ್ಲಿ ಮೂರು ವರ್ಷ ಕಲಿತವರೇ ಆಗಿದ್ದಾರೆ. **ಅಮ್ಮಿನಭಾವಿ ತಮ್ಮಣ್ಣನವರೂ** ಟ್ರೇನಿಂಗ ಪಡೆದ ಶಿಕ್ಷಕರೇ. ಗಳಗನಾಥರ ಜೊತೆಗೆ ಇವರೂ ಮುಂಬಯಿ ಪ್ರಾಂತದಲ್ಲಿಯ ಆದರ್ಶ ಶಾಲೆಗಳಿಗೆ ಭೆಟ್ಟಿಕೊಟ್ಟರು. 'ಸದ್ಬೋಧ ಚಂದ್ರಿಕೆ'ಯಲ್ಲಿ ಇವರ ಅನೇಕ ಲೇಖನಗಳೂ ಗ್ರಂಥಗಳೂ ಕ್ರಮವಾಗಿ ಪ್ರಕಟವಾದುವು. ಮಕ್ಕಳ ಕಥೆಗಳು ಮತ್ತು ಶೈಕ್ಷಣಿಕ ಗ್ರಂಥಗಳನ್ನಲ್ಲದೆ 'ವೇಣಿಬಂಧನ' 'ಸೂರ್ಯಗ್ರಹಣ'ದಂಥ ಕಾದಂಬರಿಗಳನ್ನೂ 'ಮುರಾರರಾವ' ಎಂಬ ಪತ್ತೇದಾರಿ ಕಾದಂಬರಿಯನ್ನೂ ಅವರು ಭಾಷಾಂತರಿಸಿರುವರು. ಪಾರಿಶ್ವಾಡದ ಬಸವಾರ್ಯ ಹಿರೇಮಠರು (1876–1921) ಕೆ. ಬಸವಾರ್ಯ ಎಂಬ ಕಾವ್ಯನಾಮದಿಂದ ಅನೇಕ ಹಾಡುಗಳನ್ನೂ ಲಾವಣಿಗಳನ್ನೂ ಬರೆದರು. ಅವರ 'ಮಂಟೂರ ಲಾವಣಿ' 'ತ್ಯಾಗವೀರ ಶಿರಸಂಗಿ ಲಿಂಗರಾಜರ ಸ್ತವನ'ಗಳು ಜನಪ್ರಿಯವಾಗಿದ್ದುವು.

ಬೆಳಗಾವಿಯ **ಪಂ. ಭೀಮಾಜೀ ಹುಲಕವಿ** ಅವರೂ ಟ್ರೇನಿಂಗ ಕಾಲೇಜಿನಲ್ಲಿ ಮೂರು ವರ್ಷ ಟ್ರೇನಿಂಗ ಪಡೆದವರೇ. ಅವರು 'ಅತ್ತೆಯ ಮನೆಯ ಕಾಟ', 'ದುಷ್ಕರ್ಮ ಪರಿಪಾಕ', 'ಹತಭಾಗಿನಿಯಾದ ವಿಮಲೆ', 'ನರಗುಂದ ಬಂಡಾಯ' ಮೊದಲಾದ ಕಾದಂಬರಿಗಳನ್ನೂ, ಕೆಲವು ನಾಟಕಗಳನ್ನೂ ಬರೆದಿರುವರು. ಹೆಚ್ಚಿನ ಸಂಖ್ಯೆಯ ಗ್ರಂಥಗಳನ್ನು ಬರೆಯದಿದ್ದರೂ ಧಾರವಾಡದ ಭೀಮಾಜೀ ಶ್ರೀನಿವಾಸ ಅಡಬಡ್ಡಿ (1860–1894) ಅವರು ಟ್ರೇನಿಂಗ ಕಾಲೇಜಿನಲ್ಲಿ ನಾಲ್ಕು ವರ್ಷ ವ್ಯಾಸಂಗ ಮಾಡಿದರು. 'ಕರ್ನಾಟಕ ವಿದ್ಯಾವರ್ಧಕ ಸಂಘ'ದಿಂದ ಕಾವ್ಯ ರಚನೆಗಾಗಿ ಬಹುಮಾನ ಪಡೆದಿದ್ದರು. ಧರ್ಮ, ವ್ಯಾಕರಣಗಳನ್ನು ಕುರಿತು ಗ್ರಂಥಗಳನ್ನಲ್ಲದೆ ಒಂದೆರಡು ನಾಟಕಗಳನ್ನೂ ಬರೆದಿರುವರು.

ಗಳಗನಾಥರು ಜನಿಸಿದ ವರ್ಷವೇ ಜನಿಸಿದ, ಹಾವೇರಿ ತಾಲೂಕಿನ ಮಲ್ಲೂರಿನವರಾದ **ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿ** (1869–1918) ಅವರೂ ಧಾರವಾಡ ಟ್ರೇನಿಂಗ ಕಾಲೇಜಿನಿಂದ ಮೂರು ವರ್ಷ ಶಿಕ್ಷಣ ಪಡೆದು 1890ರಲ್ಲಿ ಹೊರಬಂದರು. ಧಾರವಾಡ ಜಿಲ್ಲೆಯ ಅನೇಕ ಗ್ರಾಮಗಳಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. 'ನಾಡ ನೆಲೆಗಾರ'ವು ಇವರಿಗೆ ಕಥೆಗಾರರೆಂಬ ಖ್ಯಾತಿಯನ್ನು ತಂದುಕೊಟ್ಟಿತು. 'ನಾಡ ನೆಲೆಗಾರ'ದ ಕಥೆಗಳು ಬಾಲಕರಿಗೆ ನೀತಿಬೋಧನೆ ಮಾಡುವ ಉದ್ದೇಶದಿಂದ ಬರೆದವುಗಳಾದರೂ, ಸರಳ ಸುಂದರ ನಿರೂಪಣೆಯಿಂದ ಬಹುಬೇಗನೇ ಜನಪ್ರಿಯವಾದವು. ಇವರು 'ಹಿತೋಪದೇಶ'ವನ್ನು ಸರಳ ಕನ್ನಡದಲ್ಲಿ ಅನುವಾದಿಸಿದರಲ್ಲದೆ, 'ಜೇನಿಗರ ಲಘು ಚಿಂತಾಮಣಿ' (1915) ಎಂಬ ವೈದ್ಯ ಗ್ರಂಥ

ವನ್ನೂ, 'ನನ್ನ ತಾಯಿ' ಎಂಬ ಕಾದಂಬರಿಯನ್ನೂ ಬರೆದಿರುವರು. 'ಗೌರೀಶಂ' ಎಂಬ ಕಾವ್ಯ ನಾಮದಿಂದ ಬರೆಯುತ್ತಿದ್ದ ಅವರು 'ಕರ್ನಾಟಕ ವಿದ್ಯಾವರ್ಧಕ ಸಂಘ'ದಲ್ಲೂ ಆಸ್ಥೆ ವಹಿಸಿದ್ದರು.

ಧಾರವಾಡದ ಟ್ರೇನಿಂಗ ಕಾಲೇಜಿನಲ್ಲಿ ಗಳಗನಾಥರ ಶಿಷ್ಯರಾಗಿದ್ದ ಕೇಶವ ರಂಗಭಟ್ಟ ಜೋಶಿ (ಪಂಡಿತ ಕೇಶವಶರ್ಮಾ ಗಲಗಲಿ) ಅವರೂ ಒಳ್ಳೆಯ ಶಿಕ್ಷಕರೆಂದೂ, ಲೇಖಕರೆಂದೂ ಖ್ಯಾತರಾದರು. ಜ್ಯೋತಿಷ್ಯ ಶಾಸ್ತ್ರದಲ್ಲಿ ಪರಿಣತರಾದ ಇವರು ಆ ಶಾಸ್ತ್ರಕ್ಕೆ ಸಂಬಂಧಪಟ್ಟ ಕೆಲವು ಪ್ರೌಢ ಗ್ರಂಥಗಳನ್ನು ಬರೆದಿರುವರು. ಅವರ 'ನೂರಜಹಾನ' ಎಂಬುದು ಐತಿಹಾಸಿಕ ಕಾದಂಬರಿಯಾಗಿದೆ. 'ಪಂಡಿತರಾಜ' ಎಂಬ ಚಾರಿತ್ರಿಕ ಕಾವ್ಯವು 1920ರಲ್ಲಿ 'ವಾಗ್ಭೂಷಣ'ದಲ್ಲಿ ಪ್ರಕಟವಾಯಿತು. ಮುಳುಗುಂದ ಗ್ರಾಮದ ಗೋವಿಂದ ಹಣಮಂತ ಹೊಸೂರ ಅವರೂ ಮೂರು ವರ್ಷದ ಟ್ರೇನಿಂಗ ಪಡೆದ ಶಿಕ್ಷಕರೇ. 'ಕಲಕತ್ತೆಯ ನಿಖಿಲ ಭಾರತ ಸಾಹಿತ್ಯ ಸಂಘ'ದವರಿಂದ 'ಕರ್ನಾಟಕ ವಿದ್ಯಾವಿನೋದಿ' ಎಂಬ ಪ್ರಶಸ್ತಿ ಪಡೆದವರಾದ[1] ಇವರು 'ಗೃಹಲಕ್ಷ್ಮಿ' (1920) 'ವಿಂಧ್ಯಾಚಲ' (1923) ಮೊದಲಾದ ಕಾದಂಬರಿಗಳನ್ನೂ ಇತರ ಗ್ರಂಥಗಳನ್ನೂ ಬರೆದಿರುವ ದೇಶಪ್ರೇಮೀ ಶಿಕ್ಷಕರು.

ಗೋಕಾಕ ತಾಲೂಕಿನ ಸುಣಧೋಳಿಯ **ಸಿದ್ಧಗಿರಿಯಪ್ಪ ರೇವಪ್ಪ ಸಬರದ** (1884–1935) ಅವರೂ ಕೂಡ ಧಾರವಾಡ ಟ್ರೇನಿಂಗ ಕಾಲೇಜಿನಲ್ಲಿ ಮೂರು ವರ್ಷ ಶಿಕ್ಷಣ ಪಡೆದವರೇ. ಅನೇಕ ವರ್ಷ ಉಪಾಧ್ಯಾಯರಾಗಿದ್ದ ಸಬರದರು ಮುಂದೆ ಕೆಲ ವರ್ಷ ಅಸಿಸ್ಟೆಂಟ್ ಡೆಪ್ಯೂಟಿ ಇನಸ್ಪೆಕ್ಟರರೆಂದೂ ಕೆಲಸ ಮಾಡಿದರು. 'ಚಾಲುಕ್ಯರ ಪುಲಕೇಶಿ', 'ರಾಜಸಿಂಹ', 'ರಾಣಾಪ್ರತಾಪಸಿಂಹ', 'ಹೇಮಚಂದ್ರ' ಮೊದಲಾದುವು ಇವರ ಕೃತಿಗಳು. 'ಹೇಮಚಂದ್ರ'ವು ಬಂಗಾಲಿಯ ಪ್ರಸಿದ್ಧ 'ಮೃಣಾಲಿನಿ' ಎಂಬ ಕಾದಂಬರಿಯ ಭಾಷಾಂತರ ವಾಗಿದೆ. ಇವರು 'ವಾಗ್ಭೂಷಣ'ದ ಲೇಖಕರಲ್ಲಿ ಒಬ್ಬರಾಗಿದ್ದರು. ಬಸವಾರ್ಯ ಬೂದಪ್ಪಯ್ಯ ಬೂದೀಹಾಳಮಠ ಅವರೂ ಸಬರದರಂತೆ ಟ್ರೇನಿಂಗ ಕಾಲೇಜಿನಲ್ಲಿ ಮೂರು ವರ್ಷ ಶಿಕ್ಷಣ ಪಡೆದು, ಶಿಕ್ಷಕರಾಗಿ ಕೊನೆಗೆ ಅಸಿಸ್ಟೆಂಟ ಡೆಪ್ಯೂಟಿ ಇನಸ್ಪೆಕ್ಟರಾದವರು. ಅವರು 'ದಿವ್ಯಸುಂದರಿ' (1918), 'ವಿಚಿತ್ರ ಕಾರಸ್ಥಾನ' (1919), 'ದಮಯಂತಿ' (1921) ಮೊದಲಾದ ಕಾದಂಬರಿಗಳನ್ನು ಬರೆದಿರುವರು.

ಅಭಿಜ್ಞಕವಿ ಎಂಬ ಪ್ರಶಸ್ತಿಯನ್ನು ಪಡೆದ ನಾಟಕಕಾರರಾದ ಸುಬ್ಬಣ್ಣಾಚಾರ್ಯ ಅಡಬಡ್ಡಿ (1884–1936) ಅವರೂ ಧಾರವಾಡ ಟ್ರೇನಿಂಗ ಕಾಲೇಜಿನಲ್ಲಿ ಎರಡು ವರ್ಷದ ಟ್ರೇನಿಂಗ ಪಡೆದು ಶಿಕ್ಷಕರಾದರು. 'ಕುಮುದಿನಿ', 'ವಿಕ್ರಮವಿಜಯ' ಮೊದಲಾದ ೫-೬ ನಾಟಕ ಗಳನ್ನು ಬರೆದು, ರಂಗಭೂಮಿಯ ಮೇಲೆ ತಂದರು. ಮೈಸೂರು ಅರಮನೆಯ ನಾಟಕ ಶಾಲೆಯಲ್ಲಿ ಕೃಷ್ಣರಾಜ ಪ್ರಭುಗಳ ಸಮ್ಮುಖದಲ್ಲಿ ಇವರ 'ವಿವೇಕವಿಜಯ' ಎಂಬ ನಾಟಕವು ಶಿರಹಟ್ಟಿಯ ಲಕ್ಷ್ಮೀಪ್ರಾಸಾದಿಕ ಸಂಗೀತ ನಾಟಕ ಮಂಡಲಿಯವರಿಂದ ಅಭಿನಯಿಸಲ್ಪಟ್ಟು ಸರ್ವರ ಮೆಚ್ಚುಗೆಗೆ ಪಾತ್ರವಾಯಿತು. (1911)"[2]

---

1. ವೆಂಕಟೇಶ ಸಾಂಗಲಿ : ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಪುಟ 44
2. ಅದೇ, ಪುಟ 204

ಕಾವ್ಯರತ್ನ ರಾವಜಿ ಬಾಳಕೃಷ್ಣ ಕುಲಕರ್ಣಿ (1887–1953) ಅವರು ಟ್ರೇನಿಂಗ ಕಾಲೇಜಿನಿಂದ ಪ್ರಥಮರಾಗಿ ಉತ್ತೀರ್ಣರಾದ ಪ್ರತಿಭಾವಂತರು. ಸ್ವಂತ ಪರಿಶ್ರಮದಿಂದ ಸಂಸ್ಕೃತ, ಪಾಲಿ ಮತ್ತು ಇಂಗ್ಲೀಷ ಭಾಷೆಗಳಲ್ಲಿ ಪರಿಣತಿ ಪಡೆದರು. ಪ್ರಾಥಮಿಕ ಶಿಕ್ಷಕರಾಗಿ ಆರಂಭಿಸಿ ಅನಂತರ ಮ್ಯಾಟ್ರಿಕ್ ಪಾಸಾಗಿ ಬೆಳಗಾವಿಯ ಬಿ. ಕೆ. ಮಾಡೆಲ್ ಹೈಸ್ಕೂಲಿನಲ್ಲಿ ಶಿಕ್ಷಕರಾಗಿ ನಿವೃತ್ತರಾದರು. ಬೆಳಗಾವಿಯ 'ಮಾತೃಭೂಮಿ' ಮಾಸಪತ್ರಿಕೆ ಮತ್ತು 'ನವಜೀವನ ಗ್ರಂಥಮಾಲೆ'ಯ ಸಂಪಾದಕರಾಗಿದ್ದರು. ಇವರ 'ಕನ್ನಡಿಗನ ಸರ್ವಸ್ವ' 'ಕರ್ನಾಟಕ ಏಕೀಕರಣ' ಗ್ರಂಥಗಳಿಗೆ ಬಹುಮಾನಗಳು ದೊರೆತುವು. ಆಶುಕವಿಗಳಾದ ಇವರು 'ಠಕ್ಕಪ್ಪ ಲುಚ್ಚಾರಾಮ' ಎಂಬ ಕಾದಂಬರಿಯನ್ನೂ, ಅಭಿನವ ನೀತಿಶತಕ, ಗೀತಾಶತಕ, ಮೊದಲಾದ ಐದು ಶತಕಗಳನ್ನೂ ಬರೆದರು.

ಆರ್. ಬಿ. ಕುಲಕರ್ಣಿಯವರ ಸಮಕಾಲೀನರಾದ **ರಾಮಚಂದ್ರ ತ್ರ್ಯಂಬಕ ಕರ್ಪೂರ** (1883–1929) ಇವರೂ ಧಾರವಾಡ ಟ್ರೇನಿಂಗ ಕಾಲೇಜಿನಲ್ಲಿ ಕಲಿತ ಶಿಕ್ಷಕರೇ. ಇವರು ಗಳಗನಾಥರ 'ಸದ್ಬೋಧ ಚಂದ್ರಿಕೆ'ಯ ಪ್ರಮುಖ ಲೇಖಕರಲ್ಲಿ ಒಬ್ಬರಾಗಿದ್ದರು. 1918ರ ಸುಮಾರಿಗೆ ಶಿಕ್ಷಕ ವೃತ್ತಿಯನ್ನು ತ್ಯಜಿಸಿ ಅಗಡಿಯ ಆನಂದವನದಲ್ಲಿಯೇ ನೆಲಸಿ, ಲೇಖನ ವ್ಯವಸಾಯದಲ್ಲಿ ನಿರತರಾದರು. 'ಕನ್ನಡಿಗರ ಕಾರಸ್ಥಾನ', 'ಚಿಮಣಾಜಿ ಅಪ್ಪಾ', 'ಪರಶುರಾಮ ಪರಾಜಯ', 'ಮನೋರಮಾ', 'ಮರಾಠರ ಅವನತಿ' ಮೊದಲಾದ ಒಂಬತ್ತು ಕಾದಂಬರಿಗಳನ್ನೂ, ಶಂಕರ ಭಗವಾನ್ ಸರಸ್ವತೀ ಸ್ವಾಮಿಗಳ ಚರಿತ್ರೆಯನ್ನೂ ಬರೆದಿರುವರು. ನಾರಾಯಣ ವೆಂಕಟೇಶ ಕುರಡಿ ಅವರೂ ಟ್ರೇನಿಂಗ ಕಾಲೇಜಿನಲ್ಲಿ ತರಬೇತಿ ಹೊಂದಿ, ಅಲ್ಲಿಯೇ 'ಪ್ರ್ಯಾಕ್ಟೀಸಿಂಗ ಸ್ಕೂಲಿ'ನಲ್ಲಿ ಶಿಕ್ಷಕರಾದರು. ಮುಂದೆ ಕೆಲ ಕಾಲ ಅಸಿಸ್ಟೆಂಟ್ ಡೆಪ್ಯೂಟಿ ಇನಸ್ಪೆಕ್ಟರಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ವಿದ್ಯಾವರ್ಧಕ ಸಂಘಗಳ ವಿಶೇಷ ಸಂಬಂಧ ಹೊಂದಿದ ಕುರಡಿಯವರು ಕೆಲಕಾಲ 'ವಾಗ್ಭೂಷಣ'ದ ಸಂಪಾದಕರೂ ಆಗಿದ್ದರು. 'ಸಾವಿತ್ರಿ–ಸತ್ಯವಾನ', 'ಪದ್ಮಿನಿ', 'ಮಹಾರಾಣಿ ಲಕ್ಷ್ಮೀಬಾಯಿ' ಮೊದಲಾದ ಕಾದಂಬರಿಗಳನ್ನಲ್ಲದೆ 'ಕವಿತಾ ಕುಸುಮ ಮಂಜರಿ' (3 ಭಾಗಗಳು) 'ಸತ್ಕಥಾ ಕುಸುಮ ಮಂಜರಿ' (4 ಭಾಗಗಳು) ಗಳನ್ನು ವಿದ್ಯಾರ್ಥಿಗಳಿಗಾಗಿ ಬರೆದರು.

ಹೀಗೆ ಧಾರವಾಡ ಟ್ರೇನಿಂಗ ಕಾಲೇಜಿನಲ್ಲಿ ವ್ಯಾಸಂಗ ಮಾಡಿದ ಹಲವಾರು ಶಿಕ್ಷಕರು 19ನೆಯ ಶತಮಾನದ ಕೊನೆಯ ಭಾಗದಲ್ಲೂ 20ನೆಯ ಶತಮಾನದ ಆದಿ ಭಾಗದಲ್ಲೂ ಲೇಖನ ಕಾರ್ಯದಲ್ಲಿ ತೊಡಗಿರುವರು. ಹಾಗೆ ಟ್ರೇನಿಂಗ ಪಡೆಯದ ಕೆಲವು ಶಿಕ್ಷಕರೂ ಗ್ರಂಥಗಳನ್ನು ಬರೆದ ಉದಾಹರಣೆಗಳು ಸಿಗುತ್ತವೆ. ಅವರಲ್ಲಿ ಧಾರವಾಡ ಜಿಲ್ಲೆಯ ಗಜೇಂದ್ರಗಡದವರಾದ ಗೂಳಪ್ಪ ಕೊಟ್ರಪ್ಪ ಅರಳಿ ಅವರು ಅಗ್ರಗಣ್ಯರೆನ್ನಬೇಕು. ಕನ್ನಡ ಶಾಲೆಯ ಶಿಕ್ಷಕರಾದ ಇವರು 'ಕನ್ನಡ ಶೌರ್ಯ ಸಾಗರ' ಎಂಬ ಕಾಲ್ಪನಿಕ ಕಾದಂಬರಿಯನ್ನು, ಗಳಗನಾಥರ 'ಪದ್ಮನಯನಾ' (1898) ಪ್ರಕಟವಾದ ಮರುವರ್ಷವೇ ಬರೆದು, ಕರ್ನಾಟಕ ವಿದ್ಯಾವರ್ಧಕ ಸಂಘದ ಬಹುಮಾನವನ್ನು ಪಡೆದಿದ್ದರು. 'ಶೌರ್ಯ ಸಾಗರ'ವೂ 'ಪದ್ಮನಯನಾ' ಜಾತಿಯ ಕಾದಂಬರಿಯೇ ಆಗಿದೆ. ಅದರಂತೆ ಅದೇ ಗಜೇಂದ್ರಗಡದ ಶಂಕರ ಅಣ್ಣಾಜಿ ಕುಲಕರ್ಣಿ (1875–1929) ಅವರು ಕನ್ನಡ ಶಾಲೆಯ ಉಪಾಧ್ಯಾಯರಾಗಿದ್ದುಕೊಂಡು ಸಂಸ್ಕೃತ, ಮರಾಠಿ, ಬಂಗಾಲಿ ಭಾಷೆಗಳನ್ನು ಕಲಿತುಕೊಂಡರು. 'ಗಂಗಾ ಲಹರಿ'ಯನ್ನು

ಸಂಸ್ಕೃತದಿಂದ ಕನ್ನಡಕ್ಕೆ ಅನುವಾದ ಮಾಡಿದ್ದಲ್ಲದೆ, ಅವರು 'ಅರುಂಧತೀ', 'ಜಕಣಾಚಾರ್ಯ' 'ಜಯ ಪರಾಜಯ', 'ವಿಕಾರ ವಿನಾಶ', 'ಸತೀ ಶಿರೋಮಣಿ' ಮೊದಲಾದ ಹಲವು ಕಾದಂಬರಿಗಳನ್ನು ಬರೆದರು. ಅವುಗಳಲ್ಲಿ ಬಹಳ ಕಾದಂಬರಿಗಳು ಅನುವಾದವಾಗಿವೆ. 'ಭಯಂಕರ ಕೊಲೆ'ಯಂಥ ಪತ್ತೇದಾರಿ ಕಾದಂಬರಿಯನ್ನೂ ಅವರು ಬರೆದಿರುವದು ಗಮನಾರ್ಹವಾಗಿದೆ. ಇದು 1930ರಲ್ಲಿ ದ್ವಿತೀಯ ಮುದ್ರಣದ ಭಾಗ್ಯವನ್ನೂ ಪಡೆಯಿತು. ಬನಹಟ್ಟಿಯ ತಮ್ಮಪ್ಪಣ್ಣಾ ಸತ್ಯಪ್ಪಾ ಚಿಕ್ಕೋಡಿ (1862–1934) ಅವರು ಕೆಲಕಾಲ ಮಾತ್ರ ಶಿಕ್ಷಕರಾಗಿದ್ದರು. ಒಳ್ಳೆಯ ಕನ್ನಡಾಭಿಮಾನಿಗಳಾದ ಇವರು ನಾಲ್ಕು ನಾಟಕಗಳನ್ನು ಬರೆದಿರುವರು. ಹೊಳೆಮಣ್ಣೂರಿನ ಶಾಲೆಯ ಶಿಕ್ಷಕರಾಗಿದ್ದ ಅನಂತ ಅಣ್ಣಾಜಿ ಮಂಟಗಣೀಕರ ಅವರು 'ಸ್ವಾಮಿ ವಿವೇಕಾನಂದ' (1912), 'ನೀತಿಶತಕ' (1916), 'ಕರ್ಮವೀರ ಗಾಂಧೀಜಿಯವರು' (1918) ಎಂಬ ಗ್ರಂಥಗಳನ್ನು ಬರೆದಿರುವರು.

ಹೀಗೆ ಕನ್ನಡ ಶಾಲೆಯ ಶಿಕ್ಷಕರಿಂದ 20ನೆಯ ಶತಮಾನದ ಆದಿ ಭಾಗದಲ್ಲಿ ಸಾಹಿತ್ಯ ನಿರ್ಮಿತಿಯ ಕೆಲಸ ಗಣ್ಯಪ್ರಮಾಣದಲ್ಲಿ ನಡೆಯಿತು. "19ನೆಯ ಶತಮಾನದ ಕನ್ನಡ ಸಾಹಿತ್ಯಕ್ಕೆ ಸಲ್ಲಿಸಲ್ಪಟ್ಟ ಅಮೋಘ ಕಾಣಿಕೆ ಕನ್ನಡ ಶಿಕ್ಷಕರಿಂದ ಎಂಬ ಮಾತು ಮಹತ್ವದ್ದಾಗಿದೆ. ಕನ್ನಡ ಸಾಹಿತ್ಯಕ್ಕೆ ಮುದ್ದಣ ಮನೋರಮೆಯರಂಥ ಸರಸ ಪಾತ್ರಗಳನ್ನು ನೀಡಿದ ನಂದಳಿಕೆ ಲಕ್ಷ್ಮೀ-ನಾರಾಯಣಪ್ಪನವರು ದಕ್ಷಿಣ ಕನ್ನಡದ ಉಡುಪಿಯಲ್ಲಿ ಇದೇ ಕಾಲಕ್ಕೆ ಶಿಕ್ಷಕರಾಗಿದ್ದರು...... ಧಾರವಾಡ ಭಾಗದಲ್ಲಿಯಂತೂ 19ನೆಯ ಶತಮಾನದ ಸಾಹಿತಿಗಳಲ್ಲಿ ಶಿಕ್ಷಕರು ಇಲ್ಲವೆ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದವರೇ ಹೆಚ್ಚಾಗಿದ್ದಾರೆ...."[1] ಧಾರವಾಡದ ಟ್ರೇನಿಂಗ ಕಾಲೇಜು ಇಂಥ ಶಿಕ್ಷಕರಿಗೆ ನಿಜವಾಗಿಯೂ ಒಂದು ಸಾಹಿತ್ಯಶಿಕ್ಷಣ ಸಂಸ್ಥೆಯಾಗಿದ್ದಿತೆಂದರೆ ಅತಿಶಯೋಕ್ತಿಯಾಗಲಾರದು. ಅಲ್ಲಿ ಒಂದು ಪರಂಪರೆಯೇ ಆರಂಭವಾಯಿತು. ಈ ಟ್ರೇನಿಂಗ ಸಂಸ್ಥೆಯು ಬೆಳಗಾವಿಯಲ್ಲಿದ್ದಾಗ, ಅದನ್ನು ಅಲ್ಲಿಂದ ಧಾರವಾಡಕ್ಕೆ ಸ್ಥಳಾಂತರಿಸಬೇಕೆಂದು ಸರಕಾರಕ್ಕೆ 1868ರಲ್ಲಿ ಮನವಿಯನ್ನು ಅರ್ಪಿಸುತ್ತ ಆ ಸಂಸ್ಥೆಯ ಪ್ರಿನ್ಸಿಪಾಲರಾಗಿದ್ದ ಹುಯಿಲಗೋಳ ಭುಜಂಗರಾಯರು "ಟ್ರೇನಿಂಗ ಕಾಲೇಜು ಕನ್ನಡ ವಾಙ್ಮಯದ ಮಾತೃಸ್ಥಾನವು....."[2] ಎಂದು ಬರೆದಿದ್ದರು. ಬಹುಶಃ ಭುಜಂಗರಾಯರು ಅಂತರ್ದೃಷ್ಟಿಯಿಂದ ಈ ಮಾತನ್ನು ನುಡಿದರೇನೋ! ಅಂತೂ ಅದು ಅಕ್ಷರಶಃ ನಿಜವಾಯಿತು. ಇದೇ ಟ್ರೇನಿಂಗ ಕಾಲೇಜಿನಲ್ಲಿ ಕಲಿತು ಹೆಸರಾದ ಪಂಡಿತ ಕೇಶವ ಶರ್ಮಾ ಗಲಗಲಿ ಅವರು, "ಧಾರವಾಡ ಟ್ರೇನಿಂಗ ಕಾಲೇಜೆಂದರೆ ಬಡವರಿಗೆ ಅನ್ನದಾನ ಮಾಡುವ ಸಂಸ್ಥೆ. ಯಾಕೆಂದರೆ ಇಂಗ್ರೇಜಿ ಕಲಿಯಲು ಶಕ್ತಿಯಿಲ್ಲದ ಮಕ್ಕಳು ಆಗ ಟ್ರೇನಿಂಗ ಕಾಲೇಜಕ್ಕೆ ಕಳಿಸಲ್ಪಡುತ್ತಿದ್ದರು. ಮತ್ತು ಅನ್ನ ಗಳಿಸುವ ಮಾರ್ಗವನ್ನು ಕಾಣುತ್ತಿದ್ದರು. ಇದು ಕೇವಲ ಜಠರರಕ್ಷಣೆಯ ದಾರಿಯನ್ನು ತೋರಿಸುತ್ತಿತ್ತಷ್ಟೇ ಅಲ್ಲ, ಅನೇಕ ಜ್ಞಾನಪಿಪಾಸುಗಳನ್ನು ಹುಟ್ಟಿಸಿ ಶಾಶ್ವತ ಕೀರ್ತಿಯನ್ನು ಗಳಿಸಿಕೊಂಡಿದೆ. ಶ್ರೀ ಶಾಂತಕವಿ, ಗಳಗನಾಥ, ಪೂಜಾರ, ಹುಲಿಕವಿ, ಶಂ. ಬಾ. ಜೋಶಿ, ಉಪೇಂದ್ರಶರ್ಮಾ ತೋಳಮಟ್ಟಿ ಮೊದಲಾದ ವಿದ್ವಾಂಸರನ್ನು, ಕವಿಗಳನ್ನು, ಗ್ರಂಥಕಾರರನ್ನು ಹುಟ್ಟಿಸಿದೆ. ಪದವೀಧರರಿಗಿಂತ ಹೆಚ್ಚಿನ ಕೀರ್ತಿಯನ್ನು ಇಲ್ಲಿ ಟ್ರೇಂಡರಾದವರು ಕನ್ನಡ ಭಾಷೆಗೆ ತಂದುಕೊಟ್ಟಿರುವರು. ಆಗಂತೂ

1. ಎನ್. ಕೆ. ಕುಲಕರ್ಣಿ, ವಾಗ್ಭೂಷಣ 1973, ಪುಟ 168–169
2. 'ಜೀವನ ಶಿಕ್ಷಣ' – ವಿಶೇಷ ಸಂಚಿಕೆ, 1957, ಪುಟ 33

ಟ್ರೇಂಡರೇ ಕನ್ನಡ ಭಕ್ತರು. ಪದವೀಧರರಿಗೆ ಕನ್ನಡದ ಬಗ್ಗೆ ಆದರವಿರಲಿಲ್ಲ."[1] ಎಂದು ನುಡಿದಿರುವಲ್ಲಿ ಟ್ರೇನಿಂಗ ಕಾಲೇಜಿನ ಬಗ್ಗೆ ಅವರ ಆದರ-ಅಭಿಮಾನಗಳು ವ್ಯಕ್ತವಾಗಿರುವುದರ ಜೊತೆಗೆ, ಆಗಿನ ವಸ್ತುಸ್ಥಿತಿಯ ಕಲ್ಪನೆಯೂ ಬರುವಂತಿದೆ.

ಹೀಗೆ, ಕನ್ನಡ ನಿಷ್ಠೆಯ ಗಂಗೋತ್ರಿಯಂತಿದ್ದ ಈ ಟ್ರೇನಿಂಗ ಕಾಲೇಜು ಉತ್ತರ ಕರ್ನಾಟಕದಲ್ಲಿ ಒಂದು ಅತಿ ಮಹತ್ತ್ವದ ಸಂಸ್ಥೆಯಾಗಿ ಕಾರ್ಯಮಾಡಿತು. ಈ ಕಾಲೇಜಿನಿಂದಲೇ ಉತ್ತರ ಕರ್ನಾಟಕದಲ್ಲಿ ಕನ್ನಡವು ಪುನಃ ತಲೆಯೆತ್ತಿ ನಿಲ್ಲುವಂತಾಯಿತು. ಅದು ಗಳಗನಾಥರಿಗೆ ಮಾತೃಸಂಸ್ಥೆಯಾದಂತೆ, ಮುಂಬಯಿ ಕರ್ನಾಟಕದಲ್ಲಿ ಹೊಸಗನ್ನಡ ಸಾಹಿತ್ಯದ ಸೃಷ್ಟಿಕರ್ತರ ಮಾತೃಸಂಸ್ಥೆಯೂ ಆಯಿತು.

ಆ ಕಾಲದ ಸಾಹಿತ್ಯವನ್ನು ಸೃಷ್ಟಿಸಿದವರಲ್ಲಿ ಬಹುಸಂಖ್ಯರು ಶಿಕ್ಷಕರೇ ಆಗಿದ್ದರೆಂಬುದು ಸತ್ಯವೇ ಆದರೂ, ಶಿಕ್ಷಕೇತರ ಬರಹಗಾರರೂ ಇಲ್ಲದಿಲ್ಲ. ಅವರಲ್ಲಿ ವಿಜಾಪುರದ ಕೃಷ್ಣ ಶ್ರೀನಿವಾಸ ಹುನಗುಂದ (1860–1925) ಅವರು ಬಿ. ಎ. ಪದವೀಧರರಾಗಿ ಮುಂಬಯಿ ವಿದ್ಯಾಖಾತೆಯನ್ನು ಸೇರಿದ್ದರೂ ಸಾಹಿತ್ಯಿಕ ಆಸಕ್ತಿಯುಳ್ಳವರು. 'ಉತ್ತರ ರಾಮಚರಿತ್ರದ ಕಥೆ', 'ಕುರುಹಿನ ಬಕುಲಹಾರ'ಗಳು ಅವರ ಅನುವಾದ ಗ್ರಂಥಗಳಾಗಿವೆ. ವಿಜಾಪುರದಿಂದ ಅವರು 'ಭಾಷಾಸೇವಕ' ಎಂಬ ಮಾಸಪತ್ರಿಕೆಯನ್ನು ಕೆಲಕಾಲ (1894) ನಡೆಸಿದರು. 'ಪ್ರಮೀಲಾ ಸ್ವಯಂವರ' (1888), 'ಸಂಗೀತ ಇಂದ್ರಸಭಾ' (1893), 'ಸಂಗೀತ ಇಂದಿರಾ' ಮೊದಲಾದ ನಾಟಕಗಳನ್ನು ಬರೆದ ಧಾರವಾಡದ ಗುರುರಾವ್ ಮಮದಾಪುರ ಅವರು 'ಲೋಕ ಬಂಧನ' (1915) ವಾರಪತ್ರಿಕೆಯ ಸಂಪಾದಕರೂ ಆಗಿದ್ದರು. **ಕಾವ್ಯಾನಂದ** ಎಂಬ ಕಾವ್ಯನಾಮದಿಂದ ಖ್ಯಾತರಾದ ಕಿತ್ತೂರಿನ ನರಸಿಂಹಾಚಾರ್ಯ ಪುಣೇಕರ (1870–1929) ಅವರು "ಹೆಚ್ಚಿನ ಶಿಕ್ಷಣ ಪಡೆಯುವ ಅನುಕೂಲತೆ ಇರಲಿಲ್ಲವಾದರೂ ಸಂಸ್ಕಾರಬಲದಿಂದಲೂ ಸ್ವಂತ ಪರಿಶ್ರಮದಿಂದಲೂ ಸಂಸ್ಕೃತ-ಕನ್ನಡದಲ್ಲಿ ಪಾಂಡಿತ್ಯ ಸಂಪಾದಿಸಿ ಕಾವ್ಯರಚನಾಸಾಮರ್ಥ್ಯವನ್ನು ಬೆಳೆಸಿಕೊಂಡರು."[2] ಧಾರವಾಡದ ವ್ಹಿಕ್ಟೋರಿಯಾ ಹೈಸ್ಕೂಲಿನಲ್ಲಿಯೂ, ರಾಷ್ಟ್ರೀಯ ಶಾಲೆಯಲ್ಲಿಯೂ ಅಧ್ಯಾಪಕರಾಗಿ ಕೆಲಕಾಲ ಸೇವೆಸಲ್ಲಿಸಿದ ಇವರು 'ಒಕ್ಕಲಿಗರೂ ಒಕ್ಕಲುತನವೂ' ಮತ್ತು 'ಕ್ಷೇಮಸಮಾಚಾರ' ಎಂಬ ವಾರಪತ್ರಿಕೆಗಳನ್ನು ಒಂದೆರಡು ವರ್ಷಕಾಲ ನಡೆಸಿದರು. ಹಿರಿಯ ಕನ್ನಡಾಭಿಮಾನಿಗಳಾದ ಇವರು ಬೆಳಗಾವಿಯ 'ಕನ್ನಡಿಗರ ಕೂಟ'ದ ಪ್ರಮುಖ ಕಾರ್ಯಕರ್ತರೂ ಆಗಿದ್ದರು. ಈ ಬಹುಮುಖ ಕರ್ತೃತ್ವಶಕ್ತಿಯ ಕಾವ್ಯಾನಂದರಿಗೆ 'ಸಾಹಿತ್ಯ ರತ್ನಾಕರ', 'ವಿದ್ಯಾವಾಚಸ್ಪತಿ' ಮೊದಲಾದ ಪ್ರಶಸ್ತಿಗಳೂ ದೊರೆತಿದ್ದುವು.

ಇದೇ ಕಾಲದ ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರಮಠ (1870–1933) ಅವರು ವಕೀಲರಾದರೂ ಉತ್ತರ ಕರ್ನಾಟಕದಲ್ಲಿ ನಾಡು-ನುಡಿಯ ಜಾಗೃತಿಗಾಗಿ ವಿವಿಧ ರಂಗಗಳಲ್ಲಿ ಶ್ರಮಿಸಿದರು. ಇವರ ತಂದೆಯವರಾದ ಹುಚ್ಚಯ್ಯನವರು 1873ರಿಂದಲೇ 'ಚಂದ್ರೋದಯ' ಎಂಬ ವಾರಪತ್ರಿಕೆಯನ್ನು ಹೊರಡಿಸುತ್ತಿದ್ದರು. ಇವರೂ 'ವಾಗ್ದೇವಿ' (1906) ಎಂಬ ಮಾಸಪತ್ರಿಕೆಯನ್ನು ಆರಂಭಿಸಿದರು. ವಕೀಲರೂ ಸಮಾಜಸೇವಕರೂ ಆದ ಇವರು ಸಾಹಿತ್ಯಸೇವಕರೂ

---

1. ಅದೇ, ಪುಟ 94
2. ವೆಂಕಟೇಶ ಸಾಂಗಲಿ : ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, ಪುಟ 69

ಆಗಿರುವುದು ವಿಶೇಷ. ಇನ್ನೊಬ್ಬ ಗಣ್ಯಪತ್ರಿಕಾಕರ್ತರೂ ಸಮಾಜಸೇವಕರೂ ಕಟ್ಟಾ ಕನ್ನಡಾಭಿಮಾನಿಗಳೂ ಆದ **ಮುದವೀಡು ಕೃಷ್ಣರಾಯರು** (1874–1947) ಮೊದಲು 'ಧಾರವಾಡ ವೃತ್ತ' ಎಂಬ ಮರಾಠೀ ಪತ್ರಿಕೆಗೆ ಕೆಲಕಾಲ ಸಂಪಾದಕರಾಗಿದ್ದರು. ಅನಂತರ ಅವರು 'ಕರ್ನಾಟಕ ವೃತ್ತ', 'ಧನಂಜಯ' ಮುಂತಾದ ಕನ್ನಡ ಪತ್ರಿಕೆಗಳ ಮುಖಾಂತರ ಸುಮಾರು ಮೂರು ದಶಕಗಳ ಕಾಲ ಕನ್ನಡದ ಸೇವೆಯನ್ನು ಮಾಡಿದರು. 'ಕನ್ನಡದ ಕೃಷ್ಣರಾಯ'ರೆಂದು ಖ್ಯಾತರಾದ ಇವರ 'ಚಿತ್ತೂರ ಮುತ್ತಿಗೆ' ಎಂಬ ಐತಿಹಾಸಿಕ ಕಾದಂಬರಿಯು 1905ರಲ್ಲಿ ಪ್ರಕಟವಾಗಿದೆ.

ಕಾವ್ಯಾನಂದರಂತೆ ಸ್ವಾಧ್ಯಾಯದಿಂದಲೇ ವಿದ್ಯಾರ್ಜನೆ ಮಾಡಿದ ಬೆಳಗಾವಿ ಜಿಲ್ಲೆಯ ಹಿರೇಬಾಗೇವಾಡಿಯ ವೀರಪ್ಪಶಾಸ್ತ್ರಿ ಆರುಬೆರಳಿನ ಅವರು 'ಅಗತ್ಯ ವಿಚಾರ', 'ಕಲ್ಪವೃಕ್ಷ' ಮೊದಲಾದ ಚಿಕ್ಕಪುಸ್ತಕಗಳನ್ನು ಬರೆದರು. ಅದಕ್ಕಿಂತ ಹೆಚ್ಚಾಗಿ ಹಿರೇಬಾಗೇವಾಡಿಯಂಥ ಚಿಕ್ಕಗ್ರಾಮದಿಂದ ಇವರು 1910ರಲ್ಲಿ 'ನೀಲಕಂಠವಿಜಯ' ಎಂಬ ಮಾಸಪತ್ರಿಕೆಯನ್ನು ಹೊರಡಿಸಿದರೆಂಬುದು ಗಮನಾರ್ಹವಾಗಿದೆ. ಬಿ. ಎ. ಪದವೀಧರರಾದ ಮಲ್ಲಿಕಾರ್ಜುನಪ್ಪ ರೈನಾಪುರ ಅವರು ಮಾಮಲೇದಾರರಾಗಿ ನಿವೃತ್ತರಾದವರು. ಆದರೆ ಅವರ 'ಶಾಕುಂತಲ' ಮತ್ತು 'ಮೇಘದೂತ'ಗಳ ಭಾಷಾಂತರಗಳು ಅವರ ಸಂಸ್ಕೃತ ಮತ್ತು ಕನ್ನಡ ಸಾಹಿತ್ಯಾಸಕ್ತಿ ಮತ್ತು ಪಾಂಡಿತ್ಯಗಳ ದ್ಯೋತಕವಾಗಿವೆ.

ವಕೀಲರಾಗಿ ಕನ್ನಡ ನಾಡು-ನುಡಿಗಳಿಗಾಗಿ ದುಡಿದವರಲ್ಲಿ **ಆಲೂರ ವೆಂಕಟರಾಯರೂ, ಹುಯಿಲಗೋಳ ನಾರಾಯಣರಾಯರೂ** ಪ್ರಮುಖರು. ಕರ್ನಾಟಕದ ಕುಲಪುರೋಹಿತರೆಂದು ಖ್ಯಾತರಾದ ಆಲೂರ ವೆಂಕಟರಾಯರು ಕನ್ನಡದ ಉದ್ಧಾರಕ್ಕಾಗಿ ಈ ಶತಮಾನದ ಆದಿಭಾಗದಲ್ಲಿ ಹೆಚ್ಚಿನ ಕಾರ್ಯಮಾಡಿದರು. 'ವಾಗ್ಭೂಷಣ', 'ಕನ್ನಡಿಗ', 'ಜಯ ಕರ್ನಾಟಕ'ಗಳ ಸಂಪಾದಕರಾಗಿ ಕೆಲಕಾಲ ದುಡಿದರು. 'ಶಾಂತೇಶ ವಾಚನಾಲಯ'ವನ್ನು 10 ವರ್ಷ ನಡೆಸಿದರು. ಕನ್ನಡಿಗರಲ್ಲಿ ಕನ್ನಡತ್ವದ ಜಾಗೃತಿಯನ್ನುಂಟುಮಾಡಲು ಗ್ರಂಥಗಳನ್ನು ಬರೆದರು; ಗ್ರಂಥ ಪ್ರಸಾರ ಮಾಡಿದರು. ಅವರ ಗ್ರಂಥಗಳಲ್ಲಿ ಕಾವ್ಯ-ನಾಟಕ-ಕಥೆ-ಕಾದಂಬರಿಗಳಿಲ್ಲ; ಆದರೂ ಅವರ ಕನ್ನಡ ಸೇವೆ ಅನುಪಮವಾದುದು. 'ಉದಯವಾಗಲಿ ಚೆಲುವ ಕನ್ನಡ ನಾಡು' ಎಂಬ ಗೀತೆಯಿಂದ ಖ್ಯಾತರಾದ ಹುಯಿಲಗೋಳ ನಾರಾಯಣರಾಯರು ಕನ್ನಡ ರಂಗಭೂಮಿಯ ಸುಧಾರಣೆಗಾಗಿ ಹೆಣಗಿದರು. ಅವರ 'ಧರ್ಮರಹಸ್ಯ' 'ಪತಿತೋ-ದ್ಧಾರ', 'ಶಿಕ್ಷಣ ಸಂಭ್ರಮ' ನಾಟಕಗಳು ಖ್ಯಾತವಾದವುಗಳು.

ಹೀಗೆ ಶಿಕ್ಷಕರಲ್ಲದೆ ಜೀವನದ ಉಳಿದ ಕ್ಷೇತ್ರಗಳಲ್ಲಿ ಕಾರ್ಯಮಾಡುವವರೂ ಕೂಡ ಕನ್ನಡ ಸಾಹಿತ್ಯವನ್ನು ಬೆಳೆಸಲಿಕ್ಕೆ 19ನೆಯ ಶತಮಾನದ ಕೊನೆಯ ಭಾಗದಲ್ಲೂ, ಈ ಶತಮಾನದ ಆದಿಭಾಗದಲ್ಲೂ ಸೇವೆ ಸಲ್ಲಿಸಿದ್ದಾರೆ. ಈ ಮಹನೀಯರೆಲ್ಲ ಹೆಚ್ಚಾಗಿ ವೈಯಕ್ತಿಕ ಹಂತದಲ್ಲಿ ಕನ್ನಡದ ಸೇವೆಯನ್ನು ಗೈದರು.

ಇನ್ನು, ಮುಂಬಯಿ ಕರ್ನಾಟಕದಲ್ಲಿ ಕನ್ನಡದ ಕಾರ್ಯಮಾಡಿದ ಇನ್ನೊಂದು ಮಹತ್ತ್ವದ ಸಂಸ್ಥೆಯೆಂದರೆ ಧಾರವಾಡದ **'ಕರ್ನಾಟಕ ವಿದ್ಯಾವರ್ಧಕ ಸಂಘ'**. ಇದೂ ಒಂದು ರೀತಿಯಿಂದ ಧಾರವಾಡದ ಟ್ರೇನಿಂಗ ಕಾಲೇಜಿಗೆ ಸಂಬಂಧವುಳ್ಳದ್ದೇ ಆಗಿತ್ತು. ಈ ಸಂಘದ ಜನಕರಾದ ರಾ. ಹ. ದೇಶಪಾಂಡೆಯವರು ಟ್ರೇನಿಂಗ ಕಾಲೇಜಿನ ಶಿಕ್ಷಕ ವರ್ಗದವರೇ ಆಗಿದ್ದರು. ಅಷ್ಟೇ ಅಲ್ಲದೆ ಕಾಲೇಜಿನ ವೆಂಕಟ ರಂಗೋ ಕಟ್ಟಿ, ಧೋಂಡೋಪಂತ ಮುಳಬಾಗಲ,

ಶ್ರೀನಿವಾಸರಾವ ರೊದ್ದ. ವಿನಾಯಕರಾವ ಜೋಶಿ, ರಾಮಚಂದ್ರ ಮಹಿಷಿ, ಮೊದಲಾದ ಅನೇಕರು ಸಂಘದ ಜೊತೆಗೆ ಸಮೀಪ ಸಂಬಂಧವುಳ್ಳವರಾಗಿದ್ದರು.

"ಕನ್ನಡ ಭಾಷೆಯ ದೀನಸ್ಥಿತಿಯನ್ನು ಪೂರ ಮಾಡುವದಕ್ಕಾಗಿ ಕನ್ನಡ ಜನರ ಸಹಾಯದಿಂದ ಒಂದು ಸಂಘವನ್ನು ಸ್ಥಾಪಿಸಬೇಕೆಂಬ ವಿಚಾರವು ನನ್ನ ಮನಸ್ಸಿನಲ್ಲಿ ಸನ್ 1887ನೇ ಇಸವಿಯಲ್ಲಿ ಹುಟ್ಟಿತು. ಅಂದಿನಿಂದ ಈ ಹೊತ್ತಿನ ತನಕ ಅದೇ ಪ್ರಯತ್ನದಲ್ಲಿ ತೊಡಗಿರುತ್ತೇನೆ. ಇವೊತ್ತಿಗೆ 3700 ರೂಪಾಯಿಗಳ ಅಂಕಿಗಳೂ, ರೋಖ 287 ರೂಪಾಯಿಗಳೂ ಕೂಡಿರುತ್ತವೆ.... ಎಲ್ಲ ಕನ್ನಡಿಗರು ಸ್ವಭಾಷೆಯ ಅಭಿಮಾನ ಹಿಡಿದು, ಈ ಸಂಘದ ಕೆಲಸವನ್ನು ನೆರವೇರಿಸಲಿಕ್ಕೆ ತಮ್ಮ ಕೈಲಾದ ಮಟ್ಟಿಗೆ ತನುಮನೋಧನಗಳಿಂದ ಸಹಾಯ ಮಾಡಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ."[1] ಎಂದು ರಾ. ಹ. ದೇಶಪಾಂಡೆಯವರು ಧಾರವಾಡದಲ್ಲಿ 1890ನೆಯ ಇಸವಿಯ ಜುಲೈ 20 ಕಂದು ನೆರೆದ ಊರ ಸಭ್ಯಗೃಹಸ್ಥರ ಸಭೆಯಲ್ಲಿ ಮನವಿಯನ್ನು ಮಾಡಿಕೊಂಡರು. ಅವರ ಮನವಿ ವ್ಯರ್ಥವಾಗಲಿಲ್ಲ. ಅಂದೇ ಸಂಘವು ಅಸ್ತಿತ್ವದಲ್ಲಿ ಬಂದಿತು.

ಕನ್ನಡದ ಸ್ಥಿತಿಯನ್ನು ಸುಧಾರಿಸಬೇಕೆಂಬ ಉದ್ದೇಶದಿಂದ ಪ್ರಾರಂಭವಾದ ಸಂಘವು 1) ಕನ್ನಡವನ್ನು ಸಾರ್ವಜನಿಕ ಸಭೆಗಳಲ್ಲಿ ಮಾತನಾಡುವದಕ್ಕೆ ಉತ್ತೇಜನವನ್ನು ಕೊಡುವದು. 2) ಕನ್ನಡದಲ್ಲಿ ಗ್ರಂಥಗಳನ್ನು ಹೊಸದಾಗಿ ಬರೆದು, ಬೇರೆ ಭಾಷೆಯಿಂದ ಪರಿವರ್ತಿಸಿ, ಪ್ರಾಚೀನ ಗ್ರಂಥಗಳನ್ನು ಪರಿಶೋಧಿಸಿ ಪ್ರಕಟಿಸುವುದು. 3) ಈ ಕೆಲಸವನ್ನು ಮಾಡುವ ವಿದ್ವಾಂಸರಿಗೆ ಸಹಾಯವನ್ನು ಕೊಡುವುದು. 4) ಇವೆಲ್ಲ ಕಾರ್ಯಗಳಿಗೆ ಸಹಕಾರಿಯಾಗಲು ಸಂಘದಿಂದ ಒಂದು ನಿಯತಕಾಲಿಕೆಯನ್ನು ಪ್ರಕಟಿಸುವುದು ಮತ್ತು 5) ಧಾರವಾಡದಲ್ಲಿ ಒಂದು ಪುಸ್ತಕಾಲಯವನ್ನು ಸ್ಥಾಪಿಸುವದು— ಇವೇ ಮೊದಲಾದ ಕಾರ್ಯಗಳನ್ನು ಹಮ್ಮಿಕೊಂಡಿತಲ್ಲದೆ, ಈ ಎಲ್ಲವುಗಳನ್ನು ಪ್ರತ್ಯಕ್ಷ ನಡೆಸಿ ತೋರಿಸಿತೆಂಬುದು ಮಹತ್ತ್ವದ್ದಾಗಿದೆ.

ಕರ್ನಾಟಕ ವಿದ್ಯಾವರ್ಧಕ ಸಂಘವು ಪ್ರತಿವರ್ಷ ಭಾಷಣಗಳ ಸ್ಪರ್ಧೆಯನ್ನು ಏರ್ಪಡಿಸತೊಡಗಿತು. ಅದರಲ್ಲಿ ಮೇಲಿನ ನಂಬರು ಪಡೆದವರಿಗೆ ಬಹುಮಾನ ಕೊಡುವ ಸಲುವಾಗಿ ಅನೇಕ ಮಹನೀಯರು ಧನಸಹಾಯವನ್ನೂ ಮಾಡತೊಡಗಿದರು. ನಿರ್ಣಾಯಕರಾಗಿ ಮೈಸೂರು ಬೆಂಗಳೂರುಗಳಿಂದ ವಿದ್ವಾಂಸರನ್ನು ಕರೆಸಿ, ಸಂಘವು ಅವರಿಗೆ ಹಾದಿಯ ಖರ್ಚನ್ನೂ ಕೊಡುತ್ತಿತ್ತು; ಆ ವಿದ್ವಾಂಸರ ಕೈಯಿಂದಲೇ ಪಾರಿತೋಷಕಗಳನ್ನೂ ಕೊಡಿಸುತ್ತಿತ್ತು. ಇಂಥ ಭಾಷಣ-ಲೇಖನ ಸ್ಪರ್ಧೆಗಳಲ್ಲಿ ಗಳಗನಾಥರು 9-10 ವರ್ಷ ತಪ್ಪದೆ ಪ್ರತಿಸಲ ಬಹುಮಾನಗಳನ್ನು ಪಡೆದರು. ಗಳಗನಾಥರು ಹೀಗೆ ಉಚಿತಗಳನ್ನು ಪಡೆದ ವಿವರಗಳೆಲ್ಲ ಲಭ್ಯವಿಲ್ಲವಾದರೂ, 1944 ಜೂನ ತಿಂಗಳ 'ವಾಗ್ಭೂಷಣ'ದಲ್ಲಿ ಪ್ರಕಟವಾದ 'ಐವತ್ತು ವರ್ಷಗಳ ಹಿಂದೆ' ಎಂಬ ಶೀರ್ಷಿಕೆ ಈ ಬಗ್ಗೆ ಸ್ವಲ್ಪ ವಿಚಾರವನ್ನು ತಿಳಿಸುತ್ತದೆ.

ಗಳಗನಾಥರೂ, ಗಳಗನಾಥರಂತೆ ಬಹುಸಂಖ್ಯೆ ಪ್ರಾಥಮಿಕ ಶಿಕ್ಷಕರೂ 'ಕರ್ನಾಟಕ ವಿದ್ಯಾವರ್ಧಕ ಸಂಘ'ದ ಪ್ರೋತ್ಸಾಹವನ್ನೂ ಪ್ರಯೋಜನವನ್ನೂ ಪಡೆದರು. ಸಂಘವು ಅವರ ಲೇಖನ ಭಾಷಣಗಳಿಗೆ ಬಹುಮಾನಗಳನ್ನು ಕೊಟ್ಟುದಲ್ಲದೆ, ಅವರ ಗ್ರಂಥಗಳನ್ನು 'ವಾಗ್ಭೂಷಣ'ದಲ್ಲಿ

1. ವಾಗ್ಭೂಷಣ— ನವ್ಹೆಂಬರ, 1896

ಪ್ರಕಟಿಸಿ ಪ್ರೋತ್ಸಾಹಿಸಿತು. ಹಾಗೆ ಶಿಕ್ಷಕರಂತೆ ಉಳಿದ ಕೆಲವು ವಕೀಲರೂ ಸರಕಾರಿ ನೌಕರರೂ ಕೂಡ ಈ ರೀತಿ ಸಂಘದಿಂದ ಪ್ರಯೋಜನ ಪಡೆದ ನಿದರ್ಶನಗಳಿಲ್ಲದಿಲ್ಲ.

ಕನ್ನಡದಲ್ಲಿ ಗ್ರಂಥಗಳನ್ನು ಬರೆಯುವವರನ್ನು ಹುಡುಕುವುದು ಆಗ ತೀರ ಕಠಿಣವಾಗಿತ್ತು; ಆದರೆ ಬರೆದ ಗ್ರಂಥಗಳು ಅಚ್ಚಾಗುವುದು ಇನ್ನೂ ಕಠಿಣವಾಗಿತ್ತು. ಸಂಘವು ಅನೇಕ ಗ್ರಂಥಗಳನ್ನು ಪ್ರಕಟಿಸಿ ಗ್ರಂಥಕರ್ತರನ್ನು ಪ್ರೋತ್ಸಾಹಿಸಿತು. 1879ರಲ್ಲಿಯೇ ಅನುವಾದಗೊಂಡ ಮುಳಬಾಗಲರ 'ಉತ್ತರರಾಮಚರಿತ'ವು ಅಚ್ಚಾಗದೆ ಹಾಗೆಯೆ ಕುಳಿತಿತ್ತು. ಸಂಘವು ಅದನ್ನು 1892ರಲ್ಲಿ ಪ್ರಕಟಿಸಿತು. ಅಷ್ಟೇ ಅಲ್ಲದೆ, ಗ್ರಂಥದ ಸ್ವಾಮಿತ್ವಕ್ಕಾಗಿ ಮೊದಲನೆಯ ಆವೃತ್ತಿಯ ಖರ್ಚುಹೋಗಿ ಉಳಿದ ಲಾಭದಲ್ಲಿ ಗ್ರಂಥಕರ್ತರಿಗೆ 100ಕ್ಕೆ 50ರಂತೆ ಗೌರವಧನವನ್ನೂ ಕೊಟ್ಟಿತು.[1] ಅದುವೇ ಸಂಘದ ಮೊದಲ ಪ್ರಕಟನೆ. ಮುಂದೆ ಸಂಘವು ಮುಳಬಾಗಲರ 'ಮಾಲವಿಕಾಗ್ನಿಮಿತ್ರ' ಮತ್ತು 'ವೇಣೀಸಂಹಾರ'ಗಳನ್ನಲ್ಲದೆ, ಗಂಗಾಧರ ಮಡಿವಾಳೇಶ್ವರ ತುರಮರಿಯವರ 'ಬಾಣಕಾದಂಬರಿ'ಯನ್ನೂ, ಮುಂದೆ ಶಂ. ಬಾ. ಜೋಶಿ, ಬೆಟಗೇರಿ ಕೃಷ್ಣಶರ್ಮಾ, ಎಸ್. ಎಸ್. ಬಸವನಾಳ, ಎಸ್. ಎಸ್. ಮೊಳವಾಡ ಮೊದಲಾದವರ ಗ್ರಂಥಗಳನ್ನೂ ಪ್ರಕಟಿಸಿತು. ಹೀಗೆ ಗ್ರಂಥಪ್ರಕಟನೆಯ ಸಾಹಸವನ್ನು ಮಾಡಿದ ಸಂಘವು ಎ. ನರಸಿಂಹಮೂರ್ತಿಯವರ 'ಕನ್ನಡ ತಮಿಳು ಮೊದಲನೇ ಪುಸ್ತಕ'ವನ್ನು ಮುದ್ರಿಸಿ ಕೈಸುಟ್ಟು ಕೊಂಡುದೂ ಉಂಟು. 1892ರಿಂದ ಸಾಹಿತ್ಯಿಕ ಗ್ರಂಥ ಪ್ರಕಟನೆಯ ಕಾರ್ಯ ಕೈಕೊಂಡ ಉತ್ತರ ಕರ್ನಾಟಕದ ಬಹುಶಃ ಮೊದಲ ಸಾರ್ವಜನಿಕ ಸಂಸ್ಥೆಯೆಂದರೆ 'ಕರ್ನಾಟಕ ವಿದ್ಯಾವರ್ಧಕ ಸಂಘ'ವೇ ಆಗಿದೆ.

ಅದರಂತೆ ಸಂಘವು ತನ್ನ ಸಾಹಿತಿಮಿತ್ರರಿಗೆ ಅವರಿಗೆ ಅತೀವ ಅಡಚಣೆಯುಂಟಾದಾಗ ಧನ ಸಹಾಯವನ್ನೂ ಸಾಲರೂಪದಿಂದ ಮಾಡುತ್ತಿತ್ತೆಂದು ಕಾಣುತ್ತದೆ. ಧೋಂಡೋ ನರಸಿಂಹ ಮುಳಬಾಗಲರಿಗೆ ಸಂಘವು ಸಾಲಕೊಡಲೊಪ್ಪಿದ ಬಗ್ಗೆ ಸಂಘದ ಕಾಗದ ಪತ್ರಗಳಿಂದ ತಿಳಿದು ಬರುತ್ತದೆ. ಸಂಘದ ಕಾರ್ಯಕಾರಿ ಸಭೆಯು ದಿನಾಂಕ 17-1-1892ರಂದು ಪಾಸು ಮಾಡಿದ 3ನೆಯ ನಿರ್ಣಯವು "ಮ. ರಾ. ಧೋಂಡೋಪಂತರಿಗೆ ಸಾಲವನ್ನು 100ಕ್ಕೆ ತಿಂಗಳಿಗೆ 10 ಆಣೆಯಂತೆ ಬಡ್ಡಿ ಗೊತ್ತುಮಾಡಿ ಕಾಗದ ಬರಿಸಿಕೊಂಡು ಕೊಡತಕ್ಕದ್ದು"- ಎಂದಿದೆ. ಇಂಥ ಪ್ರಸಂಗಗಳು ತೀರ ಅಪರೂಪವಾದರೂ, ಸಾಹಿತಿ ಮಿತ್ರರಿಗೆ ಸಹಾಯ ಮಾಡಬೇಕೆಂಬ ಸಂಘದ ಕಳಕಳಿಯನ್ನು ಇಲ್ಲಿ ಗುರುತಿಸಬಹುದಾಗಿದೆ.

ಗ್ರಂಥ ಮತ್ತು ಲೇಖನಗಳ ಪ್ರಕಾಶನದಿಂದ ನಾಗರಿಕರಲ್ಲಿ ಕನ್ನಡದ ಜಾಗೃತಿಯನ್ನುಂಟು ಮಾಡುವ ಉದ್ದೇಶದಿಂದಲೇ ಸಂಘವು 'ವಾಗ್ಭೂಷಣ'ವೆಂಬ ಮಾಸಿಕವನ್ನು 1896ರಲ್ಲಿ ಪ್ರಾರಂಭಿಸಿತು. ಈ ಕನ್ನಡ ಮಾಸಪತ್ರಿಕೆಯು ಪ್ರಾರಂಭಿಸಲ್ಪಟ್ಟ ಉದ್ದೇಶ, ಅದು ಮಾಡಿದ ಕೆಲಸ, ಅನುಭವಿಸಿದ ತೊಂದರೆ ಮೊದಲಾದುವು ಸಂಘದ ವಾರ್ಷಿಕ ವರದಿಗಳಿಂದ ವ್ಯಕ್ತವಾಗುತ್ತವೆ. ಸಂಘವು ಕೇವಲ ಗ್ರಂಥಪ್ರಚಾರ ಮತ್ತು ಭಾಷಾಭಿವೃದ್ಧಿ ಈ ಎರಡು ಧನ ಉದ್ದೇಶಗಳಿಂದ ಪತ್ರಿಕೆಯನ್ನು ಆರಂಭಿಸಿತ್ತು. ಆ ದೃಷ್ಟಿಯಲ್ಲಿ ಅದು ಸಾಕಷ್ಟು ಕಾರ್ಯವನ್ನು

1. 'ಕರ್ನಾಟಕ ವಿದ್ಯಾವರ್ಧಕ ಸಂಘ'ದ ವ್ಯವಸ್ಥಾಪಕ ಮಂಡಲಿಯ ದಿ. 17-1-1892ರ ಸಭೆಯ 2ನೆಯ ನಿರ್ಣಯದಲ್ಲಿ ಈ ವಿಷಯ ಬಂದಿದೆ. ಕರಾರಿಗೆ ಒಪ್ಪಿಕೊಂಡ ಬಗ್ಗೆ ಮುಳಬಾಗಲರ (ಮೋಡೀ) ಸಹಿಯೂ ನಿರ್ಣಯದ ಪುಸ್ತಕದಲ್ಲಿ ಇರುತ್ತದೆ.

ಮಾಡಿತೆಂಬಲ್ಲಿ ಸಂದೇಹವಿಲ್ಲ. ರಾಮಚಂದ್ರ ದೇಶಪಾಂಡೆ ಅವರ 'ಟೀಪೂ ಸುಲ್ತಾನನ ಚರಿತ್ರೆ', ಧೋಂಡೋಪಂತ ಮುಳಬಾಗಲರ 'ಹಿತೋಪದೇಶ', ಗಳಗನಾಥರ 'ಪದ್ಮನಯನಾ' ವೆಂಕಟರಂಗೋ ಕಟ್ಟಿಯವರ 'ಕೊಲ್ಲಾಪುರ ಛತ್ರಪತಿಯವರ ಇತಿಹಾಸ', ಗೂಳಪ್ಪ ಕೊಟ್ರಪ್ಪ ಅರಳಿ ಅವರ 'ಶೌರ್ಯಸಾಗರ', ವಲ್ಲಭರಾವ ತಟ್ಟಿಯವರ 'ಕನ್ನಡಿಗರ ಜನ್ಮಸಾರ್ಥಕತೆ'; ಬಿ. ರಾಮರಾವ ಅವರ 'ಸುಭದ್ರಾಹರಣ', ರಾಮಚಂದ್ರ ಮಧ್ವ ಮಹಿಪಿ ಅವರ 'ಕೃಷಿ ಕರ್ಮಶಾಸ್ತ್ರ', ವೀರಭದ್ರಪ್ಪ ಹಾಲಭಾವಿಯವರ 'ವಿಜಯನಗರದ ಸಾಮ್ರಾಜ್ಯವು', ಗುರುಬಸಪ್ಪ ಹಳಕಟ್ಟಿಯವರ 'ಗ್ಲ್ಯಾಡಸ್ಟನ್‌ನ ಚರಿತ್ರೆ', ಹೊನ್ನಾಪುರಮಠ ವಕೀಲರ 'ರಾಮದಾಸ ಸ್ವಾಮಿಗಳ ಚರಿತ್ರೆ', ತಮ್ಮಣ್ಣ ಆಮ್ಮಿನಭಾವಿಯವರ 'ವೇಣೀಬಂಧನ', ಪಂಡಿತ ಪೂಜಾರ ಅವರ 'ಜೈನಧರ್ಮ ಪರಿಭಾಷೆ', ಸಿ. ರೇ. ಸಬರದ ಅವರ 'ರಾಣಾರಾಜಸಿಂಹ'– ಇವೇ ಮೊದಲಾದ 85 ಗ್ರಂಥಗಳು 'ವಾಗ್ಭೂಷಣ'ದಲ್ಲಿ ಕ್ರಮಶಃ ಪ್ರಕಟವಾದುವು. ಗ್ರಂಥಗಳ ವಿಪುಲತೆಯನ್ನೂ ವೈವಿಧ್ಯವನ್ನೂ ಗಮನಿಸಬೇಕು. ಅಲ್ಲದೆ ಅನೇಕ ಬಿಡಿ ಬರಹಗಳು ಇದರಲ್ಲಿ ಪ್ರಕಟವಾಗಿವೆ. ಹಲವಾರು ಹೊಸ ಲೇಖಕರು 'ವಾಗ್ಭೂಷಣ'ದಿಂದ ಬೆಳಕಿಗೆ ಬಂದರು. ಅಂಥವರಲ್ಲಿ ಗಳಗನಾಥರೂ ಒಬ್ಬರು. 1897ನೆಯ ವರ್ಷದ ಲೇಖನ ಸ್ಪರ್ಧೆಯಲ್ಲಿ ಅವರ 'ಪದ್ಮನಯನಾ' ಎಂಬ ಸ್ವತಂತ್ರ ಕಾದಂಬರಿಗೆ ಬಹುಮಾನ ದೊರೆತು, ಅವರು ಕಾದಂಬರಿಕಾರರೆಂದು ಹೆಸರಾದರು. ಇದೇ ಜಾತಿಯ ಕಾದಂಬರಿಯೊಂದನ್ನು (ಸೂರ್ಯಕಾಂತ) ಬರೆದು ಲಕ್ಷ್ಮಣ ಭೀಮರಾವ ಗದಗಕರ ಎಂಬವರು 1892ರಲ್ಲಿಯೇ ಸಂಘದ ಪಾರಿತೋಷಕವನ್ನು ಪಡೆದಿದ್ದರು. ಮುಂದೆ ಇಂಥ ಬಹುಮಾನಗಳನ್ನು ಅನೇಕರು ಪಡೆದರು. ಅಂತೂ 'ಕರ್ನಾಟಕ ವಿದ್ಯಾವರ್ಧಕ ಸಂಘ'ವು ಬಹುಮಾನಗಳ ಆಸೆ ತೋರಿಸಿ ಅನೇಕರಲ್ಲಿ ಹುದುಗಿದ್ದ ಲೇಖನಕಲೆ ಪ್ರಕಟವಾಗಲು ಆಸ್ಪದ ಮಾಡಿಕೊಟ್ಟಿತೆಂಬುದು ಮಹತ್ತ್ವದ ಮಾತು.[1] ಸಂಘವು 1940ರ ವರೆಗೆ 175 ಗ್ರಂಥಕರ್ತರ 423 ಗ್ರಂಥಗಳಿಗಾಗಿ ಒಟ್ಟು 18990 ರೂ. ಗಳನ್ನು ಪಾರಿತೋಷಕ ವಾಗಿ ಕೊಟ್ಟಿತೆಂಬುದನ್ನು ನೆನೆದರೆ ಸಂಘದ ಕಾರ್ಯಮಹತಿ ವ್ಯಕ್ತವಾಗುತ್ತದೆ.

ಆದರೆ ಪತ್ರಿಕೆಯನ್ನು ನಡೆಸುವುದು ಮಾತ್ರ ಸಂಘಕ್ಕೆ ಯಾವಾಗಲೂ ತಲೆಭಾರವಾಗಿಯೇ ಕಂಡಿತು. 'ವಾಗ್ಭೂಷಣ'ಕ್ಕೆ ಶೈಶವದಲ್ಲಿಯೇ ಅಂಟಿಕೊಂಡ ಬಾಲಗ್ರಹವು ಕಡೆತನಕವೂ ಉಳಿದುಕೊಂಡು, ಬೆಳೆಯುತ್ತ ಕೊನೆಗೆ ಪತ್ರಿಕೆಯು ನಿಂತೇ ಹೋಗಬೇಕಾಯಿತು. "ಪ್ರತಿ ವರ್ಷದಂತೆ ಈ ಎರಡು ಸಾಲಿನಲ್ಲಿಯೂ ಸುಮಾರು 100 ರೂ.ಗಳಂತೆ ನಷ್ಟವಾಗಿದೆ.... ಇತರ ದೇಶ-ಭಾಷೆಗಳಲ್ಲಿ ಅನೇಕ ಮಾಸಿಕ ಪುಸ್ತಕಗಳೂ ವರ್ತಮಾನ ಪತ್ರಗಳೂ ಹೊರಡುತ್ತಿದ್ದು ಅವೆಲ್ಲವುಗಳಿಗೂ ಸಾಕಷ್ಟು ಆಶ್ರಯ ದೊರೆಯುತ್ತ ಬಂದಿದೆ. ಆದರೆ ನಮ್ಮ ಕನ್ನಡದಲ್ಲಿ ಒಂದೇ ಮಾಸಿಕ ಪುಸ್ತಕ ಇದ್ದರೂ ಅದರ ವೆಚ್ಚ ಸಾಗಿಸುವಷ್ಟು ಹಣವು ನಮ್ಮ ಬಾಂಧವರ ಕೈಯಿಂದ ಬರದಿರುವದು ದುಃಖಾಸ್ಪದ ಸಂಗತಿಯಾಗಿದೆ. ತಮ್ಮ ನುಡಿಯ ಅಭಿಮಾನವೂ, ತಮ್ಮ ನಾಡಿನ ಅಭಿಮಾನವೂ ಇತರರಲ್ಲಿ ಇದ್ದಂತೆ, ನಮ್ಮ ಕನ್ನಡಿಗರಲ್ಲಿ ಇರುವದಿಲ್ಲವೆಂದು ಇದರಿಂದ ವ್ಯಕ್ತ ವಾಗುತ್ತದೆ. ಇದರಂಥ ನಾಚಿಕೆಯ ಮಾತು ಎರಡನೆಯದಿಲ್ಲ. ಇನ್ನು ಮುಂದಾದರೂ ತಮ್ಮ ಸ್ವಾಭಾವಿಕ ಆಲಸ್ಯವನ್ನೂ, ಉದಾಸೀನತೆಯನ್ನೂ ತೊರೆದು ತಮ್ಮ ಮಾತೃಭಾಷೆಯ ಸೇವೆ

1. ತಮ್ಮ 'ಪದ್ಮನಯನಾ' ಕಾದಂಬರಿಯ ಮುನ್ನುಡಿಯಲ್ಲಿ ಗಳಗನಾಥರು, ಪಾರಿತೋಷಕದ ಆಸೆಯನ್ನು ತೋರಿಸಿ ಕಾದಂಬರಿಯನ್ನು ಬರೆಯಿಸಿದ ಸಂಘದ ಉಪಕಾರವನ್ನು ಸ್ಮರಿಸಿರುವರು.

ಯನ್ನು ಮನಮುಟ್ಟಿ, ಮಾಡುವರೆಂದು, ಕೋರುತ್ತೇವೆ."[1] ಎಂದು ಸಂಘದ ಕಾರ್ಯದರ್ಶಿಗಳು ನುಡಿದಿರುವದನ್ನು ನೋಡಿದರೆ, ಪತ್ರಿಕೆಯ ಆರ್ಥಿಕ ಸ್ಥಿತಿಗತಿಯ ಜೊತೆಗೆ, ಆ ಕಾಲದ ಕನ್ನಡಿಗರ ಅನಾಸಕ್ತಿಯ ತೀವ್ರತೆಯೂ ತಿಳಿದುಬರುತ್ತದೆ. ಪತ್ರಿಕೆಯನ್ನು ತೆಗೆದುಕೊಂಡು ಹಣ ಕೊಡದ ವರ್ಗಣಿದಾರರೂ ಕೆಲವರಿದ್ದರು. ಅದರಂತೆ ವ್ಹಿ. ಪಿ. ಮಾಡಿ ಕಳಿಸಿದಾಗ ಸಂಚಿಕೆಯನ್ನು ನಿರಾಕರಿಸಿದ "ಕನ್ನಡ ಅಭಿಮಾನಿಗಳೆಂದೂ, ದೊಡ್ಡವರೆಂದೂ ಅನಿಸಿಕೊಳ್ಳುವ ನೂರಾರು ಸಭ್ಯ ಗೃಹಸ್ಥರ ಹೆಸರುಗಳನ್ನು ತಮ್ಮೆಲ್ಲರಿಗೆ ಹೇಳುವುದು ನಮಗೆ ಲಜ್ಜಾಸ್ಪದ" ಎಂದು ಕಾರ್ಯದರ್ಶಿ ಮಿಡುಕಿದ್ದೂ ಉಂಟು.[2]

ಮುಂದೆ 1907ನೆಯ ವರ್ಷ 'ವಾಗ್ಭೂಷಣ'ದ ಕಾರ್ಯವನ್ನು ಕನ್ನಡದ ಕುಲಪುರೋಹಿತರಾದ ಆಲೂರ ವೆಂಕಟರಾಯರು ವಹಿಸಿಕೊಂಡ ನಂತರ ಮಾತ್ರ ಪತ್ರಿಕೆಯು ತುಸು ಚೆನ್ನಾಗಿ ನಡೆಯತೊಡಗಿತು. ಹುಬ್ಬಳ್ಳಿ, ಧಾರವಾಡ, ಬ್ಯಾಡಗಿ, ಹಾವೇರಿ, ಬೆಳಗಾವಿ ಮುಂತಾದ ನಗರ ಪಾಲಿಕೆಗಳೂ ಪತ್ರಿಕೆಗೆ ಕೆಲ ಧನಸಹಾಯವನ್ನು ಸಲ್ಲಿಸಿದುವು. ಆದರೂ ಅದು ಬಹುಕಾಲ ಬಾಳಲಿಲ್ಲ. ಅದು ಕೆಲಕಾಲ ತ್ರೈಮಾಸಿಕವಾಯಿತು; ಕೊನೆಗೆ 1924ರಲ್ಲಿ ನಿಂತೇ ಹೋಗುವಂತಾಯಿತು. ಪುನಃ ಅದಕ್ಕೆ ಜೀವದಾನ ಮಾಡಲಾಯಿತು. ಕೆಲಕಾಲ ಅದು ಕುಂಟುತ್ತ ಸಾಗಿತು. ಕೊನೆಗೆ ಕ್ರಿ. ಶ. 1931ರಲ್ಲಿ ಅದು ಸಂಪೂರ್ಣವಾಗಿ ಕೈಯೂರಿತು. ಆದರೂ ಆಗಾಗ ಅದನ್ನು ಪುನಃ ಪ್ರಾರಂಭಿಸುವ ಪ್ರಯತ್ನಗಳು ನಡೆಯದೆ ಇಲ್ಲ. ಇತ್ತೀಚೆಗೆ 1973ರಲ್ಲಿ ಅದಕ್ಕೆ ಮತ್ತೆ ಜೀವದಾನ ಕೊಡಲಾಯಿತು, ಆದರೆ ಅದು ಆ ವರ್ಷಕ್ಕೆ ಮಾತ್ರ ಸೀಮಿತವಾಗಿ ಉಳಿಯಿತು.

ಅದೇನೇ ಇದ್ದರೂ 'ವಾಗ್ಭೂಷಣ'ವು ಉತ್ತರ ಕರ್ನಾಟಕಕ್ಕೆ ಮಾಡಿದ ಸೇವೆ ಅನುಪಮವಾಗಿದೆ ಎಂಬಲ್ಲಿ ಭಿನ್ನಾಭಿಪ್ರಾಯವಿರಲಾರದು.

'ಕರ್ನಾಟಕ ವಿದ್ಯಾವರ್ಧಕ ಸಂಘ'ದ 'ವಾಗ್ಭೂಷಣ'ದಂತೆ 19ನೆಯ ಶತಮಾನದಲ್ಲಿ ಬೇರೆ ಕೆಲವು ಕನ್ನಡ ಮಾಸಪತ್ರಿಕೆಗಳೂ ಬೆಳಕು ಕಂಡವು. ಅವುಗಳಲ್ಲಿ **'ಮಠ ಪತ್ರಿಕೆ'** ತುಂಬ ಮಹತ್ತ್ವದ್ದು. ಡೆಪ್ಯೂಟಿ ಚನ್ನಬಸಪ್ಪನವರು ಇದನ್ನು 1865ರಲ್ಲಿ ಬೆಳಗಾವಿಯಲ್ಲಿ ಆರಂಭಿಸಿದರು. ಮುಂದೆ ಅದು 1867ರಲ್ಲಿ 'ಶಾಲಾಪತ್ರಕ'ವೆಂದೂ, 1870ರಲ್ಲಿ 'ಕನ್ನಡ ಶಾಲಾಪತ್ರಕ'ವೆಂದೂ, 1929ರಿಂದ 'ಕನ್ನಡ ಪ್ರಾಥಮಿಕ ಶಿಕ್ಷಣ'ವೆಂದೂ ಹೆಸರನ್ನು ಬದಲಾಯಿಸಿಕೊಳ್ಳುತ್ತ 1956ರಲ್ಲಿ 'ಜೀವನ ಶಿಕ್ಷಣ'ವಾಗಿ ಇಂದಿಗೂ ಅದೇ ಹೆಸರಿನಿಂದ ನಡೆಯುತ್ತ ಬಂದಿದೆ. 1871ರಲ್ಲಿ ಮಹಿಳೆಯರಿಗೋಸ್ಕರವಾಗಿ ಹೊರಡುತ್ತಿದ್ದ 'ಕನ್ನಡ ಶಿಕ್ಷಕಿ'ಯು 1929ರಲ್ಲಿ 'ಕನ್ನಡ ಪ್ರಾಥಮಿಕ ಶಿಕ್ಷಣ'ದಲ್ಲಿ ಲೀನವಾಯಿತು. 1875ರಲ್ಲಿ ಟ್ರೇನಿಂಗ ಕಾಲೇಜಿನ ಜೊತೆಗೆ 'ಶಾಲಾ ಪತ್ರಕ'ವೂ ಬೆಳಗಾವಿಯಿಂದ ಧಾರವಾಡಕ್ಕೆ ಬಂದಿತು.

24 ಪುಟಗಳಿರುತ್ತಿದ್ದ 'ಶಾಲಾಪತ್ರಕ'ದ ಹಳೆಯ ಸಂಚಿಕೆಗಳನ್ನು ನೋಡಿದರೆ ಆ ಕಾಲದ ಪತ್ರಿಕೆಯ ಮತ್ತು ಕನ್ನಡ ನುಡಿಯ ಕಲ್ಪನೆ ಬರುತ್ತದೆ. 1885ರ ಡಿಸೆಂಬರ ತಿಂಗಳ ಸಂಚಿಕೆಯಲ್ಲಿ ಒಂದು ಮರಾಠಿ ಜಾಹೀರಾತು ಕೂಡ ಇದೆ. ಕೃಷ್ಣಾಜಿ ಗೋವಿಂದ ದೇಶಪಾಂಡೆ

1. ದಿನಾಂಕ 31-3-1902ರ ಸಂಘದ ವರದಿ.

2. ಅದೇ

ತೇರದಾಳ ಅವರ ತಮ್ಮ ತಪ್ಪಿಸಿಕೊಂಡಿದ್ದ, ಆತನ ವಯಸ್ಸು, ಬಣ್ಣ, ಚಹರೆ ಇತ್ಯಾದಿಗಳನ್ನು ತಿಳಿಸಿ, "ತೇರದಾಳ ಏಥೇ ಕಾನಡೀ ಮರಾಠಿ ಶಾಳೇಸ ಜಾತ ಹೋತಾ..... ಜನ್ಮ ಭಾಷಾ ಕಾನಡೀ ವ ಮರಾಠೀ ಸಾಧಾರಣ ಬೋಲಾಯಲಾ ಏತ ಆಹೆ." ಎಂದೂ ಬರೆದಿರುವರು. ಅನೇಕ ಸಂಚಿಕೆಯ ಕೊನೆಯ ಪುಟಗಳ ಮೇಲೆ ಮರಾಠಿ ಮತ್ತು ಇಂಗ್ಲೀಷ ಜಾಹೀರಾತುಗಳಿವೆ. ಪತ್ರಿಕೆಯ ಮೊದಲ ಪುಟಗಳಲ್ಲಿ "ವಿದ್ಯಾಸುಧಾರಣಾ ಸಂಬಂಧವಾದ ವೃತ್ತಾಂತಗಳು"ಎಂಬಲ್ಲಿ ಶಿಕ್ಷಣಖಾತೆಯ ವೃತ್ತಾಂತಗಳೇ ಹೆಚ್ಚಾಗಿ ಇರುತ್ತಿದ್ದುವು. ಆದರೂ ಬೇರೆ ವಿಚಾರಗಳೂ ಅಲ್ಲಿ ಪ್ರಕಟವಾಗಿವೆ.

"ಬೆರಳಿನಲ್ಲಿ ಉಂಗುರವಿಟ್ಟುಕೊಂಡರೆ ಕಿವಿಗೆ ಇಲ್ಲವೆ ಮೂಗಿಗೆ ತಿಂಡಿ ಬಿಡುತ್ತದೆ. ಇದರ ಕಾರಣವೇನೆಂದು ಒಬ್ಬ ಜಿಜ್ಞಾಸು ಕೇಳುತ್ತಾರೆ. ಯಾರಾದರೂ ಉತ್ತರ ಹೇಳುವರೋ ?" (ಡಿಸೆಂಬರ, 1887)

"ಪತಿಸಂಸರ್ಗವಾಗದೆ ಇದ್ದಂಥ ಬಾಲವಿಧವೆಯರ ಪುನರ್‌ವಿವಾಹ ಮಾಡಬಹುದೆಂಬ ಬಗ್ಗೆ ಶ್ರೀ ಶಂಕರಾಚಾರ್ಯ ಸ್ವಾಮಿಗಳ ಅಪ್ಪಣೆ ಪಡೆಯುವದಕ್ಕೋಸ್ಕರವಾಗಿ ಪುಣೆಯಲ್ಲಿ ಕೆಲವರು ಪ್ರಯತ್ನ ನಡೆಸಿದ್ದಾರೆ" (ಅದೇ, ಪುಟ 283)

"ಧಾರವಾಡದಲ್ಲಿ ಇನ್ನೂ ಮಳೆ ಇಲ್ಲ. ನೀರಿನ ತಾಪತ್ರಯ ಇಷ್ಟೆಂದು ಹೇಳಕೂಡದು. ಆಣೆಗೆ ಒಂದು ಕೊಡ ಕುಡಿಯುವ ನೀರು ದೊರೆಯುವದು ದುರ್ಲಭವಾಗಿದೆ. ಆದರೂ ಬೇನೆ ಬೇಸರಿಕೆಯ ಉಪದ್ರವವು ಬಹಳ ಇಲ್ಲೆಂಬುದೊಂದು ಸುದೈವವೆಂದು ಯೆಣಿಸತಕ್ಕದ್ದು" (ಮಾರ್ಚ 1889ರ ಪತ್ರಿಕೆ, ಪುಟ 62)

ಫೆಬ್ರುವರಿ 1889ರ ಸಂಚಿಕೆಯಲ್ಲಿ "ನೀತಿ ಮತ್ತು ಸದಾಚಾರ ಇವುಗಳನ್ನು ಕುರಿತು ಉತ್ತಮವಾದ ನಿಬಂಧವನ್ನು ಕನ್ನಡ ಭಾಷೆಯಲ್ಲಿ ಬರೆದವರಿಗೆ ಅನರೇಬಲ್ ಗುರುಸಿದ್ದಪ್ಪಾ ಅಣ್ಣಾ ಗಿಲಗಂಚಿ ಇವರು ನೂರು ರೂಪಾಯಿ ಬಹುಮಾನ ಕೊಡುವರು" ಎಂಬ ಜಾಹೀರಾತು ಪ್ರಿನ್ಸಿಪಾಲ ವೆಂಕಟ ರಂಗೋ ಕಟ್ಟಿಯವರ (ಇಂಗ್ಲೀಷ) ಸಹಿಯಿಂದ ಅಚ್ಚಾಗಿದೆ.

1907ರ ಸಂಚಿಕೆಯಲ್ಲಿ 'ಸೌದಾಗರ ಬುಕ್ ಡಿಪೊ' 'ಸವಣೂರ ಪಂಚಾಂಗ' 'ರಾಮಾಚಾರ್ಯ ತೊನಶಿ, ಬುಕ್ ಸೇಲರ ಧಾರವಾಡ' ಮೊದಲಾದವರ ಜಾಹೀರಾತುಗಳಿವೆ. ಧಾರವಾಡದಲ್ಲಿ ಸೇರಿದ 'ಕನ್ನಡ ಗ್ರಂಥಕರ್ತರ ಸಮ್ಮೇಲನ'ದ ವಿಷಯವೂ ಬಂದಿದೆ. ಸಮ್ಮೇಲನಕ್ಕೆ ಬಂದ ಮಾನ್ಯ ಆಮಂತ್ರಿತರ ಹೆಸರುಗಳನ್ನು ಕೊಡುತ್ತ 'ಶಾಲಾಪತ್ರಕ'ವು "ಮಿ. ಗಳಗನಾಥ, ತಡಕೋಡ, ಅಮ್ಮಿನಭಾವಿ, ಸಕ್ಕರಿ, ಹೆಬ್ಬಳ್ಳಿ ಮೊದಲಾದ ಪ್ರಾಥಮಿಕ ಶಾಲೆಯ ಅಧ್ಯಾಪಕರೂ...." ಬಂದಿದ್ದರೆಂಬುದನ್ನು ಅಭಿಮಾನದಿಂದ ಬರೆದುಕೊಂಡಿದೆ. (ಜೂನ 1907ರ ಪತ್ರಿಕೆ, ಪುಟ 124).

ಅದೇ ವರ್ಷದ ಸಂಚಿಕೆಯಲ್ಲಿ ಕರಂದೀಕರರು ದಕ್ಷಿಣ ಭಾಗದ ಶಿಕ್ಷಣಾಧಿಕಾರಿಗಳಾದ ಸುದ್ದಿಯೂ ಪ್ರಕಟವಾಗಿದೆ. ಅದಕ್ಕೂ ಮೊದಲಿದ್ದ ಅಧಿಕಾರಿಗಳು ಮಹಾರಾಷ್ಟ್ರದವರೇ ಆಗಿದ್ದರು. "ಈ ಸಾರೆಯಾದರೂ ಅತ್ತ ಕಡೆಯವರೊಬ್ಬರು ಬರಬಹುದೆಂದು ಕೆಲಜನರ ತರ್ಕವಿತ್ತು. ಹಾಗಾಗದೆ ರಾ. ಬ. ಕರಂದೀಕರರು ಆ ಸ್ಥಳಕ್ಕೆ ಏಳು ನೂರು ರೂಪಾಯಿಗಳ ಸಂಬಳದೊಂದಿಗೆ ಕಾಹೀಮಾಗಿ ನೇಮಿಸಲ್ಪಟ್ಟರೆಂದು ತಿಳಿಸಲಿಕ್ಕೆ ನಮಗೆ ಬಹು ಸಮಾಧಾನವೆನಿಸುತ್ತದೆ.

ಇವರು ವಂಶದಿಂದ ಮಹಾರಾಷ್ಟ್ರದವರಾಗಿದ್ದಾರಷ್ಟೆ. ಇವರ ಜನ್ಮಭೂಮಿ ಕರ್ನಾಟಕವು, ಜನ್ಮ ಭಾಷೆ ಕರ್ನಾಟಕವು. ಆರಂಭದಿಂದ ಕೆಲಸ ಮಾಡಿದ ಪ್ರದೇಶವು ಕರ್ನಾಟಕವು, ಮೇಲಾಗಿ ಕರ್ನಾಟಕದಲ್ಲಿ ಕನ್ನಡ ಕಾಲೇಜೆಂದು ಹೆಸರು ಹೊಂದಿದ ಟ್ರೇನಿಂಗ ಕಾಲೇಜದ ಪ್ರಿನ್ಸಿಪಾಲರಾಗಿ ಒಂದು ತಪಕ್ಕಿಂತ ಹೆಚ್ಚು ಕಾಲವನ್ನೇ ಕಳೆದಿರುವರು. ಆದ್ದರಿಂದ ಇವರು ಕನ್ನಡಿಗರೆಂದೇ ಹೇಳಲು ಅಡ್ಡಿಯಿಲ್ಲ."[1] ಇಂಥಲ್ಲೆಲ್ಲ ಪತ್ರಿಕೆಯ ಕನ್ನಡಾಭಿಮಾನವನ್ನು ಗುರುತಿಸಬಹುದಾಗಿದೆ.

ಪತ್ರಿಕೆಯ ಕೊನೆಯ ಭಾಗದಲ್ಲಿರುತ್ತಿದ್ದ 'ಪತ್ರವ್ಯವಹಾರ'ದಲ್ಲಿ ಅನೇಕ ಪ್ರಾಥಮಿಕ ಶಾಲೆಯ ಶಿಕ್ಷಕರು ಗದ್ಯ-ಪದ್ಯಗಳಲ್ಲಿ 'ಶಾಲಾಪತ್ರಕ'ವನ್ನೂ ತಮ್ಮ ಗುರುಗಳನ್ನೂ ಹೊಗಳಿ ಬರೆದಿರುವರು; ಬೇಗನೇ ಪಗಾರ ಸಿಗದ ದುಃಖವನ್ನು ತೋಡಿಕೊಂಡಿರುವರು; ಅದರಂತೆ ಶಾಲಾ ಶಿಕ್ಷಣಕ್ಕೆ ಸಂಬಂಧಿಸಿದ ತಮ್ಮ ವಿಚಾರಗಳನ್ನೂ ಮಂಡಿಸಿರುವರು. ಈ ಭಾಗದಲ್ಲಿಯೇ ಗಳಗನಾಥರು ಶಾಲೆಯಲ್ಲಿ ಮಕ್ಕಳನ್ನು ದೇಹದಂಡನೆಗೆ ಗುರಿಪಡಿಸುವ ಬಗ್ಗೆ ತಮ್ಮ ವಿಚಾರಗಳನ್ನು 'ಶಿಕ್ಷೆಯು' ಎಂಬ ಹೆಸರಿನಿಂದ ಬರೆದಿರುವರು.[2] ಅವರ ಪತ್ರವು 1900ನೆಯ ವರ್ಷದ ಎಪ್ರಿಲ್ ತಿಂಗಳಲ್ಲಿ ಆರಂಭವಾಗಿ ಮುಂದೆ ಮೂರು ಸಂಚಿಕೆಗಳಲ್ಲಿ ಪ್ರಕಟವಾಗಿದೆ. ಕೆರೂರ ವಾಸುದೇವಾಚಾರ್ಯರ 'ಇಂದಿರಾ' ಕಾದಂಬರಿಯ ವಿಮರ್ಶೆಯನ್ನು ಗಳಗನಾಥರು ಇದೇ 'ಪತ್ರವ್ಯವಹಾರ' ಭಾಗದಲ್ಲಿ 1909ರ ಮಾರ್ಚ ತಿಂಗಳ ಸಂಚಿಕೆಯಲ್ಲಿ ಪ್ರಕಟಿಸಿರುವರು.[3] ಇದೇ ಭಾಗದಲ್ಲಿ ಗುತ್ತಲ ಸ್ಕೂಲ ಕಮೀಟಿಯ ಕೆಲವು ಮೆಂಬರರು, 13-6-1904ರಂದು ತಮ್ಮ ಶಾಲೆಯಿಂದ ನಿವೃತ್ತರಾದ ರಾ. ರಾ. ಕೂಸೋ ಮೂಡಲಗಿರಿ ಕುಲಕರ್ಣಿ ಎಂಬ ಶಿಕ್ಷಕರ ಗುಣಗಾನವನ್ನು ಮಾಡಿರುವರು.[4]

ಪತ್ರಿಕೆಯಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಲೇಖನಗಳು ವಿಶೇಷವಾಗಿ ಪ್ರಕಟವಾಗುತ್ತಿದ್ದುವು. ಅಂಥವುಗಳಲ್ಲಿ ಗಳಗನಾಥರು 1909 ಅಕ್ಟೋಬರ ತಿಂಗಳಲ್ಲಿ ಆರಂಭಿಸಿದ 'ನಿಬಂಧ ಶಿಕ್ಷಣ' ಲೇಖನ ಮಾಲೆಯು ಮುಂದೆ ಅನೇಕ ಸಂಚಿಕೆಗಳಲ್ಲಿ ಪ್ರಕಟವಾಗಿದೆ.[5] 'ರಾಜಸ್ಥಾನದ ಇತಿಹಾಸ'ವೆಂಬ ಲೇಖನಮಾಲೆಯೂ 1907ನೆಯ ವರ್ಷದುದ್ದಕ್ಕೂ ಪ್ರಕಟವಾಗಿದೆ. ಅದರಂತೆ ಉಪೇಂದ್ರಶರ್ಮಾ ತೋಳಮಟ್ಟಿ, ತ. ನಾ. ಅಮ್ಮಿನಭಾವಿ, ಮ. ಪ್ರ. ಪೂಜಾರ, ನಾ.ವೆಂ. ಕುರಡಿ ಮೊದಲಾದವರ ಲೇಖನಗಳೂ ಮೇಲಿಂದಮೇಲೆ ಅಚ್ಚಾಗಿವೆ.

ಹೀಗೆ 'ಶಾಲಾಪತ್ರಕ'ವು ಕಳೆದ ಶತಮಾನದಿಂದಲೂ ಕನ್ನಡ ಶಿಕ್ಷಕರಿಗಾಗಿ ಮೀಸಲಾಗಿದ್ದು ಅವರಲ್ಲಿ ಹುದುಗಿದ್ದ ಕನ್ನಡ ಲೇಖನ ಕಲೆಯನ್ನು ವಿಕಾಸಗೊಳಿಸಲು ಯತ್ನಿಸಿದೆ. ಗಳಗನಾಥರು ಈ ಪತ್ರಿಕೆಗೆ ವಿಶೇಷ ರೀತಿಯಿಂದ ಸಂಬಂಧವುಳ್ಳವರಾಗಿದ್ದರೆಂಬುದು ಲಕ್ಷಿಸತಕ್ಕ ಮಾತಾಗಿದೆ. ಈ ಪತ್ರಿಕೆಯಲ್ಲಿ ಆಗಾಗ ಪ್ರೌಢ ಲೇಖನಗಳು ಬಂದಿವೆಯಾದರೂ, ಅದು ಮುಖ್ಯವಾಗಿ 'ಶಾಲಾಪತ್ರಕ'ವೇ ಆಗಿತ್ತು.

---

1. 'ಶಾಲಾಪತ್ರಿಕೆ' ನವ್ವಂಬರ 1907, ಪುಟ 242.
2. ಆಗ ಗಳಗನಾಥರು ಬಂಕಾಪುರ ಶಾಲೆಯ ಹೆಡ್ ಮಾಸ್ತರರಾಗಿದ್ದರು.
3. ಆಗ ಗಳಗನಾಥರು ಟ್ರೇನಿಂಗ ಕಾಲೇಜಿನಲ್ಲಿ ಶಿಕ್ಷಕರಾಗಿದ್ದರು.
4. ಶಾಲಾಪತ್ರಿಕೆ, ಮಾರ್ಚ, 1904.
5. ಆಗ ಗಳಗನಾಥರು ಟ್ರೇನಿಂಗ ಕಾಲೇಜಿನಲ್ಲಿ ಶಿಕ್ಷಕರಾಗಿದ್ದರು.

ಶಿಕ್ಷಣತಜ್ಞರೂ ಕನ್ನಡಾಭಿಮಾನಿಗಳೂ ಆದ ವೆಂಕಟ ರಂಗೋ ಕಟ್ಟಿ ಅವರು 'ಶೋಧಕ' ಎಂಬ ಮಾಸ ಪತ್ರಿಕೆಯನ್ನು 1875ರಲ್ಲಿ ಆರಂಭಿಸಿದ್ದರು. ಆದರೆ ಅದು 1878ರಲ್ಲಿ ನಿಂತು ಹೋಯಿತು. ಮುಂದೆ ಅವರು 1888ರಲ್ಲಿ 'ಲೋಕಶಿಕ್ಷಕ'ವೆಂಬ ಮಾಸಪತ್ರಿಕೆಯನ್ನು ಆರಂಭಿಸಿದರು. ಈ ಪತ್ರಿಕೆಯನ್ನು ನಡೆಸುವಲ್ಲಿ ಅವರಿಗೆ ರಾ. ಹ. ದೇಶಪಾಂಡೆಯವರ ನೆರವೂ ಇದ್ದಿತು. ಆದರೂ ಚಂದಾದಾರರ ಕೊರತೆಯಿಂದ ಪತ್ರಿಕೆ ನಿಂತುಹೋಯಿತು. ಇದೇ ಗತಿಯು ಗದುಗಿನ 'ರಸಿಕ ರಂಜನಿ'(1884)ಗೂ, ವಿಜಾಪುರದಿಂದ 1894ರಲ್ಲಿ ಹೊರಟ 'ಕರ್ನಾಟಕ ಭಾಷಾ ಸೇವಕ'ಕ್ಕೂ ಉಂಟಾಯಿತು. ಮುಂದೆ 1896ರಲ್ಲಿ 'ಕರ್ನಾಟಕ ವಿದ್ಯಾವರ್ಧಕ ಸಂಘ'ದ ಪತ್ರಿಕೆಯಾಗಿ ಹೊರಟ 'ವಾಗ್ಭೂಷಣ' ಹೆಚ್ಚು ಕಾಲ ಬದುಕಿದರೆ, ವಿಜಾಪುರದ 'ಕರ್ನಾಟಕ ಬಂಧು' ವಾರಪತ್ರಿಕೆ ಗಟ್ಟಿಯಾಗಿ ನೆಲೆನಿಂತಿತು.

ಮುಂದೆ ತುಸು ಹೆಚ್ಚು ಕಡಿಮೆ ಈ ಶತಮಾನದ ಆರಂಭದಲ್ಲಿ ಹುಟ್ಟಿದ 'ಸದ್ಬೋಧ ಚಂದ್ರಿಕೆ', 'ಸಚಿತ್ರ ಭಾರತ'. 'ಸದ್ಗುರು', 'ಪ್ರಭಾತ', 'ಪ್ರೇಮ', 'ಶುಭೋದಯ', 'ಧನಂಜಯ' 'ಕನ್ನಡಿಗ,' 'ವಿಜಯ', 'ಕರ್ಮವೀರ', 'ಜಯ ಕರ್ನಾಟಕ' ಮೊದಲಾದ ಮಾಸ ಮತ್ತು ವಾರ ಪತ್ರಿಕೆಗಳು ಜನರಲ್ಲಿ ಸಾಮಾಜಿಕ, ರಾಜಕೀಯ ಜಾಗೃತಿಯನ್ನುಂಟು ಮಾಡುವುದಲ್ಲದೆ, ಸಾಹಿತ್ಯಿಕವಾಗಿ ಕೂಡ ಮಹತ್ತ್ವವನ್ನು ಪಡೆದುವು. ಆದರೆ ಇವುಗಳಲ್ಲಿ ಬಹುಸಂಖ್ಯ ಪತ್ರಿಕೆಗಳು ತೀರ ಅಲ್ಪಕಾಲಿಕವಾಗಿದ್ದುವು.

'ವಾಗ್ಭೂಷಣ'ಕ್ಕೆ ಒಳ್ಳೆಯ ಕಾರ್ಯಕರ್ತರಿದ್ದರಲ್ಲದೆ, 'ಕರ್ನಾಟಕ ವಿದ್ಯಾವರ್ಧಕ ಸಂಘ'ದಂಥ ಸಾರ್ವಜನಿಕ ಸಂಘವೇ ಅವರ ಜನಕವಾಗಿದ್ದಿತು. ಆ ಕಾಲಕ್ಕೆ ಒಳ್ಳೆಯ ಸಾಹಿತ್ಯವನ್ನೇ ಪ್ರಕಟಿಸುತ್ತಿದ್ದ ಆ ಪತ್ರಿಕೆ ಕೂಡ ತನ್ನ ಕಾಲಮೇಲೆ ನಿಲ್ಲಲಿಕ್ಕೆ ಸಮರ್ಥವಾಗಲಿಲ್ಲ; ಚಂದಾದಾರರ ಸಂಖ್ಯೆ ಹೆಚ್ಚಲಿಲ್ಲ. ಕುಂಟುತ್ತ ಸಾಗಿ ಕೊನೆಗೆ ನಿಂತೇ ಹೋಗಬೇಕಾಯಿತು. ಕೆರೂರ ವಾಸುದೇವಾಚಾರ್ಯರಂಥ ಸಮರ್ಥ ಲೇಖಕ-ಸಂಪಾದಕರಿದ್ದರೂ 'ಸಚಿತ್ರ ಭಾರತ' ಮತ್ತು 'ಶುಭೋದಯ'ಗಳು ಬಹುಕಾಲ ಬಾಳಲಿಲ್ಲ. ಜಿಂದೂರಾವ ಮುತಾಲೀಕ ದೇಸಾಯಿಯವರು 'ಸಚಿತ್ರ ಭಾರತ'ದ (1913) ಸಂಸ್ಥಾಪಕರಾಗಿದ್ದರೂ, ವಾಸುದೇವಾಚಾರ್ಯರೇ ಅದರ ಪ್ರಮುಖ ಲೇಖಕರೂ, ಕೆಲಕಾಲ ಸಂಪಾದಕರೂ ಆಗಿದ್ದರು. ಅದರಲ್ಲಿ (1914-17) ಅವರ ಅನೇಕ ಸುಂದರವಾದ ಲೇಖನಗಳೂ, ಕಥೆಗಳೂ, ಕಾದಂಬರಿಗಳೂ, ಕವಿತೆಗಳೂ, ನಾಟಕಗಳೂ ಪ್ರಕಟವಾದುವು. **'ಶುಭೋದಯ'**ವು (1917) ಮುಖ್ಯವಾಗಿ ರಾಜಕೀಯ ವಾರಪತ್ರಿಕೆಯಾದರೂ, ಆಚಾರ್ಯರ ಹರಿತ ಶೈಲಿಯಿಂದ ಅದು ಸಾಹಿತ್ಯಿಕ ಮಹತ್ತ್ವವನ್ನೂ ಪಡೆದಿತ್ತು. ಕೆರೂರ ವಾಸುದೇವಾಚಾರ್ಯರು ಪತ್ರಿಕಾ ಪ್ರಪಂಚಕ್ಕೆ ಸಲ್ಲಿಸಿದ ಸೇವೆಯನ್ನು ನೆನೆಯುತ್ತ ಡಾ. ರಂ. ಶ್ರೀ. ಮುಗಳಿ ಅವರು, "ಅಂದಿನ ಉತ್ತರ ಕರ್ನಾಟಕದಲ್ಲಿ 'ಶುಭೋದಯ'ವು ಅತ್ಯಂತ ಲೋಕಪ್ರಿಯವಾದ ವಾರಪತ್ರಿಕೆಯಾಗಿ ಪರಿಣಮಿಸಿತು. ಅದರ ಬರವನ್ನು ಇದಿರು ನೋಡುತ್ತ ಅನೇಕರು ಕಾಲತುದಿಯ ಮೇಲೆ ನಿಲ್ಲುತ್ತಿದ್ದರು. ಅದು ಕೈಗೆ ಬಿದ್ದೊಡನೆ ಮೊದಲಿನಿಂದ ಕೊನೆಯವರೆಗೆ ಓದಿ ತಿರುತಿರುಗಿ ಪಠಣಮಾಡಿ ವಾಸುದೇವಾಚಾರ್ಯರ ಮಾರ್ಮಿಕ ವಿನೋದ, ಸೂಕ್ಷ್ಮ ನಿರೀಕ್ಷಣೆ, ಧಾರಾಳವಾದ ಶೈಲಿಗಳನ್ನು ಮೆಚ್ಚುತ್ತಿದ್ದರು. ಪ್ರತಿಯೊಂದು ಸಂಚಿಕೆ ಒಂದು ಸಾಹಿತ್ಯ ಕೃತಿಯಷ್ಟು ಮೋಹಕವಾಗಿರುತ್ತಿತ್ತು. ಇನ್ನೂವರೆಗೂ ಅಷ್ಟು ಜನಪ್ರಿಯವಾದ ವಾರ

ಪತ್ರಿಕೆ ಹುಟ್ಟಿಕೊಂಡಿಲ್ಲ."[1] ಎಂದು ಹೇಳಿರುವರು. ಆದರೆ "ಆ ಕಾಲಕ್ಕೆ ಕನ್ನಡ ಪತ್ರಿಕೆ ಹೊರಡಿಸುವದೂ, ಯಶಸ್ವಿಯಾಗಿ ಆರ್ಥಿಕ ದೃಷ್ಟಿಯಿಂದ ಸ್ವಾವಲಂಬಿಯಾಗಿ ನಡೆಸಿಕೊಂಡು ಹೋಗುವದೂ ಬಹಳ ಕಠಿನವಾಗಿದ್ದಿತು. ಆಚಾರ್ಯರು ಈ ಪತ್ರಿಕೆಗಾಗಿ ಬಹಳ ಪರಿಶ್ರಮ ಪಟ್ಟರು.... ಹೆಚ್ಚೆಂದರೆ ಪತ್ರಿಕೆಯ ಪ್ರಸಾರ 1300ಕ್ಕೆ ಮುಟ್ಟಿತೆಂದು ನನಗೆ ಅವರ ಮಗ ಹೇಳಿದ್ದು ನೆನಪು.... ಆ ಕಾಲದಲ್ಲಿ ಕನ್ನಡ ಓದುವವರ ಸಂಖ್ಯೆಯೇ ಕಡಿಮೆ ಇದ್ದುದರಿಂದ 'ಶುಭೋದಯ'ವನ್ನು ನಡೆಸಿಕೊಂಡು ಹೋಗುವಲ್ಲಿ ಆಚಾರ್ಯರು ಬಹಳ ಹಾನಿಗೊಳಗಾದರು."[2] ಎಂದು ಹ. ರಾ. ಪುರೋಹಿತರು ಹೇಳುವದೂ ಅಷ್ಟೇ ನಿಜವಾಗಿದೆ. ಶ್ರೀ ಪುರೋಹಿತರ ಮಾತಿನಿಂದ ಆ ಕಾಲಕ್ಕೆ ಪತ್ರಿಕೆ ನಡೆಸುವದು ಎಷ್ಟು ಕಠಿಣವಾಗಿತ್ತೆಂಬ ಕಲ್ಪನೆ ಬರುವಂತಿದೆ.

ಆಲೂರ ವೆಂಕಟರಾಯರ ಸಂಪಾದಕತ್ವದಲ್ಲಿ ಆರಂಭವಾದ 'ಜಯ ಕರ್ನಾಟಕ'ವು ಧಾರವಾಡದ ಮತ್ತೊಂದು ಮಹತ್ತ್ವದ ಸಾಹಿತ್ಯಿಕ ಪತ್ರಿಕೆ. ಬೇಂದ್ರೆ, ಮುಗಳಿ ಮೊದಲಾದವರ ಬೆಂಬಲದಿಂದ ಈ ಪತ್ರಿಕೆಯು ಸಾಹಿತ್ಯಿಕ ಗುಣದಿಂದ ಉನ್ನತ ಮಟ್ಟವನ್ನು ಕಾಯ್ದುಕೊಂಡರೂ, ಇದು ಈ ಶತಮಾನದ ಆರಂಭದ ಪತ್ರಿಕೆಯಲ್ಲ. ಅದು 1923ರಲ್ಲಿ ಆರಂಭವಾಯಿತು. ಅದರಂತೆ, 'ಕರ್ಮವೀರ'ವು 1921ರಲ್ಲಿ ಆರಂಭವಾಯಿತು.

ಇಲ್ಲಿ ಯಶವಂತರಾವ ಜಠಾರರ 'ಪ್ರಭಾತ'ವನ್ನು ನೆನೆಯಬಹುದಾಗಿದೆ. 1918ರಲ್ಲಿ ಆರಂಭವಾದ ಈ ಪತ್ರಿಕೆ ಕೇವಲ ಪದ್ಯಮಯವಾಗಿತ್ತು. ಜಾಹೀರಾತುಗಳು ಕೂಡ ಪದ್ಯಮಯವಾಗಿಯೇ ಇರುತ್ತಿದ್ದುವು. ಆ ಕಾಲದ ಖ್ಯಾತ ಕವಿಗಳಾದ ಶಾಂತಕವಿಗಳು, ಕಾವ್ಯಾನಂದರು, ವಲ್ಲಭ ಮಹಾಲಿಂಗ ತಟ್ಟಿ, ಬಸವಾರ್ಯ ಕಿತ್ತೂರ, ಕರಿಬಸವ ಶಾಸ್ತ್ರಿ, ರೈನಾಪೂರ, ದ. ರಾ. ಬೇಂದ್ರೆ, ಬೆಟಗೇರಿ ಕೃಷ್ಣಶರ್ಮಾ ಮೊದಲಾದ ಅನೇಕರ ಕವನಗಳು ಪ್ರಕಟವಾಗುತ್ತಿದ್ದುವು. "ಇದರ ಮೂಲಕ ಹೊಸಗನ್ನಡ ಕಾವ್ಯ ಪರಂಪರೆಯು ಪ್ರಭಾತವೇ ಆಯಿತೆಂದು ಹೇಳಿದರೂ ಅತಿಶಯೋಕ್ತಿಯಲ್ಲ."[3] ಆದರೇನು, ಎಷ್ಟು ಪ್ರಯತ್ನಿಸಿದರೂ ಸಾಕಷ್ಟು ಚಂದಾದಾರರು ದೊರಕದೆ, 'ಪ್ರಭಾತ'ವು ಉದಯವಾಗಿ ಕೇವಲ ಎರಡು ವರ್ಷಗಳಲ್ಲಿಯೇ ಅಸ್ತಂಗತವಾಯಿತು.

ಮುಂಬಯಿ ಕರ್ನಾಟಕದ ಪತ್ರಿಕಾ ಪ್ರಪಂಚದ ಇನ್ನೊಂದು ವಿಚಿತ್ರ ಅಂಶವೆಂದರೆ, ಇಲ್ಲಿಯ ಕೆಲವು ವಾರ್ತಾಪತ್ರಗಳು ಮರಾಠಿ ಭಾಷೆಯಲ್ಲಿದ್ದುದು. 'ಧಾರವಾಡ ವೃತ್ತ', 'ಕರ್ನಾಟಕ ವಾರ್ತಿಕ', 'ಹುಬಳೀ ವೈಭವ' ಮೊದಲಾದ ಮರಾಠಿ ಪತ್ರಿಕೆಗಳನ್ನು ಹೆಚ್ಚಾಗಿ ಕನ್ನಡಿಗರೇ ನಡೆಸುತ್ತಿದ್ದರು. ಮುದವೀಡು ಕೃಷ್ಣರಾಯರು 'ಧಾರವಾಡ ವೃತ್ತ'ದ ಸಂಪಾದಕರಾಗಿ ಕೆಲವು ವರ್ಷ ಸೇವೆ ಸಲ್ಲಿಸಿದ್ದಾರೆ. ಅದಕ್ಕೆ ಕಾರಣವೇನೆಂದರೆ, "ಆಗಿನ ಪತ್ರಿಕೆಗಳನ್ನು ಅಧಿಕಾರಿಗಳು, ಶಾಲಾ ನೌಕರರು ಮತ್ತು ಕೆಲವು ವ್ಯಾಪಾರಸ್ಥರು ಓದುತ್ತಿದ್ದರು. ಅವರೆಲ್ಲರ ಮೇಲೆ ಅದೆಷ್ಟರ ಮಟ್ಟಿಗೆ ಮರಾಠಿಯ ಪ್ರಭಾವವಿದ್ದಿತೆಂಬುದು ತಿಳಿದ ವಿಷಯ. ಈ ಪತ್ರಿಕೆಗಳನ್ನು ಹೊರಡಿಸುತ್ತಿದ್ದವರು ಸ್ಥಳೀಯ ಕನ್ನಡಿಗರೇ, ಅವರಲ್ಲಿ ಬರುತ್ತಿದ್ದ ವಾರ್ತೆಗಳಾದರೂ ಕರ್ನಾಟಕಕ್ಕೆ ಸಂಬಂಧಿಸಿದವುಗಳೇ. ಭಾಷಾ ಮಾಧ್ಯಮವು ಮಾತ್ರ ಮರಾಠಿಯಾಗಿದ್ದಿತು."[4] ಈ ಕಾಲಕ್ಕೆ

1. ರಂ. ಶ್ರೀ. ಮುಗಳಿ: 'ವಾಸುದೇವಾಚಾರ್ಯರ ಶೈಲಿ', ವಾಸುದೇವ ಪ್ರಶಸ್ತಿ, ಪುಟ 233
2. ಹ. ರಾ. ಪುರೋಹಿತ : 'ನಾ ಕಂಡ ವಾಸುದೇವಾಚಾರ್ಯರು', ಅದೇ, ಪುಟ 265.
3. ರಾ. ಯ. ಧಾರವಾಡಕರ : 'ಪ್ರಭಾತ ಮಾಸಪತ್ರಿಕೆ' ವಾಗ್ಭೂಷಣ, 1973, ಪುಟ 91
4. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ 482

ಕೆಲವು ಕನ್ನಡ ಪತ್ರಿಕೆಗಳಿದ್ದರೂ, ಜನರು ಹೆಚ್ಚಾಗಿ 'ಮಾಸಿಕ ಮನೋರಂಜನ', 'ಕೇಸರಿ', 'ಕರಮಣೂಕ'ದಂಥ ಮರಾಠಿ ನಿಯತಕಾಲಿಕೆಗಳನ್ನೇ ಹೆಚ್ಚಾಗಿ ಓದುತ್ತಿದ್ದರು. ಗಳಗನಾಥರೂ ಕೂಡ ಈ ಮರಾಠಿ ಪತ್ರಿಕೆಗಳಿಂದಲೇ ಸ್ಫೂರ್ತಿಯನ್ನೂ, ಪ್ರೇರಣೆಯನ್ನೂ ಪಡೆದು ಕನ್ನಡದಲ್ಲಿ ಬರೆಯತೊಡಗಿದರು.

ಒಟ್ಟಿನಲ್ಲಿ ಕಳೆದ ಶತಮಾನದ ಕೊನೆಗೂ, ಈ ಶತಮಾನದ ಮೊದಲಿನ ಎರಡು ದಶಕಗಳಲ್ಲಿಯೂ ಉತ್ತರ ಕರ್ನಾಟಕದಲ್ಲಿ ಕನ್ನಡ ಪತ್ರಿಕಾ ವ್ಯವಸಾಯ ಬಹಳ ಕುಂಟುತ್ತ ಸಾಗಿತ್ತು. ಪತ್ರಿಕೆಗಳಿಗೆ ಪ್ರತಿಕೂಲವಾದ ಇಂಥ ವಾತಾವರಣದಲ್ಲಿಯೇ ಗಳಗನಾಥರು 1907ರಲ್ಲಿ ಆರಂಭಿಸಿದ 'ಸದ್ಬೋಧ ಚಂದ್ರಿಕೆ'ಯ ಚಂದಾದಾರರ ಸಂಖ್ಯೆ 800 ರಿಂದ 8000ದ ವರೆಗೆ ಮುಟ್ಟಿತೆಂಬುದು ಅಚ್ಚರಿಯ ಮಾತೇ ಸರಿ. ಈ ಪತ್ರಿಕೆಯ ಜನಪ್ರಿಯತೆಯ ಶ್ರೇಯಸ್ಸೆಲ್ಲವೂ ಗಳಗನಾಥರಿಗೇ ಮೀಸಲು. ಅವರು ಅಗಡಿಯನ್ನು ತ್ಯಜಿಸಿದ ಅನಂತರ 'ಸದ್ಬೋಧ ಚಂದ್ರಿಕೆ'ಯ ಪ್ರಸಾರವೂ ಕಡಿಮೆಯಾದುದೇ ಈ ಮಾತಿಗೆ ಸಾಕ್ಷಿಯಾಗಿದೆ.

ಪತ್ರಿಕೆಗಳನ್ನು ನಡೆಸಿಕೊಂಡುಹೋಗುವವರಿಗಿದ್ದ ಸಮಸ್ಯೆ ಗ್ರಂಥಗಳನ್ನು ಬರೆಯುವವರಿಗೂ ಇದ್ದಿತು. ಗ್ರಂಥಪ್ರಕಟನೆಯ ವಿಷಯವಾಗಿ 19ನೆಯ ಶತಮಾನದ ಕೊನೆಯ ಭಾಗದಲ್ಲಿದ್ದ ಪ್ರತಿಕೂಲ ಸ್ಥಿತಿಯ ಕಲ್ಪನೆ ಮುಳಬಾಗಲರ 'ಉತ್ತರರಾಮಚರಿತ್ರ'ದಿಂದ ವಿದಿತವಾಗುವಂತಿದೆ. 1879ರಲ್ಲಿ ಅತ್ಯಂತ ಕಳಕಳಿಯಿಂದ ಅವರು ಗ್ರಂಥವನ್ನೇನೋ ಅನುವಾದಿಸಿದರು. ಆದರೆ ಅದರ ಮುದ್ರಣಕ್ಕಾಗಿ ಅವರು ಮಾಡಿದ ಪ್ರಯತ್ನ ಅಷ್ಟಿಷ್ಟಲ್ಲ. ಆಗ ಬೇರೆ ಪ್ರಕಾಶನ ಸಂಸ್ಥೆಗಳಿರಲಿಲ್ಲ. ಸ್ವತಃ ಅಚ್ಚು ಹಾಕಿಸುವ ಅನುಕೂಲತೆ ಅವರಿಗಿರಲಿಲ್ಲ. ಸರಕಾರದ ಧನಸಹಾಯಕ್ಕಾಗಿ ರೊದ್ದ ರಾಯರು, ಭುಜಂಗರಾಯರು, ಕೊನೆಗೆ ರಸೆಲ್ ಸಾಹೇಬರೂ ಶಿಫಾರಸು ಮಾಡಬೇಕಾಯಿತು. ಕೊನೆಗೆ ಶಿಕ್ಷಣ ಶಾಖೆಯ ಡೈರೆಕ್ಟರು ಅವರಿಗೆ ಗ್ರಂಥ ಪ್ರಕಾಶನಕ್ಕೆ ಸಹಾಯವೆಂದು 200ರೂ.ಗಳನ್ನು ಕಳಿಸಿದರು. "ಮೆ॥ ಚಾಟಫೀಲ್ಡ ದೊರೆಗಳು ಈ ಪ್ರಕಾರ ನನ್ನ ಗ್ರಂಥಗಳ ಸಂಬಂಧದಿಂದ ಬಹಳ ಉಪಕಾರ ಮಾಡಿದ್ದಾರೆ. ಅದನ್ನು ನಾನು ಜನ್ಮವಿರುವವರೆಗೂ ಮರೆಯಲಾರೆನು.... (ಆದರೆ).... ಆಗ ನನ್ನ ಮಗಳ ಮದುವೆಯ ಕಾರ್ಯ ನಡೆದಿತ್ತು. ಅದಕ್ಕೆ ಆಯತ್ತವಾಗಿ ರೂಪಾಯಿಗಳು ದೊರೆತವೆಂದು ನಾನು ಆ ಹಣವನ್ನು ಬಳಸಿಕೊಂಡ ಕಾರಣ 'ಉತ್ತರರಾಮ ಚರಿತ್ರ'ವನ್ನು ಮುದ್ರಿಸುವದು ಹಾಗೆ ಉಳಿಯಿತು."[1] ಎಂದು ಮುಳಬಾಗಲರು ದೈನ್ಯವಾಗಿ ನುಡಿದಿರುವದನ್ನು ನೋಡಬೇಕು. ಗ್ರಂಥಕರ್ತರ ಇಂಥ ದೀನಸ್ಥಿತಿಯನ್ನು ನಿವಾರಿಸಲೆಂದೇ ಕರ್ನಾಟಕ ವಿದ್ಯಾವರ್ಧಕ ಸಂಘವು ಗ್ರಂಥ ಪ್ರಕಾಶನ ಕಾರ್ಯವನ್ನು ಆರಂಭಿಸಿ, ತಮ್ಮ ಮೊದಲ ಪ್ರಕಟನೆಗಾಗಿ ಮುಳಬಾಗಲರ 'ಉತ್ತರರಾಮಚರಿತ್ರ'ವನ್ನೇ ಆಯ್ದುಕೊಂಡಿತು. ಸಂಘವು ಒಟ್ಟು 11 ಗ್ರಂಥಗಳನ್ನು ಮುದ್ರಿಸಿತು. ಅಷ್ಟೇ ಅಲ್ಲ, 1896ರಲ್ಲಿ ಪ್ರಾರಂಭವಾದ ತನ್ನ 'ವಾಗ್ಭೂಷಣ'ದಲ್ಲಿ ಅನೇಕ ಗ್ರಂಥಗಳನ್ನು ಧಾರಾವಾಹಿಯಾಗಿ ಪ್ರಕಟಿಸಿತು. ಆದರೆ ಅಂಥ ಗ್ರಂಥಗಳಲ್ಲಿ ಜನಪ್ರಿಯವಾದವುಗಳನ್ನು ಗ್ರಂಥ ರೂಪದಲ್ಲಿ ಮುದ್ರಿಸುವದು ಸಂಘಕ್ಕೆ ಮನಸ್ಸಿದ್ದರೂ ಸಾಧ್ಯವಾಗದೆ ಅದು ಮಿಡುಕಬೇಕಾಯಿತು. ಇದಕ್ಕೆ ಉದಾಹರಣೆಯಾಗಿ ಗಳಗನಾಥರ 'ಪದ್ಮನಯನಾ'ವನ್ನು ನೋಡಬಹುದು. 'ಪದ್ಮನಯನಾ' ಮೊದಲು 1898ರಲ್ಲಿ

1. ಧೋ. ನ. ಮುಳಬಾಗಲ : ಉತ್ತರರಾಮ ಚರಿತ್ರ (ಕರ್ನಾಟಕ ವಿದ್ಯಾವರ್ಧಕ ಸಂಘದ ಪ್ರಕಟನೆ 1892) ಪುಟ 4

'ವಾಗ್ಭೂಷಣ'ದಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು. ಮುಂದೆ ಸಂಘದವರು ಗ್ರಂಥ ರೂಪವಾಗಿ ಅದರ ದ್ವಿತೀಯ ಮುದ್ರಣವನ್ನು ತರಬೇಕೆಂದು ಬಯಸಿದರು. ಅವರ ಪ್ರಯತ್ನದ ಕಥೆ ಗಮನಾರ್ಹವಾಗಿದೆ.

" 'ಪದ್ಮನಯನಾ' ಕಾದಂಬರಿಯನ್ನು ಪುನಹಾ ಛಾಪಿಸುವ ಸಲುವಾಗಿ ಅದರ ಖರ್ಚಿನ ಅಂದಾಜನ್ನು ಮಾಡಿ ಹೆಚ್ಚು ನಫೆಯು ಆಗುವಂತೆ ಇದ್ದರೆ ಸಂಘದವರೇ ಸ್ವತಃ ಖರ್ಚಿನಿಂದ ಛಾಪಿಸತಕ್ಕದ್ದು" ಎಂದು 20-1-1901ರಂದು ಸಂಘದವರು ನಿರ್ಣಯಿಸಿದರು.

ಸಂಘದ ಕಾರ್ಯದರ್ಶಿಗಳಾದ ಶ್ರೀ ಕರಗುದರಿ ಅವರು ಅಚ್ಚು ಹಾಕಿಸುವ ಬಗ್ಗೆ ವಿಚಾರಿಸಿ,

"ಸದರ ಪುಸ್ತಕವನ್ನು ಮುದ್ರಿಸಲಿಕ್ಕೆ ಅಜಮಾಸ 300 ರೂಪಾಯಿಗಳು ಹತ್ತುವುವೆಂಬ ಅಂದಾಜು ಆಗುತ್ತದೆ. ಕಾರಣ ಇಂತಿಷ್ಟು ರಕಮಂನು ಖರ್ಚು ಮಾಡಲಿಕ್ಕೆ ತುರ್ತುಹಣ ಸಿಲಕು ಇರುವದಿಲ್ಲ. ಇದರ ಹೊರ್ತು ಯಾವತ್ತೂ ಪುಸ್ತಕಗಳಾದರೂ ಬೇಗನೇ ಮಾರಿ ಬಂದೀತೆಂದು ಖಾತ್ರಿ ಹೇಳಲಿಕ್ಕೆ ಬರುವಂತೆ ಯಿಲ್ಲ. ಕಾರಣ ಸದರ ಪುಸ್ತಕವಂಸು ಧಾರವಾಡ ಕರ್ನಾಟಕ ಬುಕ್ಕ್ ಡಿಪೋ ಪ್ರೆಸ್ಸಿನವರು ಒಂದು ಸಾವಿರ ಪ್ರತಿ ತಮ್ಮ ಖರ್ಚಿನಿಂದ ಮುದ್ರಿಸಿ ನಮಗೆ 500ಗಳನ್ನು ಕೊಡಲಿಕ್ಕೆ ಒಪ್ಪುತ್ತಾರೆ. ಕಾರಣ ಈ ತರದಿಂದ ಮುದ್ರಿಸಿ ಸಂಘಕ್ಕೆ ಏನೂ ಖರ್ಚು ಹತ್ತದೆ ಕೆಲ್ಸಸಾಗಿಸಬೇಕಂತ ನನ್ನ ಸೂಚನೆಯಿದೆ" ಎಂದು 29-1-1901 ರಂದು ವ್ಯವಸ್ಥಾಪಕ ಸಭೆಗೆ ವರದಿ ಮಾಡಿದರು.

ವ್ಯವಸ್ಥಾಪಕರಿಗೆ ಬೇರೆ ಮಾರ್ಗ ಉಳಿಯಲಿಲ್ಲ. ಅವರು ದಿ. 17-3-1901ರ ಸಭೆಯಲ್ಲಿ "ಪದ್ಮನಯನಾ ಕಾದಂಬರಿಯನ್ನು ಕರ್ನಾಟಕ ಬುಕ್ ಡಿಪೋ ಪ್ರೆಸ್ಸಿನವರು ಒಪ್ಪಿ ಕೊಂಡ ಪ್ರಕಾರ ಅವರಿಗೆ ಒಪ್ಪಿಸಿ ಅವರು 1000 ಪ್ರತಿಗಳನ್ನು ಮುದ್ರಿಸಿ 500 ಪ್ರತಿಗಳನ್ನು ಸಂಘಕ್ಕೆ ಕೊಡಬೇಕೆಂಬ ಕರಾರ ಮಾಡಿ ಕೊಡಬೇಕು" ಎಂದು ನಿರ್ಣಯಿಸಿದರು.

ಆದರೆ ಕರ್ನಾಟಕ ಬುಕ್ ಡಿಪೋ ಪ್ರೆಸ್ಸಿನವರೂ ಅನಂತರ, 'ನಫೆ' ಆಗಲಾರದೆಂದು ಅನಿಸಿದ್ದರಿಂದ, ಹಿಂದೇಟು ಹಾಕಿರಬಹುದು. 'ಪದ್ಮನಯನಾ' ಕಾದಂಬರಿಯ ಎರಡನೆಯ ಮುದ್ರಣ ಹೊರಡಲೇ ಇಲ್ಲ. ಸಂಘದವರ ಮನಸ್ಸಿನಲ್ಲಿ ಮಾತ್ರ ಅದರ ಎರಡನೆಯ ಮುದ್ರಣವನ್ನು ತರುವ ವಿಚಾರ ಇದ್ದೇ ಇದ್ದಿತು. ಯಾಕೆಂದರೆ ಮುಂದೆ 1902, 1903 ಮತ್ತು 1904ನೆಯ ವರ್ಷಗಳ ವಾರ್ಷಿಕ ವರದಿಯಲ್ಲಿ ಕಾರ್ಯದರ್ಶಿಗಳು, ಕಾದಂಬರಿಯ ಪುನರ್ಮುದ್ರಣ ತರಲಾಗದ್ದಕ್ಕೆ ವಿಷಾದಿಸುತ್ತ ಬಂದಿದ್ದಾರೆ.

"ಪದ್ಮನಯನಾ – ಈ ಪುಸ್ತಕದ ಎರಡನೆಯ ಆವೃತ್ತಿಯನ್ನು ತೆಗೆಯುವ ಸುದಿನವಂತೂ ಒದಗಲೇವಲ್ಲದು. ಈಗೆರಡು ವರ್ಷಗಳಿಂದ ಈ ಬಗ್ಗೆ ಮಂಜೂರ ಆದ ಹಣ ಸಹ ಖರ್ಚು ಮಾಡಲಿಕ್ಕೆ ಧೈರ್ಯ ಸಾಲದೇ ಹಾಗೇ ಉಳದಿದೆ. ಇದನ್ನು ಮುದ್ರಿಸಿದರೆ ತಮಿಳು ಪುಸ್ತಕಕ್ಕೆ ಬಂದ ಸ್ಥಿತಿಯೇ ಬರಬಹುದೆಂತ ಭಯಪಡುತ್ತೇವೆ.[1] ಆದರೂ ಈ ಪ್ರಕಾರ ಧೈರ್ಯಗುಂದದೆ ಬರುವ ವರ್ಷ ಕೆಲವೊಂದು ಶರ್ತಿನಿಂದ ಸಂಘಕ್ಕೆ ತುಸು ಖರ್ಚು ಬರುವ

1. ಸಂಘದವರು ಪ್ರಕಟಿಸಿದ ಎ. ನರಸಿಂಹಮೂರ್ತಿಯವರ 'ಕನ್ನಡ ತಮಿಳು ಮೊದಲನೇ ಪುಸ್ತಕ' ಪ್ರತಿಗಳು ಮಾರಾಟವಾಗದೇ ಹಾಗೇ ಕುಳಿತಿದ್ದುವು.

ಉಪಾಯ ಮಾಡಿ ಮುದ್ರಿಸುವ ಯತ್ನ ಮಾಡುವೆವು" ಎಂದು ಕಾರ್ಯದರ್ಶಿಯವರು, 15–5–1904ರಂದು ವರದಿ ಮಾಡಿದ್ದರೂ ಅವರ ಯತ್ನ ಕೊನೆಗೂ ಫಲಿಸಲೇ ಇಲ್ಲ.

ಈ ಸಂಗತಿಯು ಆ ಕಾಲದ ಗ್ರಂಥೋದ್ಯಮದ ಸ್ಥಿತಿಯನ್ನು ಸೂಚಿಸುತ್ತದೆ. ಹಾಗೆ, ಗ್ರಂಥಪ್ರಕಾಶನ ಸಂಸ್ಥೆಗಳೂ ಹೆಚ್ಚಾಗಿರಲಿಲ್ಲ. ಸಾಹಿತ್ಯಿಕ ಗ್ರಂಥಗಳನ್ನು ಪ್ರಕಾಶಿಸುವ ಬಹುಶಃ ಏಕಮೇವ ಸಂಸ್ಥೆಯೆಂದರೆ ಕರ್ನಾಟಕ ವಿದ್ಯಾವರ್ಧಕ ಸಂಘವೇ ಆಗಿತ್ತು. ಅಲ್ಲದೆ ಧಾರವಾಡದ ಅನಾಡ ಚನವೀರಪ್ಪನವರ 'ಕರ್ನಾಟಕ ಬುಕ್ ಡಿಪೋ ಪ್ರೆಸ್', ಮತ್ತು ಬೆಳಗಾವಿಯ ಅಬಾಜಿ ರಾಮಚಂದ್ರ ಸಾವಂತರ 'ರಾಮತತ್ವ ಪ್ರಕಾಶನ ಮಂದಿರ'ಗಳು 19ನೆಯ ಶತಮಾನದ ಕೊನೆಯ ಭಾಗದಲ್ಲಿದ್ದ ಪ್ರಮುಖ ಪ್ರಕಾಶನ ಸಂಸ್ಥೆಗಳಾಗಿದ್ದುವು. ಇವು ಪತ್ರ್ಯ ಪುಸ್ತಕ, ಪಂಚಾಂಗಗಳನ್ನು ಮೊದಲು ಮಾಡಿಕೊಂಡು ಕಥೆ–ಕಾದಂಬರಿ–ಕಾವ್ಯ–ನಾಟಕಗಳನ್ನು ಪ್ರಕಟಿಸಿವೆ. ಆದರೂ ಸಾಹಿತ್ಯಿಕ ಗ್ರಂಥಗಳನ್ನು ಪ್ರಕಟಿಸುವುದೇ ಇವುಗಳ ಮುಖ್ಯ ಉದ್ದೇಶ ವಾಗಿರಲಿಲ್ಲವೆಂಬುದನ್ನು ಮರೆಯಲಾಗದು.

ಒಟ್ಟಿನಲ್ಲಿ ಕನ್ನಡ ಗ್ರಂಥಪ್ರಕಾಶನಕ್ಕೆ ಕನ್ನಡಿಗರಿಂದ ಹೆಚ್ಚಿನ ಪ್ರೋತ್ಸಾಹವಿರಲಿಲ್ಲವೆಂದೇ ಹೇಳಬೇಕಾಗುತ್ತದೆ. ಮುಂಬಯಿ ಸರಕಾರದ ವಿದ್ಯಾಖಾತೆಯವರು ಮಾತ್ರ ಆಗಾಗ ಇಂಥ ಗ್ರಂಥಗಳಿಗೆ ತುಸು ಮಟ್ಟಿಗಿನ ಸಹಾಯಮಾಡುತ್ತಿದ್ದರೆನ್ನಬಹುದು. ತುರಮುರಿ ಮತ್ತು ಶಾಂತವೀರ ಕಿತ್ತೂರ ಅವರು ಬರೆದ 'ರಾಜಶೇಖರ ವಿಳಾಸ'ದ ಟೀಕೆಗಳಿಗೆ ವಿದ್ಯಾಖಾತೆಯಿಂದ ಅಲ್ಪಸಹಾಯ ದೊರತಿರಬಹುದು. ಏಕೆಂದರೆ ಧೋಂಡೋಪಂತ ಮುಳಬಾಗಲರ 'ಉತ್ತರ ರಾಮಚರಿತೆ'ಯ ಪ್ರಕಟನೆಗೆ ಸಹಾಯ ನೀಡಬೇಕೆಂದು ಸರಕಾರಕ್ಕೆ ಶಿಫಾರಸು ಮಾಡುತ್ತ ರಸೆಲ್ ಸಾಹೇಬರು "ಈ ಗ್ರಂಥವು ಲೋಕಪ್ರಿಯವಾಗಿದೆ. ಇದಕ್ಕೆ ರಾಜಶೇಖರದ ಆಶ್ವಾಸಗಳಿಗೆ ಕೊಟ್ಟಂತೆ ಆಶ್ರಯವನ್ನು ಕೊಡಬೇಕು."[1] ಎಂದು ಬರೆದಿರುವರು. ವಿದ್ಯಾ ಇಲಾಖೆ ಮೊದಲು ಕೊಡಲಾಗದೆಂದು ನಿರಾಕರಿಸಿದ್ದರೂ, ಕೊನೆಗೆ ಅದು ಮುಳಬಾಗಲರ ಈ ಗ್ರಂಥ ಪ್ರಕಟನೆಗೆ ಇನ್ನೂರು ರೂಪಾಯಿಗಳ ಸಹಾಯವನ್ನು ಕೊಟ್ಟಿತು. ಅದರಂತೆ ಅವರ 'ವೇಣೀ ಸಂಹಾರ'ದ 250 ಪ್ರತಿಗಳನ್ನು ಕೊಂಡುಕೊಳ್ಳುವ ಮೂಲಕವೂ ಸರಕಾರ ಅವರಿಗೆ ಸಹಾಯ ಸಲ್ಲಿಸಿತ್ತು. ಅದಕ್ಕೆ ಮುಳಬಾಗಲರು, "ಸದ್ಯಕ್ಕೆ ಕನ್ನಡಿಗರು ಧನ ಲೋಭದಿಂದಾಗಲಿ ಅಜ್ಞಾನದಿಂದಾಗಲಿ ಸ್ವಭಾಷಾ ಗ್ರಂಥಗಳಿಗೆ ಉತ್ತೇಜನ ಕೊಡದಿದ್ದರೂ ಕನ್ನಡ ಕಮೀಟಿ ಯಲ್ಲಿ ಪಾಸಾದ ಪುಸ್ತಕಗಳಿಗೆ ವಿದ್ಯಾಖಾತೆಯಿಂದ ಏನಾದರೂ ಉತ್ತೇಜನ ದೊರೆಯುತ್ತದೆ. ಇದೊಂದು ಮಾತ್ರ ಕನ್ನಡ ಗ್ರಂಥಕಾರರ ಮನೋರಥಕ್ಕೆ ಮಾರ್ಗವಾಗಿದೆ" ಎಂದು ತಮ್ಮ 'ವೇಣೀ ಸಂಹಾರದ' ಪ್ರಸ್ತಾವನೆಯಲ್ಲಿ ಹೇಳಿರುವರು.

ಸರಕಾರದಂತೆ ಸಾರ್ವಜನಿಕರಿಂದಲೂ ಲೇಖಕರಿಗೆ ಪ್ರೋತ್ಸಾಹ ದೊರೆತ ಪ್ರಸಂಗಗಳು ಕ್ವಚಿತ್ತಾಗಿ ದೊರೆಯುತ್ತವೆ. ಶಾಂತಕವಿಗಳಿಗೆ ಅಗಡಿ ಗ್ರಾಮದವರು ಕೊಟ್ಟ ಪುರಸ್ಕಾರವನ್ನು ಇಲ್ಲಿ ನೆನೆಯಬಹುದು. "ಅಗಡಿಯ ಹೃದಯವನ್ನು ಗೆದ್ದುಕೊಂಡ ಬಾಳಾಚಾರ್ಯರಿಗೆ ಅಲ್ಲಿದ್ದ ಒಂಬತ್ತು ವರ್ಷಗಳು (1886–1895) ಒಂಬತ್ತು ದಿನಗಳಂತೆ ತೋರಿದವು. ಪ್ರಾಥಮಿಕ ಶಾಲೆಯ ಮುಖ್ಯಾಧ್ಯಾಪಕರಾಗಿ ಬಂದವರು, ಊರಿನ ಕಣ್ಬೆಳಕಾಗಿ ಇದ್ದು ವರ್ಗವಾಗಿ ಹೊರಟರು. ಊರಜನ ಅಪೂರ್ವ ರೀತಿಯಲ್ಲಿ ಆಚಾರ್ಯರಿಗೆ ಗೌರವ, ಸತ್ಕಾರವನ್ನು

1. ಮುಳಬಾಗಲ : ಉತ್ತರರಾಮ ಚರಿತ, ಮುನ್ನುಡಿ.

ಮಾಡಿದರು. ಪೆನ್‌ಶನ್ ಪಡೆದ ನಂತರ ಅವರು ಅಲ್ಲಿಯೇ ಬಂದು ನೆಲೆಸಬೇಕೆಂಬ ಅಪೇಕ್ಷೆಯಿಂದ ಒಂದು ಮನೆಯನ್ನೂ, ಈರಾಪುರ ಗ್ರಾಮ ಸರ್ವೆಯ ಹನ್ನೆರಡು ಎಕರೆಯ ಜಮೀನನ್ನೂ ದಾನವಾಗಿ ಕೊಟ್ಟರು."[1] ಏನೇ ಆದರೂ ಇಂಥ ನಿದರ್ಶನಗಳು ಮಾತ್ರ ವಿರಲವಾಗಿಯೇ ಇವೆ. ಗಳಗನಾಥರು ಗ್ರಂಥೋದ್ಯಮಕ್ಕೆ ತೊಡಗಿದಾಗಲೂ ಈ ಸ್ಥಿತಿಯಲ್ಲಿ ಹೆಚ್ಚಿನ ಸುಧಾರಣೆಯೇನೂ ಆಗಿರಲಿಲ್ಲ.

ಇಂಥ ಪರಿಸರದಲ್ಲಿ ಗಳಗನಾಥರು 'ಶೇಷಾಚಲ ಗ್ರಂಥಮಾಲೆ'ಯನ್ನೂ ಅನಂತರ 'ಗಳಗನಾಥ ಸುರಸ ಗ್ರಂಥಮಾಲೆ' ಯನ್ನೂ ಆರಂಭಿಸಿ ಬಹುಕಾಲ ನಡೆಯಿಸಿಕೊಂಡು ಬಂದರು. ತಮ್ಮ ಕಾದಂಬರಿಗಳನ್ನೂ, ಧಾರ್ಮಿಕ ಗ್ರಂಥಗಳನ್ನೂ, ಅಲ್ಲದೆ ಇತರರು ಬರೆದ ಅಂಥ ಗ್ರಂಥಗಳನ್ನೂ ಅವರು ಪ್ರಕಟಿಸಿದರು. ಅದು ಒಂದು ದೊಡ್ಡ ಸಾಹಸವೇ ಸರಿ. ಎಂಥ ಪ್ರತಿಕೂಲ ಸ್ಥಿತಿಯಲ್ಲಿಯೂ ಅವರು ಎದೆಗೆಡದೆ, ಗ್ರಂಥೋದ್ಯಮವನ್ನು ಮುನ್ನಡೆಯಿಸಿಕೊಂಡು ಬಂದರೆಂಬುದನ್ನು ನೋಡಿದರೆ ಅವರ ಸಾಹಸ ಶ್ಲಾಘನೀಯವಾಗಿ ತೋರುತ್ತದೆ.[2]

ಗಳಗನಾಥರ ಪ್ರಥಮ ಕೃತಿ–'ಪದ್ಮನಯನಾ' —1898ರಲ್ಲಿ ಪ್ರಕಟವಾದರೂ, ಅವರ ನಿಜವಾದ ಲೇಖನವ್ಯವಸಾಯವು 1907ರಿಂದಲೇ ಆರಂಭವಾಯಿತೆಂದು ಹೇಳಬಹುದು. ಆಗ ಅವರು 'ಸದ್ಬೋಧ ಚಂದ್ರಿಕೆ'ಯನ್ನು ಆರಂಭಿಸಿದರು. ಮೊದಮೊದಲು 'ಚಂದ್ರಿಕೆ'ಯಲ್ಲಿ ಧಾರ್ಮಿಕ ಹಾಗೂ ನೈತಿಕ ಚರಿತ್ರೆಗಳೂ, ಲೇಖನಗಳೂ ಹೆಚ್ಚಾಗಿ ಪ್ರಕಟವಾಗುತ್ತಿದ್ದುವು. ಅವುಗಳನ್ನು ಬರೆಯುವಲ್ಲಿ ಕೂಡ ಸಿಂಹಪಾಲು ಗಳಗನಾಥರದೇ ಆಗಿತ್ತು. ಮುಂದೆ ಮರು ವರ್ಷದಿಂದ ಅವರು 'ಚಂದ್ರಿಕೆ'ಯಲ್ಲಿ 'ಕಮಲ ಕುಮಾರಿ'ಯನ್ನು ಧಾರಾವಾಹಿಯಾಗಿ ಕೊಡ ತೊಡಗಿ, ಒಂದರ ನಂತರ ಇನ್ನೊಂದರಂತೆ ಕಾದಂಬರಿಗಳನ್ನು ಬರೆಯತೊಡಗಿದರು. ಕಾದಂಬರಿಗಳ ಸತ್ತ್ವಯುತವಾದ ವಸ್ತು, ಮತ್ತು ಜೀವಂತವಾದ ಭಾಷಾಶೈಲಿಯಿಂದ ಜನರು ಆಕರ್ಷಿತರಾದರು. ಅಂತೂ, ಗಳಗನಾಥರು ಲೇಖನ ವ್ಯವಸಾಯವನ್ನು ಆರಂಭಿಸಿದಾಗ ಇದ್ದ ಸ್ಥಿತಿಯು ಸುಧಾರಿಸುತ್ತ ನಡೆಯಿತೆಂದೂ, ಈ ಸುಧಾರಣೆಯ ಕಾರಣಕರ್ತರಲ್ಲಿ ಗಳಗನಾಥರು ಅನುಪಮರೆಂದೂ ಹೇಳಬಹುದು.

ಗಳಗನಾಥರು ಲೇಖನ ರಂಗಕ್ಕೆ ಬರುವ ಪೂರ್ವದಲ್ಲಿ ರಸೆಲ್ ಸಾಹೇಬರಿಂದ ರಾ. ಹ. ದೇಶಪಾಂಡೆಯವರ ವರೆಗಿನ ಅನೇಕ ಮಹನೀಯರು, ಈ ಭಾಗದಲ್ಲಿ ವ್ಯಾಪಿಸಿದ್ದ ಮರಾಠಿಯ ಪ್ರಭಾವವನ್ನೂ ಮೋಹವನ್ನೂ ಕಡಿಮೆಮಾಡಲು ಶಕ್ತಿಮೀರಿ ಹೆಣಗಿದ್ದರೆಂಬುದು ಸುಳ್ಳಲ್ಲ. ಧಾರವಾಡದ ಕನ್ನಡ ಟ್ರೇನಿಂಗ ಕಾಲೇಜಿನ ಆಶ್ರಯದಲ್ಲೂ ಕನ್ನಡ ಪ್ರತಿಷ್ಠಾಪನೆಯ ಕಾರ್ಯ ಅಖಂಡವಾಗಿ ನಡೆಯುತ್ತ ಬಂದಿತ್ತು. ಆದರೂ 19ನೆಯ ಶತಮಾನದ ಕೊನೆಯ ದಶಕದಲ್ಲಿ ಕೂಡ ಮರಾಠಿಯ ಪ್ರಭಾವವು ಸಂಪೂರ್ಣವಾಗಿ ಅಳಿದಿರಲಿಲ್ಲ; ಕನ್ನಡ ಬೆಳೆದಿರಲಿಲ್ಲ.

ಆಲೂರ ವೆಂಕಟರಾಯರು 1898ರಿಂದ 1905ರ ವರೆಗೆ ಪುಣೆಯಲ್ಲಿ ಪ್ರೌಢ ವಿದ್ಯಾಭ್ಯಾಸಕ್ಕೆಂದು ಇದ್ದರು. ಆ ಕಾಲದ ಕನ್ನಡಿಗರ ಮನೋಭಾವವನ್ನು ನೆನೆಯುತ್ತ, "...... ನಮ್ಮಲ್ಲಿಯ ಮರಾಠಿಯ ಮೋಹವು ಹೋಗಿದ್ದಿಲ್ಲ. ಬ್ರಾಹ್ಮಣರಂತೂ ಮರಾಠಿಯವ

1. ವೆಂಕಟೇಶ ಸಾಂಗಲಿ : ಹೊಸಗನ್ನಡದ ಪುಣ್ಯಪುರುಷರು, ಪುಟ 78
2. ಈ ಸಾಹಸದ ಕಥೆಯನ್ನು, ಅವರು ಪಟ್ಟ ಕಷ್ಟ–ನಷ್ಟಗಳನ್ನು ಮುಂದಿನ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ಲೊಡನೆಯೇ ಹೆಚ್ಚಿಗೆ ಸ್ನೇಹಸಂಬಂಧ ಬೆಳೆಸುತ್ತಿದ್ದರಲ್ಲದೆ, ಲಿಂಗಾಯತರೇ ಮುಂತಾದ ಕನ್ನಡಿಗರೊಡನೆ ಅಲ್ಲ. ಕಂಬಳಿ, ರೈನಾಪುರ ಮುಂತಾದವರು ಆಗ ನಮ್ಮೊಡನೆ ಕಲಿಯುತ್ತಿದ್ದರು. ಆದರೂ ಅವರು ಪ್ರತ್ಯೇಕವಿದ್ದಂತೆಯೇ ಇದ್ದರು. ಮರಾಠೀ ಭಾಷೆಯಲ್ಲಿ ಲಿಂಗಪ್ರತ್ಯಯ ಮುಂತಾದವುಗಳ ತೊಡಕು ಇಲ್ಲದಿದ್ದರೆ, ನಮ್ಮಲ್ಲಿ ಎಷ್ಟೋ ಜನರು ಪೂರ್ಣ ಮರಾಠಿಗ ರಾಗಿಯೇ ಹೋಗುತ್ತಿದ್ದರು. ಆ ತೊಡಕೇ ನಮ್ಮ ಕನ್ನಡವನ್ನು ರಕ್ಷಿಸುವ ಕೋಟೆ ಯಾಗಿತ್ತು...."[1] ಎಂದು ಕನ್ನಡಿಗರ ಮರಾಠಿ ಮೋಹವನ್ನೂ, ಅವರು ಕನ್ನಡಿಗರಾಗಿಯೇ ಉಳಿವ ಕಾರಣವನ್ನೂ ವೆಂಕಟರಾಯರು ಸತ್ಯನಿಷ್ಠರಾಗಿ ತಿಳಿಸಿರುವರು.

ಈ ಶತಮಾನದ ಆದಿಭಾಗದಲ್ಲಿ ಕೂಡ ಇನ್ನೂ ಕನ್ನಡಿಗರಲ್ಲಿ ಕನ್ನಡತನದ ಜಾಗೃತಿ ಯಾಗಿರಲಿಲ್ಲ. "ಹಾಗೆ ನೋಡಿದರೆ ಇದು ದೇಶದಲ್ಲಿ ಜಾಗೃತಿಯ ಆರಂಭದ ಕಾಲವಾಗಿತ್ತು. ಶಿಕ್ಷಣ ಪ್ರಚಾರವು ರಾಜಕೀಯ ಪ್ರಜ್ಞೆಯನ್ನು ಮೂಡಿಸಿತ್ತು. ಸ್ವದೇಶ, ಸ್ವಧರ್ಮ-ಸ್ವಭಾಷೆಗಳ ಮೂಲಕ ಸಮಾಜ ಸಂಘಟನೆ ಆರಂಭವಾಗಿತ್ತು. ಕರ್ನಾಟಕ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ಧಾರವಾಡದಲ್ಲಿ ಕನ್ನಡ ಭಾಷೆ ಸಂಸ್ಕೃತಿಯ ಸಂವರ್ಧನೆಯ ಕಾರ್ಯ ಆರಂಭವಾಗಿತ್ತು. ಪಂಡಿತರು, ವಿದ್ಯಾವಂತರು ಗ್ರಂಥರಚನೆಗೆ ಮುಂದಾಗಿದ್ದರು. ಆದರೆ ಸಾಮಾಜಿಕ ಚಟುವಟಿಕೆಗಳ ಇನ್ನೊಂದು ಮುಖ ಧಾರವಾಡದಲ್ಲಿ ಅಷ್ಟೇ ಮಟ್ಟಿಗೆ ಕಳೆಗುಂದಿತ್ತು. ಸರಕಾರದ ಅಂದಿನ ದೊಡ್ಡ ದೊಡ್ಡ ಅಧಿಕಾರಿಗಳು, ಹೊಸದಾಗಿ ಸ್ಥಾಪಿತವಾಗಿದ್ದ ರೇಲ್ವೆ ಶಾಖೆಯ ಕೆಲಸಗಾರರು, ಸ್ವತಂತ್ರ ವೃತ್ತಿಯ ವಕೀಲರು, ಡಾಕ್ಟರರು– ಇವರೇ ಮೊದಲಾದ ಪ್ರಮುಖರು ಮರಾಠಿಗರು. ಅವರ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಅವಶ್ಯಕತೆಗಳು ಮರಾಠಿ ಭಾಷೆಯನ್ನು ಅವಲಂಬಿಸಿದ್ದವು. ಆದುದರಿಂದ ಮರಾಠಿ ಶಾಲೆಗಳು ಹೆಚ್ಚಿದವು; ಮರಾಠಿ ನಾಟಕ ಕಂಪನಿಗಳು ಹುಬ್ಬಳ್ಳಿ, ಧಾರವಾಡ ನಗರಗಳನ್ನು ಸೂರೆ ಮಾಡಿದ್ದವು! ಕರ್ನಾಟಕ ದಲ್ಲಿಯೇ ಕನ್ನಡ ಭಾಷೆ ದ್ವಿತೀಯ ಸ್ಥಾನಕ್ಕೆ ಇಳಿದಿದ್ದಿತು."[2]

ಕೆರೂರ ವಾಸುದೇವಾಚಾರ್ಯರ ಸಾಹಿತ್ಯ ಚಟುವಟಿಕೆ ನಡೆದುದು ಮುಖ್ಯವಾಗಿ ಈ ಶತಮಾನದ ಮೊದಲಿನ ಎರಡು ದಶಕಗಳಲ್ಲಿ. ಆ ಕಾಲದಲ್ಲಿ ಕನ್ನಡ ಸಾಹಿತ್ಯದ ಸ್ಥಿತಿ ಗತಿಯನ್ನೂ, ವಾಸುದೇವಾಚಾರ್ಯರ ಕಾಣಿಕೆಯನ್ನೂ ವಿವರಿಸುತ್ತ ಮುಗಳಿಯವರು ನುಡಿದಿರುವ ಮಾತುಗಳೂ ಇಲ್ಲಿ ಗಮನಾರ್ಹವಾಗಿವೆ.

"ವಾಸುದೇವಾಚಾರ್ಯರ ಕಾಲವೆಂದರೆ ಹೊಸಗನ್ನಡದ ತೀರ ಹಸುಗಾಲವಾಗಿತ್ತು. ಕನ್ನಡ ಓದುಬರಹವನ್ನು ಕಲಿತ ಮಧ್ಯಮ ವರ್ಗದ ಜನರು ಪಠ್ಯಪುಸ್ತಕಗಳಾಚೆ ದೃಷ್ಟಿಯನ್ನು ಚೆಲ್ಲುತ್ತಿರಲಿಲ್ಲ. ಯಾರೋ ಪಂಡಿತರು ಅಲ್ಲಲ್ಲಿ ಕನ್ನಡ ಹಳೆಯ ಸಾಹಿತ್ಯವನ್ನು ಓದಿ ಕೊಂಡವರಾಗಿದ್ದರು. ಓದು ಬಲ್ಲವರಲ್ಲಿ ಅನೇಕರು ಅನ್ಯಭಾಷೆಗಳಲ್ಲಿಯ ಕಥೆ, ಕಾದಂಬರಿ, ನಾಟಕಗಳಿಗೆ ಮೆಚ್ಚಿದ್ದರು, 'ಕನ್ನಡದಲ್ಲಿ ಏನಿದೆ'? ಎನ್ನುತ್ತಿದ್ದರು. ಉತ್ತರ ಕರ್ನಾಟಕದಲ್ಲಿ ಮರಾಠಿಯ ಮೋಹ ಹೆಚ್ಚಾಗಿತ್ತು. ಇಂಥ ಸಂದರ್ಭದಲ್ಲಿ ಕನ್ನಡದ ಮಂತ್ರವನ್ನು ಘೋಷಿಸುವ ಕುಲಪುರೋಹಿತರೂ ಕನ್ನಡದಲ್ಲಿ ಕೀರ್ತನೆಮಾಡುವ ಶಾಂತಕವಿಗಳೂ ಉದಯವಾದರು. ಕನ್ನಡ ಲಲಿತ ವಾಙ್ಮಯವನ್ನು ನೀಡುವಲ್ಲಿ ಮೈಸೂರು ಕರ್ನಾಟಕದಲ್ಲಿ ಪ್ರಮುಖವಾಗಿ

---

1. ಆಲೂರ ವೆಂಕಟರಾಯರು : ನನ್ನ ಜೀವನ ಸ್ಮೃತಿಗಳು, (1974). ಪುಟ 68.
2. ವೆಂಕಟೇಶ ಸಾಂಗಲಿ : ಹೊಸಗನ್ನಡದ ಪುಣ್ಯಪುರುಷರು, ಪುಟ 78-79

ವೆಂಕಟಾಚಾರ್ಯರೂ, ಪುಟ್ಟಣ್ಣನವರೊ, ಮಂಗಳೂರು ಕಡೆ ಪಂಜೆ ಮಂಗೇಶರಾಯರೂ ತಲೆದೋರಿದಂತೆ ಉತ್ತರ ಕರ್ನಾಟಕದಲ್ಲಿ ವಾಸುದೇವಾಚಾರ್ಯರೂ, ಗಳಗನಾಥರೂ ಹಿರಿಯ ಹುದ್ದರಿಗಳಾಗಿ ಮುಂದೆ ಬಂದರು. ಇವರೆಲ್ಲ ಓದು ಬಲ್ಲ ಕನ್ನಡ ಜನಕ್ಕೆ ಕನ್ನಡ ಪುಸ್ತಕಗಳನ್ನು ತಂತಮ್ಮ ರೀತಿಯಲ್ಲಿ ಒದಗಿಸಿದರು. ಹಸಿದವರಿಗೆ ಮನೆಯನ್ನ ದೊರೆಯಿತು. ಬೇರೆ ಮನೆಯ ಅನ್ನಕ್ಕೆ ಬಾಯೊಡ್ಡುವ ಒಲವು ಬರಬರುತ್ತ ಕಡಿಮೆಯಾಯಿತು".[1]

'ವಾಗ್ಭೂಷಣ'ದ 'ಆತ್ಮನಿವೇದನೆ' ಎಂಬ ಸಂಪಾದಕೀಯವೊಂದರಲ್ಲಿ

"ಕನ್ನಡಿಗರೇ, 'ವಾಗ್ಭೂಷಣ'ವು ಭಾಷಾಸೇವೆಯನ್ನು ಕೈಕೊಂಡು ಸುಮಾರು 19 ವರ್ಷಗಳಾದವು. ಈ ಅವಧಿಯಲ್ಲಿ 11 ಚರಿತ್ರೆಗಳು, 8 ಇತಿಹಾಸ ಗ್ರಂಥಗಳೂ, 7 ಶಾಸ್ತ್ರೀಯ ಪುಸ್ತಕಗಳೂ, 10 ನಾಟಕಗಳೂ, 11 ಕಾದಂಬರಿಗಳೂ, 16 ನೀತಿಪರ, ನಿಬಂಧ ಮುಂತಾದವುಗಳೂ ಇದರಲ್ಲಿ ಪ್ರಸಿದ್ಧವಾಗಿವೆ. 19 ವರ್ಷಗಳ ಹಿಂದಿನ ಪರಿಸ್ಥಿತಿಯನ್ನು ಲಕ್ಷ್ಯಕ್ಕೆ ತಂದರೆ 'ವಾಗ್ಭೂಷಣ'ವು ಮಾಡಿದ ಕಾರ್ಯವು ಮನದಟ್ಟಾಗುವದು. ಅತ್ತ ಮರಾಠಿ ಭಾಷೆಯ ಹಾವಳಿ, ಇತ್ತ ಇಂಗ್ಲೀಷ ಭಾಷೆಯ ಮುರವತ್ತು, ಇಂಥ ಇಕ್ಕಟ್ಟಿನಲ್ಲಿ ಕನ್ನಡದ ನುಡಿಯನ್ನು ಬೆಳೆಸುವದಕ್ಕಾಗಿ ಹುಟ್ಟಿದ ಈ ಮಾಸಪತ್ರಿಕೆಯ ಮುಖ್ಯ ಉದ್ದೇಶವು 'ಸಂಘ'ವು ಇನಾಮುಕೊಟ್ಟ ಹಸ್ತಲಿಖಿತ ಪುಸ್ತಕಗಳನ್ನು ಮುದ್ರಿಸುವದೇ ಆಗಿತ್ತು. ಮರಾಠಿ ಭಾಷೆಯ ಮದ್ದಿನಿಂದ ಮೈಮರೆತ ಕನ್ನಡಿಗರಿಗೆ ನಾವು ಕನ್ನಡಿಗರೆಂಬ ಅರಿವು ಸಹ ಆಗ ಇರಲಿಲ್ಲ ........ ಈಗ ಆ ದಿವಸಗಳು ಹೋಗಿವೆ. ಹಿಂದುಸ್ಥಾನದಲ್ಲೆಲ್ಲ ಹುಟ್ಟಿದ ನವಜೀವನವು ಕನ್ನಡಿಗರಲ್ಲಿಯೂ ತೋರಹತ್ತಿದೆ."[2] ಆದರೆ ಹೊಸ ವಾಙ್ಮಯ ಬೆಳೆಯಬೇಕೆಂಬ ಲವಲವಿಕೆ ಕನ್ನಡಿಗರಲ್ಲಿ ಮೊಳೆತಿದ್ದರೂ, ಕರ್ನಾಟಕ ವಿದ್ಯಾವರ್ಧಕ ಸಂಘದಂಥ ಸಂಸ್ಥೆ ಪೋಷಕವಾಗಿದ್ದರೂ "ಕನ್ನಡಿಗರ ಔದಾಸೀನ್ಯದಿಂದಲೋ ಲೇಖಕರ ವಿರಳತೆಯಿಂದಲೋ, ಹಣದ ಕೊರತೆಯಿಂದಲೋ"[3] ಉದ್ದೇಶವು ಮಾತ್ರ ಪೂರ್ಣ ಈಡೇರಲಿಲ್ಲವೆಂದು ಸಂಪಾದಕರು ವಿಷಾದ ವ್ಯಕ್ತಪಡಿಸಿರುವರು.

1921ರ ಕಾಲಕ್ಕೆ ನಮ್ಮ ಸಾಹಿತ್ಯದಲ್ಲಿ ನವೋದಯವುಂಟಾಯಿತೆಂದು ಹೇಳುತ್ತೇವೆ. ಈ ನವೋದಯದ ಪೂರ್ವದ ಸುಮಾರು 25–30 ವರ್ಷಗಳ ಕಾಲ ನಡೆದ ಸಾಹಿತ್ಯ ಸೃಷ್ಟಿಯ ಪ್ರಯತ್ನ ತುಂಬ ಮೆಚ್ಚುವಂಥದು. ಈ ಪ್ರಯತ್ನದ ಹಿಂದೆ ಕನ್ನಡದ ಬಗ್ಗೆ ಆಳವಾದ ಕಳಕಳಿಯಿದೆ. ಮತ್ತು ಈ ಕಳಕಳಿ ಮುಖ್ಯವಾಗಿ ವಿದ್ಯಾವರ್ಧಕ ಸಂಘದವರಿಂದ ವ್ಯಕ್ತವಾಗಿದೆಯೆಂಬುದು ಸುಸ್ಪಷ್ಟವಾಗಿದೆ. ಆದ್ದರಿಂದ ವಿದ್ಯಾವರ್ಧಕ ಸಂಘದ ಸ್ಥಾಪನೆಯ ವರ್ಷವನ್ನು–1890– ಹೊಸಗನ್ನಡ ಸಾಹಿತ್ಯದ ಅರುಣೋದಯದ ಕಾಲವೆಂದು ಕರೆಯುವುದು ಉಚಿತವಾಗುತ್ತದೆ. ಅದಕ್ಕೂ ಪೂರ್ವದಲ್ಲಿ (ಮುಂಬಯಿ ಕರ್ನಾಟಕದ) ಕನ್ನಡಿಗರ ಶಕ್ತಿಯೆಲ್ಲವೂ ಕನ್ನಡ ಭಾಷೆಯ ಪುನಃಪ್ರತಿಷ್ಠಾಪನೆಯಲ್ಲಿಯೇ ವ್ಯಯವಾಗಿತ್ತು. ಆ ಕಾಲದಲ್ಲಿ ಮುಖ್ಯವಾಗಿ ಶಾಲಾಭ್ಯಾಸಕ್ಕೆ ಅವಶ್ಯವಾದ ಪಠ್ಯಪುಸ್ತಕಗಳೇ ನಿರ್ಮಾಣವಾಗಿವೆ. ಅಲ್ಲಲ್ಲಿ ಸಂಸ್ಕೃತ ಮತ್ತು ಆಂಗ್ಲ ಕೃತಿಗಳ ಭಾಷಾಂತರಗಳು ಕಣ್ಣಿಗೆ ಬೀಳುತ್ತವೆ. 1890ರ ನಂತರ ಮಾತ್ರ ನಿಜವಾದ ಹೊಸ ಸಾಹಿತ್ಯ ನಿರ್ಮಿತಿಯ ಸುಳಿಗಾಳಿ ಬೀಸತೊಡಗಿತು. ಈ ಗಾಳಿಯಲ್ಲಿ

1. ರಂ. ಶ್ರೀ. ಮುಗಳಿ : 'ವಾಸುದೇವಾಚಾರ್ಯರ ಶೈಲಿ', ವಾಸುದೇವ ಪ್ರಶಸ್ತಿ, ಪುಟ 228–229

2-3. ವಾಗ್ಭೂಷಣ, 1916ನೆಯ ವರ್ಷದ ಎಪ್ರಿಲ ತಿಂಗಳ ಸಂಚಿಕೆ.

ತೂರಿಕೊಂಡವರು ಹೆಚ್ಚಾಗಿ ಶಿಕ್ಷಕರೇ. ಅದರಲ್ಲೂ ಕನ್ನಡ ಶಾಲೆಯ ಶಿಕ್ಷಕರೇ ಎಂಬುದು ಒಡೆದುಕಾಣುತ್ತದೆ.

ಈ ಶಿಕ್ಷಕರಲ್ಲಿ ಧಾರವಾಡದ ಟ್ರೇನಿಂಗ ಕಾಲೇಜಿನಲ್ಲಿ ಶಿಕ್ಷಣ ಪಡೆದವರೇ ಹೆಚ್ಚಾಗಿದ್ದಾರೆ. ಆಗಿನ ಟ್ರೇಂಡ ಶಿಕ್ಷಕರೆಂದರೆ ಈಗಿನ ವಿಶ್ವವಿದ್ಯಾಲಯದ ಪದವಿ ಪಡೆದವರ ಸರಿಸಮಾನ ಯೋಗ್ಯತೆಯುಳ್ಳವರಾಗಿದ್ದರೆಂದು ಹಳೆಯ ಜನ ಹೇಳುವದುಂಟು. ವ್ಯಾಕರಣ, ಛಂದಸ್ಸು, ಭಾಷಾಶುದ್ಧಿ ಇತ್ಯಾದಿ ಜ್ಞಾನದ ಮಟ್ಟಿಗೆ ಈ ಮಾತು ತುಂಬ ಸರಿಯೆನ್ನಬೇಕು. ಕನ್ನಡ ಸಾಹಿತ್ಯದಲ್ಲಿಯ ಆಸಕ್ತಿ, ಕನ್ನಡದಲ್ಲಿ ಬರೆಯಬೇಕೆಂಬ ಹುಮ್ಮಸ್ಸು, ಅದಕ್ಕೆ ತಕ್ಕ ಶಕ್ತಿಗಳನ್ನು ಅವರು ಪಡೆದವರಾಗಿದ್ದರು. ಆಗ ಅವರು ಬರೆದುದರಲ್ಲಿ ಇಂದಿನ ವಿಮರ್ಶೆಯ ನಿಕಷಕ್ಕೆ ಹಚ್ಚಿದಾಗ ಬಹಳಷ್ಟು ಚೊಕ್ಕತನ ಕಾಣಲಿಕ್ಕಿಲ್ಲ. ಆದರೂ ಅವರ ಮಹತ್ತ್ವ ಕಡಿಮೆಯಾಗುವುದಿಲ್ಲ. ಈ ಶಿಕ್ಷಕ ಸಾಹಿತಿಗಳಲ್ಲಿ ಹೆಚ್ಚಿನವರು ಕಾದಂಬರಿ–ನಾಟಕಗಳನ್ನು ಅನು-ವಾದಿಸಿದ್ದಾರೆ. ಬಂಗಾಲಿ ಮತ್ತು ಮರಾಠಿ ಭಾಷೆಗಳ ಕಾದಂಬರಿಗಳನ್ನು ಅವರು ಹೆಚ್ಚಾಗಿ ಮೆಚ್ಚಿ ಭಾಷಾಂತರಿಸಿದ್ದಾರೆ. ಈ ಭಾಷಾಂತರಗಳಲ್ಲಿ ಹೆಚ್ಚಿನವು ಐತಿಹಾಸಿಕ ರಮ್ಯ ಕಾದಂಬರಿಗಳು, ಅದೂ ರಜಪೂತ ವೀರರ ಕಾದಂಬರಿಗಳೇ ಹೆಚ್ಚಾಗಿವೆ. ಸಾಮಾಜಿಕ ಕಾದಂಬರಿಗಳು ತೀರ ಅಪರೂಪ. ಪತ್ತೇದಾರಿ ಕಾದಂಬರಿಗಳ ಭಾಷಾಂತರಗಳು ಮಾತ್ರ ಅಲ್ಲಲ್ಲಿ ಕಂಡಿವೆ. ಆದರೆ ಸ್ವತಂತ್ರ ಕೃತಿಗಳು ಮಾತ್ರ ಅತೀ ಕಡಿಮೆ.

1890ರಿಂದ 1920ರ ವರೆಗಿನ ಸಾಹಿತ್ಯವನ್ನು ನೋಡಿದರೆ ಅದರಲ್ಲಿ ಈ ಶಿಕ್ಷಕರ ಭಾಗವೇ ಹೆಚ್ಚಾಗಿದೆ. ಇಂಥ ಶಿಕ್ಷಕರಲ್ಲಿ ಗಳಗನಾಥರು ಅಗ್ರಗಣ್ಯರಾಗಿದ್ದಾರೆ. ಆ ಕಾಲಕ್ಕೆ ಅವರನ್ನು ಅನುಕರಿಸಿದವರೇ ಬಹಳ. ಆದರೆ ಅವರನ್ನು ಮೀರಿಸುವುದಿರಲಿ, ಸರಿಗಟ್ಟಿದವರೂ ಕೂಡ ದೊರೆಯುವುದಿಲ್ಲ. ಸಬರದ, ತಟ್ಟಿ, ಅಮ್ಮಿನಭಾವಿ, ವಿಜಾಪುರ, ಹುಲಿಕವಿ ಈ ಮೊದಲಾದ ಗಣ್ಯ ಗದ್ಯಕಾರರ ಕೃತಿಗಳೂ ಸಂಖ್ಯೆಯಲ್ಲಿ ತೀರ ಕಡಿಮೆಯಿಲ್ಲ. ಆದರೆ ಸತ್ತ್ವದಲ್ಲಿ ಇವರು ಯಾರೂ ಗಳಗನಾಥರ ಸಮಕ್ಕೆ ಬರಲಿಲ್ಲ.

ಒಟ್ಟಿನಲ್ಲಿ ಗಳಗನಾಥರ ಸಾಹಿತ್ಯಿಕ ಪರಿಸರವನ್ನು ಗಮನಿಸಿದಾಗ ಮುಖ್ಯವಾಗಿ ಒಡೆದು ಕಾಣುವ ಅಂಶಗಳೆಂದರೆ :

19ನೆಯ ಶತಮಾನದ–20ನೆಯ ಶತಮಾನದ ಆದಿಭಾಗದಲ್ಲಿ ಕೂಡ–ಧಾರವಾಡ ವಿಭಾಗದಲ್ಲಿ ಮರಾಠಿ ಭಾಷೆಯ ಪ್ರಭಾವ ಹೆಚ್ಚಾಗಿತ್ತು. ಅದು ಕೋರ್ಟು ಕಚೇರಿಗಳಲ್ಲಿ, ದಿನಬಳಕೆಯಲ್ಲಿ, ಹೆಚ್ಚಾದಂತೆ ಈ ಭಾಗದ ಪ್ರಾಥಮಿಕ ಶಾಲೆಗಳಲ್ಲಿ ಕೂಡ ಮರಾಠಿ ಮಾಧ್ಯಮದ ಶಾಲೆಗಳೇ ಹೆಚ್ಚಾಗಿದ್ದವು.

ರಸೆಲ್ ಸಾಹೇಬರಿಂದ ಮೊದಲುಗೊಂಡು ಚೆನ್ನಬಸಪ್ಪ, ಚುರಮರಿ, ಕಟ್ಟಿ, ತುರಮರಿ, ಶಾಂತವೀರ ಕಿತ್ತೂರ, ಭುಜಂಗರಾವ, ಮುಳಬಾಗಲ, ರಾ. ಹ. ದೇಶಪಾಂಡೆ, ರೊದ್ದ ಮೊದಲಾದ ಹಲವರು ಇಲ್ಲಿಯ ಮರಾಠಿ ಪ್ರಭಾವವನ್ನು ಕಡಿಮೆ ಮಾಡಿ ಕನ್ನಡವನ್ನು ಪುನಃ ಪ್ರತಿಷ್ಠಾಪಿಸಲು ಯತ್ನಿಸಿದರು. ಇವರು ಮುಖ್ಯವಾಗಿ ಶೈಕ್ಷಣಿಕವಾಗಿ ಕನ್ನಡದ ಉದ್ಧಾರವನ್ನು ಮಾಡಿದ ಪುಣ್ಯಪುರುಷರು.

ಧಾರವಾಡದ ಶಿಕ್ಷಕರ ಟ್ರೇನಿಂಗ ಕಾಲೇಜು ಮತ್ತು ಅನಂತರ ವಿದ್ಯಾವರ್ಧಕ ಸಂಘ –

ಇವು ಈ ಭಾಗದಲ್ಲಿ ಕನ್ನಡದ ಮಾತೃ ಸಂಸ್ಥೆಗಳಾಗಿ ಕೆಲಸ ಮಾಡಿದುವು. ಉಳಿದ ಹಲವು ಪತ್ರಿಕೆಗಳು ಹುಟ್ಟಿ ಅಕಾಲ ಮರಣಕ್ಕೆ ಈಡಾದರೂ, 'ಶಾಲಾಪತ್ರಕ' ಮತ್ತು 'ವಾಗ್ಭೂಷಣ'ಗಳು ಕನ್ನಡ ಲೇಖನ ವ್ಯವಸಾಯಕ್ಕೆ ಹೆಚ್ಚಿನ ಅವಕಾಶವನ್ನು ಕಲ್ಪಿಸಿಕೊಟ್ಟ ಮಹತ್ತ್ವದ ಮಾಸಿಕಗಳು. ಅದರಲ್ಲೂ 'ವಾಗ್ಭೂಷಣ'ವು ಸಾಹಿತ್ಯಿಕ ಬರವಣಿಗೆಯನ್ನು ಬೆಳೆಸಿದ ಪ್ರಮುಖ ಪ್ರೇರಕಶಕ್ತಿ ಯಾಯಿತು.

1890ರಲ್ಲಿ ಆರಂಭವಾದ 'ಕರ್ನಾಟಕ ವಿದ್ಯಾವರ್ಧಕ ಸಂಘ'ವೇ ಧಾರವಾಡ ಭಾಗದ ಸಾಹಿತ್ಯಿಕ ಚಟುವಟಿಕೆಗಳಿಗೆ ಪ್ರಾಣದಾಯಕ ಸಂಜೀವನೀ ಶಕ್ತಿಯಾಗಿ ಪರಿಣಮಿಸಿತು. ಹಲವಾರು ಸಾಹಿತಿಗಳಿಗೆ ಅದು ಪ್ರೋತ್ಸಾಹವನ್ನಿತ್ತು ಹೊಸ ಸಾಹಿತ್ಯದ ಕೃಷಿ ಹುಲುಸಾಗಿ ಬೆಳೆಯಲು ಕಾರಣವಾಯಿತು. ಈ ಕಾಲದ ಲೇಖಕರಲ್ಲಿ ವಕೀಲರೂ, ಬೇರೆ ನೌಕರದಾರರೂ ಇದ್ದರೂ ಶಿಕ್ಷಕರೇ ಹೆಚ್ಚಾಗಿರುವರು. ಇವರು ಹೆಚ್ಚಾಗಿ ಭಾಷಾಂತರಗಳಿಂದ ಕನ್ನಡದಲ್ಲಿ ಹೊಸ ಗದ್ಯಸಾಹಿತ್ಯವನ್ನು ಪ್ರಚಾರಕ್ಕೆ ತರಲು ಯತ್ನಿಸಿದರು. 19ನೆಯ ಶತಮಾನದ ಸಾಹಿತ್ಯವನ್ನೇ ಗದ್ಯಸಾಹಿತ್ಯದ ಕಾಲವೆಂದು ಕರೆಯಬಹುದಾದರೂ, 1890ರ ಕಾಲವು ಹೊಸಗದ್ಯದ ನಂದೀಕೋಲಾಯಿತು. ಅದನ್ನು ಹಿಡಿದು ಮುನ್ನಡೆದ ಶ್ರೇಯಸ್ಸು ಗಳಗನಾಥರದು.

ಆದ್ದರಿಂದ ಸ್ಥೂಲವಾಗಿ 1890ರ ವರೆಗಿನ ಕಾಲವನ್ನು ಹೊಸ ಸಾಹಿತ್ಯದ ನಸುಕಿನ ಕಾಲವೆಂದೂ, 1890ರಿಂದ 1920ರ ವರೆಗಿನ ಕಾಲವನ್ನು ಅರುಣೋದಯ ಕಾಲವೆಂದೂ, 1921ರಿಂದ ನವೋದಯ ಕಾಲವೆಂದೂ, 1950ರಿಂದ ನವ್ಯಕಾಲವೆಂದೂ ಕರೆಯುವದು ಉಚಿತವಾಗಿದೆ.

ಗಳಗನಾಥರು ಮುಖ್ಯವಾಗಿ ಅರುಣೋದಯದ ಕಾಲದಲ್ಲಿ ಹೆಚ್ಚಿನ ಸಾಹಿತ್ಯ ಸೃಷ್ಟಿ ಯನ್ನು ಮಾಡಿದ್ದರೂ, ನವೋದಯದ ಕಾಲದಲ್ಲೂ ಅವರ ಕೆಲವು ಕೃತಿಗಳು ರಚನೆಗೊಂಡಿವೆ. ಅದರಂತೆ ಗಳಗನಾಥರು ಕೇವಲ ಗದ್ಯದಲ್ಲಿಯೇ ಬರೆದರೆಂಬುದೂ ಗಮನಾರ್ಹವಾಗಿದೆ; ಅಷ್ಟೇ ಅಲ್ಲ, ಅವರು ಹೊಸಗದ್ಯದ ಆದ್ಯ ಪ್ರವರ್ತಕರೂ ಆದರು. 1890ರ ಪೂರ್ವ ದಿಂದಲೇ ಕನ್ನಡದಲ್ಲಿ ಗದ್ಯವು ಪ್ರಧಾನವಾಗುತ್ತಿದ್ದರೂ ಆ ಗದ್ಯಕ್ಕೆ ಗಟ್ಟಿಮುಟ್ಟಾದ ತಳಪಾಯ ವಿರಲಿಲ್ಲ. ಅದನ್ನು ಹಾಕಿ ಭದ್ರವಾದ ಗದ್ಯಸೌಧವನ್ನು ನಿರ್ಮಿಸಿದ ಶ್ರೇಯಸ್ಸು ಮುಖ್ಯವಾಗಿ ಗಳಗನಾಥರಿಗೆ ಸಲ್ಲಬೇಕು. ಗಳಗನಾಥರು ತಮ್ಮ ವಿಶಿಷ್ಟವಾದ ಗದ್ಯದಿಂದ ತಮ್ಮ ವಿಶಿಷ್ಟವಾದ ಐತಿಹಾಸಿಕ ಕಾದಂಬರಿಗಳನ್ನೂ ಬೇರೆ ಗ್ರಂಥಗಳನ್ನೂ ವಿಪುಲವಾದ ಸಂಖ್ಯೆಯಲ್ಲಿ ನಿರ್ಮಿಸಿ 'ಗಳಗನಾಥ ಯುಗ'ವನ್ನೇ ನಿರ್ಮಿಸಿದರು.

# ಗಳಗನಾಥರು

ಗಳಗನಾಥವೆಂಬ ಚಿಕ್ಕ ಗ್ರಾಮದ ವೇಂಕಟೇಶ ತಿರಕೋ (ತ್ರಿವಿಕ್ರಮ) ಕುಲಕರ್ಣಿ ಅವರು ಗಳಗನಾಥರೆಂದೇ ಪರಿಚಿತರಾಗಿರುವರು. ಗಳಗನಾಥವು ಧಾರವಾಡ ಜಿಲ್ಹೆಯ ಹಾವೇರಿ ತಾಲೂಕಿನಲ್ಲಿದೆ. ವರದಾ–ತುಂಗಭದ್ರಾ ನದಿಗಳ ಸಂಗಮದ ರಮ್ಯಪ್ರಶಾಂತ ಸ್ಥಳದಲ್ಲಿ ನೆಲೆಸಿದ ಆ ಗ್ರಾಮದ ಅಧಿದೇವರು ಗಳಗೇಶ್ವರನಿಂದಲೇ ಆ ಗ್ರಾಮಕ್ಕೆ ಗಳಗನಾಥವೆಂಬ ಹೆಸರು ಬಂದಿತೆಂದು ಆ ಗ್ರಾಮಸ್ಥರು ಹೇಳುವರು. ಆದರೆ ಸಾರಸ್ವತಲೋಕಕ್ಕೆ ಮಾತ್ರ ಕಾದಂಬರಿಕಾರ ಗಳಗನಾಥರಿಂದಲೇ ಗಳಗನಾಥ ಗ್ರಾಮವು ಪರಿಚಿತವಾಯಿತು.

ಗಳಗನಾಥ ಗ್ರಾಮದ ಕುಲಕರ್ಣಿ ಮನೆತನದಲ್ಲಿ ಕಾದಂಬರಿಕಾರರು ಶಾಲಿವಾಹನ ಶಕ 1790ರ ವಿಭವನಾಮ ಸಂವತ್ಸರದ ಪುಷ್ಯ ಬಹುಳ ಷಷ್ಠೀ ದಿನದಂದು (ದಿನಾಂಕ 5–1–1869) ಜನಿಸಿದರು. ಅವರು ತಮ್ಮ ತಾಯಿಯ ತವರೂರಾದ (ಗಳಗನಾಥಕ್ಕೆ ತೀರ ಸಮೀಪದ) ಹಾವನೂರು[1] ಗ್ರಾಮದಲ್ಲಿ ಜನಿಸಿದರೂ, ಬೆಳೆದುದು ತಮ್ಮ ಸ್ವಂತ ಊರಲ್ಲಿಯೇ. ಅವರದು ಸನಾತನ ದೈವಭಕ್ತ ಮನೆತನ. ಅದನ್ನು ಸ್ವತಃ ಗಳಗನಾಥರೇ ಒಳ್ಳೆಯ ಅಭಿಮಾನದಿಂದ ಹೇಳಿರುವರು. "ಶ್ರೀ ಸದ್ಗುರು–ಪ್ರಭಾವ–ಪೋಷಿತನಾದ ವೇಂಕಟೇಶನೆಂಬ ಹೆಸರಿನ ನಾನು, ಶುಕ್ಲ ಯಜುರ್ವೇದಾಂತರ್ಗತ ಕಣ್ವಶಾಖೆಯ ಸ್ಮಾರ್ತ ಬ್ರಾಹ್ಮಣನು. ನನ್ನ ಗೋತ್ರ ಕೌಂಡಿಣ್ಯ. ನನ್ನ ಪೂಜ್ಯ ಪಿತೃಗಳಲ್ಲಿ ನನ್ನ ತಂದೆಯವರ ಹೆಸರು ತ್ರಿವಿಕ್ರಮಭಟ್ಟರು: ಅಜ್ಜಂದಿರ ಹೆಸರು ರಾಮಭಟ್ಟರು; ಮುತ್ತಂದಿರ ಹೆಸರು ವೆಂಕಣ್ಣಭಟ್ಟರು! ನನ್ನ ಕುಲದೈವತವು ಶ್ರೀ ಲಕ್ಷ್ಮೀ ವೇಂಕಟೇಶನದು!!"[2] ಕುಲದೈವತದ ಹೆಸರೂ, ಮುತ್ತಜ್ಜನ ಹೆಸರೂ ತಮಗೆ ಬಂದುದರ ಬಗ್ಗೆ ಅವರು ತೋರುವ ಅಭಿಮಾನ ಅವರ ದೈವಭಕ್ತಿಯ ಕುರುಹು. ಅವರ ಹೃದಯದಲ್ಲಿ ದೈವ ಭಕ್ತಿ – ಗುರು ಭಕ್ತಿಗಳಿಗೆ ಹೆಚ್ಚಿನ ಸ್ಥಾನ. ತಮ್ಮ ಜೀವನ ಮತ್ತು ಕೃತಿಗಳ ಪರಿಚಯಾತ್ಮಕವಾದ ಗ್ರಂಥವನ್ನು ಅವರು 1928ರಲ್ಲಿ ಬರೆದಿರುವರು. ಅದರ ಹೆಸರೇ 'ಸದ್ಗುರು ಪ್ರಭಾವ'.

ಗಳಗನಾಥರ ಕಾಲಕ್ಕೆ ಅಂಥ ಶ್ರೀಮಂತವಲ್ಲದ ಕುಟುಂಬದಲ್ಲಿ ಜನಿಸಿದ ಜಾಣ ಬಾಲಕನೊಬ್ಬ ಪಡೆಯಬಹುದಾಗಿದ್ದ ಹೆಚ್ಚಿನ ಶಿಕ್ಷಣವೆಂದರೆ ಮುಲ್ಕೀ ಪರೀಕ್ಷೆ; ಬಹಳವಾದರೆ

---

1. ದಿ. ನೆಗಳೂರ ರಂಗನಾಥರು 'ಗಳಗನಾಥ' ಎಂಬ ಗ್ರಂಥದಲ್ಲಿ ಹೇಳಿದಂತೆ ಗಳಗನಾಥರು ತಮ್ಮ ಊರಾದ ಗಳಗನಾಥದಲ್ಲಿ ಜನಿಸಲಿಲ್ಲ. ಮುಂದೆ ಅನೇಕರು ಇದೇ ತಪ್ಪು ಅಭಿಪ್ರಾಯವನ್ನು ಮುಂದುವರಿಸಿದರು.
2. ವೇ. ತಿ. ಗಳಗನಾಥ : ಸದ್ಗುರು ಪ್ರಭಾವ, ಪುಟ 4

ಕನ್ನಡ ಶಿಕ್ಷಕರ ಟ್ರೇನಿಂಗ ಪರೀಕ್ಷೆ. ಇವುಗಳಲ್ಲಿ ಗಳಗನಾಥರು ಚನ್ನಾಗಿಯೇ ತೇರ್ಗಡೆಯಾದರು. ಆದರೂ ಬಹುಶಃ ಇನ್ನೂ ಹೆಚ್ಚಿನ ಶಿಕ್ಷಣವನ್ನು, ಮುಖ್ಯವಾಗಿ ಆಂಗ್ಲ ಶಿಕ್ಷಣವನ್ನು ಗಳಗನಾಥರು ಪಡೆಯಲಾಗಲಿಲ್ಲವೆಂಬ ಅತೃಪ್ತಿಯ ಕೊರಗು ಅವರನ್ನು ಪೀಡಿಸುತ್ತಿರಬಹುದು.

"ನಾನು ಕೇವಲ ಗಾವಿಲನೆಂತಲೇ ಹೇಳಬಹುದು; ಯಾಕೆಂದರೆ ನಾನು ಹುಟ್ಟಿದ ಹಾವನೂರೆಂಬ ನನ್ನ ಮಾತಾಮಹರ ಊರು ಹಳ್ಳಿಯು; ನಾನು ಬೆಳೆದ ನನ್ನ ಸ್ವಂತದ ಗಳಗನಾಥವೆಂಬ ಕ್ಷೇತ್ರಸ್ಥಾನವೂ ತೀರ ಸಣ್ಣ ಹಳ್ಳಿಯು."[1] ಈ ಹಳ್ಳಿಗಳಲ್ಲೇ ಅವರು ಪ್ರಾಥಮಿಕ ಶಿಕ್ಷಣ ಪೂರೈಸಿ ಮುಲ್ಕೀ ಪರೀಕ್ಷೆ ಪಾಸಾಗಬೇಕಾಯಿತು. "ನನಗೆ ದೊರೆತ ಶ್ರೇಷ್ಠ ಶಿಕ್ಷಣವೆಂದರೆ, ಧಾರವಾಡದ ಕನ್ನಡ ಟ್ರೇನಿಂಗ ಕಾಲೇಜದ ಮೂರು ವರ್ಷದ ಕೌದಿಯ ಚಂದದ ಹಂಡಬಂಡ ಶಿಕ್ಷಣವು! ನನ್ನ ಕನ್ನಡ ಭಾಷೆಯ ಜ್ಞಾನವು, ಕೇವಲ ಜನ್ಮಭಾಷೆಯೆಂಬ ಪ್ರಧಾನ ಕಾರಣದಿಂದ ವಿಸ್ತೃತವಾಗಬಹುದಾದಷ್ಟರ ಮಟ್ಟಿಗೆ ಬೆಳವಣಿಗೆ ಹೊಂದಿದ್ದು. ಕೊಂಕಣಸ್ಥರ ಸಹವಾಸದಿಂದ ತಿಳಿಯಬಹುದಾದಷ್ಟು ಮಹಾರಾಷ್ಟ್ರ ಭಾಷೆಯು ನನಗೆ ತಿಳಿಯುತ್ತಿರುವದು: ನನ್ನ ಸಂಸ್ಕೃತ ಭಾಷೆಯ ಜ್ಞಾನವು, ನಾನು ಟ್ರೇನಿಂಗ ಕಾಲೇಜದಲ್ಲಿಯ ಪರೀಕ್ಷೆಗಳಿಗಾಗಿ ಮೂರು ವರ್ಷ ಓದಿದ ತೀರ ಸಾಮಾನ್ಯವಾದ ತಾಳು ತಂತು ಇಲ್ಲದ ಪುಸ್ತಕೀಯ ಜ್ಞಾನದಲ್ಲಿ ಹರಿದು ಮುರಿದು ಉಳಿದದ್ದು. ಇಂಗ್ಲೀಷ ಭಾಷೆಯ ಮೂಲಾಕ್ಷರಗಳನ್ನೂ ಸಾಲಾಗಿ ಬರೆಯಲಿಕ್ಕೆ ನನಗೆ ಬರುವದಿಲ್ಲ."[2]

ಅವರ ಈ ಮಾತುಗಳಲ್ಲಿ ಅವರ ಸ್ವಾಭಾವಿಕ ವಿನಯದ ಜೊತೆಗೆ ಒಂದು ರೀತಿಯ ನೈಚ್ಯಾನುಸಂಧಾನವನ್ನೂ (Inferiority complex) ಗುರುತಿಸಬಹುದಾಗಿದೆ. ಆದರೆ ಇದು ಒಂದು ರೀತಿಯಲ್ಲಿ ಗುಣವೇ ಆಯಿತೆಂದರೂ ತಪ್ಪಾಗಲಾರದು. ಅವರ ಶೈಲಿ ಮತ್ತು ವಿಚಾರಗಳಲ್ಲಿ ಕಾಣುವ 'ತನ್ನತನ'ಕ್ಕೆ ಈ ಆಂಗ್ಲಭಾಷೆ ಮತ್ತು ಸಾಹಿತ್ಯಗಳ ಜ್ಞಾನ-ರಾಹಿತ್ಯವೂ ಒಂದು ಕಾರಣವಾಗಿದೆಯೆನ್ನಬಹುದು. ಅವರು ಆಂಗ್ಲ ಭಾಷಾ ಪಾಂಡಿತ್ಯವನ್ನು ಪಡೆದಿದ್ದರೆ ಅವರ ಕಾಲದ ಅನೇಕರಂತೆ ಅವರ ಓದು-ಬರವಣಿಗೆಗಳೂ ಆಂಗ್ಲ ಸಾಹಿತ್ಯಕ್ಕೆ ಪರಿಮಿತವಾಗಿ, ಹೊಸ ಕನ್ನಡ ಗದ್ಯ ಪ್ರವರ್ತಕನ, ಕಾದಂಬರಿಕಾರನ ಉದಯವು ಇನ್ನೂ ತಡವಾಗುಹುದಿತ್ತು. ಅಥವಾ ಆಂಗ್ಲ ಸಾಹಿತ್ಯದ ಅಭ್ಯಾಸದಿಂದ ಅವರ ಪ್ರತಿಭೆಗೆ ಸಾಣಿ ಹಿಡಿದಂತಾಗಿ, ಅವರಿಂದ ಇನ್ನೂ ಪಕ್ವವಾದ ಕೃತಿಗಳು ಬರಬಹುದೂ ಆಗಿತ್ತು. ಯಾಕೆಂದರೆ ಬರೆಯಬೇಕೆಂಬ ಅದಮ್ಯವಾದ ಹಂಬಲವುಳ್ಳ ಗಳಗನಾಥರು, ಉಳಿದ ಪದವೀಧರರಂತೆ ಕೈಕಟ್ಟಿ ಕೊಂಡು ಕುಳಿತಿರಬಹುದಾದ ಸಂಭವ ತೀರ ಕಡಿಮೆ. ಅಂತೂ ಗಳಗನಾಥರು ಮಾತ್ರ ಕನ್ನಡ ಟ್ರೇನಿಂಗ ಕಾಲೇಜಿನ ಪರೀಕ್ಷೆಯಿಂದಲೇ ತೃಪ್ತರಾಗಿ ಉಳಿಯಬೇಕಾಯಿತು.

ಗಳಗನಾಥರು ಧಾರವಾಡದ ಕನ್ನಡ ಶಿಕ್ಷಕರ ಟ್ರೇನಿಂಗ ಕಾಲೇಜನ್ನು 1886ರಲ್ಲಿ ಪ್ರವೇಶಿಸಿದರು. ಅಲ್ಲಿರುವ ಮೂರು ವರ್ಷದ ಅವಧಿಯಲ್ಲಿ ಕನ್ನಡ ನುಡಿಯ ಬಗ್ಗೆ ಅಭಿಮಾನ-ಆಸ್ಥೆ ಬೆಳೆಸಿಕೊಂಡು 1889ರಲ್ಲಿ ಅವರು ಟ್ರೇನಿಂಗ ಪರೀಕ್ಷೆಯನ್ನು ಪಾಸಾಗಿ 'ವೆಂಕಣ್ಣ ಮಾಸ್ತರ'ರಾಗಿ ಹೊರಬಂದರು. ಅಲ್ಲಿ "ಅವರಿಗೆ ಕನ್ನಡ ಭಾಷೆ-ಸಾಹಿತ್ಯಗಳನ್ನು

1. ಅದೇ, ಪುಟ 5
2. ಅದೇ, ಪುಟ 5

ಕಲಿಸಿದವರು ಧೋಂಡೋ ನರಸಿಂಹ ಮುಳಬಾಗಲರು. ಇತಿಹಾಸ ವಿಷಯದ ಅಧ್ಯಾಪಕ ರಾಗಿದ್ದ ರಾ. ಹ. ದೇಶಪಾಂಡೆಯವರು ವೆಂಕಣ್ಣನಲ್ಲಿಯ ಲೇಖನ ಕಲೆಯನ್ನು ಕುದುರಿಸಿದರು. ಇವರಿಬ್ಬರಿಗಿಂತ ಹೆಚ್ಚು ಪ್ರಭಾವವನ್ನು ಬೀರಿದವರೆಂದರೆ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ರಾವಜೀ ಬಾಳಾಜೀ ಕರಂದೀಕರರು"[1] ಗಳಗನಾಥರು ಮುಂದೆ ಅನೇಕ ಸಂದರ್ಭಗಳಲ್ಲಿ ದೇಶಪಾಂಡೆಯವರನ್ನೂ ಮುಖ್ಯವಾಗಿ ಕರಂದೀಕರರನ್ನೂ ಕೃತಜ್ಞತೆಯಿಂದ ಸ್ಮರಿಸಿದರು. ಅವರೂ ಕೂಡ ಪ್ರತಿಭಾವಂತನಾದ ಈ ಪ್ರಾಮಾಣಿಕ ವಿದ್ಯಾರ್ಥಿಯನ್ನು ಮೆಚ್ಚಿ ಪ್ರೋತ್ಸಾ-ಹಿಸಿದುದು ಸಹಜವೇ ಆಗಿದೆ. ಕರಂದೀಕರರಂತೂ ಗಳಗನಾಥರ ಜೀವನದಲ್ಲಿ ಹಲವಾರು ರೀತಿಯಿಂದ ಸಹಾಯ ಮಾಡಿದ ಮಹಾನುಭಾವರು.

ಧಾರವಾಡದಲ್ಲಿರುವಾಗಲೇ ಗಳಗನಾಥರಲ್ಲಿ ಸಾಹಿತ್ಯಿಕ ಅಭಿರುಚಿ ಬೆಳೆಯಿತು. ಅದರ ಜೊತೆಗೆ ಕನ್ನಡಾಭಿಮಾನವೂ. ಕನ್ನಡದಲ್ಲಿ ಒಳ್ಳೆಯ ಸಾಹಿತ್ಯವಿಲ್ಲವೆಂಬ ಕೊರಗೂ, ಸಾಧ್ಯ ವಾದರೆ ತಾನೂ ಕನ್ನಡದಲ್ಲಿ ಬರೆಯಬೇಕೆಂಬ ಹಂಬಲವೂ ಅವರಲ್ಲಿ ಮೊಳೆತವು. ಅದರ ಫಲವಾಗಿ ಅವರು ಸಣ್ಣಪುಟ್ಟ ಶಾಲೋಪಯೋಗಿ ಪುಸ್ತಕಗಳನ್ನು ಬರೆದೂ ಬರೆದರು. ಅವರ ಲೇಖನ ಕಾರ್ಯ ಬೆಳೆಯಲು ಧಾರವಾಡದ 'ಕರ್ನಾಟಕ ವಿದ್ಯಾವರ್ಧಕ ಸಂಘ'ವೂ ಬಹು ಮಟ್ಟಿಗೆ ಕಾರಣವಾಯಿತೆನ್ನಬೇಕು. ಸಂಘದವರು ಆಗ ಏರ್ಪಡಿಸುತ್ತಿದ್ದ ಭಾಷಣ, ಲೇಖನ ಸ್ಪರ್ಧೆಗಳಲ್ಲಿ ಪ್ರತಿವರ್ಷವೂ ಗಳಗನಾಥರು ಭಾಗವಹಿಸಿ ಬಹುಮಾನಗಳನ್ನು ಪಡೆಯುತ್ತಿದ್ದರು. ಅದನ್ನು "ಧಾರವಾಡ ಕ. ವಿ. ವ. ಸಂಘದ ಪ್ರತಿವರ್ಷದ ಉತ್ಸವದ ಕಾಲಕ್ಕೆ, ಅಧ್ಯಕ್ಷ ರಾಗಿರುತ್ತಿದ್ದ ಬಹುತರ ನಮ್ಮ ಮೈಸೂರ ಸನ್ಮಾನ್ಯ ವಿದ್ವಾಂಸರಾದ ಪದವೀಧರರ ಕೈಯಿಂದಲೇ ಒಂದು ವರ್ಷವೂ ತಪ್ಪದಂತೆ 9-10 ವರ್ಷ ಲೇಖನ ಭಾಷಣಗಳ ಪರೀಕ್ಷೆಯಲ್ಲಿ ನಾನು ಉಚಿತಗಳನ್ನು ಪಡೆದಿದ್ದರಿಂದ ನನಗೆ 'ಪಂಢರಪುರದ ವಾರಕರಿ' ಎಂದು ಆ ಸಂಘದವರು ವಿನೋದದಿಂದ ಅನ್ನುತ್ತಿದ್ದರು"[2] ಎಂದು ಗಳಗನಾಥರು ನೆನೆದಿರುವರು. ಹೀಗೆ ವಾರಕರಿಯಾಗಿಯೇ ಅವರು ಒಂದು ವರ್ಷ 'ಪದ್ಮನಯನೆ'ಗಾಗಿ ಪ್ರಥಮ ಬಹುಮಾನ ಪಡೆದು, ಶಿಕ್ಷಕ ಗಳಗನಾಥರು ಒಮ್ಮೆಲೇ ಕಾದಂಬರಿಕಾರ ಗಳಗನಾಥರಾಗಿ ಮಾರ್ಪಟ್ಟರು.

12386

ಶಿಕ್ಷಕರಾಗಿ ಒಂದು ದಶಕ ಕಳೆಯುವಷ್ಟರಲ್ಲಿಯೇ ಅವರು ಶಿಕ್ಷಣಕ್ಕೆ ಸಂಬಂಧಿಸಿದ ಒಂದೆರಡು ಪುಸ್ತಕ ಬರೆದು ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು. ಸ್ವತಃ ತಮ್ಮ ಗುರುಗಳಿಂದ ಪ್ರಶಂಸೆಯನ್ನು ಕೇಳುವ ಭಾಗ್ಯವನ್ನೂ ಗಳಗನಾಥರು ಪಡೆದಿದ್ದರು. "ನನ್ನ ಕೆಲಸದ ಬಗ್ಗೆ ನನ್ನ ಪೂಜ್ಯ ಗುರುಗಳಾದ ಕೈ. ವಾ. ರಾವಜೀರಾವ ಕರಂದೀಕರ, ಪ್ರಿನ್ಸಿಪಾಲ ಟ್ರೇನೀಂಗ ಕಾಲೇಜ, ಧಾರವಾಡರವರು 'ಗಳಗನಾಥನು ಸಮರ್ಥ ಶಿಕ್ಷಕನು, ಗೊತ್ತಿದ್ದ ವಿಷಯವನ್ನು ಸರಿಯಾಗಿ ಬರೆಯುವನು' ಎಂದು ಅನ್ನುತ್ತಿದ್ದರು! ಈ ಮಹನೀಯರೇ, ಪೂನಾದ ರಿವಿಜನಲ್ ಟೆಕ್ಸ್ಟಬುಕ್ ಕಮೀಟಿಯಲ್ಲಿ ನನ್ನನ್ನು ಮೈಮುರಿದು ದುಡಿಸಿ, ನನಗೆ ಲೇಖನ ಕಲೆಯ ಹಿಡಿತಗಳು ತಿಳಿಯಲಿಕ್ಕೆ ಅಸ್ಪದ ಮಾಡಿಕೊಟ್ಟಿರುವರು" ಎಂದು ಗಳಗನಾಥರು ಅಭಿಮಾನ ಪೂರ್ವಕವಾಗಿ ಕೃತಜ್ಞತೆಯಿಂದ ಮತ್ತೆ ಮತ್ತೆ ಸ್ಮರಿಸುವರು.[3]

---

1. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 4
2-3. ಗಳಗನಾಥ : ಸದ್ಗುರು ಪ್ರಭಾವ, ಪುಟ 7

1889ರಲ್ಲಿ ಶಿಕ್ಷಕ ವೃತ್ತಿಯನ್ನು ಆರಂಭಿಸಿದ ಗಳಗನಾಥ ಮಾಸ್ತರರು ಶಿರಗುಪ್ಪಿ, ನರೇಂದ್ರ, ಉಪ್ಪಿನಬೆಟಗೇರಿ, ಬಂಕಾಪುರ, ಮುಂಡರಗಿ, ಗುತ್ತಲ ಗ್ರಾಮಗಳಲ್ಲಿ ಶಿಕ್ಷಕರಾಗಿ, ಮುಖ್ಯಾಧ್ಯಾಪಕರಾಗಿ ಕೆಲಸ ಮಾಡಿದರು. ಕೆಲಕಾಲ ಅವರು ಧಾರವಾಡದ ಟ್ರೇನಿಂಗಕಾಲೇಜಿನ ಪ್ರ್ಯಾಕ್ಟೀಸಿಂಗ ಶಾಲೆಯಲ್ಲಿಯೂ ಶಿಕ್ಷಕರಾಗಿ, ಕೊನೆಗೆ ತಾವು ಕಲಿತ ಟ್ರೇನಿಂಗ ಕಾಲೇಜಿನಲ್ಲಿ ಸಂಸ್ಕೃತದ ಅಧ್ಯಾಪಕರೆಂದು ಬಡತಿ ಪಡೆದರು. ಈ ಮಧ್ಯೆ ಪುಣೆಯಲ್ಲಿ ಕನ್ನಡ ಕ್ರಮಿಕ ಪಠ್ಯ ಪುಸ್ತಕಗಳನ್ನು ಬರೆಯುವ ಅನುಭವವೂ ಅವರಿಗೆ ಲಭ್ಯವಾಗಿತ್ತು.[1]

ಗಳಗನಾಥರ ಶಿಕ್ಷಕ ಜೀವನ ತುಂಬ ಆದರ್ಶಪ್ರಾಯವಾಗಿತ್ತು. ಅವರು ಒಳ್ಳೆಯ ಶಿಕ್ಷಕರೆಂದು ಖ್ಯಾತರಾದುದು ಅಚ್ಚರಿಯಲ್ಲ. ಅವರು ಯಾವ ಶಾಲೆಗೆ ಹೋದರು ಅಲ್ಲಿ ತಮ್ಮ ಆದರ್ಶ ವ್ಯಕ್ತಿತ್ವದ ಪ್ರಭಾವವನ್ನು ಬೀರದೇ ಇರುತ್ತಿರಲಿಲ್ಲ. ಗಳಗನಾಥರನ್ನು ಇಂದು ನಾವೆಲ್ಲ ಕಾದಂಬರಿಕಾರರೆಂದು ಗುರುತಿಸಿದ್ದರೂ ಅವರು ಪ್ರಥಮತಃ ಶಿಕ್ಷಕರೇ ಆಗಿದ್ದರು. ಅವರು ತಮ್ಮ ವಿದ್ಯಾರ್ಥಿಗಳಿಗೆ ಕಲಿಸಿದರಲ್ಲದೆ, ತಮ್ಮ ಸಹೋದ್ಯೋಗಿಗಳಿಗೂ, ಊರ ಜನರಿಗೂ ಆದರ್ಶ ಗುರುಗಳಾಗಿಯೇ ಇದ್ದು ಅವರನ್ನು ತಿದ್ದಿದರು.

ಈ ಕಲಿಸುವ ಕೆಲಸವು ಅವರಿಗೆ ಅತೀವ ಪ್ರಿಯವಾಗಿದ್ದಿತು. ತಮ್ಮ ಶಿಕ್ಷಕ ಜೀವನ-ವನ್ನು ನೆನೆಯುತ್ತ "ನಾನು ಟ್ರೇನಿಂಗ ಕಾಲೇಜದಿಂದ ಹೊರಬಿದ್ದ ಬಳಿಕ ಹಳ್ಳಿಯ ಶಾಲೆಯ ಮಾಸ್ತರನಾಗಿ ಏಕನಿಷ್ಠೆಯಿಂದ ದುಡಿಯತೊಡಗಿದೆನು. ಕೆಲಸದಲ್ಲಿ ನನಗೆ ಪ್ರೀತಿ ಹೆಚ್ಚು. ನನ್ನಷ್ಟಕ್ಕೆ ನಾನಿರುವದರಲ್ಲಿ ನನ್ನ ಆಸಕ್ತಿ ಬಹಳ; ಕೆಲಸ ಬಿಟ್ಟು ಸಿಕ್ಕಾಗ ಸಿಕ್ಕತ್ತ ಸುಮ್ಮನೆ ಎಡತಾಕುವ ಚಾಳಿಯಂತೂ ನನಗೆ ಗೊತ್ತೇ ಇಲ್ಲ. ನಾನಾಯಿತು, ನನ್ನ ಕೆಲಸವಾಯಿತು—ಎಂಬ ಚಂದದಿಂದ ನಡೆಯುವ ಮನುಷ್ಯ ನಾನು. ಏನಾದರೂ ಹೊತ್ತು ಸಿಕ್ಕರೆ ನನ್ನ ಯೋಗ್ಯತೆಯು ಸಾಮಾನ್ಯ ಜನರೇ ಮನಮೆಚ್ಚಿ ಓದುವಂಥಹ ಪುಸ್ತಕಗಳನ್ನು ಬರೆದರೆ ಬರೆಯುವೆನು.... ಒಟ್ಟಿಗೆ, ನಾನು ನನ್ನ ಜೀವನಾಧಾರವಾದ ಶಿಕ್ಷಣದ ಕೆಲಸವನ್ನು ನಿರ್ವಂಚನೆಯಿಂದ ಮನಸ್ಸಿಗೆ ಹಚ್ಚಿಕೊಂಡು ಮಾಡುತ್ತ, ನನ್ನ ಮನಸ್ಸನ್ನು ರಮಿಸುವ ವಿಷಯಗಳನ್ನಾಗಲೀ, ನನ್ನ ಮನಸ್ಸನ್ನು ಸಮಾಧಾನಪಡಿಸುವ ವಿಷಯಗಳನ್ನಾಗಲಿ ಹೊತ್ತು ಸಿಕ್ಕರೆ ನಿರ್ವಂಚನೆಯಿಂದ ಮನಃಪೂರ್ವಕವಾಗಿ ಅನುಭವವನ್ನು ಮುಂದೆ ಮಾಡಿ ಬರೆಯುತ್ತ, ಯಾವಾಗ ಸಮಾಧಾನದಿಂದ, ಯಾವಾಗ ಅಸಮಾಧಾನದಿಂದ ಕಾಲಹರಣ ಮಾಡತೊಡಗಿದೆನು....ಹೀಗೆ ನಾನು ಹಳ್ಳಿಯ ಸಣ್ಣ ಶಾಲೆ

---

1. "ಮುಂಬಯಿ ಇಲಾಖೆಯೊಳಗಿನ ಪ್ರಾಥಮಿಕ ಶಾಲೆಗಳಿಗಾಗಿ ತಕ್ಕ ವಾಚನ ಪುಸ್ತಕಗಳನ್ನು ಸಿದ್ಧಪಡಿಸುವದಕ್ಕೆ ಈಗ ಏಳು ವರ್ಷಗಳ ಹಿಂದೆ 'ವ್ಹರ್ನಾಕ್ಯುಲರ ಟೆಕ್ಸ್ಟಬುಕ್ಸ ರಿವಿಜನ್ ಕಮೀಟಿ' ಎಂಬ ಹೆಸರಿನದೊಂದು ಕಮೀಟಿಯನ್ನು ಪುಣೆಯಲ್ಲಿ ಕೂಡಿಸಿದ್ದರು. ಆ ಕಮೀಟಿಯವರ ಒಂದುವರೆ ವರ್ಷದ ಅವಿಶ್ರಾಂತ ಶ್ರಮದಿಂದಲೇ ಈಗಿನ ವಾಚನದ ಎಂಟು ಪುಸ್ತಕಗಳು ಸಿದ್ಧವಾದವು. ....ನಮ್ಮ ದಕ್ಷಿಣ ಭಾಗದ ಎಜ್ಯುಕೇಶನಲ್ ಇನಸ್ಪೆಕ್ಟರರಾಗಿದ್ದ ಗುರುವರ್ಯ ರಾವಬಹಾದ್ದೂರ ರಾವಜೀರಾವ ಕರಂದೀಕರರವರು ಕನ್ನಡ ಮೆಂಬರರಾಗಿದ್ದರು. ಗುರುಗಳವರ ಸಹಾಯದಿಂದ ಆ ಕಮೀಟಿಯ ಕಾರಕೂನನಾಗಿ ಕೆಲಸ ಮಾಡುವ ಸುಯೋಗವು ನನಗೆ ಒದಗಿತ್ತು. ಅಲ್ಲಿ ಬರೆಯುವ ಕೆಲಸ ಮಾಡುತ್ತಿದ್ದಾಗ ನನಗೆ ಬರವಣಿಗೆಯ ಕಾರ್ಯದಲ್ಲಿ ಗುರುಗಳವರಿಂದಾದ ಸಹಾಯವನ್ನು ನಾನು ಆಜನ್ಮ ಮರೆಯೆನು." ವೇ. ತಿ. ಕುಲಕರ್ಣಿ : ಕಮಲಕುಮಾರಿ (1910) ಪ್ರಸ್ತಾವನೆ. ಗಳಗನಾಥರ ಕಾರ್ಯವನ್ನು ಮೆಚ್ಚಿದ ಟೆಕ್ಸ್ಟಬುಕ್ ಕಮೀಟಿಯ ಅಧ್ಯಕ್ಷರು ಗಳಗನಾಥರಿಗೆ ಒಂದು ಪ್ರಶಸ್ತಿ-ಪತ್ರವನ್ನೂ ಕೊಟ್ಟು ಪ್ರೋತ್ಸಾಹಿಸಿದರು.

ಯಿಂದ ಟ್ರೇನಿಂಗ ಕಾಲೇಜದಂಥ ಗೌರವದ ಶಾಲೆಗಳ ವರೆಗೆ ಸಣ್ಣ ದೊಡ್ಡ ಶಾಲೆಗಳಲ್ಲಿ ಮನಃಪೂರ್ವಕ ಕೆಲಸ ಮಾಡುತ್ತ, ಪ್ರೀತಿ ಬಂದ ವಿಷಯಗಳನ್ನು ಬರೆಯುತ್ತ, ಸಂಘದ ಪಾರಿತೋಷಕಗಳಿಂದ ಉತ್ತೇಜನವನ್ನು ಹೊಂದುತ್ತ ಅಭಿಮಾನದಿಂದ ಕಾಲಹರಣ ಮಾಡು-ತ್ತಿರುವಾಗ ನನ್ನ ನೌಕರಿಯ ಮುದ್ದತ್ತು ಇಪ್ಪತ್ತು ವರ್ಷದ್ದಾಯಿತು."[1] ಎಂದು ತಿಳಿಸಿದ ಗಳಗನಾಥರ ಜೀವನದಲ್ಲಿ ಇತರ ಏರುಪೇರುಗಳು ಘಟಿಸಿದ್ದರೂ ಅವರು ಶಿಕ್ಷಕ ವೃತ್ತಿಯಲ್ಲಿ ಕಳೆದ ಇಪ್ಪತ್ತು ವರ್ಷಗಳಕಾಲ ಮಾತ್ರ ಅತೀವ ಆನಂದದ ಕಾಲವಾಗಿತ್ತು.

ಗಳಗನಾಥರು ಪ್ರತ್ಯಕ್ಷ ಶಿಕ್ಷಕರಾಗಿದ್ದುದು ಇಪ್ಪತ್ತು ವರ್ಷಗಳು ಮಾತ್ರವಾಗಿದ್ದರೂ, ಅವರು ಅಪ್ರತ್ಯಕ್ಷವಾಗಿ ಕೊನೆಯವರೆಗೂ ಶಿಕ್ಷಕರಾಗಿಯೇ ಬಾಳಿದರು. ಶಿಕ್ಷಕರಾಗಿದ್ದಾಗ ವಿದ್ಯಾರ್ಥಿಗಳನ್ನು, ತಮ್ಮ ಸಹೋದ್ಯೋಗಿಗಳನ್ನು ತಿದ್ದಿದ್ದರೆ, ಲೇಖಕರಾಗಿ ಅಖಿಲ ಕನ್ನಡ ಜನಮನವನ್ನೇ ತಿದ್ದಲು ಯತ್ನಿಸಿದರು. ಅವರ ಕಾದಂಬರಿಗಳಲ್ಲಿ ಅವರ ಶಿಕ್ಷಕ-ಗುಣವು ಒಡೆದು ಕಾಣುವಷ್ಟು ಸ್ಫುಟವಾಗಿ ವ್ಯಕ್ತವಾಗಿದೆ. ಕಾದಂಬರಿ ಬರೆದು ಜನರನ್ನು ರಂಜಿಸ ಬೇಕೆನ್ನುವುದಕ್ಕಿಂತ, ಜನರನ್ನು ರಂಜಿಸುತ್ತ ನೀತಿಬೋಧಿಸಬೇಕೆಂಬುದು ಅವರ ಧ್ಯೇಯ ವಾಗಿತ್ತು.

ಗಳಗನಾಥರು ವಿದ್ಯಾರ್ಥಿಗಳನ್ನು ದಂಡಿಸದೇ ಪ್ರೀತಿಯಿಂದ ಅವರ ಮನವನ್ನು ತಿದ್ದುವುದು ಸಾಧ್ಯವೆಂದು ನಂಬಿ ಅದರಂತೆ ಆಚರಿಸಿ ತೋರಿಸಿದರು. ವಿದ್ಯಾರ್ಥಿಗಳು ಶಿಕ್ಷಕರ ಬಗ್ಗೆ ಪ್ರೀತಿ ಗೌರವಗಳಿಗಿಂತ ಹೆಚ್ಚು ಭಯ-ಭಕ್ತಿಗಳನ್ನು ತೋರುವ ಕಾಲವದು. ಅದಕ್ಕೆ ಕಾರಣ ಶಿಕ್ಷಕರ ದಂಡನೆಯ ನೀತಿ. ಗಳಗನಾಥರು ತಾವು ಛಡಿಯನ್ನು ಬಳಸಲಿಲ್ಲವಷ್ಟೇ ಅಲ್ಲ, ತಮ್ಮ ಉಪ ಶಿಕ್ಷಕರೂ ಛಡಿಯನ್ನು ಉಪಯೋಗಿಸುವದನ್ನು ಪ್ರತಿಬಂಧಿಸಿದರು. ವಿದ್ಯಾರ್ಥಿಗಳ ಅಶಿಸ್ತಿಗೆ ಶಿಕ್ಷಕರೇ ಮುಖ್ಯ ಕಾರಣ, ಅವರು ಸರಿಯಾಗಿ ಪ್ರೀತಿಯಿಂದ ವಿದ್ಯಾರ್ಥಿಗಳ ಜೊತೆ ವರ್ತಿಸಿದರೆ ಶಿಕ್ಷೆಯ ಆವಶ್ಯಕತೆಯೇ ಬೀಳುವದಿಲ್ಲವೆಂದು ಗಳಗನಾಥರು ನಂಬಿದ್ದರು.[2]

ಗಳಗನಾಥರು ಶಿಕ್ಷಕರಾಗಿ ಕೆಲಸ ಮಾಡಿದ ಕೊನೆಯ ಗ್ರಾಮವೆಂದರೆ ಹಾವೇರಿ ತಾಲೂಕಿನ ಗುತ್ತಲ. ಅವರ ಜೀವನದ ರೀತಿ-ನೀತಿಗಳನ್ನು ಸ್ಪಷ್ಟವಾಗಿ ತೋರಿಸುವ ಎರಡು ಪ್ರಮುಖ ಕುರುಹುಗಳು ಇಂದಿಗೂ ಗುತ್ತಲ ಗ್ರಾಮದಲ್ಲಿವೆ. ಮೊದಲನೆಯದೆಂದರೆ, ಅವರು ಗುತ್ತಲದಲ್ಲಿ ತೆಗೆಯಿಸಿದ ಸಿಹಿನೀರಿನ ಬಾವಿ. ಗುತ್ತಲದಲ್ಲಿ ನೀರಿನ ತೊಂದರೆ ವಿಶೇಷವಾಗಿತ್ತು. ಅಲ್ಲೊಂದು ಬಾವಿಯನ್ನು ತೆಗೆಯಿಸಬೇಕೆಂದು ವಿಚಾರ ಮಾಡಿ ಗಳಗನಾಥರು ಕಾರ್ಯಪ್ರವೃತ್ತರಾದರು. ಊರವರಲ್ಲಿ ಹಲವರು ಮೊದಲು ಸಹಕರಿಸಲಿಲ್ಲ. ಆದರೆ ಗಳಗನಾಥರದು ಛಲದ ಸ್ವಭಾವ. ದೊರೆತ ಅಲ್ಪ ಸಹಾಯದಿಂದ ಅವರು ಕಾರ್ಯವನ್ನು ಮುಂದುವರಿಸಿದರು. ಪುಣ್ಯಕ್ಕೆ ಬಾವಿ-ಯಲ್ಲಿ ಸಿಹಿನೀರಿನ ಸೆಲೆಯು ಹತ್ತಿತು. ಕೊನೆಗೆ ವಿರೋಧಿಗಳೂ ಸ್ನೇಹಿತರಾದರು. ಗುತ್ತಲ ಗ್ರಾಮದ ಕೆಲವು ಹಿರಿಯರು ಈ ವಿಷಯವನ್ನು ಕಥೆಯಾಗಿ ಹೇಳಿ, ಗಳಗನಾಥರ ಬಗ್ಗೆ ಇಂದಿಗೂ ಆದರಾಭಿಮಾನಗಳನ್ನು ವ್ಯಕ್ತಮಾಡುವರು. ಆ ಬಾವಿಯು ಇಂದಿಗೂ ಗಳಗನಾಥರ ಕರ್ತೃತ್ವ ಶಕ್ತಿಯ ಕುರುಹಾಗಿ ನಿಂತಿದೆ.

ಆದರ್ಶ ಶಿಕ್ಷಕರಾಗಿದ್ದ ಗಳಗನಾಥರ ಜೀವನದ ಮೇಲೆ ಬೆಳಕು ಬೀರುವ ಇನ್ನೊಂದು

1. ಅದೇ, ಪುಟ 7
2. ಗಳಗನಾಥ : 'ಶಿಕ್ಷೆಯು', ಶಾಲಾಪತ್ರಕ, 1900, ಪುಟ 94

ಕುರುಹು ಗುತ್ತಲ ಶಾಲೆಯಲ್ಲಿ ಇಂದಿಗೂ ಲಭ್ಯವಾಗಿರುವ ಅವರ ಕಾಲದ 'ವ್ಹಿಜಿಟ್ ಬುಕ್' ಗಳಗನಾಥ ಮಾಸ್ತರರು ಗುತ್ತಲಕ್ಕೆ ಮುಖ್ಯ ಶಿಕ್ಷಕರಾಗಿ ಬಂದು ಮೂರು ವರ್ಷ ಕಳೆದರು. ಆ ಅವಧಿಯಲ್ಲಿ ಅವರು ಶಾಲೆಯ ವಾತಾವರಣವನ್ನೇ ಸುಧಾರಿಸಿ ಎಲ್ಲರಿಂದಲೂ ಪ್ರಶಂಸೆಗೆ ಪಾತ್ರರಾದರು. ಈ ಮಾತಿಗೆ 'ವ್ಹಿಜಿಟ್ ಬುಕ್' ಸಾಕ್ಷಿಯನ್ನು ನುಡಿಯುತ್ತದೆ.

ದಿ. 25-9-1905ರಂದು ಗುತ್ತಲ ಶಾಲೆಗೆ ಭೆಟ್ಟಿನೀಡಿದ ಗುರುಶಾಂತಪ್ಪ ಎಂಬ ಮಹನೀಯರು "ಶಾಲೆಯು ಅತೀ ಉತ್ತಮ ತರದ ಸುಧಾರಣೆಯಲ್ಲಿ ಬಂದಿರುತ್ತದೆ. ನಾನು ಸುಮಾರು 25 ವರ್ಷಗಳ ಲಗಾಯಿತ್ತ ಈ ಶಾಲೆಯ ಕಮಿಠಿದಾರನಿದ್ದು ಈ ಶಾಲೆಯ ಸ್ಥಿತಿಯನ್ನು ನೋಡಿ ಬಲ್ಲೆನು. ಈ ಅವಧಿಯಲ್ಲಿ ಈಗಿರುವ ಸ್ಥಿತಿ ಎಲ್ಲ ವಿಧದಿಂದಲೂ ಒಳ್ಳೆ ಸ್ಥಿತಿಯಲ್ಲಿ ಇಟ್ಟಿದ್ದು ಯಂದೂ ನೋಡಲಿಲ್ಲ. ಮಿ. ಗಳಗನಾಥ ಮಾಸ್ತರರು ಬಂದಾರಭ್ಯ ಶಾಲೆಯ ಸ್ಥಿತಿಯು ಆಕ್ಷೇಪಿಸುವಂತಿಲ್ಲ. ಇಷ್ಟೇ ಅಲ್ಲ ಬಹಳ ಚಂನಾಗಿ ನಡೆದಿದೆ. ಯೀ ಸಂಗತಿ ನಾನು ಬಹಳಸಾರೆ ನೋಡೇನಿ, ಮತ್ತು ಬಹು ಜನರ ಬಾಯಿಂದ ಕೇಳೇನಿ."[1] ಎಂದು ಶರಾ ಬರೆದಿರುವರು.

ಈ ಕಮೀಟಿದಾರರ ಮಾತುಗಳಿಂದ ಗಳಗನಾಥರು ಉತ್ಸಾಹಿತರಾಗಿರಲಿಕ್ಕೆ ಸಾಕು.

21-10-1905ರಂದು ಶಾಲೆಗೆ ಭೆಟ್ಟಿ ನೀಡಿದ V. R. Pendse ಎಂಬವರು "I visited the school at the instance of the Head-master Mr. Venkatesh Tirako Galaganath. From what I have seen I am glad to remark that the Head-master takes exceptionally deep interest in the discharge of his duties. He appears to have infused a new spirit of discipline and duty in the minds of his assistants and pupils. Very few schools in this District can boast of such all round efficiency as noticeable in the case of this school"[2] ಎಂದು ಬರೆದಿರುವರು.

ಗುತ್ತಲ ಶಾಲೆಗೆ ಭೆಟ್ಟಿ ಕೊಟ್ಟ ಧಾರವಾಡ ಜಿಲ್ಹೆಯ 4ನೆಯ ಸಹಾಯಕ ಡೆಪ್ಯೂಟಿ ಎಜ್ಯುಕೇಶನಲ್ ಇನಸ್ಪೆಕ್ಟರ ವಿ. ಬಿ. ಕೇಳಕರ ಎಂಬವರ ಅಭಿಪ್ರಾಯವೂ ಹೆಚ್ಚು ಕಡಿಮೆ ಮೇಲಿನಂತೆಯೇ ಇದೆ. ಅವರು ಶಾಲೆಯ ಹಾಜರಿ ಸಂಖ್ಯೆ 200ರ ಪೈಕಿ 191 ಇದ್ದಿತೆಂದು ಹೇಳಿ, ಆ ಭಾಗದಲ್ಲಿ ಮೂರು ವರ್ಷಗಳಿಂದಲೂ ಕಾಡುತ್ತಿದ್ದ ಪ್ಲೇಗಿನ ಹಾವಳಿ ಆ ವರ್ಷ ಸುದೈವದಿಂದ ಕಡಿಮೆಯಾಗಿ, ಶಾಲೆಯು ಪ್ರಗತಿ ಹೊಂದಲು ಸಾಧ್ಯವಾಯಿತೆಂದು ಹೇಳುತ್ತ ".... the school has progressed marvelously both in number and efficiency. Full credit should be given to the Head-master Mr. V. T. Kulkarni who is an able and indefatigable teacher. He has introduced the new method of instruction and discipline patiently. The various

1. ಗುತ್ತಲ ಶಾಲೆಯ 'ವ್ಹಿಸಿಟ್ ಬುಕ್', ಪುಟ 1
2. ಅದೇ, ಪುಟ 2-4.

registers, log books etc., show how systematically, regularly and honestly the work of instruction is conducted. The assistants instead of disliking the rigorous discipline appear well pleased and show their appreciation of it even in the absence of the Head-master...."[1] ಎಂದು ಬರೆದಿರುವರು.

ಗಳಗನಾಥರು ಸ್ವತಃ ಶಿಸ್ತಿನ ಸ್ವಭಾವದವರು: ಮತ್ತು ಅದನ್ನು ಉಳಿದವರಲ್ಲೂ ಅಪೇಕ್ಷಿಸುತ್ತಿದ್ದರು. ಅಲ್ಲದೆ ತಾಳ್ಮೆಯಿಂದ ಅದನ್ನು ಅನುಷ್ಠಾನಕ್ಕೆ ತರುವಂತೆ ಯತ್ನಿಸುತ್ತಿದ್ದರು. ಅವರ ಸಹಾಯಕ ಶಿಕ್ಷಕರು ಅವರನ್ನು ಅವರ ಬೆನ್ನಹಿಂದೆ ಕೂಡ ಹೊಗಳಿದ್ದರೆಂಬುದು ತುಂಬ ಮೆಚ್ಚಬೇಕಾದ ಅಂಶ. ಬಹುಶಃ ಶಿಕ್ಷಣಾಧಿಕಾರಿಗೆ ಕೂಡ ಇದು ಅಚ್ಚರಿಯನ್ನುಂಟು ಮಾಡಿರಲಿಕ್ಕೆ ಸಾಕು. ಗಳಗನಾಥರು ಯಾವ ಶಾಲೆಗೆ ಹೋದರೂ ಒಂದೆರಡು ವರ್ಷಗಳಲ್ಲಿ ಹೊಸ ಶಿಕ್ಷಣ ಪದ್ಧತಿಯನ್ನು ಜಾರಿಯಲ್ಲಿ ತಂದು, ಶಾಲೆಯ ಸ್ವರೂಪವನ್ನೇ ಬದಲಿಸುತ್ತಿದ್ದರು. ಶಿಸ್ತು ಅವರ ಶಿಕ್ಷಣದ ಅಂತಸ್ಸತ್ವವಾಗಿರುತ್ತಿತ್ತು.

ಶಾಲೆಗೆ ಭೆಟ್ಟಿ ಕೊಟ್ಟ ಶಿಕ್ಷಣಾಧಿಕಾರಿಗಳು ಶಾಲೆಯ ಪ್ರಗತಿಯನ್ನು ಎತ್ತಿ ತೋರಿಸುವುದು ಸಹಜವೇ ಆಗಿದೆ. ಆದರೆ ಊರಿಗೆ ಭೆಟ್ಟಿಕೊಟ್ಟ ಧಾರವಾಡ ಜಿಲ್ಹೆಯ ಕಲೆಕ್ಟರ ಎಂಡರ್ಸನ್ ಅವರು ಆಕಸ್ಮಾತ್ ಶಾಲೆಗೂ ಭೆಟ್ಟಿಕೊಟ್ಟು "Examination result excellent. ....The Head-master is good .... Discipline good".[2] ಎಂದು ಬರೆದಿರುವುದು ಗಮನಾರ್ಹವಾಗಿದೆ. ಶಾಲೆಯ ಶಿಕ್ಷಕರಿಗೂ ವಿದ್ಯಾರ್ಥಿಗಳಿಗೂ Good, Excellent ಎಂಬಂಥ ಪ್ರಶಂಸೆ ಕಲೆಕ್ಟರ ಸಾಹೇಬರಿಂದ ದೊರೆತುದು ಸಣ್ಣ ಮಾತಲ್ಲ. ಮತ್ತು ಈ ಎಲ್ಲ ಪ್ರಶಂಸೆಗೆ ಗಳಗನಾಥರೇ ಕಾರಣರೆಂಬುದು ಸುಸ್ಪಷ್ಟ.

8-4-1907ರಂದು ಅಂಚೆ ಇಲಾಖೆಯ ಸುಪರಿಂಟೆಂಡೆಂಟರಾದ ಕೆ. ಬಿ. ದೇಸಾಯಿ ಎಂಬುವರು ಶಾಲೆಗೆ ಭೆಟ್ಟಿ ನೀಡಿ "I was pleased with the discipline and general appearance" ಎಂದು ಬರೆದು, ಗಳಗನಾಥರು ಬಾವಿ ಅಗೆಸುತ್ತಿರುವುದನ್ನು ಉಲ್ಲೇಖಿಸಿ ಅದಕ್ಕೆ ವಿದ್ಯಾ ಖಾತೆಯವರು ಸಹಾಯ ಮಾಡಬೇಕೆಂದು ಸೂಚಿಸಿರುವರು. ಮುಂದೆ 4 ತಿಂಗಳಲ್ಲಿಯೇ ಬಾವಿಯ ಕೆಲಸ ಮುಗಿದಿತ್ತು.

10-8-1907 ರಂದು ಶಾಲೆಯನ್ನು ಸಂದರ್ಶಿಸಿದ್ದ ಮಾಮಲೇದಾರ ಜಿ. ವಿ. ಮಾಸೂರ ಎಂಬುವರು ಎಲ್ಲರಂತೆ ಶಾಲೆಯ ಶಿಸ್ತು, ವ್ಯವಸ್ಥೆಗಳನ್ನು ಮನವಾರೆ ಹೊಗಳಿ, "The town people have nothing but praise to bestow on the energetic and pains taking Head-master. They have sunk a well in the compound....The school is indeed the best in the Taluka"[3] ಎಂದು ಉದ್ಗಾರ ತೆಗೆದಿರುವರು.

1. ಅದೇ, ಪುಟ 7, 10
2. ಅದೇ, ಪುಟ 17
3. ಅದೇ, ಪುಟ 20

ಹೀಗೆ ಶಾಲಾಖಾತೆಗೆ ಸಂಬಂಧಪಟ್ಟವರೂ, ಉಳಿದವರೂ ಶಾಲೆಗೆ ಸಂದರ್ಶನವಿತ್ತವ-ರೆಲ್ಲರೂ ಗಳಗನಾಥರನ್ನು ಅವರ ಶಿಕ್ಷಣ ಕ್ರಮವನ್ನು ಮುಕ್ತಕಂಠದಿಂದ ಪ್ರಶಂಸಿಸಿರುವುದನ್ನು ನೋಡಿದರೆ ಗಳಗನಾಥರು ಆದರ್ಶ ಶಿಕ್ಷಕರಾಗಿದ್ದರೆಂಬುದು ತಾನೇ ವಿದಿತವಾಗುತ್ತದೆ.

ಗುತ್ತಲದಲ್ಲಿ ಬಾವಿ ತೆಗೆಯಿಸಬೇಕೆಂದಾಗ ಗಳಗನಾಥರಿಗೆ ಎಲ್ಲರಿಂದಲೂ ಸಹಕಾರ ಸಿಗ-ಲಿಲ್ಲವಷ್ಟೇ ಅಲ್ಲ, ಅವರಲ್ಲಿ ಕೆಲವರು ಇಲ್ಲದ ಉಸಾಬರಿ ಮಾಡುವ ಈ ಶಿಕ್ಷಕರ ಬಗ್ಗೆ ಮೇಲಾ-ಧಿಕಾರಿಗಳಿಗೆ ತಕರಾರನ್ನು ಸಲ್ಲಿಸಿದರು. ಆಗ ಒಂದು ದಿನ ಅಧಿಕಾರಿಯೊಬ್ಬರು ಶಾಲೆಗೆ ಅನಿ-ರೀಕ್ಷಿತವಾಗಿ ಭೆಟ್ಟಿಕೊಟ್ಟರು. ಆಗ ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡುತ್ತಿದ್ದ ಗಳಗನಾಥರು, ಪಾಠಕ್ರಮವನ್ನು ತಪ್ಪಿಸಲಾರದೆ, ಅಧಿಕಾರಿಯ ಸ್ವಾಗತ ಮಾಡದೆ ತಮ್ಮ ಪಾಠವನ್ನೇ ಮುಂದು-ವರಿಸಿದರು. ಅಧಿಕಾರಿಯು ಇದನ್ನು ತನಗೆ ಮಾಡಿದ ಅವಮಾನವೆಂದು ತಿಳಿದನು, ಕುಪಿತನೂ ಆದನು. ಆದರೆ ಪಾಠದ ಸಮಯ ಮುಗಿದ ಮೇಲೆ ಗಳಗನಾಥರು ಅತ್ಯಂತ ವಿನಯದಿಂದ ಅವನನ್ನು ಬರಮಾಡಿಕೊಂಡು ಸತ್ಕರಿಸಿದರು. ತಮ್ಮ ನಡತೆಯ ಬಗ್ಗೆ ಕೋಪಗೊಂಡ ಅಧಿ-ಕಾರಿಗೆ, ಪಾಠಗಳನ್ನು ಏನೇ ಆದರೂ ವೇಳಾಪತ್ರಿಕೆಯಂತೆ ನಡೆಸಬೇಕೆಂಬ ನಿಯಮವನು ಮುರಿಯಲಾರದೇ ಹೋದ ಬಗ್ಗೆ ವಿವರಿಸಿದರು. ಆಗ ಆ ಅಧಿಕಾರಿಯ ಕೋಪ ಮಾಯ-ವಾಯಿತಲ್ಲದೆ, ಅವರ ಕರ್ತವ್ಯ ಪ್ರಜ್ಞೆಯನ್ನು ಮೆಚ್ಚಿ ಹೊಗಳಿದನಂತೆ. ಅಷ್ಟೇ ಅಲ್ಲ, ಗಳಗ-ನಾಥರು ತೆಗೆಯಿಸಿದ ಬಾವಿಯ ಉಪಯುಕ್ತತೆಯನ್ನು, ಅವರ ಕ್ರಮವನ್ನು ತಿಳಿದು ಸಂತೋಷ ವನ್ನೇ ವ್ಯಕ್ತಪಡಿಸಿದನಂತೆ.[1]

1905ರಿಂದ 1908ರ ವರೆಗೆ ಗಳಗನಾಥರು ಗುತ್ತಲದಲ್ಲಿ ಶಿಕ್ಷಕರಾಗಿದ್ದರು. ಮುಂದೆ ಅವರು ಕನ್ನಡ ಶಾಲಾ ಮಾಸ್ತರಿಕೆಯಿಂದ ದಿ. 21-3-1908ರಂದು ಬಿಡುಗಡೆಹೊಂದಿ ದಿ. 23-3-1908ರಂದು ಧಾರವಾಡದ ಟ್ರೇನಿಂಗ ಕಾಲೇಜಿಗೆ 9ನೆಯ ಉಪಶಿಕ್ಷಕರೆಂದು ಹಾಜರಾದರು.

ಗಳಗನಾಥರಿಗೆ ದೊರೆತ ಈ ಬಡತಿಗೆ ಅವರ ಪ್ರೀತಿಯ ಗುರುಗಳಾದ ಕರಂದೀಕರ ಅವರ ಆಸ್ಥೆಯೇ ಮುಖ್ಯಕಾರಣವೆಂದು ಊಹಿಸಿದರೆ ತಪ್ಪಲ್ಲ. ಗಳಗನಾಥರೂ ಆ ಸ್ಥಳಕ್ಕೆ ಯೋಗ್ಯ-ರಾಗಿದ್ದರೆಂಬ ಮಾತು ನಿಜವೇ. ಆವರೂ ಗಳಗನಾಥರ ಯೋಗ್ಯತೆಯಲ್ಲಿ ವಿಶ್ವಾಸವುಳ್ಳ ಕರಂದೀಕರರು ದಕ್ಷಿಣ ಭಾಗದ ಶಿಕ್ಷಣಾಧಿಕಾರಿಯಾಗಿ ನೇಮಕಗೊಂಡು ಇನ್ನೂ ಆರು ತಿಂಗಳೂ ಕಳೆದಿರಲಿಲ್ಲ. ಅಷ್ಟರಲ್ಲಿ ಅವರು ಗಳಗನಾಥರನ್ನು ಟ್ರೇನಿಂಗ ಕಾಲೇಜಿಗೆ ನೇಮಿಸಿದರು. ಇದಕ್ಕೂ ಮೊದಲು ಯಾವ ಕನ್ನಡ ಶಾಲೆಯ ಶಿಕ್ಷಕರಿಗೂ ಇಂಥ ಗೌರವ ದೊರೆತಿರಲಿಲ್ಲ! ಈ ವಿಚಾರವನ್ನು 'ಶಾಲಾ ಪತ್ರಕ'ವು ಸ್ವಾಗತಿಸಿದ್ದು ಗಮನಾರ್ಹವಾಗಿದೆ.

"ಕಾಲೇಜಿನಲ್ಲಿ ಹೊಸದಾಗಿ ಮಂಜೂರಾದ ಶಿಕ್ಷಕ ಜನರ ಸ್ಥಳಗಳಲ್ಲೊಂದನ್ನೂ ಪ್ರಾಥ ಮಿಕ ಶಾಲೆಯ ಮಾಸ್ತರರಿಗೆ ಕೊಟ್ಟಿರುವರು. ಈ ನೇಮಿಸಲ್ಪಟ್ಟ ಶಿಕ್ಷಕರು ಕನ್ನಡ, ಸಂಸ್ಕೃತ

1. ಈ ವಿಷಯವನ್ನು ಗಳಗನಾಥರ ಮೊಮ್ಮಗ ಮತ್ತು ದತ್ತಕಮಗ ಆಗಿರುವ ಶ್ರೀ ಬಿಷ್ಟಪ್ಪನವರು ನನಗೆ ತಿಳಿಸಿದರು. ಗಳಗನಾಥರ ಬಳಗದವರೆಲ್ಲರೂ, ಈ ವಿಷಯವನ್ನು ವಿವರಗಳಲ್ಲಿ ಮಾತ್ರ ಅಲ್ಲಲ್ಲಿ ತುಸು ಭಿನ್ನವಾಗಿದ್ದರೂ, ಹೇಳುವರು. ಆದರೆ ಆ ಅಧಿಕಾರಿಯ ಹೆಸರು ಮಾತ್ರ ಖಚಿತವಾಗಿ ತಿಳಿದಿಲ್ಲ. 10-8-1907 ರಂದು ಶಾಲೆಗೆ ಭೆಟ್ಟಿಯಿತ್ತ ಮಾಮಲೇದಾರರಾಗಲಿ 5-1-1908ರಂದು ಭೆಟ್ಟಿಯಿತ್ತ ಎ. ಡಿ. ಇ. ಐ. ಆಗಲಿ ಆ ಅಧಿಕಾರಿಯಾಗಿರಬಹುದು.

ಭಾಷೆಗಳನ್ನು ಕಲಿಸುತ್ತಿದ್ದ ಈಗಿದ್ದ ಅಧ್ಯಾಪಕರಿಗೆ ನೆರವಾಗತಕ್ಕದ್ದು ಎಂದು ಗೊತ್ತಾಗಿರುವದು. ಸದ್ಯಕ್ಕೆ ಈ ಕೆಲಸವು ಗುತ್ತಲ ಶಾಲಾ ಮಾಸ್ತರರಾದ ಮಿ. ಗಳಗನಾಥ ಇವರಿಗೆ ಸಿಕ್ಕಿರುವದು. ಪ್ರಾಥಮಿಕ ಶಾಲೆಯ ಮಾಸ್ತರರ ಯೋಗ್ಯತೆಯು ಬೆಳೆಯಬೇಕೆಂದು ಬಯಸಿ ಈಗಿರುವ ನಮ್ಮ ಭಾಗದ ಎಜ್ಯುಕೇಶನಲ್ ಇನಸ್ಪೆಕ್ಟರರಾದ ರಾವಬಹಾದ್ದೂರ ಕರಂದೀಕರ ಸಾಹೇಬರು ಡೈರೆಕ್ಟರ ದೊರೆಗಳವರಿಗೆ ವಸ್ತುಸ್ಥಿತಿಯನ್ನು ವಿವರಿಸಿ ಈ ನೇಮಣೂಕಿಗೆ ಅವರ ಮನವೊಲಿಸಿದ್ದು ಇಬ್ಬಗೆಯಿಂದ ಸ್ತುತ್ಯರ್ಹವಾಗಿದೆ. ಪ್ರಸ್ತುತ ನೇಮಣೂಕಾದರೂ ಯೋಗ್ಯವಾಗಿರುವದೆಂದು ಹೇಳಲು ಅಡ್ಡಿಯಿಲ್ಲ. ದೊರೆತ ಸ್ಥಾನದ ಗೌರವವನ್ನು ಕಾಯ್ದುಕೊಂಡು ಪ್ರಾಥಮಿಕ ಶಾಲಾಧ್ಯಾಪಕರು ಇಂಥ ಕೆಲಸಕ್ಕೆ ತಕ್ಕವರಿರುವರೆಂಬ ನಂಬುಗೆಯನ್ನು ಹುಟ್ಟಿಸುವದು ಮಿ. ಗಳಗನಾಥ ಇವರ ಕರ್ತವ್ಯವಾಗಿದೆ. ಅದು ಅವರಿಂದ ಪೂರೈಸಲ್ಪಡುವದೆಂದು ಹಾರೈಸುತ್ತೇನೆ"[1] ಎಂದು ಪತ್ರಿಕೆಯ ಸಂಪಾದಕರಾದ ಟ್ರೇನಿಂಗ ಕಾಲೇಜಿನ ಪ್ರಿನ್ಸಿಪಾಲರೇ ಈ ಪ್ರಾಥಮಿಕ ಶಾಲೆಯ ಶಿಕ್ಷಕನನ್ನು ತಮ್ಮ ಕಾಲೇಜಿಗೆ ಸ್ವಾಗತಿಸಿದ್ದಾರೆ.

ಗಳಗನಾಥರಿಗೆ ತಮ್ಮ ಪ್ರಾಥಮಿಕ ಶಾಲಾ ಶಿಕ್ಷಕನ ಕಾರ್ಯಕ್ಷೇತ್ರ ತೀರ ಚಿಕ್ಕದಾಗಿ ಕಂಡಿತ್ತು. ಅದನ್ನು ನೆನೆಯುತ್ತ ಅವರು "ಈ ಬಗೆಯ ಸಂಕುಚಿತ ಕಾರ್ಯಕ್ಷೇತ್ರದಲ್ಲಿ ಕಾಲಕ್ಷೇಪ ಮಾಡುವ ಬಡವನು ನಾನು, ಪ್ರತಿತಿಂಗಳ ಹದಿನೈದು ರೂಪಾಯಿಗಳ ತಲಬಿನಿಂದ ಮೂವತ್ತು ರೂಪಾಯಿ ತಲಬಿನ ವರೆಗೆ ಏರುತ್ತ ಏರುತ್ತ, ಮುಖ್ಯ ಶಿಕ್ಷಕನಾಗಿ ಸಣ್ಣ ಹಳ್ಳಿಯಿಂದ ದೊಡ್ಡ ಹಳ್ಳಿಗೆ ವರ್ಗವಾಗಿ ಹೋಗುತ್ತ ಹೋಗುತ್ತ, ಕಡೆಗೆ ನಲವತ್ತೈದು ರೂಪಾಯಿ ತಲಬಿನಿಂದ ಟ್ರೇನಿಂಗ ಕಾಲೇಜದ ಕನ್ನಡ ಉಪಶಿಕ್ಷಕನಾದೆನು. ಮುಂದೆ ಒಂದೆರಡು ತಿಂಗಳೊಳಗೆ ಅಲ್ಲಿ ತಿಂಗಳಿಗೆ ಐವತ್ತು ರೂಪಾಯಿಗಳು ದೊರೆಯಹತ್ತಲು, ನನ್ನಂತಹ ಧನ್ಯನು ನಾನೇ ಎಂದು ಅಭಿಮಾನ ಪಡತೊಡಗಿದೆನು. ಪಾಪ! ಬಡವರ ಅಲ್ಪ ಸಂತುಷ್ಟತೆ!"[2]

"ಹೀಗೆಯೇ ಇನ್ನು ಎರಡು ವರ್ಷ ಟ್ರೇನಿಂಗ ಕಾಲೇಜದ ಶಿಕ್ಷಕನಾಗಿದ್ದರೆ, ನನಗೆ ತಿಂಗಳಿಗೆ ಒಂದು ನೂರು ರೂಪಾಯಿಯ ಸಂಬಳವಾದರೂ ಆಗಿ, ನಾನೊಬ್ಬ ಗಣ್ಯ ಪುರುಷನಾಗುತ್ತಿದ್ದೆನು; ಯಾಕೆಂದರೆ, ದುಡ್ಡಿನಿಂದಲೇ ಮನುಷ್ಯನ ಯೋಗ್ಯತೆಯನ್ನು ಅಳೆಯುವ ಕಾಲವಿದು! ಆದರೆ ನನ್ನ ಏಕನಿಷ್ಠೆಯ ಪರಿಶ್ರಮಕ್ಕೆ ಅಷ್ಟು ಪ್ರತಿಫಲವು ದೊರೆಯುವ ಯೋಗವಿದ್ದಿಲ್ಲ. ಯಾಕೆಂದರೆ ನಾನು ಅಕಸ್ಮಾತ್ ಮೊದಲು ಒಂದು ವರ್ಷದ ಫರ್ಲೋ ರಜೆಯನ್ನೂ, ಆ ಮೇಲೆ ಒಂದು ವರ್ಷದ ಸಿಕ್ ರಜೆಯನ್ನೂ ಭೋಗಿಸಿ,[3]

---

1. ಶಾಲಾಪತ್ರಕ, ಮೇ 1908, ಪುಟ 98
2. ಗಳಗನಾಥ : ಸದ್ಗುರು ಪ್ರಭಾವ, ಪುಟ 8
3. ಗಳಗನಾಥರು ಮೊದಲು ಒಂದು ವರ್ಷದ ರಜೆಯನ್ನೂ ಮುಂದೆ ದಿ. 28-7-1913ರಿಂದ ಒಂದು ವರ್ಷದ ಸಿಕ್ ರಜೆಯನ್ನೂ ಪಡೆದರು. ಆ ರಜೆಯ ಕಾಲಕ್ಕೆ ಅವರಿಗೆ ತಿಂಗಳಿಗೆ 25 ರೂ. ಸಿಗುತ್ತಿದ್ದುವು. (ಈ ರಜೆಯ ಅವಧಿಯಲ್ಲಿ ಶ್ರೀ ಮ. ಪ್ರ. ಪೂಜಾರ ಅವರನ್ನು ನೇಮಿಸಲಾಗಿತ್ತು.) ದಿನಾಂಕ 21-7-1914ರಂದು ಗಳಗನಾಥರು ಅಕಾಲಿಕ ನಿವೃತ್ತಿಯನ್ನು ಪಡೆದಾಗ, ಅವರ ಸಂಬಳ ಪತ್ರಿಕೆಯ ಮೇಲೆ 'Incapacitated for further service by the Civil Surgeon, Dharwar' ಎಂದು ಶರಾ ಬರೆಯಲಾಯಿತು. ಆ ತಿಂಗಳು ಅವರಿಗೆ ಕೇವಲ 16ರೂ. 15ಅಣೆ ಪಗಾರ ದೊರೆಯಿತು. ಅದುವೇ ಅವರು ಪಡೆದ ಕೊನೆಯ ಪಗಾರ.

ಇನ್ನು ಹತ್ತು ವರ್ಷದ ನೌಕರಿಯ ಮುದ್ದತ್ತು ಇರುತ್ತಿರುವಾಗ ಪ್ರಯತ್ನ ಪೂರ್ವಕ ಪೆನಶನ್ನು ಪಡೆದೆನು."[1]

ಗಳಗನಾಥರ ಈ ಆತ್ಮಕಥನದಲ್ಲಿ ತುಸು ನಿರಾಸೆಯ ಛಾಯೆ ಕಾಣುತ್ತದೆ. ಅವರು ಶಿಕ್ಷಕ ಕೆಲಸದಿಂದ ನಿವೃತ್ತಿ ಪಡೆಯಲು ಅವರಿಗೆ ಅಗಡಿಯ ಆಶ್ರಮದ ಶೇಷಾಚಲ ಸ್ವಾಮಿಗಳ ಭಕ್ತಿಯ ಆಕರ್ಷಣೆಯೇ ಮುಖ್ಯವಾಗಿತ್ತೆಂದು ಅವರೇ ಹೇಳಿದ್ದರೂ, ಅವರಿಗೆ ಟ್ರೇನಿಂಗ ಕಾಲೇಜದಲ್ಲಿ ಅರ್ಹತೆಗೆ ತಕ್ಕ ಮನ್ನಣೆ ಸಿಗದೆ ಹೋದುದೂ ಒಂದು ಕಾರಣವಾಗಿರಬಹುದು. ಟ್ರೇನಿಂಗ ಕಾಲೇಜಿನಲ್ಲಿ ಗಳಗನಾಥರು ಕನ್ನಡ ಮತ್ತು ಸಂಸ್ಕೃತ ಶಿಕ್ಷಕರಾಗಿದ್ದರು. "ಅಲ್ಲಿ ಉಚ್ಚ ಪದವೀಧರರಾದ ಶ್ರೀ ಮಗದಾಲ ಅವರ ಕೂಡ ತುಸು ಠಿಕ್ಕಾಟ ಬಂತು. ಮಗದಾಲರು ಬಿ. ಎ. ಪದವೀಧರರು. ವೆಂಕಣ್ಣ ಮಾಸ್ತರರು 3 ವರ್ಷ ಟ್ರೇಂಡ. ಉಚ್ಚ ಶಿಕ್ಷಣದ ಮುದ್ರೆಯವರೊಂದಿಗೆ ತಮಗೆ ಅಷ್ಟು ಸಮಾನ ಗೌರವ ದೊರೆಯಲಿಲ್ಲವೆಂದು ತಿಳಿದು ಈ ನವಕರಿಗೆ ತಿಲಾಂಜಲಿ ಕೊಡಬೇಕೆಂದು ಬಯಸಿದರು."[2] ಎಂದು ದಿ. ನೆಗಳೂರರು ಹೇಳಿರುವದೂ ನಿಜವಾಗಿರಬಹುದು. ಆದರೆ ಗಳಗನಾಥರು ಮಾತ್ರ ಈ ವಿರಸ ಪ್ರಸಂಗವನ್ನು ಎಲ್ಲಿಯೂ ಉಲ್ಲೇಖಿಸಿಲ್ಲ.

ಗಳಗನಾಥರ ಸೇವಾನಿವೃತ್ತಿಯ ನಿರ್ಧಾರವನ್ನು ಬದಲಿಸಲು ಅವರ ಗುರುಗಳಾದ ಕರಂದೀಕರರು ಪ್ರಯತ್ನಿಸಿದರು.

"ಆಗಿನ ಕಾಲಕ್ಕೆ ಎಜ್ಯುಕೇಶನಲ್ ಇನ್‌ಸ್ಪೆಕ್ಟರರಾದ ಶ್ರೀ ರಾವಜೀ ಬಾಳಾಜೀ ಕರಂದೀಕರ ಅವರು ಇವರನ್ನು ಕರಿಸಿ, ನೀನು ನವಕರಿ ಬಿಡಬೇಡ ಎಂದು ಪರಿಪರಿಯಿಂದ ತಿಳಿಹೇಳಿ, ನಿನಗೆ ಅಸಿ. ಡೆಪ್ಯೂಟಿ ಜಾಗಾ ಕೊಡುವೆನೆಂದು ಆಶ್ವಾಸನ ಮಾಡಿದರು. ಇಷ್ಟಾದರೂ ಇವರು ತಮ್ಮ ನಿರ್ಧಾರವನ್ನು ಬದಲಿಸಲೇ ಇಲ್ಲ. ನಾನು ನಿಶ್ಚಯಮಾಡಿದಂತೆ ವರ್ತಿಸಿದರೆ ನನ್ನ ಜನ್ಮದ ಸಾರ್ಥಕವಾಗೇ ತೀರುವದೆಂದು ಹೇಳಿದರು."[3]

"ಉದ್ವಿಗ್ನರಾಗಿದ್ದ ಗಳಗನಾಥರನ್ನು ಮೂರು ದಿನ ತಮ್ಮಲ್ಲಿಯೆ ನಿಲ್ಲಿಸಿಕೊಂಡು, ಬರಿ ಹಾಲಿನ ಮೇಲೆ ಇಟ್ಟಿದ್ದರಂತೆ."[4] ಗಳಗನಾಥರ ನಿರ್ಧಾರ ಅಚಲವಾಗಿತ್ತು. ಕರಂದೀಕರರೇ ಅವರಿಗೆ ಎರಡು ವರ್ಷದ ರಜೆಯನ್ನು ಮಂಜೂರ ಮಾಡಿಸಲು ಸಹಾಯ ಮಾಡಿದರು. ಕೊನೆಗೆ ಗಳಗನಾಥರು 21-7-1914ರಂದು ಶಿಕ್ಷಕ ಕೆಲಸದಿಂದ 19ರೂ. 6ಆಣೆ ಪೆನ್‌ಶನ್ ಮೇಲೆ ನಿವೃತ್ತರಾದರು.[5]

---

1. ಗಳಗನಾಥ: ಸದ್ಗುರು ಪ್ರಭಾವ, ಪುಟ 8.
2. ಗಳಗನಾಥ (1946), ಪುಟ 29
3. ಸದ್ಬೋಧ ಚಂದ್ರಿಕೆ ವಿಶೇಷಾಂಕ, ಸಂಪುಟ 63, ಸಂಚಿಕೆ 1, ಮತ್ತು 2ರಲ್ಲಿ ಕೃಷ್ಣಾಜಿ ಶಂಕರ ಹೊಂಬಳ ಪಾಟೀಲ ಅವರು ನೆನೆಯುವರು. ಶ್ರೀಯುತರು 1909ರಲ್ಲಿ ಧಾರವಾಡದ ಟ್ರೇನಿಂಗ ಕಾಲೇಜದಲ್ಲಿ ಗಳಗನಾಥರ ಶಿಷ್ಯರಾಗಿದ್ದರು.
4. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 17
5. ಶ್ರೀನಿವಾಸ ಹಾವನೂರ ಅವರು ಬರೆದಂತೆ (ಗಳಗನಾಥ ಮಾಸ್ತರರು, ಪುಟ 17) ಗಳಗನಾಥರ ನಿವೃತ್ತಿಯ ದಿನಾಂಕವು 27-7-1914 ಅಲ್ಲ. ಟ್ರೇನಿಂಗ ಕಾಲೇಜಿನ ಕಾಗದ ಪತ್ರಗಳಲ್ಲಿ ಈ ದಿನಾಂಕವು 21-7-1914 ಎಂದೇ ಇದೆ.

ತಾವು ಅಕಾಲದಲ್ಲಿ ನಿವೃತ್ತವಾದುದಕ್ಕೆ ಜನ ಅಪಾರ್ಥ ಕಲ್ಪಿಸಬಹುದೆಂಬ ಸಂದೇಹ ಗಳಗನಾಥರಿಗೂ ಬಂದಿರಬೇಕು. ಅದಕ್ಕೇ ಅವರು "ಹೀಗೆ ಅಕಾಲದಲ್ಲಿ ನಾನು ಪೆನಶನ್ನು ಪಡೆದದ್ದಕ್ಕಾಗಿ ಒಬ್ಬರಿಲ್ಲೊಬ್ಬರಾದರೂ ಶಂಕಿಸಬಹುದಾಗಿದೆ; ಆದರೆ ನಾನು ಮಾಡುತ್ತಿದ್ದ ಅಧ್ಯಾಪಕ ಕೆಲಸದಲ್ಲಿ ಬೇಸರಮಾಡಿಯಾಗಲೀ, ಇದರಲ್ಲೇನು ಲಾಭವಿಲ್ಲೆಂಬ ಅಸಂತುಷ್ಟತೆಯಿಂದಾಗಲಿ, ಅಚ್ಚ ಲೇಖಕನಾಗಿ ಸ್ವತಂತ್ರನೂ ದುಡ್ಡು ಗಳಿಸುವವನೂ ಎನಿಸಿಕೊಳ್ಳಬೇಕೆಂಬ ಹೌಲಿನಿಂದಾಗಲಿ, ದೇಶಭಕ್ತನೆನಿಸಿಕೊಳ್ಳಬೇಕೆಂಬ ಉಬ್ಬಿನಿಂದಾಗಲಿ ನಾನು ನೌಕರಿಯನ್ನು ಬಿಟ್ಟವನಲ್ಲ; ಆದರೆ ಅಷ್ಟು ಹೊತ್ತಿಗೆ ಮೂರು ನಾಲ್ಕು ವರ್ಷಗಳಿಂದ ಅಗಡಿಯ ಆನಂದವನಸ್ಥ ಶ್ರೀ ಶೇಷಾಚಲ ಸಾಧುಗಳವರ ಸತ್ಸಹವಾಸವು ನನಗೆ ಒದಗಿ, ಆನಂದವನದಲ್ಲಿ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿದ ಉಪಾಧಿಯ ಬಾಧೆಗೆ ಅಹಂಕಾರದಿಂದ ನಾನು ಒಳಗಾಗಿದ್ದೆನು. ಆ ಪಾಠಶಾಲೆಯ ಯೋಗಕ್ಷೇಮಕ್ಕಾಗಿ ನಾನು ಆರಂಭಿಸಿದ್ದ 'ಸದ್ಬೋಧ ಚಂದ್ರಿಕೆ' ಎಂಬ ಮಾಸಪತ್ರಿಕೆಯನ್ನು ಸಾಗಿಸುವದಕ್ಕೂ, ಪಾಠಶಾಲೆಯನ್ನು ನನ್ನ ಸ್ವಭಾವಕ್ಕನುಸರಿಸಿ ನಡಿಸಲಿಕ್ಕೂ ನನ್ನ ನೌಕರಿಯು ವಿಘ್ನ ಮಾಡತೊಡಗಿತು. ಹೀಗೆ ಎರಡು ಪ್ರಬಲ ಉಪಾಧಿಗಳ ಇರುಕಿನಲ್ಲಿ ಸಿಕ್ಕ ನಾನು ಯಾವದೊಂದು ಉಪಾಧಿಯಿಂದ ಮುಕ್ತನಾಗದಿದ್ದರೆ ಪರಿಣಾಮವಾಗುವ ಹಾಗಿದ್ದಿಲ್ಲ. ಹೀಗಿರುವಾಗ ನನ್ನ ಹಿರಿಯರ ಪುಣ್ಯದಿಂದಲೂ, ಶ್ರೀ ಲಕ್ಷ್ಮೀಪತಿಯ ಕೃಪೆಯಿಂದಲೂ ನಾನು ನೌಕರಿಯ ಉಪಾಧಿಯಿಂದ ಮುಕ್ತನಾಗಿ, ಮಹಾಪುರುಷ–ಸಂಶ್ರಯದ ಭಾಗ್ಯವನ್ನು ಪಡೆದೆನು!"[1] ಎಂದು ವಿವರಿಸಿದರು. ಅವರ ಪ್ರಾಮಾಣಿಕ ವಿವರಣೆಯನ್ನು ನಾವು ನಂಬಬಹುದಾಗಿದೆ. ಮಗದಾಲರ ಪ್ರಕರಣವೂ ಗಳಗನಾಥರ ನಿವೃತ್ತಿಗೆ ತುಸುಮಟ್ಟಿಗೆ ಕಾರಣವಾಗಿರಬಹುದು. ಆದರೂ ಗಳಗನಾಥರಿಗುಂಟಾಗಿದ್ದ ಅಗಡಿಯ ಆಶ್ರಮದ ಆಕರ್ಷಣೆಯೇ ಅವರ ಸೇವಾ ನಿವೃತ್ತಿಗೆ ಮುಖ್ಯ ಪ್ರೇರಣೆಯಾಗಿತ್ತೆನ್ನಬಹುದು.

ಗಳಗನಾಥರು ಗುತ್ತಲದಲ್ಲಿ ಶಿಕ್ಷಕರಾಗಿರುವಾಗಲೇ ಸಮೀಪದಲ್ಲಿದ್ದ ಅಗಡಿಯ ಆಶ್ರಮದ ಶೇಷಾಚಲ ಸ್ವಾಮಿಗಳಿಂದ ಆಕರ್ಷಿತರಾಗಿದ್ದರು. ಮೊದಲಿನಿಂದಲೂ ಅವರಲ್ಲಿದ್ದ ದೈವ ಭಕ್ತಿಯು ಈಗ ಶೇಷಾಚಲ ಗುರುಗಳಲ್ಲಿ ಆಳವಾಗಿ ನೆಲೆನಿಂತಿತು. ಮದುವೆಯಾಗಿ ಹಲವು ವರ್ಷಗಳು ಕಳೆದಿದ್ದರೂ ಅವರಿಗೆ ಮಕ್ಕಳಾಗಿರಲಿಲ್ಲ. ಆ ಕೊರಗು ಅವರನ್ನು ಕೊರೆಯುತ್ತಿತ್ತು. ಅವರು ಗುತ್ತಲಕ್ಕೆ ವರ್ಗವಾಗಿ ಬಂದ ಕಾಲದಲ್ಲಿ ಶೇಷಾಚಲ ಸ್ವಾಮಿಗಳ ಕೀರ್ತಿ ಆ ಭಾಗದಲ್ಲೆಲ್ಲ ಹೆಚ್ಚಾಗಿ ಪಸರಿಸಿತ್ತು.

ಆಗ ಅಗಡಿಯಲ್ಲಿ 'ಆನಂದವನ'ವೆಂಬ ಆಶ್ರಮವನ್ನು ಕಟ್ಟಿ ಶೇಷಾಚಲರು ಅಲ್ಲಿಗೆ ಬಂದು ನೆಲೆಸಿ ಕೆಲವು ವರ್ಷಗಳಷ್ಟೇ ಗತಿಸಿದ್ದುವು. ಆದರೂ ಅನ್ನದಾನ, ಅತಿಥಿಸೇವೆಗಳಿಂದ ಅಗಡಿಯ ಸಾಧುಗಳು ಬಹಳ ಹೆಸರಾಗಿದ್ದರು. ಅಂಥ ಸಮಯದಲ್ಲಿ ದರ್ಶನಾಕಾಂಕ್ಷಿಗಳಾಗಿ ಅಗಡಿಗೆ ಹೋದ ಗಳಗನಾಥರು ಪ್ರಥಮ ದಿನದಲ್ಲಿಯೇ ಸದ್ಗುರುಗಳ ಪ್ರಭಾವಕ್ಕೊಳಗಾದರು. ಆಗಾಗ ಭಕ್ತಿಯಿಂದ ಅಲ್ಲಿಗೆ ಹೋಗಿ ಬರುತ್ತಲೇ ಇದ್ದರು. ಮುಂದೆ ಅಲ್ಪಕಾಲದಲ್ಲಿಯೇ ಸದ್ಗುರುವಿನ ಕೃಪೆಯಿಂದ ಎಂಬಂತೆ ಅವರಿಗೆ ಕನ್ಯಾರತ್ನದ ಭಾಗ್ಯ ಒದಗಿಬಂದಿತು. ಹಿರಿಯ ಮಗಳು ಸುಬ್ಬಕ್ಕ ಗಳಗನಾಥರು ಗುತ್ತಲದಲ್ಲಿರುವಾಗಲೇ 1907ರಲ್ಲಿ ಜನಿಸಿದಳು. ಆದರಿಂದಂತೂ ಭಾವಿಕ ಗಳಗನಾಥರ ಗುರುಭಕ್ತಿ ಅಗಡಿಯ ಸ್ವಾಮಿಗಳಲ್ಲಿ ಅನನ್ಯವಾಗಿ,

---

1. ವೇ. ತಿ. ಗಳಗನಾಥ : ಸದ್ಗುರು ಪ್ರಭಾವ, ಪುಟ 8–9

ಆಳವಾಗಿ ಬೇರೂರಿತು. ಅಗಡಿಯ ಸಂಬಂಧವೂ ಬೆಳೆಯಿತು. 1907ರಲ್ಲಿ ಶ್ರೀ ಶೇಷಾಚಲ ಸ್ವಾಮಿಗಳ ಷಷ್ಟ್ಯಬ್ದಿ ಸಮಾರಂಭದಲ್ಲಿ ಗಳಗನಾಥರು ಅತೀವ ಉತ್ಸಾಹದಿಂದ ಭಾಗ ವಹಿಸಿದರು. ಕೈತುಂಬ ಹಣವನ್ನು ದಾನಮಾಡಿದರು. ಅದಕ್ಕಾಗಿ ಅವರು ಹೆಂಡತಿಯ ಕೈಯಲ್ಲಿಯ ಪಾಟಲಿಗಳನ್ನು ಸಂತೋಷದಿಂದ ಮಾರಿದರು.

ಸಾಧುಗಳ ಸತ್ಸಹವಾಸದ ಫಲವಾಗಿ ಗಳಗನಾಥರು ಆನಂದವನದಲ್ಲಿ (ಅಗಡಿಯ ಆಶ್ರಮ) ತಮ್ಮ ಬಹುದಿನದ ಕನಸಾದ ಗುರುಕುಲ ಮಾದರಿಯ ಸಂಸ್ಕೃತ ಪಾಠಶಾಲೆ ಯನ್ನು ಸ್ಥಾಪಿಸಿ ಅದರ ಹೊಣೆಯನ್ನು ತಾವೇ ಹೊತ್ತುಕೊಂಡರು. ಅನಂತರ ಅದಕ್ಕೆ ಪೋಷಕವಾಗಿ 'ಸದ್ಬೋಧ ಚಂದ್ರಿಕೆ' ಎಂಬ ಮಾಸಪತ್ರಿಕೆಯನ್ನು ಆರಂಭಿಸಿದರು. ಗಳಗನಾಥರು ಮೊದಮೊದಲು ತಮ್ಮ ಶಿಕ್ಷಕವೃತ್ತಿಯ ಜೊತೆಗೇ ಈ ಕಾರ್ಯಗಳನ್ನೂ ಸಾಗಿಸುತ್ತಿದ್ದರು. ಆದರೆ ಅನಂತರ 1912ರಿಂದ ಶಿಕ್ಷಕ ಕೆಲಸವನ್ನು ತ್ಯಜಿಸಿ (ಆಗ ಅವರು 2 ವರ್ಷ ರಜೆ ಪಡೆದಿದ್ದರು) ಸಂಪೂರ್ಣವಾಗಿ ಆನಂದವನದಲ್ಲಿಯೇ ನೆಲೆಸಿಬಿಟ್ಟರು.

ತಮ್ಮ ಸದ್ಗುರುವಿನ ಪ್ರಭಾವವನ್ನು ಗಳಗನಾಥರು ಅತೀವ ಭಕ್ತಿ-ಅಭಿಮಾನಗಳಿಂದ ಬಣ್ಣಿಸಿರುವರು. "ನನ್ನ ಸದ್ಗುರುನಾಥರ ಅಗಾಧ ಮಹಿಮೆಯನ್ನು ವರ್ಣಿಸಲು ನಾನು ಹೇಗೆ ಸಮರ್ಥನಾದೇನು? ಆ ಮಹಿಮನನ್ನು ನಮಸ್ಕರಿಸುವ ಯೋಗ್ಯತೆಯಾದರೂ ನನ್ನಲ್ಲಿ ಇರುವದೆಯೇ? ಇಂಥ ಸದ್ಗುರುನಾಥನ ಆನಂದವನವೆಂಬ ಪವಿತ್ರತರ ತಪೋಭೂಮಿಯಲ್ಲಿ ಅಹಂಕಾರಿಯು ನಾನು, ಸದ್ಗುರುನಾಥನ ಶಿಷ್ಯನೆಂಬ ಮಹಾಹಂಕಾರದಿಂದ ಬಾಧಿತನಾಗಿ, ಅಖಂಡ ಹದಿಮೂರು ಹದಿನಾಲ್ಕು ವರ್ಷ ಸಕುಟುಂಬ ಸಪರಿವಾರ ವಾಸಿಸಿ ಏನೇನೋ ಕೆಲಸಗಳನ್ನು ಮಾಡಿಬಿಟ್ಟೆನು! ನನ್ನ ಅಕ್ಕರೆಯ 'ಸದ್ಬೋಧ ಚಂದ್ರಿಕೆ'ಯೆಂಬ ಮಾಸಪತ್ರಿಕೆಯು ಸದ್ಗುರುನಾಥನ ಕೃಪೆಯಿಂದ ನನ್ನ ಜೇಷ್ಠ ಪುತ್ರಿಯಂತೆ ಆನಂದವನದಲ್ಲಿ ಹುಟ್ಟಿದಳು."[1]

ಗಳಗನಾಥರ ಗುರುಗಳಾದ ಶೇಷಾಚಲ ಸ್ವಾಮಿಗಳು ಕಾಲವಾದಾಗ ಗಳಗನಾಥರು 'ನಿರ್ಯಾಣ ಮಹೋತ್ಸವ' ಎಂಬ ಗ್ರಂಥವನ್ನೇ ಬರೆದು ತಮ್ಮ ಸದ್ಗುರುವಿನ ಮಹಿಮೆಯನ್ನು ವಿವರವಾಗಿ ಬಣ್ಣಿಸಿರುವರು. ಈ ಕೃತಿಯು ಶೇಷಾಚಲ ಸಂತರ ಬಗ್ಗೆ ಗಳಗನಾಥರಲ್ಲಿದ್ದ ಅತೀವ ಭಕ್ತಿ-ವಿಶ್ವಾಸಗಳನ್ನು ಸ್ಪಷ್ಟವಾಗಿ ವ್ಯಕ್ತಪಡಿಸುತ್ತದೆ.

'ನಿರ್ಯಾಣ ಮಹೋತ್ಸವ'ದಲ್ಲಿ ಗಳಗನಾಥರು ತಮ್ಮ ಗುರುಗಳು ಶೇಷಭಟ್ಟರು-ಸಾಧುಗಳು-ಗುರುಗಳು-ಸದ್ಗುರುಗಳು ಎಂದು ಕರೆಯಿಸಿಕೊಳ್ಳುತ್ತಾ ಕೊನೆಗೆ ಸದ್ಗುರೂತ್ತಮರು ಹೇಗಾದರೆಂಬುದನ್ನು ಒಳ್ಳೆಯ ಅಭಿಮಾನದಿಂದ ಬಣ್ಣಿಸಿರುವರು. ಗುರುಗಳ ಬಗ್ಗೆ ಗಳಗನಾಥರಲ್ಲಿದ್ದ ಭಕ್ತಿ-ವಿಶ್ವಾಸ-ಪೂಜ್ಯಭಾವನೆಗಳು ಈ ಗ್ರಂಥದಲ್ಲಿ ವ್ಯಕ್ತವಾಗಿವೆ. ಇಂಥ ಗುರುಗಳು "ದೇಹತ್ಯಾಗಿತಾ ಕೀರ್ತಿಮಾಗೇ ಉರಾವೀ" ಎಂಬ ರಾಮದಾಸರ ಉಕ್ತಿಯಂತೆ ಹೇಗೆ ಕೀರ್ತಿಶೇಷರಾದರೆಂಬುದನ್ನು ವಿವರಿಸಿ, ಆಮೇಲೆ ಅಗಡಿಯ ಆಶ್ರಮದಲ್ಲಿ ಉಂಟಾದ ಅಸ್ತವ್ಯಸ್ತತೆಯನ್ನೂ ಆಶ್ರಮದ ಭವಿತವ್ಯವನ್ನೂ ಕುರಿತು ತಿಳಿಸಿರುವರು.

"ನನ್ನ ಧನ್ಯತೆಗೆ ಕಾರಣನಾದ ಅಲೌಕಿಕ ಮಹಿಮೆಯ ಹಾಗೂ ಅಗಾಧ ಸತ್ವದ ಅಗಡಿ ಆನಂದವನಸ್ಥ ಶ್ರೀ ಶೇಷ ಸದ್ಗುರುನಾಥನು. ನನ್ನ ಹಾಗೆಯೇ ಗಾವಿಲನು .... ಅವರೆ

1. ಅದೇ, ಪುಟ 10-11

ಕೇವಲ ನನ್ನಂತಹ ಮೂಢ ಜನರ ಉದ್ಧಾರಕ್ಕಾಗಿ ಅವತರಿಸಿ, ಮೂಢರಿಗಿಂತಲೂ ಮೂಢನಾಗಿ ತೋರುತ್ತ, ಅಡ್ಡ ಹಾದಿಗೆ ಹೋಗುತ್ತಿರುವ ಶಿಷ್ಯರನ್ನು ಅವರಿಗೆ ತಿಳಿಯದಂತೆ ಹಾದಿಗೆ ಹಚ್ಚಲು ಸಮರ್ಥನಾದ ದೀನ ರಕ್ಷಕ ಪತಿತಪಾವನ ಸದ್ಗುರುನಾಥನು, ನನ್ನ ಶ್ರೀ ಶೇಷಸದ್ಗುರುನಾಥನಿಗಿಂತಲೂ ಹೆಚ್ಚಿನವನು ಈ ಜಗತ್ತಿನಲ್ಲಿ ಮತ್ತಾವನಿರುವನು ?.... ನನ್ನ ಈ ಗಾವಿಲನಾದ ಶ್ರೀ ಸದ್ಗುರುನಾಥನು ಅತ್ಯಂತ ಗಂಭೀರನು; ನನ್ನಂಥ ಪಾಮರನನ್ನೂ ಅಂಗೀಕರಿಸಿ ಆದರಿಸುವಷ್ಟು ಉದಾರನು, ಕರುಣಾಶಾಲಿಯು; ಆತನು ಜಗತ್ತನ್ನೇ ಈಶ್ವರ ಸ್ವರೂಪವಾಗಿ ನೋಡಿ ದಾಸಾನುದಾಸನಾಗಿ ಸೇವಕ ವೃತ್ತಿಯಿಂದ ನಡೆದುಕೊಳ್ಳುವನು; ಬ್ರಾಹ್ಮಣರಿಂದ ಚಂಡಾಲರ ವರೆಗೆ ತಲೆಬಾಗಿ – ತಲೆಬಾಗಿ, ನಮಿಸಿ – ನಮಿಸಿ, ಈಗಿನ ಅಹಂಕಾರಾವೃತ ಜಗತ್ತಿಗೆ ದಾಸಭಾವದ ಸೊಬಗನ್ನು ತೋರಿಸುವವನು."[1]

ಗಳಗನಾಥರು ಇನ್ನೂ ಹತ್ತುವರ್ಷ ನೌಕರಿಯ ಮುದ್ದತ್ತು ಇರುವಾಗಲೇ, ತಮ್ಮ ಸಂಬಳವು ನೂರು ರೂ. ಆಗುವ ಸಾಧ್ಯತೆ ಇದ್ದರೂ, ಸೇವಾ ನಿವೃತ್ತರಾದರೆಂಬುದನ್ನು ಅವರೇ ಹೇಳಿರುವರಷ್ಟೇ. ಆಗ ಇಂಥ ಒಳ್ಳೆಯ ನೌಕರಿಯನ್ನು ಬಿಟ್ಟರೆ, ಮುಂದೆ ಜೀವನ ನಿರ್ವಹಣೆ ಹೇಗೆ ಸಾಗಬೇಕು, ಎಂಬ ಸಮಸ್ಯೆ ಅವರನ್ನು ಬಾಧಿಸಿರಬಹುದು. ಆಗ ಅವರು ಬಹುಶಃ ತಮ್ಮ ಗುರುವಿನ ಮುಂದೆ ಈ ಪ್ರಶ್ನೆ ಇಟ್ಟಿರಬೇಕು. ಗುರುಗಳು ಅವರಿಗೆ ಅಭಯವನ್ನು ಇತ್ತರು. ಈ ಊಹೆಗೆ ಗಳಗನಾಥರ ಮಾತುಗಳೇ ಆಧಾರವಾಗಿವೆ.

"ನನ್ನ ಸದ್ಗುರುನಾಥನು ಒಮ್ಮೆ ನನ್ನನ್ನು ಕುರಿತು ವಾತ್ಸಲ್ಯದಿಂದ 'ಮಹಾರಾಜಾ, ಸ್ವಾಮಿಯ ಸಂಸಾರವು ನಿಮ್ಮ ಸಂಸಾರವು ಅಹುದಷ್ಟೆ' ಎಂದು ಕೈಹಿಡಿದು ಕೇಳಲು, ಕಂಪಿತ ಹೃದಯದಿಂದ 'ಹೌದು' ಎಂದು ನಾನು ಉತ್ತರ ಕೊಟ್ಟೆನು! ಆಗ ಕರುಣಾಘನನಾದ ನನ್ನ ಸದ್ಗುರುನಾಥನು ಆನಂದದಿಂದ 'ಹೋಗಿರಿ ಮಹಾರಾಜಾ! ನಿಮ್ಮ ಸಂಸಾರವನ್ನು ಸ್ವಾಮಿಯು ತಲೆಯಲ್ಲಿ ಹೊತ್ತು ಮಾಡುವನು' ಎಂದು ಹೇಳಿದನು."[2]

ಗಳಗನಾಥರ ಸಮಸ್ಯೆ ನಿವಾರಣೆಯಾಗಿ ಕೆಲಸ ಬಿಡಲು ನಿರ್ಧರಿಸಿದ್ದರು.

ಹೀಗೆ, ಅಗಡಿಯ ಶೇಷಾಚಲ ಸ್ವಾಮಿಗಳು ಗಳಗನಾಥರ ಜೀವನದಲ್ಲಿಯೇ ಪರಿವರ್ತನ ವನ್ನುಂಟು ಮಾಡುವಷ್ಟು ಆಳವಾದ ಪ್ರಭಾವವನ್ನು ಬೀರಿದ್ದರು. ಮುಖ್ಯವಾಗಿ ಭಾವಿಕರಾದ ಗಳಗನಾಥರಿಗೆ ಅವರು ಒಂದು ಆಶ್ರಯಸ್ಥಾನವಾದರು. ಗುರುಗಳು ಗಳಗನಾಥರ ಹೃದಯಕ್ಕೆ ಅನನ್ಯವಾದ ಶಾಂತಿಯನ್ನೂ ನೆಮ್ಮದಿಯನ್ನೂ ತಂದುಕೊಟ್ಟರು. ಗುರುಗಳಿಗಾಗಿ ಗಳಗನಾಥರು ಕಡೆತನಕ ಸಾಲಗಾರರಾಗಿ ಪರಿತಪಿಸಲು ಬಹುಶಃ ಅವರು ಬೇಗನೇ ಸೇವಾನಿವೃತ್ತರಾದುದೂ ಒಂದು ಕಾರಣವೆನ್ನಬಹುದು. ಆದರೆ ಸೇವಾನಿವೃತ್ತಿಯಿಂದಾಗಿಯೇ ಅವರು ತಮ್ಮ ಪ್ರತಿಭೆ-ಯನ್ನೆಲ್ಲ ಧಾರೆಯೆರೆದು ಗ್ರಂಥ ಲೇಖನದಲ್ಲಿ ತೊಡಗಲು ಸಾಧ್ಯವಾಯಿತು. ತಾವು ಬೇಗ ಸೇವಾ ನಿವೃತ್ತರಾದ ಬಗ್ಗೆ ಗಳಗನಾಥರು ಎಲ್ಲಿಯೂ ಪಶ್ಚಾತ್ತಾಪವನ್ನು ವ್ಯಕ್ತಪಡಿಸಿಲ್ಲ. ಅಷ್ಟೇ ಅಲ್ಲ, ತಮಗೆ ದೊರೆತ ಸ್ಥಾನಮಾನಗಳಿಗೆಲ್ಲ ತಮ್ಮ ಗುರುವಿನ ಮಹಿಮೆಯೇ ಕಾರಣವೆಂದು ಮನಃಪೂರ್ವಕವಾಗಿ ಭಾವಿಸಿದರು.

---

1. ಅದೇ.
2. ಅದೇ ಪುಟ 12

"ಆನಂದವನಕ್ಕೆ ಬರುವದಕ್ಕಿಂತ ಮುಂಚೆ ಗಳಗನಾಥರು ಅತ್ಯಮೂಲ್ಯ ರತ್ನವಾಗಿದ್ದರು. ಆ ರತ್ನವನ್ನು ಸಾಣೆ ಹಿಡಿದು ಸರಿಪಡಿಸಿ ಕನ್ನಡಮ್ಮನ ಕುಂದಣದ ಕಿರೀಟದಲ್ಲಿ ಶಿರೋರತ್ನವನ್ನಾಗಿ ಮಾಡಿದ್ದು ಆನಂದವನ. ಗಳಗನಾಥರು ಬಲ್ಲ ಯೋಧರಾಗಿದ್ದರಾದರೂ ಅವರನ್ನು ಶಿಸ್ತಿನ ಸೇನಾಪತಿಯನ್ನಾಗಿ ಮಾಡಿ ತಾಯ್ನಾಡಿನ ಸೇವಾ ಕಾರ್ಯದಲ್ಲಿ ತೊಡಗಿಸಿದವರು ಶ್ರೀ ಶೇಷಾಚಲ ಸದ್ಗುರುಗಳು."[1] ಎಂದು ಆ ಗುರುಪರಂಪರೆಯ ಶ್ರೀ ಚಿದಂಬರಮೂರ್ತಿ ಚಕ್ರವರ್ತಿಗಳು ನುಡಿದಿರುವರು. ಗಳಗನಾಥರೂ ಹಾಗೆಯೇ ಭಾವಿಸಿದ್ದರೆಂಬಲ್ಲಿ ಸಂಶಯವಿಲ್ಲ.

ಸನಾತನ ಮನೆತನದಲ್ಲಿ ಹುಟ್ಟಿ ಬೆಳೆದ ಗಳಗನಾಥರಲ್ಲಿ ದೈವಭಕ್ತಿ, ಹಾಗೂ ಗುರು ಭಕ್ತಿಗಳು ರಕ್ತಗತವಾಗಿ ಬೆಳೆದು ಬಂದಿದ್ದುವು. "ಅಗಡಿಯ ಶೇಷಾಚಲ ಸ್ವಾಮಿಗಳಂತೆ ಸುರೇಶ್ವರ ಶಂಕರ ಭಾರತೀ ಸ್ವಾಮಿಗಳನ್ನು ಗಳಗನಾಥರು ಅತ್ಯಂತ ಭಕ್ತಿಯಿಂದ ಕಂಡರು. ಕೊನೆಯ ವರೆಗೂ ತತ್ಪರತೆಯಿಂದ ಅವರ ಸೇವೆ ಮಾಡಿದರು. ಅವರು ದೇಹವಿಟ್ಟಾಗ ತಮ್ಮ ಮನೆಯ ಅಂಗಳದಲ್ಲಿಯೇ ಅವರ ಸಮಾಧಿಯನ್ನು ಮಾಡಿದರು. ಮುಂದೆ ಒಂದು ದಿನ ಪ್ರಾತಃಕಾಲದಲ್ಲಿ ಅವರಿಗೆ ಸಮಾಧಿಯಲ್ಲಿಂದ ಬೆಳಗುವ ಜ್ಯೋತಿ ಕಂಡಿತಂತೆ. ಆಗ ಅವರು ಸಮಾಧಿಗೆ ನೆರಳು ಇರಬೇಕೆಂದು ಭಾವಿಸಿ ಒಂದು ಗುಡಿಯನ್ನೇ ಕಟ್ಟಿಸಿದರು. ಸ್ವಾಮಿಗಳು ಪರಂಧಾಮವನ್ನೈದಿದಾಗ ತಾವೇ ಸಂನ್ಯಾಸ ಸ್ವೀಕರಿಸಬೇಕೆಂದೂ ಗಳಗನಾಥರು ಬಯಸಿದ್ದರು.

"ಗುರ್ಲಹೊಸೂರ ಚಿದಂಬರ ದೀಕ್ಷಿತರ ಉತ್ಸವಕ್ಕೆ ಗಳಗನಾಥರು ಪ್ರತಿವರ್ಷ ತಪ್ಪದೇ ಹೋಗುತ್ತಿದ್ದರು. ಉತ್ಸವದ ಖರ್ಚಿಗೆ ಏನೇ ಕಡಿಮೆ ಬಿದ್ದರೂ ಗಳಗನಾಥರ ಸಹಾಯ ಇದ್ದೇ ಇರುತ್ತಿತ್ತು. ಲೋಕಾಪುರ ಸ್ವಾಮಿಗಳ ಮೇಲಂತೂ ಗಳಗನಾಥರಿಗೆ ಅತೀವ ಶ್ರದ್ಧೆ. ಲೋಕಾಪುರ ಪೀಠದ ಪ್ರಭಾವವನ್ನು ಬಣ್ಣಿಸುವ 'ಕಲಿಕುಠಾರ' ಎಂಬ ಗ್ರಂಥವನ್ನು ಅವರು ಮೂರು ಭಾಗಗಳಲ್ಲಿ ಬರೆದಿರುವರು.

"ಕೂಡಲಿ ಶೃಂಗೇರಿ ಮಠಕ್ಕೆ ಅವರ ವರ್ಷಾಶನ ಎಂದೂ ತಪ್ಪಲಿಲ್ಲ."[2] 1938ರಲ್ಲಿ ಗಳಗನಾಥರು ಬರೆದ 'ದುರ್ಗದ ಬೆಚ್ಚುಗತ್ತಿ' ಎಂಬ ಐತಿಹಾಸಿಕ ಕಾದಂಬರಿಗೆ ಅವರು 'ಶ್ರೀ ಮುರಗೀಶ ಗುರುಮಹಿಮೆ' ಎಂಬ ಪರ್ಯಾಯನಾಮವನ್ನೇ ಕೊಟ್ಟಿರುವರು. ಗುರುಗಳ ವಿಷಯದಲ್ಲಿ ಅವರು ಜಾತಿ–ಮತ–ಪಂಥಗಳ ಭೇದಭಾವವನ್ನು ಮಾಡಲಿಲ್ಲ. ಶಿವಯೋಗ ಮಂದಿರದ ಕುಮಾರ ಸ್ವಾಮಿಗಳ ಬಗ್ಗೆ ಅವರ ಭಕ್ತಿ ವಿಶ್ವಾಸಗಳು ಸದ್ಬೋಧ ಚಂದ್ರಿಕೆಯ 1912ರ ಮಾರ್ಚ ತಿಂಗಳ ಸಂಚಿಕೆಯಲ್ಲಿ ಪ್ರಕಟವಾಗಿವೆ. ಅನೇಕ ವೀರಶೈವ ಸಾಧು ಸತ್ಪುರುಷರ ಚರಿತ್ರೆಗಳನ್ನು ಅವರು 'ಚಂದ್ರಿಕೆ'ಯಲ್ಲಿ ಪ್ರಕಟಿಸಿರುವರು. ಗುರುವೆಂದರೆ ದೇವರ ಸಮಾನ, ಗುರುವಿನ ಅನುಗ್ರಹದಿಂದಲೇ ಮಾನವನ ಕಲ್ಯಾಣವೆಂದು ಅವರು ನಂಬಿದ್ದರು.

ಒಟ್ಟಿನಲ್ಲಿ ಗಳಗನಾಥರ ಜೀವನದಲ್ಲಿ ಸದ್ಗುರುವಿನ ಪ್ರಭಾವವು ಅಪರಿಮಿತವಾಗಿದೆ. ಇದು ಅವರ ಕಾದಂಬರಿಗಳಲ್ಲಿ ಕೂಡ ಪ್ರಕಟವಾಗಿದೆ. ಅವರ ಪ್ರತಿಯೊಂದು ಕಾದಂಬರಿಯಲ್ಲೂ ಒಬ್ಬನಿಲ್ಲ ಒಬ್ಬ ಸಾಧು–ಸದ್ಗುರು–ಸಂತ ಇದ್ದೇ ಇರುತ್ತಾನೆ. 'ಮಾಧವ

---

1. 'ಸದ್ಬೋಧ ಚಂದ್ರಿಕೆ', ವಿಶೇಷ ಸಂಚಿಕೆ (1969), ಪುಟ 128.
2. ಕೃಷ್ಣಮೂರ್ತಿ ಕಿತ್ತೂರ : 'ಉದಾರ ಚರಿತ ಗಳಗನಾಥರು', ಕರ್ಮವೀರ (5-1-1969)

ಕರುಣಾವಿಲಾಸ'ದಂಥ ಕಾದಂಬರಿಗಳ ಮಾತಿರಲಿ, 'ತಿಲೋತ್ತಮೆ' ಅಥವಾ 'ಸರಸಪ್ರೇಮ' ದಂಥ ಕಾದಂಬರಿಗಳಲ್ಲಿ ಕೂಡ ಗಳಗನಾಥರು ಒಬ್ಬ ಗುರುವನ್ನು, ಅಪ್ರಾಸಂಗಿಕವೆನಿಸಿದರೂ, ತಾತ್ಕಾಲಿಕವಾಗಿ ನಿರ್ಮಿಸಿಬಿಡುತ್ತಾರೆ. ವಿಮರ್ಶಾ ದೃಷ್ಟಿಯಿಂದ ಪರೀಕ್ಷಿಸಿದಾಗ ಇದು ಅನುಚಿತವಾಗಿ, ಅಭಾಸವಾಗಿ ಕಾಣಬಹುದು. ಆದರೂ ಅದು ಗಳಗನಾಥರ ವ್ಯಕ್ತಿತ್ವದ ಮೇಲೆ ಬೆಳಕನ್ನು ಬೀರುತ್ತದೆ.

ಆನಂದವನದ ಶ್ರೀ ಶೇಷಾಚಲ ಸ್ವಾಮಿಗಳ ಪುಣ್ಯಪ್ರಭಾವದಿಂದಲೇ ಗಳಗನಾಥರು **'ಸದ್ಬೋಧ ಚಂದ್ರಿಕೆ'**ಯನ್ನು 1907ರಲ್ಲಿ ಆರಂಭಿಸಿದರು. ಹಳೆಯ 'ಸದ್ಬೋಧ ಚಂದ್ರಿಕೆ'ಯ ಮೇಲೆ ಸಂಪಾದಕರೆಂದು ಗಳಗನಾಥರ ಹೆಸರು ಕಂಡುಬರುವುದಿಲ್ಲವಾದರೂ, ಅವರೇ 'ಚಂದ್ರಿಕೆ'ಯ ಜೀವನಾಡಿಯಾಗಿದ್ದರು. ಆಗ ಅವರಿನ್ನೂ ಸರಕಾರೀ ನೌಕರರಾಗಿರುವುದರಿಂದ ತಾಂತ್ರಿಕ ಅಡಚಣೆಯಿಂದಾಗಿ ತಮ್ಮ ಹೆಸರನ್ನು ಬಹುಶಃ ಅಲ್ಲಿ ಕಾಣಿಸಿರಲಿಕ್ಕಿಲ್ಲ. ಅವರು ಸೇವಾನಿವೃತ್ತರಾದ ಮೇಲೂ ಹಳೆಯ ಪದ್ಧತಿಯೇ ಮುಂದುವರೆದು, ಶ್ರೀ ಯಲ್ಲೊ ಗುಡ್ಡೋ ಕುಲಕರ್ಣಿ ಅವರ ಹೆಸರೇ ಸಂಪಾದಕರ ಸ್ಥಾನದಲ್ಲಿ ಉಳಿಯಿತು.

'ಸದ್ಬೋಧ ಚಂದ್ರಿಕೆ'ಯನ್ನು ಅವರು ಮೊದಲು ಅಗಡಿಯ ಆಶ್ರಮದ ಮುಖ ಪತ್ರಿಕೆಯೆಂದು ಆರಂಭಿಸಿದರು. ಅದರಲ್ಲಿ ಮೊದಲು ಧಾರ್ಮಿಕ ಲೇಖಗಳೇ ಹೆಚ್ಚಾಗಿ ಪ್ರಕಟ-ವಾಗುತ್ತಿದ್ದುವು. ಅಷ್ಟೇ ಅಲ್ಲ ಅಗಡಿಯ ಆಶ್ರಮದ ಸುದ್ದಿಸಮಾಚಾರಗಳಿಗೂ ಅದರಲ್ಲಿ ಸ್ಥಳವಿರುತ್ತಿತ್ತು. ಆಯಾ ತಿಂಗಳಿನಲ್ಲಿ ಆಶ್ರಮದಲ್ಲಿ ನಡೆದ ಸಮಾರಂಭಗಳ ವಿವರ, ಶೇಷಾಚಲ ಗುರುಗಳ ಬೋಧನೆ, ಗುರುಕುಲದಲ್ಲಿಯ ವೇದಕಲಿಯುವ ವಿದ್ಯಾರ್ಥಿಗಳ ಸಂಖ್ಯೆ ಮತ್ತು ಅವರ ಪ್ರಗತಿ, ಗುರುಗಳ ವಿಚಾರಗಳು, ಉತ್ಸವಕ್ಕಾಗಿ ವರ್ಗಣಿಯನ್ನು ಎತ್ತಲು ಯಾರು ಯಾರು ಯಾವ ಯಾವ ಕಡೆಗೆ ಹೋಗಿರುವರೆಂಬ ವಿಷಯ, ಜನ ಉತ್ಸವಕ್ಕೆ ತನುಮನ ಧನದಿಂದ ಸಹಾಯ ಮಾಡಬೇಕೆಂಬ ಮನವಿ—ಇತ್ಯಾದಿಗಳನ್ನು ಪತ್ರಿಕೆಯಲ್ಲಿ ಕಾಣಬಹುದು. 'ಚಂದ್ರಿಕೆ'ಯಲ್ಲಿ ಪ್ರಕಟವಾದ ಲೇಖನಗಳ ಬಗ್ಗೆ ವಾಚಕರಿಂದ ಬಂದ ಪತ್ರಗಳೂ ಪತ್ರಿಕೆಯಲ್ಲಿ ಅಚ್ಚಾಗುತ್ತಿದ್ದವು.

ಮೊದಲು 'ಸದ್ಬೋಧ ಚಂದ್ರಿಕೆ' ಹುಬ್ಬಳ್ಳಿಯ ಶ್ರೀ ಕೃಷ್ಣ ಪ್ರೆಸ್ಸಿನಲ್ಲಿ ಅಚ್ಚಾಗು-ತ್ತಿತ್ತು. ಆದರೆ ಕಾಲಾಂತರದಲ್ಲಿ ಗಳಗನಾಥರ ಪ್ರಯತ್ನದಿಂದ ಆಶ್ರಮದಲ್ಲಿಯೇ ಒಂದು ಪ್ರೆಸ್ಸನ್ನು ಹಾಕಲಾಯಿತು. ಪ್ರೆಸ್ಸಿನ ಕೆಲಸಕ್ಕಾಗಿ ಶ್ರೀ ಭೀ. ಪ. ಕಾಳೆ ಅವರನ್ನು ಗಳಗನಾಥರು ಕರೆ ತಂದರು. ಅವರು ಗಳಗನಾಥರ ಬಲಗೈ ಆಗಿ ದುಡಿದರು. ಗಳಗನಾಥರ ಗರಡಿಯಲ್ಲಿ ದುಡಿದು ತಯಾರಾದ ಶ್ರೀ ಯ. ಗೋ. ಕುಲಕರ್ಣಿ ಅವರೂ ಲೇಖನಗಳನ್ನೂ, ಗ್ರಂಥಗಳನ್ನೂ ಬರೆಯತೊಡಗಿದರು. ಶ್ರೀ ಕಾಳೆಯವರಂತೂ ಹಲವಾರು ಪತ್ತೇದಾರಿ ಕಾದಂಬರಿಗಳನ್ನೂ ಕೂಡ ಬರೆದು ಖ್ಯಾತರಾದರು.

ಆಶ್ರಮದಲ್ಲಿ ನಡೆಯುತ್ತಿದ್ದ ಅತಿಥಿಸೇವೆಯ ಜೊತೆಗೆ ಗಳಗನಾಥರು ಸಂಸ್ಕೃತ ವೇದ ಪಾಠಶಾಲೆಯನ್ನು ಪ್ರಾರಂಭಿಸಿದ್ದರು. ಅದರ ಖರ್ಚನ್ನು ತಾವೇ ವಹಿಸಿಕೊಂಡರು. ಅವರು ಆರಂಭಿಸಿದ ಪಾಠಶಾಲೆ ಮತ್ತು ಪತ್ರಿಕೆಗಳ ಜೊತೆಗೆ ಪ್ರೆಸ್ಸಿನಂಥ ಲೌಕಿಕ ವ್ಯಾವಹಾರಿಕ ಕಾರ್ಯವನ್ನೂ ಕೈಕೊಂಡುದು ಒಂದು ರೀತಿ ಅವ್ಯಾವಹಾರಿಕವೆಂದು ಕಾಣ-ಬಹುದು. ಆದರೆ ಪಾಠಶಾಲೆ ಮೊದಲಾದವುಗಳ ಖರ್ಚಿನ ಬಹುಭಾಗವು ಪ್ರೆಸ್ಸು ಮತ್ತು

ಮಾಸಪತ್ರಿಕೆಗಳ ಆದಾಯದಿಂದಲೇ ತುಂಬುತ್ತಿತ್ತು.[1] ಗಳಗನಾಥರು ಚಂದ್ರಿಕೆಯ ದ್ವಾರಾ ಬಂದ ಹಣವನ್ನೆಲ್ಲ ಪಾಠಶಾಲೆಗೆ ಖರ್ಚು ಮಾಡುತ್ತಿದ್ದರು. ಅಷ್ಟೇ ಅಲ್ಲ, ಕಡಿಮೆ ಬಿದ್ದಾಗ ಸಾಲವನ್ನೂ ಮಾಡಬೇಕಾಯಿತು. ಇದನ್ನು ನೆನೆಯುತ್ತ ಶ್ರೀ ಚಿದಂಬರಮೂರ್ತಿ ಚಕ್ರವರ್ತಿ ಅವರು "ಗಳಗನಾಥರ ಸಾಂಸ್ಕೃತಿಕ ಚಟುವಟಿಕೆಯೆಂದರೆ ವೇದ ಮಹಾಪಾಠಶಾಲೆ. ಆನಂದವನದಲ್ಲಿ ಚತುರ್ವೇದಿಗಳಿಗೂ ಹಾಗೂ ಸಂಸ್ಕೃತ, ಜ್ಯೋತಿಷ್ಯ ಕಲಿಯುವವರಿಗೂ ಸುಮಾರು ಹತ್ತು ಹನ್ನೆರಡು ವರ್ಷಗಳ ಕಾಲ ಅನುಕೂಲ ಮಾಡಿಕೊಟ್ಟರು. ಚಂದ್ರಿಕೆಯ ವ್ಯವಸಾಯದಿಂದ, ಅವರ ಸಾಹಿತ್ಯ ಸೃಷ್ಟಿಯಿಂದ ಬಂದ ಹಣವನ್ನೇ ಪೂರ್ಣವಾಗಿ ಇದಕ್ಕೆ ಸದ್ಗುರುವಿನ ನೆರವಿನಿಂದ ಧಾರೆ ಎರೆದಿದ್ದಾರೆ. ತಾವು ಗಳಿಸಿದ ಹಣವನ್ನು ಬಚ್ಚಿಡುವ ಸ್ವಭಾವ ಕಲಿತಿದ್ದರೆ ಗಳಗನಾಥರು ಲಕ್ಷಾಧೀಶರಾಗುತ್ತಿದ್ದರು. ಆದರೆ ಅವರು ಹಾಗೆ ಮಾಡದೆ ವೇದ ಮಹಾ ಪಾಠಶಾಲೆಗೆ ತಮ್ಮದೆಲ್ಲವನ್ನು ನೀರಿನಂತೆ ಖರ್ಚುಮಾಡಿದರು. ಕಡಿಮೆ ಬಿದ್ದಾಗ ಹಾವೇರಿಯಲ್ಲಿ ಸಾಲ ಮಾಡಿ ತಾವು ಬರೆದ ಪುಸ್ತಕಗಳ ಗಂಟನ್ನು ತಲೆ ಮೇಲೆ ಹೊತ್ತು ಅಲೆದಲೆದು ಕಷ್ಟ ಪಡಬೇಕಾಯಿತು" ಎಂದು ಪ್ರಾಂಜಲವಾಗಿ ನುಡಿದಿರುವರು.[2]

'ಸದ್ಬೋಧ ಚಂದ್ರಿಕೆ' ಆರಂಭವಾಗಿ ಎರಡು–ಮೂರು ವರ್ಷಗಳು ಕಳೆದರೂ ಚಂದಾದಾರರ ಸಂಖ್ಯೆ ಒಂದು ಸಾವಿರಕ್ಕೂ ನಿಲುಕಲಿಲ್ಲ. ಆಗ ಗಳಗನಾಥರು ಸ್ವತಃ ಊರೂರು ಅಲೆದು ಚಂದಾದಾರರನ್ನು ಮಾಡತೊಡಗಿದರು. ಅಲ್ಲದೆ ಅವರು ಪತ್ರಿಕೆಯಲ್ಲಿ ಉತ್ತಮವಾದ ಕೆಲವು ಕಾದಂಬರಿಗಳನ್ನು ಧಾರಾವಾಹಿಯಾಗಿ ಪ್ರಕಟಿಸತೊಡಗಿದರು. ಕನ್ನಡ ಪಠ್ಯ-ಪುಸ್ತಕ–ಸಮಿತಿಯ ಕೆಲಸಕ್ಕಾಗಿ ಅವರು ಪುಣೆಯಲ್ಲಿ ವಾಸ ಮಾಡಿದ ಕಾಲಕ್ಕೆ ಅನೇಕ ಮರಾಠಿ ಕಾದಂಬರಿಗಳನ್ನು ಓದಿ ಮೆಚ್ಚಿದ್ದರು. ಅವುಗಳಲ್ಲಿ ಆ ಕಾಲದ ಸುಪ್ರಸಿದ್ಧ ಕಾದಂಬರಿಕಾರರಾದ ಶ್ರೀ ಹರಿ ನಾರಾಯಣ ಆಪಟೆ ಅವರ ಕಾದಂಬರಿಗಳನ್ನು ಅವರು ಭಾಷಾಂತರಿಸಿದರು. ಶ್ರೀ ಆಪಟೆ ಅವರ 'ಗಡ ಆಲಾ ಪಣ ಸಿಂಹ ಗೇಲಾ' ಎಂಬ ಕಾದಂಬರಿಯನ್ನು 'ಕಮಲ ಕುಮಾರಿ' ಎಂಬ ಹೆಸರಿನಿಂದ ಭಾಷಾಂತರಿಸಿ, ಅದನ್ನು ಧಾರಾವಾಹಿಯಾಗಿ 'ಸದ್ಬೋಧ ಚಂದ್ರಿಕೆ'ಯಲ್ಲಿ ಪ್ರಕಟಿಸತೊಡಗಿದರು. ಹೀಗೆ 2 ವರ್ಷಗಳ ವರೆಗೆ ಭಾಗಶಃ ಪ್ರಕಟವಾದ ಕಾದಂಬರಿಯು ಮುಂದೆ 1910ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಯಿತು.

ಇಂಥ ಕಾದಂಬರಿಯು 'ಸದ್ಬೋಧ ಚಂದ್ರಿಕೆ'ಯಂಥ ಧಾರ್ಮಿಕ ಉದ್ದೇಶವುಳ್ಳ ಪತ್ರಿಕೆಯಲ್ಲಿ ಪ್ರಕಟವಾಗುತ್ತಿರುವುದರ ಔಚಿತ್ಯವನ್ನು ಕುರಿತು ಕೆಲವರು ಬಹುಶಃ ಗಳಗನಾಥರನ್ನು ಆಕ್ಷೇಪಿಸಿರಬಹುದು. ಅದಕ್ಕೆ ಅವರು ಕಾದಂಬರಿಯ ಮುನ್ನುಡಿಯಲ್ಲಿ "ಧಾರ್ಮಿಕ ಲೇಖನ

---

1. "ಆಕೆಯು (ಸದ್ಬೋಧ ಚಂದ್ರಿಕೆ) ವಿದ್ಯಾಪಕ್ಷಪಾತಿ ಧರ್ಮತತ್ಪರಳು. ಶ್ರೀ ಶೇಷಾಚಲ ವೇದ ಮತ್ತು ಸಂಸ್ಕೃತ ಪಾಠಶಾಲೆಯ ಅಧ್ಯಾಪಕರ ವೇತನವನ್ನು ನಡೆಸುತ್ತಿರುವದಲ್ಲದೆ, ಮುಖ್ಯವಾಗಿ ಬ್ರಹ್ಮಚಾರಿಗಳ ಅನ್ನವಸ್ತ್ರಗಳ ವೆಚ್ಚವನ್ನೂ ತಾನೇ ಸಾಗಿಸಬೇಕೆಂದು ಹೆಣಗುತ್ತಿದ್ದಾಳೆ. ಈಗ ಸದ್ಯಕ್ಕೆ 14ಜನ ಬ್ರಹ್ಮಚಾರಿಗಳು ನೈಷ್ಠಿಕ ಬ್ರಹ್ಮಚರ್ಯದಿಂದಿದ್ದು ವೇದಾದಿ ಧಾರ್ಮಿಕ ಶಿಕ್ಷಣವನ್ನು ಹೊಂದುತ್ತಿರುವರು. ಇವರಲ್ಲದೆ 16 ಜನ ವಿದ್ಯಾರ್ಥಿಗಳೂ ಕಾವ್ಯಾದಿಗಳನ್ನು ಕಲಿಯುತ್ತಿರುವರು. ಇವರ ಯೋಗಕ್ಷೇಮಾದಿಗಳ ಸಲುವಾಗಿ ಈ ವರ್ಷ ಸಾವಿರಾರು ರೂಪಾಯಿಗಳು ವೆಚ್ಚವಾಗಿರುವವು" ಹೀಗೆ ಗಳಗನಾಥರು, 'ಸದ್ಬೋಧ ಚಂದ್ರಿಕೆ'ಯ 5ನೆಯ ವರ್ಷದ ಸಿಂಹಾವಲೋಕನದಲ್ಲಿ ಬರೆದಿರುವರು.

2. ಸದ್ಬೋಧ ಚಂದ್ರಿಕೆ, 63– 1,2, ಪುಟ 131–132

ಗಳಿಗೆ ತುಂಬಾ ಆಶ್ರಯ ಕೊಡುತ್ತಿರುವ ಸದ್ಬೋಧ ಚಂದ್ರಿಕೆಯಲ್ಲಿ 'ಕಮಲ ಕುಮಾರಿ'ಯು ಪ್ರಸಿದ್ಧವಾದದ್ದಕ್ಕಾಗಿ ನನಗೆ ಬಹಳ ಸಮಾಧಾನವಾಗಿದೆ. ಯಾಕೆಂದರೆ ಇದರಲ್ಲಿ ಕಮಲ ಕುಮಾರಿಯಂಥ ಧರ್ಮಿಷ್ಠ ಸಾಧ್ವಿಯ ಹಾಗೂ ತಾನಾಜಿಯಂಥ ಧರ್ಮನಿಷ್ಠ ಹಾಗೂ ರಾಜನಿಷ್ಠ ವೀರನ ಪವಿತ್ರವಾದ ವರ್ಣನೆಗಳಿವೆ. ಅವುಗಳನ್ನು ಪ್ರಕಟಿಸಲು ಇದಕ್ಕಿಂತ ಪವಿತ್ರವಾದ ಸ್ಥಳವು ದೊರೆಯುವುದು ದುರ್ಲಭ" ಎಂದು ಉತ್ತರಿಸಿ ತಮ್ಮ ಉದ್ದೇಶವನ್ನು ಸಮರ್ಥಿಸಿ-ಕೊಂಡರು. ಅದೇನೇ ಇದ್ದರೂ ಈ ಕಾದಂಬರಿಯ ಪ್ರಕಟನೆಯು ಗಳಗನಾಥರ ಜನ-ಪ್ರಿಯತೆಗೆ ಕಾರಣವಾಯಿತೆಂಬಲ್ಲಿ ಸಂದೇಹವಿಲ್ಲ. ಅವರ ಗುರುಗಳಾದ ಶೇಷಾಚಲರು ಗಳಗನಾಥರಿಗೆ "ಮಹಾರಾಜ, ನಿಮ್ಮ ಲೇಖಣಿಗೆ ನಿಶಾನೆ ಹತ್ತುವದು" ಎಂದಿದ್ದರಂತೆ. ಆ ಮಾತು ಅಕ್ಷರಶಃ ನಿಜವಾಯಿತು. ಮುಂದೆ ಗಳಗನಾಥರು 'ಕಮಲ ಕುಮಾರಿ'ಯಂಥ ಅನೇಕ ಸರಸ ಐತಿಹಾಸಿಕ ಕಾದಂಬರಿಗಳನ್ನು, ಇತರ ಧಾರ್ಮಿಕ ಲೇಖನ ಹಾಗೂ ಚರಿತ್ರೆಗಳ ಜೊತೆಗೇ 'ಸದ್ಬೋಧ ಚಂದ್ರಿಕೆ'ಯಲ್ಲಿ ಪ್ರಕಟಿಸತೊಡಗಿದರು.

'ಸದ್ಬೋಧ ಚಂದ್ರಿಕೆ'ಯಲ್ಲಿ ಯೋಗಾಭ್ಯಾಸ, ನೈತಿಕ ಕಥಾಮಾಲೆ, ಗರಗದ ಮಡಿ-ವಾಳಪ್ಪನವರು, ವೀರಶೈವ ಮಹಾಸಭೆಯ ರಿಪೋರ್ಟ್, ಗಲಗಲಿಯ ನರಸಿಂಹಾಚಾರ್ಯರು, ದೇವರು ಎಲ್ಲಿ ?, ಸತ್ಪುರುಷ ಮಂಡಲ, ಶ್ರೀನಾಮದೇವ, ಶ್ರೀ ಕಬೀರ, ಚಿದಂಬರ ಚರಿತ್ರೆ ಶ್ರೀ ಜ್ಞಾನದೇವ, ಭಕ್ತಿವಿಜಯ, ಕುಟುಂಬ, ದಾಂಪತ್ಯ ಮೊದಲಾದಂಥ ಲೇಖನಗಳು ಪ್ರಕಟ ವಾಗುತ್ತಿದ್ದವು. ಇವುಗಳಲ್ಲಿ ಕೆಲವು ಲೇಖನಗಳನ್ನು ಸ್ವತಃ ಗಳಗನಾಥರು ಬರೆದರೆ, ಹಲವು ಬೇರೆಯವರಿಂದ ಬರೆಯಲ್ಪಟ್ಟವುಗಳು. ಅನೇಕ ಸಲ ಗಳಗನಾಥರು ಜನರಿಂದ ಲೇಖನ ಗಳನ್ನು ಆಮಂತ್ರಿಸುತ್ತಿದ್ದರು. ಲೇಖನಗಳನ್ನು ಹೇಗೆ ಬರೆಯಬೇಕು, ಯಾವ ಯಾವ ವಿಷಯಗಳನ್ನು ಒಳಗೊಂಡಿರಬೇಕು– ಈ ಮೊದಲಾದವುಗಳ ಬಗ್ಗೆ ಸೂಚನೆಗಳನ್ನೂ 'ಸದ್ಬೋಧ ಚಂದ್ರಿಕೆ'ಯಲ್ಲಿ ಪ್ರಕಟಿಸುತ್ತಿದ್ದರು. ಚಂದ್ರಿಕೆಯಲ್ಲಿ 'ಸತ್ಪುರುಷ ಮಂಡಲ'ವನ್ನು ಪ್ರಕಟಿಸಬಯಸಿದ ಗಳಗನಾಥರು ಒಮ್ಮೆ ಸಂಪಾದಕೀಯದಲ್ಲಿ ಹೀಗೆ ಬರೆದರು:

"ಕರ್ನಾಟಕದಲ್ಲಿ ಜಾತಿ ಧರ್ಮಗಳ ತಾರತಮ್ಯವಿಲ್ಲದೆ ಅಸಂಖ್ಯ ಸತ್ಪುರುಷರ ಉದಯವು ಆಗಿರುತ್ತದೆಂಬುದನ್ನು ನಿರ್ಮಾತ್ಸರ್ಯದ ಸುವಿಚಾರಿಗಳು ಒಪ್ಪಿಕೊಳ್ಳಬಹುದು. ಅವರೆಲ್ಲರ ಚರಿತ್ರೆಗಳ ಸಂಗ್ರಹವಾದರೆ, ಕನ್ನಡಿಗರ ಕೋಟಿ ಕಲ್ಯಾಣವಾಗುವದರಲ್ಲಿ ಸಂಶಯವಿಲ್ಲ. ನಮ್ಮ ಕನ್ನಡಿಗರ ಸ್ವಭಾವಗುಣವಾದ ಔದಾಸೀನ್ಯದ ಮೂಲಕ ಮಂದಸ್ಮೃತಿ ಪಥವನ್ನು ಹೊಂದು ತ್ತಿರುವ ಸತ್ಪುರುಷರ ಚರಿತ್ರೆಗಳನ್ನಷ್ಟೇ ಒಟ್ಟುಗೂಡಿಸಿದರೂ ಬೇಕಾದಷ್ಟು ಕೆಲಸವಾಗುವುದು. ನಮ್ಮ ಚಂದ್ರಿಕೆಯ ವಾಚಕರು ತಮಗೆ ಗೊತ್ತಿದ್ದ ಸತ್ಪುರುಷರ ಚರಿತ್ರೆಗಳನ್ನು ಚಿಕಿತ್ಸಕ ಬುದ್ಧಿಯಿಂದ ಒಟ್ಟುಗೂಡಿಸಿ ಸುಸಂಗತವಾಗಿಯೂ, ಆದಷ್ಟು ವಿಸ್ತಾರವಾಗಿಯೂ ಬರೆದು ಕಳಿಸಿದರೆ, ಸತ್ಪುರುಷರ ಜಾತಿ, ಧರ್ಮ ಮುಂತಾದವುಗಳ ಕಡೆಗೆ ಲಕ್ಷಗೊಡದೆ, ಅತ್ಯಂತ ಪೂಜ್ಯ ಬುದ್ಧಿಯಿಂದ ಕರ್ನಾಟಕ ಸತ್ಪುರುಷ ಮಂಡಲವೆಂಬ ಮಂಡನವನ್ನು ಧರಿಸಲು ಚಂದ್ರಿಕೆಯು ಆತುರ ಪಡುತ್ತಿರುವಳು. ನಾಳಿನ ಶ್ರಾವಣದ ಅಂಕಕ್ಕೆ ಒಂದು ಸತ್ಪುರುಷ ಚರಿತ್ರವು ಬೇಕಾಗಿ ರುತ್ತದೆ. ಇದು ಒಬ್ಬ ಮನುಷ್ಯನು, ಒಂದು ಧರ್ಮದವನು, ಒಂದು ಜಾತಿಯವನು, ಒಂದು ಪಂಥದವನು ಮಾಡತಕ್ಕ ಕೆಲಸವಲ್ಲ. ಕನ್ನಡ ನಾಡಿನ ಎಲ್ಲ ಜನರು, ಎಲ್ಲ ಧರ್ಮದವರು, ಎಲ್ಲ ಜಾತಿಯವರು, ಎಲ್ಲ ಪಂಥದವರು ಮಾಡತಕ್ಕದ್ದು. ಈ ಸತ್ಕೃತ್ಯಕ್ಕಾಗಿ ಎಲ್ಲ

ಕನ್ನಡಿಗರು ಆತುರಪಡತಕ್ಕದ್ದು. 'ನಮ್ಮ ಲೇಖನಗಳಿಗೆ ಚಂದ್ರಿಕೆಯಲ್ಲಿ ಸ್ಥಳ ದೊರೆಯು ವದಿಲ್ಲೆಂದು ಅಸಮಾಧಾನ ಪಡುವ ಲೇಖಕರು ಸತ್ಪುರುಷರ ಚರಿತ್ರೆಗಳನ್ನು ವಿಚಾರ ಪೂರ್ವಕವಾಗಿ ಬರೆದು ಕಳಿಸಿದರೆ, ಅವಕ್ಕೆ ಚಂದ್ರಿಕೆಯು ಕೃತಜ್ಞತೆಯಿಂದ ಸ್ಥಳ ಕೊಡುವಳು. ಸತ್ಪುರುಷರ ಚರಿತ್ರೆಗಳನ್ನು ಕಳಿಸಲಿಚ್ಚಿಸುವವರು ಕೆಳಗಿನ ಸಂಗತಿಗಳ ಬಗ್ಗೆ ಅವಶ್ಯವಾಗಿ ವಿವೇಚಿಸಬೇಕು" ಎಂದು ಹೇಳಿ, ಸತ್ಪುರುಷರ 1) ಪೂರ್ವವೃತ್ತ 2) ಉದಯ 3) ಆವಿ-ರ್ಭಾವ 4) ಆಯುಃಕ್ರಮ 5) ನಿರ್ಯಾಣ 6) ಅವಶೇಷಗಳು 7) ಉಪಸಂಹಾರ–ಹೀಗೆ ಬರೆಯಬೇಕಾದ ಮಹತ್ತ್ವದ ಕೇಂದ್ರಗಳನ್ನು ಸೂಚಿಸಿ "ಇವುಗಳ ಹೊರತು ಬೇರೆ ಸಂಗತಿಗಳು ಗೊತ್ತಾದರೆ ಅವಶ್ಯವಾಗಿ ಬರೆಯಬೇಕು. ಒಟ್ಟಿಗೆ ಈ ಕೆಲಸವು ಬಹು ಮಹತ್ತ್ವದ್ದೂ, ಮಹತ್ಪುಣ್ಯಕರವಾದದ್ದೂ, ಅಖಂಡ ಕಲ್ಯಾಣಕರಪ್ರದವಾದದ್ದೂ ಇರುವದರಿಂದ ಭಾವಿ-ಕರೂ, ಜಿಜ್ಞಾಸುಗಳೂ, ಇತಿಹಾಸಾಭಿಮಾನಿಗಳೂ ಆದ ಕನ್ನಡಿಗರು ಈ ವಿಷಯವಾಗಿ ಮನಮುಟ್ಟಿ ನಿರಾಲಸ್ಯದಿಂದ ಯತ್ನಿಸಬೇಕೆಂದು ಪ್ರಾರ್ಥಿಸುವೆವು" ಎಂದು ಬಿನ್ನವಿಸಿ "ನಿಜಗುಣಶಿವಯೋಗಿಗಳು, ಪುರಂದರದಾಸರು, ಕನಕದಾಸರು, ಫಕೀರಸ್ವಾಮಿಗಳು, ಗರಗದ ಮಡಿವಾಳಪ್ಪನವರು, ಕಳಸದ ಗೋವಿಂದಭಟ್ಟರು, ಮುಳುಗುಂದದ ಮಹಾಂತಸ್ವಾಮಿಗಳು, ನಾಗಲಿಂಗಪ್ಪನವರು, ಮುಳಗುಂದದ ದಾವಲಮಲಿಕರು, ಶಿಸುನಾಳ ಶರೀಫ ಸಾಹೇಬರು" ಇತ್ಯಾದಿ ಸತ್ಪುರುಷರ ಹೆಸರುಗಳನ್ನು ಸೂಚಿಸಿರುವರು.

ಗಳಗನಾಥರು ಸೂಚಿಸಿದವರಲ್ಲಿ ಹಲವರ ಚರಿತ್ರೆಗಳು ಮುಂದೆ ಚಂದ್ರಿಕೆಯಲ್ಲಿ ಪ್ರಕಟ-ವಾದುವು. ಹೀಗೆ ಗಳಗನಾಥರು ಉಳಿದವರಿಂದ ಲೇಖನಗಳನ್ನು ಬರೆಸುತ್ತಿದ್ದರೆಂಬುದನ್ನು ನೋಡಬಹುದು. ಅಂತೂ ಗಳಗನಾಥರು ಚಂದ್ರಿಕೆಯ ದ್ವಾರಾ ಹಲವಾರು ಲೇಖಕರ ಉದಯಕ್ಕೆ ಪ್ರತ್ಯಕ್ಷವಾಗಿಯೂ, ಅಪ್ರತ್ಯಕ್ಷವಾಗಿಯೂ ಪ್ರೇರಕಶಕ್ತಿಯಾಗಿದ್ದರೆಂಬುದು ಗಮನಿಸ ಬೇಕಾದ ಅಂಶ. ಚಂದ್ರಿಕೆಯಲ್ಲಿ ಗಳಗನಾಥರಲ್ಲದೆ ಶ್ರೀಯುತರುಗಳಾದ ವಲ್ಲಭರಾವ ತಟ್ಟಿ, ರಾ. ತ್ರ್ಯಂ. ಕರ್ಪೂರ, ಭೀ. ಗು. ಗೋಠೆ, ಬಿ. ಬಿ. ಬೂದಿಹಾಳ, ವೇ. ನ. ತಲವಾಯಿ, ಬಸವಣ್ಣೆಸ್ವಾಮಿ ಮೊದಲಾದವರ ಲೇಖನಗಳು ಆಗಾಗ ಪ್ರಕಟವಾಗುತ್ತಿದ್ದುವು.

ಕ್ರಿ. ಶ. 1909ರಲ್ಲಿ 'ಸದ್ಬೋಧ ಚಂದ್ರಿಕೆ'ಗೆ 800ಜನ ಮಾತ್ರ ಚಂದಾದಾರರಿದ್ದರು. ಮುಂದೆ ಕೆಲ ವರ್ಷಗಳಲ್ಲಿ ಗಳಗನಾಥರ ಕಾದಂಬರಿಗಳು ಪ್ರಕಟವಾಗುತ್ತಿರುವಂತೆ ಚಂದಾದಾರರ ಸಂಖ್ಯೆ ಬೆಳೆಯುತ್ತ ನಡೆಯಿತು.

'ಸದ್ಬೋಧ ಚಂದ್ರಿಕೆ'ಯ ಐದನೆಯ ವರ್ಷದ ಸಿಂಹಾವಲೋಕನವನ್ನು ಬರೆಯುತ್ತ ಗಳಗನಾಥರು ಚಂದ್ರಿಕೆಯ ಆಗಿನ ಸ್ಥಿತಿಗತಿಯ ಚಿತ್ರವನ್ನು ಅತ್ಯಂತ ಸುಂದರವಾಗಿ ಹೃದ್ಯವಾಗಿ ವಾಚಕರಿಗೆ ನಿವೇದಿಸಿರುವರು. ಆ ಸಿಂಹಾವಲೋಕನದ ಕೆಲವು ಅವತರಣಿಕೆಗಳನ್ನು ನೋಡಬಹುದು.

"........ಈ ವರ್ಷದ ಹತ್ತೇ ತಿಂಗಳಲ್ಲಿ 2500ಜನ ಹೊಸ ಚಂದಾದಾರರು ಕೂಡಿ ಒಟ್ಟು 4000 ಚಂದಾದಾರರು ಆದ ಸಂಗತಿಯನ್ನು ನೋಡಿದವರಿಗೂ, ಓದಿದವರಿಗೂ, ಕೇಳಿದವರಿಗೂ ಆಶ್ಚರ್ಯವಾಗಿ, ಅವರು ಕನ್ನಡಿಗರ ವಾಚನಾಭಿರುಚಿಯ ವೃದ್ಧಿಯ ಈ ಸುಲಕ್ಷಣಕ್ಕಾಗಿ, ಸಂತೋಷಪಡದೆ ಇರಲಾರರು.

"ಪ್ರಿಯ ವಾಚಕರೇ, ಇನ್ನು ನಮ್ಮ ಚಪಲೆಯಾದ ಚಂದ್ರಿಕೆಯ ಚಟುವಟಿಕೆಯನ್ನು ಕೇಳಿರಿ. ಆಕೆಯು ಮುಂಬಯಿ ಇಲಾಖೆಯ, ಮದ್ರಾಸ ಇಲಾಖೆಯ, ಮೈಸೂರ ಪ್ರಾಂತ-ನಿಜಾಮ ಪ್ರಾಂತ-ಕೊಡುಗು ಪ್ರಾಂತಗಳೊಳಗಿನ ಕನ್ನಡ ನಾಡಿನಲ್ಲಿ ತನ್ನ ಪೈಜಣಗಳ ಸುನಾದ-ದಿಂದ ಜನರ ಚಿತ್ತವನ್ನು ರಂಜಿಸುತ್ತ ಪ್ರವೇಶಿಸಿರುವಳು! ಆಕೆಯ ಪ್ರಸಾರವು ಇಪ್ಪತ್ತೇಳು ಜಿಲ್ಲೆಗಳಲ್ಲಿ 160 ಸಬ್‌ಪೋಸ್ಟುಗಳಲ್ಲಿ, 1200 ಊರುಗಳಲ್ಲಿ ಆಗಿರುತ್ತದೆ. 4000 ಜನ ಚಂದಾದಾರರಲ್ಲಿ ಸರಾಸರಿ 3875ಜನ ಗಂಡಸರೂ 125ಜನ ಹೆಣ್ಣುಮಕ್ಕಳೂ ಇರುವರು. ಈ ಒಟ್ಟು ಜನರಲ್ಲಿ ಸರಾಸರಿ 2200ಜನ ಬ್ರಾಹ್ಮಣರು, 1200ಜನ ವೀರಶೈವರು, 525ಜನ ಇತರ ಹಿಂದುಗಳು, 50ಜನ ಮುಸಲ್ಮಾನರು, 25ಜನ ಕ್ರಿಶ್ಚಿಯನ್ನರು ಇದ್ದಾರೆ. ನೌಕರರು 1700ಜನರಿದ್ದರೆ, ಸುಖವಸ್ತುಗಳು 2300ಜನರು ಇರುವರು.

ಮುಂದಿನ ವರ್ಷ ವಾಚಕರು ಹೊಸ ಚಂದಾದಾರರನ್ನು ಭರದಿಂದ ಕೂಡಿಸಿ 6000 ಪ್ರತಿಗಳನ್ನು ಬೇಗನೇ ತೀರಿಸಿಬಿಟ್ಟು, ಚಂದ್ರಿಕೆಯ ಚಟುವಟಿಕೆಗೆ ಉತ್ತೇಜನ ಕೊಡಬಹು-ದೆಂದು ನಾವು ಭಾವಿಸಿದ್ದೇವೆ.... ಚಂದ್ರಿಕೆಯು ಹ್ಯಾಗಿದ್ದರೂ ಮನೆಯ ಮಗಳಾದ್ದರಿಂದ ಪ್ರೀತಿಯಿಂದ ಆಕೆಯ ಲಾಲನೆ-ಪಾಲನೆಗಳನ್ನು ಮಾಡಿ, ಆಕೆಯನ್ನು ದೊಡ್ಡಾಕೆಯನ್ನಾಗಿ ಮಾಡತಕ್ಕದೆಂದು ಪುನಃ ಪುನಃ ನಾವು ಪ್ರಾರ್ಥಿಸುವೆವು."

ಆ ವರ್ಷ ಹೊಸದಾಗಿ ಚಂದಾದಾರರಾಗುವವರಿಗೆ ಆಗಲೇ ಪ್ರಕಟವಾಗಿ ಶಿಲ್ಕು ಉಳಿದಿದ್ದ 'ಮೃಣಾಲಿನಿ', 'ಕಮಲಕುಮಾರಿ', 'ವೈಭವ', 'ಭಕ್ತಿ ವಿಜಯ', 'ಕುಟುಂಬ', 'ಗಿರಿಜಾ ಕಲ್ಯಾಣ', 'ದಾಂಪತ್ಯ', 'ಶಿವಲೀಲಾಮೃತ', 'ಸತೀಸಾಹಸ', 'ರಾಜನಿಷ್ಠೆ', 'ದತ್ತಕಥಾಮೃತಸಾರ'– ಈ ಪುಸ್ತಕಗಳನ್ನು ಅರ್ಧ ಬೆಲೆಗೆ ಕೊಡುವುದಾಗಿ ಘೋಷಿಸಿರುವರು. ಈ ಪ್ರತಿಗಳೂ ಕೂಡ ಕಡಿಮೆ ಸಂಖ್ಯೆಯಲ್ಲಿ ಉಳಿದಿರುವುದನ್ನು ತಿಳಿಸಿ, "ಆಕೆಯ ಬಳಿಯಲ್ಲಿ ಇಷ್ಟೇ ಪ್ರತಿಗಳು ಸಿಲಕು ಉಳಿದಿರುತ್ತವೆ. ಇವಷ್ಟು ತೀರಿಬಿಟ್ಟರೆ, ಚಂದ್ರಿಕೆಯು ನಾಚಿಕೆ ಯಿಂದ ಮರೆಗೆ ಹೋಗಬೇಕಾಗುವದು" ಎಂದೂ ರಂಜನೀಯವಾಗಿ ನುಡಿದಿರುವರು. ಗಳಗನಾಥರು ಚಂದಾದಾರರನ್ನು ವಿಶ್ವಾಸದಲ್ಲಿ ತೆಗೆದುಕೊಳ್ಳುವ ರೀತಿ ಇದು.

ಗಳಗನಾಥರ ಪ್ರಥಮ ಕಾದಂಬರಿ 'ಪದ್ಮನಯನಾ' ಧಾರವಾಡದ 'ವಾಗ್ಭೂಷಣ'ದಲ್ಲಿ ಈ ಮೊದಲೇ ಪ್ರಕಟವಾಗಿದ್ದರೂ, ಅದು 'ಪ್ರಬುದ್ಧ ಪದ್ಮನಯನೆ'ಯಾಗಿ ಚಂದ್ರಿಕೆಯಲ್ಲಿ ಮತ್ತೆ ಪ್ರಕಟವಾಯಿತು. ಅದನ್ನು ವಾಚಕರು ಸ್ವಾಗತಿಸಿದ್ದರು. ಅದರಿಂದ ಉತ್ತೇಜಿತರಾದ ಗಳಗನಾಥರು ತಮ್ಮ ಹೊಸ ಕಾದಂಬರಿ 'ಕುಮುದಿನಿ'ಯನ್ನು ಚಂದ್ರಿಕೆಯ ದ್ವಾರಾ ಪ್ರಕಟಿಸಲು ನಿಶ್ಚಯಿಸಿದ್ದರು. ಆ ಬಗ್ಗೆ ಅವರು "ಸಿಂಹಾವಲೋಕನ"ದಲ್ಲಿ ಹೇಳಿದ ಮಾತು ರಂಜಕವಾಗಿದೆ.

'ಚಂದ್ರಿಕೆಯು ಈ ವರ್ಷ ಚಂದಾದಾರರ ಕಡೆಗೆ 'ಪ್ರಬುದ್ಧ ಪದ್ಮನಯನೆ' ಯನ್ನು ಕಳಿಸಿದ್ದು ಬಹಳ ನೆಟ್ಟಗಾಯಿತು. ಯಾಕೆಂದರೆ ಪದ್ಮನಯನೆಯು ತನ್ನ ಸುಗುಣಗಳ ಯೋಗ ದಿಂದ ಲೋಕರಂಜಿತಳಾಗಿ, ಬಹುಜನ ವರ್ಗಣಿದಾರರ ಮನಸ್ಸನ್ನು ಚಂದ್ರಿಕೆಯ ಕಡೆಗೆ ಎಳೆದಳು. ಪದ್ಮನಯನೆಯ ಅಭಿನಂದನಪರವಾದ ಪತ್ರಗಳು ತೆರಪಿಲ್ಲದೆ ಬಂದವೆಂಬುದನ್ನು ವಾಚಕ-ರಾದರೂ ಬಲ್ಲರು. ಹೋದ ಸಾರೆಯಂತೆ ಈ ಸಾರೆ ಯಾರನ್ನು ಕಳಿಸಬೇಕೆಂಬ ವಿಚಾರದಲ್ಲಿ ಚಂದ್ರಿಕೆಯು ಮುಣುಗಿ ಹೋಗಿರುವಳು. ಸುಶೀಲರಾದ, ಗಂಭೀರ ಸ್ವಭಾವದ, ಲೋಕಪ್ರಿಯ ಜನರು ಸಿಗುವದು ದುರ್ಲಭವು. ಏನೋ 'ಕುಮುದಿನಿ' ಎಂಬ ಹೆಣ್ಣುಮಗಳು ಬಹು

ಯೋಗ್ಯಳಿರುತ್ತಾಳಂತೆ. ಆಕೆಯನ್ನೇ ಕಳಿಸಬೇಕೆಂದು ಚಂದ್ರಿಕೆಯು ಮಾಡಿರುವಳು. ಕುಮುದಿನಿಯ ಗುರುತು ಪರಿಚಯಗಳು ಯಾರಿಗೂ ಇಲ್ಲದ್ದರಿಂದ ಆಕೆಯ ಸಂಬಂಧದಿಂದ ಹೆಚ್ಚಿಗೆ ಬರೆಯುವದು ಸಾಹಸವಾಗಬಹುದು, ಆದರೂ ಹೆಣ್ಣು ಮಗಳೇನೋ ಸುಗುಣೆಯು, ಪತಿಸೇವಾತತ್ಪರಳು, ಪರೋಪಕಾರದಕ್ಷಳು. ಮೇಲಾಗಿ ವಿಜಯನಗರದ ರಾಯರ ರಾಜ್ಯವು ಹಾಳಾದ ಬಳಿಕ, ಚಂದ್ರಗಿರಿಯಲ್ಲಿ ರಾಜ್ಯವಾಳುತ್ತ ನಿಂತುಕೊಂಡಿದ್ದ ಅವರ ವಂಶದವರ ಅಂತಃಕಲಹದಲ್ಲಿ ಸತ್ಪಕ್ಷವನ್ನು ವಹಿಸಿ ಶ್ರಮಪಟ್ಟಳು! ಅಂದ ಬಳಿಕ ಆಕೆಯು ವಾಚಕರ ಚಿತ್ತವನ್ನು ಆಕರ್ಷಿಸಿ ಅವರನ್ನು ಸದ್ಬೋಧ ಸಂತುಷ್ಟರನ್ನಾಗಿ ಮಾಡದೇನು ಮಾಡುವಳು? ಇರಲಿ, ಪ್ರಿಯವಾಚಕರೇ, ನಾವೂ ನೀವೂ ಯಾಕೆ ಅಷ್ಟು ಯೋಚಿಸಬೇಕು? ಶ್ರೀ ಸದ್ಗುರುವು ಸಮರ್ಥನಿದ್ದಾನೆ, ನೋಡೋಣ."

ಮುಂದೆ ಬರಲಿರುವ ಕಾದಂಬರಿಯ ಬಗ್ಗೆ ವಾಚಕರಲ್ಲಿ ಕುತೂಹಲ ಕೆರಳಿಸುವ ಗಳಗನಾಥರ ರೀತಿಯಿದು!

ಅವರ ಕಾದಂಬರಿಗಳ ಕ್ರಮವಾದ ಪ್ರಕಟಣೆಗಳಿಂದ 'ಸದ್ಬೋಧ ಚಂದ್ರಿಕೆ'ಯ ಚಂದಾದಾರರ ಸಂಖ್ಯೆ ಹೇಗೆ ಬೆಳೆಯತೊಡಗಿತೆಂಬುದನ್ನು ಈ ಸಿಂಹಾವಲೋಕನವು ಸೂಚಿಸುತ್ತದೆ. ಹೀಗೆ ಚಂದ್ರಿಕೆಯ ಬಳಗ ಬೆಳೆಯುತ್ತ ಬೆಳೆಯುತ್ತ 7000ದ ಅಂಕಿಯನ್ನು ಮುಟ್ಟಿದಾಗ ಗಳಗನಾಥರಿಗೆ ಧನ್ಯತೆಯ ಅನುಭವವಾಯಿತು.

"ನನ್ನ ಅಕ್ಕರೆಯ ಸದ್ಬೋಧ ಚಂದ್ರಿಕೆಯೆಂಬ ಮಾಸಪತ್ರಿಕೆಯು ಸದ್ಗುರುನಾಥನ ಕೃಪೆಯಿಂದ ನನ್ನ ಜ್ಯೇಷ್ಠ ಪುತ್ರಿಯಂತೆ ಆನಂದವನದಲ್ಲಿ ಹುಟ್ಟಿದಳು. ಆಕೆಯು ತನ್ನ ತೊದಲು ನುಡಿಯ ಸವಿಯ, ಹಾಗೂ ತನ್ನ ಕಿರಿಗೆಜ್ಜೆಯ ಇಂಚರದ ರೂಪದಿಂದ ಕರ್ನಾಟಕದ ಪ್ರದೇಶವನ್ನೆಲ್ಲ ಆಕ್ರಮಿಸುತ್ತಾ ಆಕ್ರಮಿಸುತ್ತಾ ಹನ್ನೆರಡು ವರ್ಷಗಳಲ್ಲಿ ಕಾಶಿಯಿಂದ ರಾಮೇಶ್ವರದವರೆಗಷ್ಟೇ ಅಲ್ಲ, ಏಡನದಂಥ ಭರತಭೂಮಿಯ ಹೊರಭಾಗದಲ್ಲಿಯೂ ಇರುವ ಕನ್ನಡಿಗರಲ್ಲಿಯ ಏಳುಸಹಸ್ರ ಜನ ಚಂದಾದಾರರ ಮನಸ್ಸುಗಳನ್ನು ಎಳೆದುಕೊಂಡು, ತನ್ನ ಸವಿಯಾದ ಗೌರವದ ನುಡಿಗಳಿಂದ ಅವರನ್ನು ಆನಂದಪರವಶರಾಗಮಾಡಿ 'ಅಹಹ! ಸದ್ಬೋಧ ಚಂದ್ರಿಕೆಯು!' ಎಂಬ ಉದ್ಗಾರವನ್ನು ಹೊರಡಿಸಿದಳು"[1]

ಗಳಗನಾಥರೇ ಹೇಳುವುದರಿಂದ 'ಸದ್ಬೋಧ ಚಂದ್ರಿಕೆ'ಯ ಚಂದಾದಾರರ ಗರಿಷ್ಠ ಸಂಖ್ಯೆ ಏಳು ಸಾವಿರವಿರಬಹುದು. ಆದರೆ 1914 ಇಸ್ವಿಯ ಅಗಷ್ಟ-ಸಪ್ಟೆಂಬರ ತಿಂಗಳುಗಳ 'ಸದ್ಬೋಧ ಚಂದ್ರಿಕೆ'ಯ ಸಂಯುಕ್ತ ಸಂಚಿಕೆಯ ಕೊನೆಗೆ ಕವ್ಹರ ಪುಟದ ಮೇಲೆ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನ ಜಾಹೀರಾತು ಬಂದಿದೆ. ಅದರಲ್ಲಿ,

"ಇಲ್ಲಿ ಎಲ್ಲ ತರದ ಕನ್ನಡ, ಬಾಲಬೋಧ, ಹಾಗೂ ಇಂಗ್ಲೀಷ ಕೆಲಸಗಳು ಸುಂದರವಾಗಿಯೂ ತೀವ್ರವಾಗಿಯೂ ಮಾಡಿಕೊಡಲ್ಪಡುವವು. ದರಗಳು ಸುಲಭ. ನಮ್ಮ ಚಂದ್ರಿಕೆಯ 8000 ಗಟ್ಟಲೆ ಪ್ರತಿಗಳನ್ನು ಕೈಪ್ರೆಸ್ಸಿನ ಮೇಲೆ ಹಗಲು ರಾತ್ರಿ ತೆಗೆಯುತ್ತಿರುವದರಿಂದ ಅದರಲ್ಲಿ ಕೆಲವು ಪ್ರಿಂಟಿಂಗಿನ ದೋಷಗಳು ಕಂಡರೂ ಕಾಣಬಹುದು. ಆದರೆ ಆ ದೋಷಗಳು ಇತರರ ಕೆಲಸಗಳಲ್ಲಿ ಎಂದೂ ಆಗದಂತೆ ಎಚ್ಚರಿಕೆಯಿಂದ ಕೆಲಸ ಮಾಡಿಕೊಡುವೆವು."

1. ವೇ. ತಿ. ಗಳಗನಾಥ: ಸದ್ಗುರು ಪ್ರಭಾವ, ಪುಟ 11

ಎಂದು ಹೇಳಿರುವುದನ್ನು ಗಮನಿಸಬೇಕು. ಮತ್ತು ಅದೇ ವರ್ಷ 'ಚಂದ್ರಿಕೆ'ಗಾಗಿ ಹೊಸ ಪ್ರೆಸ್ಸನ್ನು ಕೊಳ್ಳಲಾಗಿತ್ತು. ಅದೇ ಸಂಚಿಕೆಯಲ್ಲಿ "ಎರಡು ಹೊಸ ಯಂತ್ರಗಳೂ ಚಂದ್ರಿಕೆಯ ಪೇಚಾಟವೂ" ಎಂಬ ಲೇಖನವೂ ಅಚ್ಚಾಗಿದೆ.

ಕಾರಣ ಚಂದ್ರಿಕೆಯ ಚಂದಾದಾರರು ಏಳು ಸಾವಿರವಿದ್ದರೂ, ಪತ್ರಿಕೆಯ ಗರಿಷ್ಠ ಪ್ರತಿಗಳ ಸಂಖ್ಯೆ ಎಂಟು ಸಾವಿರ ಎಂದು ಗ್ರಹಿಸುವುದು ವಿಹಿತ. ಗರಿಷ್ಠ ಮಿತಿ 7 ಸಾವಿರವಿರಲಿ, 8 ಸಾವಿರವಿರಲಿ, 'ಸದ್ಬೋಧ ಚಂದ್ರಿಕೆ'ಯನ್ನು ಗಳಗನಾಥರು ಎಂದೂ ಕೇವಲ ಒಂದು ಮಾಸಪತ್ರಿಕೆಯೆಂದು ತಿಳಿಯಲೂ ಇಲ್ಲ. ಹಾಗೆ ಸಂಬೋಧಿಸಲೂ ಇಲ್ಲ. ಅದು ಯಾವಾಗಲೂ ಅವರಿಗೆ 'ಚಂದ್ರಿಕೆ'. ಹಿರಿಯ ಮಗಳು ಸುಬ್ಬಕ್ಕ ಮತ್ತು 'ಚಂದ್ರಿಕೆ' ಇಬ್ಬರೂ ಸದ್ಗುರುನಾಥನ ಕೃಪೆಯಿಂದ ವರದಾನವಾಗಿ ಜನಿಸಿದ ಅವಳಿ ಮಕ್ಕಳೆಂದೇ ಅವರು ಯಾವಾಗಲೂ ಭಾವಿಸಿದ್ದರು![1]

ಆದರೆ ಗಳಗನಾಥರು ಇಂಥ ಪ್ರೀತಿಯ ಮಗಳನ್ನೂ ಬಿಟ್ಟು ಅಗಡಿಯನ್ನೇ ತ್ಯಜಿಸಿ ಹೊರಡಬೇಕಾಯಿತು. ಅದಕ್ಕೆ ಯಾರನ್ನೂ ದೂಷಿಸದೆ ಅವರ ಋಣಾನುಬಂಧವೇ ಅಲ್ಲಿಗೆ ಮುಗಿಯಿತೆಂದು ಎನ್ನುವುದು ಒಳಿತು. ಗಳಗನಾಥರ ಸದ್ಗುರುಗಳಾದ ಶ್ರೀ ಶೇಷಾಚಲ ಸ್ವಾಮಿಗಳು 1915ರಲ್ಲಿ ಕಾಲವಾದರು. ಗುರುಗಳು ಏಳು ತಿಂಗಳುಗಳ ಕಾಲ ಅತಿಸಾರ ಮತ್ತು ಉದರ ರೋಗಗಳಿಂದ ಬಳಲಿದರು. ಗಳಗನಾಥರು ದಿಗ್ಭ್ರಾಂತರಾದರು. ಗುರುಗಳೇ ಅವರಿಗೆ ಸಮಾಧಾನ ಹೇಳಿದರು. ಗಳಗನಾಥರು ಅವರ ಸೇವೆಯನ್ನು ಅನನ್ಯಭಾವದಿಂದ ಮಾಡಿದರು. ಆದರೂ ಅವರ ಕೈಗೆ ಯಶ ದೊರೆಯದೆ ಒಂದು ಬುಧವಾರ ಅನುರಾಧಾ ನಕ್ಷತ್ರದ ಅಮೃತಸಿದ್ಧಿಯ ಯೋಗದಲ್ಲಿ ಗುರುಗಳು ದೇಹತ್ಯಾಗ ಮಾಡಿದರು. ಮುಂದಿನ ಕರ್ಮಗಳೆಲ್ಲ ಯಥಾ ರೀತಿ ನಡೆದುವು. ಆದರೆ 11ನೆಯ ದಿನ 'ಕಾಕಪಿಂಡ'ವಾಗಲಿಲ್ಲ. ಗುರುಬಾಂಧವರೆಲ್ಲ ನೀರು ಬಿಟ್ಟರು. ಕೊನೆಗೆ ಗಳಗನಾಥರೂ ನೀರು ಬಿಡುತ್ತ "ಸ್ಥಾನ ಬಿಟ್ಟುಹೋಗುವದಿಲ್ಲ" ಎಂದು ನುಡಿದು ಗುರುವಿನ ಆತ್ಮಕ್ಕೆ ಶಾಂತಿಯನ್ನು ಕೋರಿದ್ದರು. ಆದರೂ ಅವರು ಅಗಡಿಯನ್ನು ಬಿಡಬೇಕಾಯಿತು. ಶೇಷಾಚಲ ಸದ್ಗುರುಗಳ ಅನಂತರ ಆಶ್ರಮದ ಮುಖ್ಯಸ್ಥರಾದ ನಾರಾಯಣ ಭಗವಾನರಿಗೂ ಗಳಗನಾಥರಿಗೂ ಭಿನ್ನಾಭಿಪ್ರಾಯಗಳು ಬಂದುವು. ಭಗವಾನರಿಗೆ ಮೊದಲಿನಿಂದಲೂ ಗಳಗನಾಥರ ಬಗ್ಗೆ ಸದಭಿಪ್ರಾಯವಿರಲಿಲ್ಲ.

"ಗಳಗನಾಥ ಮಾಸ್ತರರಿಂದಾದ ಈ ಪಾಠಶಾಲೆ. ಚಂದ್ರಿಕೆ ಮೂರು ದಿನದವು. ನಾವು ಆರಂಭದಿಂದ ಶ್ರೀಗುರುಸನ್ನಿಧಿಯಲ್ಲಿ ಅತಿಥಿಸೇವಾಧರ್ಮವನ್ನು ಕಾಯುತ್ತ ಬಂದಿದ್ದೇವೆ. ಮಾಸ್ತರನು ಲೌಕಿಕನು, ಪಾರಮಾರ್ಥಿಕ ವಿಚಾರವೂ ಗುರುಬೋಧ ರಹಸ್ಯವೂ ಆತನಿಗೇನು ತಿಳಿಯುತ್ತವೆ? ಆತನ ಸಂಸ್ಥೆಯು ಲೌಕಿಕವು. ಅದರಲ್ಲಿ ವ್ಯವಹರಿಸುವವರು ಲೌಕಿಕ ಪ್ರತಿಷ್ಠೆಯನ್ನು ಪಡೆಯಬಹುದಲ್ಲದೆ, ಗುರ್ವನುಗ್ರಹಕ್ಕೆ ಪಾತ್ರರಾಗಲಾರರು. ಮೊದಲು ಹುಟ್ಟಿದ ಕಿವಿಗಿಂತ ಹಿಂದುಗಡೆ ಹುಟ್ಟಿದ ಕೋಡುಗಳು ಆಯವೆನ್ನುವಂತೆ, ಮಾಸ್ತರನ

---

1. ಅಗಡಿಯ ಗುರುಗಳ ಮನೆತನದ ಶ್ರೀ ಚಿದಂಬರಮೂರ್ತಿ ಚಕ್ರವರ್ತಿ ಅವರ ಸಂಪಾದಕತ್ವದಲ್ಲಿ 'ಸದ್ಬೋಧ ಚಂದ್ರಿಕೆ' ಇಂದಿಗೂ ಪ್ರಕಟವಾಗುತ್ತಿದೆ. ಗಳಗನಾಥರ 'ಚಂದ್ರಿಕೆ'ಯ ಹುಟ್ಟು, ಬೆಳವಣಿಗೆ, ಕನ್ನಡ ವಾಚಕಲೋಕಕ್ಕೆ ಅದು ಸಲ್ಲಿಸಿದ ಸೇವೆಗಳ ಅಧ್ಯಯನವು ತುಂಬ ಉದ್ಬೋಧಕವೂ ರಂಜಕವೂ ಆಗಬಹುದಾಗಿದೆ.

ಇರತಕ್ಕೆ ಮಹತ್ವ ಕೊಡಬೇಡಿರಿ. ಶ್ವಾನ ಬೊಗಳುತ್ತದೆ, ಆನೆ ಹೋಗುತ್ತದೆ"[1] ಎಂದು ಮೊದಲಾಗಿ ಕೆಲವರು ಗಳಗನಾಥರ ಬಗ್ಗೆ ಅಸೂಯೆಯ, ಅಸಹನೆಯ ಮಾತುಗಳನ್ನು ಆಡಿಕೊಳ್ಳುತ್ತಿದ್ದರು. ಅದರಂತೆ ಪಾಠಶಾಲೆಯ ವಿದ್ಯಾರ್ಥಿಗಳಿಗೆ ಅನ್ನ, ತುಪ್ಪ ಮೊದಲಾದ ಒಳ್ಳೆಯ ಆಹಾರ ಕೊಡಬೇಕೆಂದು ಪ್ರತಿಪಾದಿಸಿ, ಗಳಗನಾಥರು ಉಳಿದವರ ಜೊತೆಗೆ ಭಿನ್ನಾಭಿಪ್ರಾಯ ತಾಳಿ, ಕೊನೆಗೆ ವಿದ್ಯಾರ್ಥಿಗಳಿಗಾಗಿ ತಾವೇ ತಮ್ಮ ಖರ್ಚಿನಿಂದ ಒಳ್ಳೆಯ ಪೌಷ್ಟಿಕ ಆಹಾರವನ್ನು ಕೊಡತೊಡಗಿದ್ದರಷ್ಟೇ. ಅವನ್ನೇ ಆಶ್ರಮದ ಇತರರು, "ಅಕ್ಕಿಯ ಅನ್ನ ಬೇಕಾದರೆ ಅತ್ತ ಹೋಗಿರಿ. ಗುರುಪಾದ ಬೇಕಾದವರು ಜೋಳದ ನುಚ್ಚು ಉಣ್ಣಲಿಕ್ಕೆ ಇತ್ತ ಬರ್‍ರಿ. ಇತ್ಯಾದಿ ಹುರುಳಿಲ್ಲದ ವಚನಗಳಿಂದ ಅಬಲೆಯರ ಗುಂಪನ್ನೂ ಮೂಢ ಶಿಷ್ಯರನ್ನೂ ಬೋಧಿಸಿ, ಶ್ರೀ ಗುರುಸ್ಥಾನದಲ್ಲಿ ಅಧರ್ಮ ಮಾಡುತ್ತ"[2] ಬಂದಿದ್ದರು.

ಮುಖ್ಯವಾಗಿ ಗಳಗನಾಥರ ನಿರ್ಭಿಡೆ ಸ್ವಭಾವ, ಕಟ್ಟುನಿಟ್ಟುಗಳು ಅನೇಕರಿಗೆ ರುಚಿ ಸಿರಲಿಲ್ಲ. ಈಗ ಅಂಥವರೆಲ್ಲ ಒಂದಾದರು. ಎರಡು ವರ್ಷಗಳ ವರೆಗೆ ಶಿಕ್ಕಾಟ ಹಾಗೇ ನಡೆಯಿತು. ವಿದ್ಯಾರ್ಥಿಗಳ ಊಟಕ್ಕಾಗಿ ಮೊದಲಿನಂತೆ ಪೌಷ್ಟಿಕ ಆಹಾರವನ್ನೇ ಕೊಡಬೇಕೆಂದು ಗಳಗನಾಥರ ಹಟ. ಅದನ್ನು ಆಶ್ರಮದ ಉಳಿದವರು ವಿರೋಧಿಸಿದರು. ಗಳಗನಾಥರು ಪಾಠಶಾಲೆ, ಪತ್ರಿಕೆ, ಹಾಗೂ ಪ್ರೆಸ್ಸುಗಳನ್ನು ಕಷ್ಟಪಟ್ಟು ಸ್ಥಾಪಿಸಿ ಸಾಗಿಸಿಕೊಂಡು ಬಂದದ್ದು ಎಲ್ಲರಿಗೂ ಗೊತ್ತಿತ್ತು. ನ್ಯಾಯ ಬಗೆಹರಿಸಲು ಸೇರಿದವರ ಮುಂದೆ ಆವೇಶದ ಭರದಲ್ಲಿ ತಾವು ಆಶ್ರಮವನ್ನು ಬಿಟ್ಟು ಹೊರಡುವುದಾಗಿ ಗಳಗನಾಥರು ಹೇಳಿದರು. ಅದೇ ನಿಜ ವಾಯಿತು. ಆಗ ಮಧ್ಯಸ್ಥರ ನಿರ್ಣಯದಂತೆ ಅವರ ಪಾಲಿಗೆ ಅವರ ಗ್ರಂಥಗಳು, ಪ್ರೆಸ್ಸಿನ ಕೆಲವು ಬಿಡಿ ಭಾಗಗಳು ಮಾತ್ರ ಬಂದುವು. "ಯಾವ ಪತ್ರಿಕೆಯನ್ನು ಅವರು ಆರಂಭಿಸಿ, ಏಳು ಸಾವಿರದವರೆಗೆ ಚಂದಾದಾರರ ಸಂಖ್ಯೆಯನ್ನು ಏರಿಸಿ, ಪತ್ರಿಕಾ ಪ್ರಪಂಚದಲ್ಲಿ ವಿಕ್ರಮವನ್ನೇ ಸ್ಥಾಪಿಸಿದ್ದರೋ, ಅಂಥ 'ಚಂದ್ರಿಕೆ'ಯನ್ನು ಅವರು ಬಿಟ್ಟುಕೊಡಬೇಕಾಯಿತು. ಅಯ್ಯೋ ನನ್ನ ಚಂದ್ರಿಕೆ! ಎಂದು ಅವರ ಮನಸ್ಸು ಬೆಂದಿತು".[3] ಗಳಗನಾಥರು ಅಗಡಿಯ ಆಶ್ರಮವನ್ನು ಬಿಟ್ಟು ಹಾವೇರಿಗೆ ಬಂದುದು 1918ನೆಯ ಇಸ್ವಿಯ ಜನೆವರಿ ತಿಂಗಳಲ್ಲಿ.

ಮಾತುಮಾತಿಗೆ "ಸದ್ಗುರು ಕೃಪೆ" ಎಂದು ಹೇಳುತ್ತಿದ್ದ ಗಳಗನಾಥರು ಆ ಸದ್ಗುರುವಿನ ಆಶ್ರಮವನ್ನು ತೊರೆದು ಬರಬೇಕಾದುದು ದೈವದುರ್ವಿಪಾಕವೇ ಸರಿ. ಗಳಗನಾಥರು ತಮ್ಮ ಗುರುವಿಗೆ ಕೊಟ್ಟ ವಚನವನ್ನೂ ಮುರಿದು ಅಗಡಿಯನ್ನು ಬಿಟ್ಟು ಹೋದರು. ಈ ಘಟನೆಗೆ, ಅವರೇ ಕಾರಣರೆಂದು ಹೇಳಲಾಗದಿದ್ದರೂ ಅವರ ಸ್ವಾಭಿಮಾನ, ಹಟದ ಸ್ವಭಾವಗಳೂ ಕೆಲಮಟ್ಟಿಗೆ ಕಾರಣವೆಂದು ಒಪ್ಪಬೇಕಾಗುತ್ತದೆ. ಈ ಮಾತಿಗೆ ಅವರ ಹಾವೇರಿಯ ಚಟುವಟಿಕೆಗಳೂ ನಿದರ್ಶನವಾಗಿವೆ.

ಹಾವೇರಿ ಗಳಗನಾಥರಿಗೆ ಅಪರಿಚಿತವಾಗಿರಲಿಲ್ಲ. ಅಲ್ಲಿ ಅವರ ಬಗ್ಗೆ ಸಹಾನುಭೂತಿ-ಯುಳ್ಳ ಕೆಲವು ಮಹನೀಯರು ಇದ್ದರು. ಅವರು ಗಳಗನಾಥರಿಗೆ ಸಹಾಯ ಮಾಡಿದರು. ಅವರಲ್ಲಿ ಶ್ರೀಯುತರುಗಳಾದ ಬಾದಾಮಿಯ ನಾಯಕರು, ಕುಲಕರ್ಣಿ ಜೀವಣ್ಣನವರು,

1. ಗಳಗನಾಥ : ನಿರ್ಯಾಣ ಮಹೋತ್ಸವ, ಪುಟ 126
2. ಅದೇ, ಪುಟ 126
3. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 48

ಅಭ್ಯಂಕರ ವಕೀಲರು ಪ್ರಮುಖರು. ಬಾದಾಮಿಯ ನಾಯಕರ ಶ್ರೀರಾಮಮಂದಿರವೇ ಗಳಗನಾಥರ ವಾಸಸ್ಥಾನವಾಯಿತು. ಹಾವೇರಿಗೆ ಬಂದ ತಿಂಗಳೊಪ್ಪತ್ತಿನಲ್ಲಿಯೇ ಗಳಗನಾಥರು 'ಶ್ರೀ ಶೇಷಾಚಲ ವೇದ ಮತ್ತು ಸಂಸ್ಕೃತ ಪಾಠಶಾಲೆ'ಯನ್ನೂ ಮರುವರ್ಷ 'ಸದ್ಗುರು' ಮಾಸಪತ್ರಿಕೆಯನ್ನೂ ಆರಂಭಿಸಿದರೆಂಬುದು ಗಳಗನಾಥರ ಹಟದ ಸ್ವಭಾವಕ್ಕೆ ನಿದರ್ಶನವಾಗಿದೆ. ಗಳಗನಾಥರ ವಿಶ್ವಾಸದ ಅನೇಕ ಶಿಕ್ಷಕರೂ ವಿದ್ಯಾರ್ಥಿಗಳೂ ಅಗಡಿಯಿಂದ ಹಾವೇರಿಗೆ ಬಂದು ಗಳಗನಾಥರ ಪಾಠಶಾಲೆಯನ್ನು ಸೇರಿದರು. ತಮಗೆ ಎಷ್ಟೇ ಅಡಚಣೆಯಾದರೂ ಗಳಗನಾಥರು ಪಾಠಶಾಲೆಯನ್ನು ಸುವ್ಯವಸ್ಥಿತವಾಗಿಯೇ ಆರಂಭಿಸಿದರು. ಅದು ಅತೀವ ಕಷ್ಟದ ಕೆಲಸ-ವಾಗಿತ್ತೆಂಬುದನ್ನು ಅವರ ಮಾತುಗಳಿಂದಲೇ ತಿಳಿದುಕೊಳ್ಳಬಹುದಾಗಿದೆ.

ಹಾವೇರಿಗೆ ಬಂದು ಏಳೆಂಟು ತಿಂಗಳು ಕಳೆಯುವಷ್ಟರಲ್ಲಿಯೇ ಗಳಗನಾಥರು 'ಶಿವ ಪ್ರಭುವಿನ ಪುಣ್ಯ' ಮತ್ತು 'ಮರಾಠರ ಅಭ್ಯುದಯ' ಎಂಬೆರಡು ಕಾದಂಬರಿಗಳನ್ನು ಬರೆದು, ಅವನ್ನು 'ಗಳಗನಾಥ ಸುರಸ ಗ್ರಂಥಮಾಲೆ'ಯ ಪ್ರಥಮ ಕುಸುಮಗಳಾಗಿ ವಾಚಕರಿಗೆ ಅರ್ಪಿಸಿದರು. ಈ ಎರಡೂ ಕಾದಂಬರಿಗಳ ಮುನ್ನುಡಿಯಲ್ಲಿ ಗಳಗನಾಥರು ಅಗಡಿಯನ್ನು ಬಿಟ್ಟು ಬಂದುದರಿಂದ ತಮಗಾದ ದುಃಖವನ್ನೂ ರೋಷವನ್ನೂ ತೋಡಿಕೊಂಡರು. ಶ್ರೀ ಗುರುವಿನ ಪಾಠಶಾಲಾ ವೃಕ್ಷವನ್ನು ಕಿತ್ತಿ ಹಾವೇರಿಯಲ್ಲಿ ತಾವು ಹಚ್ಚಬೇಕಾದ ಪ್ರಸಂಗಕ್ಕೆ "ಸ್ವಾರ್ಥ ಪರಾಯಣರಾದ ವಿಘ್ನ ಸಂತೋಷಿ"ಗಳೇ ಕಾರಣವೆಂದು ಹೇಳುತ್ತ ಗಳಗನಾಥರು "ವೃಕ್ಷಗಳ ಸಸಿಗಳನ್ನು ಕಿತ್ತಿ ಹಚ್ಚುವದರಿಂದ ಅವು ಕಸುವಿನಿಂದ ಬೆಳೆಯುವವು; ಅದರಿಂದಲೇ ಪಾಠಶಾಲಾ ವೃಕ್ಷದ ಹನ್ನೊಂದು ವರ್ಷದ ಸಸಿಯನ್ನು ಕಿತ್ತು ಹಾವೇರಿಯ ಶ್ರೀರಾಮ ಮಂದಿರದಲ್ಲಿ ಊರುವ ಪ್ರಸಂಗವು ಬಂದಿರಬಹುದು .... ಈ ಪಾಠಶಾಲಾ ವೃಕ್ಷದ ಸಂಗೋಪನಕ್ಕಾಗಿಯೇ ನಮ್ಮ ಭಾಷಾಸೇವಾ ಸುಂದರಿಯು ಈಗ ಹನ್ನೊಂದು ವರ್ಷಗಳ ಹಿಂದೆ ಶ್ರೀಗುರುಪ್ರಭಾವದಿಂದ ಆನಂದವನದಲ್ಲಿ ಪ್ರಕಟವಾದಳಷ್ಟೇ ? .... ಆ ಸುಂದರಿಯು ತನ್ನ 'ಸದ್ಬೋಧ ಚಂದ್ರಿಕೆ'ಯೆಂಬ ಹೆಸರನ್ನು ಬಿಟ್ಟುಕೊಟ್ಟು ಆ ಹೆಸರಿಗೆ ಒಪ್ಪುವ ರೂಪವನ್ನು ಕಳಚಿಬಿಟ್ಟು 'ಸುರಸ ಗ್ರಂಥಮಾಲೆ'ಯೆಂಬ ಹೆಸರನ್ನೂ, ಆ ಹೆಸರಿಗೆ ಒಪ್ಪುವ ಮನೋಹರ ರೂಪವನ್ನೂ ಧರಿಸಿ ವಾಚಕರನ್ನು ತೃಪ್ತಿಪಡಿಸಲು ಸಿದ್ಧವಾಗಿರುವಳು."[1] ಎಂದು ನುಡಿದಿರುವರು. ಗಳಗನಾಥರು ತಮ್ಮ ಶಕ್ತ ಲೇಖನಿಯಿಂದ ಗ್ರಂಥಗಳನ್ನು ಬರೆದು ಹಣ ಗಳಿಸಿ ಕಷ್ಟಪಟ್ಟು ಹಟದಿಂದ ಪಾಠಶಾಲೆಯನ್ನು ಕೆಲ ಕಾಲ ನಡೆಸಿದರು.

ಪಾಠಶಾಲೆಗಾಗಿ ಕೆಲವು ದಾನಿಗಳು ಸಹಾಯವನ್ನೂ ಮಾಡುತ್ತಿದ್ದರು. ಹಾವೇರಿಯ ಪ್ರಸಿದ್ಧ ವಕೀಲರಾದ ಮ. ರಾ. ರಾ. ಮೋರೋಪಂತ ಅಭ್ಯಂಕರರವರು ಪ್ರತಿವರ್ಷ 220ರೂ. ಕೊಡುತ್ತಿದ್ದರು. ಈ ವಕೀಲರೇ ಗಳಗನಾಥರ ಪರದಾಟವನ್ನು ನೋಡಲಾರದೆ ಮುಂದೆ ಪಾಠಶಾಲೆಯನ್ನು ಒಂದು ಟ್ರಸ್ಟು ಮಾಡಿ ಅದಕ್ಕೆ ಒಪ್ಪಿಸಿಬಿಡಬೇಕೆಂದು ಸೂಚಿಸಿದರು. ಆದರೆ ಗಳಗನಾಥರು ಅದಕ್ಕೆ ಒಪ್ಪಲಿಲ್ಲ. ಹಾವೇರಿಯ ಶ್ರೀ ಬಾದಾಮಿಯವರೂ ಕೊಡುಗೈಯಿಂದ ಸಹಾಯ ಸಲ್ಲಿಸಿದರು. ಅವರ ಶ್ರೀರಾಮದೇವರ ಗುಡಿಯಲ್ಲಿಯೇ ಗಳಗನಾಥರು ನೆಲೆನಿಂತು ಪಾಠಶಾಲೆ, ಗೋಶಾಲೆಗಳನ್ನು ಆರಂಭಿಸಿದ್ದರು. ಮೋಟೆಬೆನ್ನೂರಿನ ಗಂ. ಭಾ. ರಾಧಾಬಾಯಿಯವರಂಥ ಅನೇಕರು ಧಾನ್ಯರೂಪದಿಂದಲೂ ಸಹಾಯ ಮಾಡು-

1. 'ಮರಾಠರ ಅಭ್ಯುದಯ', ಮುನ್ನುಡಿ

ತ್ತಿದ್ದರು. ಆದರೂ ಪ್ರತಿವರ್ಷ ಪಾಠಶಾಲೆಗಾಗಿ ಆರು ಸಾವಿರ ರೂಪಾಯಿಗಳು ಬೇಕಾ-ಗುತ್ತಿದ್ದುವು. ಸರಕಾರದಿಂದಲೂ ತುಸು ಧನ ಸಹಾಯ ಸಿಗುತ್ತಿತ್ತು. "ನಮ್ಮ ಸಾರ್ವಭೌಮ ಸರಕಾರವು 7–8 ವರ್ಷಗಳಿಂದ ಇದಕ್ಕೆ ಗ್ರ್ಯಾಂಟು ಕೊಡುತ್ತಿದ್ದು ಹೋದವರ್ಷ ಐದುನೂರು ರೂಪಾಯಿ ಗ್ರ್ಯಾಂಟು ಸಿಕ್ಕಿತು! ವೆಚ್ಚದ ಮಾನದಿಂದ ಸಾವಿರ ರೂಪಾಯಿ ಗ್ರ್ಯಾಂಟು ಸಿಗಬಹುದಾಗಿತ್ತು; ಆದರೆ ಈ ವರ್ಷ ಸಿಗಬಹುದು. ಈ ಉದಾರಾಶ್ರಯಕ್ಕಾಗಿ ಕೃತಜ್ಞತೆಯಿಂದ ಸರಕಾರದ ಅಭೀಷ್ಟವನ್ನು ಚಿಂತಿಸುವೆವು" ಎಂದು ಗಳಗನಾಥರು 1920ರಲ್ಲಿ 'ಸದ್ಗುರು'ದಲ್ಲಿ ಬರೆದರು.

ಪಾಠಶಾಲೆಯ ವಿದ್ಯಾರ್ಥಿಗಳು ಪ್ರತಿವರ್ಷ ಗದಗ, ಹುಬ್ಬಳ್ಳಿ, ಹಾನಗಲ್ಲ ಮೊದಲಾದ ಸ್ಥಳಗಳಲ್ಲಿ ನಡೆಯುತ್ತಿದ್ದ ಶಂಕರಾಚಾರ್ಯ ಜನ್ಮೋತ್ಸವಗಳಲ್ಲಿ ಭಾಗವಹಿಸಿ, ಪಾರಿತೋಷಕ-ಗಳನ್ನು ಪಡೆಯುತ್ತಿದ್ದರು. 1920ರ ಉತ್ಸವದಲ್ಲಿ ಅವರು ಒಟ್ಟು 98ರೂಪಾಯಿ ದೊರಕಿಸಿದರು. ಇದನ್ನು ಗಳಗನಾಥರು ಧನಸಹಾಯ ಎಂದು ತಿಳಿಯದೆ, ಆದೊಂದು ಗೌರವ, ಅಭಿಮಾನವೆಂದು ತಿಳಿದರೂ "ಇದಕ್ಕಾಗಿ ಆಯಾ ಉತ್ಸವ ಕರ್ತೃಗಳಿಗೆ ಪಾಠಶಾಲೆಯು ಕೃತಜ್ಞವಾಗಿರುವದು" ಎಂದಿರುವರು.

"ಈ ವರ್ಷದ ಪಾಠಶಾಲೆಯ ವೆಚ್ಚದಲ್ಲಿ ನಮ್ಮ ಚಿ. ಸೌ. ಕಾ. ಸುಬ್ಬಕ್ಕನ ಲಗ್ನದ ವೆಚ್ಚ ಕೂಡಿದ್ದರಿಂದ ಋಣಭಾರವು ಪ್ರತಿವರ್ಷಕ್ಕಿಂತ ಸ್ವಲ್ಪ ಹೆಚ್ಚು ಆಯಿತು. ಹೀಗೆ ಅಖಂಡ 13ವರ್ಷ (1907ರಿಂದ)ಗಳಿಂದ ಪಾಠಶಾಲೆಯು ಋಣಭಾರದಿಂದ ಕುಸಿಯುತ್ತಾ ಬಂದದ್ದನ್ನು ನೋಡಿ ಕರುಣಾರ್ದ್ರಹೃದಯರಾಗಿ" ಅನೇಕರು ಸಹಾಯ ಮಾಡಿದರು. ಪಾಠಶಾಲೆಯ ಗುರುಗಳೂ ಕೂಡ ಬೇರೆ ಬೇರೆ ಕಡೆಗೆ ಪ್ರಯಾಣ ಕೈಕೊಂಡು ಧನಸಂಗ್ರಹ ವನ್ನೂ 'ಸದ್ಗುರು' ಪತ್ರಿಕೆಗೆ ಚಂದಾದಾರರ ಸಂಗ್ರಹವನ್ನೂ ಮಾಡಿಕೊಂಡು ಬಂದರು. (ಈ ಎಲ್ಲ ವಿವರಗಳನ್ನು ಗಳಗನಾಥರ 'ಸದ್ಗುರು' ಪ್ರತಿತಿಂಗಳೂ ಕೊಡುತ್ತಿತ್ತು.)

ಆದರೆ ದುರ್ದೈವದಿಂದ ಅದನ್ನು ಕಡೆತನಕ ನಡೆಸಿಕೊಂಡು ಹೋಗುವದು ಅವರಿಂದ ಸಾಧ್ಯವಾಗಲಿಲ್ಲ. ಅವರು ಸಾಲದಲ್ಲಿ ಮುಳುಗಿಹೋಗಲಿಕ್ಕೆ ಪಾಠಶಾಲೆಯ ಮಿತಿ ಮೀರಿದ ಖರ್ಚು ಮುಖ್ಯ ಕಾರಣಗಳಲ್ಲಿ ಒಂದಾಯಿತು; ತಮ್ಮ ಅಭಿಮಾನದ ಪಾಠಶಾಲೆ ನಿಂತು ಹೋದುದಕ್ಕಾಗಿ ಅವರು ಬಹಳೇ ಮಿಡುಕಿದರು. ಅವರು ಸಾಲಮಾಡಬೇಕಾಗಿ ಬಂದುದಕ್ಕೆ ಹೆದರಲಿಲ್ಲ ಅಥವಾ ದುಃಖಿಸಲಿಲ್ಲ. ಆದರೆ ಪಾಠಶಾಲೆ ನಿಂತು ಹೋದಾಗ, "ಈ ದೀರ್ಘ ವೆಚ್ಚಕ್ಕಾಗಿ ಗಳಗನಾಥನು ಅಸೂಯೆ ಪಟ್ಟಿದ್ದಿಲ್ಲ; ಅಥವಾ ನೀಗದಷ್ಟು ಸಾಲವಾದದ್ದಕ್ಕಾಗಿ ಆತನು ಎದೆಗುಂದಿದ್ದಿಲ್ಲ. ಆತನ ಪಾಠಶಾಲೆ–ಸದ್ಗುರು ಮಾಸಪತ್ರಿಕೆಗಳು ಸಾಗುವ ಹಾಗೆ ಹಾವೇರಿ ಯಲ್ಲಿ ಸಾಗಿದ್ದವು. ಆದರೆ ಗಳಗನಾಥನ ಸತ್ವಪರೀಕ್ಷೆಗಾಗಿಯೋ ಅನ್ನುವಂತೆ, ಸಂಸ್ಕೃತ ಪಾಠಶಾಲೆಯು ಈಗ ನಾಲ್ಕು ವರ್ಷಗಳ ಹಿಂದೆ ಅಕಸ್ಮಾತ್ ನಿಂತುಬಿಟ್ಟಿತು!"[1] ಎಂದು ಗಳಗನಾಥರು 1928ರಲ್ಲಿ ಮಿಡುಕಿ ಬರೆದಿರುವರು.

ಪಾಠಶಾಲೆ ನಿಂತುದು 1924ರಲ್ಲಿ, ಅಂದರೆ ಅದು ಹಾವೇರಿಯಲ್ಲಿ ಆರಂಭವಾಗಿ ಕೇವಲ 6 ವರ್ಷಗಳಲ್ಲಿ. ಆದರೂ ಅದನ್ನು ಪುನಃ ಆರಂಭಿಸಬೇಕೆಂಬ ಹಂಬಲ ಮತ್ತು ಆರಂಭಿಸಬಲ್ಲೆನೆಂಬ ವಿಶ್ವಾಸ ಗಳಗನಾಥರಲ್ಲಿದ್ದುವು. "ಹೀಗಿರಲು, ಸದ್ಗುರು ಪ್ರಭಾವದಿಂದ

1. ಗಳಗನಾಥ . ಸದ್ಗುರು ಪ್ರಭಾವ, ಪುಟ 13

ಆತನು ಕರ್ತವ್ಯಭ್ರಷ್ಟನಾಗದೆ, ಅನಿರ್ವಾಹ ಪಕ್ಷೆ 'ಸದ್ಗುರು' ಮಾಸಪತ್ರಿಕೆ ನಿಲ್ಲಿಸಿ, ತನ್ನಲ್ಲಿ ಸಂಗ್ರಹವಾಗಿದ್ದ ನಾಲ್ವತ್ತು ಸಹಸ್ರ ರೂಪಾಯಿಗಳ ಪುಸ್ತಕಗಳನ್ನು ಮಾರಿ ಸಾಲತೀರಿಸಿ ಆಮೇಲೆ ಪಾಠಶಾಲೆ—'ಸದ್ಗುರು' ಮಾಸಪತ್ರಿಕೆಯನ್ನು ಪುನಃ ಆರಂಭಿಸಬೇಕೆಂದು ನಿಶ್ಚಯಿಸಿ, ತನ್ನ ವಾರ್ಧಕ್ಯದ ಕಡೆಗೆ ನೋಡದೆ, ಸ್ವತಃ ಪುಸ್ತಕಗಳನ್ನು ತಲೆಯ ಮೇಲೆ ಹೊತ್ತುಕೊಂಡು ಕರ್ನಾಟಕದಲ್ಲಿ ಮಾರಲಿಕ್ಕೆ ಹೊರಟನು."[1]

ಗಳಗನಾಥರ ಈ ಆತ್ಮನಿವೇದನದಲ್ಲಿ ಪಾಠಶಾಲೆಯ ಬಗ್ಗೆ ಇದ್ದ ಅವರ ಕಳಕಳಿ ವ್ಯಕ್ತವಾಗಿದೆ. ಅಂತೂ ಕಿತ್ತು ಹಚ್ಚಿದ ಪಾಠಶಾಲಾವೃಕ್ಷದ ಹನ್ನೊಂದು ವರ್ಷದ ಸಸಿ ಕೆಲಕಾಲ ಮಾತ್ರ ಚಿಗುರಿದಂತಾಗಿ ಕಮರಿಯೇ ಹೋಗಿಬಿಟ್ಟುದು ಗಳಗನಾಥರ ದುಃಖಕ್ಕೆ ಕಾರಣವಾಯಿತು. ಅಲ್ಲದೆ, ಕೊನೆಯವರೆಗೂ ಅವರನ್ನು ಈ ಕೊರಗು ಸಣ್ಣಾಗಿ ಕೊರೆಯುತ್ತಲೇ ಇದ್ದಿತು.

ಅಗಡಿಯ ಆಶ್ರಮದಲ್ಲಿ ನಡೆಯುತ್ತಿದ್ದ ಪ್ರತಿಯೊಂದು ಸಂಗತಿಯ ಪ್ರತಿಸೃಷ್ಟಿಯನ್ನೇ ಗಳಗನಾಥರು ಹಾವೇರಿಯಲ್ಲಿ ಮಾಡಬಯಸಿದರು. ಪಾಠಶಾಲೆಯ ವಿಷಯವಂತೂ ಅವರ ಅತೀವ ಪ್ರಿಯವಾದ ಕಾರ್ಯವಾಗಿತ್ತು. ಅವರು ಅಗಡಿಯನ್ನು ಬಿಡಲು ಅದೂ ಒಂದು ಕಾರಣವಾಗಿತ್ತು. ಆದ್ದರಿಂದ ತಮ್ಮ ಆತ್ಮಸಂತೋಷಕ್ಕಾಗಿ ಅದನ್ನು ಪುನಃ ಹಾವೇರಿಯಲ್ಲಿ ಆರಂಭಿಸಿದರು. ಅದರಂತೆ ಅಲ್ಲಿಯ 'ಸದ್ಬೋಧ ಚಂದ್ರಿಕೆ'ಗೆ ಬದಲಾಗಿ 1919ರಲ್ಲಿ **'ಸದ್ಗುರು'** ಎಂಬ ಮಾಸಪತ್ರಿಕೆಯನ್ನು ಆರಂಭಿಸಿದರು. ಅಗಡಿಯಲ್ಲಿಯಂತೆ ಗೋಶಾಲೆಯನ್ನು ಸ್ಥಾಪಿಸಿದರು. ಅಲ್ಲಿಯಂತೆ ತಮ್ಮ ಗುರುಗಳ ಜಯಂತಿಯ ಉತ್ಸವವನ್ನು ಪ್ರತಿವರ್ಷ ಚೈತ್ರದಲ್ಲಿ ಅಖಂಡ ಒಂದು ವಾರದ ವರೆಗೆ ನಡೆಸಿದರು. ಆಗ ಹಾವೇರಿಯ ಊರಿಗೇ ಆಮಂತ್ರಣ! 10 ಸಾವಿರ ಜನ ಊಟ ಮಾಡುತ್ತಿದ್ದರು. ಆ ಸಪ್ತಾಹದಲ್ಲಿ ಅನೇಕ ಬಡವರ ಮದುವೆ–ಮುಂಜಿವೆಗಳನ್ನು ಮಾಡಿಸಿದರು. ಇದಕ್ಕೆಲ್ಲ ತಮ್ಮ ಶಕ್ತಿ ಮೀರಿ ಖರ್ಚು ಮಾಡಿದರು. ಈ ಎಲ್ಲವುಗಳ ಹಿಂದೆ ಇದ್ದುದು ಅವರ ಹಟವೊ ? ಕಳಕಳಿಯೋ ? ಆತ್ಮತೃಪ್ತಿಯೋ ? ಅಥವಾ ಇವೆಲ್ಲವುಗಳ ಒಟ್ಟು ಪ್ರಭಾವವೊ ? ಹೇಳುವುದು ಕಠಿಣ.

'ಸದ್ಬೋಧ ಚಂದ್ರಿಕೆ'ಯ ಜನಕರೂ, ಪೋಷಕರೂ ನಿಜವಾಗಿಯೂ ಗಳಗನಾಥರೇ ಆಗಿದ್ದರು. ಆದರೂ ಆ ಪತ್ರಿಕೆಯ ಮುಖಪುಟದಲ್ಲಿ ಮಾತ್ರ ಗಳಗನಾಥರ ಹೆಸರು ಸಂಪಾದಕರೆಂದಾಗಲೀ, ಪ್ರಕಾಶಕರೆಂದಾಗಲಿ ಇರಲಿಲ್ಲ. ಮಧ್ಯಸ್ಥರು ಬಹುಶಃ ಇದೇ ಕಾರಣದಿಂದ ಪತ್ರಿಕೆಯು ಆಶ್ರಮದ ಸೊತ್ತು ಎಂದು ನಿರ್ಣಯಿಸಿರಬಹುದು. ಆದರೆ ಗಳಗನಾಥರ ಹೃದಯ ಅದನ್ನು ಒಪ್ಪಲಿಲ್ಲ. "ಗಳಗನಾಥ ಇವರ ಲೇಖನಿಯೊಳಗಿಂದ ಹನ್ನೊಂದು ವರ್ಷ ಎಡೆಬಿಡದೆ ಹೊರಟು ಕರ್ನಾಟಕದ ದೃಷ್ಟಿಗಳನ್ನು ತನ್ನ ಕಡೆಗೆ ಎಳೆದುಕೊಂಡಿದ್ದ ಲೇಖಪರಂಪರೆಗಳನ್ನು ಗರ್ಭೀಕರಿಸಿಕೊಂಡಿದ್ದ ಚಂದ್ರಿಕೆಯನ್ನು ತನ್ನದೆಂದು ಹೇಳುವವನು ಅದಾವನವನು ?"[2] ಎಂದು ಕೇಳಿರುವಲ್ಲಿ ಅವರ ಸಾತ್ವಿಕ ಸಂತಾಪವು ವ್ಯಕ್ತವಾಗಿದೆ.

---

1. ಅದೇ.
2. ಗಳಗನಾಥ : ಮರಾಠರ ಅಭ್ಯುದಯ– ಪ್ರಸ್ತಾವನೆ, ಪುಟ 3

ಆದರೆ ಇವರು ಅಗಡಿಯನ್ನು ತ್ಯಜಿಸಿ ಬಂದ ತರುವಾಯ ಮುಂದುವರೆದ 'ಚಂದ್ರಿಕೆ'ಯ ಸಂಚಿಕೆಯಲ್ಲಿ ಗಳಗನಾಥರನ್ನು ಜರಿದ ಲೇಖನಗಳೂ ಬಂದವು.[1] ಆಗ ಮಾತ್ರ ಗಳಗನಾಥರ ಹೃದಯ ಉರಿದುಹೋಯಿತು. ಅಂಥ 'ಚಂದ್ರಿಕೆ' ತಮ್ಮದಲ್ಲವೆಂದು ಅವರು ಅದೇ ಉಸಿರಿನಲ್ಲಿಯೇ ನುಡಿದರು.

"ಈಗ ಹೊರಟಿದ್ದ ಚಂದ್ರಿಕೆಯು ಗಳಗನಾಥರದೇ ಆಗಿದ್ದರೆ, ಅದು ತನ್ನ ಜನ್ಮದಾತನನ್ನೂ, ಪರಿಪೋಷಕನನ್ನೂ, ಉದ್ಧಾರಕರ್ತೃವನ್ನೂ ಮನಸೋಕ್ತವಾಗಿ ನಿಂದಿಸುವ ಲೇಖನವನ್ನೇ ಮಂಗಲಾಚರಣದ ಪ್ರಥಮ ಲೇಖವಾಗಿ ಇಟ್ಟುಕೊಂಡು ತೇಜೋಹೀನವಾಗಿಯೂ, ಬೀಭತ್ಸವಾಗಿಯೂ ಹೊರಡಬಹುದೇ ?"[2] ಹೀಗೆ ಆಗಿನ 'ಚಂದ್ರಿಕೆ'ಗೂ ತಮಗೂ ಸಂಬಂಧವಿಲ್ಲೆಂದು ಹೇಳಿ, "ಒಟ್ಟಿಗೆ ನಾವು ಸ್ಪಷ್ಟವಾಗಿ ಕನ್ನಡಿಗರಿಗೆ ತಿಳಿಸುವದೇನೆಂದರೆ — ಅಗಡಿಯ ಚಂದ್ರಿಕೆಯು ನಮ್ಮ ಚಂದ್ರಿಕೆಯಲ್ಲ. ನಮ್ಮ ಚಂದ್ರಿಕೆಯು 'ಸುರಸ ಗ್ರಂಥ ಮಾಲೆ'ಯ ರೂಪದಿಂದ ಪ್ರಕಟವಾಗುವಳೆಂಬುದನ್ನು ನೆನಪಿನಲ್ಲಿಡಬೇಕು"[3] ಎಂದು ವಾಚಕರಿಗೆ ತಿಳಿಸಿರುವರು.

ಗಳಗನಾಥರಿಲ್ಲದ 'ಸದ್ಬೋಧ ಚಂದ್ರಿಕೆ' ಅನೇಕ ವಾಚಕರಿಗೆ ನಿರಾಶೆಯನ್ನುಂಟು ಮಾಡಿತು. "ಚಂದ್ರಿಕೆಯು ನಿಮ್ಮ ಕೈಬಿಟ್ಟು ಪರದೇಶಿಯಾದಳು, ಆಕೆಯು ಕಲಾಹೀನಳಾದಳು, ಆಕೆಯ ಗೌರವವು ನಷ್ಟವಾಯಿತು, ನಿಮ್ಮ ಚಂದ್ರಿಕೆಯೆಂದು ತಿಳಿದು ನಾವು ಚಂದಾದಾರರಾಗಿ ಮೋಸ ಹೋದೆವು"[4] ಇತ್ಯಾದಿಯಾಗಿ ಗಳಗನಾಥರಿಗೆ ಹಲವರು ಪತ್ರಗಳನ್ನು ಬರೆದು ಗಳಗನಾಥರ ಬಗ್ಗೆ ತಮ್ಮಲ್ಲಿದ್ದ ಅಭಿಮಾನವನ್ನು ವ್ಯಕ್ತಪಡಿಸಿದರು. ಅದರಂತೆ 'ಚಂದ್ರಿಕೆ'ಯ ಚಂದಾದಾರರಲ್ಲಿ ಹಲವರು ಅದನ್ನು ನಿಲ್ಲಿಸಿಬಿಟ್ಟರು. ಈ ಮಾತನ್ನು ಮುಂದೆ 'ಚಂದ್ರಿಕೆ'ಯ ಸಂಪಾದಕೀಯವೂ ಸೂಚಿಸುತ್ತದೆ.

"ವಾಚಕರೇ, ಚಂದ್ರಿಕೆಯ ಆಫೀಸಿನಿಂದ ಕಳಿಸಲ್ಪಟ್ಟ ರಿಪ್ಲಾಯ ಕಾರ್ಡಿಗೆ ಉತ್ತರ ಬರೆದು ತಾವು ಈ ವರ್ಷದ ಚಂದ್ರಿಕೆಯ ಚಂದಾದಾರರಾಗುವಿರಷ್ಟೇ ? ಆದರೆ ನಿಮ್ಮಂತೆ ನಿಮ್ಮೂರ, ನಮ್ಮ ಮೊದಲಿನ ವರ್ಗಣಿದಾರರಿಗೂ ಸದರಿ ರಿಪ್ಲಾಯ ಕಾರ್ಡಿನ ಮೂಲಕ ವಿನಂತಿ ಮಾಡಿಕೊಂಡಿದ್ದೆವು. ಯಾವ ಕಾರಣದಿಂದಲೋ ಅವರು ಚಂದ್ರಿಕೆಗೆ ತಮ್ಮ ಉತ್ತರವನ್ನು ಇನ್ನೂ ದಯಪಾಲಿಸಿಲ್ಲ; ಆದ್ದರಿಂದ ಈಗ ನಾವು ತಮಗೆ ವಿನಂತಿ ಮಾಡಿಕೊಳ್ಳುವದೇನೆಂದರೆ, ಸದರಿ ಕಾರ್ಡ ಮುಟ್ಟದ ತಮ್ಮೂರ ಜನರಿಗೂ, ಮುಟ್ಟದೆ ಇದ್ದ ಹಳೆ ಚಂದಾದಾರರಿಗೂ, ಚಂದ್ರಿಕೆಯ ಧ್ಯೇಯ ಹಾಗೂ ಈಗಿನ ಸುಸ್ಥಿತಿಯನ್ನು ತಿಳಿಸಿ, ಪ್ರೋತ್ಸಾಹಿಸಿ ಅವರಿಂದ ಚಂದ್ರಿಕೆಗೆ ಆರ್ಡರ ಕಳಿಸಬೇಕು; ಅಲ್ಲದೆ ಪ್ರಯತ್ನಪೂರ್ವಕವಾಗಿ ಕೂಡಿಸಿದ ಹೊಸ ಚಂದಾದಾರರಿಂದ ಆರ್ಡರ ಕಳಿಸಿ ಶ್ರೀ ಶೇಷಾಚಲ ಸದ್ಗುರುವಿನ ಸಂಸ್ಥೆಗೆ ಸಹಾಯ ಮಾಡಿದ ಶ್ರೇಯಸ್ಸಿಗೆ ಭಾಗೀದಾರರಾಗಬೇಕು."[5]

---

1. ದುರ್ದೈವದಿಂದ ಆ ಸಂಚಿಕೆ ಈಗ ಲಭ್ಯವಾಗಿಲ್ಲ.
2. ಮರಾಠರ ಅಭ್ಯುದಯ–ಪ್ರಸ್ತಾವನೆ, ಪುಟ 3
3. ಅದೇ, ಪುಟ 2
4. ಅದೇ, ಪುಟ 2
5. ಸದ್ಬೋಧ ಚಂದ್ರಿಕೆ, ಮೇ 1918ರ ಸಂಪಾದಕೀಯ

ಸಂಪಾದಕರ ಈ ವಿನಂತಿಯಿಂದ ಗಳಗನಾಥರ ಅನುಪಸ್ಥಿತಿಯ ಪರಿಣಾಮದ ಕಲ್ಪನೆ ಬರುವಂತಿದೆ.

ಗಳಗನಾಥರು ಅಗಡಿಯನ್ನು ಬಿಟ್ಟು ಬಂದಿದ್ದರೂ ಅವರ ಗುರುಭಕ್ತಿ ಮಾತ್ರ ಅಖಂಡವಾಗಿದ್ದಿತು. ತಮ್ಮ ಹೊಸ ಪತ್ರಿಕೆಗೆ 'ಸದ್ಗುರು' ಎಂದು ಹೆಸರಿಟ್ಟಂತೆ, ಶೇಷಾಚಲ ಸ್ವಾಮಿಗಳನ್ನು ನೆನೆದೇ ಅವರು ಹಾವೇರಿಯಲ್ಲಿ ಆರಂಭಿಸಿದ ಪಾಠಶಾಲೆಗೆ 'ಶ್ರೀ ಶೇಷಾಚಲ ಸಂಸ್ಕೃತ ಪಾಠಶಾಲಾ' ಎಂದು ಹೆಸರಿಟ್ಟರು. ಗಳಗನಾಥರು 1915ರಲ್ಲಿ ಬರೆದ 'ನಿರ್ಯಾಣ ಮಹೋತ್ಸವ'ದಲ್ಲಿ ಶೇಷಸದ್ಗುರುಗಳ ಚರಿತ್ರೆ, ಮಹಿಮೆಗಳೇ ಪ್ರಧಾನವಾಗಿವೆ. ಮುಂದೆ ಅವರು ತಮ್ಮ ಮಾಸಪತ್ರಿಕೆಯಲ್ಲಿ ಮತ್ತೆ 'ಸದ್ಗುರು' ಎಂಬ ತಲೆಬರಹದಿಂದ ಶೇಷಾಚಲ ಸ್ವಾಮಿಗಳ ಮಹಾತ್ಮ್ಯವನ್ನು ಲೇಖನಮಾಲೆಯಾಗಿ ಆರಂಭಿಸಿದರಲ್ಲದೆ, ಪ್ರತಿ ತಿಂಗಳೂ ಪತ್ರಿಕೆಯಲ್ಲಿ 'ಸದ್ಗುರು ಸೂಕ್ತಿಮಾಲೆ'ಯನ್ನು ಕೊಡತೊಡಗಿದರು. ಒಟ್ಟಿನಲ್ಲಿ ತಮ್ಮ ಜೀವನವೆಲ್ಲವೂ ಸದ್ಗುರುವಿನ ಪ್ರಭಾವದಿಂದಲೇ ಪೋಷಿತವಾಯಿತೆಂದು ನಿಜವಾಗಿಯೂ ಅವರು ನಂಬಿದ್ದರೆಂಬಲ್ಲಿ ಯಾವ ಸಂದೇಹವಿಲ್ಲ.

ಅಗಡಿಯ ಶೇಷಾಚಲ ಸ್ವಾಮಿಗಳು ಗಳಗನಾಥರಿಗೆ ಆಧ್ಯಾತ್ಮಿಕ ಗುರುಗಳಾಗಿ ಅನುಗ್ರಹಿಸಿದರೆ, ಲೌಕಿಕಗುರುಗಳಾಗಿಯೂ ಅನೇಕ ಮಹನೀಯರು ಅವರನ್ನು ಹರಸಿದ್ದಾರೆ. ಗಳಗನಾಥರು ಅಂಥವರನ್ನು ಅತ್ಯಂತ ಕೃತಜ್ಞತೆಯಿಂದ ನೆನೆದೂ ಇರುವರು. ಇವರಲ್ಲಿ ಧಾರವಾಡದ ಶ್ರೀ ರಾ. ಹ. ದೇಶಪಾಂಡೆಯವರು ಗಳಗನಾಥರಿಗೆ ಟ್ರೇನಿಂಗ ಕಾಲೇಜಿನಲ್ಲಿ ಇತಿಹಾಸದ ಶಿಕ್ಷಕರಾಗಿದ್ದರಲ್ಲದೆ, ಗಳಗನಾಥರಲ್ಲಿ ಕನ್ನಡಾಭಿಮಾನವನ್ನು ಜಾಗೃತ ಮಾಡಿ, ಕನ್ನಡದಲ್ಲಿ ಬರೆಯುವಂತೆ ಪ್ರೋತ್ಸಾಹಿಸಿದರು. ಗಳಗನಾಥರ ಪ್ರಥಮ ಕಾದಂಬರಿ 'ಪದ್ಮನಯನೆ'ಯ ಹಸ್ತಪ್ರತಿಯನ್ನು ರಾ. ಹ. ದೇಶಪಾಂಡೆ, ವೆಂಕಟರಂಗೋ ಕಟ್ಟಿ, ಧೋಂಡೋ ನರಸಿಂಹ ಮುಳಬಾಗಲ ಅವರು ಓದಿ ಪ್ರೋತ್ಸಾಹಿಸಿದ್ದರು. 'ಪದ್ಮನಯನೆ'ಯ ಸೃಷ್ಟಿಗೆ ಪ್ರೇರಕರಾದ ದೇಶಪಾಂಡೆಯವರನ್ನು ಗಳಗನಾಥರು ಆ ಕಾದಂಬರಿಯ ಮುನ್ನುಡಿಯಲ್ಲಿ "ಪ್ರಿಯ ವಾಚಕರೆ, ಪದ್ಧತಿಯಂತೆ ಪ್ರಸ್ತಾವನೆಯ ಸಂಬಂಧವಾದ ನಾಲ್ಕು ಮಾತುಗಳನ್ನು ಬರೆಯುವ ಮೊದಲು, ಪಾರಿತೋಷಕದ ಆಸೆಯನ್ನು ತೋರಿಸಿ, ಈ ಕಾದಂಬರಿಯನ್ನು ಬರೆಯಲು ಹಚ್ಚಿದ ಕರ್ನಾಟಕ ವಿದ್ಯಾವರ್ಧಕ ಸಂಘದ ಉಪಕಾರವನ್ನೂ, ಇದನ್ನು ಬರೆಯುವ ವಿಷಯವಾಗಿ ಯೋಗ್ಯ ಉಪದೇಶ ಮಾಡಿದ ಗುರುವರ್ಯ ರಾವಸಾಹೇಬ ರಾಮಚಂದ್ರರಾವ ದೇಶಪಾಂಡೆಯವರ ಉಪಕಾರವನ್ನು ಸ್ಮರಿಸದೆ ಇರಲಾರೆನು" ಎಂದು ನುಡಿದಿರುವರು. ಅದರಂತೆ ಮುಂದೆ 'ಸದ್ಬೋಧ ಚಂದ್ರಿಕೆ'ಯಲ್ಲಿ ಮೊದಲು ಪ್ರಕಟವಾಗಿ ಅನಂತರ ಗ್ರಂಥರೂಪದಲ್ಲಿ ಬಂದ ತಮ್ಮ 'ಮೃಣಾಲಿನಿ'ಯನ್ನು ತಮ್ಮ ಗುರುಗಳೂ, ಆಗಿನ ಟ್ರೇನಿಂಗ ಕಾಲೇಜಿನ ಪ್ರಿನ್ಸಿಪಾಲರೂ ಆದ ರೊದ್ದ ಶ್ರೀನಿವಾಸರಾಯರಿಗೆ ಅರ್ಪಣೆ ಮಾಡಿರುವರು.

ಹೀಗೆ ಅನೇಕ ಮಹನೀಯರು ಗಳಗನಾಥರಿಗೆ ಗುರುಸ್ಥಾನದಲ್ಲಿದ್ದು ಸಹಾಯ–ಸಹಕಾರ–ಮಾರ್ಗದರ್ಶನಗಳನ್ನಿತ್ತರು. ಅವರೆಲ್ಲರ ಬಗ್ಗೆಯೂ ಗಳಗನಾಥರು ಭಕ್ತಿ ಮತ್ತು ಕೃತಜ್ಞತಾಭಾವಗಳನ್ನು ಹೊಂದಿದ್ದರು. ಇಂಥ ಗುರುಗಳಲ್ಲಿ ರಾವಜೀರಾವ ಕರಂದೀಕರರಂತೂ ಗಳಗನಾಥರ ಜೀವನದಲ್ಲಿ ಹೆಚ್ಚಿನ ಸಂಬಂಧವನ್ನು ಹೊಂದಿದವರಾಗಿದ್ದರು. ಅವರು

ಗಳಗನಾಥರಿಗೆ ಅಕ್ಷರಶಃ ತನು-ಮನ-ಧನಗಳಿಂದ ಸಹಾಯ ಮಾಡಿದರು. ಗಳಗನಾಥರು ಶಿಕ್ಷಕರಾಗಿ, ಶಿಕ್ಷಣಕ್ಕೆ ಸಂಬಂಧಿಸಿದ ಕೆಲವು ಪುಸ್ತಕಗಳನ್ನು ಬರೆಯುತ್ತಿರುವುದನ್ನು ಕಂಡು ಸಂತೋಷ ಪಟ್ಟ ಕರಂದೀಕರ ಅವರು ತಮ್ಮ ಪ್ರಿಯ ಶಿಷ್ಯನನ್ನು ಹೊಗಳಿ ಪ್ರೋತ್ಸಾಹಿಸಿದ್ದರು. ಅವರನ್ನು ಕುರಿತು "ನನ್ನ ಈ ತೇಜಸ್ವಿಗಳಾದ ಲೌಕಿಕ ಗುರುವರ್ಯರ ಸಹವಾಸವೂ, ಅವರ ಪ್ರಸನ್ನ ವಾಣಿಯ ಅಭಿಪ್ರಾಯವೂ ಈಗಲೂ ನನಗೆ ಸಂಜೀವನ ಮಂತ್ರಗಳಾಗಿ ನನ್ನಲ್ಲಿ ಕಾರ್ಯೋತ್ಸಾಹವನ್ನುಂಟು ಮಾಡುತ್ತಿರುವವು!"[1] ಎಂದು ಗಳಗನಾಥರು ಕೃತಜ್ಞತೆಯಿಂದ ನೆನೆದಿರುವರು.

ಶ್ರೀ ಕರಂದೀಕರರು ಗಳಗನಾಥರ ಬರವಣಿಗೆಗೆ ಪ್ರೇರಣೆಯನ್ನು ನೀಡಿ, ಬರೆಯಲು ಸ್ಫೂರ್ತಿದಾಯಕರೂ ಆದರು. ಗಳಗನಾಥರ ಗುರುಭಕ್ತಿಯೂ ಅನುಪಮವಾದುದು. "ನಮ್ಮ ಗುರುವರ್ಯರಾದ ರಾವಜೀರಾವ ಕರಂದೀಕರ, ಆಯ್.ಸಿ. ಓ. ಎ. ಇನಸ್ಪೆಕ್ಟರ ದ.ಭಾ. ಇವರ ಉತ್ತೇಜನಪರವಾದ ಸ್ಫೂರ್ತಿದಾಯಕ ಬೋಧದ ಯೋಗವು ಒದಗದಿದ್ದರೆ, ಈ ಕಾದಂಬರಿಯು ಈ ಸ್ಥಿತಿಯಲ್ಲಿ ಮುಗಿಯುತ್ತಿತ್ತೆಂದು ಹೇಳಲಿಕ್ಕಾಗುವದಿಲ್ಲ. ಮಿದುಳಿನ ಕ್ಷೀಣತೆಯ ವಿಕಾರವುಳ್ಳ ನನ್ನನ್ನು, ಎರಡು ತಿಂಗಳು ಮನೆಯಲ್ಲಿಟ್ಟುಕೊಂಡು ನಮ್ಮ ಪೂಜ್ಯ ಗುರುಗಳು ಈ ಕಾದಂಬರಿಯನ್ನು ಬರೆಸಿರುತ್ತಾರೆ. ಅವರ ಮನೆಯಲ್ಲಿ ಬರೆದಿರುವ ಕಡೆಯ ಹತ್ತು ಪ್ರಕರಣಗಳನ್ನು ಮೊದಲಿನ ಆರು ಪ್ರಕರಣಗಳಿಗೆ ಹೊಂದಿಸಿ ನೋಡಿದರೆ, ನಮ್ಮ ಗುರುಗಳ ನಿಕಟ ಸಹವಾಸದ ಯೋಗ್ಯತೆಯು ವಾಚಕರಿಗೆ ಗೊತ್ತಾಗದೆ ಇರದು! ದೇಶಕಲ್ಯಾಣಕ್ಕಾಗಿ ಲಕ್ಷಾಂತರ ರೂಪಾಯಿಗಳನ್ನು ಕೃಷ್ಣಾರ್ಪಣ ಬುದ್ಧಿಯಿಂದ ಕೊಟ್ಟು, ಕರ್ನಾಟಕಕ್ಕೆ ಅಲಂಕಾರಪ್ರಾಯರಾಗಿರುವ ಈ ಘನವಂತರ ಉಪಕೃತಿಯನ್ನು ನನ್ನಂಥ ಕ್ಷುದ್ರನು ಏನೆಂದು ಸ್ಮರಿಸಲಿ? ಈ ಪುಣ್ಯಾತ್ಮರಿಗೂ, ಇವರ ಪುಣ್ಯಾರ್ಧಭಾಗಿಗಳಾದ ತೀ. ಕುಂ. ಸೌ. ಮಾತೃಶ್ರೀ ರಾಧಾಬಾಯಿ ಸಾಹೇಬರವರಿಗೂ ಶ್ರೀ ಸದ್ಗುರುವು ದೀರ್ಘಾಯುವನ್ನೀಯಲೆಂದು"[2] ಎಂದು ಗಳಗನಾಥರು ಪ್ರಾರ್ಥಿಸುವರು. ಮುಂದೆ ಗುರುಗಳಾದ ಕರಂದೀಕರ ಸಾಹೇಬರು ಸ್ವರ್ಗಸ್ಥರಾದ ಮೇಲೆ ಕೂಡ ಅವರು ತಮ್ಮ ಗುರುಪತ್ನಿಯನ್ನು ಅದೇ ಭಕ್ತಿಯಿಂದ ಕಂಡರು. ಅವರೂ ಕೂಡ ಗಳಗನಾಥರನ್ನು ಅದೇ ವಾತ್ಸಲ್ಯದಿಂದ ಕಂಡರು. 1929 ರಲ್ಲಿ ತಮ್ಮ ಷಷ್ಟ್ಯಬ್ದಿ ಶಾಂತಿಗೆ ಬಂದು ತಮ್ಮನ್ನು ಆಶೀರ್ವದಿಸಿದ ಗುರುಪತ್ನಿಯನ್ನು ಗಳಗನಾಥರು "ಈ ಮಂಗಲ ಪ್ರಸಂಗದಲ್ಲಿ ನನ್ನ ಸರ್ವಾಧಾರರಾದ ಶ್ರೀಗುರುಪತ್ನಿ ತೀ. ಗಂ. ಭಾ. ಮಾತೃಶ್ರೀ ರಾಧಾಬಾಯಿ ಕರಂದೀಕರ ಬಾಯಿಸಾಹೇಬರು ಸಪರಿವಾರ ಬಂದು ನನ್ನನ್ನು ಆಶೀರ್ವದಿಸಲಿಕ್ಕೆ ಮರೆಯಲಿಲ್ಲ."[3] ಎಂದು ತುಂಬು ಹೃದಯದಿಂದ ನೆನೆದಿರುವರು. ಅದರಂತೆ ತಮ್ಮ 'ರಾಮಾಯಣಾಮೃತ'ವನ್ನು ಶ್ರೀಮತಿ ಕರಂದೀಕರರಿಗೆ ಅರ್ಪಿಸುತ್ತ "ಈ ಪವಿತ್ರ ಧಾರ್ಮಿಕ ಗ್ರಂಥವನ್ನು ಅವರ ಧಾರ್ಮಿಕ ವೃತ್ತಿಯ ಸ್ಮಾರಕವೆಂದು ಅವರಿಗೆ ಕಾಣಿಕೆಯಾಗಿ ವಿನಯದಿಂದ ಅರ್ಪಿಸಿರುವೆನು." ಎಂದಿರುವರಲ್ಲದೆ ಶ್ರೀ ಸದ್ಗುರುವು ಈ ನಮ್ಮ ಗುರುಮನೆತನದ ಉತ್ತರೋತ್ತರ ಕಲ್ಯಾಣ ಮಾಡಲೆಂದು ಅನನ್ಯ ಭಾವದಿಂದ"[4] ಪ್ರಾರ್ಥಿಸಿರುವರು.

---

1. ಗಳಗನಾಥ : ಸದ್ಗುರು ಪ್ರಭಾವ, ಪುಟ 7, 8
2. ಗಳಗನಾಥ : ಕುಮುದಿನಿ, ಪ್ರಸ್ತಾವನೆ, ಪುಟ 4
3. ಗಳಗನಾಥ. ಮಹಾಭಾರತಾಮೃತ, ಆದಿಪರ್ವ, ಪ್ರಸ್ತಾವನೆ, ಪುಟ 31
4. ಗಳಗನಾಥ : ಶ್ರೀ ರಾಮಾಯಣಾಮೃತ, ಪ್ರಸ್ತಾವನೆ.

ಅದರಂತೆ ಗಳಗನಾಥರು ತಮ್ಮ ಅನೇಕ ಗುರುಗಳಿಗೆ ತಮ್ಮ ಗ್ರಂಥಗಳನ್ನು ಭಕ್ತಿಯಿಂದ ಅರ್ಪಿಸಿರುವರು. ಉದಾಹರಣೆಗಾಗಿ 'ಗಿರಿಜಾಕಲ್ಯಾಣ ಸಾರ '(1912)ವು ಬಿಷ್ಟೋ ಶಂಕರ ಹುಲಗೂರ, ಸ್ಕೂಲ ಮಾಸ್ತರ ಹೊಸರಿತ್ತಿ ಇವರಿಗೆ "ಮುಖ್ಯವಾಗಿ ಅವರ ನಿರ್ವ್ಯಸನ ಸ್ಥಿತಿಯ ಅಭಿನಂದನವೆಂದು ಕೃತಜ್ಞತೆಯಿಂದ ಭಕ್ತಿಪೂರ್ವಕವಾಗಿ ಅರ್ಪಿಸಲ್ಪಟ್ಟಿದೆ". 'ದಾಂಪತ್ಯ' (1912) ವೆಂಬ ಗ್ರಂಥವು "ರಾ. ಸಾ. ವಿನಾಯಕ ಬಾಬಾಜಿ ಜೋಸಿ, ಬಿ. ಎ. ಪ್ರಿನ್ಸಿಪಾಲ, ಟ್ರೇನಿಂಗ ಕಾಲೇಜ ಧಾರವಾಡ ಈ ಮಹನೀಯರಿಗೆ ಅವರ ವಿದ್ವತ್ತೆ, ಸರಳತನ, ಸೌಜನ್ಯ, ಉದ್ಯೋಗ ತತ್ಪರತೆ ಮುಂತಾದವುಗಳ ಅಭಿನಂದನಕ್ಕಾಗಿ ಅರ್ಪಿಸಲ್ಪಟ್ಟಿದೆ."

ಹೀಗೆ ನೇರವಾಗಿ ಗುರುಗಳಾದವರನ್ನು ಸ್ಮರಿಸಿದ್ದಲ್ಲದೆ ಗಳಗನಾಥರು ಗುರುಸಮಾನರಾದ ಅನೇಕರನ್ನು ಕೃತಜ್ಞತೆಯಿಂದ ನೆನೆದಿರುವರು. ತಮ್ಮ 'ಸದ್ಗುರು ಪ್ರಭಾವ' (1928)ದಲ್ಲಿ 'ಬೆಂಗಳೂರ ಗುಣೌದಾರ್ಯ' ಎಂಬ ಒಂದು ಪ್ರಕರಣದಲ್ಲಿ ತಾವು ಅಲ್ಲಿ ಕಂಡ ಅನೇಕ ಮಹನೀಯರ ಬಗ್ಗೆ ಒಳ್ಳೆಯ ಮಾತುಗಳನ್ನು ಅತಿ ವಿನಯದಿಂದ ನುಡಿದಿರುವರು. ಟಿ. ಎಸ್. ವೆಂಕಣ್ಣಯ್ಯನವರು ಕೂಡ ಅಗಡಿಯ ಗುರುಗಳ ಭಕ್ತರಾಗಿದ್ದರು. ಅವರನ್ನು ಗಳಗನಾಥರು 'ಗುರು ಬಂಧು' ವೆಂದೂ 'ಅನಿಮಿತ್ತ ಬಾಂಧವ'ರೆಂದೂ ಕರೆದಿರುವರು. ವೆಂಕಣ್ಣನವರು ಮೊದಲು ಧಾರವಾಡದ ಮಿಶನ್‌ಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದು, ಆಗ (1928) ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದರು. ಅವರು ಗಳಗನಾಥರನ್ನು ತುಂಬ ಸ್ನೇಹದಿಂದಲೇ ಕಂಡರು. ಅದಕ್ಕೆ "ಈಗಿನ ತಮ್ಮ ಉತ್ಕರ್ಷದ ಸ್ಥಿತಿಯಲ್ಲಿಯೂ ನನ್ನಂತಹ ಬಡವನೊಡನೆ ಒಂದೇ ಪ್ರೇಮಲ ವೃತ್ತಿಯಿಂದ ನಡೆದುಕೊಳ್ಳುವದನ್ನು ನೋಡಿ, ನನ್ನ ಮನೋವೃತ್ತಿಗಳು ಉನ್ನತವಾದವು!"[1] ಎಂದು ಗಳಗನಾಥರು ಉದ್ಗಾರ ತೆಗೆದಿರುವರು.

ಶ್ರೀಯುತರುಗಳಾದ ಬೆಳ್ಳಾವೆ ವೆಂಕಟನಾರಣಪ್ಪನವರು, ಹೊಸಕೆರೆ ಚಿದಂಬರಯ್ಯ ನವರು, ಡಿ. ವಿ. ಗುಂಡಪ್ಪನವರು, ಎ. ಆರ್. ಕೃಷ್ಣಶಾಸ್ತ್ರಿಗಳು, ದೇವುಡು ನರಸಿಂಹ ಶಾಸ್ತ್ರಿ ಗಳು, ಬಿ. ಎಂ. ಶ್ರೀಕಂಠಯ್ಯನವರು, ಡಿ. ಕೆ. ಭಾರದ್ವಾಜರು, ಎಸ್. ಗರಲಪುರೀ ಶಾಸ್ತ್ರಿಗಳು— ಹೀಗೆ ಅನೇಕರನ್ನು ಗಳಗನಾಥರು 1928ರಲ್ಲಿ ಬೆಂಗಳೂರಿನಲ್ಲಿ ಕಂಡರು. ಪ್ರತಿಯೊಬ್ಬರೂ ಅವರನ್ನು ಆದರದಿಂದ ಬರಮಾಡಿಕೊಂಡರು; ಗೌರವಾದರಗಳನ್ನು ಸೂಚಿಸಿದರು: ಶಕ್ಯವಿದ್ದ ಸಹಾಯವನ್ನು ಮಾಡಿದರು. ಇವರಲ್ಲಿ ಹಲವರು ಗಳಗನಾಥರಿಗಿಂತ ತೀರ ಚಿಕ್ಕವರು; ಆದರೂ ವಿದ್ವಾಂಸರಾದ ಇವರನ್ನೆಲ್ಲ ಗಳಗನಾಥರು ತುಂಬ ಭಕ್ತಿ ವಿಶ್ವಾಸ ಗಳಿಂದಲೇ ಕಂಡರು. ಇವರಲ್ಲಿ ಕೆಲವರಿಂದ ತಮಗೆ ಶ್ರೇಷ್ಠವಾದ ಗ್ರಂಥಗಳನ್ನು ರಚಿಸಬೇಕೆಂಬ ಹಂಬಲವುಂಟಾಯಿತೆಂದೂ ಅವರು ಬರೆದಿರುವರು. ಕೊನೆಯಲ್ಲಿ "ಈ ವಿದ್ವತ್ಸಮಾಗಮದ ವೈಪುಲ್ಯಕ್ಕಾಗಿಯೇ ನನಗೆ ಬೆಂಗಳೂರನ್ನು ಅರ್ಥಾತ್, ಆ ವಿದ್ವಜ್ಜನರ ಸೌಜನ್ಯವನ್ನು ಬಿಟ್ಟು ಹೋಗುವ ಹಾಗೆ ಆಗಲೊಲ್ಲದು!"[2] ಎಂದು ಶ್ಲಾಘಿಸಿರುವರು.

ಗಳಗನಾಥರು ಬೆಳ್ಳಾವೆ ವೆಂಕಟನಾರಣಪ್ಪನವರನ್ನು ತಮ್ಮ ಗುರುಗಳೆಂದೇ ಸ್ಮರಿ-ಸಿರುವರು. "ವಂದ್ಯರಾದ ಈ ಮಹನೀಯ ಬೆಳ್ಳಾವೆ ವೆಂಕಟನಾರಣಪ್ಪನವರು, ಎಂ. ಎ. ಇವರು, ಬೆಂಗಳೂರಿನಲ್ಲಿ ನಾನು ಬಾಂದಿನವರ ಬೀದಿಯಲ್ಲಿ ಮಾರ್ಗವಿಡಿದು ಬರುತ್ತಿರುವಾಗ,

1. ಗಳಗನಾಥ: ಸದ್ಗುರು ಪ್ರಭಾವ, ಪುಟ 23

2. ಅದೇ, ಪುಟ 32

ಅಕಸ್ಮಾತ್ ನನ್ನ ಎದುರಿಗೆ ಬಂದರು. ಆಗ ನಾನು ಭಕ್ತಿಯಿಂದ ಇವರನ್ನು ನಮಸ್ಕರಿಸಿ ನಿಂತು ಕೊಂಡು, ನನ್ನ ಭಾರತಾಮೃತ ಲೇಖನದ ವಿಷಯವನ್ನು ಅರಿಕೆ ಮಾಡಿಕೊಳ್ಳಲು, ಅಚಿಂತ್ಯವಾಗಿ ಈ ಮಹನೀಯರ ಮುಖದಿಂದ ಆಗುವದು, ನಿಶ್ಚಯವಾಗಿ ಈ ಕಾರ್ಯವು ನಿಮ್ಮಿಂದ ಆಗುವದು; ಎಂಬ ಆಶೀರ್ವಚನವು ಹೊರಟಿತು ! .... ಇಂಥ ಗೌರವಶಾಲಿಗಳ ಕೃಪಾದೃಷ್ಟಿಗೆ ಪಾತ್ರನಾದ ಗಳಗನಾಥನು, ಮಹಾಭಾರತಾಮೃತವನ್ನು ಸರಹಸ್ಯವಾಗಿ ಮುಗಿಸದೆ ಹೇಗೆ ಯಿದ್ದಾನು ?"[1] ಇಂಥ ಮಾತುಗಳಿಂದ ಗಳಗನಾಥರು ಗುರುಗಳ ಆಶೀರ್ವಚನದಲ್ಲಿ ಎಷ್ಟು ವಿಶ್ವಾಸವಿಡುತ್ತಿದ್ದರೆಂಬುದು ವ್ಯಕ್ತವಾಗುತ್ತದೆ.

ಗುರುಹಿರಿಯರ ಆಶೀರ್ವಚನದಂತೆ, ದೈವೀಪ್ರೇರಣೆ ಮತ್ತು ಸತ್ಸಮಾಗಮದಲ್ಲಿಯೂ ಗಳಗನಾಥರಿಗೆ ಅತೀವ ಶ್ರದ್ಧೆ ಇದ್ದಿತು. ಅದನ್ನು ಅವರು ಸ್ಪಷ್ಟವಾಗಿ ಹೇಳಿಯೂ ಇರುವರು.[2] 1928ರಲ್ಲಿ ಪುಸ್ತಕಗಳ ವ್ಯಾಪಾರಕ್ಕೆಂದು ಬೆಂಗಳೂರಿಗೆ ತೆರಳಿದ್ದ ಗಳಗನಾಥರಿಗೆ ಅಲ್ಲಿಯ ಸಜ್ಜನ ಪಂಡಿತರ ಸಹವಾಸಭಾಗ್ಯವು ದೊರೆತು ಅವರು ಆನಂದ ತುಂದಿಲರಾದರು. ಅದರಿಂದ ಉತ್ಸಾಹಿತರಾದ ಅವರು ಪುಸ್ತಕ ಮಾರುವುದನ್ನು ತಮ್ಮ ಸಂಗಡಿಗರಿಗೆ ಮಾತ್ರ ಒಪ್ಪಿಸಿ, ತಾವು ಅಲ್ಲಿಯೇ ಗ್ರಂಥಲೇಖನದಲ್ಲಿ ತೊಡಗಿಬಿಟ್ಟರು. ಈ ಲೇಖನ ಸ್ಫೂರ್ತಿಯು ಸತ್ಸಮಾಗಮದ ಮಹಿಮೆಯೆಂದೇ ಅವರು ಬಗೆದರು. ಅದನ್ನೆಲ್ಲ ತಮ್ಮ 'ಸದ್ಗುರು ಪ್ರಭಾವ'ದಲ್ಲಿ ನಿವೇದಿಸಿರುವರು.

ಬೆಳ್ಳಾವೆಯವರನ್ನು ಕಂಡು, "ಮಾಡಿದರೆ ಇಂತಹ ಚಿಕಿತ್ಸಕರ ಮುಂದೆಯೇ ಲೇಖನ ವ್ಯವಸಾಯವನ್ನು ಮಾಡಬೇಕೆಂಬ ಉತ್ಸಾಹವು ನನ್ನಲ್ಲಿ ಹುಟ್ಟಿತು." ಮಾಸ್ತಿ ವೆಂಕಟೇಶ ಅಯ್ಯಂಗಾರರು ಗಳಗನಾಥರಿಗೆ, "ನೀವು ಕರ್ನಾಟಕದಲ್ಲಿ ಬಹಳ ಕೆಲಸ ಮಾಡಿದವರು, ನಮಗೆ ಹಿರಿಯರು" ಎಂದು ನುಡಿದಾಗ, ಗಳಗನಾಥರ ಹೃದಯವೂ ವಿಶಾಲವಾಯಿತು. "ಈ ವಾತ್ಸಲ್ಯ ಹೃದಯದ ಗುರು ಸ್ವರೂಪರು (ರಾಜಸಭಾಭೂಷಣ ಕರ್ಪೂರ ಶ್ರೀನಿವಾಸ ರಾಯರು) ತಮ್ಮ ವಾತ್ಸಲ್ಯದ ಮಾತುಗಳಿಂದ ನನ್ನ ಕಾರ್ಯೋತ್ಸಾಹವನ್ನು ಹೆಚ್ಚಿಸಿದರು." ನಿವೃತ್ತ ಶಿಕ್ಷಣಾಧಿಕಾರಿಗಳಾದ ಎಂ. ಶಾಮರಾಯರ ಮಾತುಗಳಿಂದ "ನಮಗೆ ಇನ್ನೂ ಒಳ್ಳೆಯ ಪುಸ್ತಕಗಳನ್ನು ಬರೆಯಬೇಕೆಂಬ ಉತ್ಸಾಹವು ಉನ್ನತವಾಯಿತು." "ಈ ಗುರುಸ್ವರೂಪರು (ಆರ್. ನರಸಿಂಹಾಚಾರ್ಯರು) ಆದರದಿಂದ ನನ್ನನ್ನು ಕುಳ್ಳಿರಿಸಿಕೊಂಡು ರಸವತ್ತಾದ ಪಂಚಫಲಗಳನ್ನು ನನಗೆ ಆಶೀರ್ವಾದರೂಪದಲ್ಲಿ ಕೊಟ್ಟು, ನನ್ನ ಹೃದಯವನ್ನು ರಸವತ್ತಾಗ ಮಾಡಿದರು! ಇಂತಹ ವಿಮರ್ಶಾ–ವಿಚಕ್ಷಣರಾದ ಪೂಜ್ಯರ ವಿಮರ್ಶೆಗೆ ತಕ್ಕ ಒಂದು ಪುಸ್ತಕವನ್ನಾದರೂ ಇನ್ನು ಬೇಗನೆ ಬರೆಯಬೇಕೆಂಬ ಉತ್ಸಾಹವು ನನ್ನಲ್ಲಿ ಉಂಟಾಯಿತು!" "ಇವರು (ಎ. ಆರ್. ಕೃಷ್ಣಶಾಸ್ತ್ರಿಗಳು) ಅತ್ಯಂತ ಋಜುಭಾವರು, ಸಹೃದಯರು, ಸಾತ್ವಿಕರು!.... ರಸಿಕ ವಿದ್ವಾಂಸರು, ಅನ್ಯರ ರುಕ್ಷಲೇಖನಗಳನ್ನು ರಸಯುಕ್ತವೆಂದು ಭಾವಿಸು ವಷ್ಟು ರಸಜ್ಞರು ಇರುವರೆಂಬುದರಲ್ಲಿ ಸಂಶಯವಿಲ್ಲ. ಒಟ್ಟಿಗೆ ಕನ್ನಡ ಲೇಖಕರಲ್ಲಿ ಇವರ ಮಮಕಾರ ಬಹಳ. ಇವರ ದರ್ಶನದಿಂದ ಪುನಃ ಸದ್ಗುರು ಮಾಸಪತ್ರಿಕೆಯನ್ನು ಬೇಗನೇ ಪ್ರಕಟಿಸಬೇಕೆಂಬ ಆತುರತೆಯು ನನ್ನಲ್ಲಿ ಉಂಟಾಯಿತು!" "ಇವರೊಬ್ಬರು (ಸರಕಾರಿ

1. ಗಳಗನಾಥ: ಮಹಾಭಾರತಾಮೃತ, ಸಭಾಪರ್ವ, ಪ್ರಸ್ತಾವನೆ, ಪುಟ 6
2. ಗಳಗನಾಥ: ಮಹಾಭಾರತಾಮೃತ, ಸಭಾಪರ್ವ; ಪ್ರಸ್ತಾವನೆ, ಪುಟ 5

ಮಾಧ್ಯಮಿಕ ಶಾಲೆಯ ಶಿಕ್ಷಕರಾದ ಎನ್. ಶೇಷಾದ್ರಿ ಶರ್ಮಾ) ಅತ್ಯಂತ ಚಿಕಿತ್ಸಕ ಬುದ್ಧಿಯ ಉತ್ಸಾಹಶಾಲಿಗಳಾದ ಗುಣಗ್ರಾಹಿ ತರುಣರು. ಇವರ ಸಂಗಡ ಸಲಿಗೆಯಿಂದ ಮಾಡಿದಷ್ಟು ಚರ್ಚೆಯನ್ನು ನಾನು ಯಾರ ಸಂಗಡವೂ ಮಾಡಿರುವದಿಲ್ಲ.... ಇವರ ಸಹವಾಸದಿಂದ ನನಗೆ ಹೊಸ ವಿಚಾರಗಳ ಪರಿಚಯವಾಯಿತು. ಇವರೊಡನೆ ಮಾಡುವ ಸಂಭಾಷಣೆಗಳಿಂದಾಗುವ ಲಾಭಕ್ಕಾಗಿ ನಾನು ಅತ್ಯಂತ ಕೃತಜ್ಞನಾಗಿರುವೆನು." "ಇಂಥವರ (ದೇವುಡು ನರಸಿಂಹಶಾಸ್ತ್ರೀ) ಸಹವಾಸವು ನನ್ನಂತಹ ಪಾಮರ ಲೇಖಕರಿಗೆ ಅತ್ಯಂತ ಉಪಕಾರವಾದದ್ದು"[1] ಎಂದು ಮುಂತಾಗಿ ನೆನೆದಿರುವರು.

ಬಿ. ಎಂ. ಶ್ರೀಕಂಠಯ್ಯನವರ ಬಗ್ಗೆಯಂತೂ ಗಳಗನಾಥರಲ್ಲಿ ಅಪಾರವಾದ ಗೌರವ ವಿದ್ದಿತು. ಬಿ. ಎಂ. ಶ್ರೀಕಂಠಯ್ಯನವರೂ ಕೂಡ ಗಳಗನಾಥರನ್ನು ಅದೇ ಭಾವದಿಂದ ಕಾಣುತ್ತಿದ್ದರು. ಒಮ್ಮೆ ಬಸವಜಯಂತಿಯ ಉತ್ಸವಕ್ಕೆ ಹಾವೇರಿಯ ಹಿರಿಯ ನಾಗರಿಕರಾದ ಶ್ರೀ ಚನ್ನಪ್ಪ ಚೌಸೆಟ್ಟಿಯವರು ಶ್ರೀಯುತರುಗಳಾದ ಟಿ. ಎಸ್. ವೆಂಕಣ್ಣಯ್ಯ, ಎಂ. ಆರ್. ಶ್ರೀನಿವಾಸಮೂರ್ತಿ ಮತ್ತು ಬಿ. ಎಂ. ಶ್ರೀಕಂಠಯ್ಯ ಅವರನ್ನು ಹಾವೇರಿಗೆ ಆಮಂತ್ರಿಸಿದ್ದರು. ಅವರು ತುಂಬಿದ ಸಭೆಯಲ್ಲಿ "ಪಾಂಡಿತ್ಯದ ಸಮುದ್ರವೇ ನಿಮ್ಮಲ್ಲಿರುವಾಗ ನಮ್ಮಂಥ ಹೊಳೆ-ಹಳ್ಳಗಳನ್ನು ಏಕೆ ಕರೆಸಿದಿರಿ?" ಎಂದು (ಗಳಗನಾಥರನ್ನು ಉದ್ದೇಶಿಸಿ) ಉದ್ಗಾರ ತೆಗೆದರು. ಮರುದಿನ ಗಳಗನಾಥರು ಅವರನ್ನೆಲ್ಲ ತಮ್ಮ ಮನೆಗೆ ಆಮಂತ್ರಿಸಿ ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಮುಂದೆ ತಾವು ಬರೆದು ಮುಗಿಸಿದ ಮಹಾಭಾರತದ ಹಸ್ತ ಪ್ರತಿಯನ್ನು ಇರಿಸಿ "ಇದನ್ನು ತಾವು ಮುಟ್ಟಿ ಆಶೀರ್ವದಿಸಿರಿ" ಎಂದು ಪ್ರಾರ್ಥಿಸಿದರು. ಆಗ ಶ್ರೀಕಂಠಯ್ಯನವರು ಮುಗ್ಧರಾಗಿ ಹೋದರು.[2]

ಸತ್ಸಂಗದಿಂದ, ಸದಾಶಯದಿಂದ ದೊರೆಯುವ ಫಲವೂ ಶ್ರೇಷ್ಠವೆಂದು ಗಳಗನಾಥರು ಬಗೆದಿದ್ದರು. ಜನರ ಔದಾರ್ಯವನ್ನು ಗುರುತಿಸಿ ಅದನ್ನು ಅಂತಃಕರಣಪೂರ್ವಕವಾಗಿ ಕೊಂಡಾಡುವಲ್ಲಿ, ಅವರ ಉಪಕಾರವನ್ನು ಸ್ಮರಿಸುವಲ್ಲಿ ಗಳಗನಾಥರ ಔದಾರ್ಯವೂ ವ್ಯಕ್ತವಾಗಿದೆ.

ಗಳಗನಾಥರು ಕೇವಲ ಅನುವಾದಕರಲ್ಲ. ಹಲವಾರು ಸ್ವತಂತ್ರ ಕೃತಿಗಳನ್ನೂ, ಸ್ವತಂತ್ರ ಕೃತಿಗಳೆಂಬಂಥ ಸೃಜನಶೀಲ ಭಾವಾನುವಾದಗಳನ್ನೂ ಅವರು ಬರೆದಿರುವರು. ಇಂಥ ಸಾಹಿತ್ಯ ರಚಿಸುವಾಗ ಅವರೂ ಸ್ಫೂರ್ತಿಯ ಆಶ್ರಯವನ್ನು ಪಡೆಯಬೇಕಾಗುತ್ತಿದ್ದಿತು. ಸತ್ಸಂಗದಿಂದ ತಮಗೆ ಸಾಹಿತ್ಯ ಸ್ಫೂರ್ತಿಯಾಗುತ್ತಿತ್ತೆಂದು ಅವರೇ ಹೇಳಿದ್ದಾರೆ. ಬೆಂಗಳೂರಿನಲ್ಲಿ ಅವರಿಗೆ ಅಂಥ ಪ್ರೋತ್ಸಾಹ ದೊರೆತಿತು. ಬೆಂಗಳೂರಿನ ನಾಲ್ಕು ತಿಂಗಳ ವಾಸ್ತವ್ಯದಲ್ಲಿ ಅವರು 'ರಾಣಿಮೃಣಾಲಿನಿ', 'ಮಹಾರಾಣಾ ರಾಜಸಿಂಹ' ಮತ್ತು 'ಧಾರ್ಮಿಕ-ತೇಜ' ಎಂಬ ಕಾದಂಬರಿಗಳನ್ನೂ. 'ಸದ್ಗುರು ಪ್ರಭಾವ', 'ಗೀತೆಯ ಶ್ರವಣಾಧಿಕಾರ' 'ಶ್ರೀ ವಿವೇಕಾನಂದರು ವೈದಿಕರಿಗೆ ಯಾರು', ಎಂಬ ಪ್ರಬಂಧಗಳನ್ನೂ ಬರೆದರು. "ಹೀಗೆ ನಾನು ಬೆಂಗಳೂರ ಪುಣ್ಯದಿಂದ ಶ್ರೀ ನಾಲ್ವಡಿ ಕೃಷ್ಣರಾಜರ್ಷಿಯ ಪುಣ್ಯಭೂಮಿಯಲ್ಲಿ ಒಟ್ಟಿಗೆ

1. ಈ ಎಲ್ಲ ಮಾತುಗಳೂ ಗಳಗನಾಥರ 'ಸದ್ಗುರು ಪ್ರಭಾವ'ದ 'ಬೆಂಗಳೂರಿನ ಗುಣೌದಾರ್ಯ' ಎಂಬ ಪ್ರಕರಣದಲ್ಲಿ ಬಂದಿವೆ.
2. ಕೃಷ್ಣಮೂರ್ತಿ ಕಿತ್ತೂರ: 'ಉದಾರ ಚರಿತ ಗಳಗನಾಥರು' ಕರ್ಮವೀರ ದಿ. 5-1-1969

896 ಪುಟದ ವಿಷಯವನ್ನು ನಾಲ್ಕು ತಿಂಗಳಲ್ಲಿ ಬರೆದ ಹಾಗಾಗಿರುವದು"[1] ಎಂದು ಅವರೇ ಸ್ಮರಿಸಿರುವರು.

1938ರಲ್ಲಿ ಗಳಗನಾಥರು ಶ್ರೀ ಶೇಷ ಸದ್ಗುರುನಾಥನ ಕೃಪೆಯಿಂದ 'ಸ್ವರಾಜ್ಯ ಸುಗಂಧ'ವೆಂಬ ಸ್ವತಂತ್ರವಾದ ಐತಿಹಾಸಿಕ ರಹಸ್ಯಪೂರ್ಣ ಬೋಧಪ್ರದ ಕಾದಂಬರಿಯನ್ನು ಪ್ರಕಟಿಸಿದರು. ಈ ಕಾದಂಬರಿಯ ಪ್ರಸ್ತಾವನೆಯಲ್ಲಿ ಅವರ ಲೇಖನ ಸ್ಫೂರ್ತಿಯ ಬಗ್ಗೆ ಬರೆದಿರುವ ಮಾತುಗಳು ಗಮನಾರ್ಹವಾಗಿವೆ. "ಧಾರವಾಡದ ಪ್ರಸಿದ್ಧ ವಕೀಲರಾದ ಮ. ರಾ. ರಾ. ಬಂಡೋಪಂತ ಜೋಗರ ಬಳಿಗೆ ಹೋದೆವು; ಆದರೆ ಅವರು ಮಾಡಿದ ಸಹಾಯವನ್ನು ಇಲ್ಲಿ ವಿವರಿಸಿ ಹೇಳುವದಕ್ಕಿಂತ ಬುದ್ಧಿಶಾಲಿಗಳಾದ ಆ ನಮ್ಮ ವಕೀಲರ ಬುದ್ಧಿ ಪ್ರಭಾವದ ಭವ್ಯ ಮಂದಿರದ ಅಂಗಳದಲ್ಲಿ ನಮಗೆ ಈ ಕಾದಂಬರಿಯ ಸಂಬಂಧದ ವಿಷಯದ ಉತ್ತಮ ಸ್ಫೂರ್ತಿಯಾದದ್ದನ್ನು ಉಲ್ಲೇಖಿಸುವದು ಹೆಚ್ಚು ಮಹತ್ವದ ಸಂಗತಿಯೆಂದು ನಾವು ತಿಳಿಯುವೆವು.... ಇಂತಹ ದೈವಶಾಲಿಗಳ ಮನೆಯಿಂದ ನಾವು ಹೊರಬೀಳುತ್ತಿರಲು, ಆಗ ನಾವು ಬರೆಯುತ್ತಿದ್ದ ಕಾದಂಬರಿಯೊಳಗಿನ 'ರಾಜನಿಷ್ಠೆಯ ವೈಭವ' ಎಂಬ 14ನೇ ಪ್ರಕರಣದ ವಿಷಯ ಉತ್ತಮ ಸ್ಫೂರ್ತಿಯಾಗಲು ಕೂಡಲೇ ನಾವು ಅವರ ಮನೆಯ ಹೊರಗಿನ ಅಂಗಳದಲ್ಲಿ ಹಾಕಿದ್ದ ಬೆಂಚಿನ ಮೇಲೆ ಕುಳಿತು ಬೆಳಗಿನ ಎಂಟು ಗಂಟೆಯ ಎಳೆಬಿಸಿಲು ಮೈಮೇಲೆ ಬಿದ್ದದ್ದನ್ನು ಲಕ್ಷಿಸದೆ, ಹತ್ತು ಹನ್ನೊಂದು ಗಂಟೆಯವರೆಗೆ ಬರೆದು ಆ ಪ್ರಕರಣವನ್ನು ಮುಗಿಸಿಬಿಟ್ಟೆವು. ಆಗ ನಮ್ಮಲ್ಲಿ ಬಂಡೋಪಂತರ ಸ್ಥಾನಮಹಿಮೆಯ ವಿಷಯದಲ್ಲಿ ಅತ್ಯಂತ ಕೃತಜ್ಞತೆಯುಂಟಾಯಿತು"[2] ಎಂದಿರುವರು.

ಶ್ರೀ ಬಾಪಟ ಅವರ ಅಂಗಳದಲ್ಲಿ ಸ್ಫೂರ್ತಿ ಬಂದು ಕಾದಂಬರಿಯ ಒಂದು ಪ್ರಕರಣವನ್ನು ಬರೆದ ವಿಷಯವನ್ನೂ ಅನಂತರ ಬಾಪಟರ ಜೊತೆ ನಡೆದ ಮಾತುಕತೆಗಳನ್ನೂ ತಿಳಿಸಿ, "ಇದನ್ನಿಲ್ಲಿ ಹೇಳುವ ಕಾರಣವಿಷ್ಟೇ, ನಾನು ಹೋಗುವಾಗ, ಬರುವಾಗ, ಸುಮ್ಮನೆ ಕುಳಿತಾಗ, ದೇವರ ಪೂಜೆ ಮಾಡುತ್ತಿರುವಾಗ, ಊಟಮಾಡುತ್ತಿರುವಾಗ, ಗೋಸೇವೆ ಮಾಡುತ್ತಿರುವಾಗ, ಬಹಿರ್ದೆಸೆಗೆ ಹೋಗಿರುವಾಗ ಈ 'ಸ್ವರಾಜ್ಯ ಸುಗಂಧ'ವೆಂಬ ವಿಷಯವೇ ನನ್ನ ಚಿಂತನದ ವಿಷಯವಾಗಿರಲು, ಅಂತರಾತ್ಮನ ಸ್ಥಳ ಕಾಲ, ಕಾರ್ಯಗಳ ಗೌರವದರ್ಶಿಗಳಾಗಿ ಆಗಾಗ್ಗೆ ಉಂಟಾಗಿರುವ ಸ್ಫೂರ್ತಿಗಳ ಪೋಣಿಕೆಯಿಂದ ಈ 'ಸ್ವರಾಜ್ಯ ಸುಗಂಧ'ವೆಂಬ ಕಾದಂಬರಿಯು ಆಗಿರುವದೆಂದು ವಾಚಕರು ತಿಳಿಯಬೇಕು"[3] ಎಂದು ವಾಚಕರಿಗೆ ನಿವೇದಿಸಿರುವರು. ಒಂದು ಕಾದಂಬರಿಯನ್ನು ಬರೆಯುವಾಗ ಅವರಿಗೆ ಸದಾ ಅದರದೇ ಧ್ಯಾನವಾಗಿರುತ್ತಿತ್ತೆಂದು ಅವರ ಮಗಳು ಸುಬ್ಬಕ್ಕನವರೂ ಹೇಳುವರು. ರಾತ್ರಿ ಮಲಗಿಕೊಂಡು ಮಧ್ಯರಾತ್ರಿ ಎಚ್ಚರವಾದಾಗ ಕೂಡ ಅವರು ಕಾದಂಬರಿಯ ಚಿಂತೆಯಲ್ಲಿಯೇ ಇರುತ್ತಿದ್ದರು. ಆಗ ಯಾವುದಾದರೂ ಒಂದು ಪ್ರಕರಣದ ತಲೆಬರಹ ಹೊಳೆದರೆ ಅದನ್ನು ತಲೆದಿಂಬಿನ ಹತ್ತಿರ ಖಡುವಿನ ಚೂರಿನಿಂದಲೋ, ಇದ್ದಲಿಯ ಚೂರಿನಿಂದಲೋ ಬರೆದು ಇಡುತ್ತಿದ್ದರಂತೆ.

---

1. ಗಳಗನಾಥ : ಸದ್ಗುರು ಪ್ರಭಾವ, ಪುಟ 21
2. ಗಳಗನಾಥ : ಸ್ವರಾಜ್ಯ ಸುಗಂಧ, ಪ್ರಸ್ತಾವನೆ. ಪುಟ 4, 5
3. ಅದೇ, ಪುಟ 5, 6

ಗಳಗನಾಥರ ದಿನಚರ್ಯೆಯ ಬಗ್ಗೆ ಅವರ ಹಿರಿಯ ಮಗಳು ಸುಬ್ಬಕ್ಕನವರು, "ಬೆಳಿಗ್ಗೆ ನಾಲ್ಕಕ್ಕೇ ಏಳುವದು, ರಾತ್ರಿ 9ಕ್ಕೆ ಮಾತ್ರ ಎಲ್ಲರೂ ಮಲಗಲೇ ಬೇಕು" ಎಂದು ಹೇಳುತ್ತ "ಗದ್ದಲವಿದ್ದರೆ ಅವರಿಗೆ ಬರೆಯಲಿಕ್ಕೇನೂ ತೊಂದರೆಯಾಗುತ್ತಿರಲಿಲ್ಲ. ಮಕ್ಕಳು ಮೈಮೇಲೆ ಬಿದ್ದರೂ ಬರೆಯುತ್ತಿದ್ದರು. ಮಕ್ಕಳ ಮೇಲೆ ಎಂದೂ ಸಿಟ್ಟಾಗುತ್ತಿರಲಿಲ್ಲ" ಎಂದು ಹೇಳುತ್ತಾರೆ. ಪ್ರತಿದಿನ ಮುಂಜಾನೆ ಮತ್ತು ಸಾಯಂಕಾಲ ಎರಡೂ ವೇಳೆ ನಿಯಮಿತವಾಗಿ ಬರೆಯುತ್ತಿದ್ದರೆಂದು ಅವರ ಮೊಮ್ಮಗನೂ ದತ್ತಕ ಮಗನೂ ಆದ ಬಿಷ್ಟಪ್ಪನವರು ಹೇಳುವರು.

ಶ್ರೀ ಕೆ. ಎಸ್. ದೇಶಪಾಂಡೆಯವರು ಗಳಗನಾಥರಿಗೂ ತಮ್ಮ ಮನೆತನಕ್ಕೂ ಇರುವ ಸಂಬಂಧವನ್ನು ಕುರಿತು ನೆನೆಯುತ್ತ "ಗಳಗನಾಥರು ನಮ್ಮಲ್ಲಿ ಬಂದಾಗ–ಅಂದರೆ ನಾನು ಹೈಸ್ಕೂಲು ಕಟ್ಟಿ ಏರುವಂತಾದಾಗ—ಅವರ ಉಪಚಾರದ ಹೊಣೆ ನನ್ನದಾಗಿ ಬಿಡುತ್ತಿತ್ತು. ನಾವಿಬ್ಬರೂ ಪಡಸಾಲೆಯಲ್ಲಿ ಅಕ್ಕಪಕ್ಕದಲ್ಲಿ ಮಲಗುತ್ತಿದ್ದೆವು. ಬೆಳಗಿನ ಜಾವ 5ಗಂಟೆಗೆ ಏಳುವದು ಅವರ ವಾಡಿಕೆಯಾಗಿತ್ತು. ತಮ್ಮ ಜೊತೆಗೆ ನನ್ನನ್ನೂ ಎಬ್ಬಿಸುತ್ತಿದ್ದರು. ಪ್ರಾತರ್ವಿಧಿಗಳನ್ನು ಪೂರೈಸಿ ಸ್ನಾನ, ಸಂಧ್ಯಾವಂದನೆ, ಗೀತಾಪಾರಾಯಣಗಳಾದ ಅನಂತರ ಅವರು ಗ್ರಂಥ ರಚನೆಗೆ ಕುಳಿತುಕೊಳ್ಳುತ್ತಿದ್ದರು. ಬೆಳಗಿನ 11–30ರ ವರೆಗೂ ಈ ಕಾರ್ಯಕ್ರಮ ದಿನವೂ ನಡೆಯುತ್ತಿತ್ತು"[1] ಎಂದು ಹೇಳಿರುವರು.

ಗಳಗನಾಥರ ಪಾಠಶಾಲೆಯಲ್ಲಿ ವಿದ್ಯಾರ್ಥಿಯಾಗಿದ್ದ ಹಾವೇರಿಯ ಶ್ರೀ ಗಣೇಶಭಟ್ಟ ಜೋಶಿಯವರು ಕೂಡ ಹೀಗೆಯೇ ತಿಳಿಸಿದರು. "ಮಾಸ್ತರರು ಬೆಳಗಿನ ನಾಲ್ಕು ಗಂಟೆಗೇ ಏಳುತ್ತಿದ್ದರು. ತಾವೇ ಗಂಟೆ ಬಾರಿಸಿ ವಿದ್ಯಾರ್ಥಿಗಳನ್ನು ಎಬ್ಬಿಸುತ್ತಿದ್ದರು. ಪ್ರಾತರ್ವಿಧಿಗಳನ್ನು ಮುಗಿಸಿ ಅವರೆಲ್ಲ ಅಭ್ಯಾಸಕ್ಕೆ ಕೂತರೆಂದರೆ ತಾವು ಬರೆಯುವ ಕಾರ್ಯದಲ್ಲಿ ತೊಡಗುತ್ತಿದ್ದರು. ಅಥವಾ ಏನಾದರೂ ಓದುತ್ತ ಕೂಡುತ್ತಿದ್ದರು." ಗಳಗನಾಥರು ತಮ್ಮ ಬರವಣಿಗೆಯಲ್ಲಿಯೂ ಕೂಡ ನಿಯಮಿತನವನ್ನು ಪಾಲಿಸುತ್ತಿದ್ದರು. ಆದ್ದರಿಂದಲೇ ಇಷ್ಟು ದೊಡ್ಡ ಗಾತ್ರದ ಸಾಹಿತ್ಯ ಅವರಿಂದ ನಿರ್ಮಾಣವಾಗಲು ಸಾಧ್ಯವಾಯಿತು.

ಹಾಗೆ ಬರೆದಾದ ಮೇಲೆ ಮನೆಯಲ್ಲಿದ್ದಾಗ ತಮ್ಮ ಮಕ್ಕಳಿಗೆ ಅದನ್ನು ಓದಿಯೂ ತೋರಿಸುತ್ತಿದ್ದರು. ಹೆಣ್ಣು ಮಕ್ಕಳ ಮುಂದೆ ಕೂಡ ಪ್ರಕಟವಾಗಿ ಓದಲಾರದ್ದನ್ನು ಅವರು ಎಂದೂ ಬರೆಯಲಿಲ್ಲ. ವೀರವತ್ತಾದ ಕಥಾಭಾಗವನ್ನು ಆಗಾಗ ತಮ್ಮ ಪಾಠಶಾಲೆಯ ತರುಣ ವಿದ್ಯಾರ್ಥಿಗಳ ಮುಂದೆ ಓದಿ ತೋರಿಸುತ್ತಿದ್ದರು. "ಮಧ್ಯಾಹ್ನದ ಹಾಗೂ ಇತರ ಬಿಡುವಿನ ವೇಳೆಯಲ್ಲಿ ತಾವು ಬರೆಯುತ್ತಿದ್ದ ರಸವತ್ತಾದ ಭಾಗಗಳನ್ನು ವಿದ್ಯಾರ್ಥಿಗಳಿಗೆ ಆಗೀಗ ಓದಿ ಹೇಳುವರು. ವಿಶೇಷತಃ ವೀರಾವೇಶದ ಪ್ರಸಂಗಗಳನ್ನು ಉಬ್ಬುಬ್ಬಿ ವರ್ಣಿಸಿದಾಗ, ಹುಡುಗರಲ್ಲಿ ಆವೇಶ ಉಕ್ಕಿ ಹರಿಯುತ್ತಿತ್ತು. ತಮ್ಮ ಲೇಖನದ ಪರಿಣಾಮ ಈ ರೀತಿಯಾದಾಗ ವಿಶಾಲ ಕನ್ನಡ ವಾಚಕರ ಮೇಲಾಗಬಹುದಾದ ಪರಿಣಾಮವನ್ನು ಊಹಿಸಿ ಕೃತಾರ್ಥ ಭಾವವನ್ನು ತಾಳುತ್ತಿದ್ದರು."[2]

1. ಹಾ. ಮಾ. ನಾಯಕ (ಸಂ): ಗಳಗನಾಥ (1970), ಪುಟ 19
2. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 53

ಅವರಂತೆ ಕರುಣರಸದ ಸನ್ನಿವೇಶಗಳನ್ನು ಚಿತ್ರಿಸುವಾಗ ಗಳಗನಾಥರೇ ಕಣ್ಣೀರು ಸುರಿಸುತ್ತಿದ್ದುದೂ ಉಂಟು. ಅದನ್ನು ಅವರ ಮಗಳು ಇಂದಿಗೂ ನೆನೆದು ಹೇಳುವರು. ತಮ್ಮ 'ಧರ್ಮರಹಸ್ಯ' ಕಾದಂಬರಿಯಲ್ಲಿಯ ಪಾತ್ರಗಳ ಬಗ್ಗೆ ಬರೆಯುತ್ತ "…. ಈ ಮೊದಲಾದ ನಿಕೋಚ್ಚ ಪಾತ್ರಗಳ ವಕ್ರ-ಸರಲ ಗತಿಗಳೂ, ಅನುದಾತ್ತ ಉದಾತ್ತ ಭಾವಗಳೂ ಎಷ್ಟು ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವವೆಂಬುದನ್ನು ಬರೆಯಲಾರೆವು. ಈ ಪುಸ್ತಕವನ್ನು ಬರೆಯಲುಪಕ್ರಮಿಸಿದಾಗ ಹಲವು ಸಾರೆ ಕಣ್ಣೀರುಗಳು ಉದುರಿರುವವು."[1] ಎಂದು ಗಳಗನಾಥರು ಸ್ವತಃ ಒಪ್ಪಿಕೊಂಡಿರುವರು.

ಕಾದಂಬರಿ ಬರೆಯುತ್ತಿರುವಾಗ ಪಾತ್ರಗಳು ಅವರಿಗೆ ನೈಜವಾಗಿಯೇ ಕಂಡವು. ತಮ್ಮ 'ಕುರುಕ್ಷೇತ್ರ' ಕಾದಂಬರಿಯಲ್ಲಿಯ ಪಾರ್ವತೀಬಾಯಿ ಮತ್ತು ಲಕ್ಷ್ಮೀಬಾಯಿ ಎಂಬೆರೆಡು ಪಾತ್ರಗಳಿಗುಂಟಾದ ದಾರುಣ ಸ್ಥಿತಿಯನ್ನು ಬಣ್ಣಿಸಿ, ಇದೊಂದು ಕಲ್ಪಿತ ಕಾದಂಬರಿಯಾಗಿದ್ದು ಇವರಿಬ್ಬರು ಕಲ್ಪಿತ ಸ್ತ್ರೀಯರಾಗಿದ್ದರೆ, ಇಂಥ ಸುಕುಮಾರಿಯರನ್ನು ಇಷ್ಟು ದೂರ ತಂದು ಈ ಪರಿಯ ಸಂಕಟಕ್ಕೆ ನಾವು ಎಂದೂ ಗುರಿ ಮಾಡುತ್ತಿರಲಿಲ್ಲ. ಅಷ್ಟು ಕಠಿಣ ಹೃದಯವು ನಮ್ಮದಲ್ಲವೆಂತಲೂ ವಾಚಕರಿಗೆ ಹೇಳಬಹುದು. ಹಿಂದಕ್ಕೆ ನಾವು 'ಕುಮುದಿನಿ'ಯಲ್ಲಿ ಚಿನ್ನ ಓಬಲನ ಕ್ರೂರತನವನ್ನು ವರ್ಣಿಸುವಾಗ ನಮ್ಮ ಕಣ್ಣೀರುಗಳುದುರಿದವು. ನಮ್ಮ ಮೈಸೂರ ಕಡೆಯ ಒಬ್ಬ ಸಹೃದಯ ಮಿತ್ರರು ಅದನ್ನು ಓದಿ ಮೂರ್ಛಿತರಾದರಂತೆ! ಆದರೆ ಮಾಡುವದೇನು? ನಡೆದದ್ದನ್ನು ನಡೆದ ಹಾಗೆ ವರ್ಣಿಸದಿದ್ದರೆ ನಿರ್ವಾಹವಿಲ್ಲ. ಪ್ರಸಂಗ ವಿಶೇಷದಲ್ಲಿ ಕಾದಂಬರಿ ಬಣ್ಣವೇರಿಸುವ ಭರದಲ್ಲಿ ಕೋಮಲ ಹೃದಯವೂ ಕಠಿಣವಾಗಬೇಕಾಗುವದು. ಪ್ರಸಂಗ ವಿಶೇಷದಲ್ಲಿ ಕಣ್ಣೀರು ಸುರಿಸುತ್ತಲೂ ಬರೆಯಬೇಕಾಗುತ್ತದೆ"[2] ಎಂದು ಗಳಗನಾಥರು ತಮ್ಮ ಹೃದಯವನ್ನು ತೆರೆದು ತೋರಿಸಿದರು. ಗಳಗನಾಥರ ಪ್ರೆಸ್ಸಿನಲ್ಲಿ ಕಂಪೋಜಿಟರ ಕೆಲಸ ಮಾಡುತ್ತಿದ್ದ ಹಾವೇರಿಯ ಶ್ರೀ ಸಿಂದಗಿ ಸಿದ್ದಪ್ಪ ಅವರು ಅದನ್ನು ಸ್ಮರಿಸುತ್ತ, "ಹಾಗಿದ್ದಾಗ ಮಾಸ್ತರರು ಬರೆದ ಪಾನುಗಳ ಮೇಲೆ ಅವರ ಕಣ್ಣೀರಿನ ಹನಿಗಳನ್ನು ನಾನು ಕಾಂಪೋಜ ಮಾಡುವಾಗ ಎಷ್ಟೋ ಸಾರಿ ಕಂಡೀನಿ" ಎಂದು ಹೇಳುತ್ತಾರೆ. ಭಾವನಾಜೀವಿಯಾದ ಲೇಖಕನಿಗೆ ಇದು ಬಹುಶಃ ಅನಿವಾರ್ಯವೆಂದೇ ತೋರುತ್ತದೆ.

ತಮಗೆ ಬರೆಯಲು ಸ್ಫೂರ್ತಿಯಿತ್ತವರನ್ನು ನೆನೆದಂತೆ, ಗಳಗನಾಥರು ತಮ್ಮ ಕೃತಿಗಳನ್ನು ಅನುವಾದಿಸಲು ಒಪ್ಪಿಗೆ ಕೊಟ್ಟು ಸಹಕರಿಸಿದ ಮಹನೀಯರ ಉಪಕಾರವನ್ನೂ ಸ್ಮರಿಸುವರು. ಶ್ರೀ ಹರಿ ನಾರಾಯಣ ಆಪಟೆಯವರ ಒಂದು ಕೃತಿಯನ್ನಂತೂ ಅವರು ನೇರವಾಗಿ ಭಾಷಾಂತರಿಸಿದರು. ಮುಂದೆ ಹಾಗೆ ಮಾಡದೆ ತಮ್ಮದೇ ಆದ ರೀತಿಯಲ್ಲಿ ಕಾದಂಬರಿಗಳನ್ನು ಅನುವಾದಿಸುವ ತಂತ್ರವನ್ನು ಗಳಗನಾಥರು ಕಂಡುಕೊಂಡರು. ಏನೇ ಆದರೂ ತಮಗೆ ಮೂಲಧನವನ್ನು ಒದಗಿಸಿದವರನ್ನು ಮರೆಯಲಿಲ್ಲ. "ಮ.ರಾ.ರಾ. ಆಪಟೆಯವರಿಂದ ನಮಗೂ. ಕನ್ನಡಿಗರಿಗೂ ಈಗ ಆಗಿದ್ದ ಹಾಗೂ ಮುಂದೆ ಆಗಬೇಕಾಗಿರುವ ಲಾಭವನ್ನು ಬರೆದು ತೋರಿಸಲವಶ್ಯವಿಲ್ಲ. ಓದಲಿಕ್ಕೆ ತಕ್ಕ ವಿಷಯಗಳು ಕನ್ನಡದಲ್ಲಿಲ್ಲೆಂದು ಚಡಪಡಿಸುವ ನಾವು. ಅತ್ತಿತ್ತ ನೋಡದೆ, ಸದ್ಗ್ರಂಥಗಳ ಸ್ವಾರಸ್ಯದ ಜೀವನದಿಂದ ತೃಪ್ತರಾಗಿ. ಅನ್ನದಾತೃವಿನ

1. ಗಳಗನಾಥ : ಸದ್ಗುರು ಪ್ರಭಾವ, ಪುಟ 121
2. ಗಳಗನಾಥ : ಕುರುಕ್ಷೇತ್ರ, ಪುಟ 125

ಕಲ್ಯಾಣವನ್ನು ಚಿಂತಿಸಿದರೆ ತೀರಿತು"[1] ಎಂದುಕೊಂಡರು.

ಗಳಗನಾಥರು ನಿಜವಾದ ಅರ್ಥದಲ್ಲಿ ಕಾದಂಬರಿಕಾರರಾಗಲು ಮೂಲ ಪ್ರೇರಣೆ ಶ್ರೀ ಆಪಟೆ (1864-1919) ಅವರಿಂದಲೇ ಸಿಕ್ಕಿತು. ಅದಕ್ಕಾಗಿಯೇ ಅವರಲ್ಲಿ ಶ್ರೀ ಆಪಟೆಯವರ ಬಗ್ಗೆ ಹೆಚ್ಚಿನ ಗೌರವವಿತ್ತು. "ನಮ್ಮ ಕಾದಂಬರಿ ಲೇಖನ ಪ್ರವೃತ್ತಿಯ ಪರಿಪೋಷಕರೂ ಆದ ನಮ್ಮ ಸನ್ಮಾನನೀಯರಾದ ಮ. ರಾ. ರಾ. ಹರಿ ನಾರಾಯಣ ಆಪಟೆಯವರು ಕೈಲಾಸವಾಸಿಗಳಾದರೆಂದು ಬರೆಯಲಿಕ್ಕೆ ನಮಗೆ ಬಹಳ ವ್ಯಸನವಾಗುತ್ತದೆ! ಪ್ರತ್ಯಕ್ಷವಾಗಿ ನಮ್ಮ ಮೇಲೆಯೂ, ಅಪ್ರತ್ಯಕ್ಷವಾಗಿ ಕನ್ನಡಿಗರ ಮೇಲೆಯೂ ನಮ್ಮ ಆಪಟೆಯವರ ಮಹದುಪಕಾರವಾಗಿರುವದೆಂದು ನಾವು ಭಾವಿಸಿರುತ್ತೇವೆ. ಆ ಮಹನೀಯರ ಪ್ರತ್ಯಕ್ಷ ದರ್ಶನ ಮಾಡಿಕೊಂಡು, ನಮ್ಮ ಕೃತಜ್ಞತೆ ಪ್ರಕಟಿಸುವ ಸುಯೋಗ ಒದಗದ್ದಕ್ಕಾಗಿ ನಮಗೆ ಪರಮಾವಧಿ ವ್ಯಸನವಾಗಿದೆ. ಅವರ ದರ್ಶನಕ್ಕೆ ಹೋಗಬೇಕು, ಹೋಗಬೇಕೆನ್ನುವದರೊಳಗಾಗಿ ಬೆಳಗಾಗಿ ಹೋಯಿತು! ಉಪಾಯವಿಲ್ಲ. ಜಗದೀಶ್ವರನು ನಮ್ಮ ಗುರುಸ್ಥಾನಾಪನ್ನರಾದ ಆಪಟೆಯವರ ಆತ್ಮಕ್ಕೆ ಶಾಂತಿಯನ್ನೀಯಲೆಂದು ಪ್ರಾರ್ಥಿಸಿ, ಬಹು ದುಃಖದಿಂದ ಲೇಖನಿಯನ್ನು ಕೆಳಗಿಟ್ಟು ಬಿಡುವೆವು."[2] ಎಂದು ಗಳಗನಾಥರು ನುಡಿದಿರುವಲ್ಲಿ ಆಪಟೆಯವರ ಬಗ್ಗೆ ಅವರಲ್ಲಿದ್ದ ಭಾವನೆಗಳು ವ್ಯಕ್ತವಾಗಿವೆ.

ಅದರಂತೆ, "ಯೋಗ್ಯತಾ ಸಂಪನ್ನ ಮಹಾರಾಷ್ಟ್ರ ಲೇಖಕರಾದ ಮ. ರಾ. ರಾ. ನಾಗೇಶ ವಿನಾಯಕ ಬಾಪಟರವರ 'ಪಾನಿಪತಚೀ ಮೋಹೀಮ' ಎಂಬ ಕಾದಂಬರಿಯು, ನಮ್ಮ ಈ ಕಾದಂಬರಿಯ ಮೂಲಧನವಾಗಿರುವದು. ಅತಿ ಅವಸರ ಪ್ರಸಂಗದಲ್ಲಿ ನಮ್ಮ ಸನ್ಮಾನನೀಯ ಬಾಪಟ ಸಾಹೇಬರವರಿಂದ ನಮ್ಮ ಧಾರ್ಮಿಕ ಸಂಸ್ಥೆಗಾದ ಸಹಾಯಕ್ಕಾಗಿ ನಾವು ಅತ್ಯಂತ ಕೃತಜ್ಞರಾಗಿರುವೆವು."[3] "ನನ್ನ ಈ ಮಹಾಭಾರತಾಮೃತದ ಲೇಖನ ಕಾರ್ಯವು ಭರದಿಂದ ಸಾಗಲಿಕ್ಕೆ ಅತ್ಯಂತ ಸಹಾಯಕವಾಗಿರುವ ಮಹಾಭಾರತದ ಮರಾಠಿ ಸುರಸ ಭಾಷಾಂತರವೂ, ಶ್ರೀ ಕೃಷ್ಣರಾಜವಾಣೀ ವಿಲಾಸದ ಕನ್ನಡ ಭಾರತವೂ ದೊರೆತದ್ದಕ್ಕಾಗಿ ನಾನು, ಶ್ರೀಯುತ ಚಿಪಳೂಣಕರ ಮಂಡಳಿಯವರ, ಹಾಗೂ ಶ್ರೀ ಕೃಷ್ಣರಾಜವಾಣೀ ವಿಲಾಸದ ಪರಮೋಪಕಾರವನ್ನು ಸ್ಮರಿಸುವೆನು."[4] ಇಂಥ ಗಳಗನಾಥರ ಮಾತುಗಳನ್ನು ನೋಡಿದರೆ ಅವರ ಕೃತಜ್ಞತಾಗುಣವು ವ್ಯಕ್ತವಾಗುತ್ತದೆ. ಬಹುಶಃ ಈ ಮೂಲಧನವನ್ನು ಉಪಯೋಗಿಸಿ-ಕೊಂಡದ್ದಕ್ಕೆ ಅವರು ಮೂಲ ಲೇಖಕರಿಗಾಗಲಿ ಪ್ರಕಾಶಕರಿಗಾಗಲಿ ಗೌರವಧನವನ್ನೇನೂ ಕೊಡಬೇಕಾಗಿರಲಿಲ್ಲವೆಂದು ಕಾಣುತ್ತದೆ.

ಕೃತಜ್ಞತಾಗುಣವು ಗಳಗನಾಥರಲ್ಲಿ ಆಳವಾಗಿ ಬೇರೂರಿತ್ತು. ತಮ್ಮ ಸದ್ಗುರು ಶೇಷಾಚಲ ಸ್ವಾಮಿಗಳನ್ನಂತೂ ಅವರು ಮಾತು ಮಾತಿಗೆ ನೆನೆದರು. ಗ್ರಂಥ ನಿರ್ಮಿತಿಗೆ ಸಹಾಯಕರಾದ ಆಪಟೆ ಮೊದಲಾದವರ ಉಪಕಾರವನ್ನು ಸ್ಮರಿಸಿದರು. ಅಷ್ಟೇ ಏಕೆ, ವಾಚಕರನ್ನೂ ಕೃತಜ್ಞತೆಯಿಂದ ಅನೇಕ ಸಲ ನೆನೆದಿರುವರು. ಅನೇಕ ಅಡಚಣೆಗಳ

---

1. ಗಳಗನಾಥ: ಕ್ಷಾತ್ರತೇಜ, ಪ್ರಸ್ತಾವನೆ, ಪುಟ 2
2. ಗಳಗನಾಥ: ಛತ್ರಪತಿ, ಪ್ರಸ್ತಾವನೆ
3. ಗಳಗನಾಥ: ಕುರುಕ್ಷೇತ್ರ, ಪ್ರಸ್ತಾವನೆ, ಪುಟ 2
4. ಗಳಗನಾಥ: ಮಹಾಭಾರತಾಮೃತ (ಆದಿಪರ್ವ), ಪ್ರಸ್ತಾವನೆ, ಪುಟ 35, 36

ಮೂಲಕ 'ಸ್ವರಾಜ್ಯ ಸುಗಂಧ'ದ ಮುದ್ರಣಕ್ಕೆ ಒಳ್ಳೆಯ ಕಾಗದವನ್ನು ಬಳಸಲಾಗದ್ದಕ್ಕೆ ವಿಷಾದಿಸಿ "ಆದರೂ ನಮ್ಮವರಾದ ಕನ್ನಡಿಗರ ಮುಂದೆ ನಾವು ಇಂದಿನವರೆಗೆ ನಮ್ಮ ಎಂತಹ ಕಸವನ್ನಿಟ್ಟರೂ, ಆ ಕಸವನ್ನೇ ರಸ ಮಾಡಿಕೊಂಡು, ಅವರು ಆ ಕೆಲಸವನ್ನೂ ಆದರಿಸುತ್ತಾ ಬಂದರು. ಅದರಂತೆ ಅವರು ಈಗಲಾದರೂ ನಮ್ಮ ಮೇಲಿನ ಅಭಿಮಾನದಿಂದ ಆದರಿಸಿ, ತಮ್ಮ ಉದಾರಭಾವವನ್ನು ವ್ಯಕ್ತಮಾಡದೆ ಇರಲಾರರೆಂದು ನಾವು ನಂಬಿರುವೆವು."[1] ಎಂದು ಹೇಳಿ, ಕೊನೆಯಲ್ಲಿ "ಒಟ್ಟಿಗೆ, ಈ ಕಾದಂಬರಿಯು ನಮ್ಮ ಆಶ್ರಯದಾತೃಗಳ ಪುಣ್ಯದ ಫಲವೆಂದು ನಾವು ಭಾವಿಸುತ್ತೇವೆ. ಯಾಕೆಂದರೆ, ಉತ್ತಮ ಅಡಿಗೆಯಾಗಲಿಕ್ಕೆ ಉಣ್ಣುವವರ ಪುಣ್ಯವು ಕಾರಣವಾಗಿರುವಂತೆ, ಉತ್ತಮ ಕಾದಂಬರಿಯಾಗಲಿಕ್ಕೆ ನಮ್ಮ ಕನ್ನಡ ವಾಚಕರ ಪುಣ್ಯವೇ ಕಾರಣವಾಗಿರುವಲ್ಲಿ ಸಂಶಯವಿಲ್ಲ"[2] ಎಂದಿರುವರು.

ವಾಚಕರ ಕೃತಜ್ಞತೆಯನ್ನು ಗಳಗನಾಥರು ಇನ್ನೂ ಒಂದು ರೀತಿಯಲ್ಲಿ ಸ್ಮರಿಸುವರು. ಲೇಖಕರಾದ ತಾವು ವಾಚಕರಿಗಿಂತ ಹೆಚ್ಚಿನವರೆಂಬ ಭಾವನೆಯಂತೂ ಅವರಿಗೆ ಇರಲೇ ಇಲ್ಲವಷ್ಟೇ ಅಲ್ಲದೆ, ವಾಚಕರೇ ಹೆಚ್ಚಿನವರೆಂದು ಅವರು ಭಾವಿಸಿದ್ದರು. "ನನಗೂ ನನ್ನ ಪ್ರಿಯ ವಾಚಕವರ್ಗಕ್ಕೂ ಆರಾಧ್ಯ—ಆರಾಧಕ ಭಾವವುಂಟಾದಂತಾಗಿರುತ್ತದೆ. ನಮ್ಮ ಈ ಪವಿತ್ರ ಭಾವಗಳಿಗೆ ಶ್ರೀರಾಮ-ಶಬರಿಯ ಭಾವವನ್ನು ಹೋಲಿಸಬಹುದು! ನಾನು ಶಬರಿಯು, ವಾಚಕರು ಶ್ರೀರಾಮರು; ನನ್ನ ಕಣ್ಣಿಗೆ ಬಿದ್ದ ಅಥವಾ ನನ್ನ ಊರ್ಮಿಯಲ್ಲಿ ಸ್ಫುರಿಸಿದ ಕಾದಂಬರಿಗಳೇ ಶ್ರೀರಾಮರೂಪ ವಾಚಕವರ್ಗವೆಂಬ ನನ್ನ ಅಧಿದೈವತಕ್ಕೆ ಭಕ್ತಿಯಿಂದ ಅರ್ಪಿಸತಕ್ಕ ನನ್ನ ಬೋರೆಯ ಹಣ್ಣುಗಳು........ಇನ್ನು ಶಬರಿಯ ಭಕ್ತಿಯು ನನ್ನಲ್ಲಿಲ್ಲವೆಂದು ನಾನು ಒಪ್ಪಿಕೊಳ್ಳುವೆನು. ಆದರೆ ಶ್ರೀರಾಮರ ಸೇವಕ ವಾತ್ಸಲ್ಯಕ್ಕಿಂತ ಹೆಚ್ಚಿನ ವಾತ್ಸಲ್ಯವು ನನ್ನ ವಿಷಯವಾಗಿ ನಮ್ಮ ಕನ್ನಡಿಗರಲ್ಲಿ ನಿಶ್ಚಯವಾಗಿ ಇರುತ್ತದೆ. ಯಾಕೆಂದರೆ ಬೇಗನೇ ಕಾದಂಬರಿ ಬರೆಯಬೇಕೆಂಬ ಅವಸರದಲ್ಲಿ ಒಂದೆರಡು ಸಾರೆ ಅಪಕ್ವರಸದ ಕಾದಂಬರಿಗಳನ್ನೇ ನಾನು ಕೊಡಲು, ಅವನ್ನೇ ಸವಿಯಾದ ಕಾದಂಬರಿಗಳಂತೆ ನಮ್ಮ ವಾಚಕರು ಪ್ರೀತಿಯಿಂದ ಓದಿದರು!"[3] ಈ ರೀತಿ ವಾಚಕರನ್ನು ಕಾಣುವ ಲೇಖಕನ ವಿನಯ ಸಂಪನ್ನತೆಗೆ ಮಾರು ಹೋಗದವರಾರು ?

ಗಳಗನಾಥರ ಪ್ರತ್ಯುಪಕಾರದ ರೀತಿಯೂ ಕೂಡ ಅನನ್ಯವಾಗಿತ್ತು. ಗಳಗನಾಥರು ಒಮ್ಮೆ ತಮ್ಮ ತಾಯಿಯವರಿಗೆ ಹೇಳಿದ ಮಾತನ್ನು ಶ್ರೀ ಕೆ. ಎಸ್. ದೇಶಪಾಂಡೆಯವರು ನೆನೆಯುತ್ತ, "ಗಳಗನಾಥರು ನಮ್ಮ ಮನೆಯಲ್ಲಿದ್ದಾಗ ಇನ್ನುಳಿದ ಅತಿಥಿಗಳ ಒತ್ತಡವೂ ಅನೇಕ ಸಲ ಅಧಿಕವಾಗುತ್ತಿತ್ತು. ಇಂಥ ಪ್ರಸಂಗಗಳಲ್ಲಿ ನಮ್ಮ ತಾಯಿಗೆ ವಿಶೇಷ ಕೆಲಸ, ಶ್ರಮ. ಗಳಗನಾಥರು ಇದನ್ನು ಗಮನಿಸುವರು. ಮತ್ತು ನಮ್ಮ ತಾಯಿಗೆ, 'ನಿಮಗೆ ತುಂಬಾ ತೊಂದರೆ ಕೊಟ್ಟೆ. ನಿಮ್ಮ ಉಪಕಾರವನ್ನು ಇನ್ನೊಂದು ಒಳ್ಳೆಯ ಪುಸ್ತಕ ಬರೆಯುವದರ ಮೂಲಕ ತೀರಿಸಲು ಯತ್ನಿಸುವೆ' ಎಂದು ಹೇಳುತ್ತಿದ್ದರು"[4] ಎಂದಿರುವರು.

ತಮ್ಮ ಪತ್ರಿಕೆಯ ಚಂದಾದಾರರನ್ನು ಗಳಗನಾಥರು ಸದಾಕಾಲ ಕೃತಜ್ಞತೆಯಿಂದಲೇ

---

1–2. ಗಳಗನಾಥ : ಸ್ವರಾಜ್ಯ ಸುಗಂಧ, ಪ್ರಸ್ತಾವನೆ,

3. ಗಳಗನಾಥ : ಸದ್ಗುರು ಪ್ರಭಾವ, ಪುಟ 40,41

4. ಹಾ. ಮಾ. ನಾಯಕ (ಸಂ) : ಗಳಗನಾಥ, ಪುಟ 19

ಕಂಡರು. ದಿ. 15-1-1920ರ 'ಸದ್ಗುರು' ಪತ್ರಿಕೆಯಲ್ಲಿ ಇಂಥದೊಂದು ನಿದರ್ಶನವಿದೆ. "ತನ್ನ ಪರಿಪೋಷಕರಿಗೆ ಗಳಗನಾಥನು ಕೊಡುವ ವಿನಯದ ಎಳ್ಳು ಸಕ್ಕರೆಯು" ಎಂಬ ಒಂದು ಲೇಖನವನ್ನು ಗಳಗನಾಥರು ಬರೆದಿರುವರು. ಅವರು ತಮ್ಮ 62ನೆಯ ವಯಸ್ಸಿನಲ್ಲಿ ಪ್ರಸಿದ್ಧಿಸಿದ ತಮ್ಮ 'ಮಹಾಭಾರತಾಮೃತ–ಆದಿಪರ್ವ'ದ ಪ್ರಸ್ತಾವನೆಯಲ್ಲಿ ಅವರು ಇಂಥವೇ ಮಾತುಗಳನ್ನು ಇಡೀ ಕನ್ನಡ ಜನಕ್ಕೆ ಹೇಳಿರುವುದನ್ನು ಗಮನಿಸಬೇಕು. "ನನ್ನ ಕರ್ನಾಟಕವು ಮೂವತ್ತು ವರ್ಷಗಳಿಂದ ನನ್ನನ್ನು ಪ್ರೀತಿಸಿ ಸಂಭಾವಿಸುತ್ತ ಬಂದ ಉಪಕಾರಕ್ಕಾಗಿ, ದೇಹವಿರುವ ವರೆಗೆ ಹೀಗೆಯೇ ಸತತವಾಗಿ ಅವರ ಸೇವೆ ಮಾಡುವದು ನನ್ನ ಪವಿತ್ರ ಕರ್ತವ್ಯವಾಗಿರುವದು"[1] ಎಂದಿರುವರು. ಗ್ರಂಥಗಳನ್ನು ಬರೆಯುವದು ಒಂದು ಸಮಾಜ ಸೇವೆಯೆಂದು ಗಳಗನಾಥರು ನಿಜವಾಗಿಯೂ ಭಾವಿಸಿದ್ದರು. ಗ್ರಂಥಗಳನ್ನು ಬರೆದು ಅವರು ಸಮಾಜದ ಋಣವನ್ನು ತೀರಿಸಬಯಸಿದರು.

ಅವರು ಮುಂದುವರೆದು "ನಮ್ಮ ಪ್ರಿಯ ಕನ್ನಡಿಗರು ನನ್ನ ಲೇಖನಗಳ ಪ್ರತಿಫಲ-ವಾಗಿ ಈವರೆಗೆ ಅರವತ್ತು ಎಪ್ಪತ್ತು ಸಹಸ್ರ ರೂಪಾಯಿಗಳನ್ನು ಕೊಟ್ಟು, ನಾನು ಕೈಕೊಂಡ ವಿದ್ಯಾದಾನಾದಿ ಪರೋಪಕಾರದ ಕಾರ್ಯಗಳಿಗೆ ಸಹಾಯ ಮಾಡಿರುವರು. ಈ ದ್ರವ್ಯ ಸಹಾಯವಲ್ಲದೆ ನಮ್ಮ ಮೈಸೂರು ಪ್ರಾಂತದ ಕನ್ನಡಿಗರು ನನ್ನನ್ನು ಸನ್ಮಾನಿಸಿದ್ದು ನನ್ನಲ್ಲಿ ವಿಲಕ್ಷಣ ಕಾರ್ಯೋತ್ಸಾಹವನ್ನುಂಟು ಮಾಡಿರುವದು."[2] ಎಂದು ನೆನೆದು ಆ ಉತ್ಸಾಹ-ದಿಂದಲೇ ತಾವು ಮಹಾಭಾರತಾಮೃತವನ್ನು ಬರೆಯುವ ಮಹಾ ಸಾಹಸಕ್ಕೆ ಕೈಹಾಕಿರುವ-ದಾಗಿಯೂ ಕೃತಜ್ಞತೆಯಿಂದ ತಿಳಿಸಿರುವರು. ದಾನ, ದಯೆ, ಉಪಕಾರ, ಉಪಕಾರಸ್ಮರಣೆ, ಔದಾರ್ಯ, ಧಾರ್ಮಿಕತೆ, ಹೃದಯವಂತಿಕೆ, ಸಜ್ಜನಿಕೆ ಮೊದಲಾದ ಜೀವನದ ಶ್ರೇಷ್ಠ ಮೌಲ್ಯಗಳು ಗಳಗನಾಥರಲ್ಲಿ ಮನೆ ಮಾಡಿಕೊಂಡಿದ್ದುವು. ಅವರು ಅಷ್ಟೊಂದು ಜನಪ್ರಿಯ-ರಾಗಲಿಕ್ಕೆ ಅವರ ಪರಿಶುದ್ಧ ವ್ಯಕ್ತಿತ್ವವೂ ಕಾರಣವಾಗಿದ್ದಿತು. ಅದು ಕಾರಣವೇ ಅವರನ್ನು 'ಉದಾರಚರಿತ ಗಳಗನಾಥರು' ಎಂದು ಕರೆಯಲಾಯಿತು.[3]

ದೋಷವೆಂದು ಕಾಣಬಹುದಾದ ಅವರ ಒಂದು ಗುಣವೆಂದರೆ ಅತಿ ಔದಾರ್ಯ. "ಗಳಗನಾಥರ ಹೃದಯವು ಬಹು ವಿಶಾಲವಾಗಿತ್ತು. ಔದಾರ್ಯ ಅವರ ವ್ಯಕ್ತಿತ್ವದ ಪ್ರಧಾನ ಗುಣವಾಗಿತ್ತು. ಅವರ ಜೀವನವನ್ನು ಆ ಔನ್ನತ್ಯಕ್ಕೆ ಕೊಂಡೊಯ್ಯಲು ಅವರ ಉದಾರ ಗುಣವೇ ಪ್ರೇರಕಶಕ್ತಿಯಾಗಿತ್ತು. ಪರಂಪರೆಯಿಂದ ತಮಗೆ ಬಂದ ಮನೆಯನ್ನು ಗಳಗನಾಥರು ತಮ್ಮ ಕಕ್ಕನ ಮಗ ಕಾಳೊ ಕೃಷ್ಣ ಕುಲಕರ್ಣಿ ಅವರಿಗೆ ಸಂತೋಷದಿಂದ ಕೊಟ್ಟುಬಿಟ್ಟರು. ಗಳಗನಾಥ ಗ್ರಾಮದಲ್ಲಿಯ ಗಳಗೇಶ್ವರ ಗುಡಿಯಲ್ಲಿ ಇಡೀ ವರ್ಷ ನಂದಾದೀಪ ಬೆಳಗಲಿ ಎಂದು ಬಯಸಿ ಅದರ ವೆಚ್ಚವನ್ನು ತಾವೇ ವಹಿಸಿಕೊಂಡು ಕೊನೆಯ-ವರೆಗೂ ನಡೆಸಿದರು.....ಬಡ ವಿದ್ಯಾರ್ಥಿಗಳಿಗೆ ಅವರು ಮಾಡಿದ ಸಹಾಯಕ್ಕೆ ಮಿತಿಯಿಲ್ಲ. 'ವಾರದ ಹುಡುಗರು' ಅವರಲ್ಲಿ ದಿನಾಲೂ ಇದ್ದೇ ಇರುತ್ತಿದ್ದರು. ಅನೇಕರು ಅವರ ಆಶ್ರಯದಲ್ಲಿ ಬೆಳೆದು ಪ್ರಸಿದ್ಧರಾದರು. ಅವರ ಮುಂಜಿವೆ, ಮದುವೆಗಳನ್ನು ತಮ್ಮ ಸ್ವಂತ

1. ಗಳಗನಾಥ : ಮಹಾಭಾರತಾಮೃತ (ಆದಿಪರ್ವ), ಪ್ರಸ್ತಾವನೆ, ಪುಟ 25
2. ಅದೇ, ಪುಟ 26
3. ಕೃಷ್ಣಮೂರ್ತಿ ಕಿತ್ತೂರ : 'ಉದಾರ ಚರಿತ ಗಳಗನಾಥರು', ಕರ್ಮವೀರ, 5-1-1969.

ಮಕ್ಕಳೆಂಬಷ್ಟೇ ಪ್ರೀತಿಯಿಂದ ನೆರವೇರಿಸಿದರು. ಹೀಗೆ ಗಳಗನಾಥರ ಪೋಷಣೆಯಲ್ಲಿ ಬೆಳೆದು ಪ್ರಸಿದ್ಧರಾದವರಲ್ಲಿ ಹುಬ್ಬಳ್ಳಿಯ ಕೈ.ವಾ. ರಾಮಭಟ್ಟ ಜ್ಯೋತಿಷಿಗಳೂ ಒಬ್ಬರು.

"ಗಳಗನಾಥರ ಮನೆಯಲ್ಲಿ ದಿನಾಲೂ ಕನಿಷ್ಠ ನಾಲ್ಕಾರು ಜನರಾದರೂ ಅತಿಥಿಗಳು ಇದ್ದೇ ಇರುತ್ತಿದ್ದರು. ಬ್ರಾಹ್ಮಣರಂತೆ ಅನ್ಯಜಾತಿಯವರಿಗೂ ಅವರಲ್ಲಿ ಸ್ವಾಗತ. ಬಾಗಿಲಿಗೆ ಬಂದ ಭಿಕ್ಷುಕರು ಎಂದೂ ಬರಿಗೈಯಿಂದ ಮರಳಲಿಲ್ಲ. ದೇವರು ಯಾವ ವೇಷದಿಂದ ಬರುವನೋ ಹೇಳಲಿಕ್ಕೆ ಬರುವದಿಲ್ಲ" ಎಂದು ಅವರು ಹೇಳುತ್ತಿದ್ದರು. ಒಟ್ಟಿನಲ್ಲಿ ಅವರ ಮನೆಯೆಂದರೆ ಒಂದು ಧರ್ಮಛತ್ರದಂತಿರುತ್ತಿತ್ತು. ಟಪಾಲು, ರಜಿಸ್ಟರು, ಮನಿಯಾರ್ಡರು-ಗಳನ್ನು ಬಟವಡೆ ಮಾಡಲು ಪೋಸ್ಟಮನ್ ವಿಠ್ಠಪ್ಪ ಗಳಗನಾಥರ ಮನೆಯಲ್ಲಿ ಒಂದು ತಾಸು ವೇಳೆಯನ್ನು ಕಳೆಯಬೇಕಾಗುತ್ತಿತ್ತು. ಬಿಸಿಲಲ್ಲಿ ಬಂದ ಅವನ ಮಧ್ಯಾಹ್ನದ ಊಟ ಎಷ್ಟೋ ಸಲ ಗಳಗನಾಥರ ಮನೆಯಲ್ಲಿಯೇ ಆಗುತ್ತಿತ್ತೆಂದು ಬೇರೆ ಹೇಳಬೇಕಾಗಿಲ್ಲ. 'ವೆಂಕಣ್ಣ ಮಾಸ್ತರರ ಮನೆಯೆಂದರೆ ಒಂದು ಸಣ್ಣ ಸಂಸ್ಥಾನದಂತೆಯೇ ಇತ್ತು. ನಾವು ಸಣ್ಣವರಿರುವಾಗ ದಿನಾಲೂ ಮಜ್ಜಿಗೆ ತರುವದು ಅವರ ಮನೆಯಿಂದಲೇ' ಎಂದು ಹಾವೇರಿಯ ಪ್ರಸಿದ್ಧ ಡಾಕ್ಟರರಾದ ಶ್ರೀ. ವೈದ್ಯ ಅವರು ಗಳಗನಾಥರ ಬಗ್ಗೆ ಹೃದಯತುಂಬಿ ನುಡಿಯುತ್ತಾರೆ.

"ರತ್ನಾಗಿರಿಯ ತಾಂಬೆ ಶಾಸ್ತ್ರಿಗಳೆಂಬ ಪಂಡಿತರು ಹಾವೇರಿಗೆ ಬಂದಿದ್ದರು. ಅವರದು ಸಂಸ್ಕೃತ–ಮರಾಠಿ ಎರಡರಲ್ಲೂ ಎತ್ತಿದ ಕೈ. ಪಂಡಿತರಾದಂತೆ ಅವರು ನಿಷ್ಠಾವಂತ ವೈದಿಕರೂ ಅಹುದು. ಅವರ ಪ್ರವಚನವನ್ನು ಕೇಳಿ ಗಳಗನಾಥರು ಮುಗ್ಧರಾದರು; ಅವರ ವ್ಯಕ್ತಿತ್ವಕ್ಕೆ ಮಾರುಹೋದರು. ಅವರನ್ನು ತಮ್ಮ ಗುರುಸದೃಶರೆಂದೇ ಭಾವಿಸಿದರು. ಅವರಿಗೆ ಒಂದು ಪ್ರಿಂಟಿಂಗ್ ಪ್ರೆಸ್ ಬೇಕಾಗಿತ್ತೆಂಬುದನ್ನು ತಿಳಿದ ಗಳಗನಾಥರು ಒಂದು ದಿನ ಪ್ರವಚನದ ಕಾಲಕ್ಕೆ ನೆರೆದವರೆಲ್ಲರ ಎದುರಿಗೆ ತಾಂಬೆ ಶಾಸ್ತ್ರಿಗಳಿಗೆ ತಮ್ಮ ಹ್ಯಾಂಡ ಪ್ರೆಸ್ಸನ್ನು ಕೊಡುವ ಸಂಕಲ್ಪವನ್ನು ಪ್ರಕಟಿಸಿದರು. ಗಳಗನಾಥರ ಆಪ್ತರಾದ ಕೆಲವರಿಗೆ ಅದು ಸೇರಲಿಲ್ಲ. ಆಗಿನ ಕಾಲಕ್ಕೆ ಏನಿಲ್ಲೆಂದರೂ ಆ ಯಂತ್ರದ ಬೆಲೆ ಎರಡು ಸಾವಿರ ರೂಪಾಯಿ ಆಗಬಹುದಾಗಿತ್ತು. ಆದರೆ ಆ ಔದಾರ್ಯದ ಸುರತರು ಇದಾವುದನ್ನು ಗಮನಿಸದೆ ಆ ಯಂತ್ರವನ್ನು ಸತ್ಪಾತ್ರದಲ್ಲಿ ದಾನಮಾಡಿ ಕೃತಕೃತ್ಯರಾದರು....ಇಂಥ ಉದಾ ಹರಣೆಗಳು ಇನ್ನೆಷ್ಟೋ!

"ಈ ಔದಾರ್ಯಕ್ಕೆ ಗಳಗನಾಥರ ಶ್ರದ್ಧಾಭಕ್ತಿಗಳಂತೆ ಅವರ ದಯಾ ಗುಣವೂ ಆರ್ದ್ರ ಅಂತಃಕರಣವೂ ಕಾರಣವಾಗಿದ್ದುವು. ಮಕ್ಕಳನ್ನೂ ಮೊಮ್ಮಕ್ಕಳನ್ನೂ ಅವರು ಅತ್ಯಂತ ವಾತ್ಸಲ್ಯದಿಂದ ಮುದ್ದು ಮಾಡಿದರು. . ಅವರ ಮೊಮ್ಮಗ ಬಿಷ್ಟೇಶನು (ನಂತರ ದತ್ತಕ ಮಗ ಬಿ. ವಿ. ಗಳಗನಾಥ) 14-15 ವರ್ಷಗಳಾಗುವ ವರೆಗೂ ಅವರ ತೊಡೆಯ ಮೇಲೆಯೇ ಉಂಡು, ಮಗ್ಗುಲಲ್ಲಿ ಮಲಗಿ ಬೆಳೆದನು. ಎಲ್ಲ ಮಕ್ಕಳ ಬಗ್ಗೆಯೂ ಅವರಲ್ಲಿ ಇದೇ ಅಂತಃಕರಣ. ದಿನಾಲೂ ಬೆಳಗಿನ ನಾಲ್ಕು ಗಂಟೆಗೇ ಎದ್ದು ಗಳಗನಾಥರು ಶಗಣಿ-ಕಸ ಮೊದಲು ಮಾಡಿಕೊಂಡು ಗೋಸೇವೆಯನ್ನೆಲ್ಲ ಸ್ವತಃ ಭಕ್ತಿಯಿಂದ ಮಾಡುತ್ತಿದ್ದರು.... ಗಳಗನಾಥರ ಗೋಶಾಲೆಯಲ್ಲಿ ಕೆಂಪಿ ಎಂಬ ಆಕಳೊಂದಿತ್ತು. ಅದರ ಮೇಲಂತೂ ಗಳಗನಾಥರಿಗೆ ಜೀವಪ್ರಾಣ. ಅದು ಸತ್ತುಹೋದಾಗ ಕಣ್ಣೀರು ಸುರಿಸಿದ ಗಳಗನಾಥರು ಅದನ್ನು ಮಾದಿಗರಿಗೆ ಕೊಡದೆ ನೆರೆಯ ಹೊಲದಲ್ಲಿ ಹೂಳಿಸಿದರು! ತಮ್ಮ ಗೋಶಾಲೆಯ

ಆಕಳುಗಳನ್ನು ಅವರು ಎಂದೂ ಮಾರಲಿಲ್ಲ. ಯಾರಾದರೂ ಬೇಡಿದವರಿಗೆ ಹಾಗೆಯೇ ಕೊಟ್ಟು ಬಿಡುತ್ತಿದ್ದರು. ಈ ಸಾಧುಪ್ರಾಣಿಗಳ ವಿಷಯವಾಗಿ ಒಂದು ಪ್ರಸಂಗವನ್ನು ಬಿಷ್ಟಪ್ಪನವರು ಇಂದಿಗೂ ನೆನೆದು ಹೇಳುತ್ತಾರೆ. 'ನಮ್ಮ ಗೋಶಾಲೆಯ ಆಕಳುಗಳು ಒಂದು ದಿನ ಒಂದು ಕಬ್ಬಿನ ತೋಟದಲ್ಲಿ ಹೊಕ್ಕಿದ್ದವು. ಅದನ್ನು ಕೇಳಿದ ಅಪ್ಪ (ಬಿ. ಗಳಗನಾಥರು)–ಪಾಪ ಅವಕ್ಕೆ ಕಬ್ಬಿನ ಮೇಲೆ ಆಸೆ ಆಗಿದೆಯೇನೋ ಎಂದು ಆ ಕಬ್ಬಿನ ತೋಟವನ್ನೇ ಹಣಕ್ಕೆ ಕೊಂಡು ಅವುಗಳಿಗೆ ತಿನ್ನಿಸಿಬಿಟ್ಟರು...."[1]

ಈ ಧಾರಾಳತನ ಅವರ ಗುಣವಾದಂತೆ ದೋಷವೂ ಆಗಿತ್ತು. ಅವರು ಜೀವನದಲ್ಲಿ ಸಾಲದಲ್ಲಿ ಮುಳಗಲಿಕ್ಕೆ ಅವರ ಈ ಧಾರಾಳತನವೇ ಕಾರಣವೆಂದರೆ ತಪ್ಪಾಗಲಾರದು. ಪಾಠಶಾಲೆಯ ಮಿತಿಮೀರಿದ ಖರ್ಚಲ್ಲದೆ ತಮ್ಮ ಇಬ್ಬರು ಹೆಣ್ಣುಮಕ್ಕಳ ಸಾಲಂಕೃತ ಕನ್ಯಾದಾನ ಮತ್ತು ತಮ್ಮ ಅರುವತ್ತು ವರ್ಷದ ಶಾಂತಿಯ ಸಮಾರಂಭಗಳನ್ನು ಕೂಡ ಅವರು ತಮ್ಮ ಯೋಗ್ಯತೆ ಮೀರಿ ವಿಜೃಂಭಣೆಯಿಂದ ನೆರವೇರಿಸಿದರು. 1932ರಲ್ಲಿ ಹಾವೇರಿಯ ಮಾಗಾವಿ ಚಂಬಣ್ಣನವರು 1500ರೂ.ಗಳ ಕಿರಾಣಿ ಸಾಮಾನುಗಳನ್ನು ಉದ್ದರಿಕೊಟ್ಟಿದ್ದರೆಂದು ಗಳಗನಾಥರೇ ಹೇಳಿರುವರು. ಆ ಕಾಲಕ್ಕೆ 1500ರೂ.ಗಳ ಕಿರಾಣಿ ಸಾಮಾನನ್ನೇ ತಂದಿರ ಬೇಕಾದರೆ ಅವರ ಮನೆತನದ ಇತರ ಖರ್ಚು ಎಷ್ಟಿರಬಹುದೆಂಬುದನ್ನು ಊಹೆಗೆ ಬಿಡುವುದೇ ಒಳಿತು. ಹೀಗಿರುವುದರಿಂದ ಅವರ ಸಾಲದ ಹೊರೆ ಏರುತ್ತಲೇ ನಡೆಯಿತೆಂಬಲ್ಲಿ ಆಶ್ಚರ್ಯವೇನೂ ಇಲ್ಲ.

ಅಗಡಿಯಲ್ಲಿ ಪಾಠಶಾಲೆ ಮತ್ತು ಪತ್ರಿಕೆಗಳನ್ನು ನಡೆಸುವ ಸಲುವಾಗಿ ಅವರು ಆಗಲೇ ಸಾಲದಲ್ಲಿ ಬಿದ್ದಿದ್ದರು. ಒಂದು ರೀತಿಯ ಹಟದಿಂದ ಅಗಡಿಯನ್ನು ಬಿಟ್ಟು ಬಂದ ಮೇಲಂತೂ ಹಾವೇರಿಯಲ್ಲಿ ಅಗಡಿಯ ಪ್ರತಿರೂಪವನ್ನೇ ನಿರ್ಮಿಸಹೊರಟು ಗಳಗನಾಥರು ಸಾಲದ ಜಾಲದಲ್ಲಿಯೇ ಸಿಲುಕಿಕೊಂಡರು.

"ಆನಂದವನದಲ್ಲಿ ಸದ್ಬೋಧ ಚಂದ್ರಿಕೆಯ ಸೊಬಗಿನಲ್ಲಿಯೂ ವೈದಿಕ ಪಾಠಶಾಲೆಯ ವೈಭವದಲ್ಲಿಯೂ ಒಮ್ಮೆ ಸುಖಪಡುತ್ತಾ, ಒಮ್ಮೆ ದುಃಖಪಡುತ್ತಾ ಆನಂದ ಪ್ರಾಪ್ತಿಗಾಗಿ ಹಂಬಲಿಸಿ ನಾನು ವ್ಯವಹರಿಸುತ್ತಿದ್ದಾಗ, ಶ್ರೀ ಸದ್ಗುರುನಾಥನ ನಿರ್ಯಾಣವಾಗಿ ಎರಡು ವರ್ಷಗಳಾದವು. ಆಗ ಏಳು ಸಹಸ್ರ ರೂಪಾಯಿ ಕೊಟ್ಟು ಸಂಗ್ರಹಿಸಿದ್ದ ಮುದ್ರಣದ ಸಾಧನಗಳಲ್ಲಿ ಮುಖ್ಯವಾದವನ್ನೂ, ಸದ್ಬೋಧ ಚಂದ್ರಿಕೆಯ ಮೇಲಿನ ಮಮಕಾರವನ್ನೂ ಬಿಟ್ಟು ಶ್ರೀ ಗುರುತಂತ್ರದಿಂದ ನಾನು ಪಾಠಶಾಲೆಯೊಡನೆ ಆನಂದವನದಿಂದ ಹಾವೇರಿಗೆ ಬರ-ಬೇಕಾಯಿತು! ಮಹಾಯುದ್ಧದ ಕಾಲ, ರೂಪಾಯಿ ಕೊಟ್ಟರೆ ಎರಡು ಸೇರು ಕಾಳು, ಕೇಳಿದ ಪದಾರ್ಥಗಳೆಲ್ಲ ಮಿತಿಮೀರಿ ತುಟ್ಟಿ, ಪಾಠಶಾಲೆಯ ನಲವತ್ತು ಜನ ವಿದ್ಯಾರ್ಥಿ-ಗಳ ಎರಡು ಹೊತ್ತಿನ ಊಟ, ಎಂಟು ಜನ ಅಧ್ಯಾಪಕರ ಮಾಸಾಶನದ ಪ್ರತಿ ತಿಂಗಳ ಸರಾಸರಿ 200ರೂ. ವೆಚ್ಚ, ಪ್ರಿಂಟಿಂಗ ಪ್ರೆಸ್ಸಿನ ನೌಕರರ ನೂರಾರು ರೂ. ಗಳ ಪಗಾರ, ತನ್ಮಧ್ಯೆ ಎಂಟು ಸಹಸ್ರ ರೂಪಾಯಿ ಕೊಟ್ಟು ಮುದ್ರಣದ ಸಾಧನಗಳನ್ನು ಕೊಳ್ಳುವ ಪ್ರಸಂಗ, ಇವೆಲ್ಲ ತೊಂದರೆಗಳ ತಿಕ್ಕಾಟದಲ್ಲಿ ನನ್ನ ಇಬ್ಬರು ಹೆಣ್ಣು ಮಕ್ಕಳ ಸಾಲಂಕೃತ ಕನ್ಯಾದಾನದ ಸುಯೋಗ; ಅಂದ ಬಳಿಕ ಕೇಳುವದೇನು ? ಹೊಳೆಯ ನೀರು ಏರಿದಂತೆ

1. ಕೃಷ್ಣಮೂರ್ತಿ ಕಿತ್ತೂರ : 'ಉದಾರ ಚರಿತ ಗಳಗನಾಥರು', ಕರ್ಮವೀರ, ದಿ. 5-1-1969.

ಗಳಗನಾಥನ ಸಾಲವು ಭರದಿಂದ ಏರತೊಡಗಿ, ಹದಿನಾಲ್ಕು ಸಾವಿರ ರೂಪಾಯಿಗಳವರೆಗೆ ಅದು ಏರಿತು! ಅಷ್ಟು ಹೊತ್ತಿಗೆ ಗಳಗನಾಥನ ಲೇಖನ ವ್ಯವಸಾಯದಿಂದ ಅರವತ್ತು ಸಹಸ್ರ ರೂಪಾಯಿಗಳ ಸಂಪಾದನವಾಗಿ, ಆ ಸಂಪಾದನದ ಬಹುದೊಡ್ಡ ಭಾಗವು ವೈದಿಕ ಪಾಠಶಾಲೆ-ಗೋಶಾಲೆಗಳಿಗಾಗಿ ವೆಚ್ಚವಾಗಿ ಹೋಗಿದ್ದಿತು."[1]

ಹಾವೇರಿಯ ಪಾಠಶಾಲೆಯಿಂದಾಗಿ ಗಳಗನಾಥರಿಗೆ ಸಾಲದ ಭಾರ ಹೆಚ್ಚಾಗುತ್ತಿದ್ದು-ದನ್ನು ಕಂಡು ಅವರ ಹಿತೈಷಿಗಳಲ್ಲಿ ಒಬ್ಬರಾದ ಹಾವೇರಿಯ ಶ್ರೀ ಅಭ್ಯಂಕರ ವಕೀಲರು ಪಾಠಶಾಲೆಯನ್ನು ಒಂದು ಟ್ರಸ್ಟಿಗೆ ಒಪ್ಪಿಸಲು ಹೇಳಿದರು. ಆದರೆ ಪಾಠಶಾಲೆಯನ್ನು ಗುರುಸೇವೆಯ ಮುಖ್ಯಾಂಗವೆಂದು ಭಾವಿಸಿದ್ದ ಗಳಗನಾಥರು ಅದಕ್ಕೆ ಒಪ್ಪಲಿಲ್ಲ. "ಹಣ ಸಂಪಾದಿಸಿ ಸಂಸ್ಥೆ ಮಾಡುವ ಉದ್ದೇಶ ನನ್ನದಲ್ಲ. ಸರಸ್ವತಿಯು ನನ್ನಿಂದ ಗ್ರಂಥ ಬರೆಯಿಸುತ್ತಾಳೆ, ಪಾಠಶಾಲೆಗೆ ಹಾಕಿಸುತ್ತಾಳೆ" ಎಂದರು. ವಕೀಲರಿಗೆ ಗಳಗನಾಥರ ಒದ್ದಾಟವನ್ನು ಕಂಡು ಕನಿಕರವೆನಿಸಿದ್ದರೂ, ಅವರ ಮಾತಿನಿಂದ ಕೋಪ ಬಂದಿತು. "ಟ್ರಸ್ಟ ಮಾಡದೆ ಇದ್ದರೆ ನನ್ನಿಂದ ಧನಸಹಾಯ ಸಿಗದು. ಕೊಟ್ಟ ಹಣವನ್ನು ವಾಪಾಸ ಕೊಡ-ಬೇಕಾದೀತು" ಎಂದೂ ಹೇಳಿದರು. ಸ್ವಾಭಿಮಾನಿ, ಹಟದ ಸ್ವಭಾವದ ಗಳಗನಾಥರು ಹೇಗೋ ಹಣದೊರಕಿಸಿ, ಅವರ ಸಾಲವನ್ನು ತೀರಿಸಲು ಮುಂದಾದಾಗ ಮಾತ್ರ, ವಕೀಲರಿಗೆ ಪಶ್ಚಾತ್ತಾಪವಾಯಿತು. ಅವರು ಹಣವನ್ನು ಇಸಿದುಕೊಳ್ಳಲಿಲ್ಲವಷ್ಟೇ ಅಲ್ಲ, ಮತ್ತೂ ಹೆಚ್ಚಿನ ಸಹಾಯದ ಭರವಸೆಯನ್ನಿತ್ತು "ನಿಮ್ಮ ದೃಢ ನಿಶ್ಚಯವೂ ಅವಿರಾಮವಾದ ಉದ್ಯೋಗಶೀಲತೆಯೂ ಹೆಚ್ಚಿನವು. ನೀವು ಹೀಗೆಯೇ ಧೈರ್ಯದಿಂದ ಕೆಲಸಮಾಡಿರಿ"[2] ಎಂದು ಪ್ರೋತ್ಸಾಹಿಸಿದರು. ಅಭ್ಯಂಕರರ ಧನಸಹಾಯವನ್ನು ಗಳಗನಾಥರು 'ಭಾಗವತಾಮೃತ' ಮತ್ತು 'ಶೈವಸುಧಾರ್ಣವ'ದ ಪ್ರಸ್ತಾವನೆಗಳಲ್ಲಿಯೂ ಕೃತಜ್ಞತೆಯಿಂದ ನೆನೆದಿರುವರು.

ಗಳಗನಾಥರು ಧೈರ್ಯದಿಂದ ಕೆಲಸ ಮಾಡಿದರು. ಅವರು ಸಾಲಕ್ಕೆ ಹೆದರಲಿಲ್ಲ. ಅವರ ಪಾಠಶಾಲೆ ಮತ್ತು 'ಸದ್ಗುರು' ಮಾಸಪತ್ರಿಕೆಗಳು ನಿಂತುಹೋದುವು. ಅದಕ್ಕಾಗಿ ವಿಷಾದಿಸಿದ ಅವರು ಅವುಗಳನ್ನು ಪುನಃ ಪ್ರಾರಂಭಿಸಬೇಕೆಂಬ ಉದ್ದೇಶದಿಂದಲೇ 'ಭಾಗವತಾ-ಮೃತ', 'ಶೈವಸುಧಾರ್ಣವ', 'ಮಾಧವ ಕರುಣಾವಿಲಾಸ' ಎಂಬ ಸುಮಾರು 1600 ಪುಟಗಳ ಪುಸ್ತಕಗಳನ್ನು ಬರೆದರು. 'ಮಾಧವ ಕರುಣಾವಿಲಾಸ'ದ ಪ್ರಸ್ತಾವನೆಯಲ್ಲಿ ತಮ್ಮ ಸಾಲದ ವಿವರಗಳನ್ನು ಕೊಟ್ಟು, ಗಳಗನಾಥರು ತಮ್ಮ ಧನಕೋಗಳನ್ನು ಅತ್ಯಂತ ಕೃತಜ್ಞತೆಯಿಂದ ನೆನೆದಿರುವರು.[3] ಅದರಂತೆ ಕೃತಜ್ಞತೆಯ ಸಂಕೇತವಾಗಿ ಅವರು ತಮ್ಮ 'ಮಾಧವ ಕರುಣಾವಿಲಾಸ'ವನ್ನು ಅತ್ಯಾದರದಿಂದ ಶ್ರೀ ಅಭ್ಯಂಕರ ವಕೀಲರಿಗೆ ಅರ್ಪಿಸಿರುವರು.

ಸಾಲ ತೀರಿಸುವದಕ್ಕಾಗಿ ಅವರು ಮತ್ತೆ ಮತ್ತೆ ಪುಸ್ತಕಗಳನ್ನು ಬರೆಯಬೇಕಾಯಿತು. ಸಾಲವು ಅವರಿಗೆ ಗುಪ್ತವರದಾನವೇ ಆಗಿ ಪರಿಣಮಿಸಿತು ಎನ್ನಬಹುದು. ಅವರಂತೂ ಹಾಗೆಯೇ ತಿಳಿದರು. "ನನ್ನ ಋಣಭಾರವು ಕಡಿಮೆಯಾಗಬೇಕೆಂದು ಬಹುಶ್ರಮ ಪಟ್ಟು ಈ ಮೊದಲೇ 'ಮಾಧವಕರುಣಾವಿಲಾಸ', 'ಭಾಗವತಾಮೃತ', 'ಶೈವಸುಧಾರ್ಣವ' ಎಂಬ ದೊಡ್ಡ

1. ಗಳಗನಾಥ: ಸದ್ಗುರು ಪ್ರಭಾವ, ಪುಟ 12
2. ಗಳಗನಾಥ: ಮಾಧವ ಕರುಣಾವಿಲಾಸ (ಮೊದಲ ಆವೃತ್ತಿ), ಪ್ರಸ್ತಾವನೆ.
3. ಗಳಗನಾಥ: ಮಾಧವಕರುಣಾವಿಲಾಸ, (ಮೊದಲ ಆವೃತ್ತಿ), ಪ್ರಸ್ತಾವನೆ.

ದೊಡ್ಡ ಮೂರು ಪುಸ್ತಕಗಳನ್ನು ಬರೆದು ಪ್ರಸಿದ್ಧ ಮಾಡಿದೆನು....ಆದರೆ ಋಣಭಾರದ ನೆವದಿಂದ ಇಂಥ ಹಲವು ಪುಸ್ತಕಗಳು ಶ್ರೀಗುರು ಪ್ರೇರಣೆಯಿಂದ ನನ್ನ ಮುಖಾಂತರ ಬಡಬಡ ಹೊರಬೀಳಬೇಕೆಂದು ದೇವರ ಸಂಕೇತವಿರುವದೋ, ಅನ್ನುವಂತೆ, ಸಾಲವು ತೀರದೆ, 'ಇನ್ನು ಮತ್ತೆ ಯಾವ ಪುಸ್ತಕ ಬರೆಯಬೇಕೆಂಬ' ಆತುರತೆಯು ಮಾತ್ರ ನನ್ನಲ್ಲಿ ಹೆಚ್ಚು-ತ್ತಿರುವದು....ನನಗೆ ಈ ಹನ್ನೆರಡು ಸಾವಿರ ರೂಪಾಯಿಗಳ ಸಾಲವಾಗದಿದ್ದರೆ, ಹೀಗೆ ದೊಡ್ಡ ದೊಡ್ಡ ಪುಸ್ತಕಗಳು ಒಂದರ ಹಿಂದೊಂದು ಪ್ರಸಿದ್ಧವಾಗುತ್ತಿದ್ದವೋ ಇಲ್ಲವೋ ಎಂಬುದನ್ನು ನಾನು ಹೇಳಲಾರೆನು. ಆದ್ದರಿಂದ ಇಂಥ ಸದ್ಗ್ರಂಥಗಳ ವ್ಯವಸಾಯದಿಂದ ನನ್ನ ಆತ್ಮಕ್ಕಾದ ಸುಸಂಸ್ಕಾರಕ್ಕಾಗಿ ನಾನು ನನ್ನ ಋಣಭಾರದ ವಿಷಯದಲ್ಲಿ ಅತ್ಯಂತ ಕೃತಜ್ಞನಾಗಿರುವದು ಅತ್ಯವಶ್ಯವು"[1] ಎಂದು ಬರೆದರು.

ಆದರೆ ಕೇವಲ ಪುಸ್ತಕ ಬರೆದುದರಿಂದ ಗಳಗನಾಥರ ತಲೆಯ ಮೇಲಿನ ಸಾಲದ ಗಂಟು ಕರಗಲಿಲ್ಲ; ಆಗ ಅವರು ಅನಿವಾರ್ಯವಾಗಿ ಪುಸ್ತಕಗಳ ಗಂಟನ್ನೇ ಹೆಗಲ ಮೇಲೆ ಹೊತ್ತರು! ತಮ್ಮಲ್ಲಿ ಸಂಗ್ರಹವಿದ್ದ 40 ಸಾವಿರ ರೂಪಾಯಿ ಬೆಲೆಯ ತಮ್ಮ ಪುಸ್ತಕಗಳನ್ನು ಹೊತ್ತುಕೊಂಡು ಊರೂರು ಅಲೆದು ಮಾರತೊಡಗಿದರು.[2]

ಗಳಗನಾಥರ ಸಾಲ ಬೆಳೆಯಲು ಮನೆತನದ ಹೊಣೆಯೂ ಕಾರಣವಾಯಿತು. ಅವರಿಗೆ ಕೇವಲ 19 ರೂಪಾಯಿ 6 ಆಣೆ ನಿವೃತ್ತಿವೇತನ ಬರುತ್ತಿತ್ತಷ್ಟೇ? ಸಾಲಮಾಡಿ ಗ್ರಂಥ ಪ್ರಕಟಿಸುವುದು, ಗ್ರಂಥಮಾರಿ ಸಾಲ ತೀರಿಸುವದು; ಸಾಲತೀರಿತೆನ್ನುವಷ್ಟರಲ್ಲಿ ಮತ್ತೆ ಅನೇಕ ಅಡಚಣೆಗಳು, ಅದರಲ್ಲೂ ಅವರ ಧಾರಾಳತನ. ಹಾಗಿರುವಾಗ ಅವರು ಸಾಲದಿಂದ ಪೂರ್ಣ ಮುಕ್ತರಾಗುವದು ಸಾಧ್ಯವೇ ಆಗಲಿಲ್ಲ.

1929ರಲ್ಲಿ ಅವರ ಅರವತ್ತು ವರ್ಷದ ಶಾಂತಿ ಬಂದಿತು. ಅದನ್ನವರು ಧಾರ್ಮಿಕ ಮತ್ತು ಸಾಮಾಜಿಕ ಎರಡೂ ರೀತಿಯಿಂದ ಸಾಕಷ್ಟು ಧಾರಾಳವಾಗಿಯೇ ಆಚರಿಸಿದರು. ಅಲ್ಲದೆ ಅವರು ಹಾವೇರಿಯ ವಿಸ್ತರಣದಲ್ಲಿ ಪಾಠಶಾಲೆ–ಮನೆಗಳನ್ನು ಕಟ್ಟಿಸಿದರು. ಒಂದು ಬಾವಿಯನ್ನು ತೆಗೆಯಿಸಿದರು. ಮಹಾಭಾರತವನ್ನು ಪ್ರಿಂಟು ಮಾಡಿದರು. ಹಣದ ಅಡಚಣೆಯಿಂದ ಈ ಕೆಲಸಗಳು ಅರ್ಧಕ್ಕೆ ನಿಂತುವು. "ಈ ಪ್ರಸಂಗದಲ್ಲಿ ಉದಾರರಾದ ಸದ್ಗೃಹಸ್ಥರು ಸರಾಸರಿ ಹನ್ನೆರಡು ಸಾವಿರ ರೂಪಾಯಿಗಳ ಸಹಾಯವನ್ನು ನನಗೆ ಒದಗಿಸಿಕೊಟ್ಟದ್ದು ಆಶ್ಚರ್ಯಪಡತಕ್ಕ ಸಂಗತಿಯೇ ಸರಿ! ದುಡ್ಡು ಹುಟ್ಟದ ಈಗಿನ ಅಸ್ಥಿರತೆಯ ಕಾಲದಲ್ಲಿ ಮಾಡಿಕೊಟ್ಟ ಈ ದ್ರವ್ಯಾನುಕೂಲತೆಗಾಗಿ ನಾನು ಆಯಾ ಮಹನೀಯರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಸ್ವಲ್ಪವೇ ಇರುವದು."[3] ಶ್ರೀಮಂತ ಜನರಲ್ಲದೆ ಕೆಲವರು ಸ್ವತಃ ಬಡವರೂ ಸಾಲಗಾರರೂ ಆಗಿದ್ದವರೂ ಸಹ ಗಳಗನಾಥರ ಮೇಲಿನ ಅಭಿಮಾನದಿಂದ ತಮ್ಮ ತಮ್ಮ ಶಕ್ತಿಯ ಮೇರೆಗೆ ಧನಸಹಾಯ ಮಾಡಿದ್ದರು. "ಹೀಗೆ ಶ್ರೀಮಂತರೂ ಬಡವರೂ ಸಹಾಯ ಮಾಡುತ್ತಾ ಬಂದದ್ದರಿಂದಲೇ ಗಳಗನಾಥನ ಸಾಹಸದ ಕಾರ್ಯಗಳೂ

---

1. ಗಳಗನಾಥ: ರಾಮಾಯಣಾಮೃತ, ಪ್ರಸ್ತಾವನೆ.
2. ಗಳಗನಾಥ: ಸದ್ಗುರು ಪ್ರಭಾವ, ಪುಟ 13, 14
3. ಗಳಗನಾಥ: ಮಹಾಭಾರತಾಮೃತ (ಆದಿಪರ್ವ), ಪ್ರಸ್ತಾವನೆ, ಪುಟ 37

ಕೊನೆಗಾಣುತ್ತ ಬಂದು, ಆ ಸಹಾಯಕರೆಲ್ಲರೂ ಪುಣ್ಯಭಾಗಿಗಳಾಗುತ್ತ ಬಂದಿರುತ್ತಾರೆ!"[1] ಎಂದು ಗಳಗನಾಥರು ನುಡಿದಿದ್ದರೂ, ಅವರಿಗೆ ಸಾಲದ ಹೊರೆ ನಿಜವಾಗಿಯೂ ಬೇಸರವಾಗಿರುವಂತೆ ಕಾಣುತ್ತದೆ. ಆದ್ದರಿಂದಲೇ ಅವರು ತಮ್ಮ 'ಮಹಾಭಾರತಾಮೃತ'ದ ಪ್ರಸ್ತಾವನೆಯಲ್ಲಿ 'ಕನ್ನಡಿಗರಿಗೆ ಪ್ರಾರ್ಥನೆ' ಮಾಡಿಕೊಂಡು ತಮ್ಮ ಮನೋಭೀಷ್ಟವನ್ನು ವ್ಯಕ್ತಮಾಡಿರುವರು.

"ಕನ್ನಡಿಗರಿಗೆ ಪ್ರಾರ್ಥನೆ-ಇಷ್ಟು ಕಷ್ಟಪಟ್ಟು, ಇಷ್ಟು ಖರ್ಚುಮಾಡಿ, ಹದಿನಾರು ಮಂದಿಗೆ ಕೈಜೋಡಿಸಿ ಹಲ್ಲುತೆಗೆದು ಪ್ರಾರ್ಥಿಸಿ, ಮನೆಮಾರುಗಳನ್ನು ಬಿಟ್ಟು ಆರು ತಿಂಗಳಿಂದ ಬೆಂಗಳೂರಲ್ಲಿ ಮನೆಮಾಡಿಕೊಂಡು ಇದ್ದು, ಆಯಾಸ ಪಟ್ಟದ್ದು ಕೇವಲ ಕನ್ನಡಿಗರ ಸೇವೆಗಾಗಿಯೇ ಅಲ್ಲವೇ ? ಇನ್ನು ಮೇಲಾದರೂ ಕನ್ನಡಿಗರ ಸೇವೆಯನ್ನು ದೇಹದಂಡನ-ಮನೋದಂಡಗಳಿಂದ ಬೇಕಾದಷ್ಟು ಮಾಡುವೆನು; ಆದರೆ ದುಡ್ಡಿಗಾಗಿ ಮಂದಿಗೆ ಬಾಯಿ ತೆರೆಯುವದು ಇಲ್ಲಿಗೆ ಸಾಕು! ಈಗ ಮೂವತ್ತು ವರ್ಷಗಳಿಂದ ಕನ್ನಡಿಗರ ಸೇವೆಗಾಗಿ. ಹಾಗೂ ಸಂಸ್ಕೃತ ವಿದ್ಯಾದಾನದ ಕಾರ್ಯಕ್ಕಾಗಿ ಅರವತ್ತು ಎಪ್ಪತ್ತು ಸಾವಿರ ರೂಪಾಯಿ ಸಾಲಮಾಡಿ ತೀರಿಸುವಾಗ 'ಮೊದಲು ಸಾಲಮಾಡಿ ಪುಸ್ತಕ ಛಾಪಿಸಬೇಕು, ಆಮೇಲೆ ನನ್ನ ಪ್ರಿಯ ಕನ್ನಡಿಗರು ಪುಸ್ತಕ ಕೊಂಡು ಅದನ್ನು ತೀರಿಸಬೇಕು' ಈ ರೀತಿಯು ಅನುಸರಿಸಿದ್ದಾಗಿದೆ....ನನ್ನ ಪ್ರಿಯ ಕನ್ನಡಿಗರು ಅರವತ್ತೆರಡು ವರ್ಷದ ವಯಸ್ಸಿನ ನನ್ನ ಈ ಕೋಳೆಪಾಟವನ್ನು ಇನ್ನು ದೂರಮಾಡಬೇಕು. ಈಗಾಗಿರುವ ಸಾಲವನ್ನು ಆದಿಪರ್ವ ಭಾರತದ ಐದುಸಾವಿರ ಪ್ರತಿಗಳನ್ನು ಮಾರಿ ತೀರಿಸಬೇಕೆಂತಲೂ, ಇನ್ನು ಮುಂದೆ ಯಾವ ಕೆಲಸಕ್ಕೂ ಸಾಲಮಾಡಲಿಕ್ಕಿಲ್ಲವೆಂತಲೂ ಪ್ರತಿಜ್ಞೆ ಮಾಡಿರುವೆನು. ನಾನು ಸೇವೆ ಮಾಡುತ್ತ ಮುದುಕನಾದರೂ ಸಾಲಗಾರನಾಗಿಯೇ ಇರುವದು ನನ್ನ ಸೇವ್ಯರಾದ ಪ್ರಿಯ ಕನ್ನಡಿಗರಿಗೆ ಭೂಷಣವಾಗಬಹುದೇ ?"[2] ಎಂದು ಗಳಗನಾಥರು ಕೇಳಿರುವಲ್ಲಿ ಅವರ ಹೃದಯದ ತಳಮಳವನ್ನು ಯಾರೂ ಗುರುತಿಸಬಹುದಾಗಿದೆ. ತಮಗೆ ಸಹಾಯ ಮಾಡಬಯಸಿದ ಅಕ್ಷರಸ್ಥ ಕನ್ನಡಿಗರು ತಾವು ಬರೆದ ಪುಸ್ತಕಗಳಲ್ಲಿ ತಮಗೆ ಬೇಕಾದವುಗಳನ್ನು 'ಸಾಲ ಮಾಡಿಯಾದರೂ' ಕೊಂಡುಕೊಳ್ಳುವ ಮನಸ್ಸು ಮಾಡಬೇಕೆಂದು ಕೊನೆಗೆ ಅವರು ಬಿನ್ನವಿಸಿರುವುದನ್ನು ಗಮನಿಸಿದರೆ, ಅವರ ಅಸಹಾಯ ಸ್ಥಿತಿಯ ಕಲ್ಪನೆ ಬರುವಂತಿದೆ. ಇದು 1931ರಲ್ಲಿಯ ಅವರ ಸ್ಥಿತಿ.

ಸರಿ, ಅಕ್ಷರಸ್ಥ ಕನ್ನಡಿಗರು ಅವರ ಗ್ರಂಥಗಳನ್ನು ಕೊಂಡೇ ಕೊಂಡರು. ಆದರೂ ಗಳಗನಾಥರ ಸಾಲವು ಬೆಳೆಯುತ್ತಲೇ ಹೋಯಿತು.

1932ರಲ್ಲಿ ಗಳಗನಾಥರು ಶ್ರೀನಿವಾಸ ನರಸಿಂಹ ಕಾಟೋಟಿ ಎಂಬವರು ಅನುವಾದಿಸಿದ 'ಶ್ರೀ ವೆಂಕಟೇಶ ಮಹಾತ್ಮ್ಯ'ದ ಎರಡನೆಯ ಆವೃತ್ತಿಯನ್ನು ಪ್ರಕಟಿಸಿದರು. ಈ ಕೃತಿಗೆ ಗಳಗನಾಥರು 37 ಪುಟಗಳ ದೀರ್ಘವಾದ ಮುನ್ನುಡಿಯನ್ನು ಬರೆದು ತಮ್ಮ ಧರ್ಮಶ್ರದ್ಧೆಯನ್ನು ವ್ಯಕ್ತಪಡಿಸಿರುವರು. ಈ ಮುನ್ನುಡಿಯಲ್ಲಿ ಅವರಿಗೆ ಮತ್ತೆ ತಮ್ಮ ಸಾಲದ ವಿಚಾರವನ್ನು ಎತ್ತದಿರಲಾಗಲಿಲ್ಲ. "ನಾವು ದೀರ್ಘ ಋಣದಿಂದ ಪೀಡಿತರಾಗಿರುವಾಗ

1. ಅದೇ, ಪುಟ 38
2. ಅದೇ, ಪುಟ 39

ಆ ಋಣದ ವಿಮೋಚನೆಗಾಗಿ ಶ್ರೀ ವೆಂಕಟೇಶ ಮಹಾತ್ಮ್ಯದ ಎರಡನೆಯ ಆವೃತ್ತಿಯನ್ನು ಹೊರಡಿಸಿರುವೆವು. ಯಾಕೆಂದರೆ ಬಡವನಾದ ನಾನು ಮಹಾಭಾರತದ ಪ್ರಿಂಟಿಗಾಗಿ 13 ಸಾವಿರ ರೂಪಾಯಿ ಸಾಲಮಾಡುವಾಗ ಎಷ್ಟು ಕಷ್ಟಪಟ್ಟಿರಬಹುದೆಂಬುದನ್ನು ತಿಳಿಯಲು ಶ್ರೀನಿವಾಸನೇ ಸಮರ್ಥನು. ನಾನು ಋಣ ವಿಮೋಚನೆಗಾಗಿ ಭಗವಂತನನ್ನು ಹೀಗೆ ಪ್ರಾರ್ಥಿಸುವೆನು. ಲೋಕೇಶನಾದ ನೀನು ಸಾಲಕ್ಕಾಗಿ ಪೇಚಾಡಿರಲು ಕ್ಷುದ್ರನಾದ ನಾನು ನೀಗಲಾರದ ಸಾಲದಿಂದ ಎಷ್ಟು ಹಣ್ಣಾಗಿರಬಹುದೆಂಬುದನ್ನು ನನ್ನ ಹೃದಯಸ್ಥನಾದ ನೀನು ತಿಳಿದು, ನನ್ನನ್ನು ಋಣಮುಕ್ತನಾಗಿ ಮಾಡಿ ಉದ್ಧರಿಸು. ಲಕ್ಷ್ಮೀಪತಿಯಾದ ನಿನಗೆ ಸಾಲವು ಬಹಳವಾಗಿ ಒಪ್ಪಬಹುದು. ಆದರೆ ಹುಟ್ಟು ಬಡವನಾದ ನಾನು ಕೈಕೊಂಡಿದ್ದ ಪರೋಪಕಾರದ ಕಾರ್ಯಕ್ಕಾಗಿ ಮೇಲಿಂದ ಮೇಲೆ ಮಂದಿಯ ಮೋರೆ ನೋಡಬೇಕಾಗಿರಲು, ನನಗೆ ಸಾಲವು ಒಪ್ಪಬಹುದೇ ? ಶ್ರಿಯಃಪತಿಯೇ, ನಿನ್ನ ಕೃಪೆಯಿಂದ ನಾನು ಋಣವಿಮೋಚನೆಯ ಸುದಿನವನ್ನು ಕಂಡೇನೇನು ? ಅಂಥ ಸುದಿನದಲ್ಲಿ ನಾನು ಪುನರ್ಜನ್ಮವನ್ನು ಹೊಂದಿದವನಂತೆ ವಿದ್ಯಾದಾನಾದಿ ಪರೋಪಕಾರದ ಕಾರ್ಯಗಳಲ್ಲಿ ಜಾಗೃತಿಯನ್ನೂ ತತ್ಪರತೆಯನ್ನೂ ತೋರಬಹುದೇನು ?"[1] ಎಂದು ದೈನ್ಯವಾಣಿಯಿಂದ ಪ್ರಾರ್ಥಿಸುತ್ತಿರುವ ಗಳಗನಾಥರ ಚಿತ್ರ ಕಣ್ಣಮುಂದೆ ಕಟ್ಟಿದಾಗ, ವಾಚಕರ ಕಣ್ಣು ತೇವವಾಗುತ್ತವೆ !

ಆದರೆ ಈ ವೆಂಕಣ್ಣ ಮಾಸ್ತರರ ಸಾಲ 'ವೆಂಕಪ್ಪನ ಸಾಲದಂತೆ' ತೀರದೆ ಬೆಳೆಯುತ್ತಲೇ ನಡೆದುದು ದೈವದುರ್ವಿಪಾಕವೇ ಸರಿ. ಅಲ್ಲದೆ ಅವರಿಗೆ ದೈವವೂ ಪ್ರತಿಕೂಲವಾಯಿತು. ಬೆಂಗಳೂರಿನ ನ್ಯಾಶನಲ್ ಟೈಪ ಫೌಂಡರಿಯ ಮಾಲೀಕರಾದ ಶ್ರೀ ರಂಗಸ್ವಾಮಿಯವರಿಂದ ಎರಡು ಸಾವಿರ ರೂಪಾಯಿಯ ಟಾಯಿಪು, ಕಾಗದ ಮೊದಲಾದವುಗಳನ್ನು ಸಾಲವಾಗಿ ತಂದು, ಗಳಗನಾಥರು ತಮ್ಮ ಸ್ವಂತ 'ಶ್ರೀ ವೆಂಕಟೇಶ ಮುದ್ರಣಾಲಯ'ವನ್ನು ಪ್ರಾರಂಭಿಸಿದ್ದರು. 1933ರಲ್ಲಾದ ಅತಿವೃಷ್ಟಿಯಿಂದಾಗಿ ಮುದ್ರಣಾಲಯವು ಬಿದ್ದುಹೋಯಿತು. ಆಗ ಗಳಗನಾಥರು "ನಮ್ಮ ಈಗಿನ ಸಾಮಾನ್ಯ ಗ್ರಹದೆಸೆಯ ಮೂಲಕ, ಅಂದರೆ ಪಂಚಮ ಶನಿ, ಜನ್ಮಸ್ಥ ಗುರು, ಜನ್ಮಸ್ಥ ಮಂಗಳ ಈ ಮೂರೂ ಗ್ರಹಗಳ ಸಮುಚ್ಚಾಯದ ಕುಯೋಗ ಒದಗಿರುವಾಗ, ಅಕಸ್ಮಾತ್ ನಮ್ಮ ಹೊಸ ಮುದ್ರಣಾಲಯದ ಕಬ್ಬಿಣದ ತೊಲೆಯು ಸರಿದು ಮುದ್ರಣಾಲಯವು ಬಿದ್ದಿತು"[2] ಎಂದು ಮಿಡುಕಿದ್ದರೂ ದೇವರ ಕೃಪೆಯಿಂದ ಯಂತ್ರಗಳಿಗೆ ಏನೂ ಹಾನಿಯಾಗಲಿಲ್ಲವೆಂದೂ ಪ್ರಾಣಹಾನಿ ತಪ್ಪಿತೆಂದೂ ಸಮಾಧಾನ ಪಟ್ಟಿರುವರು.[3] ಆಗ ಹಾವೇರಿಯ ಶ್ರೀಗುರುಬಸಪ್ಪ ಅಣ್ಣ ಮಾಗಾವಿ ಅವರು "500ರೂಪಾಯಿಗಳ ಕಟ್ಟಿಗೆ–ಕಬ್ಬಿಣಗಳ ಸಾಮಾನುಗಳನ್ನು ಅನುಕೂಲತೆಯಿಂದ ಹಣಕೊಡುವ ಕರಾರಿನಿಂದ" ಗಳಗನಾಥರಿಗೆ ಕೊಟ್ಟು ಸಹಾಯ ಮಾಡಿದರು. "ಈ ಮಾಗಾವಿ ಬಂಧುಗಳು ಮೂವತ್ತು ವರ್ಷಗಳಿಂದ ಶ್ರೀಸದ್ಗುರು ಸಂಸ್ಥೆಯ ಧರ್ಮಕಾರ್ಯಗಳಿಗೆ ಮುಖ್ಯ ಆಧಾರ

---

1. ಶ್ರೀನಿವಾಸಾಚಾರ್ಯ ಕಾಟೋಟಿ : ವೆಂಕಟೇಶ ಮಹಾತ್ಮ್ಯ, ಪ್ರಸ್ತಾವನೆ.
2. ಗಳಗನಾಥ : ಮಹಾಭಾರತಾಮೃತ ( ಸಭಾಪರ್ವ ), ಪ್ರಸ್ತಾವನೆ, ಪುಟ 2
3. ಆಗ ಗುರುನಾಥರ ಜೊತೆಗೆ ವಿರೂಪಾಕ್ಷ, ಮತ್ತು ಸಿಂದಗಿ ಎಂಬುವರು ಬುಡದಲ್ಲಿ ಸಿಕ್ಕಿದ್ದರಂತೆ. ಯಾರಿಗೂ ಹೆಚ್ಚು ಗಾಯವಾಗದೆ ಎಲ್ಲರೂ ಪಾರಾದರೆಂದು, ಅವರಲ್ಲೊಬ್ಬರಾದ ಶ್ರೀ ಸಿಂದಗಿ ಸಿದ್ದಪ್ಪ ತಿಳಿಸಿದರು.

ವಾಗಿರುವರೆಂದು ನಾವು ಸಂತೋಷದಿಂದ ತಿಳಿಸಿ, ಅವರ ಕಲ್ಯಾಣಚಿಂತನಪೂರ್ವಕ ನಮ್ಮ ಕೃತಜ್ಞತೆಯನ್ನು ವ್ಯಕ್ತ ಮಾಡುವೆವು" ಎಂದು ಗಳಗನಾಥರು ತಿಳಿಸಿರುವರು.[1]

ಮಹಾಭಾರತದ ಎರಡು ಪರ್ವಗಳನ್ನು ಪ್ರಕಟಿಸಿದ[2] ಮೇಲೆ ಗಳಗನಾಥರು 1938ರ ವರೆಗೆ ಯಾವ ಗ್ರಂಥವನ್ನೂ ಪ್ರಕಟಿಸುವ ಸಾಹಸ ಮಾಡಲಿಲ್ಲ. ಮಹಾಭಾರತ ಗ್ರಂಥದ ಪ್ರಕಾಶನದ ಸಾಲದ ಭಾರವನ್ನು ಕಡಿಮೆ ಮಾಡಿಕೊಳ್ಳಲು ಅವರು ಈಗ ಊರೂರು ಅಲೆದು ಪುಸ್ತಕಗಳನ್ನು ಮಾರಬೇಕಾಯಿತು. ಆದರೂ ಸಾಲ ಮುಟ್ಟಲಿಲ್ಲ. ಕೊನೆಗೆ ಕೆಲವು ಸಾಹುಕಾರರು ಕೋರ್ಟಿನ ಕಟ್ಟಿ ಏರುವ ಹೆದರಿಕೆ ಹಾಕಿದರು. ಅಂಥವರಲ್ಲಿ ಒಬ್ಬರಾದ ಬೆಂಗಳೂರಿನ ಧನಕೋ ಶ್ರೀ ರಂಗಯ್ಯನವರಿಗೆ ಗಳಗನಾಥರು ದಿನಾಂಕ 13-7-1938ರಂದು ಬರೆದ ಒಂದು ಪತ್ರ ಈ ರೀತಿ ಇದೆ :

> "ನೀವು ಕ್ರಮ ಜರುಗಿಸಬೇಕಾಗುವದೆಂದು ಬರೆದದ್ದನ್ನು ಓದಿ ವಿಷಾದವಾಯಿತು. ಅಲ್ಲಿಯ ವರೆಗೆ ಯಾವ ಧನಕೋ ಜನರನ್ನೂ ಹೋಗಗೊಡುವದಿಲ್ಲ. ಅವರೂ ಹೋಗುವ ಹಾಗಿಲ್ಲ. ನೀವು ನಮಗೆ 2000ರೂಪಾಯಿ ಸಾಲವಾಗಿ ಕಾರ್ಡಿನ ಮೇಲೆ ಕೊಟ್ಟು ದೊಡ್ಡ ಮನಸ್ಸಿನಿಂದ ತೀರಿಸಿಕೊಂಡಿರುತ್ತೀರಿ. ಇನ್ನು ನಾನು ಯಾವ ಧನಕೋ ಜನರಿಗೂ ತ್ರಾಸವಾಗಬಾರದೆಂದು (ನಾನು ಎಲ್ಲ ಇಸ್ಟೇಟ ಅಡವು ಹಾಕಿ) ಅವಾರ್ಡ ಮಾಡಿ ಕೊಟ್ಟಿರುತ್ತೇನೆ. ಮತ್ತು ಅವರೆಲ್ಲರೂ ಬಡ್ಡಿ ನಿಲ್ಲಿಸಿ ಕಂತು ಮಾಡಿಕೊಂಡಿರುತ್ತಾರೆ. ಲೋಭವಿರಬೇಕು. ಇತಿ ವಿನಂತಿ."

ಅದರಂತೆ ಗಳಗನಾಥರು ಮತ್ತೆ ಹೊಸ ಪುಸ್ತಕಗಳನ್ನು ಬರೆಯುವ ಕಾರ್ಯಕ್ಕೆ ಕೈಹಾಕಿದರು. ಹಳೆಯ ಪುಸ್ತಕಗಳ ಜೊತೆಗೆ ಕೆಲವು ಹೊಸ ಪುಸ್ತಕಗಳೂ ಇದ್ದರೆ ಮಾರಾಟಕ್ಕೆ ಅನುಕೂಲವೆಂದು ಅವರು ಭಾವಿಸಿರಬಹುದು. ಅದಕ್ಕಾಗಿ ಅವರು 1938ರಲ್ಲಿ "ನಮ್ಮ ಸಾಲ ತೀರಿಸುವ ಪುಸ್ತಕಗಳು" ಎಂದೇ ಕೆಲವು ಪುಸ್ತಕಗಳನ್ನು ಬರೆದು, ಪ್ರಕಟಿಸಿ ಮಾರಾಟ ಮಾಡುತ್ತ ಅಡ್ಡಾಡಬೇಕಾಯಿತು. ಅದಕ್ಕಾಗಿ ಅವರು (1) ಸ್ವರಾಜ್ಯ ಸುಗಂಧ (2) ಕಲಿಕುಠಾರ 2ನೆಯ ಭಾಗ (3) ಕಲಿ ಬಾಧಾನಿವಾರಕ ನಳ ಚರಿತ್ರೆ (4) ಸದ್ಗುಣ–ಸಂಭ್ರಮ ಮತ್ತು (5) ದುರ್ಗದ ಬಿಚ್ಚುಗತ್ತಿ 1ನೆಯ ಭಾಗ ಎಂಬ ಐದು ಪುಸ್ತಕಗಳನ್ನು ಬರೆದು ಬೇಗನೆ ಋಣಮುಕ್ತರಾಗಬಯಸಿದರು. ಆಗ ಅವರು "ಹಳೆಯ ಪುಸ್ತಕಗಳಲ್ಲಿ ಬಹಳ ಪುಸ್ತಕಗಳು ತೀರಿದ್ದರೂ, ಈ ಪುಸ್ತಕದ (ದುರ್ಗದ ಬಿಚ್ಚುಗತ್ತಿ 1ನೆಯ ಭಾಗ) ಕಡೆಯ ಪಾನಿನಲ್ಲಿ ಕೊಟ್ಟಿರುವ ಯಾದಿಯಂತೆ, ಕೆಲವು ಪುಸ್ತಕಗಳು ಶಿಲಕು ಇರುವವು. ನಮ್ಮ ಅಭಿಮಾನಿಗಳಾದ ಕನ್ನಡಿಗರು ಅವನ್ನು ಕೊಂಡರೂ, ನಮ್ಮ ಸಾಲ ತೀರಲಿಕ್ಕೆ ಸಹಾಯವಾಗುವದು" ಎಂದು

---

1. ಗಳಗನಾಥ : ಮಹಾಭಾರತಾಮೃತ (ಸಭಾಪರ್ವ), ಪ್ರಸ್ತಾವನೆ, ಪುಟ 3

2. ಉಳಿದ ಅಡಚಣೆಗಳು ಎಷ್ಟೇ ಬಂದರೂ ಅವರು ತಮ್ಮ ರಹಸ್ಯಸಹಿತವಾದ ಭಾರತಾಮೃತದ ಹದಿನೆಂಟೂ ಪರ್ವಗಳನ್ನು ಬರೆದು ಮುಗಿಸಿದರು. ಆದರೆ ದುರ್ದೈವದಿಂದ ಹಣದ ಅಡಚಣೆಯುಂಟಾಗಿ ಅವುಗಳು ಇಂದಿಗೂ ಅಚ್ಚಾಗದೆ ಹಾಗೆ ಉಳಿದುಕೊಂಡಿವೆ. ಹಸ್ತಪ್ರತಿ ಈಗ ಗಳಗನಾಥರ ದತ್ತಕ ಮಗ ಶ್ರೀ ಬಿ. ವಿ. ಗಳಗನಾಥರ ಹತ್ತಿರ ಇನ್ನೂ ಇದೆ. ಗಳಗನಾಥರ ಬಗ್ಗೆ ಅವರಲ್ಲಿ ಗೌರವವಿದ್ದರೂ ಮುದ್ರಿಸುವುದಿರಲಿ, ಹಸ್ತಪ್ರತಿಯನ್ನು ಕೂಡ ಅವರಿಂದ ಸರಿಯಾಗಿ ಇಡುವದು ಶಕ್ಯವಾಗಿಲ್ಲದಿರುವುದು ವಿಷಾದದ ಸಂಗತಿ.

ತಮ್ಮ 'ಪ್ರಿಯ ಕನ್ನಡಿಗರಲ್ಲಿ ಅರಿಕೆ' ಮಾಡಿಕೊಂಡಿರುವರು.[1]

ಅಂತೂ ಆ ವರ್ಷದ ಸಾಲದ ಕಂತು ತುಂಬುವುದೂ ಅವರಿಗೆ ಕಠಿಣವಾಗಿತ್ತು. "ನಮ್ಮ ಸಾಲದ ಹದಿಮೂರು ನೂರು ರೂಪಾಯಿಗಳ ವಾರ್ಷಿಕ ಕಂತನ್ನು. ಈ ಕಠಿಣ ಕಾಲದಲ್ಲಿ ನಮ್ಮಂಥವರು ಕೂಡಿಸುವದು ಪರಮ ದುಸ್ತರವಾಗಿದ್ದರಿಂದ, ಆದಷ್ಟು ಬೇಗನೇ ಪುಸ್ತಕವು ಹೊರಬೀಳಬೇಕೆಂಬ ಅವಸರದಲ್ಲಿ, ಹಣದ ತೊಂದರೆಯಾಗಿರಲು. ನುಣುಪು ಕಾಗದವನ್ನು ತರಿಸುವ ಗೊಡವಿಗೆ ಹೋಗದೆ, ನಮ್ಮಲ್ಲಿದ್ದ ಉರುಟು ಕಾಗದದಲ್ಲಿಯೇ ಈ ಕಾದಂಬರಿಯನ್ನು ಮುದ್ರಿಸಬೇಕಾದದ್ದು ನಮ್ಮ ಅಸಮಾಧಾನಕ್ಕೆ ಕಾರಣವಾಗಿದೆ"[2] ಎಂದು 1938ರಲ್ಲಿ ಮಿಡುಕಿದ್ದಾರೆ.

ಬೇಗ ಬೇಗ ಬರೆದು, ಮಾರಿ ಸಾಲ ತೀರಿಸಬೇಕೆಂಬ ಗಳಗನಾಥರಿಗೆ ತಮ್ಮ ಕಾದಂಬರಿಯ ಬಗ್ಗೆ ಪ್ರಸ್ತಾವನೆಯನ್ನು ವಿಸ್ತರಿಸಿ ಬರೆಯಲು ಸಹ ವೇಳೆ ದೊರೆಯಲಿಲ್ಲ. 'ಸ್ವರಾಜ್ಯ ಸುಗಂಧ'ದ ಪ್ರಸ್ತಾವನೆಯಲ್ಲಿ "ಈ ನೂತನವಾದ ಸ್ವತಂತ್ರ ಐತಿಹಾಸಿಕ ಬೋಧಪ್ರದ ಕಾದಂಬರಿಯ ವಿಷಯದಲ್ಲಿ ಎರಡು ಮಾತು ಬರೆಯುವದು ಅವಶ್ಯವಿದ್ದರೂ, ನಮಗೆ ಬೇರೆ ಪುಸ್ತಕಗಳನ್ನು ಬೇಗನೇ ಬರೆಯುವ ಅವಸರವಿದ್ದದ್ದರಿಂದ, ಈಗ ನಾವು ಒಂದು ಮಾತನ್ನು ಕೂಡ ಬರೆಯುವದಿಲ್ಲ."[3] ಎಂದು ಹೇಳಿರುವ ಗಳಗನಾಥರ ಕರುಣಾಜನಕ ಸ್ಥಿತಿಯನ್ನು ಕಂಡು ಯಾರ ಮನವೂ ಕರಗದೆ ಇರಲಾರದು.

ಕಾದಂಬರಿಯ ವಿಷಯದಲ್ಲಿ ಬರೆಯಲಾಗದಿದ್ದರೂ ಗಳಗನಾಥರು, ಪಾಪ! ತಮ್ಮ ಸಾಲದ ಬಗ್ಗೆ ಬರೆಯಲೇ ಬೇಕಾಯಿತು. "ನಮಗೆ ಹೋದ ಪುಷ್ಯ ಮಾಸಕ್ಕೆ ಎಪ್ಪತ್ತು ವರ್ಷಗಳು ತುಂಬಿಹೋದವು; ಆದ್ದರಿಂದ ಕನ್ನಡಿಗರು ನಮ್ಮ ಈ ಸಾಲ ತೀರಿಸುವ ಹೊಸ ಪುಸ್ತಕಗಳನ್ನು, ಹಾಗೂ ಸಿಲಕು ಇರುವ ನಮ್ಮ ಹಿಂದಿನ ಪುಸ್ತಕಗಳಲ್ಲಿ ತಮಗೆ ಬೇಕಾದವುಗಳನ್ನು ಕೊಂಡು ನಮ್ಮ ಸಾಲವನ್ನು ಬೇಗನೇ ತೀರಿಸಿದರೆ, ನಮ್ಮ ವೃದ್ಧಾಪ್ಯಕಾಲದ ಕಷ್ಟತರವಾದ ಸಂಚಾರದ ಕಾರ್ಯವನ್ನು ಮುಗಿಸಿಬಿಟ್ಟು, ಶೇಷಾಯುಷ್ಯವನ್ನು ಈಶ್ವರಾರಾಧನ, ಅತಿಥಿಸೇವೆ, ಗೋಸೇವೆ ಮುಂತಾದ ತಾರಕ ಕಾರ್ಯಗಳನ್ನು ಮಾಡುತ್ತ ಶಾಂತಿದಾಯಕಳಾದ ಅಧ್ಯಾತ್ಮಿಕ ಗ್ರಂಥಗಳನ್ನು ಬರೆಯುತ್ತ ಕಳೆದು, ಸ್ವಸ್ಥವಾಗಿ ಮನೆಯಲ್ಲಿರಬೇಕೆಂದು ಮಾಡಿದ್ದೇವೆ. ಈ ನಮ್ಮ ಇಚ್ಛೆಯನ್ನು ಪೂರ್ಣಮಾಡುವದಕ್ಕಾಗಿ ಕನ್ನಡಿಗರನ್ನು ಪ್ರೇರಿಸಲು, ನಾವು ಪರಮೇಶ್ವರನನ್ನು ಅನನ್ಯ ಭಾವದಿಂದ ಪ್ರಾರ್ಥಿಸುವೆವು."[4]

ಗಳಗನಾಥರ ವೃದ್ಧಾಪ್ಯದ ಈ ಅನನ್ಯ ಪ್ರಾರ್ಥನೆಯ ಕೂಗು ಇನ್ನೂ ಕಿವಿಯಲ್ಲಿ ಮೊಳಗಿದಂತಾಗುತ್ತದೆ. ಮುಂದೆ ಅವರು ಬದುಕಿದುದು ನಾಲ್ಕೇವರ್ಷ. ಆದರೆ ಆಗ ಕೂಡ ಅವರು ಬಯಸಿದ ಸ್ವಾಸ್ಥ್ಯ-ಶಾಂತಿಗಳು ಅವರಿಗೆ ದೊರೆಯಲೇ ಇಲ್ಲ. ಕಡೆತನಕ ಅವರು ಸಂಚಾರೀ ಮಾರಾಟಗಾರರಾಗಿಯೇ ದಿನಗಳೆದು, ಸಾಲಗಾರರಾಗಿಯೇ ಕಣ್ಣು ಮುಚ್ಚ ಬೇಕಾಯಿತು.

---

1. ಗಳಗನಾಥ: ದುರ್ಗದ ಬಿಚ್ಚುಗತ್ತಿ, 1ನೆಯ ಭಾಗ, ಪ್ರಸ್ತಾವನೆ, ಪುಟ 10
2. ಗಳಗನಾಥ: ಸ್ವರಾಜ್ಯ ಸುಗಂಧ, ಪ್ರಸ್ತಾವನೆ, ಪುಟ 3
3. ಅದೇ, ಪುಟ 3
4. ಅದೇ, ಪುಟ 3, 4

ಹೀಗೆ ಸಂಚಾರೀ ಮಾರಾಟಗಾರರಾಗಿ ತಿರುಗಬೇಕಾಗಿ ಬಂದಾಗ ಅವರು ಅನೇಕ ಕಷ್ಟ-ಕಾರ್ಪಣ್ಯಗಳನ್ನು ಅನುಭವಿಸಿದರು. ಆದರೂ ಆ ಧೀಮಂತ ವ್ಯಕ್ತಿ ಅದನ್ನು ತೆಗಳಲಿಲ್ಲ; ಅದಕ್ಕಾಗಿ ಯಾರನ್ನೂ ದೂಷಿಸಲಿಲ್ಲವಷ್ಟೇ ಅಲ್ಲದೆ, ಪುಸ್ತಕ ಮಾರಾಟವೂ ಭಾಷಾಸೇವೆಯ ಒಂದು ಅಂಗವೆಂದೇ ಗಣಿಸಿದರು. "ಗಳಗನಾಥನು ಭಾಷಾಸೇವೆಯ ಅಂಗಗಳಾದ ಮೂರೂ ಕೆಲಸಗಳನ್ನೂ ಕ್ರಮವಾಗಿ ಮಾಡಬೇಕಾಯಿತು. ಅವುಗಳಲ್ಲಿ ಪುಸ್ತಕ ಬರೆದದ್ದು ಒಂದನೆಯ ಕೆಲಸವು, ಆ ಬರೆದ ಪುಸ್ತಕಗಳನ್ನು ಮುದ್ರಿಸುವದಕ್ಕಾಗಿ ಸ್ವತಃ ಎರಡು ಸ್ಥಳಗಳಲ್ಲಿ (ಅಗಡಿ, ಹಾವೇರಿ) ಪ್ರೆಸ್ಸು ಇಟ್ಟದ್ದು ಎರಡನೆಯ ಕೆಲಸವು; ಬೇಗನೇ ಸಾಲ ತೀರಬೇಕೆಂದು ಆ ಮುದ್ರಿಸಿದ ಪುಸ್ತಕಗಳನ್ನು ತಲೆಯ ಮೇಲೆ ಹೊತ್ತು ಈಗ ಮಾರತೊಡಗಿರುವದು ಮೂರನೆಯ ಕೆಲಸವು! ಈ ಮೂರೂ ಕೆಲಸಗಳನ್ನು ಬೇರೆ ಬೇರೆಯವರು, ಅಂದರೆ, ಲೇಖಕರು-ಮುದ್ರಕರು-ವ್ಯಾಪಾರಿಗಳು ಮಾಡುವ ವಾಡಿಕೆಯೇ ವಿಶೇಷವಾಗಿರಲು, ಇವನ್ನೆಲ್ಲ ಅಭಿಮಾನ ತೊರೆದು ಕೈಮುಟ್ಟಿ ಮಾಡಿ ಧನ್ಯವಾಗುವ ಸುಯೋಗವನ್ನು ಸರ್ವೇಶ್ವರನು ಒದಗಿಸಿಕೊಟ್ಟದ್ದಕ್ಕಾಗಿ ನನಗೆ ಪರಮಾನಂದವಾಗಿರುವದು. ಯಾಕೆಂದರೆ ಪ್ರಾಮುಖ್ಯವಾಗಿ ಪುಸ್ತಕ ಮಾರುವಾಗ ನನಗಾದ ಅನುಭವದ ಲಾಭವನ್ನು ನಾನು ಇಷ್ಟೆಂದು ಹೇಳುವ ಹಾಗಿಲ್ಲ"[1] ಎಂಬ ಗಳಗನಾಥರ ವಿಚಾರವನ್ನು ನೋಡಿದರೆ 'ಬಂದದ್ದೆಲ್ಲ ಈಶ್ವರನ ಕೃಪೆ' ಎಂಬ ದಾಸರ-ಶರಣರ ಪ್ರಸಾದಿಯ ಮನೋಭಾವವೇ ಕಾಣುತ್ತದೆ.

ಪುಸ್ತಕ ಮಾರಾಟಕ್ಕೆ ಗಳಗನಾಥರು ಬಹುಶಃ ಇಡೀ ಕರ್ನಾಟಕವನ್ನೇ ಸುತ್ತಿದರು. ಮೊದಲು ಅವರು ಧಾರವಾಡ ಜಿಲ್ಲೆಯಲ್ಲಿಯೇ ಪುಸ್ತಕ ಮಾರಾಟದ ಸತ್ರವನ್ನು ಆರಂಭಿಸಿದರು. ಅಲ್ಲಿಯೇ ಅವರಿಗೆ ಎಂಟು ಸಾವಿರ ರೂಪಾಯಿಗಳ ಪುಸ್ತಕಗಳ ಮಾರಾಟವಾಯಿತು. ಅನಂತರ ಅವರು 1927ರಲ್ಲಿ ಬೆಂಗಳೂರಿಗೆ ಬಂದರು. ಮೊದಲು ಅಲ್ಲಿ ವಿಶೇಷ ಪ್ರೋತ್ಸಾಹ ದೊರೆಯಲಿಲ್ಲವಾದರೂ, ಅನಂತರ ಸಾಕಷ್ಟು ಪ್ರಯೋಜನವಾಯಿತು. ಮೂರು ತಿಂಗಳಲ್ಲಿ ಎರಡು ಸಾವಿರ ರೂಪಾಯಿಗಳ ಪುಸ್ತಕಗಳು ಮಾರಾಟವಾದುವು. ಬೆಂಗಳೂರಿನ ಧನೌದಾರ್ಯವನ್ನೂ ಗುಣೌದಾರ್ಯವನ್ನೂ ಗಳಗನಾಥರು ಬಹುವಾಗಿ ಕೊಂಡಾಡಿರುವರು. ಅಲ್ಲಿ ಹೊಸಕೆರೆ ಚಿದಂಬರಯ್ಯನವರು ಗಳಗನಾಥರಿಗೆ ಬೆಂಗಳೂರಲ್ಲಿ ದರ್ಶನ ಮಾಡಿಕೊಳ್ಳಬಹುದಾದ ವಿದ್ವಾಂಸರ ಹೆಸರನ್ನು ಸೂಚಿಸಿ, ಅನೇಕ ಕಡೆಗೆ ಕರೆದೊಯ್ದು ಭೆಟ್ಟಿ ಮಾಡಿಸಿದರು. ಅನೇಕ ಮಹನೀಯರ ಸ್ನೇಹಭಾಗ್ಯ ದೊರೆತುದರಿಂದ ಗಳಗನಾಥರಿಗೆ ಹೆಚ್ಚಿನ ಪ್ರೋತ್ಸಾಹವೂ ಕಾರ್ಯೋತ್ಸಾಹವೂ ದೊರೆತುವು. ಕನ್ನಡ ಸಾಹಿತ್ಯ ಪರಿಷತ್ತಿನಿಂದ ದೊರೆತ ಧನಸಹಾಯ ಮತ್ತು ಅದಕ್ಕೂ ಹೆಚ್ಚಿಗೆ ಮೈಸೂರ ಮಹಾರಾಜ ಕಾಲೇಜಿನ ಕರ್ನಾಟಕ ಸಂಘದವರಿಂದ ದೊರೆತ ಸನ್ಮಾನಗಳು ಗಳಗನಾಥರ ಹೃದಯಕ್ಕೆ ಹೆಚ್ಚಿನ ಶಾಂತಿ-ಸಮಾಧಾನಗಳನ್ನು ತಂದು ಕೊಟ್ಟವು.

ಗಳಗನಾಥರು ಬೆಂಗಳೂರಿನಲ್ಲಿ ಪುಸ್ತಕಗಳನ್ನು ಸ್ವತಃ ಮಾರಿದ್ದು ಕೇವಲ ಎರಡು ದಿನ ಮಾತ್ರ. ಮುಂದೆ ಅವರು ಅಲ್ಲಿ ಗ್ರಂಥರಚನೆಯಲ್ಲಿಯೇ ತೊಡಗಿ ತಮ್ಮ ಸಹಾಯಕರನ್ನು ಮಾತ್ರ ಮಾರಾಟದ ಕೆಲಸಕ್ಕೆ ತೊಡಗಿಸಿದರು. ಅಂಥವರಲ್ಲಿ ಒಬ್ಬರಾದ ಹಾವೇರಿಯ ಶ್ರೀ ದತ್ತಾತ್ರೇಯ ವಿರೂಪಾಕ್ಷ ಸಿಂದಗಿ ಅವರು ತಮ್ಮ ಅನುಭವವನ್ನು ಹೇಳುತ್ತ, "ನಾನು

1. ಗಳಗನಾಥ: ಸದ್ಗುರು ಪ್ರಭಾವ, ಪುಟ 14

1925ರಿಂದಲೇ ಅವರ ಜೊತೆ ಇದ್ದೆ. ಪ್ರೆಸ್ಸಿನಲ್ಲೂ ಕಂಪೋಜಿಂಗ ಕೆಲಸ ಮಾಡಿದ್ದೇನೆ. ಪ್ರೆಸ್ಸಿನಲ್ಲಿ 10–12ಜನ ಕಂಪೋಜಿಟರು ಇದ್ದರು. ಪುಸ್ತಕ ಮಾರಲಿಕ್ಕೆಂದು ಅವರು 1927ರಲ್ಲಿ ಬೆಂಗಳೂರಿಗೆ ಹೋದರು. ಅವರ ಜೊತೆ ನಾನಲ್ಲದೆ ನಾರಾಯಣ ಶಾಸ್ತ್ರಿ ಶಾಡಂಬಿಕರ ಮತ್ತು ಕ್ಯಾಲಕೊಂಡದ ತಿಪ್ಪಣ್ಣ ಕುಲಕರ್ಣಿ ಅವರೂ ಇದ್ದರು (ಇವರು ಏನೂ ಕಮಿಶನ್ ತೆಗೆದುಕೊಳ್ಳದೆ ಮಾಸ್ತರರ ಪುಸ್ತಕ ಮಾರುತ್ತಿದ್ದರು. ಅನಂತರ ಇವರು ಸಂನ್ಯಾಸ ತೆಗೆದು-ಕೊಂಡು ಅಭಿನವ ಶಂಕರ ಸ್ವಾಮಿಗಳಾದರು.) ಮಾಸ್ತರರ ಬಗ್ಗೆ ಎಲ್ಲರಲ್ಲೂ ಪೂಜ್ಯಭಾವನೆ ಇತ್ತು. ಪುಸ್ತಕಗಳ ಬಗ್ಗೆ ಯಾರೂ ತಾತ್ಸಾರ ಮಾಡಲಿಲ್ಲ. ಅದರಲ್ಲೂ ಅವರ ಪುಸ್ತಕದ ಮೇಲೆ ಹೆಣ್ಣು ಮಕ್ಕಳ ಪ್ರೀತಿ ಹೆಚ್ಚು. ಎಲ್ಲಾ ಪುಸ್ತಕ ಕೊಳ್ಳುತ್ತಿದ್ದರು. ಮೈಸೂರು ಬೆಂಗಳೂರು ಭಾಗದಲ್ಲೆ ಪುಸ್ತಕ ಮಾರಾಟ ಹೆಚ್ಚು. ಈ ಭಾಗದ ನೂರುಪಟ್ಟು–ಮಾರಾಟಾ-ದವು. ಮಾಸ್ತರರು ಪುಸ್ತಕದಲ್ಲಿ ಏನೇನು ಇದೆಯೆಂದು ತಿಳಿಸಿ ಹೇಳುತ್ತಿದ್ದರು, ಜನರ ಮನಸ್ಸನ್ನು ಹಿಡಿದುಕೊಳ್ಳುತ್ತಿದ್ದರು. ಅವರು ಒಂದು ದಿನ ಕಲಾಮಂದಿರದಲ್ಲಿ 'ಗೀತಾ ಶ್ರವಣಾಧಿಕಾರ' ಎಂಬ ವಿಷಯದ ಮೇಲೆ ಭಾಷಣ ಮಾಡಿದರು. ಅದರ ಪ್ರಭಾವದಿಂದಾಗಿ ಇವರ ಪುಸ್ತಕಗಳ ಪ್ರಚಾರ ಬಹಳವಾಯಿತು.

"ಒಬ್ಬ ರಜಪೂತನಂತೂ 'ಸತ್ವಸಾರ'ವನ್ನು ಪಾರಾಯಣ ಮಾಡುತ್ತಿದ್ದನು. ಅವನು ನಾನೇ ಗಳಗನಾಥರೆಂದು ತಿಳಿದು ಸಾಷ್ಟಾಂಗ ನಮಸ್ಕಾರ ಮಾಡಿದ! ಗಳಗನಾಥರು ಮನೆಯಲ್ಲಿದ್ದಾರೆ ಎಂದು ನಾನು ಹೇಳಿದೆ. ಗಳಗನಾಥರಿಗೆಂದು ಆತ ಹಣ್ಣಿನ ಬುಟ್ಟಿಯನ್ನೇ ತಂದಿಟ್ಟ. "ನೀವು ಮಕ್ಕಳೇನು?" ಎಂದು ನನ್ನ ಕೇಳಿದ, ನಾನು "ಹೌದು" ಎಂದೆ. ಅದರಲ್ಲಿ ತಪ್ಪೇನು? ಅವರು ನಮ್ಮನ್ನು ಮಕ್ಕಳಂತೆಯೇ ನೋಡಿಕೊಳ್ಳುತ್ತಿದ್ದರು.

"ಬೆಂಗಳೂರಲ್ಲಿ ಅವರಿಗೆ ನಾನು 'ಛತ್ರಸಾಲ', 'ರಾಣಾ ರಾಜಸಿಂಹ' ಒಯ್ದುಕೊಟ್ಟೆ. ಅಲ್ಲಿ ಅವರು 'ರಾಣಿ ಮೃಣಾಲಿನಿ', 'ರಾಜಸಿಂಹ', 'ಛತ್ರಸಾಲ' 'ಸದ್ಗುರು–ಪ್ರಭಾವ' ಬರೆದರು. 'ದಕ್ಷಿಣೇಚಾ ವಾಘ'(ಟೀಪೂ ಸುಲ್ತಾನನ ಕಥೆ)ವನ್ನು ಶ್ರೀರಂಗಪಟ್ಟಣ ನೋಡಿಕೊಂಡು ಬಂದು ಬರಿಯೋಣ ಎಂದರು. ಆದರೆ ಆಗಲಿಲ್ಲ. ಅಲ್ಲಿದ್ದಾಗ ಚ. ವಾಸುದೇವಯ್ಯನವರು ತಮ್ಮ 'ಭೀಷ್ಮಚರಿತೆ' ಎಂಬ ಪುಸ್ತಕವನ್ನು ಮಾಸ್ತರರಿಗೆ ಅರ್ಪಿಸಿದರು. ಅವರು ಅದರ ಶೈಲಿಯನ್ನು ಬಹಳ ಮೆಚ್ಚಿದರು." ಎಂದು ಮುಂತಾಗಿ ಗಳಗನಾಥರ ವಿಷಯವನ್ನು ತಿಳಿಸುತ್ತಾರೆ.[1]

ಸ್ವತಃ ಗಳಗನಾಥರು 'ಸದ್ಗುರು ಪ್ರಭಾವ'ದಲ್ಲಿ ತಮ್ಮ ಪುಸ್ತಕ ಮಾರಾಟದ ಬಗ್ಗೆ ಬರೆದಿರುವರು. ಅವರು ಬೆಂಗಳೂರಿನಲ್ಲಿದ್ದಾಗ ಶ್ರೀ ಬೆಟಗೇರಿ ಕೃಷ್ಣಶರ್ಮಾ ಅವರು ಗಳಗನಾಥರನ್ನು ಕಾಣಲು ಶ್ರೀ ದೇವುಡು ನರಸಿಂಹ ಶಾಸ್ತ್ರಿಗಳ ಜೊತೆಗೆ ಹೋಗಿದ್ದರು. ಮಾತಿಗೆ ಮಾತು ಬಂದು ಗಳಗನಾಥರು ಪರಿಷತ್ತಿನ ಶ್ರೀ ಬಿ. ವೆಂಕಟನಾರಣಪ್ಪನವರೂ, ಪ್ರೊ. ಟಿ. ಎಸ್. ವೆಂಕಣ್ಣಯ್ಯನವರೂ ತುಂಬ ದೊಡ್ಡ ಮನುಷ್ಯರು. ಅವರು ಕೊಡುತ್ತಿರುವ ಸಹಕಾರ ಅವಿಸ್ಮರಣೀಯ. ಅವರಿಂದಾಗಿ ಬಹಳಷ್ಟು ಪುಸ್ತಕಗಳು ಮಾರಾಟವಾಗುತ್ತಿವೆಯೆಂದು ತಿಳಿಸಿದ್ದರು. ಮುಂದೆ ತಮ್ಮ ಬೇರೆ ಅನುಭವ ಹೇಳುತ್ತ ಹೈದರಾಬಾದದ ಡಾಕ್ಟರರೊಬ್ಬರ

1. ಶ್ರೀಯುತರನ್ನು ಲೇಖಕನು ಹಾವೇರಿಯಲ್ಲಿ 1970ನೆಯ ಜೂನ ತಿಂಗಳಲ್ಲಿ ಭೆಟ್ಟಿಯಾಗಿದ್ದಾಗ ಅವರಿಗೆ 63 ವರ್ಷ ವಯಸ್ಸು.

ಮನೆಯಲ್ಲಿ ತಮಗೆ ಬಂದ ವಿಚಿತ್ರ ಅನುಭವವನ್ನು ವಿವರಿಸಿದ್ದರು. ಹಾಗೆ ನೋಡಿದರೆ ಅದನ್ನು ವಿಚಿತ್ರವೆಂದು ಕರೆಯುವ ಕಾರಣವಿಲ್ಲ. ಯಾಕೆಂದರೆ ಗಳಗನಾಥರಿಗೆ ಅಂಥ ಅನುಭವಗಳು ಅನೇಕ ಉಂಟಾಗಿವೆ.

ಗಳಗನಾಥರು ತಮ್ಮ ಪುಸ್ತಕಗಳ ಮಾರಾಟಕ್ಕಾಗಿ ಹೈದರಾಬಾದಿಗೆ ಹೋಗಿದ್ದರು. ಅಲ್ಲಿಯ ಅನೇಕ ಕನ್ನಡಿಗರಿಂದ ಅವರಿಗೆ ಮನ್ನಣೆಯೂ ತಕ್ಕಮಟ್ಟಿಗೆ ಹಣವೂ ದೊರೆತವು. ಆದರೆ ಉತ್ತರ ಕರ್ನಾಟಕದಿಂದ ಅಲ್ಲಿಗೆ ಹೋಗಿ ನೆಲೆಸಿದ ಡಾಕ್ಟರರೊಬ್ಬರ[1] ಕಡೆಗೂ ಆಗ ಅವರು ಹೋಗಿದ್ದರು. ಸಾಕಷ್ಟು ಹಣ ಸಂಪಾದಿಸಿ ಡಾಕ್ಟರರು ಸಿರಿವಂತರಾಗಿದ್ದರು. ಗಳಗನಾಥರು ಪುಸ್ತಕಗಳ ಗಂಟನ್ನು ಹೊತ್ತುಕೊಂಡು ಹೋಗಿ ನಿಂತಾಗ, ಅವರನ್ನು ಸ್ವಾಗತಿಸಲಿಲ್ಲ ಕೂಡ. ಗಳಗನಾಥರೇ ಒಂದು ಕುರ್ಚಿಯ ಮೇಲೆ ಕುಳಿತು ತಾವಾರೆಂಬುದನ್ನು, ಏತಕ್ಕೆ ಬಂದಿದ್ದರೆಂಬುದನ್ನು ಅವರಿಗೆ ತಿಳಿಸಿ ಹೇಳಿದರು. ಆಗ ಆ ಡಾಕ್ಟರರು ತಮ್ಮ ಮನೆಯಲ್ಲಿ ಕನ್ನಡ ಓದುವವರು ಯಾರೂ ಇಲ್ಲವೆಂದೂ, ಪುಸ್ತಕ ಬೇಡವೆಂದೂ ತಿಳಿಸಿ, ಕೊನೆಗೆ ಒಂದು ಚಿಕ್ಕ ಪುಸ್ತಕವನ್ನು ತೆಗೆದುಕೊಂಡರು.

ಆದರೆ ಅಂದು ಸಾಯಂಕಾಲ ಆ ಡಾಕ್ಟರರ ಹೆಂಡತಿ ಗಳಗನಾಥರು ಇಳಿದುಕೊಂಡಲ್ಲಿ ಬಂದು, ತನ್ನ ಗಂಡನ ವರ್ತನೆಯ ಬಗ್ಗೆ ಅನುತಾಪವನ್ನು ವ್ಯಕ್ತಮಾಡಿ, ತಾನು ಅವರ ಕಾದಂಬರಿಗಳ ಭಕ್ತಳೆಂದು ಹೇಳಿ, ಮರುದಿನ ಅವರನ್ನು ತಮ್ಮ ಮನೆಗೆ ಊಟಕ್ಕೆ ಆಮಂತ್ರಿಸಿದಳು. ಮರುದಿನ ಡಾಕ್ಟರರೇ ಬಂದು ತಮ್ಮ ಕಾರಿನಲ್ಲಿ ಗಳಗನಾಥರನ್ನು ಕರೆದೊಯ್ದು ಉಪಚರಿಸಿದರು. ಅವರ ಶ್ರೀಮತಿಯವರು ಗಳಗನಾಥರ ಹತ್ತಿರವಿದ್ದ ಎಲ್ಲ ಪುಸ್ತಕಗಳ ಒಂದೊಂದು ಪ್ರತಿಯನ್ನು ಕೊಂಡಳು.[2] ಇದನ್ನು ವಿವರಿಸಿ ಹೇಳಿ ಕೊನೆಗೆ ಗಳಗನಾಥರು ಇಂತಹ ಅನುಭವಗಳು ಆಗಾಗ ಬಂದೇ ಬರುತ್ತವೆಯೆಂದು, ತಮ್ಮ ಪುಸ್ತಕಗಳನ್ನು ಮಾರಾಟ ಮಾಡಲಿಕ್ಕೆ ಬೇರೆಯವರ 'ವಸೀಲಿ' ಬೇಕಾಗುತ್ತದೆಂದೂ ಬೆಟಗೇರಿಯವರಿಗೆ ತಿಳಿಸಿದ್ದರು.[3] ಬೀಚಿಯವರೂ ಹರಪನಹಳ್ಳಿಯ ಶಾಸ್ತ್ರಿಗಳೊಬ್ಬರ ವ್ಯಕ್ತಿಚಿತ್ರದಲ್ಲಿ ಇಂಥದೇ ಘಟನೆಯನ್ನು ಹೇಳಿರುವರು. ಆ ಶಾಸ್ತ್ರಿಗಳು ಗಳಗನಾಥರನ್ನು ಗುರುತಿಸದೆ, ಯಾರೋ ಪುಸ್ತಕ ಮಾರುವ ಮುದುಕ ಎಂದು ತಿಳಿದು ಬೇಸರದಿಂದ ಮೊದಲು ಕಳಿಸಿದರೂ, ಅನಂತರ ಸತ್ಯಸಂಗತಿ ತಿಳಿದಾಗ ಪಶ್ಚಾತ್ತಾಪಪಟ್ಟ ವ್ಯಥೆ ಅಲ್ಲಿದೆ.

ಇನ್ನೊಂದು ಮನೆಯಲ್ಲಿ ಬಡವೆಯಾದ ಆದರೆ ಪುಸ್ತಕಪ್ರೇಮಿಯಾದ ತಾಯಿಯೊಬ್ಬಳು ಮಗುವಿನ ಸೊಂಟಕ್ಕೆ ಹಾಕಿದ ಚಿನ್ನದ ತಾಯಿತವನ್ನೇ ಕೊಟ್ಟು ಗಳಗನಾಥರಿಂದ ಅವರ 'ಕುಮುದಿನಿ' ಕೊಳ್ಳಬಯಸಿದಳು. ಅಷ್ಟರಲ್ಲಿ ಅವಳ ಕೋಪಿಷ್ಠ ಪತಿ ಬಂದು, ಮುದುಕನನ್ನು ಹೊರದಬ್ಬಿದ. ಆತನೂ ಗಳಗನಾಥರ ಭಕ್ತನೇ. 'ಕುಮುದಿನಿ'ಯನ್ನು ಕಂಡು ವಿಷಯವನ್ನು ತಿಳಿದು, ಪಶ್ಚಾತ್ತಾಪಪಟ್ಟು ಗಳಗನಾಥರನ್ನು ಕರೆತಂದು ಹತ್ತೆಂಟು ಪುಸ್ತಕ ಕೊಂಡು, ಬೆಲೆ

1. ಆ ಡಾಕ್ಟರರ ಹೆಸರು ಶ್ರೀ ಕಿರ್ಲೋಸ್ಕರ ಎಂದು ಶ್ರೀ ಬೆಟಗೇರಿ ಕೃಷ್ಣಶರ್ಮರು ತಿಳಿಸಿದರು.
2. ಈ ಸಮಾಚಾರವನ್ನು 24-4-1970ರ The Hindu ಪತ್ರಿಕೆಯಲ್ಲಿ ಅದರ ವಿಶೇಷ ಪ್ರತಿನಿಧಿಯೂ ನಿರೂಪಿಸಿರುವನು.
3. ಗಳಗನಾಥರು ತಮಗೆ ಹೇಳಿದ ಅನುಭವದ ವಿವರವನ್ನು ಶ್ರೀ ಬೆಟಗೇರಿ ಕೃಷ್ಣಶರ್ಮರು 5-1-1969ರ 'ಕರ್ಮವೀರ' ಸಂಚಿಕೆಯಲ್ಲಿ ಬರೆದಿರುವರು.

ಗಿಂತ ಎರಡು ರೂಪಾಯಿ ಹೆಚ್ಚಿಗೆ ಕೊಡಮಾಡಿದ. ಗಳಗನಾಥರು ತೆಗೆದುಕೊಂಡಾರೆಯೇ ? ಉದ್ಧಟತನಕ್ಕಾಗಿ ಕ್ಷಮಾಯಾಚನೆ ಮಾಡುವ ಗೃಹಸ್ಥನಿಗೆ "ನನಗೆ ಇದರಿಂದೇನೂ ಬೇಸರ ವಿಲ್ಲ" ಎಂದು ಸಂತೈಸಿ ಹೊರಡುವಾಗ ಗಳಗನಾಥರು ಮಗುವಿನ ಕೈಯಲ್ಲಿ ಕನ್ನಡ ಭಗವದ್ಗೀತೆಯನ್ನು ಕೊಟ್ಟು ಆಶೀರ್ವದಿಸಿದರು.[1]

ಈ ಸಂದರ್ಭದಲ್ಲಿ ಶ್ರೀ ಬುರ್ಲಿ ಬಿಂದುಮಾಧವಾಚಾರ್ಯರು ಹೇಳಿದ ಅನುಭವ ನೆನಪಾಗುತ್ತದೆ.

ಬುರ್ಲಿಯವರು ಗಳಗನಾಥರ ಅಪೇಕ್ಷೆಯಂತೆ ಅವರನ್ನು ಧಾರವಾಡದ ಅಗ್ರಿಕಲ್ಚರಲ್ ಫಾರ್ಮಿನ ಅಧಿಕಾರಿಗಳಾಗಿದ್ದ ಶ್ರೀ ಕೊಣ್ಣೂರ ಅವರ ಕಡೆಗೆ ಪುಸ್ತಕಗಳ ಮಾರಾಟಕ್ಕಾಗಿ ಕರೆದೊಯ್ದರು. ರಾವಸಾಹೇಬ ಕೊಣ್ಣೂರ ಶಂಕರರಾಯರು ಒಳ್ಳೆಯ ಸ್ವಭಾವದವರು ಅಂಥವರು ಕೂಡ ಅಂದು ಕೋಪದಿಂದ ಶ್ರೀ ಬುರ್ಲಿಯವರಿಗೆ, "ಏನು ಬುರ್ಲಿಯವರೇ, ನಿಮಗೆ ಇದೇ ಉದ್ಯೋಗವೇನು ? ಒಮ್ಮೆ ರಾಷ್ಟ್ರೀಯ ಶಾಲೆಗೆ ಫಂಡು ಎಂದು ಬರುವಿರಿ. ಮಗದೊಮ್ಮೆ ನಿಲಯಕ್ಕೆ ಕಾಳು ಕೊಡಿರಿ ಎನ್ನುವಿರಿ. ಸಭೆ–ಮೆರವಣಿಗೆಗಾಗಿ ಹಣ ಬೇಕೆನ್ನು-ವಿರಿ. ಏನಿದು ? ಬೆಳಗಿನಿಂದ ಸಾಯಂಕಾಲದವರೆಗೆ ಇದೇ ಉದ್ಯೋಗವೇ ನಿಮಗೆ ? ಇಷ್ಟೆ ಅಲ್ಲದೆ ಈಗ ಈ ಹಿರಿಯರನ್ನು ಕರೆದು ತಂದಿರುವಿರಿ" ಎಂದು ಮುಂತಾಗಿ ಗದ್ದರಿಸ ಹತ್ತಿದರು.

ದೇಶಪ್ರೇಮಿಗಳೂ ಉದಾರರೂ ದಯಾಭರಿತರೂ ಆದ ಶಂಕರರಾಯರು ಅಂದೇಕೆ ರೌದ್ರರೂಪವನ್ನು ತಾಳಿದರೋ ಎಂದು ಬುರ್ಲಿಯವರಿಗೆ ತಿಳಿಯದಾಯಿತು. ಅವರ ಮನಸ್ಸು ಉತ್ತರಿಸಲು ಹವಣಿಸಿತು. ಆದರೆ ಗಳಗನಾಥರ ಸಾತ್ವಿಕ ಮೌನವು ಅದನ್ನು ತಡೆಹಿಡಿಯಿತು. ಅವರು ಸುಮ್ಮನೆ ಕುಳಿತರು. ರಾಯರೂ ಗಂಭೀರರಾಗಿ ಕುಳಿತರು. ಐದು ನಿಮಿಷಗಳ ನಂತರ ಗಳಗನಾಥರು, "ರಾಯರೇ ನಿಮಗೆ ಇಷ್ಟು ಬೇಸರವಾಗುತ್ತಿದ್ದರೆ ನಾವು ಬರುತ್ತೇವೆ; ಶಾಂತರಾಗಿರಿ. ನಾವೇನು ಭಿಕ್ಷುಕರಲ್ಲ. ಸರಸ್ವತಿಯ ಸೇವೆಯಲ್ಲಿ ನಿರತರಾದವರು" ಎಂದು ಹೇಳಿ ಪುಸ್ತಕದ ಗಂಟನ್ನು ಹೆಗಲ ಮೇಲಿಟ್ಟುಕೊಂಡು ಹೊರಟರು.

ಬುರ್ಲಿಯವರ ಮನಸ್ಸು ಬಹಳೇ ಉದ್ವಿಗ್ನವಾಗಿತ್ತು. ಹಿರಿಯರನ್ನು ಅವಮಾನಕ್ಕೆ ಗುರಿಪಡಿಸಿದೆನಲ್ಲ ಎಂದು ತಳಮಳಿಸುತ್ತಿತ್ತು. ಆದರೆ ಉಪಾಯವಿರಲಿಲ್ಲ. ಇಬ್ಬರೂ ಮೌನವಾಗಿಯೇ ಮನೆ ತಲುಪಿದರು. ಅಂದು ಗಳಗನಾಥರ ಊಟ ಬುರ್ಲಿಯವರಲ್ಲಿಯೇ ಆಯಿತು. ಅವರು ಸ್ನಾನಾದಿಗಳನ್ನು ಮುಗಿಸಿ, ಊಟಕ್ಕೆ ಕೂಡ್ರಬೇಕೆನ್ನುವಷ್ಟರಲ್ಲಿ, ರಾವಸಾಹೇಬ ಕೊಣ್ಣೂರರು ಬುರ್ಲಿಯವರ ಮನೆಗೆ ಬಂದುಬಿಟ್ಟರು.

ಶಂಕರರಾಯರನ್ನು ಸ್ವಾಗತಿಸಿದ ಬುರ್ಲಿಯವರು ಅವರನ್ನು ಊಟಕ್ಕೆ ಎಬ್ಬಿಸಿದರು. ಗಳಗನಾಥರು "ರಾಯರೆ, ಏಳಿರಿ. ಈ ಸಮಯದಲ್ಲಿ ಬಂದವರಲ್ಲಿ ದೇವಾಂಶವಿರುತ್ತದೆ. ತಾವು ಊಟವನ್ನು ಮಾಡಿ ನಮ್ಮನ್ನು ಸಂತೋಷಗೊಳಿಸಬೇಕು" ಎಂದು ರಾಯರಿಗೆ ಹೇಳಿದರು.

ಆಗ ರಾಯರು, "ಬುರ್ಲಿಯವರೇ, ನಾನು ಅಪರಾಧಿ. ನನ್ನನ್ನು ತಾವು ಕ್ಷಮಿಸ

1. 24-10-1971ರ 'ಕನ್ನಡ ಪ್ರಭ'

ಬೇಕು. ಹಿರಿಯರ, ಸರಸ್ವತಿಯ ಅವಹೇಳನವನ್ನು ನಾನು ಇಂದು ಮಾಡಿದೆ. ನನಗೆ ಆ ಬಗ್ಗೆ ಬಹಳ ಪಶ್ಚಾತ್ತಾಪವಾಗಿದೆ. ಕ್ಷಮಿಸಿರಿ." ಎಂದು ಗಳಗನಾಥರಿಗೆ ಸಾಷ್ಟಾಂಗ ನಮಸ್ಕಾರವನ್ನು ಹಾಕಿದರು. ಆಗ ಗಳಗನಾಥರ ಕಣ್ಣು ತೇವವಾದವು. "ದೇವಾ, ಏನು ನಿನ್ನ ಆಟವಿದು. ನನ್ನ ಪಾಪಕ್ಷಾಲನೆಗೆ ಅವರ ಮುಖದಲ್ಲಿ ನಿಂತು ನನ್ನನ್ನು ಬೈಸಿದೆ. ನನ್ನ ಪಾಪಕ್ಷಾಲನೆಯಾದೊಡನೆಯೇ ನನ್ನ ಮೇಲೆ ಕರುಣಿಸಲು ಅವರನ್ನು ಇಲ್ಲಿಗೆ ಕರೆತಂದೆಯಾ?" ಎಂದು ನುಡಿದು ರಾವಸಾಹೇಬರನ್ನು ಮೇಲಕ್ಕೆಬ್ಬಿಸಿದರು. ಅವರು ಮತ್ತೆ,

"ರಾಯರೇ, ಇದೆಲ್ಲವೂ ದೇವರ ಆಟ. ನಮ್ಮ ಪಾಪಕ್ಷಾಲನೆಗಾಗಿಯೇ ಆತನು ಇಂಥ ಪ್ರಸಂಗಗಳನ್ನು ತರುತ್ತಾನೆ. ಆದರೆ ಅಹಂಕಾರಿಗಳಾದ ನಾವು ಮಾತ್ರ ಇದಕ್ಕೆ ಅಪಮಾನವೆಂದು ಬಗೆಯುತ್ತೇವೆ. ಅದಕ್ಕಾಗಿಯೇ ಪುರಂದರದಾಸರು 'ಅಪಮಾನವಾದರೆ ಒಳಿತು' ಎಂದು ಮುಕ್ತಕಂಠದಿಂದ ಹಾಡಿರುವರು. ಸಂಯಮವೇ ತಪಸ್ಸು" ಎಂದು ಹೇಳಿದರು.

ರಾಯರಿಗೆ ಅಂದು ಊಟ ಮಾಡದಿರಲು ಬೇರೆ ಕಾರಣಗಳಿದ್ದವು. ಆಗ ಬುರ್ಲಿ-ಯವರ ಶ್ರೀಮತಿಯವರು ಕೊಟ್ಟ ಅರಳ ಹಿಟ್ಟನ್ನು ತಿಂದು ನೀರು ಕುಡಿದರು. ಗಳಗನಾಥರ ಎಲ್ಲ ಪುಸ್ತಕಗಳನ್ನು ಕೊಂಡು, ಚೆಕ್ಕು ಕೊಟ್ಟು ಹೋದರು.

"ಈ ಎರಡು ಪವಿತ್ರವಾದ ಜೀವಿಗಳ ಈ ಪ್ರಸಂಗವು ನನ್ನ ಮೇಲೆ ಅಚ್ಚೊತ್ತಿದಂತಾಗಿದೆ. ಪರಿಶುದ್ಧವಾದ ಹೃದಯಗಳ ಜೀವನವು ಹೇಗಿರುವದೆಂಬುದನ್ನು ಇದರಿಂದ ನಾವು ಕಂಡು-ಕೊಳ್ಳಬಹುದು. ಗಳಗನಾಥರ ದೈವೀ ಜೀವನದ ದರ್ಶನವು ಅಂದು ನನಗಾಯಿತು. ಅವರು ಕೇವಲ ಸಾಹಿತಿಗಳಲ್ಲ, ಸಾಧಕರು ಎಂಬ ಭಾವನೆಯು ನನ್ನಲ್ಲಿ ಒಡಮೂಡಿತು"[1] ಎಂದು ಶ್ರೀ ಬುರ್ಲಿಯವರು ಅಂತಃಕರಣ ತುಂಬಿ ನುಡಿದಿರುವರು.

ಗಳಗನಾಥರ ಜೀವನದಲ್ಲಿ ಇಂಥ ಪ್ರಸಂಗಗಳು ಎಷ್ಟು ಬಂದವೋ ಅದರ ಲೆಕ್ಕವನ್ನು ಇಟ್ಟವರು ಯಾರು? ಅವರೇ ಅದನ್ನು ಲೆಕ್ಕಿಸಲಿಲ್ಲ. ಅದೂ ದೇವನ ಆಟವೆಂದೇ ತಿಳಿದ ಅವರ ವ್ಯಕ್ತಿತ್ವದ ಎತ್ತರವನ್ನು ಗಮನಿಸಬೇಕು. ಶಾಲಾ ಇನ್‌ಸ್ಪೆಕ್ಟರರನ್ನೂ ಧಿಕ್ಕರಿಸಿದ, ಆಗಡಿಯ ನಾರಾಯಣ ಭಗವಾನರ ವಿರೋಧವನ್ನು ಎದುರಿಸಿ, ತನ್ನ ಆತ್ಮವೇ ಆಗಿದ್ದ ಶೇಷಗುರುವಿಗೆ ಕೊಟ್ಟ ವಚನವನ್ನೂ ಮುರಿದು ಅಗಡಿಯನ್ನು ತ್ಯಜಿಸಿ ಬಂದು, ಛಲದಿಂದ ಹಾವೇರಿಯಲ್ಲಿ ಪ್ರತಿ ಅಗಡಿಯನ್ನೇ ಸೃಷ್ಟಿಸಹೊರಟ ಗಳಗನಾಥರೆತ್ತ! ಈಗ ಎಂಥೆಂಥ-ವರಿಂದಲೂ ಆಗುತ್ತಿರುವ ಅವಮಾನವನ್ನು–ದೇವನ ಅನುಗ್ರಹವೆಂದು ತಿಳಿದು, ಸಾತ್ವಿಕ ಮೌನದಿಂದ–ಸಹಿಸುತ್ತಿರುವ ಗಳಗನಾಥರೆತ್ತ! ಪರಿಸ್ಥಿತಿಯ ಒತ್ತಡ ಅವರನ್ನು ಇಷ್ಟು ಹಣ್ಣು ಮಾಡಿತ್ತು ಎನ್ನಬೇಕೊ, ಅವರ ಹೃದಯವೇ ಅಷ್ಟು ಪಕ್ವವಾಗಿತ್ತೆನ್ನಬೇಕೋ ತಿಳಿಯದು.

ಕೊನೆಯದಾಗಿ, ಅವರ ಮಾರಾಟದ ಜೀವನವನ್ನು ಕಣ್ಣಾರೆ ಕಂಡವರ ಇನ್ನೊಂದು ಅಭಿಪ್ರಾಯವನ್ನು ಗಮನಿಸಬಹುದು.

ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ

1. ಸದ್ಬೋಧ ಚಂದ್ರಿಕೆ: ವಿಶೇಷಾಂಕ, ಸಂಪುಟ 63, ಸಂಚಿಕೆ 1 ಮತ್ತು 2, ಪುಟ 61

ಡಾ. ಹಾ. ಮಾ. ನಾಯಕರು ತಾವು ಏಳೆಂಟು ವರ್ಷದ ಬಾಲಕರಾಗಿರುವಾಗ ತಮ್ಮೂರಿಗೆ ಪುಸ್ತಕ ಮಾರಲು ಬಂದ ಗಳಗನಾಥರನ್ನು ಕಂಡದ್ದನ್ನು ಸ್ಮರಿಸಿಕೊಂಡಿದ್ದಾರೆ.

"ಒಂದು ಸಂಜೆ ಮನೆಯ ಎದುರಿಗೇ ಇದ್ದ ಶಾಲೆಯ ಪಾಗಾರದ ಮೇಲೆ ಕುಳಿತುಕೊಂಡು ಎದುರು ದಿಕ್ಕಿನಿಂದ ಬರಬೇಕಾಗಿದ್ದ ಅಂದಿನ ಕೊನೆಯ ಬಸ್ಸಿನ ಪ್ರತೀಕ್ಷೆಯಲ್ಲಿದ್ದೆ. ದಿನಕ್ಕೆ ಮೂರು ಸಾರಿ ಬಂದು ಹೋಗುತ್ತಿದ್ದ ಬಸ್ಸುಗಳೇ ನಮಗೆ ಆ ಚಿಕ್ಕ ಊರಿನ ದೊಡ್ಡ ಆಕರ್ಷಣೆಗಳಾಗಿದ್ದುವು. ಬಸ್ಸು ಬಂತು, ಹೋಯಿತು. ಅದೇ ದಿಕ್ಕಿನಿಂದ ದೊಡ್ಡ ಗಂಟೊಂದನ್ನು ಹೊತ್ತುಕೊಂಡು ಮುದುಕರೊಬ್ಬರು ನಿಧಾನವಾಗಿ ನಡೆದು ಬರುತ್ತಿದ್ದರು.

ಯಾರೋ ಸೀರೆ ಬಟ್ಟೆಗಳನ್ನು ಮಾರುವವರಿರಬೇಕೆಂದು ಮನೆಯ ಹೆಂಗಸರಿಗೆ ವಿಷಯ ತಿಳಿಸಲು ಒಳಗೆ ಓಡಿದೆ. ಬಂದವರು ವ್ಯಾಪಾರಿ, ನಿಜ. ಆದರೆ ಪುಸ್ತಕಗಳನ್ನು ಮಾರುವವರು. ಪುಸ್ತಕಗಳನ್ನು ಹೊತ್ತು ಮಾರುವುದು ನಾವು ಕಂಡು ಕೇಳದ ಸಂಗತಿ. ವ್ಯಾಪಾರಿಗೊ ಇಳಿವಯಸ್ಸು. ಮೈಯೆಲ್ಲ ಧೂಳು ಕೆಂಪು. ಪುಸ್ತಕಗಳೊ ಮಹಾಭಾರ. ಮನೆಯವರಿಗೆಲ್ಲ ಅವರಲ್ಲಿ ಸಹಾನುಭೂತಿ. ಆ ಪುಸ್ತಕಗಳನ್ನು ಬರೆದವರೂ ಆ ಮುದುಕರೇ! ಇದೀಗ ಆಶ್ಚರ್ಯ. ಎಲ್ಲರಲ್ಲೂ ಗೌರವ ಮೂಡಿದ್ದು. ಎಲ್ಲರೂ ಮೂಕರೇ ಆ ಹೊತ್ತು.

ನಾನು ಗಳಗನಾಥರನ್ನು ನೋಡಿದ್ದು ಹೀಗೆ. ಮುಂದೆ ಗಳಗನಾಥರ ಪುಸ್ತಕಗಳನ್ನು ಓದುವಾಗಲೆಲ್ಲ, ಅವರ ವಿಚಾರ ಪ್ರಸ್ತಾಪಕ್ಕೆ ಬಂದಾಗಲೆಲ್ಲ, ಈ ಪ್ರಸಂಗ ನನ್ನ ಬಗೆಗಣ್ಣೆದುರು ನಿಲ್ಲಲಾರಂಭಿಸಿತು. ಈಗಲೂ ಹಾಗೆಯೇ". ಎಂದು ಹಳೆಯ ಸ್ಮರಣೆಯನ್ನು ಹೊಸದಾಗಿ ನೆನೆಯುತ್ತ ಕೊನೆಯಲ್ಲಿ "ಆದರೆ ಇದು ತೀರ ಹಳೆಯದಾದ ದುರ್ಬಲವಾದ ಗುಂಪು ಚಿತ್ರದಿಂದ ಬೇಕಾದವರೊಬ್ಬರನ್ನೇ ದೊಡ್ಡದು ಮಾಡಿಕೊಳ್ಳುವ ಪ್ರಯತ್ನ"[1] ಎಂದಿರುವದು ತೀರ ಅರ್ಥಪೂರ್ಣವಾಗಿದೆ.

ಪುಸ್ತಕಗಳನ್ನು ಹೊತ್ತು ಊರೂರು ಅಲೆದು ಮಾರಾಟ ಮಾಡಿದ ಗಳಗನಾಥರ ಚಿತ್ರವನ್ನು ನಾವು ಇಂದು ಬರೆಯಲೆತ್ನಿಸುವ ಪ್ರಯತ್ನವು ಡಾ. ನಾಯಕರು ಹೇಳಿದಂತೆ ಮುಸಕು ಮುಸಕಾದ ಚಿತ್ರವನ್ನು ಭೂತಗನ್ನಡಿಯಲ್ಲಿ ನೋಡಿದಂತೆಯೇ ಸರಿ. ಆಗಿನ ಅವರ ನಿಜವಾದ ಚಿತ್ರವನ್ನು ಏಕಾಗ್ರಗೊಳಿಸಿ ಯಾರು ಬಣ್ಣಿಸಬಲ್ಲರು?

ಅವರು ಅಲೆದ ಊರುಗಳು, ಪರವೂರಲ್ಲಿ ಕಳೆದ ದಿನಗಳು, ಪಟ್ಟ ಕಷ್ಟನಷ್ಟಗಳು ಸ್ವಾಭಿಮಾನವನ್ನು ಕಟ್ಟಿಟ್ಟು ದೇಶಾವರಿ ಬ್ರಾಹ್ಮಣರಂತೆ ಅಲೆದ ಮನೆಮನೆಗಳು, ಕ್ಷುದ್ರರಿಂದ ಅನ್ನಿಸಿಕೊಂಡ ಆಡಿಸಿಕೊಂಡ ಮಾತುಗಳು, ಅವರ ನೊಂದ ಅಥವಾ ಸಿಡಿದೆದ್ದ ಮನದ ಭಾವಗಳು, ಎಲ್ಲೋ ನೂರಾರು ರೂಪಾಯಿಗಳ ಪುಸ್ತಕ ಮಾರಾಟವಾದಾಗ ಪಟ್ಟ ಸಂತಸದ ಕ್ಷಣಗಳು, ಆ ದುರ್ಬಲ ಕ್ಷಣಗಳಲ್ಲಿ ಜನರನ್ನು–ದಾನಿಗಳನ್ನು ಹೊಗಳಿದ ಅವರ ಮಾತುಗಳು, ತಮ್ಮ ಶೇಷ ಸದ್ಗುರುವನ್ನು ನೆನೆಯುತ್ತ ಜೀವನ ಶ್ರದ್ಧೆಯನ್ನು ಬೆಳೆಸಿಕೊಂಡ ರೀತಿ, ದೂರದ ಹಾವೇರಿಯಲ್ಲಿದ್ದು ಸದಾಕಾಲ ತಮ್ಮ ಯೋಗಕ್ಷೇಮವನ್ನೇ ಚಿಂತಿಸುತ್ತ ಇದ್ದ ಧರ್ಮಪತ್ನಿಯ ನೆನಪು, ಅವಳ ಬಗ್ಗೆ ತಾಳಿದ ಅನುಕಂಪ, ಅವರನ್ನು ಕಾಡಿದ ಮಕ್ಕಳ–ಮೊಮ್ಮಕ್ಕಳ ಮತ್ತು ತಮ್ಮ ಗೋಶಾಲೆಯ ಮಾತೆಯರ ನೆನಪು, ಪುಸ್ತಕಗಳ ಮಾರಾಟದಿಂದ

1. ಕನ್ನಡ ಪ್ರಭ– ದಿನಾಂಕ 6-1-1969.

ಋಣಮುಕ್ತನಾಗಿ ತಮ್ಮ 'ಸದ್ಗುರುವಿನ ಸೇವೆಯ ಮುಖ್ಯಾಂಗ'ವೆಂದು ಭಾವಿಸಿದ್ದ ಪಾಠಶಾಲೆಯನ್ನು ಪುನರಾರಂಭಿಸಬೇಕೆಂದು ಕಂಡ ಕನಸು, 'ಸದ್ಗುರು' ಮಾಸಪತ್ರಿಕೆಯನ್ನು ಮತ್ತೆ ಆರಂಭಿಸುತ್ತೇನೆಂದು ಕಟ್ಟಿದ ಗಾಳಿಗೋಪುರ– ಇವುಗಳ ವಿವರಗಳನ್ನೆಲ್ಲ ಕಲ್ಪಕತೆಯಿಂದ ಕಂಡು ಯಥಾವತ್ತಾಗಿ ವಿವರಿಸಬಲ್ಲ ಸಹೃದಯರು ಯಾರು ?

ಗಳಗನಾಥರ ಕೌಟುಂಬಿಕ ಜೀವನದ ರೂಪರೇಷೆಗಳು ಮಾತ್ರ ಕೆಲಮಟ್ಟಿಗೆ ತಿಳಿದು ಬರುತ್ತವೆ. ಮದುವೆಯಾದ ಕೆಲ ವರ್ಷಗಳಲ್ಲಿಯೇ ಅವರ ಮೊದಲ ಹೆಂಡತಿ ತೀರಿದ್ದರು. ಅವರ ಎರಡನೆಯ ಹೆಂಡತಿ ಗಂಗಾಬಾಯಿ ತುಂಬ ತಿಳುವಳಿಕೆಯ ಹೆಣ್ಣುಮಗಳು. ಗಂಡನಿಗೆ ಎಲ್ಲ ರೀತಿಯಿಂದಲೂ ಅನುಕೂಲೆಯಾಗಿದ್ದರು. ಮಕ್ಕಳಿಲ್ಲದ ಕೊರಗು ದಂಪತಿಗಳನ್ನು ಬಹುಕಾಲ ಕಾಡಿತು. ಅಗಡಿಯ ಸ್ವಾಮಿಗಳಲ್ಲಿ ಗಳಗನಾಥರ ಭಕ್ತಿ–ವಿಶ್ವಾಸಗಳು ಬೆಳೆಯಲು ಅದೂ ಒಂದು ಕಾರಣವಾಯಿತೆನ್ನಬಹುದು. ಅಗಡಿಯ ಆಶ್ರಮದಲ್ಲಿರುವಾಗಲೇ ಗಳಗನಾಥರಿಗೆ ಮೊದಲು ಮಗಳು ಜನಿಸಿದಳು.

ಪತಿಯಂತೆ ಪತ್ನಿಯೂ ಭಕ್ತಿ–ವಿಶ್ವಾಸಗಳುಳ್ಳವರು. ಗಂಡನ ದಾನಗುಣದಲ್ಲಿ ಯಾವಾಗಲೂ ಸಹಾಯಕಳೂ, ಸಹಕಾರಿಯೂ ಆಗಿದ್ದರು. ಶೇಷಾಚಲ ಸ್ವಾಮಿಗಳ ತುಲಾ-ಭಾರದ ಕಾಲಕ್ಕೆ, ಎರಡುನೂರು ತೊಲಿ ಬೆಳ್ಳಿ ಕಡಿಮೆ ಬಿದ್ದಿತು. "ಅಲ್ಲಿಯೇ ನಿಂತ ಗಳಗನಾಥಮಾಸ್ತರರು ಕೂಡಲೇ ಸ್ತ್ರೀಸಮೂಹದಲ್ಲಿ ನಿಂತ ತಮ್ಮ ಪತ್ನಿಯ ಹತ್ತಿರ ಬಂದು ಕೈಯಲ್ಲಿಯ ಪಾಟ್ಲಿಗಳನ್ನು ಬಿಚ್ಚಿಕೊ ಎಂದು ಕೇಳಲು, ಪತಿಪರಾಯಣರಾದ ಆ ಸತಿಯು, ಪಿಟ್ಟೆಂದು ಮಾತಾಡದೆ, ಹಸನ್ಮುಖದಿಂದ ಪಾಟ್ಲಿಗಳನ್ನು ಕೊಟ್ಟರು. ಅದನ್ನು ತೆಗೆದುಕೊಂಡು ಹೋಗಿ ಅಗಡಿಯ ಸಾವುಕಾರರಲ್ಲಿ ಒತ್ತಿಯಿಟ್ಟು ಎರಡುನೂರು ರೂಪಾಯಿ ತಂದು ತುಲಾಭಾರಕ್ಕೆ ಹಾಕಿದರು."[1] ಈ ಸನ್ನಿವೇಶದಲ್ಲಿ ಗಳಗನಾಥರ ಪತ್ನಿಯ ಮನೋಧರ್ಮ ವ್ಯಕ್ತವಾಗುತ್ತದೆ. ಗಳಗನಾಥರು ನಡೆಸುತ್ತಿದ್ದ ಪಾಠಶಾಲೆಯ ವಿದ್ಯಾರ್ಥಿಗಳನ್ನು ದಂಪತಿ-ಗಳಿಬ್ಬರೂ ತಮ್ಮ ಸ್ವಂತ ಮಕ್ಕಳಂತೆಯೇ ಕಾಣುತ್ತಿದ್ದರು. "ಗಂಗಾಬಾಯಿಯವರು ತಮಗೆ 80 ಮಕ್ಕಳೆಂದು ಹೇಳುತ್ತಿದ್ದರು. ಪ್ರತಿ ರಾತ್ರಿ ಎದ್ದು ಮಕ್ಕಳು ಸರಿಯಾಗಿ ಹೊದ್ದು-ಕೊಂಡಿದ್ದಾರೋ ಇಲ್ಲೋ ಎಂದು ನೋಡುತ್ತಿದ್ದರು. ಒಮ್ಮೆ ಕುಪ್ಪಯ್ಯನೆಂಬ ಕುಂದಾ-ಪುರದ ಹುಡುಗನಿಗೆ ಅತಿಶಯ ಜಡ್ಡಾಗಿತ್ತು. ಗಂಡಹೆಂಡತಿ ಇಬ್ಬರೂ ಅತಿಶಯ ಸೇವೆ ಮಾಡಿದರು. ಗಂಗಾಬಾಯಿಯರು ಅವನನ್ನು ಸ್ವತಃ ತೊಡೆಯಮೇಲೆ ಮಲಗಿಸಿಕೊಂಡು ಆರೈಕೆ ಮಾಡಿದರು" ಎಂದು ಪ್ರತ್ಯಕ್ಷದರ್ಶಿ ಶ್ರೀ ಮಹಾದೇವಭಟ್ಟ ಜೋಶಿ ನೆನೆಯುತ್ತಾರೆ.[2]

ಹೆಂಡತಿಯಲ್ಲದೆ ಕುಟುಂಬದ ಎಲ್ಲರೂ ಗಳಗನಾಥರಿಗೆ ಸಹಕಾರಿಗಳಾಗಿದ್ದರು. ಅದನ್ನು ಸ್ವತಃ ಗಳಗನಾಥರೇ ನೆನೆದಿರುವರು. "ಯಾವದೊಂದು ಕಾರ್ಯವು ಕೌಟುಂಬಿಕವಿರಲಿ, ಸಾಮಾಜಿಕವಿರಲಿ, ರಾಷ್ಟ್ರೀಯವೇ ಇರಲಿ, ಅದನ್ನು ಸಾಧಿಸುವದಕ್ಕಾಗಿ ಕುಟುಂಬದೊಳಗಿನ-

1. ಕೆ. ಎಸ್. ಹೊಂಬಳ: 'ನಾನು ಕಂಡ ಗಳಗನಾಥರು', ಸದ್ಬೋಧ ಚಂದ್ರಿಕೆ, ವಿಶೇಷ ಸಂಚಿಕೆ, ಏಪ್ರಿಲ 1969
2. ಮಹಾದೇವ ಭಟ್ಟ ಜೋಶಿ ಅವರನ್ನು 4-2-1969ರಂದು ಲೇಖಕನು ಹಾವೇರಿಯಲ್ಲಿ ಭೆಟ್ಟಿಯಾಗಿದ್ದನು. ಅವರು ಗಳಗನಾಥರ ಜೊತೆ ಕೆಲಕಾಲ ಇದ್ದರು, ಪುಸ್ತಕ ಮಾರಾಟಕ್ಕೆ ಸಹಾಯ ಮಾಡುತ್ತಿದ್ದರು.

ರೆಲ್ಲರೂ ತಮ್ಮ ತಮ್ಮ ಧರ್ಮಗಳನ್ನು ಆಚರಿಸಿ, ಪರಸ್ಪರ ಪ್ರೇಮಪಾಶದಿಂದ ಬದ್ಧರಾಗಿ ಕುಟುಂಬದ ಯಜಮಾನನ ತಂತ್ರಕ್ಕೆ ಒಳಗಾಗಿ ನಡೆಯದಿದ್ದರೆ, ಎತ್ತು ಎರೆಗೆಳೆದರೆ ಕೋಣವು ಕೆರೆಗೆಳೆಯಿತೆಂಬ ಗಾದೆಯಂತೆ ಆಗಿ, ಕುಟುಂಬವು ಕಸುವುಗೆಡಲು, ಅದರ ಕಾರ್ಯಕ್ಷಮತೆಯು ನಿಶ್ಚಯವಾಗಿ ಕುಗ್ಗುವದು. ಆದರೆ ಅಂಥ ಅನಿಷ್ಟ ಪ್ರಸಂಗವು ನಮ್ಮ ನಲವತ್ತು ವರ್ಷಗಳ ವ್ಯವಹಾರದಲ್ಲಿ ಶ್ರೀ ಗುರುಕೃಪೆಯಿಂದ ನಮಗೆ ಬರಲಿಲ್ಲ. ಅಂತೇ ಆಗಡಿಯ ಆನಂದವನದಲ್ಲಿ ಇಪ್ಪತ್ತುಜನ ವಿದ್ಯಾರ್ಥಿಗಳು ಮತ್ತು ಒಬ್ಬ ಅಧ್ಯಾಪಕರಿಂದ ಆರಂಭವಾದ ಸಂಸ್ಕೃತ ಪಾಠ ಶಾಲೆಯು ಹನ್ನೊಂದು ವರ್ಷಗಳಲ್ಲಿ ಎಂಭತ್ತು ಜನ ವಿದ್ಯಾರ್ಥಿಗಳು ಎಂಟು ಜನ ಪ್ರಾಧ್ಯಾಪಕರು ಉಳ್ಳದ್ದಾಗಲು, ಅವರ ಯೋಗಕ್ಷೇಮವನ್ನು ಸಾಗಿಸಿಕೊಂಡು ಹೋಗಲು ನಮ್ಮ ಬಡಕುಟುಂಬದವರು ಸದ್ಗುರುನಾಥನ ಬೆಂಬಲದಿಂದ ಸಮರ್ಥರಾದರು; ಈ ವ್ಯವಹಾರಗಳಿಗಾಗಿ ಸರಕಾರಿಯ ನೌಕರಿಯನ್ನು ಬಿಟ್ಟು ದೇಹದಂಡನ ಮಾಡುವ ಪ್ರಸಂಗವು ನನಗೆ ಬರಲು ಅಂದಿನಿಂದ ಇಂದಿನವರೆಗೆ ಅಖಂಡ ಇಪ್ಪತ್ತು ಇಪ್ಪತ್ತೆರಡು ವರ್ಷಗಳಿಂದ ಪರಿ-ಪರಿಯ ಕಷ್ಟನಷ್ಟಗಳನ್ನು ಭೋಗಿಸುತ್ತ ನನ್ನ ಕುಟುಂಬದವರು ನನ್ನನ್ನು ಹಿಂಬಾಲಿಸಿ ಸತ್ಕಾರ್ಯ ಪ್ರವೃತ್ತರಾಗಿರುವರು!"[1] ಎಂದು 1931ರಲ್ಲಿ ನುಡಿದಿರುವ ಗಳಗನಾಥರು ಸರಕಾರಿ ನೌಕರಿ ಬಿಟ್ಟುದಕ್ಕಾಗಿ ತಮ್ಮ ಹೆಂಡತಿ–ಮಕ್ಕಳು ಕೊರಗಬೇಕಾಯಿತೆಂಬುದನ್ನು ಒಪ್ಪಿಕೊಂಡರೂ, ಅವರ ಮಾತಿನಲ್ಲಿ ಪಶ್ಚಾತ್ತಾಪದ ಧ್ವನಿ ಕೇಳುವುದಿಲ್ಲ. ಅಷ್ಟೇ ಅಲ್ಲ ಪಾಠಶಾಲೆ–ಪತ್ರಿಕೆಗಳ ಕಾರ್ಯಗಳು ಸತ್ಕಾರ್ಯವೆಂದೇ ನಂಬಿದ ಗಳಗನಾಥರು ತಮ್ಮ ಕುಟುಂಬದವರೂ ತಮ್ಮಂತೆ ಸತ್ಕಾರ್ಯದಲ್ಲಿ ಸಂತೋಷದಿಂದ ತೊಡಗಿದುದನ್ನು ಕೃತಜ್ಞತೆಯಿಂದಲೂ ಅಭಿಮಾನ ದಿಂದಲೂ ಸ್ಮರಿಸಿರುವರು.

'ಮಹಾಭಾರತಾಮೃತ'ದ ಪ್ರಸ್ತಾವನೆಯಲ್ಲಿ ಗಳಗನಾಥರು ತಮ್ಮ ಇಬ್ಬರು ಅಳಿಯಂದಿರ ಸಹಾಯವನ್ನೂ ನೆನೆದಿರುವರು. "ಈಗಿನ ಮಹಾಭಾರತಾಮೃತದ ಆದಿಪರ್ವ ದಲ್ಲಿಯೇ ಹದಿನಾರು ಸುಂದರ ಚಿತ್ರಗಳನ್ನು ಸ್ವತಃ ಬರೆದು ಹಾಕಿ, ಈವರೆಗೆ ಕನ್ನಡದಲ್ಲಿ ಯಾರೂ ಮಾಡದಿರುವ ಪುಸ್ತಕಾಲಂಕರಣದ ಕೆಲಸವನ್ನು ನಮ್ಮ ಹಿರಿಯ ಅಳಿಯಂದಿರಾದ ಶ್ರೀ. ಮಲ್ಲಾರಿ ದೀಕ್ಷಿತ ಕಕ್ಕನವರು ಮನಃಪೂರ್ವಕ ಮಾಡಿದ್ದನ್ನು ಮನಸ್ಸಿನಲ್ಲಿ ತಂದರೆ, ನನ್ನ ಕುಟುಂಬದವರ ಅನುಕೂಲ್ಯವು ಸ್ಪಷ್ಟವಾಗುವದು ! ಈ ಉದ್ಯಮಪ್ರಿಯರು ಸತ್ಕುಲ ಪ್ರಸೂತರೂ, ಸಂಸ್ಕೃತಜ್ಞರೂ, ಕಲಾಕುಶಲರೂ, ಸದಾಚಾರಿಗಳೂ, ಪಾಪಭೀರುಗಳೂ, ಉತ್ತಮ ಲೇಖಕರೂ ಇರುವರು ! ಇದರಂತೆ ನನ್ನ ಚಿಕ್ಕಮಗಳ ಗಂಡನೂ, ನನ್ನ ಸೋದರಳಿಯನೂ ಆದ ಚಿ॥ ಶಂಕರ ಮಲ್ಲಾರಿ ಜೋಶಿ ಎಂಬಾತನು ಅತ್ಯಂತ ಬುದ್ಧಿ ಶಾಲಿಯೂ, ಕಲ್ಪಕನೂ, ಕಾರ್ಯದಕ್ಷನೂ, ಜನಪ್ರಿಯನೂ, ಸನ್ಮಾರ್ಗೋನ್ಮುಖನೂ, ಲೇಖನ ಕಲೆಯ ಜೀವಾಳವುಳ್ಳವನೂ, ಎಲ್ಲ ಕೆಲಸಗಳಲ್ಲಿಯೂ ನನಗೆ ನೆರಳಿನಂತೆ ಅನುಕೂಲನಾಗಿರುವ ವನೂ ಇರುವನು. ಸದ್ಗುರು ಕೃಪೆಯಿಂದ ಈ ಇಬ್ಬರು ವಿವೇಕಿಗಳ ಸಹಾಯವು ನನಗೆ ಒದಗಿರುವದರಿಂದ, ನಾನು ಎಂತಹ ಕಾರ್ಯವನ್ನಾದರೂ ಪೂರಯಿಸಲು ಸಮರ್ಥ ನಾಗಿರುವೆನು."[2]

---

1. ಗಳಗನಾಥ: ಮಹಾಭಾರತಾಮೃತ, ಪ್ರಸ್ತಾವನೆ, ಪುಟ 22, 23
2. ಅಲ್ಲಿಯೇ, ಪುಟ 23

1923ರಲ್ಲಿ ಪ್ರಕಟವಾದ 'ಶೈವಸುಧಾರ್ಣವ' ಗ್ರಂಥವನ್ನು ಗಳಗನಾಥರು ಮಲ್ಲಾರಿ ದೀಕ್ಷಿತ ಕಕ್ಕನವರ ಅವರ ಜೊತೆಗೆ ಬರೆದಿರುವರು. ಪ್ರಸ್ತಾವನೆಯಲ್ಲಿ ಗಳಗನಾಥರು ಅವರ ಬಗ್ಗೆ ಬರೆಯುತ್ತ, "ಅವರ (ಕಕ್ಕನವರ ಅವರ) ಬರಹದ ಶೈಲಿಯನ್ನೂ, ವಿಷಯ ಸಂಗ್ರಹದ ಕೌಶಲವನ್ನೂ ನೋಡಿ ನನಗೆ ಬಹಳ ಸಂತೋಷವಾಯಿತು. ಅವರು ಒಂದೆರಡು ವರ್ಷ ಹೀಗೆಯೇ ಲೇಖನ ವ್ಯವಸಾಯವನ್ನು ವಿದ್ಯಾವ್ಯಾಸಂಗಪೂರ್ವಕವಾಗಿ ಗ್ರಂಥಾವಲೋಕನದೊಡನೆ ಆಸಕ್ತಿಯಿಂದ ಸಾಗಿಸಿದರೆ ಮಾರ್ಮಿಕ ಲೇಖಕರಾಗಲು ಸಂಶಯವಿಲ್ಲ" ಎಂದು ಅವರನ್ನು ಪ್ರೋತ್ಸಾಹಿಸಿರುವರು.

ತಮ್ಮ ಅಳಿಯಂದಿರ ಸಹಾಯವನ್ನು ನೆನೆಯುತ್ತ ಗಳಗನಾಥರು ಅವರ ಪ್ರಶಂಸೆಯನ್ನೂ ಸಾಕಷ್ಟು ಮಾಡಿರುವರು. ಇದರಲ್ಲಿ ಕೃತಜ್ಞತೆಯ ಸೂಚನೆಯೂ ಇರಬಹುದು. ಸಹಾಯಕರನ್ನು ಹೊಗಳಿ ಹೆಚ್ಚಿನ ಕಾರ್ಯಕ್ಕೆ ಪ್ರೋತ್ಸಾಹಿಸುವ ರೀತಿಯೂ ಇದಾಗಿರಬಹುದು. ಅವರ 'ಸದ್ಗುರು' ಪತ್ರಿಕೆಯಲ್ಲಿ ಇಂಥ ಆತ್ಮೀಯರ ವರ್ಣನೆ ಆಗಾಗ ಬರುತ್ತಿತ್ತು. ತಮ್ಮ ಹಿರಿಯ ಮಗಳು ಸುಬ್ಬಕ್ಕನನ್ನು ಉದ್ದೇಶಿಸಿ ಅವರು 'ಕನ್ಯಾಶಿಕ್ಷಕ' ವೆಂಬ ಒಂದು ಲೇಖನಮಾಲೆಯನ್ನೇ ಆರಂಭಿಸಿದ್ದರು.

ಗಳಗನಾಥರಿಗೆ ಮಕ್ಕಳು–ಅಳಿಯಂದಿರನ್ನು ಎಷ್ಟು ಕೊಂಡಾಡಿದರೂ ಕಡಿಮೆಯಾಗಿತ್ತು. ಮೊಮ್ಮಕ್ಕಳಲ್ಲಿಯೂ ಅವರು ಇದೇ ಮಮತೆಯುಳ್ಳವರಾಗಿದ್ದರು. ಅವರು ಮಹಾಭಾರತವನ್ನು ಬರೆಯತೊಡಗಿದಾಗ ಅವರ ಚಿಕ್ಕ ಮಗಳಾದ ಏಣಕ್ಕನ ಮಗುವೊಂದು ತೀರಿತು. ಗಳಗನಾಥರು 'ಮಹಾಭಾರತಾಮೃತ'ದ ಪ್ರಸ್ತಾವನೆಯಲ್ಲಿ ಆ ಮಗುವಿನ ಅಕಾಲ ಮರಣಕ್ಕಾಗಿ ಪರಿತಪಿಸಿ, ಅದರ ಗುಣಗಾನವನ್ನು ಮಾಡಿರುವರು. "ಶಿವಶಿವ! ನಮ್ಮ ಅನಂತನು ಸರ್ವಸಾಧಾರಣ ಹುಡುಗನಲ್ಲ, ತಾಯಿಯ ಹೊಟ್ಟೆಯಲ್ಲಿ ಮೂಡಿದ ಕೂಡಲೇ ಆಕೆಯಲ್ಲಿ ಸುವಿಚಾರ–ಸತ್ಸೇವೆಗಳ ಬಯಕೆಗಳನ್ನು ಉತ್ಪನ್ನ ಮಾಡಿದನು; ತಾಯಿಗೆ ಲೇಶವೂ ಪ್ರಸವ ವೇದನೆಯನ್ನುಂಟು ಮಾಡದೆ, ಅಶೋಕರಾಜನು ಹುಟ್ಟಿದ ಹಾಗೆ ಹುಟ್ಟಿದನು. ಬೇನೆ ಬೇಸರಿಕೆಗಳಿಲ್ಲದೆ, ನಯನಮನೋಹರನಾಗಿ ಬಡಬಡ ಬೆಳೆದನು; ಮೊದಲೇ ಕಲ್ಪಕ ಸ್ವಭಾವದ ನನ್ನ ಮನಸ್ಸಿನಲ್ಲಿ ಏನೇನೋ ಉದಾತ್ತ ಕಲ್ಪನೆಗಳನ್ನುಂಟು ಮಾಡಿದನು; ಆದರೆ ಅವೇ ಸಂಗತಿಗಳಿಂದ ನಮ್ಮೆಲ್ಲರ ಅಂತಃಕರಣವು ಆಜನ್ಮ ಕೊರೆಯುವಂತೆ ಮಾಡಿ ಪರೋಪಕಾರಕ್ಕೆ ಬಲಿಯಾಗುವ ಮಹಾತ್ಮರ ಅನಾದಿ ಪದ್ಧತಿಯಂತೆ ನನ್ನ ಭಾರತ ಲೇಖನಕ್ಕೆ ಬಲಿಯಾಗಿ, ನಮ್ಮ ಅನಂತನು ನಮ್ಮನ್ನು ಬಿಟ್ಟು ಹೊರಟುಹೋಗಿಬಿಟ್ಟನು"[1] ಎಂದು ಗಳಗನಾಥರು ನುಡಿದಿರುವಲ್ಲಿ ಅವರ ವಾತ್ಸಲ್ಯ ಮತ್ತು ಭಾವಿಕತನಗಳನ್ನು ಕಾಣಬಹುದಾಗಿದೆ. ಮಗಳಿಗೆ ಒದಗಿದ ಪುತ್ರವಿಯೋಗಕ್ಕಾಗಿ ಮರುಗಿದ ಗಳಗನಾಥರು, ಈ ದುರ್ಘಟನೆಯು ತಮ್ಮ ಭಾರತ ಲೇಖನದಿಂದಲೇ ಉಂಟಾಯಿತೆಂದೂ ನಂಬಿದ್ದರು.

ಅವರು ಭಾರತವನ್ನು ಬರೆಯತೊಡಗಲು ಅವರ ಮಗಳು ಸೌ. ಏಣಕ್ಕ ಬಂದು

1. ಗಳಗನಾಥ: ಮಹಾಭಾರತಾಮೃತ; ಪ್ರಸ್ತಾವನೆ, ಪುಟ 24, 25
(ಇಂಥ ಆತ್ಮೀಯವಾದ ಅನೇಕ ವಿಚಾರಗಳನ್ನು ಗಳಗನಾಥರು ತಮ್ಮ ಗ್ರಂಥಗಳ ಮುನ್ನುಡಿಯಲ್ಲಿ ಸಾಕಷ್ಟು ವಿವರವಾಗಿ ಬರೆದಿರುವುದರ ಔಚಿತ್ಯ–ಅನೌಚಿತ್ಯಗಳ ಪ್ರಶ್ನೆ ಏಳಬಹುದಾದರೂ, ಅವರ ಜೀವನದ ಬಗ್ಗೆ ಅನೇಕ ವಿವರಗಳನ್ನು ತಿಳಿಯಲು ಈ ದಾಖಲೆಗಳು ಬಹು ಸಹಾಯಕವಾಗಿವೆ.)

ಅದನ್ನು ಬರೆಯಬಾರದೆಂದು ಸೂಚಿಸಿದ್ದಳು. ಭಾರತ ಬರೆಯುವುದರಿಂದ ಬರೆದವನಿಗೆ ಅಮಂಗಲವೆಂಬ ಭಾವನೆಯೇ ಅದಕ್ಕೆ ಕಾರಣ. ಆದರೆ ಗಳಗನಾಥರು ತಮ್ಮ ಸ್ವಭಾವ ದಂತೆ ಹಿಡಿದ ಕೆಲಸ ಬಿಡಲಿಲ್ಲ. ಆಗ ಏಣಕ್ಕನಿಗೆ "ನಮ್ಮ ಅನಂತ ಹೋಗಿ ಅಪ್ಪನ ಭಾರತವು ಮುಗಿಯಬಹುದೇ ? " ಎಂಬ ಅಮಂಗಲ ವಿಚಾರ ಬಂದಿತ್ತಂತೆ. ಕಾಕ-ತಾಲೀಯವೆಂಬಂತೆ ಮುಂದೆ ಹಾಗೇ ಆಯಿತು. ಅಷ್ಟೇ ಅಲ್ಲದೆ ಮುಂದೆ ನಾಲ್ಕೇ ತಿಂಗ ಳಲ್ಲಿ ಏಣಕ್ಕನ ಕೂಸೊಂದು ಹುಟ್ಟಿದ ಇಪ್ಪತ್ತುನಾಲ್ಕು ತಾಸಿನಲ್ಲಿಯೇ ಸತ್ತುಹೋಯಿತು. ಈ ಎರಡೂ ಜೀವಿಗಳ ಬಲಿದಾನದಿಂದಲೇ ತಮ್ಮ 'ಭಾರತಾಮೃತ'ವು ಪೂರ್ಣವಾಯಿ-ತೆಂದು ಗಳಗನಾಥರು ಭಾವಿಸಿದರು.

ಗಳಗನಾಥರ ಇನ್ನೊಬ್ಬ ಮೊಮ್ಮಗನೂ, ಅನಂತರ ದತ್ತಕ ಮಗನೂ ಆದ ಬಿಪ್ಪಪ್ಪ ನವರು "ಅಪ್ಪನಿಗೆ ಮಕ್ಕಳ ಮೇಲೆ ಬಹಳ ಪ್ರೀತಿ. ನನ್ನ ಮುಂಜಿ ಆಗುವವರೆಗೂ ಅಂದರೆ ನಾನು 13-14 ವರ್ಷದವನಾಗುವವರೆಗೂ ಅವರ ಎಲೆಯಲ್ಲೇ ಊಟಮಾಡು ತ್ತಿದ್ದೆ. ಅವರ ಹಾಸಿಗೆಯಲ್ಲೇ ಮಲಗುತ್ತಿದ್ದೆ" ಎಂದು ಅಭಿಮಾನದಿಂದ ಹೇಳುವರು. ತಮ್ಮ ಅಜ್ಜಿಯನ್ನು ನೆನೆದು ಬಿಪ್ಪಪ್ಪನವರು "ಅಜ್ಜಿ ಭಾರೀ ಗಟ್ಟಿಯಾಗಿದ್ದರು. ನೂರಾರು ಜನರ ಅಡಿಗೆಯನ್ನು ಒಬ್ಬರೇ ಮಾಡುತ್ತಿದ್ದರು. ಮನಸ್ಸು ಅಷ್ಟೇ ದೊಡ್ಡದು. ನಮ್ಮ ಮನೆಗೆ ಗೃಹಲಕ್ಷ್ಮಿಯಂತೆ ಇದ್ದರು" ಎನ್ನುವರು. ಇಂಥ ಸೌಭಾಗ್ಯವತಿಯನ್ನು ಪಡೆದ ಗಳಗನಾಥರ ಕೌಟುಂಬಿಕ ಜೀವನ ಶಾಂತಿಪೂರ್ಣವಾಗಿರುವಲ್ಲಿ ಸಂದೇಹವಿಲ್ಲ.

ಗಳಗನಾಥರ ಪತ್ನಿ ಗಂಗಾಬಾಯಿಯವರು ಸದಾಕಾಲ ಗಂಡನ ಮನವನ್ನು ಅರಿತು-ಕೊಂಡೇ ನಡೆಯುತ್ತಿದ್ದರು. ಅವರ ವಿರುದ್ಧ ಹೋಗುವ ಧೈರ್ಯ ಯಾರಿಗೂ ಆಗು ತ್ತಿರಲಿಲ್ಲ. ಗಳಗನಾಥರು ಒಂದು ರೀತಿ ದರ್ಪದ ವ್ಯಕ್ತಿಯೇ ಆಗಿದ್ದರು. ಆದರೂ ತಮ್ಮದು ಸರಿಯಲ್ಲವೆಂದು ಮನವರಿಕೆಯಾದಾಗ ಅವರು ಪ್ರಾಂಜಲವಾಗಿ ಅದನ್ನು ಒಪ್ಪಿ ಕೊಳ್ಳುತ್ತಲೂ ಇದ್ದರು. ಈ ಮಾತಿಗೆ ನಿದರ್ಶನವಾಗಿ, ಗಳಗನಾಥರು ಅಗಡಿಯ ಆಶ್ರಮ ದಲ್ಲಿದ್ದಾಗ ನಡೆದ ಒಂದು ಸಣ್ಣ ಘಟನೆಯನ್ನು ನೋಡಬಹುದು. ಆಶ್ರಮದಲ್ಲಿ ಒಂದು ಬೆಕ್ಕು ಮರಿ ಹಾಕಿತ್ತು. "ಆ ಮೂರೂ ಮರಿಗಳಿಗೆ ಮಾಸ್ತರರು ತಮ್ಮ ತಾಟಿನಲ್ಲಿ ಹಾಲು-ಅನ್ನ ಕಲಿಸಿ ತಿನ್ನಿಸುತ್ತಿದ್ದರು. ಅಷ್ಟು ಪ್ರೀತಿ ಅವುಗಳ ಮೇಲೆ. ಒಂದು ದಿನ ಮರಿಯೊಂದು ಹಾಸಿಗೆಯಲ್ಲಿ ಹೊಲಸು ಮಾಡಿಬಿಟ್ಟಿತು. ಗಂಗಾಬಾಯರು 'ಸುಡುಗಾಡು ಬೆಕ್ಕಿನ ಚಾಕರಿ ನಾನು ಮಾಡೋದಿಲ್ಲ. ಮಾಡಿ ಮಾಡಿ ಸಾಕಾತು. ಹಾಲು - ಅನ್ನ ತಿನ್ನ ತಾವ. ಹಾಸಿಗ್ಯಾಗ ಹೊಲಸು ಮಾಡತಾವ. ಒಂದು ಇಲಿ ಹಿಡಿಯೋದಿಲ್ಲ, ಮಣ್ಣಿಲ್ಲ' - ಎಂದು ಗೊಣಗಿದರು. ಅದನ್ನು ಕೇಳಿದ ಗಳಗನಾಥರಿಗೆ ಗಂಗಾಬಾಯಿಯವರ ವಿಚಾರ ಸರಿ ಯೆಂದು ಹೊಳೆಯಿತು. ಅವರು – ಹೌದು, ತಾಯಿಯ ಜೊತೆಗೆ ಬೇಟಿ ಕಲಿಯಬೇಕಾದ ಮರಿಗಳು ಉದ್ಯೋಗಭ್ರಷ್ಟ ಆದವು, ಎಂದು ಉದ್ಯೋಗದ ಮೇಲೆ ಒಂದು ಉಪ ನ್ಯಾಸವನ್ನೇ ಆರಂಭಮಾಡಿದರು. ಎರಡು ತಾಸಿನ ವರೆಗೆ ಮಾತುಗಳನ್ನು ಹೇಳಿದ ಅವರು ಕಡೆಗೆ 'ನನ್ನ ದೋಷಕ್ಕೆ ಪ್ರಾಯಶ್ಚಿತ್ತ ತೊಗೋಬೇಕು' ಎಂದೂ ನುಡಿದರು".[1]

1. ಈ ಘಟನೆಯನ್ನು ಶ್ರೀ ಮಹಾದೇವ ಭಟ್ಟ, ಜೋಶಿ ಅವರು ಲೇಖಕನಿಗೆ 4-2-1969 ರಂದು ವಿವರಿಸಿದರು.

ದೋಷಕ್ಕೆ ಪ್ರಾಯಶ್ಚಿತ್ತದ ಕಲ್ಪನೆಯನ್ನು ಗಳಗನಾಥರು ಮುಂದೆ ತಮ್ಮ ದಿನಚರಿಯಲ್ಲೇ ಅಳವಡಿಸಿಕೊಂಡರು. ಆಶ್ರಮದಲ್ಲಿ ಪ್ರತಿದಿನ ಸಾಯಂಕಾಲ ಆರತಿಯ ಕಾರ್ಯಕ್ರಮವಿರುತ್ತಿತ್ತು. ಆಗ ಪ್ರತಿಯೊಬ್ಬರೂ ಅಂದು ತಾವು ಮಾಡಿದ ತಪ್ಪನ್ನು ದೇವರ ಮುಂದೆ ಒಪ್ಪಿಕೊಳ್ಳಬೇಕೆಂದು ಅವರು ನಿಯಮ ಮಾಡಿದರು. ಇದು ವಿದ್ಯಾರ್ಥಿಗಳಿಗೂ, ಮನೆಯವರೆಲ್ಲರಿಗೂ, ಸ್ವತಃ ಗಳಗನಾಥರಿಗೂ ಅನ್ವಯವಾಗುತ್ತಿತ್ತು.

"ವಿವಾಹಿತ ಸ್ತ್ರೀಪುರುಷರು ಪರಸ್ಪರರಿಗೆ ಹಿತವಾಗುವಂತೆ ವರ್ತಿಸತಕ್ಕದ್ದು. ಇಬ್ಬರೂ ಕೂಡಿ ಸಂಸಾರ ಮಾಡಬೇಕಾಗಿರುವದರಿಂದ ಅವರು ಪರಸ್ಪರ ದೋಷಗಳ ಕಡೆಗೆ ಅಲಕ್ಷ ಮಾಡತಕ್ಕದ್ದು. ಅವರಿಬ್ಬರ ನಡಾವಳಿ, ಸ್ವಭಾವ, ಇಚ್ಛೆ ಇವು ಒಂದೇ ಪ್ರಕಾರದವಿರಲಿಕ್ಕೆ ಬೇಕು" ಎಂದು ಗಳಗನಾಥರು (1912ರಲ್ಲಿ) ಹೇಳಿದ್ದರು.[1] ಇದು ಕೇವಲ ಪುಸ್ತಕದ ಮಾತಲ್ಲ. ಅವರು ಜೀವನದಲ್ಲೂ ಇದನ್ನು ಬಹುಮಟ್ಟಿಗೆ ಪಾಲಿಸಿಕೊಂಡು ಬಂದಿದ್ದರು. ಆದರಿಂದಲೇ ಅವರ ಜೀವನದಲ್ಲಿ ಕೌಟುಂಬಿಕ ಶಾಂತಿ – ಸಮಾಧಾನಗಳು ನೆಲೆಸಿದ್ದುವು. ಅವರ ಮೊದಲ ಹೆಂಡತಿ ಜೀವೂಬಾಯಿ ಬಹುಕಾಲ ಬಾಳಲಿಲ್ಲ. ಮದುವೆಯಾಗಿ ಏಳು ವರ್ಷದಲ್ಲಿಯೇ ಗತಿಸಿದರು. ಎರಡನೆಯ ಹೆಂಡತಿ ಗಂಗಾಬಾಯಿಯವರು ಗಳಗನಾಥರ ಜೀವನದುದ್ದಕ್ಕೂ ಅವರ ನೆರಳಾಗಿ, ಅವರಿಗೆ ನೆರಳಾಗಿ ಬಾಳಿದರು.

ಗಳಗನಾಥರಿಗೆ ಇಬ್ಬರೇ ಇಬ್ಬರು ಹೆಣ್ಣುಮಕ್ಕಳು–ಸುಬ್ಬಕ್ಕ ಮತ್ತು ಏಣಕ್ಕ (ರೇಣುಕಾ). ಸುಬ್ಬಕ್ಕನನ್ನು ಗುರ್ಲಹೊಸೂರಿನ ಶ್ರೀ ಮಲ್ಹಾರ ದೀಕ್ಷಿತರಿಗೆ ಕೊಟ್ಟಿತ್ತು. ಅವರು ಸಂಸ್ಕೃತ ಪಂಡಿತರು. ಪಾಠಶಾಲೆಯಲ್ಲಿ ಸಂಸ್ಕೃತ ಪಾಠ ಹೇಳಿಕೊಡುತ್ತಿದ್ದರು. ಪುರಾಣವನ್ನು ಹೇಳುತ್ತಿದ್ದರು. ಚಿತ್ರಕಲೆಯೂ ಇವರಿಗೆ ಕರಗತವಾಗಿತ್ತು. ಇವರಿಗೆ ಇಬ್ಬರು ಗಂಡು ಮಕ್ಕಳೂ ಒಬ್ಬ ಹೆಣ್ಣು ಮಗಳೂ ಇರುವರು. ರಾಮಚಂದ್ರ ದೀಕ್ಷಿತ ಮತ್ತು ಕೃಷ್ಣ ದೀಕ್ಷಿತ ಇಬ್ಬರೂ ಈಗ ಶಿಕ್ಷಕ ವೃತ್ತಿಯಲ್ಲಿರುವರು. ಒಬ್ಬರು ಹಿಂದೀ ಶಿಕ್ಷಕರಾದರೆ ಇನ್ನೊಬ್ಬರು ಚಿತ್ರಕಲೆಯ ಶಿಕ್ಷಕರಾಗಿರುವರು. ಶ್ರೀ ಮಲ್ಹಾರ ದೀಕ್ಷಿತರು 1961ರಲ್ಲಿ ತೀರಿಕೊಂಡರು.

ಕಿರಿಯ ಮಗಳು ಏಣಕ್ಕನನ್ನು ಗಳಗನಾಥರು ತಮ್ಮ ತಂಗಿ ದುರ್ಗವ್ವನ ಮಗ ಶ್ರೀ ಶಂಕರಭಟ್ಟ ಮಾಲ್ಹಾರ ಭಟ್ಟ ಜೋಶಿ ಅವರಿಗೆ ಕೊಟ್ಟು ಮದುವೆ ಮಾಡಿದ್ದರು. ಇಬ್ಬರೂ ಅಳಿಯಂದಿರನ್ನು ಗಳಗನಾಥರು ತಮ್ಮ ಜೊತೆಯಲ್ಲಿಯೇ ಇರಿಸಿಕೊಂಡಿದ್ದರು. ಶ್ರೀ ಜೋಶಿಯವರು ಪುಸ್ತಕ ಪ್ರಕಾಶನದ ಎಲ್ಲ ಹೊಣೆಯನ್ನು ಹೊತ್ತುಕೊಂಡಿದ್ದರು. ಅವರು ಗಳಗನಾಥರ ವ್ಯವಹಾರಿಕ ಜೀವನದ ಬಲಗೈಯಾಗಿದ್ದಾರೆಂದರೂ ತಪ್ಪಲ್ಲ. ಈಗ ಕೂಡ ಗಳಗನಾಥರ ಗ್ರಂಥಗಳ ಪುನರ್ಮುದ್ರಣ, ಮಾರಾಟಗಳನ್ನು ಅವರು ಮಾಡುತ್ತಿರುವರು. ಶ್ರೀ ಜೋಶಿ ಅವರಿಗೆ ಐದು ಹೆಣ್ಣುಮಕ್ಕಳೂ ಮೂರು ಜನ ಗಂಡುಮಕ್ಕಳೂ ಉಂಟು. ಹಿರಿಯ ಮಗ ಬಿಷ್ಟಪ್ಪನನ್ನು ಗಳಗನಾಥರು ದತ್ತಕ ತೆಗೆದುಕೊಂಡಿದ್ದರು. ವೆಂಕಣ್ಣ ಮತ್ತು ಶ್ರೀಧರ ಚಿಕ್ಕವರು. ಸೌ. ಏಣಕ್ಕನವರು 18–6–1969 ರಂದು ತಂದೆಯಂತೆ ಕ್ಯಾನ್ಸರ ಬೇನೆಯಿಂದ ಕೈಲಾಸವಾಸಿಗಳಾದರು.

1. ಗಳಗನಾಥ : ದಾಂಪತ್ಯ, ಪುಟ 77

ಗಂ. ಭಾ. ಸುಬ್ಬಕ್ಕ ದೀಕ್ಷಿತ ಕಕ್ಕನವರ ಅವರು ತಮ್ಮ ತಂದೆಯ ಬಗ್ಗೆ ಅನೇಕ ಮಾತುಗಳನ್ನು ನೆನೆದುಕೊಳ್ಳುತ್ತಾರೆ. ಅವುಗಳಲ್ಲಿಯ ಕೆಲವು ಇವು :

"ಬಹಳ ಧಾರ್ಮಿಕರು. ಅನೇಕ ಮುಂಜಿ ಮದುವೆ ಮಾಡಿಸಿದರು. ದಾನ-ದಕ್ಷಿಣೆ ಕೊಟ್ಟರು. ಸಾಯುವಾಗ ಸಾಲವಿತ್ತು. ನಮ್ಮೂರಿನ (ಗಳಗನಾಥದ) ನೀಲಕಂಠ ಶಾಸ್ತ್ರಿಗಳು ಹೊಲ ಮಾರಿ ಸಾಲ ತೀರಿಸುವ ವ್ಯವಸ್ಥೆ ಮಾಡಿದರು. ತಾವಲ್ಲದೆ ಹೆಂಡತಿ, ಮಕ್ಕಳು, ಅಳಿಯಂದಿರು ಎಲ್ಲರೂ ಧರ್ಮಕಾರ್ಯ ಮಾಡಬೇಕು-ಎಂದು ಅಪೇಕ್ಷಿಸುತ್ತಿದ್ದರು. ಊರಲ್ಲಿ ಇದ್ದಾಗ ತಾವೇ ದಿನಾಲೂ ಪೂಜೆ ಮಾಡುತ್ತಿದ್ದರು. ಆಕಳ ಶಗಣಿ ತಾವೇ ತೆಗೆಯು-ತ್ತಿದ್ದರು. ಗೋಸೇವೆಯಂಥ ಪುಣ್ಯವಿಲ್ಲ ಎನ್ನುತ್ತಿದ್ದರು.[1] ಮಡಿ ಮೈಲಿಗೆ ಸಾಧಾರಣ. ಆದರೆ ದೇವರ ಮೇಲೆ, ಧರ್ಮದ ಮೇಲೆ ಬಹಳ ಶ್ರದ್ಧೆ. ಕನಸಿನಲ್ಲಿ ಲಕ್ಷ್ಮೀ-ವೆಂಕಪ್ಪ ಬಂದಿದ್ದರು. ಈ ಹೊತ್ತು ಪೂಜೆ ಮಾಡಿಸೋಣ ಎಂದು ಅನೇಕ ಸಲ ಹೇಳುತ್ತಿದ್ದರು. ಸತ್ಯನಾರಾಯಣನ ಪೂಜೆಯನ್ನು ಆಗಾಗ ಮಾಡಿಸುತ್ತಿದ್ದರು. ಪ್ರತಿಸಲ ನಾಲ್ಕೆಂಟು ಬ್ರಾಹ್ಮಣರ ಊಟ ಆಗುತ್ತಿತ್ತು. ಇಡೀ ತಿಂಗಳು ಧನುರ್ಮಾಸ; ಪ್ರತಿದಿನವೂ ಬ್ರಾಹ್ಮಣ ಮುತ್ತೈದೆಯರ ಊಟ. ಅಧಿಕ ಮಾಸದ ಬಾಗಿನವೂ ಹಾಗೇ. ದಿನಾಲೂ ಬಾಗಿನ ಕೊಡು-ತ್ತಿದ್ದರು. ಒಂದು ದಿನ 31 ರೂಪಾಯಿ ದಾನಕೊಟ್ಟರು. ವೆಂಕಪ್ಪ ಕುಲದೇವರು. ಅವನ ಮೇಲೆ ಬಹಳ ಭಕ್ತಿ. ಅವರು ತೀರ್ಥಯಾತ್ರೆಗೆ ಹೋಗಲಿಲ್ಲ. ಇದ್ದಲ್ಲೇ ಅನ್ನದಾನ ಮಾಡಿದರೆ ಅದೇ ಹೆಚ್ಚಿನ ಪುಣ್ಯ ಅನ್ನುತ್ತಿದ್ದರು. ಊಟದ ಕಾಲಕ್ಕೆ ಯಾರೇ ಬಂದರೂ, ಅವರನ್ನು ಊಟಕ್ಕೆ ಎಬ್ಬಿಸುತ್ತಿದ್ದರು. ಆ ಕಾಲಕ್ಕೆ ಬಂದವರಲ್ಲಿ ದೇವರ ಅಂಶವಿರುತ್ತದೆ ಎಂದು ಹೇಳುತ್ತಿದ್ದರು.

"ಅನ್ಯಾಯ-ಸುಳ್ಳು ಕಂಡರೆ ಆಗುತ್ತಿರಲಿಲ್ಲ. ಒಮ್ಮೆ ರಾಮಚಂದ್ರ (ಗಳಗನಾಥರ ಮೊಮ್ಮಗ) ಏನೋ ಕಳುವು ಮಾಡಿ ತಂದಿದ್ದ. ಸಿಟ್ಟುಮಾಡಿ ತಿರುಗಿ ಕಳಿಸಿದರು. ಆರತಿ ಕಾಲಕ್ಕೆ ಎಲ್ಲರೂ ತಪ್ಪ ಒಪ್ಪಲೇಬೇಕು. ಅವರ ಮನಸ್ಸಿನ ವಿರುದ್ಧ ಏನಾದರೂ ಮಾಡಿದರೆ ಸಿಟ್ಟು ಬೆಂಕಿಯಾಗುತ್ತಿದ್ದರು. ನಮ್ಮವರು-ಹೊರಗಿನವರು ಎಂದು ಭೇದಭಾವ ಮಾಡುತ್ತಿ-ರಲಿಲ್ಲ. ಊಟ-ಉಡಿಗೆಯಲ್ಲೂ ಭೇದವಿಲ್ಲ. ಏಕಾದಶಿ ದಿವಸ ಹಣ್ಣು-ಹಾಲು-ಸಜ್ಜಿಗೆ ತಗೋತಿದ್ದರು. ಪರವೂರಿಗೆ ಹೋದಾಗ ಒಮ್ಮೆ ಒಬ್ಬರ ಮನೆಯಲ್ಲಿ ಅಕ್ಕೀ-ಉಸಳಿ, ಝುಣಕ ಮಾಡಿದ್ದರು. ಅವರ ಜೊತೆಗಿರುವ ಬೇರೆ ನಾಲ್ವರು ಒಲ್ಲೆವು ಎಂದರು. ಅವರು 'ನಾನು ತಗೋತಿನಿ, ನೀವು ತಗೋರಿ' ಎಂದು ಹೇಳಿದರು. ಆ ರೀತಿ ಸುಧಾರಕರೇ ಅನ್ನಬಹುದು. ಮನೆಯಲ್ಲಿ ಲಿಂಗಾಯತರಿಗೂ ಊಟ ಹಾಕುತ್ತಿದ್ದರು.

"ನಾನು ಒಂದು ನಾಲ್ಕಾರು ತಿಂಗಳು ಶಾಲೆಗೆ ಹೋಗಿರಬಹುದು. ಹೆಚ್ಚಿಗೆ ಹೋಗಲಿಲ್ಲ. ಹೆಣ್ಣುಮಕ್ಕಳು ಶಾಲೆಗೆ ಹೋಗಬಾರದೆಂಬುದೇನೂ ಅಲ್ಲ. ನಮಗೆ ಮನೆ ಯಲ್ಲಿಯೇ ಅಕ್ಷರಾಭ್ಯಾಸ ಮಾಡಿಸಿದ್ದರು. ನಾನು ಅವರ ಎಲ್ಲ ಪುಸ್ತಕಗಳನ್ನು ಓದೇನಿ.

---

1. ಗಳಗನಾಥರ ಗೋಸೇವೆಯ ವಿಚಾರವನ್ನು ಅನೇಕರು ಹೇಳುತ್ತಾರೆ. ಅವರು ಬೆಂಗಳೂರಲ್ಲಿ ಮರಣಶಯ್ಯೆಯಲ್ಲಿದ್ದಾಗಲೂ ಅವರಿಗೆ ಆ ಚಿಂತೆ ತಪ್ಪಿರಲಿಲ್ಲ. ಅವರ ಸೋದರನ ಮಗ ಕೃಷ್ಣ ಎಂಬವರು ಹಾವೇರಿಯಿಂದ ಬೆಂಗಳೂರಿಗೆ ದಿ. 14-4-1942 ರಂದು ಬರೆದ ಪತ್ರದಲ್ಲಿ "ತಮ್ಮ ಅಪ್ಪಣೆಯ ಪ್ರಕಾರ ಗೋವುಗಳ ಸೇವೆಯನ್ನು ಅವು ತೃಪ್ತಿ ಹೊಂದುವಂತೆ ಮಾಡುತ್ತಿದ್ದೇವೆ. ಬ್ರಾಹ್ಮಣ, ಅತಿಥಿ, ಗುರುಗಳ ಸೇವೆಯನ್ನೂ ಚೆನ್ನಾಗಿ ಮಾಡುತ್ತಿದ್ದೇವೆ" ಎಂದು ಬರೆದಿದ್ದರು.

'ಪದ್ಮನಯನೆ', 'ಮೃಣಾಲಿನಿ' ಬಹಳ ಸಲ ಓದೇನಿ. ಭಾರತ, ಭಾಗವತ ಈಗಲೂ ದಿನಾಲೂ ಓದುತ್ತೇನೆ.

"ಚಿಕ್ಕಮಕ್ಕಳ ಮೇಲೆ ಪ್ರೀತಿ ಬಹಳ. ಹುಡುಗರು ಗದ್ದಲ ಮಾಡಿದರೂ ಸಿಟ್ಟಾಗುತ್ತಿರಲಿಲ್ಲ. ಮಕ್ಕಳು ಮೈಮೇಲೆ ಬಿದ್ದರೂ ತಾವು ಹಾಗೇ ಬರೀತಿದ್ದರು. ಅವರಿಗೆ ನನ್ನ ತಂಗಿಯ ಮೇಲೆ ಸ್ವಲ್ಪ ಹೆಚ್ಚು ಪ್ರೀತಿಯಿತ್ತು. ಅವಳನ್ನು ತಮ್ಮ ತಂಗಿಯ ಮಗನಿಗೇ ಕೊಟ್ಟಿದ್ದರಲ್ಲಾ!

"ಹಾಗೆ, ಅವರಿಗೆ ಜಡ್ಡು-ಜಾಪತ್ತು ಬಹಳ ಇರಲಿಲ್ಲ. ಗಟ್ಟಿಯಾಗಿಯೇ ಇದ್ದರು. ಪುಸ್ತಕದ ಗಂಟು ಹೊತ್ತುಕೊಂಡು ಊರೂರು ತಿರುಗಿದರು. ಕೊನೆಗೆ ಜಡ್ಡಾಗಿ ಒಂದು ಒಂದೂವರೆ ವರ್ಷ ಬಳಲಿದರು. ಲಘುವಿ ತ್ರಾಸು ಇತ್ತು. ಬೆಂಗಳೂರಿಗೆ ಹೋಗಿ ಒಂದು ತಿಂಗಳಲ್ಲಿ ತೀರಿಕೊಂಡರು. ನಮ್ಮ ತಾಯಿ ಮುಂದೆ 15-16 ವರ್ಷ ಜೀವದಿಂದಿದ್ದರು. ಅವರು ಕಡೆತನಕ ಓಡಾಡಿಕೊಂಡಿದ್ದರು. ಅವರಿಗೆ ಅರ್ಧಾಂಗ ಬಂದಿತ್ತು. ಕೊನೆಗೆ ಬಾಯಿ ಹೋಯಿತು. ಮೂರೇ ದಿನ ಮಲಗಿದ್ದರು............"[1]

ಗಳಗನಾಥರಾಗಲಿ, ಅವರ ಶ್ರೀಮತಿಯವರಾಗಲಿ ತುಂಬ ನಿರಾಡಂಬರವಾದ, ಸರಳ, ಸಾತ್ತ್ವಿಕ ಜೀವನವನ್ನು ಬಾಳಿದರು. ಅದರಿಂದಲೇ ಅಂಥ ಬಡತನವಿದ್ದರೂ ಅವರು ನಿರೋಗಿಗಳಾಗಿ ಏಳು ದಶಕಕ್ಕೂ ಹೆಚ್ಚು ಕಾಲ ಬಾಳಿದರು. ಸಾತ್ತ್ವಿಕತೆ ಅವರ ಜೀವನದಲ್ಲಿ ಎಷ್ಟು ಆಳವಾಗಿ ಬೇರೂರಿತ್ತೆಂದರೆ, ಅವರ ಆಹಾರ-ವಿಹಾರ, ಉಡುಗೆ-ತೊಡುಗೆಗಳೂ ಕೂಡ ತೀರ ಸರಳ, ನಿರಾಡಂಬರವಾಗಿದ್ದುವು. ಶ್ರೀಮತಿ ಸುಬ್ಬಕ್ಕನವರು ತಮ್ಮ ತಂದೆಯ ಆಹಾರ ಕುರಿತು "ಅಪ್ಪನಿಗೆ ಸಿಹಿ ಪದಾರ್ಥ ಹೆಚ್ಚು ಸೇರುತ್ತಿತ್ತಾದರೂ, ದಿನಾಲೂ ಅನ್ನ, ಭಕ್ರಿ ಊಟವನ್ನೇ ಮೆಚ್ಚುತ್ತಿದ್ದರು" ಎಂದು ನೆನೆಯುವರು.

ಶ್ರೀ ರಾ. ಹ. ದೇಶಪಾಂಡೆ ಅವರ ಮನೆತನದ ಜೊತೆಗೆ ಗಳಗನಾಥರ ಸಂಬಂಧವು ವಿಶೇಷವಾಗಿತ್ತಷ್ಟೇ. ಅವರ ಮೊಮ್ಮಕ್ಕಳಾದ ಶ್ರೀ ಕೆ. ಎಸ್. ದೇಶಪಾಂಡೆಯವರು ವೃದ್ಧ ಗಳಗನಾಥರನ್ನು ಕಂಡಿದ್ದರು. ಅವರ ಜೊತೆಗೆ ಕೆಲಕಾಲವನ್ನೂ ಕಳೆದಿದ್ದರು. ಅವರಿಂದ ಪ್ರಭಾವಿತರೂ ಆಗಿದ್ದರು. ಅವರು ತಮ್ಮ ಎಳೆಮನದ ಅನಿಸಿಕೆಗಳನ್ನು ಆತ್ಮೀಯವಾಗಿ ನೆನೆಸಿಕೊಂಡು, ಗಳಗನಾಥರ ನೈಜವಾದ ಶಬ್ದಚಿತ್ರವನ್ನೇ ಬರೆದಿರುವರು.

"ಗಳಗನಾಥರು ನಮ್ಮಲ್ಲಿ ಬಂದಾಗ ನಾನೇ ಅವರ ಎ. ಡಿ. ಸಿ. ಆಗುವ ಪ್ರಸಂಗ ತಲೆದೋರುತ್ತಿತ್ತೆಂದು ಹೇಳಿದೆನಷ್ಟೆ. ಅವರೇನೂ ಅಂಥ ವಿಶೇಷ ಸೇವೆ ಬಯಸುವ ಅತಿಥಿಯಾಗಿರಲಿಲ್ಲ. ಊಟ-ಉಡಿಗೆಗಳು ಬಹಳೇ ನಿರಾಡಂಬರ. ಎರಡು ಹೊತ್ತಿನ ಊಟವಲ್ಲದೆ ಅವರು ಮಧ್ಯೆ ಏನೂ ತೆಗೆದುಕೊಳ್ಳುತ್ತಿರಲಿಲ್ಲ. ಚಹದ ಅಭ್ಯಾಸ ಅವರಿಗೆ ಇದ್ದಿರಲಿಲ್ಲ. ಅವರ ಬಟ್ಟೆಯೆಂದರೆ ಎರಡು ಬಗಲಗಸಿ ಅಂಗಿ, ಒಂದು ಜೋಡಿ ಧೋತರ, ಕುತ್ತಿಗೆಯವರೆಗೆ ಬಿರಡಿಗಳಿದ್ದ ಕೋಟು, ಶುಭ್ರ ರುಮಾಲು, ಮೇಲೆ ಒಂದು ಶುಭ್ರ ಉತ್ತರೀಯ. ಇವುಗಳ ಜೊತೆಗೆ ಸಾಯಂ-ಸಂಧ್ಯಾವಂದನೆಗೋಸ್ಕರ ಒಂದು ರೇಶಿಮೆಯ ಧೋತರ ಅವರ

1. ಶ್ರೀಮತಿ ಸುಬ್ಬಕ್ಕನವರನ್ನು ಹಾವೇರಿಯಲ್ಲಿ 14-5-1970 ರಂದು ಕಾಣುವ ಅವಕಾಶವು ಈ ಪ್ರಬಂಧಕಾರನಿಗೆ ಒದಗಿಬಂದಿತ್ತು.

ಟ್ರಂಕಿನಲ್ಲಿರುತ್ತಿತ್ತು. ಅವರ ಇನ್ನುಳಿದ ಸಲಕರಣೆಗಳೆಂದರೆ ಒಂದು ಸಣ್ಣ ಹಾಸಿಗೆಯ ಸುರಳಿ, ಇನ್ನೊಂದು ಸಣ್ಣ ಟ್ರಂಕು. ಇದರಲ್ಲಿ ಮಾರಾಟದ ಪುಸ್ತಕಗಳು ಹಾಗು ಲೇಖನ ಸಾಮಗ್ರಿಗಳು ಇರುತ್ತಿದ್ದವು.

"ಗಳಗನಾಥರಿಗೆ ನಾನು ಸಲ್ಲಿಸಬೇಕಾದ ವಿಶೇಷ ಸೇವೆಯೆಂದರೆ 'ಕಂಪನಿ' ಕೊಡುವದು. ಇಂಥ ಕೆಲವೇ ವಿರಳವಾದ ಪ್ರಸಂಗಗಳಲ್ಲಿ ಅವರು ನನಗೆ ನೀತಿ ಬೋಧನೆಯನ್ನೂ, ನೀತಿ ಬೋಧಕ ಕಥೆಗಳನ್ನೂ ಹೇಳಿದ್ದು ಇನ್ನೂ ಜ್ಞಾಪಕವುಂಟು........"[1]

"ಕನ್ನಡಿಗರಲ್ಲಿ ವಾಚನಾಭಿರುಚಿಯನ್ನು ಹೆಚ್ಚಿಸಲಿಕ್ಕೂ ಮನರಂಜನೆಯನ್ನುಂಟು ಮಾಡಲಿಕ್ಕೂ ಮುಖ್ಯವಾಗಿ ನೀತಿಬೋಧೆಯನ್ನು ಮಾಡಲಿಕ್ಕೂ" ಕಥೆ-ಕಾದಂಬರಿಗಳನ್ನೂ ಧಾರ್ಮಿಕ ಹಾಗೂ ಶೈಕ್ಷಣಿಕ ಗ್ರಂಥಗಳನ್ನೂ ಬರೆದ, ಉದಾರ ವ್ಯಕ್ತಿತ್ವದ, ನೀತಿಯೇ ಮೂರ್ತಿಮಂತರಾಗಿದ್ದ ಗಳಗನಾಥರು ದಿನಾಂಕ 22-4-1942 ರಂದು ಸ್ವರ್ಗಸ್ಥರಾದರು. ಕರುಳಿನ ಕ್ಯಾನ್ಸರ ಬೇನೆಯಿಂದ ಕೊನೆಗಾಲದಲ್ಲಿ ಬಳಲಿದ ಅವರು ಬೆಂಗಳೂರಿನಲ್ಲಿ ಆಪರೇಶನ್ ಮಾಡಿಸಿಕೊಂಡರು. ಅನೇಕ ಸಲ ಹೇಳುವಂತೆ, ಶಸ್ತ್ರಚಿಕಿತ್ಸೆ ಯಶಸ್ವಿಯಾಯಿತಾದರೂ, ರೋಗಿ ಬದುಕಲಿಲ್ಲ. ಅದು ಕನ್ನಡದ ದುರ್ದೈವ.

25-4-1942ರಂದು ಹುಬ್ಬಳ್ಳಿಯ 'ಸಂಯುಕ್ತ ಕರ್ನಾಟಕ' ಪತ್ರಿಕೆಯು ಗಳಗನಾಥರ ನಿಧನದ ಸಮಾಚಾರವನ್ನು ಕನ್ನಡ ಜನಕ್ಕೆಲ್ಲ ಬಿತ್ತರಿಸಿತು.

"ಪ್ರಸಿದ್ಧ ಕಾದಂಬರಿಕಾರರಾದ ಶ್ರೀ ವೆಂಕಟೇಶ ತಿರಕೋ ಕುಲಕರ್ಣಿ ಗಳಗನಾಥ ಇವರು 22ನೇ ತಾರೀಖು ರಾತ್ರಿ ಬೆಂಗಳೂರ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ನಿಧನ ಹೊಂದಿದರೆಂದು ತಿಳಿಸಲು ವಿಷಾದವಾಗುತ್ತದೆ. ಕನ್ನಡದಲ್ಲಿ ಕಾದಂಬರಿ ಬರೆಯಲು ಪ್ರಾರಂಭಿಸಿದವರಲ್ಲಿ ಇವರೇ ಮೊದಲಿಗರು. 'ಸದ್ಬೋಧ ಚಂದ್ರಿಕೆ' ಎಂಬ ಮಾಸಪತ್ರಿಕೆಗೂ ಇವರು ಸಂಪಾದಕರಾಗಿದ್ದರು. ಇವರ 'ಮಾಧವ ಕರುಣಾವಿಲಾಸ' ಎಂಬ ಸ್ವತಂತ್ರ ಕಾದಂಬರಿಯು ಸುಪ್ರಸಿದ್ಧವಿರುವದು. ಪರಮಾತ್ಮನು ಮೃತರ ಆತ್ಮಕ್ಕೆ ಶಾಂತಿಯನ್ನೀಯಲಿ".

"ನನ್ನ ಮಗಳು, ನನ್ನ ಜ್ಯೇಷ್ಠಪುತ್ರಿ" ಎಂದು ಸದಾಕಾಲ ಅಂತಃಕರಣದಿಂದ ಕರೆಯುತ್ತಿದ್ದ ಅವರ 'ಚಂದ್ರಿಕೆ' ಕೂಡ ಅವರ ಮರಣಕ್ಕಾಗಿ ಕಣ್ಣೀರು ಕರೆದಳು ! ಗಳಗನಾಥರು ಚಂದ್ರಿಕೆಯ ಜನಕರೆಂದು ಅಗಡಿಯ ಆಶ್ರಮದವರೂ ಕೊನೆಗೆ ಮನ್ನಿಸಿದರು; ಅವರ ಮರಣಕ್ಕಾಗಿ ದುಃಖಿಸಿದರು. 1942ನೆಯ ವರ್ಷದ ಮೇ ತಿಂಗಳ 'ಸದ್ಬೋಧ ಚಂದ್ರಿಕೆ'ಯ ಮೊದಲ ಪುಟದಲ್ಲಿಯೇ ಕಪ್ಪು ಚೌಕಟ್ಟಿನಲ್ಲಿ, ಸಂಪಾದಕರು ಈ ರೀತಿ ಬರೆದರು:

## ಮಾನ್ಯ ಕನ್ನಡ ಸಾಹಿತಿಯ ಮರಣ

ನಮ್ಮ 'ಸದ್ಬೋಧ ಚಂದ್ರಿಕೆ' ಮಾಸಪತ್ರಿಕೆಯ ಜನಕರೂ ಕನ್ನಡ ಕಾದಂಬರಿಕಾರರಲ್ಲಿ ಶ್ರೇಷ್ಠರೂ ಆಗಿದ್ದ ಶ್ರೀಮಾನ್ ವೆಂಕಟೇಶ ತಿರಕೋ ಕುಲಕರ್ಣಿ ಗಳಗನಾಥ ಇವರು ತಾ. 22-4-1942 ಬುಧವಾರ ರಾತ್ರಿ ಬೆಂಗಳೂರ ವ್ಹಿಕ್ಟೋರಿಯಾ ಆಸ್ಪತ್ರೆಯಲ್ಲಿ ಮರಣ ಹೊಂದಿದರೆಂದು ತಿಳಿಸಲು ನಮಗೆ ಅತ್ಯಂತ ದುಃಖವಾಗುತ್ತದೆ. ಶ್ರೀ ಗಳಗನಾಥರು

1. ಹಾ. ಮಾ. ನಾಯಕ (ಸಂ) : ಗಳಗನಾಥ-ಪುಟ 18.

ಮರಣ ಸಮಯಕ್ಕೆ 74 ವರ್ಷದ ಮುಪ್ಪಿನವರಾಗಿದ್ದರೂ ಅವರ ಕನ್ನಡ ಲೇಖನ ವ್ಯವಸಾಯವು ಅವ್ಯಾಹತವಾಗಿ ಸಾಗಿತ್ತು. ಗತ ಮೂರು ತಪಗಳಿಂದ ಅವರು ತಮ್ಮ ಕನ್ನಡ ಕಾದಂಬರಿಗಳ ಮೂಲಕ ಇಡೀ ಕರ್ನಾಟಕದಲ್ಲೇ ಪ್ರಸಿದ್ಧಿ ಪಡೆದರು. ಮರಣ ಸಮಯಕ್ಕೆ ಅವರಿಗೊಂದು ವ್ರಣವಾಗಿತ್ತು. ಆಪರೇಶನ್ನಿಗಾಗಿ ಬೆಂಗಳೂರಿಗೆ ಹೋಗಿದ್ದರು. ದುರ್ದೈವದಿಂದ ಅವರಿಗೆ ಅಲ್ಲಿಯೇ ಮರಣವೊದಗಿತು. ಅವರ ಮರಣದಿಂದ ಅವರ ಕುಟುಂಬಕ್ಕೂ, ಅವರ ಅಭಿಮಾನಿಗಳಿಗೂ, ಇಡೀ ಕನ್ನಡ ನಾಡಿಗೂ ಅತ್ಯಂತ ಹಾನಿಯಾಗಿದೆ. ಅವರ ಮರಣ ದುಃಖದಲ್ಲಿ ಕನ್ನಡ ನಾಡೇ ಭಾಗಿಯಾಗಿದೆ. ಇದನ್ನರಿತು ಅವರ ಕುಟುಂಬ-ದವರು ತಮ್ಮ ದುಃಖವನ್ನು ತಗ್ಗಿಸಿಕೊಳ್ಳಬೇಕು. ಶ್ರೀ ಶೇಷಾಚಲ ಸದ್ಗುರುವು ಗಳಗನಾಥರ ಆತ್ಮಕ್ಕೆ ಚಿರಶಾಂತಿಯನ್ನೀಯಲಿ !!''

ಅವರ ಮರಣಕಾಲಕ್ಕೆ ಅನೇಕ ಆಪ್ತರೂ, ಸ್ನೇಹಿತರೂ ಅವರ ಹತ್ತಿರವಿದ್ದರು. ಅವರ ಅಳಿಯ ಶಂಕರ ಭಟ್ಟ ಜೋಶಿಯವರು ಅತೀವ ದುಃಖಿತರಾಗಿರುವುದನ್ನು ಕಂಡು ಸ್ವತಃ ಗಳಗನಾಥರೇ ಅವರನ್ನು ಸಮಾಧಾನಪಡಿಸಿದರಂತೆ ! ಕೊನೆಗೆ ''ನನ್ನ ಪುಸ್ತಕಗಳು ಎಲ್ಲಿಯ ವರೆಗೆ ಇರುವವೊ ಅಲ್ಲಿಯ ವರೆಗೆ ನಾನು ಸತ್ತರೂ ಇದ್ದಂತೆಯೇ !" [1] ಎಂದು ಹೇಳಿದ್ದರು. ಮರಣ ಕಾಲದಲ್ಲಿ ಕೂಡ ಗಳಗನಾಥರಿಗೆ ತಮ್ಮ ಪುಸ್ತಕಗಳ ಬಗ್ಗೆ ಎಂಥ ವಿಶ್ವಾಸ !

"ಅವರ ಮರಣ ದುಃಖದಲ್ಲಿ ಇಡೀ ಕನ್ನಡ ನಾಡೇ ಭಾಗಿಯಾಗಿದೆ, ಇದನ್ನರಿತು ಅವರ ಕುಟುಂಬದವರು ತಮ್ಮ ದುಃಖವನ್ನು ತಗ್ಗಿಸಿಕೊಳ್ಳಬೇಕು'' ಎಂದು 'ಸದ್ಬೋಧ ಚಂದ್ರಿಕೆ'ಯ ಸಂಪಾದಕರು ಸಮಾಧಾನ ಹೇಳಿದರು. ಆದರೆ,

''ಗ್ರಂಥ ಸಮುದಾಯವನ್ನುಳಿದು, ಬೇರಾವ ಲೌಕಿಕ ಸಂಪತ್ತನ್ನೂ ಅವರು ತಮ್ಮ ಸಂಸಾರಕ್ಕೆಂದು ಬಿಟ್ಟು ಹೋಗಿರಲಿಲ್ಲ. 10 ದಿನಗಳ ಮೇಲಿನ ಅವರ ಕರ್ಮದ ವೆಚ್ಚಕ್ಕೆ ಆ ಅವಧಿಯಲ್ಲಿ ಮಾರಾಟವಾದ ಪುಸ್ತಕಗಳು ನೆರವಾದುವೆಂಬುದು ಶೋಚನೀಯವಾದರೂ ಸತ್ಯಸಂಗತಿ''. [2]

ಪ್ರತ್ಯಕ್ಷದರ್ಶಿ ಶ್ರೀ ಚುಳಕಿ ಗೋವಿಂದರಾಯರೂ ಈ ಮಾತನ್ನೇ ಹೇಳುತ್ತಾರೆ. ತಮ್ಮ ಆಪ್ತರೊಬ್ಬರ ಭೆಟ್ಟಿಗೆಂದು ಹಾವೇರಿಗೆ ಹೋದ ಅವರು ಗಳಗನಾಥರ ಮರಣದ ಸಮಾಚಾರ ವನ್ನು ಕೇಳಿ, ಅವರ ಮನೆಗೆ ಹೋದರು. ಮನೆಯೆಲ್ಲ ಶೋಕದಲ್ಲಿ ಮುಳುಗಿತ್ತು. ಇವರು ಸಂತಾಪ ಸೂಚಿಸಿ, ದಿವಂಗತರ ಗುಣಗಾನ ಮಾಡಿದರು.

ಶ್ರೀಮತಿ ಗಳಗನಾಥರು ದುಃಖವನ್ನು ಹತ್ತಿಕ್ಕಿ. ''ಹೌದು ಅವರು ಪುಣ್ಯವಂತರೇ. ನಾವೇ ಪಾಪಿಗಳು. ಅವರ ಕರ್ಮವನ್ನು ಕೂಡಾ ಮಾಡಲಾರದ ಸ್ಥಿತಿಯಲ್ಲಿದ್ದೇವೆ'' ಎಂದು ವಿಷಯವನ್ನು ವಿವರಿಸಿದರು.

ಚುಳಕಿಯವರು ಮೂಕರಾದರು ! ಅವರಿಗೆ ತಮ್ಮ ಪುಸ್ತಕದ ಅಂಗಡಿ ನೆನಪಾಯಿತು. ಸ್ನೇಹಿತರಿಂದ ಕೈಗಡ ಇಸಿದುಕೊಂಡು, ನೂರು ರೂಪಾಯಿಗಳ ಪುಸ್ತಕಗಳನ್ನು ಕೊಂಡು,

1. 'ಸದ್ಬೋಧ ಚಂದ್ರಿಕೆ', ವಿಶೇಷಾಂಕ, ಎಪ್ರಿಲ್ 69, ಪುಟ 121
2. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 119

"ಇದು ಆ ಪುಣ್ಯಾತ್ಮನಿಗೆ ಸಂದ ನನ್ನ ಅಂತ್ಯಸೇವೆ" ಎಂದುಕೊಂಡು ಧಾರವಾಡಕ್ಕೆ ಪ್ರಯಾಣ ಬೆಳೆಸಿದರು.[1]

× × × ×

ಅಂತೂ ಗಳಗನಾಥರು ತಮ್ಮ ಹೋರಾಟದ ಬದುಕನ್ನು ಮುಗಿಸಿದರು. ಅಂದಿಗೆ 'ಗಳಗನಾಥ ಯುಗ'ವು ಮುಕ್ತಾಯವಾಯಿತು.

1. ಶ್ರೀ ಚುಳಕಿಯವರು ಲೇಖಕನಿಗೆ 5-4-75 ರಂದು ವಿವರಿಸಿದ ಸಂಗತಿಯ ಆಧಾರದಿಂದ.

# ಗಳಗನಾಥರ ಕೃತಿಸಂಖ್ಯಾ ನಿರ್ಣಯ

ಗಳಗನಾಥರೆಂದರೆ ಕಾದಂಬರಿಕಾರರೆಂಬ ಕಲ್ಪನೆಯೇ ಮುಖ್ಯವಾಗಿ ಬರುತ್ತದೆ-ಯಾದರೂ, ಅವರು ಕಾದಂಬರಿಗಳನ್ನಲ್ಲದೆ ಬೇರೆ ಗ್ರಂಥಗಳನ್ನೂ ಗಣನೀಯ ಸಂಖ್ಯೆಯಲ್ಲಿ ಬರೆದಿರುವರು. ಅವುಗಳನ್ನು ಪರಿಶೀಲಿಸಿದರೆ ಅವರ ಕಾರ್ಯದ ವ್ಯಾಪ್ತಿ, ಮಹತಿಗಳ ಕಲ್ಪನೆ ಬರಬಹುದಾಗಿದೆ.

ಗಳಗನಾಥರ ಕೃತಿಗಳ ಪರಿಚಯಕ್ಕೆ ಮೊದಲು ಅವರ ಕೃತಿಗಳ ಸಂಖ್ಯಾನಿರ್ಣಯ-ವನ್ನು ಮಾಡುವುದು ಅವಶ್ಯವಾಗಿದೆ. ಗಳಗನಾಥರು ಬರೆದ ಒಟ್ಟು ಕೃತಿಗಳ ಸಂಖ್ಯೆ ಎಷ್ಟು ಎಂಬುದೂ ಕೂಡ ಒಂದು ಸಮಸ್ಯೆಯಾಗುವಷ್ಟು ಅವರು ನಮಗೆ ಪ್ರಾಚೀನರಾಗಿಲ್ಲ; ನಿಜ. ಆದರೆ ನಮ್ಮಲ್ಲಿ ಮೊದಲಿನಿಂದಲೂ ಐತಿಹಾಸಿಕ ವಸ್ತುನಿಷ್ಠ ದೃಷ್ಟಿ ತೀರ ವಿರಲವಾಗಿರುವುದರಿಂದ, 1869ರಲ್ಲಿ ಜನಿಸಿ, 1942ರಲ್ಲಿ ಗತಿಸಿದ ಗಳಗನಾಥರ ಕೃತಿಗಳ ಸಂಖ್ಯಾ ನಿರ್ಣಯ ಕೂಡ ನಮಗಿಂದು ಸಮಸ್ಯೆಯಾಗಿ ತೋರುವಂತಾಗಿದೆ. ಅದಕ್ಕೆ ಮುಖ್ಯ ಕಾರಣವೆಂದರೆ ಅವರ ಜೀವಿತ ಕಾಲದಲ್ಲಿ ಅವರ ಕೃತಿಗಳ ಅಭ್ಯಾಸ ನಡೆಯದೆ ಹೋದುದು. ಅನಂತರ ಕೂಡ ಅಧಿಕೃತವಾದ ಒಂದು ಗ್ರಂಥವೂ ಅವರ ಬಗ್ಗೆ ಬರಲಿಲ್ಲ. ಅವರು ತೀರಿಕೊಂಡು ನಾಲ್ಕು ವರ್ಷಗಳ ಅನಂತರ 1946ರಲ್ಲಿ ನೆಗಳೂರು ರಂಗನಾಥರ ಆಸಕ್ತಿ-ಯಿಂದಾಗಿ 'ಕರ್ನಾಟಕ ವಿದ್ಯಾವರ್ಧಕ ಸಂಘ'ದಿಂದ 'ಗಳಗನಾಥ' ಎಂಬ ಎಪ್ಪತ್ತು ಪುಟದ ಚಿಕ್ಕ ಪುಸ್ತಿಕೆ ಪ್ರಕಟವಾಯಿತು. ಗಳಗನಾಥರ ಬಗ್ಗೆ ರಚಿತವಾದ ಈ ಪ್ರಥಮ ಪುಸ್ತಕದ ಕೊನೆಯಲ್ಲಿ 'ಗಳಗನಾಥರ ಕೃತಿಗಳು' ಎಂಬ ಪರಿಶಿಷ್ಟವನ್ನು ಜೋಡಿಸಲಾಗಿದೆ. ಇದರಲ್ಲಿ ಗಳಗನಾಥರ 60 ಪ್ರಕಟಿತ ಪುಸ್ತಕಗಳ ಹಾಗು 20 ಅಪ್ರಕಟಿತ ಪುಸ್ತಕಗಳ ಪಟ್ಟಿಯನ್ನು ಕೊಡಲಾಗಿದೆ. ಈ ದೋಷಪೂರ್ಣವಾದ ಪಟ್ಟಿಯನ್ನೇ ಮುಂದೆ ಎಲ್ಲರೂ ನಂಬಿದರು. 'ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ, 1850–1920' ದಂಥ ಒಳ್ಳೆಯ ಗ್ರಂಥವನ್ನು ಬರೆದ ಶ್ರೀ ವೆಂಕಟೇಶ ಸಾಂಗಲಿ ಅವರು ಕೂಡ ದುರ್ದೈವದಿಂದ ಈ ಪಟ್ಟಿಯನ್ನೇ ನೋಡಿ ಗಳಗನಾಥರ ಗ್ರಂಥಗಳ ಬಗ್ಗೆ ಬರೆದರು. ತೀರ ಇತ್ತೀಚೆಗೆ (1975) ಪ್ರಕಟವಾದ ಡಾ. ರಾ. ಯ. ಧಾರವಾಡಕರ ಅವರ 'ಹೊಸಗನ್ನಡ ಸಾಹಿತ್ಯದ ಉದಯಕಾಲ'ದಲ್ಲಿಯೂ ಇದೇ ಪಟ್ಟಿಯಿದೆ.

1969ರಲ್ಲಿ ಗಳಗನಾಥರ ಜನ್ಮಶತಾಬ್ದಿಯ ಕಾಲಕ್ಕೆ 'ಕರ್ನಾಟಕ ಭಾರತಿ'ಯಲ್ಲಿ ಡಾ. ಬೆಟಗೇರಿ ಕೃಷ್ಣಶರ್ಮಾ ಅವರು 'ಗಳಗನಾಥರ ಕೃತಿಗಳು–ಸಂಖ್ಯಾನಿರ್ಣಯ' ಎಂಬ ಲೇಖನವನ್ನು ಬರೆದರು. ಅದರಲ್ಲಿ ಅವರು ದಿವಂಗತ ನೆಗಳೂರ ರಂಗನಾಥರ ಪ್ರಯತ್ನದಿಂದ ಪ್ರಕಟವಾದ 'ಗಳಗನಾಥ' ಗ್ರಂಥದ ಕೊನೆಯಲ್ಲಿರುವ ಪರಿಶಿಷ್ಟವು ದೋಷಪೂರ್ಣ

ವಾಗಿದೆಯೆಂದು ಪ್ರಪ್ರಥಮವಾಗಿ ತಿಳಿಸಿದರು. "....ಗಳಗನಾಥರು ಬರೆದ ಗ್ರಂಥಗಳ ಪಟ್ಟಿಯನ್ನು ಅವರಿಗೆ ಒದಗಿಸಿದವರು ಸಾಕಷ್ಟು ವಾಸ್ತವ ದೃಷ್ಟಿಯನ್ನು ಇರಿಸಿಕೊಂಡವರಾಗಿರಲಿಲ್ಲವೆಂದು ತೋರುತ್ತದೆ. ಎಂತಲೇ ನೆರಂಗರು ಬರೆದು ಪ್ರಕಟಿಸಿದ ಗಳಗನಾಥರ ಪರಿಚಯಾತ್ಮಕ ಪುಸ್ತಕದ ಕೊನೆಯಲ್ಲಿ ಅಚ್ಚುಗೊಂಡಿರುವ ಗಳಗನಾಥರ ಗ್ರಂಥಗಳ ಪಟ್ಟಿಯಲ್ಲಿ ಬೇರೆ ಲೇಖಕರ ಕೆಲವು ಕೃತಿಗಳೂ ಸೇರಿಕೊಂಡಿವೆ. ಅಲ್ಲದೆ ಕಾಲಾನುಕ್ರಮಕ್ಕೆ ಅನುಸಾರವಾಗಿ ಸಿದ್ಧಪಡಿಸಿದ ಪಟ್ಟಿಯೂ ಅದಲ್ಲ"[1] ಎಂದು ಡಾ. ಬೆಟಗೇರಿಯವರು ಹೇಳಿದರು. ನೆಗಳೂರ ಅವರಿಗೆ ಗಳಗನಾಥರ ಗ್ರಂಥಗಳ ಪಟ್ಟಿಯನ್ನು ಒದಗಿಸಿದವರು ಗಳಗನಾಥರ ಅಳಿಯಂದಿರಾದ ಶ್ರೀ ಶಂಕರಭಟ್ಟ ಜೋಶಿ ಅವರು. ಶ್ರೀ ಜೋಶಿ ಅವರು ಗಳಗನಾಥರ ಗ್ರಂಥೋದ್ಯಮದಲ್ಲಿ ಸಾಕಷ್ಟು ಸಹಾಯ ಮಾಡುತ್ತಿದ್ದವರೇ; ಆದರೂ ಅವರಿಂದ ಸರಿಯಾದ ಪಟ್ಟಿ ಕೊಡಲಾಗಲಿಲ್ಲ. ಅವರು ಗಳಗನಾಥರು ಬರೆದ, ಸಂಪಾದಿಸಿದ ಮತ್ತು ಪ್ರಕಟಿಸಿದ ಎಲ್ಲ ಗ್ರಂಥಗಳನ್ನು ಗಳಗನಾಥರ ಗ್ರಂಥಗಳೆಂದು ತಿಳಿಸಿದರು. ಆದರೂ ಬೆಟಗೇರಿಯವರು ಹೇಳಿದಂತೆ ಆದಕ್ಕೆ ಶ್ರೀ ಜೋಶಿ ಅವರೊಬ್ಬರೇ ಕಾರಣರೆನ್ನಬೇಕಾಗಿಲ್ಲ.

ಗಳಗನಾಥರು ಆಗಡಿಯಲ್ಲಿದ್ದಾಗ 'ಶೇಷಾಚಲ ಗ್ರಂಥಮಾಲೆ'ಯಲ್ಲೂ, ಅನಂತರ ತಮ್ಮ 'ಸುರಸ ಗ್ರಂಥಮಾಲೆ'ಯಲ್ಲೂ ತಮ್ಮವಲ್ಲದೆ ಬೇರೆಯವರ ಗ್ರಂಥಗಳನ್ನೂ ಪ್ರಕಟಿಸಿದರು. ಆಗ ಬಹುಶಃ ಗ್ರಂಥ ಪ್ರಕಟಿಸಿದವರೇ ಎಲ್ಲ ಹಕ್ಕುಗಳನ್ನು ಇಟ್ಟುಕೊಳ್ಳುತ್ತಿದ್ದರು.[2] ಹೀಗಾಗಿ ಆ ಗ್ರಂಥಗಳ ಸ್ವಾಮ್ಯ ಗಳಗನಾಥರದಾದ್ದರಿಂದ, ಅವರು ಅವುಗಳನ್ನು "ನಮ್ಮ ಗ್ರಂಥಗಳು" ಎಂದು ಕರೆದುಕೊಂಡರು. ನಿದರ್ಶನಕ್ಕಾಗಿ ಗಳಗನಾಥರು 1931ರಲ್ಲಿ ಪ್ರಕಟಿಸಿದ ತಮ್ಮ 'ಮಹಾಭಾರತಾಮೃತ ಆದಿಪರ್ವ'ದ ಕೊನೆಯ ಪುಟದಲ್ಲಿ ಕೊಟ್ಟಿರುವ "ಗಳಗನಾಥರ ಜನಪ್ರಿಯ ಸುರಸ ಕಾದಂಬರಿಗಳು" ಎಂಬ ಪಟ್ಟಿಯ ಕೊನೆಗೆ, ಪೌರಾಣಿಕ ಗ್ರಂಥಗಳಲ್ಲಿ 'ವೆಂಕಟೇಶ ಮಹಾತ್ಮ್ಯ'ವೂ ಸೇರಿಕೊಂಡಿದೆ. 'ವೆಂಕಟೇಶ ಮಹಾತ್ಮ್ಯ'ವನ್ನು ಗಳಗನಾಥರು ಬರೆಯಲಿಲ್ಲ. ಅದನ್ನು ಬಾಳೇಹೊಸೂರಿನ ಶಾಲಾಶಿಕ್ಷಕರಾದ ಶ್ರೀನಿವಾಸಾಚಾರ್ಯ ನರಸಿಂಹಾಚಾರ್ಯ ಕಾಟೋಟಿ ಎಂಬವರು ಬರೆದರು. ಗಳಗನಾಥರು ಅದನ್ನು ಪ್ರಕಟಿಸಿದ್ದ-ರಲ್ಲದೆ 37 ಪುಟಗಳ ಸುದೀರ್ಘ ಪ್ರಸ್ತಾವನೆಯನ್ನೂ ಬರೆದಿದ್ದಾರೆ. ಅನಂತರ ಅದು ಗಳಗನಾಥರ ಗ್ರಂಥವೆಂದೇ ಪ್ರಚಾರವಾಯಿತು.

ಅದರಂತೆ 1933ರಲ್ಲಿ ಗಳಗನಾಥರು ತಮ್ಮ 'ಧರ್ಮರಹಸ್ಯ' ಕಾದಂಬರಿಯ ಮೂರ-ನೆಯ ಮುದ್ರಣದ ಕೊನೆಗೆ ಕೊಟ್ಟ 'ಪುಸ್ತಕಗಳ ಕ್ರಯದ ಪಟ್ಟಿ'ಯಲ್ಲಿ ಕೂಡ 'ವೆಂಕಟೇಶ ಮಹಾತ್ಮ್ಯ' ವಲ್ಲದೆ 'ಗುರುಪ್ರಸಾದ', 'ವಿಕಾರವಿನಾಶ' ಪುಸ್ತಕಗಳ ಹೆಸರುಗಳೂ ಇವೆ. 'ಗುರುಪ್ರಸಾದ'ವು ವಲ್ಲಭ ಮಹಾಲಿಂಗ ತಟ್ಟಿ ಅವರದಾದರೆ, 'ವಿಕಾರವಿನಾಶ'ವು[3] ಶಂಕರ

1. ಡಾ. ಬೆಟಗೇರಿ ಕೃಷ್ಣಶರ್ಮಾ : 'ಗಳಗನಾಥರ ಕೃತಿಗಳು–ಸಂಖ್ಯಾನಿರ್ಣಯ' ಕರ್ನಾಟಕ ಭಾರತಿ, 1–2; ಪುಟ 109
2. ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದವರು ಕೂಡ ತಾವು ಪ್ರಕಟಿಸಿದ ಗ್ರಂಥಗಳ ಎಲ್ಲ ಹಕ್ಕುಗಳನ್ನು ತಾವೇ ಇಟ್ಟುಕೊಳ್ಳುತ್ತಿದ್ದರು.
3. 'ವಿಕಾರವಿನಾಶ' ಕಾದಂಬರಿಯ ಹೆಸರು 'ಗಳಗನಾಥ' ಗ್ರಂಥದ ಕೊನೆಗಿರುವ ಪಟ್ಟಿಯಲ್ಲಿ ಕೊಟ್ಟಿಲ್ಲ. ಆದರೆ ಈಗಲೂ ಅದು ಗಳಗನಾಥಕೃತವೆಂದೇ ಪ್ರಕಟವಾಗಿ ಮಾರಾಟವಾಗುತ್ತಿದೆ. ಧಾರವಾಡದ 'ಸಮಾಜ ಪುಸ್ತಕಾಲಯ'ವು ಅದನ್ನು ಪ್ರಕಟಿಸಿದೆ.

ಅಣ್ಣಾಜಿ ಕುಲಕರ್ಣಿ ಅವರದು. ಗಳಗನಾಥರ ಕೊನೆಯ ಕಾದಂಬರಿ 'ದುರ್ಗದ ಬಿಚ್ಚುಗತ್ತಿ' 1ನೆಯ ಭಾಗವು 1938ರಲ್ಲಿ ಪ್ರಕಟವಾಯಿತು. ಆ ಕಾದಂಬರಿಯ ಕೊನೆಯ ಪುಟದ ಮೇಲಿರುವ 'ಈಗಿರುವ ಪುಸ್ತಕಗಳ ಪಟ್ಟಿ'ಯು 'ವೆಂಕಟೇಶ ಮಹಾತ್ಮ್ಯ', 'ವಿಕಾರ ವಿನಾಶ', 'ಗುರುಪ್ರಸಾದ' ಮತ್ತು 'ಮುರಾರರಾವ'ಗಳನ್ನೂ ಒಳಗೊಂಡಿದೆ. ಆದರೆ ಈ ಗ್ರಂಥಗಳನ್ನು 'ಗಳಗನಾಥರ ಗ್ರಂಥಗಳು' ಎಂದು ಕರೆದಿಲ್ಲವೆಂಬುದು ಮಾತ್ರ ನಿಜ. 'ನಮ್ಮ ಗ್ರಂಥಮಾಲೆಯ ಪುಸ್ತಕಗಳು' ಎಂಬರ್ಥದಲ್ಲಿ ಗಳಗನಾಥರು ಕೊಟ್ಟ ಪುಸ್ತಕಗಳ ಪಟ್ಟಿಯೇ ಅವರ ಮರಣಾನಂತರ ಗಳಗನಾಥರ ಗ್ರಂಥಗಳ ಪಟ್ಟಿಯಾಗಿ ಮಾರ್ಪಟ್ಟಿತು. ಹೀಗೆ ಈ ಪಟ್ಟಿಗಳೂ ಗಳಗನಾಥರ ಗ್ರಂಥಗಳ ಬಗ್ಗೆ ಗೊಂದಲವನ್ನುಂಟುಮಾಡಲಿಕ್ಕೆ ಕಾರಣವಾದುವು.

ಅದರಂತೆ ಗಳಗನಾಥರು ಬೇರೆ ಲೇಖಕರ ಜೊತೆಗೆ ಬರೆದ ಗ್ರಂಥಗಳೂ ಮುಂದೆ ಗಳಗನಾಥರ ಗ್ರಂಥಗಳೆಂದೇ ಪ್ರಸಿದ್ಧವಾದುವು. ಉದಾಹರಣೆಗೆ ಅವರ 'ಚಿದಂಬರ ಚರಿತ್ರ'ವನ್ನು ನೋಡಬಹುದು. "ಇದನ್ನು ಶ್ರೀಗುರುಪ್ರೇರಣೆಯಿಂದ ಗುರುನಾಥ ವೆಂಕಟೇಶ ಕಿತ್ತೂರ ಬಿ. ಎ. ಮತ್ತು ವೆಂಕಟೇಶ ತಿರಕೋ ಕುಲಕರ್ಣಿ ಇವರು ಸಂಪಾದಿಸಿದರು'' ಎಂದು ಗ್ರಂಥದ ಪ್ರಥಮ ಮುದ್ರಣ (1909)ದ ಮುಖಪುಟದಲ್ಲಿದೆ.[1] ಆದರೂ, ಆಮೇಲೆ ಕಿತ್ತೂರರ ಹೆಸರು ಹಿಂದೆ ಬಿದ್ದು, ಅದು ಗಳಗನಾಥರ ಗ್ರಂಥವೆಂದೇ ಖ್ಯಾತವಾಯಿತು. ಅದರಂತೆ 'ಶೈವ ಸುಧಾರ್ಣವ'ವನ್ನು ಗಳಗನಾಥರು ಹಾಗೂ ಶ್ರೀ ಮಲ್ಲಾರಿದೀಕ್ಷಿತ ಚಿಂತಾಮಣಿದೀಕ್ಷಿತ ಕಕ್ಕನವರ ಅವರು ಕೂಡಿಯೇ ಬರೆದರೂ, ಅದು ಇಂದು ಗಳಗನಾಥರ ಕೃತಿಯೆಂದೇ ಖ್ಯಾತವಾಗಿದೆ. ಈ ಮಾತನ್ನು ಡಾ. ಬೆಟಗೇರಿಯವರೂ ಗಮನಿಸಿದಂತೆ ತೋರುವುದಿಲ್ಲ. ಅವರು ಈ ಎರಡೂ ಗ್ರಂಥಗಳನ್ನು ಗಳಗನಾಥರೇ ಬರೆದಿರುವರೆಂದು ಅಭಿಪ್ರಾಯಪಟ್ಟಿರು-ವರು. ಅದರಂತೆ 'ಸಾಧು ಸದಾಶಿವಲೀಲೆ'ಯನ್ನು ಗಳಗನಾಥರು ಬಸವಣ್ಣೆಸ್ವಾಮಿ ಗುರು ಬಸವಣ್ಣೆಸ್ವಾಮಿ ವಿರಕ್ತಮಠ ಎಂಬವರ ಜೊತೆಗೆ ಬರೆದರು.[2] ಆದರೆ ಜೋಶಿಯವರು ಕೊಟ್ಟಿರುವ ಪಟ್ಟಿಯಲ್ಲಿ ಈ ಗ್ರಂಥವು ಗಳಗನಾಥರದೆಂದೇ ಅರ್ಥವಾಗುತ್ತದೆ. ಆದರೆ ಬೆಟಗೇರಿಯವರು ಈ ಗ್ರಂಥವನ್ನು ಬಸವಣ್ಣೆಸ್ವಾಮಿ ಅವರು ಮಾತ್ರ ಬರೆದಿರುವರೆಂದು ಹೇಳಿರುವರು.[3] ಅಲ್ಲದೆ 'ರಾಜನಿಷ್ಠೆ' ಎಂಬ ಗ್ರಂಥವನ್ನು ಗಳಗನಾಥರೇ ಬರೆದರೆಂದು ಜೋಶಿಯವರ ಪಟ್ಟಿಯಲ್ಲಿಯೂ ಬೆಟಗೇರಿಯವರ ಪಟ್ಟಿಯಲ್ಲಿಯೂ ಕಾಣಿಸಲಾಗಿದೆ. ಆದರೆ 'ರಾಜನಿಷ್ಠೆಯೂ ನಮ್ಮ ಪುಣ್ಯಶಾಲಿಗಳಾದ ಸಾರ್ವಭೌಮರೂ' ಎಂಬುದು ಗ್ರಂಥದ ನಿಜವಾದ ಹೆಸರು; ಮತ್ತು ಅದನ್ನು ಗಳಗನಾಥರು ಕೃಷ್ಣಾಜಿ ಶಂಕರ ಇಂಗಳೆಕರ ಎಂಬವರ ಜೊತೆಗೆ 1911ರಲ್ಲಿ ಬರೆದರು.

ಹೀಗೆ ಗಳಗನಾಥರ ಗ್ರಂಥಗಳ ಕರ್ತೃತ್ವದ ಬಗ್ಗೆಯೇ ಬೇಕಾದಷ್ಟು ತಪ್ಪು ಕಲ್ಪನೆಗಳುಂಟಾಗಿವೆ. ಇದಕ್ಕೆ ಮೇಲೆ ವಿವರಿಸಿದ ಅನೇಕ ಕಾರಣಗಳ ಜೊತೆಗೆ, ಇಂದು ಗಳಗನಾಥರು ಬರೆದ ಕೆಲವು ಗ್ರಂಥಗಳೂ, 'ಸದ್ಬೋಧ ಚಂದ್ರಿಕೆ' ಮತ್ತು 'ಸದ್ಗುರು' ಮಾಸಪತ್ರಿಕೆಯ

---

1. ಈ ಆವೃತ್ತಿಯು ಈಗಲೂ ಧಾರವಾಡದ 'ಕರ್ನಾಟಕ ಕಾಲೇಜಿ'ನ ಗ್ರಂಥಾಲಯದಲ್ಲಿ ಲಭ್ಯವಿದೆ.
2. ಈ ಗ್ರಂಥವು 1914ರಲ್ಲಿ 'ಸದ್ಬೋಧ ಚಂದ್ರಿಕೆ'ಯಲ್ಲಿ ಕ್ರಮಶಃ ಪ್ರಕಟವಾಗುತ್ತಿತ್ತು. ಆಗ ಅದರಲ್ಲಿ ಸಹಲೇಖಕರಿಬ್ಬರ ಹೆಸರುಗಳೂ ಅಚ್ಚಾಗಿವೆ.
3. ಕರ್ನಾಟಕ ಭಾರತಿ, 1–2, ಪುಟ 112.

ಎಲ್ಲ ಸಂಚಿಕೆಗಳೂ ಲಭ್ಯವಿಲ್ಲದಿರುವುದು ಒಂದು ಪ್ರಮುಖ ಕಾರಣವಾಗಿದೆ. ಅದರಿಂದ ಗಳಗನಾಥರ ಗ್ರಂಥಗಳ ಸಂಖ್ಯಾನಿರ್ಣಯವು ಒಂದು ಸಮಸ್ಯೆಯಾಗಿ ಕಾಡುತ್ತಿದೆ. ಈ ಸಮಸ್ಯೆ-ಯನ್ನು ಬಿಡಿಸುವುದಕ್ಕಾಗಿಯೇ ಬೆಟಗೇರಿಯವರು 'ಕರ್ನಾಟಕ ಭಾರತಿ'ಯಲ್ಲಿ ಲೇಖನವನ್ನು ಬರೆಯಬೇಕಾಯಿತು. ಅವರು ಅದಕ್ಕಾಗಿ ಅಭಿನಂದನಾರ್ಹರೇ ಸರಿ. ಡಾ. ಬೆಟಗೇರಿಯವರು ತಮ್ಮ ಲೇಖನವನ್ನು ತುಂಬ ಅಧಿಕಾರಯುಕ್ತವಾಗಿ ಬರೆದಿರುವರು. ಆದರೂ ಅವರ ಲೇಖನ ದಲ್ಲಿಯೂ ಕೆಲವು ನ್ಯೂನತೆಗಳು ಉಳಿದುಕೊಂಡಿವೆ.

ಈಗ ಶ್ರೀ ಜೋಶಿ ಅವರಿಂದ ಸಿದ್ಧವಾಗಿ, ಕ. ವಿ. ವ. ಸಂಘದ ಪ್ರಕಟನೆಯಾಗಿರುವ 'ಗಳಗನಾಥ' ಗ್ರಂಥದ ಕೊನೆಗೆ ಪರಿಶಿಷ್ಟವಾಗಿ ಅಚ್ಚಾಗಿರುವ ಪಟ್ಟಿಯನ್ನೇ ಮೂಲವೆಂದು ತಿಳಿದು ಗಳಗನಾಥರ ಕೃತಿ ಸಂಖ್ಯಾನಿರ್ಣಯಕ್ಕೆ ತೊಡಗುವುದು ಉಚಿತವಾಗಿದೆ. ಈ ಪಟ್ಟಿಯ ಪ್ರಕಾರ ಗಳಗನಾಥರ ಪ್ರಕಟಿತ ಕೃತಿಗಳ ಸಂಖ್ಯೆ ಅರುವತ್ತು. ಅವು :

1. ಪ್ರಬುದ್ಧ ಪದ್ಮನಯನೆ
2. ನಿಬಂಧ ಶಿಕ್ಷಣ
3. ಈಶ್ವರೀಸೂತ್ರ
4. ಮರಾಠರ ಅಭ್ಯುದಯ
5. ಛತ್ರಪತಿ
6. ಕಮಲಕುಮಾರಿ
7. ಶಿವಪ್ರಭುವಿನ ಪುಣ್ಯ
8. ಕುರುಕ್ಷೇತ್ರ
9. ಗೃಹಕಲಹ
10. ರಾಣೀ ಮೃಣಾಲಿನಿ
11. ಧಾರ್ಮಿಕ ತೇಜ
12. ಕ್ಷಾತ್ರತೇಜ
13. ಧರ್ಮರಹಸ್ಯ
14. ತಿಲೋತ್ತಮೆ
15. ರಾಣಾ ರಾಜಸಿಂಹ
16. ವೈಭವ
17. ಸತ್ವಸಾರ
18. ಕುಮುದಿನಿ
19. ಸಂಸಾರ ಸುಖ
20. ಲಕ್ಷ್ಮೀಬಾಯಿ
21. ಸತಿಸಾಹಸ
22. ಅದ್ಭುತ ಶೌರ್ಯ
23. ಶುಕ ಸಂಜೀವನಿ
24. ಭಾಗವತಾಮೃತ

25. ಶೈವ ಸುಧಾರ್ಣವ
26. ತುಲಸೀ ರಾಮಾಯಣ
27. ಕನ್ನಡಿಗರ ಕರ್ಮಕಥೆ
28. ಆನಂದ ರಾಮಾಯಣ
29. ವೆಂಕಟೇಶ ಮಹಾತ್ಮ್ಯ
30. ದುರ್ಗದ ಬಿಚ್ಚುಗತ್ತಿ ಭಾಗ 1
31. ಚಿದಂಬರ ಚರಿತ್ರ
32. ಉತ್ತರರಾಮ ಚರಿತ
33. ಗಿರಿಜಾ ಕಲ್ಯಾಣ
34. ಸತ್ವಾದರ್ಶ
35. ಭಕ್ತಿವಿಜಯ
36. ಶ್ರೀ ಸುರೇಶ್ವರಾಚಾರ್ಯ ಚರಿತ್ರೆ
37. ದತ್ತ ಕಥಾಮೃತಸಾರ
38. ಸಾಧು ಸದಾಶಿವಲೀಲೆ
39. ಫಕೀರೇಶ್ವರ ಪುರಾಣ
40. ಕುಟುಂಬ
41. ದಾಂಪತ್ಯ
42. ನಿರ್ಯಾಣ ಮಹೋತ್ಸವ
43. ಹಿಂದೂ ಸಮಾಜ ವ್ಯವಸ್ಥೆ
44. ವರ್ಣಾಶ್ರಮ ಧರ್ಮ
45. ಪುನರ್ಜನ್ಮ
46. ಮಾಧವಕರುಣಾವಿಲಾಸ
47. ಗೀತಾವಲೋಕನ
48. ಶ್ರೇಷ್ಠ ಸದುಪದೇಶ
49. ಬ್ರಾಹ್ಮಣ ಪ್ರಾಪ್ತಸಾಧನೆ[1]
50. ಕಣ್ವ ಸಂಹಿತೆ
51. ಸುಂದರಲೇಖ ಸಮುಚ್ಚಯ
52. ಭಗವತೀ ಕಾತ್ಯಾಯಿನಿ
53. ಕಲಿಕುಠಾರ
54. ನಲಚರಿತ್ರ
55. ರಹಸ್ಯಗಳು
56. ಮಹಾಭಾರತ ಆದಿಪರ್ವ
57. ಮಹಾಭಾರತ ಸಭಾಪರ್ವ

1. ಈ ಗ್ರಂಥದ ನಿಜವಾದ ಹೆಸರು 'ಬ್ರಾಹ್ಮಣ್ಯ ಪ್ರಾಪ್ತಿಸಾಧನೆ'. ಡಾ. ಬೆಟಗೇರಿಯವರ ಪಟ್ಟಿಯಲ್ಲಿಯೂ ಕೂಡ 'ಬ್ರಾಹ್ಮಣ ಪ್ರಾಪ್ತಿ ಸಾಧನೆ' ಎಂದು ತಪ್ಪಾಗಿ ಇದೆ.

58. ಸ್ವರಾಜ್ಯ ಸುಗಂಧ
59. ಸದ್ಗುರು ಪ್ರಭಾವ
60. ಗುರುಪ್ರಸಾದ.

ಮೇಲೆ ಕೊಟ್ಟ ಪಟ್ಟಿಯಲ್ಲಿಯ 60 ಗ್ರಂಥಗಳಲ್ಲಿ 16 ಗ್ರಂಥಗಳು ಅನ್ಯರಿಂದ ರಚಿತವಾದವುಗಳು. ಅವು :

1. ಲಕ್ಷ್ಮೀಬಾಯಿ—ವ. ಮ. ತಟ್ಟಿ
2. ಹಿಂದೂಸಮಾಜ ವ್ಯವಸ್ಥೆ—ವ. ಮ. ತಟ್ಟಿ
3. ವರ್ಣಾಶ್ರಮ ಧರ್ಮ— ,,
4. ಗೀತಾವಲೋಕನ — ,,
5. ಗುರುಪ್ರಸಾದ — ,,
6. ಸತಿಸಾಹಸ — ಶ್ರೀಕಂಠಶಾಸ್ತ್ರಿಗಳು
7. ಆನಂದ ರಾಮಾಯಣ — ,,
8. ಪುನರ್ಜನ್ಮ— ,,
9. ಅದ್ಭುತ ಶೌರ್ಯ— ಆರ್. ಆರ್. ಗುಡಿಸಾಗರ
10. ಶುಕ ಸಂಜೀವನಿ — ಕೃ. ಶಂ. ಇಂಗಳಗಿ
11. ವೆಂಕಟೇಶ ಮಹಾತ್ಮ್ಯ— ಶ್ರೀನಿವಾಸಾಚಾರ್ಯ ಕಾಟೋಟೆ
12. ಭಕ್ತಿ ವಿಜಯ — ಯ. ಗು. ಕುಲಕರ್ಣಿ
13. ಶ್ರೀಸುರೇಶ್ವರಾಚಾರ್ಯ ಚರಿತ್ರೆ-ನಾ. ಶ್ರೀ. ರಾಜಪುರೋಹಿತ
14. ದತ್ತಕಥಾಮೃತಸಾರ — ಹಾವನೂರ, ಆನಂದವನ
15. ಫಕೀರೇಶ್ವರ ಪುರಾಣ — ಜಾಧವ
16. ಕಣ್ವ ಸಂಹಿತೆ— (ಇದು ವೈದಿಕ ಮಂತ್ರಗಳ ಸಂಕಲನ; ಸುಬ್ರಹ್ಮಣ್ಯ ಘನಪಾಠಿ ಅವರಿಂದ ಸಂಪಾದಿತ.)

ಇವು ಅನ್ಯಕರ್ತೃಕಗಳೆಂದು ಬೆಟಗೇರಿಯವರೂ ಅಭಿಪ್ರಾಯಪಟ್ಟಿರುವರು.

ಇನ್ನು ಬೆಟಗೇರಿ ಅವರು ಕೊಟ್ಟಿರುವ ಪಟ್ಟಿಯನ್ನು ಪರಿಶೀಲಿಸಬಹುದು. ಅವರು ಕೊಟ್ಟ ಪಟ್ಟಿಯಲ್ಲಿ ಕೇವಲ 44 ಗ್ರಂಥಗಳಿವೆ.[1] ಅವರು ಒಟ್ಟು 9 ಗ್ರಂಥಗಳನ್ನು ಅನ್ಯಕರ್ತೃಕಗಳೆಂದು ನಿರಾಕರಿಸಿರುವರು. ಅವುಗಳಲ್ಲಿ 'ಮುರಾರರಾವ' ಎಂಬ ಕಾದಂಬರಿಯು ಗಳಗನಾಥರದಲ್ಲವೆಂದೂ, ಅದನ್ನು ತ. ನಾ. ಅಮ್ಮಿನಭಾವಿ ಅವರು ಬರೆದಿರುವರೆಂದೂ ತಿಳಿಸಿರುವರು. ಆದರೆ 'ಮುರಾರರಾವ' ಗ್ರಂಥದ ಹೆಸರು ಜೋಶಿಯವರ ಪಟ್ಟಿಯಲ್ಲಿ ಇಲ್ಲ. ಅಂದರೆ ಜೋಶಿಯವರ ಪಟ್ಟಿಯಲ್ಲಿಂದ ಬೆಟಗೇರಿಯವರು 18 ಗ್ರಂಥಗಳನ್ನು ನಿರಾಕರಿಸಿದಂತಾಯಿತು. ಆದರೆ ಬೆಟಗೇರಿಯವರ ಪಟ್ಟಿಯು, ಜೋಶಿಯವರ ಪಟ್ಟಿಯಲ್ಲಿ ಇಲ್ಲದ (1) ಕನ್ಯಾಶಿಕ್ಷಣ[2] (2) ಮತ್ತು ರಾಜನಿಷ್ಠೆ ಎಂಬೆರಡು ಹೆಚ್ಚಿನ ಗ್ರಂಥಗಳನ್ನು

1. ಬೆಟಗೇರಿ ಕೃಷ್ಣಶರ್ಮಾ : 'ಗಳಗನಾಥರ ಕೃತಿಗಳು—ಸಂಖ್ಯಾನಿರ್ಣಯ,' ಕರ್ನಾಟಕ ಭಾರತಿ, 1–2, ಪುಟ 110–113
2. ಈ ಗ್ರಂಥದ ನಿಜವಾದ ಹೆಸರು : 'ಕನ್ಯಾಶಿಕ್ಷಕ'

ಒಳಗೊಂಡಿದೆ. ಹೀಗೆ ಬೆಟಗೇರಿಯವರ ಪ್ರಕಾರ (60—18+2=44) ಒಟ್ಟು 44 ಗ್ರಂಥಗಳನ್ನು ಗಳಗನಾಥರು ಬರೆದಂತಾಯಿತು. ಅವು :

1. ಪದ್ಮನಯನೆ (ಕಾದಂಬರಿ)
2. ಕಮಲಕುಮಾರಿ ,,
3. ಮೃಣಾಲಿನಿ ,,
4. ವೈಭವ ,,
5. ಕುಮುದಿನಿ ,,
6. ಈಶ್ವರೀ ಸೂತ್ರ ,,
7. ಕ್ಷಾತ್ರತೇಜ ,,
8. ಧರ್ಮರಹಸ್ಯ ,,
9. ಸತ್ವಸಾರ ,,
10. ತಿಲೋತ್ತಮೆ ,,
11. ಕನ್ನಡಿಗರ ಕರ್ಮಕಥೆ ,,
12. ಶಿವಪ್ರಭುವಿನ ಪುಣ್ಯ ,,
13. ಕುರುಕ್ಷೇತ್ರ ,,
14. ಮರಾಠರ ಅಭ್ಯುದಯ ,,
15. ಛತ್ರಪತಿ ,,
16. ಮಾಧವಕರುಣಾವಿಲಾಸ ,,
17. ಗೃಹಕಲಹ ,,
18. ರಾಣಾ ರಾಜಸಿಂಹ ,,
19. ಧಾರ್ಮಿಕ ತೇಜ ,,
20. ಸಂಸಾರಸುಖ ,,
21. ಸ್ವರಾಜ್ಯ ಸುಗಂಧ ,,
22. ಸತ್ವಾದರ್ಶ ,,
23. ದುರ್ಗದ ಬಿಚ್ಚುಗತ್ತಿ ಭಾಗ–1 ,,
24. ಭಗವತೀ ಕಾತ್ಯಾಯಿನಿ ,,
25. ಗಿರಿಜಾಕಲ್ಯಾಣ (ಪೌರಾಣಿಕ ಕಥೆ)
26. ಉತ್ತರರಾಮ ಚರಿತ್ರೆ ,,
27. ನಳಚರಿತ್ರ (ಪೌರಾಣಿಕ ಕಥೆ)
28. ಚಿದಂಬರ ಚರಿತ್ರ ,,
29. ಭಾಗವತಾಮೃತ ,,
30. ಶೈವಸುಧಾರ್ಣವ ,,
31. ತುಲಸೀ ರಾಮಾಯಣ ,,
32. ಮಹಾಭಾರತ—ಆದಿಪರ್ವ ,,
33. ಮಹಾಭಾರತ—ಸಭಾಪರ್ವ ,,

34. ನಿರ್ಯಾಣ ಮಹೋತ್ಸವ (ಸತ್ಪುರುಷ ಚರಿತ್ರ)
35. ಸದ್ಗುರು ಪ್ರಭಾವ ,,
36. ಕಲಿ ಕುಠಾರ ,,
37. ದಾಂಪತ್ಯ (ನಿಬಂಧ-ಪ್ರಬಂಧಗಳು)
38. ಕುಟುಂಬ ,,
39. ಸುಂದರಲೇಖ ಸಮುಚ್ಚಯ ,,
40. ನಿಬಂಧ ಶಿಕ್ಷಣ ,,
41. ಕನ್ಯಾಶಿಕ್ಷಣ ,,
42. ರಾಜನಿಷ್ಠೆ ,,
43. ಶ್ರೇಷ್ಠ ಸದುಪದೇಶ ,,
44. ಬ್ರಾಹ್ಮಣ ಪ್ರಾಪ್ತಿಸಾಧನೆ ,,

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿದ 'ಗಳಗನಾಥ' ಗ್ರಂಥದ ಕೊನೆಗೆ ಇದೇ ಪಟ್ಟಿಯನ್ನು ಕೊಡಲಾಗಿದೆ.[1] ಅದರಂತೆ 'ಕನ್ನಡ ವಿಶ್ವಕೋಶ' ದಲ್ಲಿಯೂ ಇದೇ ಪಟ್ಟಿಯಿದೆ.[2]

ಆದರೆ ಬೆಟಗೇರಿಯವರ ಈ ಪಟ್ಟಿಯೂ ಅಪೂರ್ಣವಾಗಿದೆ; ಅಲ್ಲದೆ ದೋಷ ರಹಿತವೂ ಆಗಿಲ್ಲವೆಂದು ಹೇಳಬೇಕಾಗುತ್ತದೆ.

ಗಳಗನಾಥರು ಬರೆದವುಗಳಲ್ಲವೆಂದು ಬೆಟಗೇರಿಯವರು ಬಿಟ್ಟುಕೊಟ್ಟ 18 ಗ್ರಂಥಗಳಲ್ಲಿ 16 ಗ್ರಂಥಗಳು ಮಾತ್ರ ಅನ್ಯಕರ್ತೃಕಗಳಾಗಿವೆ. 'ರಹಸ್ಯಗಳು' ಎಂಬ ಗ್ರಂಥದ "ಲೇಖಕರು ಗೊತ್ತಿಲ್ಲ"[3] ಎಂದು ಬೆಟಗೇರಿಯವರು ಹೇಳಿರುವರಾದರೂ, ಗಳಗನಾಥರೇ ಅದನ್ನು ಬರೆದರೆಂಬಲ್ಲಿ ಸಂದೇಹವಿಲ್ಲ. ದಿನಾಂಕ 7-10-1933ರಂದು ಪ್ರಕಟವಾದ 92 ಪುಟಗಳ ಈ ಗ್ರಂಥವು ಗಳಗನಾಥರ 'ಮಹಾಭಾರತಾಮೃತ'ದಲ್ಲಿಯ ಕೆಲವು ರಹಸ್ಯಗಳನ್ನೇ ಒಳಗೊಂಡಿದೆ. ಅದರಂತೆ 'ಸಾಧು ಸದಾಶಿವಲೀಲೆ'ಯನ್ನು ಬಸವಣ್ಣಿಸ್ವಾಮಿ ಎಂಬವರು ಬರೆದಿರುವರೆಂದು ಬೆಟಗೇರಿಯವರು ಹೇಳಿದ್ದರೂ, ಗಳಗನಾಥರೂ ಈ ಗ್ರಂಥದ ಸಹ ಲೇಖಕರೆನ್ನುವಲ್ಲಿ ಸಂಶಯಕ್ಕೆ ಆಸ್ಪದವಿಲ್ಲ.[4] ಇನ್ನು ಬೇರೆಯವರ ಜೊತೆಗೆ ಬರೆದ 'ಚಿದಂಬರ ಚರಿತ್ರ', 'ಶೈವ ಸುಧಾರ್ಣವ', 'ರಾಜನಿಷ್ಠೆ'ಗಳನ್ನು ಬೆಟಗೇರಿಯವರು ಗಳಗನಾಥರ ಗ್ರಂಥಗಳೆಂದು ಸ್ವೀಕರಿಸಿದ ಪ್ರಕಾರ, ಪ್ರಸ್ತುತ 'ಸಾಧು ಸದಾಶಿವಲೀಲೆ'ಯನ್ನೂ ಗಳಗನಾಥರ ಗ್ರಂಥವೆಂದು ಪರಿಗಣಿಸಬೇಕಾಗುತ್ತದೆ. ಆದ್ದರಿಂದ ಬೆಟಗೇರಿಯವರ 44 ಗ್ರಂಥಗಳ ಪಟ್ಟಿಗೆ 'ರಹಸ್ಯಗಳು', ಮತ್ತು 'ಸಾಧು ಸದಾಶಿವಲೀಲೆ'ಗಳನ್ನೂ ಸೇರಿಸಬೇಕು.

1. ಹಾ. ಮಾ. ನಾಯಕ (ಸಂ) : ಗಳಗನಾಥ, ಪುಟ 86, 87
2. ಕನ್ನಡ ವಿಶ್ವಕೋಶ, 6ನೆಯ ಸಂಪುಟ, ಪುಟ 146, 147.
3. ಕರ್ನಾಟಕ ಭಾರತಿ, 1-2, ಪುಟ 113
4. 1914 ನೆಯ ವರ್ಷದ 'ಸದ್ಬೋಧ ಚಂದ್ರಿಕೆ'ಯಲ್ಲಿ ಈ ಗ್ರಂಥವು ಕ್ರಮಶಃ ಪ್ರಕಟವಾದಾಗ ಸಹಲೇಖಕರ ಹೆಸರುಗಳಲ್ಲಿ ಗಳಗನಾಥರ ಹೆಸರೂ ಇದೆ.

ಅಲ್ಲದೆ, ಬೆಟಗೇರಿಯವರ ಗಮನಕ್ಕೆ ಬಾರದೆಯಿದ್ದ ಗಳಗನಾಥರ ಬೇರೆ ಕೆಲವು ಗ್ರಂಥಗಳೂ ಇವೆ. ಅವು;

1. ಪದ್ಯಾರ್ಥಸಾರ (1897)
2. ಲಘುನಿಬಂಧ ಸಂಗ್ರಹ ಮತ್ತು ಪತ್ರವ್ಯವಹಾರ (1899)
3. ಗೀತೆಯ ಶ್ರವಣಾಧಿಕಾರ (1928)
4. ವಿವೇಕಾನಂದರು ವೈದಿಕರಿಗೆ ಯಾರು ? (1928)
5. ವೀರ ಪ್ರತಾಪ (1949) ಮತ್ತು
6. ಕಲಿ ಕುಠಾರ–ಜ್ಞಾನಯೋಗಪ್ರಧಾನ ಖಂಡ. (1959)[1]

ಆದ್ದರಿಂದ ಗಳಗನಾಥರ ಗ್ರಂಥಗಳು (44+2+6) ಒಟ್ಟು 52 ಆಗಬೇಕು. ಆದರೆ ಜೋಶಿಯವರ ಮತ್ತು ಬೆಟಗೇರಿಯವರ ಎರಡೂ ಪಟ್ಟಿಗಳಲ್ಲಿಯೂ ಇದ್ದ 'ಸತ್ವಾದರ್ಶ' ಮತ್ತು 'ಶ್ರೇಷ್ಠ ಸದುಪದೇಶ' ಎಂಬ ಗ್ರಂಥಗಳು ಗಳಗನಾಥರವಲ್ಲವೆಂಬ ಸಂದೇಹಕ್ಕೆ ಬಲವಾದ ಕಾರಣಗಳಿವೆ.

'ಸತ್ವಾದರ್ಶ' ಗ್ರಂಥವು ಲಭ್ಯವಾಗಿಲ್ಲ. ಅದನ್ನು ದೊರಕಿಸಲು ಅನೇಕ ಗ್ರಂಥಾಲಯಗಳಲ್ಲಿ ಪ್ರಯತ್ನಿಸಿದರೂ ಫಲವಿಲ್ಲದಾಯಿತು. ಆ ಗ್ರಂಥದ ವಿಷಯವೇನೆಂಬ ಬಗ್ಗೆಯೂ ಯಾರೂ ಎಲ್ಲಿಯೂ ಬರೆದಿಲ್ಲ. ಬೆಟಗೇರಿಯವರು ಮಾತ್ರ "ಈ ಕಾದಂಬರಿಯ ಹೆಸರು 'ಕುಟುಂಬ'ದ ಪಟ್ಟಿಯಲ್ಲಿ ಬಂದಿರುವುದಾದರೂ 'ಸದ್ಗುರು–ಪ್ರಭಾವ'ದಲ್ಲಿಲ್ಲ"[2] ಎಂದಿರುವರು. ಗಳಗನಾಥರ ಕೃತಿಗಳ ಸಂಖ್ಯಾನಿರ್ಣಯಕ್ಕೆ ತಮಗೆ ಗಳಗನಾಥರ 'ಕುಟುಂಬ' ಗ್ರಂಥದ 1918ನೆಯ ವರ್ಷದ 2ನೆಯ ಆವೃತ್ತಿಯ ಕೊನೆಯಲ್ಲಿರುವ 'ಗಳಗನಾಥರ ಸುರಸ ಗ್ರಂಥಮಾಲೆ'ಯ ಗ್ರಂಥಗಳ ಪಟ್ಟಿಯೂ ಸಹಾಯಕವಾಗಿದೆಯೆಂದು ಬೆಟಗೇರಿಯವರು ತಿಳಿಸಿರುವರು.[3]

ಆದರೆ "1918ರಲ್ಲಿ ಪ್ರಕಟವಾದ 'ಕುಟುಂಬ' ಪುಸ್ತಕದ ಎರಡನೇ ಆವೃತ್ತಿಯ ಗ್ರಂಥದಲ್ಲಿ ಗಳಗನಾಥರ ಗ್ರಂಥಗಳ ಪಟ್ಟಿ ಇಲ್ಲ."[4]

ಅಂದರೆ ಬೆಟಗೇರಿಯವರು ತಮ್ಮ ನೆನಪಿನ ಆಧಾರದ ಮೇಲೆ ಹೇಳಿರುವಲ್ಲಿ ತುಸು ತಪ್ಪಾಗಿರುವ ಸಂಭವವಿದೆ. ಏಕೆಂದರೆ ಗಳಗನಾಥರ ಜೀವಿತ ಕಾಲದಲ್ಲಿ ಪ್ರಕಟಿತವಾದ 'ಭಾಗವತಾಮೃತ' (1922), 'ಶೈವ ಸುಧಾರ್ಣವ' (1923), 'ರಾಮಾಯಣಾಮೃತ' (1926), 'ಮಹಾಭಾರತಾಮೃತ ಆದಿಪರ್ವ' (1931), 'ಧರ್ಮರಹಸ್ಯ' (1933) ಮತ್ತು 'ದುರ್ಗದ ಬಿಚ್ಚುಗತ್ತಿ' (1938) ಈ ಮೊದಲಾದ ಗ್ರಂಥಗಳ (ಪ್ರಥಮ ಆವೃತ್ತಿ), ಮತ್ತು ಅವರ ಮರಣಾನಂತರ ಪ್ರಕಟವಾದ ಅವರ ಹಲವು ಕಾದಂಬರಿಗಳ ಕೊನೆಗೆ

---

1. ಗಳಗನಾಥರೇ ಈ ಗ್ರಂಥಗಳ ಕರ್ತೃಗಳೆಂದು ಮುಂದೆ ವಿವರಿಸಲಾಗುವುದು.
2. ಕರ್ನಾಟಕ ಭಾರತಿ, 1–2, ಪುಟ 111
3. ಅದೇ, ಪುಟ 109
4. ದಿ. 5–8–1975 ರಂದು ಈ ರೀತಿ ಬರೆದು ತಿಳಿಸಿ ಉಪಕರಿಸಿದ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ. ಹಾ. ಮಾ. ನಾಯಕರಿಗೆ ಲೇಖಕನು ಋಣಿಯಾಗಿರುವನು.

ಕೊಟ್ಟಿರುವ 'ಪುಸ್ತಕಗಳ ಪಟ್ಟಿ'ಯಲ್ಲಿಯೂ ಈ 'ಸತ್ವಾದರ್ಶ'ದ ಹೆಸರೇ ಇಲ್ಲ. ಬೆಟಗೇರಿಯವರ ಪಟ್ಟಿಯನ್ನು ಬಿಟ್ಟರೆ, 1946ರಲ್ಲಿ 'ಕರ್ನಾಟಕ ವಿದ್ಯಾವರ್ಧಕ ಸಂಘ'ವು ಪ್ರಕಟಿಸಿದ 'ಗಳಗನಾಥ'ದ ಕೊನೆಯಲ್ಲಿರುವ, ಜೋಶಿಯವರಿಂದ ಸಿದ್ಧಪಡಿಸಲಾದ ಗಳಗನಾಥರ ಗ್ರಂಥಗಳ ಪಟ್ಟಿಯಲ್ಲಿ ಮಾತ್ರ 'ಸತ್ವಾದರ್ಶ'ದ ಹೆಸರು ಕಾಣದೊರೆಯುತ್ತದೆ. ಆದರೆ ಗಳಗನಾಥರ ಮರಣಾನಂತರ ಪುನರ್ಮುದ್ರಿಸಿದ ಗಳಗನಾಥರ ಯಾವುದೇ ಗ್ರಂಥದ ಕೊನೆಗೆ ಕೊಟ್ಟಿರುವ ಪುಸ್ತಕಗಳ ಪಟ್ಟಿಯಲ್ಲಿಯೂ 'ಸತ್ವಾದರ್ಶ'ದ ಹೆಸರು ಇಲ್ಲದಿರುವುದು ಗಮನಾರ್ಹ ಅಂಶ. ಅಷ್ಟೇ ಅಲ್ಲದೆ, 'ಸತ್ವಾದರ್ಶ'ವು ಗಳಗನಾಥಕೃತವಲ್ಲವೆಂದು ಜೋಶಿಯವರೇ ಇತ್ತೀಚೆ ಸ್ಪಷ್ಟ-ವಾಗಿ ತಿಳಿಸಿರುವರು.[1]

'ಗಳಗನಾಥ ಮಾಸ್ತರ'ರ ಜೀವನ ಚರಿತ್ರೆಯನ್ನು ಬರೆದ ಡಾ. ಹಾವನೂರ ಅವರು ಕೂಡ "ಸತ್ವಾದರ್ಶ ಎಂಬ ಕಾದಂಬರಿ ಅವರು (ಗಳಗನಾಥರು) ಬರೆದಿಲ್ಲ. ಆ ಶಬ್ದದ ಹೆಸರೇ ಅಷ್ಟು ಸ್ಪಷ್ಟವಿಲ್ಲ" ಎಂದು ಅಭಿಪ್ರಾಯಪಟ್ಟಿರುವರು.

ಮೇಲಿನ ಎಲ್ಲ ಅಂಶಗಳು 'ಸತ್ವಾದರ್ಶ'ವೆಂಬ ಗ್ರಂಥವನ್ನು ಗಳಗನಾಥರು ಬರೆಯ-ಲಿಲ್ಲವೆಂದೇ ಸೂಚಿಸುತ್ತವೆ. ಆದ್ದರಿಂದ 'ಸತ್ವಾದರ್ಶ'ದ ಬಗ್ಗೆ ಈ ಕೆಳಗಿನ ನಿರ್ಣಯಕ್ಕೆ ಬರಬೇಕಾಗಿದೆ:

'ಸತ್ವಾದರ್ಶ' ಗ್ರಂಥ ಲಭ್ಯವಿಲ್ಲ.

ಅದು ಕಾದಂಬರಿಯೋ ಬೇರೆ ರೀತಿಯ ಗ್ರಂಥವೋ ತಿಳಿಯದು.

ಅದನ್ನು ಗಳಗನಾಥರು ಬರೆಯಲಿಲ್ಲವೆಂಬುದು ಖಚಿತ.

ಅದನ್ನು ಬೇರೆಯವರು ಬರೆದಿರಬಹುದೆಂಬ ಬಗ್ಗೆ ಕೂಡ ಯಾವ ಖಚಿತವಾದ ಆಧಾರಗಳೂ ಇಲ್ಲ.

ಇನ್ನು, ಗಳಗನಾಥಕೃತವೆಂದು ಹೇಳಲಾದ 'ಶ್ರೇಷ್ಠ ಸದುಪದೇಶ'ಎಂಬ ಗ್ರಂಥದ ಅಸ್ತಿತ್ವದ ಬಗ್ಗೆ ವಿಚಾರಿಸಬಹುದು. ಇದು ಜೋಶಿಯವರ ಪಟ್ಟಿಯಲ್ಲಿಯೂ ಇದೆ; ಬೆಟಗೇರಿಯವರೂ ಇದನ್ನು ಒಂದು ಪ್ರಬಂಧವೆಂದು ಕರೆದಿರುವರು. ಆದರೆ ಸ್ವತಃ ಗಳಗನಾಥರು ಅನೇಕ ಕಡೆಗಳಲ್ಲಿ ಕೊಟ್ಟ ಪುಸ್ತಕಗಳ ಯಾವ ಒಂದು ಪಟ್ಟಿಯಲ್ಲಿಯೂ ಇದರ ಹೆಸರು ಕಾಣಿಸುವುದಿಲ್ಲ. ಪುಸ್ತಕವಂತೂ ಲಭ್ಯವಿಲ್ಲ. ಈ ಗ್ರಂಥದ ಬಗ್ಗೆ ಡಾ. ಹಾವನೂರ ಅವರನ್ನು ವಿಚಾರಿಸಿದಾಗ, ಅವರು "ಶ್ರೇಷ್ಠ ಸದುಪದೇಶ–ನನಗೆ ತಿಳಿದ ಮಟ್ಟಿಗೆ ಇದೂ ಗಳಗನಾಥರದಲ್ಲ. ಬಹಳ ವಾದರೆ ಅದೊಂದು ಚಿಕ್ಕ ಲೇಖವಿರಬಹುದು. 'ಸುಂದರಲೇಖ ಸಮುಚ್ಚಯ' ನೋಡಿರಿ. ಅದರಲ್ಲಿ ಇದು ಇಲ್ಲದಿದ್ದರೆ ಇದು ಗಳಗನಾಥರದಿರುವ ಸಂಭವ ಕಡಿಮೆ'' ಎಂದು ಅಭಿ-ಪ್ರಾಯಪಟ್ಟಿರುವರು.[2] ಅದು 'ಸುಂದರ ಲೇಖ ಸಮುಚ್ಚಯ'ದಲ್ಲಿ ಇಲ್ಲವೇ ಇಲ್ಲ: ಅಷ್ಟೇ ಅಲ್ಲ, ಬೇರೆ ಎಲ್ಲಿಯೂ ಇಲ್ಲ.

1. ಶ್ರೀ ಅನಂತ ಬುರ್ಲಿ, ಗದಗ, ಅವರಿಂದ ಈ ಬಗ್ಗೆ ದಿ. 23–7–75 ರಂದು ಪತ್ರದ್ವಾರಾ ತಿಳಿಯಿತು.

2. ಡಾ. ಹಾವನೂರರು ಈ ಲೇಖಕನಿಗೆ ದಿನಾಂಕ 10-6-75 ರಂದು ಈ ರೀತಿ ಬರೆದು ತಿಳಿಸಿರುವರು.

ಈ ಗ್ರಂಥದ ಬಗ್ಗೆ ತುಸು ತಪ್ಪು ಕಲ್ಪನೆಯುಂಟಾಗಿರಬೇಕೆಂದು ಊಹಿಸಬೇಕಾಗಿದೆ. ಈ ಗ್ರಂಥದ ಬಗ್ಗೆ ಮೊದಲು ಹೇಳಿದವರು ಗಳಗನಾಥರ ಅಳಿಯಂದಿರಾದ ಜೋಶಿಯವರು. ಅವರು 'ವಿದ್ಯಾವರ್ಧಕ ಸಂಘ'ದ ಪ್ರಕಟನೆ 'ಗಳಗನಾಥ'ದ ಕೊನೆಯಲ್ಲಿ ಕೊಟ್ಟ ಪುಸ್ತಕಗಳ ಪಟ್ಟಿಯಲ್ಲಿ ಈ ಗ್ರಂಥದ ಹೆಸರಿದೆ. ಆದರೆ ಅದರಲ್ಲಿಯ ಅನೇಕ ಗ್ರಂಥಗಳು ಗಳಗನಾಥರ ವಲ್ಲವೆಂಬುದು ಆಗಲೇ ಸಿದ್ಧವಾಗಿವೆ. ಆ ಪಟ್ಟಿಯಲ್ಲಿಯ 'ಲಕ್ಷ್ಮೀಬಾಯಿ', 'ಹಿಂದೂ ಸಮಾಜ ವ್ಯವಸ್ಥೆ', 'ವರ್ಣಾಶ್ರಮ ಧರ್ಮ', 'ಗೀತಾವಲೋಕನ' ಮತ್ತು 'ಗುರುಪ್ರಸಾದ' ಇವು ವಲ್ಲಭ ಮಹಾಲಿಂಗ ತಟ್ಟಿಯವರ ಗ್ರಂಥಗಳಾಗಿವೆ. ಅದರಂತೆ ಪ್ರಸ್ತುತ 'ಶ್ರೇಷ್ಠ ಸದುಪದೇಶ'ವೂ ಗಳಗನಾಥರದಾಗಿರದೆ, ತಟ್ಟಿಯವರದೇ ಆಗಿರಬೇಕು. ತಟ್ಟಿಯವರು 1910-11ರಲ್ಲಿ 'ಸದ್ಬೋಧ-ಚಂದ್ರಿಕೆ'ಯಲ್ಲಿ 'ಸೃಷ್ಟಿಯ ಸದುಪದೇಶ' ಎಂಬ ಲೇಖನ ಮಾಲೆಯನ್ನು ಬರೆಯುತ್ತಿದ್ದರು. ಅದು ಮುಂದೆ ಪುಸ್ತಕರೂಪವಾಗಿಯೂ ಪ್ರಕಟವಾಗಿರ ಬಹುದು. ಅದನ್ನೇ ಜೋಶಿಯವರು ಬಹುಶಃ ತಪ್ಪು ಕಲ್ಪನೆಯಿಂದ 'ಶ್ರೇಷ್ಠ ಸದು-ಪದೇಶ' ಎಂದೂ, ಅದು ಗಳಗನಾಥರದೆಂದೂ ತಿಳಿಸಿದರು. ಗಳಗನಾಥರ ಮರಣಾನಂತರ ಜೋಶಿಯವರೇ ಪುನರ್ಮುದ್ರಿಸಿದ ಗಳಗನಾಥರ ಹಲವು ಗ್ರಂಥಗಳಲ್ಲಿ ಈ ಗ್ರಂಥವೂ ಇಲ್ಲ, ಈ ಗ್ರಂಥದ ಉಲ್ಲೇಖವೂ ಇಲ್ಲವೆಂಬುದು ಗಮನಾರ್ಹವಾಗಿದೆ.

ಒಟ್ಟಿನಲ್ಲಿ 'ಶ್ರೇಷ್ಠ ಸದುಪದೇಶ'ವಂತೂ ಗಳಗನಾಥರದಲ್ಲ. ತಟ್ಟಿಯವರ 'ಸೃಷ್ಟಿಯ ಸದುಪದೇಶ'ವೇ ಗಳಗನಾಥರ 'ಶ್ರೇಷ್ಠ ಸದುಪದೇಶ'ವೆಂದಾಗಿರಬಹುದು. ಅಥವಾ 'ಶ್ರೇಷ್ಠ ಸದುಪದೇಶ'ವನ್ನು ಬೇರೆ ಯಾರಾದರೂ ಬರೆದಿರಬಹುದು. ಆದರೆ ಆ ಸಂಭವವೂ ಕಡಿಮೆಯೇ ಆಗಿದೆ.

ಏನೇ ಆದರೂ, ಸದ್ಯಕ್ಕಂತೂ 'ಶ್ರೇಷ್ಠ ಸದುಪದೇಶ'ವನ್ನು ಗಳಗನಾಥರ ಗ್ರಂಥವೆಂದು ಪರಿಗಣಿಸಲು ಸಾಧ್ಯವಿಲ್ಲ.

ಆದ್ದರಿಂದ ಗಳಗನಾಥರ ಕೃತಿಸಂಖ್ಯೆಯನ್ನು 50 ಎಂದು ನಿರ್ಣಯಿಸಬೇಕಾಗಿದೆ.

ಈ 50 ಕೃತಿಗಳಲ್ಲಿ ಐದು ಗ್ರಂಥಗಳ ಪ್ರಕಟನೆಯ ಕಾಲ ಮಾತ್ರ ಖಚಿತವಾಗಿ ತಿಳಿಯುವುದಿಲ್ಲ. ಉಳಿದವುಗಳ ಕಾಲಾನುಕ್ರಮ ಪಟ್ಟಿ ಹೀಗಿದೆ:[1]

| | | |
|---|---|---|
| 1. | ಪದ್ಯಾರ್ಥಸಾರ | 1897 |
| 2. | ಪದ್ಮನಯನಾ (ಕಾದಂಬರಿ) | 1898 |
| 3. | ಲಘುನಿಬಂಧ ಸಂಗ್ರಹ ಮತ್ತು ಪತ್ರವ್ಯವಹಾರ | 1899 |
| 4. | ಚಿದಂಬರ ಚರಿತ್ರೆ (ಇತರರೊಂದಿಗೆ) | 1909 |
| 5. | ಕಮಲಕುಮಾರಿ (ಕಾದಂಬರಿ) | 1910 |
| 6. | ನಿಬಂಧ ಶಿಕ್ಷಣ | 1910 |
| 7. | ಗಿರಿಜಾಕಲ್ಯಾಣ ಸಾರ | 1911 |
| 8. | ಮೃಣಾಲಿನಿ (ಕಾದಂಬರಿ) | 1911 |

1. ಡಾ. ಬೆಟಗೇರಿಯವರು ಕೊಟ್ಟಿರುವ ಗಳಗನಾಥರ ಗ್ರಂಥಗಳ ಪಟ್ಟಿಯೂ ಕಾಲಾನುಕ್ರಮವಾಗಿದೆ ಎಂದು ಹೇಳಲಾಗಿದೆ. ಆದರೆ ಅದರಲ್ಲಿಯೂ ಕೆಲವು ನ್ಯೂನತೆಗಳು ಕಂಡುಬರುತ್ತವೆ.

9. ರಾಜನಿಷ್ಠೆಯೂ ನಮ್ಮ ಪುಣ್ಯಶಾಲಿಗಳಾದ ಸಾರ್ವಭೌಮರೂ (ಇತರರೊಡನೆ) 1911
10. ದಾಂಪತ್ಯ 1912
11. ವೈಭವ (ಕಾದಂಬರಿ) 1912
12. ಕುಟುಂಬ 1913
13. ಕುಮುದಿನಿ (ಕಾದಂಬರಿ) 1913
14. ಈಶ್ವರೀಸೂತ್ರ (ಕಾದಂಬರಿ) 1913
15. ಕ್ಷಾತ್ರತೇಜ (ಕಾದಂಬರಿ) 1914
16. ಧರ್ಮರಹಸ್ಯ (ಕಾದಂಬರಿ) 1914
17. ಸತ್ವಸಾರ (ಕಾದಂಬರಿ) 1915
18. ನಿರ್ಯಾಣ ಮಹೋತ್ಸವ 1915
19. ಕನ್ನಡಿಗರ ಕರ್ಮಕಥೆ (ಕಾದಂಬರಿ) 1916
20. ತಿಲೋತ್ತಮೆ (ಕಾದಂಬರಿ) 1917
21. ಮರಾಠರ ಅಭ್ಯುದಯ (ಕಾದಂಬರಿ) 1918
22. ಶಿವಪ್ರಭುವಿನ ಪುಣ್ಯ (ಕಾದಂಬರಿ) 1918
23. ಭಗವತೀ ಕಾತ್ಯಾಯನೀ 1919
24. ಛತ್ರಪತಿ (ಕಾದಂಬರಿ) 1919
25. ಕುರುಕ್ಷೇತ್ರ (ಕಾದಂಬರಿ) 1919
26. ಗೃಹಕಲಹ (ಕಾದಂಬರಿ) 1921
27. ಭಾಗವತಾಮೃತ 1922
28. ಶೈವಸುಧಾರ್ಣವ (ಇತರರೊಂದಿಗೆ) 1923
29. ಮಾಧವ ಕರುಣಾವಿಲಾಸ (ಕಾದಂಬರಿ) 1923
30. ರಾಮಾಯಣಾಮೃತ 1926
31. ಸಂಸಾರ ಸುಖ (ಕಾದಂಬರಿ) 1926
32. ರಾಣಾ ರಾಜಸಿಂಹ (ಕಾದಂಬರಿ) 1928
33. ಧಾರ್ಮಿಕ ತೇಜ (ಕಾದಂಬರಿ) 1928
34. ಸದ್ಗುರು ಪ್ರಭಾವ 1928
35. ಗೀತೆಯ ಶ್ರವಣಾಧಿಕಾರ 1928
36. ವಿವೇಕಾನಂದರು ವೈದಿಕರಿಗೆ ಯಾರು? 1928
37. ಮಹಾಭಾರತಾಮೃತ—ಆದಿಪರ್ವ 1931
38. ರಹಸ್ಯಗಳು 1933
39. ಮಹಾಭಾರತಾಮೃತ—ಸಭಾಪರ್ವ 1933
40. ಸ್ವರಾಜ್ಯ ಸುಗಂಧ (ಕಾದಂಬರಿ) 1938
41. ಕಲಿ ಕುಠಾರ ಅಥವಾ ಲೋಕಾಪುರ ಪೀಠ ಪ್ರಭಾವ, 2ನೆಯ ಭಾಗ 1938

42. ನಳ ಚರಿತ್ರ 1938
43. ದುರ್ಗದ ಬಿಚ್ಚುಗತ್ತಿ (ಕಾದಂಬರಿ) 1938
44. ವೀರ ಪ್ರತಾಪ ಅಥವಾ ಸ್ವಾಭಿಮಾನ ಸಂಭ್ರಮ (ಕಥೆ) 1949
45. ಕಲಿ ಕುಠಾರ–ಜ್ಞಾನಯೋಗಪ್ರಧಾನ ಖಂಡ 1959

ಕೆಳಗಿನ ಐದು ಗ್ರಂಥಗಳ ಕಾಲಾನುಕ್ರಮವನ್ನು ಖಚಿತವಾಗಿ ತಿಳಿಯಲು ಸಾಧ್ಯವಾಗಿಲ್ಲ.

1. ಉತ್ತರರಾಮ ಚರಿತ್ರ ಸಾರ (ಸು. 1911)
2. ಸಾಧು ಸದಾಶಿವ ಲೀಲೆ (ಇತರರೊಂದಿಗೆ) (ಸು. 1916)
3. ಕನ್ಯಾ ಶಿಕ್ಷಕ (ಸು. 1920)
4. ಬ್ರಾಹ್ಮಣ್ಯಪ್ರಾಪ್ತಿ ಸಾಧನ (1923ರ ಪೂರ್ವದಲ್ಲಿ)
5. ಸುಂದರ ಲೇಖ ಸಮುಚ್ಚಯ (1928ರ ಪೂರ್ವದಲ್ಲಿ)

ಒಟ್ಟು ಕೃತಿಗಳು = ಐವತ್ತು.

ಗಳಗನಾಥರ ಒಟ್ಟು ಈ ಐವತ್ತು ಕೃತಿಗಳನ್ನು ಕಾದಂಬರಿಗಳು ಮತ್ತು ಇತರ ಗ್ರಂಥಗಳು ಎಂದು ವಿಭಜಿಸಬಹುದು. ಅವರ ಒಟ್ಟು 22 ಕಾದಂಬರಿಗಳಲ್ಲಿ ಮತ್ತೆ ಅನುವಾದಿತ ಕಾದಂಬರಿಗಳು ಮತ್ತು ಸ್ವತಂತ್ರ ಕಾದಂಬರಿಗಳೆಂದು ವಿಭಜಿಸಬಹುದು.

ಗಳಗನಾಥರ ಇತರ ಗ್ರಂಥಗಳಲ್ಲಿ (1) ಪೌರಾಣಿಕ ಗ್ರಂಥಗಳು (2) ಸತ್ಪುರುಷರ ಚರಿತ್ರೆಗಳು (3) ನಿಬಂಧ–ಪ್ರಬಂಧಗಳು ಮತ್ತು (4) ಇತರ ಲೇಖನಗಳು ಸಮಾವೇಶವಾಗುತ್ತವೆ.

ಇವುಗಳಲ್ಲಿ ಗಳಗನಾಥರ ಕಾದಂಬರಿಗಳ ಅಭ್ಯಾಸವನ್ನು ವಿವರವಾಗಿ ಮಾಡಿ, ಅನಂತರ ಅವರ ಇತರ ಕೃತಿಗಳ ಸ್ಥೂಲಪರಿಚಯವನ್ನು ಮಾಡಿಕೊಳ್ಳಬಹುದು.

# ಅನುವಾದಿತ ಕಾದಂಬರಿಗಳು

"ಭಾಷಾಂತರ ಕೀಳು ಕೆಲಸವಲ್ಲ ; ಸುಲಭ ಕೆಲಸವೂ ಅಲ್ಲ ; ನಿರರ್ಥಕವಾದ ಕೆಲಸವೂ ಅಲ್ಲ".[1] ಬಿ. ಎಂ. ಶ್ರೀಕಂಠಯ್ಯ.

"ಅನ್ಯ ಭಾಷೆಯಿಂದ ತರ್ಜುಮೆ ಮಾಡಿದ ಗ್ರಂಥಗಳನ್ನು ನಮ್ಮ ಕಾವ್ಯಮಾಲೆಗೆ ಸೇರಿಸಿ ನಮ್ಮ ಸಾಹಿತ್ಯವನ್ನು ಅಭಿವೃದ್ಧಿಗೊಳಿಸಿಕೊಳ್ಳುವುದೆಂದರೆ, ಪರರ ಮನೆಯ ಹೆಣ್ಣು ಗಳನ್ನು ತಂದು ನಮ್ಮ ಮಕ್ಕಳಿಗೆ ಮದುವೆ ಮಾಡಿಕೊಳ್ಳುವ ಹಾಗೆ"[2]– ಡಾ. ಎ. ಆರ್. ಕೃಷ್ಣಶಾಸ್ತ್ರಿ.

"ಒಳ್ಳೆಯ ಭಾಷಾಂತರಕ್ಕೆ ಮೂಲದಷ್ಟೇ ಬೆಲೆ ಇರುತ್ತದೆ. ಅದನ್ನು ಓದುವುದು ಸುಲಭ. ಬರೆಯುವುದು ಕಷ್ಟ. ಉದ್ಗ್ರಂಥಗಳನ್ನು ಮೂಲದಲ್ಲಿಯೇ ಎಲ್ಲರೂ ಓದುವುದು ಅಸಾಧ್ಯ. ಆದ್ದರಿಂದ ಅವುಗಳನ್ನು ಚೆನ್ನಾಗಿ ಭಾಷಾಂತರ ಮಾಡಿಕೊಡುವ ವಿದ್ವಾಂಸರ ಉಪ ಕಾರ ದೊಡ್ಡದು. ಭಾಷಾಂತರವು ತೃಪ್ತಿಕರವಾಗಿದ್ದಲ್ಲಿ, 'ಮೂಲ'ವನ್ನು ನಾವು ಓದಲಿಲ್ಲವಲ್ಲಾ ಎಂದು ಚಿಂತಿಸುವ ಕಾರಣವಿಲ್ಲ.''[3]–ಡಾ. ಎ. ಆರ್. ಕೃಷ್ಣಶಾಸ್ತ್ರಿ.

ಮೇಲಿನ ಈ ಅವತರಣಿಕೆಗಳು ಭಾಷಾಂತರ ಕಾರ್ಯದ ಸ್ಥಾನವನ್ನೂ ಮಹತ್ತ್ವವನ್ನೂ ಎತ್ತಿತೋರಿಸುತ್ತವೆ.

ಆಧುನಿಕ ಕನ್ನಡ ಸಾಹಿತ್ಯದ ಅರುಣೋದಯವು ಭಾಷಾಂತರಗಳಿಂದಲೇ ಆರಂಭ ವಾಯಿತು. 19ನೆಯ ಶತಮಾನದ ಕೊನೆಗೆ ಮತ್ತು 20ನೆಯ ಶತಮಾನದ ಆರಂಭದಲ್ಲಿ ಈ ಭಾಷಾಂತರ ಕಾರ್ಯವು ವಿಪುಲವಾಗಿ ನಡೆದು, ಅದನ್ನು ಭಾಷಾಂತರಕಾಲವೆಂದೇ ಕರೆಯು ವಂತಾಯಿತು. ಆಗ ಈ ಕಾರ್ಯವು ನಡೆಯದೆ ಹೋಗಿದ್ದರೆ ನಮ್ಮ ಸಾಹಿತ್ಯದ ನವೋದಯವು ಇನ್ನೂ ತಡವಾಗುತ್ತಿತ್ತೆನ್ನುವಲ್ಲಿ ಸಂದೇಹವಿಲ್ಲ. ಈ ರೀತಿ ನಡೆದ ಭಾಷಾಂತರ ಕಾರ್ಯವೇ ಮುಂದೆ ಕನ್ನಡದಲ್ಲಿ ಸ್ವತಂತ್ರವಾದ ಸಾಹಿತ್ಯಕೃಷಿಗೆ ಮೂಲ ಪ್ರೇರಣೆಯಾಗಿ ಪರಿಣಮಿಸಿತು.

ಬಿ. ಎಂ. ಶ್ರೀ. ಅವರು ಹೇಳಿದಂತೆ ಭಾಷಾಂತರವು ಕೀಳು ಕೆಲಸವಲ್ಲ. ಅಷ್ಟೇ ಅಲ್ಲ, ಪ್ರತಿಯೊಂದು ಭಾಷೆಗೂ ಈ ರೀತಿಯ ಆಮದು ಮಾಡಿಕೊಳ್ಳುವುದು ಅವಶ್ಯವೂ ಆಗುತ್ತದೆ. ಒಂದು ಭಾಷೆಯ ಸಾಹಿತ್ಯವು ವೈವಿಧ್ಯಮಯವಾಗಿ ನಾವೀನ್ಯದಿಂದೊಡಗೂಡಿ ಬೆಳೆಯಲಿಕ್ಕೆ, ಭಾಷಾಂತರ ಸಹಾಯಕವೇ ಆಗಬಹುದು.

---

1. ರಂ. ಶ್ರೀ. ಮುಗಳಿ : ಸಾಹಿತ್ಯೋಪಾಸನೆ-ಪುಟ 125 (ಪುನರುದ್ಧೃತ)
2. ಎ. ಆರ್. ಕೃಷ್ಣಶಾಸ್ತ್ರಿ : ಭಾಷಣಗಳು ಮತ್ತು ಲೇಖನಗಳು, ಪುಟ 231
3. ಕೆ. ಕೃಷ್ಣಮೂರ್ತಿ : ಕನ್ನಡ ಧ್ವನ್ಯಾಲೋಕ ಮತ್ತು ಲೋಚನ ಸಾರ, ಮುನ್ನುಡಿ.

"ಯಾವೊಂದು ದೇಶದ ವಾಙ್ಮಯವು ತೀರ ಅವನತಿಯ ಇಲ್ಲವೆ ತೀರ ಉನ್ನತಿಯ ಸ್ಥಿತಿಯನ್ನು ಮುಟ್ಟಿದ ಕಾಲಕ್ಕೆ ಭಾಷಾಂತರ ಕೃತಿಗಳ ಹಸಿವು ಹೆಚ್ಚುತ್ತದೆ."[1] ಎನ್ನಲಾಗಿದೆ. ಈ ಮಾತು ಕೆಲವು ಸಂದರ್ಭಗಳಲ್ಲಿ ಹೊಂದಿಕೊಂಡಿರಬಹುದು. ಆದರೆ ಒಂದು ದೇಶದ ಸಾಹಿತ್ಯದ ಮಟ್ಟಕ್ಕೂ ಭಾಷಾಂತರಗಳ ಹಸಿವಿಗೂ ಸಂಬಂಧ ಇದ್ದೇ ಇರುತ್ತದೆ ಎನ್ನಬೇಕಾಗಿಲ್ಲ. ಮುಖ್ಯವಾಗಿ ಅನ್ಯಭಾಷಾಸಂಪರ್ಕ ಮತ್ತು ತಮ್ಮಲ್ಲಿಲ್ಲದ, ಆದರೆ ಅನ್ಯ ಭಾಷಾ ಸಾಹಿತ್ಯದಲ್ಲಿದ್ದ ನವೀನ ಅಥವಾ ಉತ್ತಮಾಂಶಗಳ ಆಕರ್ಷಣೆ–ಇವುಗಳೇ ಭಾಷಾಂತರದ ಮೂಲ ಪ್ರೇರಣೆಗಳಾಗುತ್ತವೆ. ಒಂದು ಸಾಹಿತ್ಯ ಹೊಸತನವನ್ನು ಬಯಸಿದಾಗ ಭಾಷಾಂತರಗಳಿಗೆ ಹೆಚ್ಚಿನ ಅವಕಾಶವುಂಟಾಗುತ್ತದೆ.

ಕನ್ನಡ ವಿಷಯದಲ್ಲಂತೂ ಹೀಗೆಯೇ ಆಗಿದೆ. 19ನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯದ ಬೆಳವಣಿಗೆ ತೀರ ಕುಂಠಿತವಾಗಿತ್ತು. ಜನಕ್ಕೆ ಹಳೆಯ ಸಾಹಿತ್ಯವು ಬೇಸರವನ್ನುಂಟುಮಾಡಿತ್ತು. ಅಲ್ಲದೆ ಕನ್ನಡಿಗರಿಗೆ ಆಂಗ್ಲ ಮತ್ತು ಭಾರತೀಯ ಅನ್ಯಭಾಷೆಗಳ ಸಂಪರ್ಕವೂ ಹೆಚ್ಚಾಯಿತು. ಆದರಿಂದಾಗಿ ಆ ಕಾಲಕ್ಕೆ ಇಂಗ್ಲೀಷಿನಿಂದಲ್ಲದೆ ಬಂಗಾಲಿ, ಮರಾಠಿ. ತೆಲುಗು ಮೊದಲಾದ ಭಾಷೆಗಳಿಂದ ಹೊಸ ಸಾಹಿತ್ಯವು ಕನ್ನಡದಲ್ಲಿ ಬರತೊಡಗಿತು. ಇದು ಭಾಷಾಂತರವಾಗಿ, ಅನುವಾದವಾಗಿ ಬಂದಂತೆ ಕೆಲವು ಸಲ ರೂಪಾಂತರವೂ ಆಗಿ ಬಂದಿತು. ಆಯಾತವಾದ ಈ ಹೊಸ ಸಾಹಿತ್ಯವನ್ನು ಜನರು ಕುತೂಹಲದಿಂದ ಓದಿ, ಹೊಸ ಅಭಿರುಚಿಯನ್ನು ಬೆಳೆಯಿಸಿಕೊಂಡರು. ಮುಂದೆ ಸ್ವತಂತ್ರವಾದ ಹೊಸ ಸಾಹಿತ್ಯ ಬೆಳೆಯಲಿಕ್ಕೆ ಇದೇ ಕಾರಣವಾಯಿತು. ಆ ದೃಷ್ಟಿಯಿಂದ ಹೊಸಗನ್ನಡ ಸಾಹಿತ್ಯದ ಆರಂಭ ಕಾಲದಲ್ಲಿ ಬಂದ ಭಾಷಾಂತರಗಳಿಗೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹತ್ತ್ವವೂ ಇದೆ. ಭಾಷಾಂತರಕಾರರು ಆ ದೃಷ್ಟಿಯಿಂದ ಕನ್ನಡಿಗರ ಗೌರವಾದರಗಳಿಗೆ ಪಾತ್ರರಾಗುತ್ತಾರೆ.

ಅಂಥ ಹಲವರಲ್ಲಿ ಗಳಗನಾಥರು ಪ್ರಮುಖರು. ಅವರು ಕೆಲವು ಸ್ವತಂತ್ರ ಕೃತಿಗಳನ್ನು ಬರೆದಿರುವರೆಂಬ ಮಾತು ಬೇರೆ. ಕೇವಲ ಭಾಷಾಂತರಕಾರರೆಂಬೇ ಗಣಿಸಿದರೂ, ಮೈಸೂರಿನ ಬಿ. ವೆಂಕಟಾಚಾರ್ಯರ ಅನಂತರ ಗಳಗನಾಥರಷ್ಟು ಭಾಷಾಂತರಗಳನ್ನು ಮಾಡಿದವರು ಬೇರೆ ಯಾರೂ ಇಲ್ಲ; ಉತ್ತರ ಕರ್ನಾಟಕದಲ್ಲಿಯಂತೂ ಅವರೇ ಅಗ್ರಗಣ್ಯರು. ಗಳಗನಾಥರು ವಿಪುಲವಾಗಿ ಭಾಷಾಂತರಿಸಿದಂತೆಯೇ, ಸಮರ್ಥವಾಗಿಯೂ ಭಾಷಾಂತರಿಸಿದರೆಂಬುದು ಮೆಚ್ಚತಕ್ಕ ವಿಚಾರ. ಆದರೆ ಭಾಷಾಂತರ, ಅನುವಾದ ಮತ್ತು ರೂಪಾಂತರ–ಇವುಗಳ ವೈಶಿಷ್ಟ್ಯಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡಾಗ, ಗಳಗನಾಥರನ್ನು ಭಾಷಾಂತರಕಾರರು ಎನ್ನುವುದಕ್ಕಿಂತ ಅನುವಾದಕರು ಎಂದು ಕರೆಯುವುದೇ ಹೆಚ್ಚು ಸಮಂಜಸವಾಗುತ್ತದೆ.

ಈಗ 'ಭಾಷಾಂತರ', 'ಅನುವಾದ' ಮತ್ತು 'ರೂಪಾಂತರ' ಈ ಪದಗಳ ಅರ್ಥವ್ಯಾಪ್ತಿಯನ್ನು ಗಮನಿಸುವುದು ಅವಶ್ಯವಾಗುತ್ತದೆ. ಈ ಮೂರೂ ಪದಗಳು ಹೆಚ್ಚು ಕಡಿಮೆ ಸಮಾನ ಉದ್ದೇಶವನ್ನು ಹೊಂದಿದ್ದರೂ ಅವುಗಳಲ್ಲಿ ವೈಶಿಷ್ಟ್ಯಪೂರ್ಣವಾದ ವ್ಯತ್ಯಾಸಗಳಿವೆ.

J. G. Catfordರು "Translation may be defined as follows: the replacement of textual material in one langu-

1. ರಂ. ಶ್ರೀ. ಮುಗಳಿ: ಭಾಷಾಂತರ ಕಲೆ, 'ಸಂಭಾವನೆ', ಪುಟ 449

age by equivalent textual material in another language"[1] ಎಂದು ಭಾಷಾಂತರದ ವ್ಯಾಖ್ಯೆಯನ್ನು ಹೇಳಿರುವರು.

ಅವರ ಪ್ರಕಾರ, ಒಂದು ಭಾಷೆಯಲ್ಲಿದ್ದ ಪಠ್ಯಸಾಮಗ್ರಿಯನ್ನು ಇನ್ನೊಂದು ಭಾಷೆಯ ತತ್ಸಮವಾದ ಪಠ್ಯಸಾಮಗ್ರಿಯಲ್ಲಿ ತಂದುಕೊಳ್ಳುವುದು ಭಾಷಾಂತರ. ಇಲ್ಲಿ ಭಾಷೆ ಮಾತ್ರ ಬದಲಾಗುತ್ತದೆಯಲ್ಲದೆ, ಪಠ್ಯದಲ್ಲಿ ಏನೂ ವ್ಯತ್ಯಾಸವಾಗುವುದಿಲ್ಲ. ಭಾಷಾಂತರವೆಂಬ ಪದದ ಅರ್ಥ "ಬೇರೆ ಭಾಷೆ" ಎಂದಾಗುತ್ತದೆ. ಆದರೆ ರೂಢಿಯಲ್ಲಿ ಭಾಷಾಂತರವೆಂದರೆ ಬೇರೆ ಭಾಷೆಯಲ್ಲಿ ಪರಿವರ್ತಿಸಿದುದು ಎಂದಾಗುತ್ತದೆ. ಇದನ್ನು ಆಂಗ್ಲ Translation ಎಂಬ ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. ಮೈಸೂರು ಕಡೆಗೆ ಭಾಷಾಂತರಕ್ಕೆ 'ತರ್ಜುಮೆ' ಎಂಬ ಪದವನ್ನು ಬಳಸಲಾಗುತ್ತದೆ.

ಆದರೆ 'ಭಾಷಾಂತರ'ಕ್ಕೆ ಬದಲಾಗಿ ಕೆಲವರು 'ಅನುವಾದ' ಎಂಬ ಪದವನ್ನೂ ಸಮಾನಾರ್ಥದಲ್ಲಿ ಬಳಸುವರು.[2] ಇದು ಸರಿಯಲ್ಲ. ಅನುವಾದವೆಂದರೆ ಪೂರ್ವದಲ್ಲಿ ಹೇಳಿದುದನ್ನು ಅನುಸರಿಸಿ ಹೇಳುವುದು. ಆಪಟೆ ಅವರ ಸಂಸ್ಕೃತ ಶಬ್ದಕೋಶದಲ್ಲಿ ಅನುವಾದ ಎಂಬ ಪದಕ್ಕೆ "Repetition by way of explanation, illustration or corroboration" ಎಂಬ ಅರ್ಥವನ್ನು ಕೊಡಲಾಗಿದೆ. ವಿವರಣಾತ್ಮಕವಾಗಿ ಅಥವಾ ಮೂಲದ ವಿಚಾರವನ್ನು ಸಮರ್ಥಿಸುವಂತೆ ಹೇಳುವುದು ಅನುವಾದವಾಗುತ್ತದೆ. ಮೂಲವನ್ನು ಇದ್ದಕ್ಕಿದ್ದಂತೆ ಬೇರೆ ಭಾಷೆಯಲ್ಲಿ ಹೇಳುವುದು ಭಾಷಾಂತರವಾದರೆ; ಮೂಲವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಅದರ ಆಶಯವು ಬದಲಾಗದಂತೆ ಅದನ್ನು ವಿವರಿಸಿ ಮನದಟ್ಟಾಗುವಂತೆ, ತಿಳಿಯುವಂತೆ ಹೇಳುವುದು ಅನುವಾದವಾಗುತ್ತದೆ. ಅನುವಾದ ಕಾರ್ಯವು ಬೇರೆ ಭಾಷೆಯಲ್ಲಿರುವಂತೆ ಮೂಲ ಭಾಷೆಯಲ್ಲಿಯೂ ಇರಬಹುದು. ಹೀಗಿರುವುದರಿಂದ ಭಾಷಾಂತರ ಮತ್ತು ಅನುವಾದ ಎಂಬ ಪದಗಳು ಸಮಾನಾರ್ಥಕಗಳಾಗುವುದಿಲ್ಲ. ಆಂಗ್ಲ Translation ಎಂಬ ಪದಕ್ಕೆ ಭಾಷಾಂತರ ಎಂಬುದು ಸಂವಾದಿಯಾದಂತೆ, Paraphrase ಎಂಬ ಪದಕ್ಕೆ ಅನುವಾದ ಎಂಬುದು ಸಂವಾದೀಪದವಾಗುತ್ತದೆ.

ಆದ್ದರಿಂದ, ಭಾಷಾಂತರ ಬೇರೆ, ಅನುವಾದ ಬೇರೆ. ಭಾಷಾಂತರದಲ್ಲಿಯಂತೆ ಅನುವಾದದಲ್ಲಿ ಶಬ್ದಶಃ ಪರಿವರ್ತನ ಕಾರ್ಯ ನಡೆಯುವುದಿಲ್ಲ; ಆದರೆ ಮೂಲಭಾವದ, ವಿಚಾರದ ವಿಷಯದ ನಿರೂಪಣೆ-ವಿವರಣೆ ಇರುತ್ತದೆ. ಇದನ್ನು 'ಭಾವಾನುವಾದ' ಎಂದೂ ಕರೆಯಬಹುದು. ಇಲ್ಲಿ ಸ್ವಲ್ಪ ಮಟ್ಟಿನ ಹೆಚ್ಚು-ಕಡಿಮೆಗಳಿಗೆ ಅವಕಾಶವುಂಟು.

ಇಂಥ ಅನುವಾದಗಳಲ್ಲಿ ಎ. ಆರ್. ಕೃಷ್ಣಶಾಸ್ತ್ರಿಗಳ 'ವಚನಭಾರತ'ವು ತುಂಬ

---

1. J. C. Catford: A Linguistic Theory of Translation, page 20.
2. "Translation ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಬಳಕೆಯಾಗುವ ಪದಗಳು ಅನುವಾದ, ಭಾಷಾಂತರ ಮತ್ತು ತರ್ಜುಮೆ" –ಜೆ. ಎಸ್. ಕುಳ್ಳಿ ಮತ್ತು ಜಿ. ಪಿ. ಮುರಡಿ; ಅನುವಾದ ಕಲೆ, ಪುಟ 1

   ಆದರೆ ಮಾಸ್ತಿ ವೆಂಕಟೇಶ ಅಯ್ಯಂಗಾರರು ಭಾಷಾಂತರ, ರೂಪಾಂತರ ಮತ್ತು ಅನುವಾದ ಈ ಪದಗಳನ್ನು ಬೇರೆ ಬೇರೆ ಅರ್ಥಗಳಲ್ಲಿಯೇ ಬಳಸಿರುವರು. ( ನೋಡಿರಿ, 'ಪ್ರಸಂಗ-3' ಪುಟ 181 )

ಆದರ್ಶವಾದ ಅನುವಾದ ಕೃತಿ. ತುರಮುರಿಯವರ ಕನ್ನಡ 'ಕಾದಂಬರಿ' ಕೂಡ ಸುಂದರವಾದ ಅನುವಾದವಾಗಿದೆ. ಅದನ್ನು ಭಾವಾನುವಾದ ಅಥವಾ ಸಂಕ್ಷಿಪ್ತಾನುವಾದ ಎಂದು ಕರೆದರೆ ಹೆಚ್ಚು ಸೂಕ್ತ.

ರೂಪಾಂತರದ ಕಾರ್ಯ ಇನ್ನೂ ಭಿನ್ನವಾಗಿದೆ. ಒಂದು ಸಾಹಿತ್ಯ ಕೃತಿಯು ತನ್ನ ಕಾಲದ, ಸಂಸ್ಕೃತಿಯ ಪ್ರಭಾವದಿಂದ ನಿರ್ಮಿತವಾಗಿರುತ್ತದೆ. ಅದನ್ನು ಬೇರೊಂದು ಸಂಸ್ಕೃತಿಯುಳ್ಳ ಪರಭಾಷೆಗೆ ನೇರವಾಗಿ ಭಾಷಾಂತರಿಸಿದರೆ, ಅದು ಅಲ್ಲಿಯ ಜನಕ್ಕೆ ತೀರ ಪರಕೀಯವಾಗಿ, ನೀರಸವಾಗಿ ತೋರಬಹುದು. ಅದರಿಂದ ಜನಕ್ಕೆ ಅದು ಮೆಚ್ಚಿಗೆಯಾಗದೆ ಇರಬಹುದು. ಆಗ ಅದನ್ನು ಆಯಾ ದೇಶಗಳ ಸಂಸ್ಕೃತಿಗೆ, ಅಲ್ಲಿಯ ವಾತಾವರಣಕ್ಕೆ ಹೊಂದುವಂತೆ ಮಾರ್ಪಾಡುಗಳೊಂದಿಗೆ ಅನುವಾದಿಸಬಹುದು. ಮೂಲವಸ್ತುವನ್ನೇ ಇಟ್ಟುಕೊಂಡರೂ, ಕಥೆಯಲ್ಲಿ ನಮ್ಮ ಸಂಸ್ಕೃತಿಗೆ, ಆವರಣಕ್ಕೆ ಹೊಂದಿಕೆಯಾಗುವಂತೆ ಬದಲಾವಣೆಗಳನ್ನು ಮಾಡಿಕೊಳ್ಳಬಹುದು. ಆಗ ಕಥೆಯು ನಮ್ಮದೇ ಆಗಿ ತೋರಿ ನಮಗೆ ಅದು ಹೆಚ್ಚು ಆಸ್ವಾದ್ಯವಾಗುತ್ತದೆ. ಕಥೆಯ ವಿವರಗಳು, ಘಟನೆಗಳು, ಸನ್ನಿವೇಶಗಳು, ಪಾತ್ರಗಳು ಬೇರೆ ರೂಪ ಬೇರೆ ಬಣ್ಣಗಳಿಂದ ಚಿತ್ರಿತವಾಗಿ, ಮೂಲದಿಂದ ತೀರ ಭಿನ್ನವಾಗಿಯೇ ತೋರಬಹುದು. ಇಷ್ಟು ಸ್ವಾತಂತ್ರ್ಯವನ್ನು ವಹಿಸಿ ಮಾಡಿದ ಅನುವಾದವನ್ನು ರೂಪಾಂತರ ಎಂದು ಕರೆಯಲಾಗುತ್ತದೆ. ಇದನ್ನು Adaptation ಎಂಬ ಆಂಗ್ಲ ಪದಕ್ಕೆ ಸಂವಾದಿಯಾಗಿ ಬಳಸಬಹುದು. ಈ ರೂಪಾಂತರವು (ರೂಪದಲ್ಲಿ ಅಂತರ) ಮುಖ್ಯವಾಗಿ ಆಂತರಿಕವಾಗಿರುತ್ತದೆ. ಆದರಂತೆ ಬಾಹ್ಯ ರೂಪಾಂತರಗಳೂ ಇರಬಹುದು. ಉದಾಹರಣೆಗಾಗಿ ಗದ್ಯದಲ್ಲಿದ್ದ ಸಂಸ್ಕೃತ 'ಕಾದಂಬರಿ'ಯನ್ನು ನಾಗವರ್ಮನು ಕನ್ನಡದಲ್ಲಿ ಚಂಪೂ ರೂಪಕ್ಕೆ ಬದಲಿಸಿರುವನು. 'ಗದಾಯುದ್ಧ' ಕಾವ್ಯವನ್ನು ಬಿ. ಎಂ. ಶ್ರೀ. ಅವರು 'ಗದಾಯುದ್ಧ ನಾಟಕ'ವಾಗಿ ಮಾರ್ಪಡಿಸಿದರು. (ಈ ನಾಟಕದ ಆಶಯವೂ ಕಾವ್ಯದಿಂದ ತುಸು ಭಿನ್ನವಾಗಿದೆಯೆಂಬ ಮಾತು ಬೇರೆ.) ಆದರೆ ಕೇವಲ ಬಾಹ್ಯರೂಪದಲ್ಲಿದ್ದ ವ್ಯತ್ಯಾಸಕ್ಕೆ ಹೆಚ್ಚು ಮಹತ್ತ್ವವನ್ನು ಕೊಡಬೇಕಾಗಿಲ್ಲ.

ಶೇಕ್ಸಪಿಯರನ 'ಹ್ಯಾಮ್ಲೆಟ್' ಮತ್ತು 'ಟೆಂಪೆಸ್ಟ್' ನಾಟಕಗಳನ್ನು ಕುವೆಂಪು ಅವರು 'ರಕ್ತಾಕ್ಷಿ' ಮತ್ತು 'ಬಿರುಗಾಳಿ'ಗಳನ್ನಾಗಿಸಿದರು. ಇವುಗಳು ರೂಪಾಂತರಕ್ಕೆ ಸುಂದರವಾದ ನಿದರ್ಶನಗಳು. ಕುವೆಂಪು ಅವರ 'ರಕ್ತಾಕ್ಷಿ'ಯನ್ನು ಓದುತ್ತಿದ್ದರೆ, ಅದು ಬೇರೆ ಆಂಗ್ಲ ನಾಟಕದಿಂದ ಪ್ರೇರಿತವಾದುದೆಂಬ ವಿಚಾರ ಕೂಡ ಬರುವುದಿಲ್ಲ. ಇಷ್ಟು ಮಟ್ಟಿನ ಬದಲಾವಣೆಗಳನ್ನು ಪಡೆದ ಇಂಥ ಸಾಹಿತ್ಯ ಕೃತಿಗಳು ಅನುವಾದಗಳಲ್ಲ; ರೂಪಾಂತರಗಳು.

ಹೀಗೆ 'ಭಾಷಾಂತರ', 'ಅನುವಾದ' ಮತ್ತು 'ರೂಪಾಂತರ' ಎಂಬ ಪದಗಳಲ್ಲಿರುವ ಅರ್ಥವ್ಯತ್ಯಾಸವನ್ನೂ ಅವುಗಳ ವೈಶಿಷ್ಟ್ಯಗಳನ್ನೂ ಗುರುತಿಸಿದ ಅನಂತರ, ಭಾಷಾಂತರ ಕಾರ್ಯವು ಹೇಗೆ ನಡೆಯುತ್ತದೆ ಎಂಬುದನ್ನು ಪರಿಶೀಲಿಸಬಹುದು. ವೈಜ್ಞಾನಿಕ, ವೈಚಾರಿಕ ಗ್ರಂಥಗಳನ್ನು ಭಾಷಾಂತರಿಸುವವರೂ, ಸಾಹಿತ್ಯಿಕ ಕೃತಿಗಳನ್ನು ಭಾಷಾಂತರಿಸುವವರೂ ಬೇರೆ ಬೇರೆಯಾದ ಮಾರ್ಗಗಳನ್ನು ಅನುಸರಿಸಬೇಕಾಗುತ್ತದೆ. ವೈಜ್ಞಾನಿಕ ಅಥವಾ ವೈಚಾರಿಕ ಗ್ರಂಥಗಳ ಭಾಷಾಂತರದಲ್ಲಿ ವಿಷಯ ಮುಖ್ಯವಾಗಿರುತ್ತದೆ. ಆದರೆ ಸಾಹಿತ್ಯಿಕ ಗ್ರಂಥಗಳ ಭಾಷಾಂತರದಲ್ಲಿ ವಿಷಯದಂತೆ ವಿಷಯನಿರೂಪಣೆಯೂ ಅಷ್ಟೇ ಮುಖ್ಯವಾಗಿರುತ್ತದೆ. ಸಾಹಿತ್ಯಿಕ ಕೃತಿಯ ಭಾಷಾಂತರದಲ್ಲಿ ಗದ್ಯ, ಪದ್ಯ, ನಾಟಕಗಳ ಭಾಷಾಂತರಗಳು ಬೇರೆ ಬೇರೆಯಾದ

ರೀತಿಯನ್ನೇ ಅವಲಂಬಿಸಬೇಕಾಗಬಹುದು. ಏನೇ ಆದರೂ, ಸಾಹಿತ್ಯಿಕ ಕೃತಿಯೊಂದರ ಭಾಷಾಂತರದಲ್ಲಿ ವಿಷಯದಂತೆ ಶೈಲಿಯೂ ಪ್ರಮುಖವಾಗಿರುತ್ತದೆ.

ಭಾಷಾಂತರವನ್ನು ಮಾಡುವಾಗ ಅನುಸರಿಸಬೇಕಾದ ತತ್ತ್ವಗಳ ಬಗ್ಗೆ ಪಂಡಿತರಲ್ಲಿ ಭಿನ್ನಾಭಿಪ್ರಾಯಗಳಿವೆ.[1] ಭಾಷಾಂತರವು ಶಬ್ದಶಃ ಭಾಷಾಂತರವಾಗಿರಬೇಕು; ಅದು ಮೂಲ ಕೃತಿಯ ಭಾಷೆ- ಶೈಲಿಗಳ ವೈಶಿಷ್ಟ್ಯಗಳನ್ನೂ ಪ್ರತಿಬಿಂಬಿಸಬೇಕು; ಓದಿದರೆ ಇದು ಭಾಷಾಂತರವೆಂದು ತೋರಬೇಕು – ಎಂಬಂಥ ವಿಚಾರಗಳನ್ನು ಕೆಲವರು ಮಂಡಿಸುವರು. ಇಂಥ ವಿಚಾರವಾದಿಗಳು, ಭಾಷಾಂತರಕಾರನು ತನ್ನ ಭಾಷಾಂತರವು ಹೆಚ್ಚು ಹೆಚ್ಚು ಪರಕೀಯವಾಗುವಂತೆ ಪ್ರಯತ್ನಿಸಬೇಕೆಂದೂ, ನಾನು ಮೂಲದ ಅನುಕರಣ ಮಾಡುತ್ತಿದ್ದೇನೆ – ಎಂಬ ಅರಿವು ಭಾಷಾಂತರಕಾರನಿಗೆ ಸದಾಕಾಲ ಜಾಗೃತವಾಗಿರಬೇಕೆಂದೂ ವಾದಿಸುವರು.

ಭಾಷಾಂತರದ ಬಗೆಗಿನ ಈ ವಿಚಾರಗಳನ್ನು ಒಂದು ರೀತಿಯ ಅತಿ ಹಳೆಯ ಅಥವಾ ಸಾಂಪ್ರದಾಯಿಕ ಎಂದು ಕರೆಯಬಹುದು. ಹಾಗೆ ಮಾಡಿದ ಭಾಷಾಂತರವು ತೀರ ಕೃತ್ರಿಮವಾಗುತ್ತದೆ. ತಮ್ಮ ಭಾಷೆಯಲ್ಲಿ ಇಲ್ಲದಂಥ ಒಂದು ಸಾಹಿತ್ಯ ಕೃತಿಯ ಆಸ್ವಾದವನ್ನು ತಮ್ಮ ಭಾಷೆಯ ವಾಚಕರಿಗೆ ಒದಗಿಸಿಕೊಡುವುದೇ ಭಾಷಾಂತರದ ಮೂಲ ಉದ್ದೇಶವಾಗಿದೆಯಲ್ಲದೆ, ಅನ್ಯ ಭಾಷಾಶೈಲಿಯ ಪರಿಚಯ ಮಾಡಿಕೊಡುವುದು ಭಾಷಾಂತರದ ಉದ್ದೇಶವಾಗಬೇಕಾಗಿಲ್ಲ. "The primitive function of translation is the utilitarian one of overcoming ignorance of the language of the original"[2] ಎಂಬ ಮಾತು ಇದನ್ನೇ ಸೂಚಿಸುತ್ತದೆ.

ಅಲ್ಲದೆ ಭಾಷಾಂತರದಿಂದ ಮೂಲ ಭಾಷೆಯ ಮತ್ತು ಮೂಲ ಶೈಲಿಯ ವೈಶಿಷ್ಟ್ಯಗಳ ಪರಿಚಯವು ಸಮರ್ಪಕವೂ ಆಗಲಾರದು. ಆಯಾ ಭಾಷಾಶೈಲಿಗಳ ಸೊಗಸನ್ನು ಕಾಣಬೇಕಾದರೆ ಆಯಾ ಭಾಷೆಗಳ ಮೂಲವನ್ನೇ ನೋಡುವುದು ಹೆಚ್ಚು ಪ್ರಯೋಜನಕರವಾದೀತು. ಭಾಷಾಂತರಕಾರನು ತಾನು ಭಾಷಾಂತರಿಸುತ್ತಿದ್ದೇನೆ ಎಂದು ಸದಾ ನೆನೆಯುತ್ತ, ಮೂಲದ ಪ್ರತಿಬಿಂಬವನ್ನು ಮೂಡಿಸುವಲ್ಲಿಯೇ ನಿರತನಾದರೆ, ಅದರಿಂದ ಯಾವ ಸಾರ್ಥಕ್ಯವೂ ಆಗಲಾರದು. ಇಂಥ ಉದ್ದೇಶದಿಂದ ಕೂಡಿದ ಕೆಲವು ಭಾಷಾಂತರಗಳನ್ನು ಎಣಿಸುವಾಗ ಎ. ಆರ್. ಕೃಷ್ಣಶಾಸ್ತ್ರಿಗಳು ಭಾಷಾಂತರಿಸಿದ ರವೀಂದ್ರನಾಥ ಠಾಕೂರರ 'ನಿಬಂಧಮಾಲಾ' ನೆನಪಾಗುತ್ತದೆ.

ಎ. ಆರ್. ಕೃಷ್ಣಶಾಸ್ತ್ರಿಗಳ ಸುಂದರವಾದ ಕನ್ನಡ ಶೈಲಿಯನ್ನು ಮೆಚ್ಚದವರಿಲ್ಲ. ಅವರ 'ಸಂಸ್ಕೃತ ನಾಟಕ', 'ಬಂಕಿಮಚಂದ್ರ' ಮೊದಲಾದವುಗಳು ಕೃಷ್ಣಶಾಸ್ತ್ರಿಗಳ ಶೈಲಿಗೆ ನಿದರ್ಶನಗಳಾಗಿವೆ. ಆದರೆ ಅವರ 'ನಿಬಂಧಮಾಲಾ'ದ ಭಾಷಾಂತರದ ಶೈಲಿಯನ್ನು ನೋಡಿದರೆ ಅಭಾಸವಾಗುತ್ತದೆ. ಅದಕ್ಕೆ ಅವರು ಅನುಸರಿಸಿದ ಭಾಷಾಂತರ ಪದ್ಧತಿಯೇ ಕಾರಣ. ಶ್ರೀ. ಎ. ಎನ್. ಮೂರ್ತಿರಾಯರು "ಡಾ. ಕೃಷ್ಣಶಾಸ್ತ್ರಿಗಳು ತಮ್ಮ ಅನುವಾದದಲ್ಲಿ ಠಾಕೂರರ ಶೈಲಿಯ ಗುಣಗಳೂ ವಾಕ್ಯಗಳ ನಡೆಯೂ ಪ್ರತಿಬಿಂಬವಾಗುವಂತೆ ಸಾಧ್ಯವಾದ ಪ್ರಯತ್ನ

1. Theodore Savory: The Art of Translationದಲ್ಲಿ ಹೆಚ್ಚಿನ ವಿವರಗಳು ದೊರೆಯುತ್ತವೆ.

2. ಅದೇ, ಪುಟ 57

ವನ್ನೆಲ್ಲಾ ಮಾಡಿದ್ದಾರೆ. ಆದ್ದರಿಂದ 'ನಿಬಂಧಮಾಲಾ'ವನ್ನು ಮೂಲದಲ್ಲಿ ಓದಲಾರದವರಿಗೂ ಠಾಕೂರರ ಶೈಲಿಯ ಪರಿಚಯ ಸ್ವಲ್ಪ ಮಟ್ಟಿಗಾದರೂ ಆಗುತ್ತದೆಯೆನ್ನಬಹುದು." ಎಂದು ಕೃಷ್ಣಶಾಸ್ತ್ರಿಗಳ ಭಾಷಾಂತರವನ್ನು ಪುರಸ್ಕರಿಸಿ ನುಡಿದಿರುವರು.[1] ಈ 'ನಿಬಂಧಮಾಲಾ'ದ ಭಾಷಾಂತರವನ್ನು ಕೆಲವರು ಆಕ್ಷೇಪಿಸಿದ್ದೂ ಉಂಟು.[2]

ಭಾಷಾಂತರವು ಮೂಲಾನುವರ್ತಿಯಾಗಬೇಕೆಂಬುದು ಸರಿಯೇ ಆಗಿದೆ. ಆದರೆ ಅದು ಅತಿರೇಕವಾದರೆ ಅದರಲ್ಲಿ ಗುಣಕ್ಕಿಂತ ದೋಷಗಳೇ ಹೆಚ್ಚಾಗಬಹುದು. "Too literal a rendering is a mistake".[3] ಭಾಷಾಂತರವು ಮೂಲದ ಪ್ರತಿಯೊಂದು ಪದವನ್ನೂ ಪ್ರತಿಬಿಂಬಿಸಬೇಕೆಂಬುದು ಅತಿರೇಕ ವಾದವಾಗಿದೆ. ಮೂಲದಲ್ಲಿ ಏನನ್ನೂ ಬಿಡದೆ. ಅದರಲ್ಲಿ ತನ್ನ ಹೆಚ್ಚಿನ ವಿಚಾರಗಳನ್ನೂ ಸೇರಿಸದೆ, ಮೂಲ ಪಠ್ಯವನ್ನು ತನ್ನ ಭಾಷೆಗೆ ಸಹಜವೆಂಬಂತೆ ಪರಿವರ್ತಿಸುವುದು ಹೆಚ್ಚು ಏಹಿತವಾದುದು. ಒಂದು ಪದದ ಬದಲಾಗಿ, ಒಂದೊಂದು ವಾಕ್ಯವನ್ನೇ ಭಾಷಾಂತರದ ಮೂಲ ಮಾನ (unit) ಎಂದು ಹಿಡಿಯಬೇಕು. ಅಂದರೆ ಪ್ರತಿಶಬ್ದದ ಭಾಷಾಂತರ ಮಾಡುವ ಬದಲು ಪ್ರತಿವಾಕ್ಯದ ಭಾಷಾಂತರ ಮಾಡ ಬೇಕು. ಹಾಗೆ ಪ್ರತಿ ಶಬ್ದದ ಭಾಷಾಂತರವು ಕೆಲವು ಸಲ ಅಸಾಧ್ಯವಾಗಬಹುದು : ಆಭಾ ಸವೂ ಆಗಬಹುದು. ಅದರಂತೆ ಪಡೆನುಡಿಗಳ ಭಾಷಾಂತರವನ್ನು ತಮ್ಮ ಭಾಷೆಯಲ್ಲಿ ಸರಿಹೊಂದುವಂತೆ ಮಾಡಬೇಕು. 'Herculean Task' ಎಂಬುದನ್ನು 'ಹರ್ಕ್ಯೂಲಸನ ಕೆಲಸ' ಎನ್ನುವುದಕ್ಕಿಂತ 'ಭಗೀರಥ ಪ್ರಯತ್ನ' ಎನ್ನುವುದು ಸಾಧುವಾದ. ಅರ್ಥಪೂರ್ಣ ವಾದ ಭಾಷಾಂತರವಾದೀತು. ಒಟ್ಟಿನಲ್ಲಿ ಭಾಷಾಂತರವು ಭಾಷಾಂತರದಂತೆ ಪರಕೀಯ ವಾಗಿ ತೋರದೆ, ಸ್ವತಂತ್ರವಾಗಿ ಬರೆದಂತೆ ಇರಬೇಕು. ಭಾಷಾಂತರಕಾರನು ತನ್ನ ಭಾಷೆಗೆ ಸಹಜವಾದ ಶೈಲಿಯಲ್ಲಿಯೇ ಬರೆಯಬೇಕಲ್ಲದೆ, ಮೂಲ ಭಾಷೆಯ ಶೈಲಿಯ ವೈಶಿಷ್ಟ್ಯಗಳನ್ನು ಅನುಸರಿಸಬೇಕಾಗಿಲ್ಲ.

"Translation aught to be 'such' that the reader should, if possible, forget that it is a translation at all and be lulled into the illusion that he is reading an original work-something original" ಎಂದು ಖ್ಯಾತ ವಿಮರ್ಶಕರಾದ ಮ್ಯಾಥ್ಯೂ ಆರ್ನಲ್ಡ್‌ರು ಒಂದೆಡೆ ಹೇಳಿರುವುದನ್ನು ಗಮನಿಸಬೇಕು. ಇದೇ ಅಭಿಪ್ರಾಯವನ್ನೇ ಡಾ. ರಂ. ಶ್ರೀ. ಮುಗಳಿ ಅವರು "ಶಬ್ದಕ್ಕೆ ಶಬ್ದವನ್ನು ಇಡುವುದು ಭಾಷಾಂತರವಲ್ಲ....ಎಲ್ಲಿ ತದ್ರೂಪತೆಯಿಂದ ಭಾಷಾಂತರವು ಮೂಲವನ್ನು ವಿರೂಪಗೊಳಿಸುವಂತೆ ತೋರುವುದೋ ಅಲ್ಲಿ ಶಬ್ದಕ್ಕಿಂತ ಭಾವರಸವನ್ನು ಗಮನಿಸಿ ಪದರಚನೆಯಲ್ಲಿ ಸಮತೂಕದ ಸ್ವಾತಂತ್ರ್ಯವನ್ನು ವಹಿಸಬೇಕು....ಒಳ್ಳೆಯ ಭಾಷಾಂತರವು ಮೂಲಗ್ರಂಥದ ಶಾಬ್ದಿಕ ಪರಿವರ್ತನವಾಗಲಿ ಕಥಾ ಸಾರರೂಪವಾಗಲಿ ಇದ್ದರೆ ನಡೆಯದು. ಮೂಲಗ್ರಂಥಕಾರನೇ ಬೇರೊಂದು ಭಾಷೆಯಲ್ಲಿ ತಾನಾಗಿ ಬರೆದಿದ್ದರೆ ಹೇಗೆ ಬರೆಯಬಹುದಿತ್ತೋ ಹಾಗೆ ಅದು ಸಹಜಸುಂದರವಾದ

1. ಎ. ಆರ್. ಕೃಷ್ಣಶಾಸ್ತ್ರಿ : ನಿಬಂಧಮಾಲಾ, ಮುನ್ನುಡಿ
2. ಕರ್ಮವೀರ–ಸಾಪ್ತಾಹಿಕ, ದಿನಾಂಕ 18–10–1964, ಪುಟ 17
3. Theodore Savory : The Art of Translation, page 54

ಮೂಲಾನುವಾದವಾಗಬೇಕು".[1] ಎಂದಿರುವರು.

ಇಲ್ಲಿ ಮುಖ್ಯವಾಗಿ ಭಾಷಾಂತರದ ಶೈಲಿ ಸಹಜವಾಗಿರಬೇಕು ಎಂಬುದು ಗಮನಾರ್ಹ ವಾಗಿದೆ. ಅದು ಮೂಲ ಭಾಷೆಯ ಶೈಲಿಯನ್ನು ಪ್ರತಿಬಿಂಬಿಸುವುದೋ ಇಲ್ಲವೋ ಎಂಬುದು ಗೌಣವಾದುದು. ಆದ್ದರಿಂದ ಭಾಷಾಂತರಕಾರನಿಗೆ ಹೆಚ್ಚಿನ ಸ್ವಾತಂತ್ರ್ಯವಿಲ್ಲ ವಾದರೂ ಆತ ಶಬ್ದಕ್ಕೆ ಪ್ರತಿಶಬ್ದವನ್ನು ಮಾತ್ರ ಜೋಡಿಸುತ್ತ ಹೋಗಲಾರ. ಮೂಲದ ಎಲ್ಲ ಅರ್ಥವನ್ನು ತರಬೇಕಾದರೂ ಶಬ್ದಶಃ ಭಾಷಾಂತರ ಮಾಡಬೇಕಾಗಿಲ್ಲ. ಇಲ್ಲವಾದರೆ ಭಾಷಾಂತರವು ಕೃತ್ರಿಮವಾಗಿ, ವಾಚಕರಿಗೆ ಅದು ಅನಾಸ್ವಾದ್ಯವಾಗುತ್ತದೆ. ಅದರಿಂದ ಭಾಷಾಂತರದ ಮೂಲ ಉದ್ದೇಶವೇ ಈಡೇರದೆ ಹೋಗುವ ಅಪಾಯವುಂಟು.

ಗಳಗನಾಥರು ಈ ಅಪಾಯದಿಂದ ಪಾರಾಗಿರುವರು. ಅವರು ಶಬ್ದಶಃ ಭಾಷಾಂ ತರದ ಗೋಜಿಗೆ ಹೋಗಲೇ ಇಲ್ಲ. 'ಭಾಷಾಂತರ', 'ಅನುವಾದ' ಮತ್ತು 'ರೂಪಾಂತರ' ಎಂಬ ಪದಗಳಿಗೆ (ಮೇಲೆ ವಿವರಿಸಿದಂತೆ) ಇರುವ ವಿಶಿಷ್ಟವಾದ ಅರ್ಥವನ್ನು ಗಮನಿಸಿ ದರೆ, ಗಳಗನಾಥರು ಒಂದೇ ಒಂದು ಕಾದಂಬರಿಯನ್ನು ಭಾಷಾಂತರಿಸಿದರೆಂದು ಹೇಳಬೇಕಾ ಗುತ್ತದೆ. ಮರಾಠಿಯಲ್ಲಿ ಆ ಕಾಲಕ್ಕೆ ಸುಪ್ರಸಿದ್ಧ ಕಾದಂಬರಿಕಾರರಾದ ಹರಿ ನಾರಾಯಣ ಆಪಟೆ ಅವರ 'ಗಡ ಆಲಾ ಪಣ ಸಿಂಹ ಗೇಲಾ' (ಕೋಟೆ ಬಂದಿತು ಆದರೆ ಸಿಂಹವು ಹೋಯಿತು) ಎಂಬುದನ್ನು ಗಳಗನಾಥರು **'ಕಮಲ ಕುಮಾರಿ'** ಎಂಬ ಹೆಸರಿನಿಂದ ಭಾಷಾಂತರಿಸಿದರು. ಅದಕ್ಕಿಂತ ಸುಮಾರು ಹತ್ತು ವರ್ಷ ಮೊದಲೇ ಅವರು ಸ್ವತಂತ್ರ ಕೃತಿಯನ್ನು ಬರೆದು ಅನುಭವ ಪಡೆದಿದ್ದರು. ಆದರೆ, ಭಾಷಾಂತರದ ಮಾರ್ಗ ಅವರಿಗೆ ತೀರ ಹೊಸದಾಗಿತ್ತು. ಆದರೂ ಅವರ 'ಕಮಲ ಕುಮಾರಿ' ಅಭೂತಪೂರ್ವವಾದ ಸ್ವಾಗತ ವನ್ನು ಪಡೆಯಿತು. ಮೂಲ ಕಾದಂಬರಿಯ ಸತ್ತ್ವವು ಈ ಜನಪ್ರಿಯತೆಗೆ ಕಾರಣವಾಗಿರು ವಂತೆ, ಕಾದಂಬರಿಯ ಹೊಸತನವೂ ಗಳಗನಾಥರ ಭಾಷಾಂತರದ ರೀತಿಗಳೂ 'ಕಮಲ ಕುಮಾರಿ'ಯ ಯಶಸ್ಸಿಗೆ ಕಾರಣವಾದುವು. ಭಾಷಾಂತರ–ಕಲೆ ಗಳಗನಾಥರಿಗೆ ತೀರ ಹೊಸ ದಾಗಿದ್ದರೂ ಅವರು ಅದರಲ್ಲಿ ತೋರಿದ ಪರಿಣತ ಶೈಲಿಯನ್ನು ಕಂಡರೆ ಅಚ್ಚರಿಯಾಗು ವಂತಿದೆ. "ಭಾಷಾಂತರಕಾರರು ಕೊಲೆಗಾರರು ಎಂದು ಪಾಶ್ಚಾತ್ಯರಲ್ಲಿ ಒಂದು ಗಾದೆ ಯುಂಟು".[2] ಆದರೆ ಗಳಗನಾಥರು ಅಂಥ ಕೊಲೆಗಾರರಾಗಲಿಲ್ಲ; ಕಲೆಗಾರರಾದರೆಂಬುದು ಅವರ ಭಾಷಾಂತರ ಮತ್ತು ಅನುವಾದಗಳನ್ನು ಅವಲೋಕಿಸಿದಾಗ ತಿಳಿದು ಬರುತ್ತದೆ.

'ಕಮಲ ಕುಮಾರಿ'ಯನ್ನು "ಅಕ್ಷರಶಃ ಭಾಷಾಂತರ" ಮಾಡಿರುವುದಾಗಿ ಸ್ವತಃ ಗಳಗ ನಾಥರೇ ಹೇಳಿರುವರು.[3] ಆದರೂ ಅದು ಅಕ್ಷರಶಃ ಭಾಷಾಂತರವೂ ಆಗಿಲ್ಲ; ಅಕ್ಷರಶಃ ಭಾಷಾಂತರದ ದೋಷಗಳಿಗೂ ಹೆಚ್ಚಿನ ಆಸ್ಪದವನ್ನಿತ್ತಿಲ್ಲ. ಮೂಲ ಕಥೆ, ಸನ್ನಿವೇಶ, ಘಟನೆ, ಪಾತ್ರಗಳೆಲ್ಲ ಮೂಲವನ್ನೇ ಪ್ರತಿಬಿಂಬಿಸುತ್ತವೆಯಾದರೂ, ಸೂಕ್ಷ್ಮಗ್ರಾಹಿಯಾಗಿ ತೌಲನಿಕವಾಗಿ ಪರೀಕ್ಷಿಸಿದರೆ ಅಲ್ಲಲ್ಲಿ ಕೆಲವು ಚಿಕ್ಕಪುಟ್ಟ ಮಾರ್ಪಾಡುಗಳನ್ನು ಗಮನಿಸಬಹುದು. ಕಾದಂಬ ರಿಯ ಹೆಸರಿನಿಂದಲೇ ಈ ಬದಲಾವಣೆ ಆರಂಭವಾಗಿದೆ. ಮೂಲದ ಹೆಸರು–'ಕೋಟೆ

1. ರಂ. ಶ್ರೀ. ಮುಗಳಿ: ಭಾಷಾಂತರ ಕಲೆ, 'ಸಂಭಾವನೆ', ಪುಟ 452
2. ಬಿ. ಎಂ. ಶ್ರೀಕಂಠಯ್ಯ: ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಪುಟ 171
3. ಗಳಗನಾಥ: ಸದ್ಗುರು - ಪ್ರಭಾವ, ಪುಟ 39

ಬಂದಿತು ಆದರೆ ಸಿಂಹವು ಹೋಯಿತು' ಎಂಬುದು ಕಥಾನಾಯಕನಾದ ವೀರ ತಾನಾಜಿಯ ಮಹತ್ತ್ವವನ್ನು ಸೂಚಿಸುತ್ತದೆ. "ಆದರೆ ಕಾದಂಬರಿಯ ಆದಿ, ಮಧ್ಯ, ಅಂತ್ಯಗಳಲ್ಲಿ ಕಮಲ ಕುಮಾರಿಯ ಕಥೆಯೇ ಇರುವುದರಿಂದ ಗಳಗನಾಥರು ತಮ್ಮ ಅನುವಾದಕ್ಕೆ 'ಕಮಲ ಕುಮಾರಿ' ಎಂದು ಹೆಸರಿಟ್ಟಿರಬಹುದು".[1] ಅದಕ್ಕಿಂತ ಹೆಚ್ಚಾಗಿ ಪತ್ನಿ ವ್ರತಾಧರ್ಮಪರಾಯಣೆಯಾದ ಸಾಧ್ವಿ ಕಮಲ ಕುಮಾರಿಯ ವ್ಯಕ್ತಿತ್ವವೇ ಗಳಗನಾಥರಿಗೆ ಹೆಚ್ಚು ಮಹತ್ತ್ವದ್ದಾಗಿ ತೋರಿರ ಬೇಕು. ಕಾದಂಬರಿಯಲ್ಲಿ ಅವಳ ಕಥೆಗೆ ಮಹತ್ತ್ವವೂ ಇದೆ. ವೀರ ತಾನಾಜಿಯ ಕಥೆಯನ್ನು ಬರೆಯಹೊರಟ ಆಪಟೆಯವರ ಕಾದಂಬರಿಯಲ್ಲಿ ಕಮಲ ಕುಮಾರಿಯ ಕರುಣಕಥೆಗೆ ಹೆಚ್ಚಿನ ಪ್ರಾಶಸ್ತ್ಯ ದೊರೆತುದು ಕಥಾ ಪ್ರಾಮಾಣ್ಯಕ್ಕೆ ಕುಂದನ್ನೇ ತಂದಿದೆ. ಅದರಿಂದ ಕಥಾನಾಯಕ ನಾಗಬೇಕಾಗಿದ್ದ ತಾನಾಜಿಯ ಚಿತ್ರವು ಮಸಕುಮಸಕಾಗಿದೆ. ಇದನ್ನೆಲ್ಲ ಗಮನಿಸಿದಾಗ ಗಳಗ ನಾಥರು ಕಾದಂಬರಿಯ ಹೆಸರನ್ನು 'ಕಮಲ ಕುಮಾರಿ' ಎಂದು ಬದಲಾಯಿಸಿದುದು ಹೆಚ್ಚು ಉಚಿತವೇ ಆಗಿದೆಯೆಂಬಲ್ಲಿ ಸಂದೇಹವಿಲ್ಲ.

ಮೂಲ ಕಾದಂಬರಿಯಲ್ಲಿದ್ದ 15 ಪ್ರಕರಣಗಳು ಭಾಷಾಂತರದಲ್ಲಿ 16 ಆಗಿವೆ. ಅಲ್ಲಿಯ ಮೊದಲಿನ ಐದು ಪ್ರಕರಣಗಳ ಕಥೆಯು ಇಲ್ಲಿ ಆರು ಪ್ರಕರಣಗಳಲ್ಲಿ ಬಂದಿದೆ. ಈ ಪ್ರಕರಣಗಳ ಹೆಸರೂ ಕೂಡ ಬದಲಾಗಿವೆ. ಮೂಲದಲ್ಲಿದ್ದ

1. ಕಮಲ ಕುಮಾರಿ
2. ಉದಯ ಭಾನು
3. ಔರಂಗಜೇಬನ ಮುಂದೆ
4. ಲಗ್ನದ ಆಮಂತ್ರಣ
5. ದಕ್ಷಿಣವನ್ನು ತಲುಪಿದರು

ಎಂಬ ಪ್ರಕರಣಗಳನ್ನು ಗಳಗನಾಥರು

1. ಇವರು ಯಾರಿರಬಹುದು ?
2. ಹಾ ! ತಿಳಿಯಿತು.
3. ಪಾಪ ಏನು ಮಾಡಿಯಾರು !
4. ನಿರಾಶೆಯಲ್ಲಿ ಆಶೆಯ ಅಂಕುರವು
5. ಬಂದವರು ಅಲ್ಲಿಯೇ ಉಳಿದರು
6. ಹೊನ್ನು ಹೆಣ್ಣುಗಳ ಹುಚ್ಚು

ಎಂದು ಕುತೂಹಲಕರವಾಗಿ ಹೆಸರಿಸಿದರು. ಆದರೆ ಮುಂದಿನ ಹತ್ತು ಪ್ರಕರಣಗಳ ಹೆಸರುಗಳು ಬದಲಾಗಿಲ್ಲ; ಅದರಂತೆ ಅಲ್ಲಿಯ ಕಥಾವಿಷಯವೂ ಬದಲಾಗಿಲ್ಲ. ಮೊದಲಿನ ಭಾಗದಲ್ಲಿ ಮಾತ್ರ ಗಳಗನಾಥರು ಕೆಲವು ಚಿಕ್ಕ ಮಾರ್ಪಾಡುಗಳನ್ನು ಮಾಡಿಕೊಂಡಿರುವರು.

ಮೂಲದಲ್ಲಿಯ ಮೊದಲನೆಯ ಪ್ರಕರಣದಲ್ಲಿ ಕಮಲ ಕುಮಾರಿಯು ಸತಿ ಹೋಗಲು ಸಿದ್ಧಳಾದಾಗ, ಅಲ್ಲಿ ಬಂದ ಮುಸಲ್ಮಾನ ಸೈನಿಕರು "ಏ ಕ್ಯಾ ಏ ಕ್ಯಾ" ಎಂದು ಗೊಂದಲ ಹಾಕುವರು. ಗಳಗನಾಥರು ಆ ಪ್ರಕರಣವನ್ನು "ಪ್ರಿಯ ವಾಚಕರೇ, ಉತ್ಕಟ ಧರ್ಮ ಶ್ರದ್ಧೆಯ

1. ಹಾ. ಮಾ. ನಾಯಕ (ಸಂ): ಗಳಗನಾಥ, ಪುಟ 25

ಮೂಲಕ ಸತ್ವಶೀಲೆಯೂ, ಅಚಲ ಧೈರ್ಯಶಾಲಿಯೂ ಆದ ಆ ಮಹಾಸಾಧ್ವಿ ಕಮಲ ಕುಮಾರಿಯ ಧರ್ಮಕಾರ್ಯವನ್ನು ತಡೆದವರು ಇವರು ಯಾರಿರಬಹುದು!!!" ಎಂಬ ಉದ್ಗಾರಗಳಿಂದ ಅಲ್ಲಿಗೇ ಮುಗಿಸಿಬಿಟ್ಟು ವಾಚಕರ ಕುತೂಹಲವನ್ನು ಕೆರಳಿಸಿರುವರು. ಆಪಟೆಯವರು, ಮುಂದೇನಾಯಿತೆಂಬುದನ್ನು ಅಲ್ಲಿಯೇ ಒಂದೂವರೆ ಪುಟಗಳಲ್ಲಿ ತಿಳಿಸಿರುವರು. ಆ ಭಾಗವನ್ನು ಗಳಗನಾಥರು ತಮ್ಮ ಭಾಷಾಂತರದ 3ನೆಯ ಪ್ರಕರಣದ ಆದಿಭಾಗದಲ್ಲಿ ನಿರೂಪಿಸಿರುವರು. ಅದರಂತೆ, ಮೊದಲನೆಯ ಪ್ರಕರಣದಲ್ಲಿ ಆಪಟೆಯವರು ಕಮಲ ಕುಮಾರಿಯ ಪರಿಚಯವನ್ನೂ, ಔರಂಗಜೇಬನು ಸತಿ ಹೋಗುವುದನ್ನು ತಡೆಯಲು ಮಾಡಿದ ಕಟ್ಟುಗಳನ್ನೂ ಸಂಕ್ಷಿಪ್ತವಾಗಿ ಹೇಳಿದ್ದನ್ನು ಗಳಗನಾಥರು ತಮ್ಮ 'ಹಾ! ತಿಳಿಯಿತು' ಎಂಬ ಎರಡನೆಯ ಪ್ರಕರಣದಲ್ಲಿ ತಂದಿರುವರು. ಆದರೆ ಈ ವ್ಯತ್ಯಾಸಗಳಿಂದ ಹೆಚ್ಚಿನ ಪ್ರಯೋಜನವಾಗಿದೆಯೆಂದೇನೂ ತೋರುವುದಿಲ್ಲ. ಅದೇ ರೀತಿಯಾಗಿ, 'ಉದಯಭಾನು' ಎಂಬ ಎರಡನೆಯ ಪ್ರಕರಣವನ್ನೂ ಗಳಗನಾಥರು ವಿಭಜಿಸಿರುವರು. ಅದರ ಸ್ವಲ್ಪ ಭಾಗವನ್ನೂ 'ಔರಂಗಜೇಬ' ಎಂಬ ನಾಲ್ಕನೆಯ ಪ್ರಕರಣದ ಮೊದಲ ಭಾಗವನ್ನೂ ಸೇರಿಸಿ 'ಪಾಪ, ಏನು ಮಾಡಿಯಾರು' ಎಂಬ ಒಂದು ಹೊಸ ಪ್ರಕರಣವನ್ನೇ ಸೃಷ್ಟಿಸಿರುವರು.

ಆಪಟೆಯವರ 4ನೆಯ ಪ್ರಕರಣ 'ಲಗ್ನದ ಆಮಂತ್ರಣ'ವು ಗಳಗನಾಥರಲ್ಲಿ 5ನೆಯ ಪ್ರಕರಣ 'ಬಂದವರು ಅಲ್ಲಿಯೇ ಉಳಿದರು' ಎಂದಾಗಿದೆ. ಆದರೆ ಪಠ್ಯದಲ್ಲಿ ಹೆಚ್ಚಿನ ವ್ಯತ್ಯಾಸಗಳಾಗಿಲ್ಲ. ಕೇವಲ ಎರಡು ವಾಕ್ಯಗಳನ್ನು ಮಾತ್ರ ಗಳಗನಾಥರು ಹೆಚ್ಚಿಗೆ ಸೇರಿಸಿರುವರು. ಉಮರಾದೆಯಲ್ಲಿ ತಾನಾಜಿಯ ಮಗ ರಾಯಾಜಿಯ ಲಗ್ನದ ವಿಚಾರಗಳನ್ನು ತಿಳಿಸುತ್ತ "ಅಷ್ಟರಲ್ಲಿ ಮಾಘ ಶುದ್ಧ ಸಪ್ತಮಿಯು ಬಂದಿತು" ಎಂಬ ಮೂಲದಲ್ಲಿಯ ಮಾತನ್ನು ಭಾಷಾಂತರಿಸಿದ ಗಳಗನಾಥರು ಮೂಲದಲ್ಲಿಲ್ಲದ "ಕಮಲ ಕುಮಾರಿಯನ್ನು ಉದಯ ಭಾನುವು ಸೆರೆ ಹಿಡಿದೊಯ್ದು ಆವೊತ್ತಿಗೆ ಎರಡೂವರೆ ತಿಂಗಳು ಆಗಿತ್ತು" ಎಂಬ ಹೆಚ್ಚಿನ ಮಾತನ್ನೂ ಸೇರಿಸಿರುವರು. ಆದರೆ ಹಿಂದು–ಮುಂದಿನ ವಾಕ್ಯಗಳ ಜೊತೆಗೆ ಈ ವಾಕ್ಯಕ್ಕೆ ಯಾವ ಸಂಬಂಧವೂ ಇಲ್ಲದ್ದರಿಂದ ಅದು ಅಲ್ಲಿ ಹೊಂದಿಕೆಯೇ ಆಗಿಲ್ಲ. ಅದಲ್ಲದೆ ಈ ಮಾತನ್ನು ಹೇಳುವ ಕಾರಣವೂ ಇರಲಿಲ್ಲ. 'ಮಾಘಶುದ್ಧ ಸಪ್ತಮಿ' ಎಂಬ ಪದದಿಂದಲೇ ದಕ್ಷ ವಾಚಕನು ಉಳಿದ ವಿವರಗಳನ್ನು ತಾನೇ ಎಣಿಸಿಕೊಳ್ಳಬಲ್ಲ. ಆಪಟೆಯವರು ಬಹುಶಃ ತಮ್ಮ ವಾಚಕರ ತಿಳಿವಳಿಕೆಯಲ್ಲಿ ಭರವಸೆಯುಳ್ಳವರಾಗಿದ್ದರು. ಆದರೆ ಗಳಗನಾಥರು ಹಾಗಲ್ಲ. ತಮ್ಮ ವಾಚಕರಿಗೆ ಈ ಅಂಶದ ಕಲ್ಪನೆ ಬರಲಿಕ್ಕಿಲ್ಲವೆಂದು ಹೆದರಿ, ಎಲ್ಲವನ್ನೂ ಸ್ಪಷ್ಟವಾಗಿ ಹೇಳಿಬಿಟ್ಟಿರುವರು.

ಈ ಪ್ರಕರಣದ ಕೊನೆಯಲ್ಲೂ ಗಳಗನಾಥರು ಒಂದು ವಾಕ್ಯವನ್ನು ಹೆಚ್ಚಾಗಿ ಸೇರಿಸಿರುವರು. ಆದರೆ ಅದನ್ನು ಗಳಗನಾಥರ ದೋಷವೆಂದು ಹೇಳಲಿಕ್ಕಾಗದು. ತಾನಾಜಿಯು ತನ್ನ ಪರಿವಾರದೊಡನೆ ಶಿವಾಜಿಯ ಕಡೆಗೆ ಹೋಗಿ, ತನ್ನ ಮಗನ ಮದುವೆಯ ಆಮಂತ್ರಣವನ್ನೀಯುವನು. ಶಿವಾಜಿ ಸಂತೋಷಪಟ್ಟು, ಎಲ್ಲರೂ ಸ್ನಾನ – ಊಟಗಳನ್ನು ಮಾಡಬೇಕೆಂದು ಸೂಚಿಸುವನು. ಅಷ್ಟರಲ್ಲಿ ಅವನ ಕಡೆಗೆ ಒಬ್ಬ ಅವಸರದ ದೂತ ಬಂದನೆಂದು ತಿಳಿಯಿತು. "ಆಗ ಮಹಾರಾಜರು ಬೇಗನೇ ಎದ್ದು ಹೋಗಿ ಸ್ವಂತ ಮಹಾಲಿನೊಳಗೆ ಏಕಾಂತದ ಕೋಣೆಯನ್ನು ಹೊಕ್ಕರು" ಎಂಬಲ್ಲಿಗೆ ಆಪಟೆಯವರು ಆ ಪ್ರಕರಣವನ್ನು

ಮುಗಿಸುವರು. ಆದರೆ ಗಳಗನಾಥರು ಅದಕ್ಕೆ "ಇತ್ತ ಕರೆಯಬಂದವರು ಕೌತುಕದಿಂದ ವಿಚಾರ ಮಾಡುತ್ತ ಅಲ್ಲಿಯೇ ಉಳಿದರು" ಎಂಬ ವಾಕ್ಯವನ್ನು ಸೇರಿಸಿ, ಆ ಪ್ರಕರಣವನ್ನು ಮುಗಿಸುವರು.

ಆಪಟೆಯವರೂ ಕುತೂಹಲವನ್ನು ಕೆರಳಿಸಿಯೇ ತಮ್ಮ ಪ್ರತಿಯೊಂದು ಪ್ರಕರಣವನ್ನು ಮುಕ್ತಾಯಗೊಳಿಸುತ್ತಾರೆ. ಇಲ್ಲಿಯೂ ಈ ಮಾತಿಗೆ ನಿದರ್ಶನವಿದೆ. "ಅವಸರದ ದೂತ" "ಏಕಾಂತದ ಕೋಣೆ" ಎಂಬುವುಗಳು ಏನೋ ಗೂಢವನ್ನು ಸೂಚಿಸುತ್ತವೆ. ಗಳಗನಾಥರು ಅದನ್ನು ಇನ್ನೂ ಸ್ಪಷ್ಟಗೊಳಿಸಿ, "ಬಂದವರು ಕೌತುಕದಿಂದ ವಿಚಾರ ಮಾಡುತ್ತ ಅಲ್ಲಿಯೇ ಉಳಿದರು" ಎಂದು ಹೇಳಿ, ಆ ಇಡೀ ಪ್ರಕರಣಕ್ಕೆ "ಬಂದವರು ಅಲ್ಲಿಯೇ ಉಳಿದರು" ಎಂದು ಕರೆದಿರುವರು. ಇದು ಗಳಗನಾಥರಿಗೆ ಸಹಜವಾದ ರೀತಿ.

ದಿಲ್ಲಿಯಲ್ಲಿ ಉದಯಭಾನುವಿನ ಮನೆಯಲ್ಲಿ ಕಮಲ ಕುಮಾರಿ ಮತ್ತು ಅವಳ ಜೊತೆ ಗಾರ್ತಿಯಾದ ದೇವಲದೇವಿಯರು ಬಂಧಿತರಾಗಿ, ನಿರಾಸೆಯಲ್ಲಿ ಮುಳುಗಿರುವಾಗ, ದೇವಲ ದೇವಿಗೆ ಒಬ್ಬ ಪರಿಚಿತ ಕಂಡ. ಅವಳು ಆತನಿಗೆ ಒಂದು ಪತ್ರವನ್ನು ಗುಪ್ತವಾಗಿ ಮುಟ್ಟಿ ಸಿದಳು. "ಸುರಕ್ಷಿತವಾಗಿ ಪತ್ರವು ರಜಪೂತನ ಕೈಗೆ ಬಿದ್ದುದನ್ನು ನೋಡಿ ದೇವಲದೇವಿಗೆ ನಿರಾಶೆಯಲ್ಲಿ ಆಶೆಯ ಅಂಕುರವು ಉತ್ಪನ್ನವಾಯಿತು" ಎಂಬ ವಾಕ್ಯದಿಂದ ಗಳಗನಾಥರು ಆ ಪ್ರಕರಣವನ್ನು ಮುಗಿಸಿರುವರು. ಆಪಟೆಯವರ "ಆದರೆ ಆ ಪತ್ರವಲ್ಲೇನಿತ್ತು ಮತ್ತು ಆ ರಜಪೂತನಾರು ಎಂಬುದು ಮುಂದೆ ತಿಳಿದೀತು" ಎಂಬ ಕೊನೆಯ ವಾಕ್ಯವನ್ನು ಗಳಗ ನಾಥರು ಬಿಟ್ಟಿರುವುದಕ್ಕೆ ಹೆಚ್ಚಿನ ಕಾರಣಗಳಿಲ್ಲ.

'ದಕ್ಷಿಣವನ್ನು ತಲುಪಿದರು' ಎಂಬ ಪ್ರಕರಣವನ್ನು ಗಳಗನಾಥರು 'ಹೊನ್ನು ಹೆಣ್ಣು ಗಳ ಹುಚ್ಚು' ಎಂದು ಕರೆದಿರುವಲ್ಲಿ ಹೆಚ್ಚಿನ ಆಕರ್ಷಣೆಯಿದೆ. ಎರಡು ಪುಟಗಳ ವರೆಗೆ ವಿಸ್ತರಿಸಿದ ಆರಂಭದ ವಾಕ್ಯವೃಂದವನ್ನು ಗಳಗನಾಥರು ಅಲ್ಲಲ್ಲಿ ಅರ್ಥಕ್ಕನುಗುಣವಾಗಿ ಛೇದಿ ಸಿರುವುದೂ ಯೋಗ್ಯವೇ ಆಗಿದೆ. ಆದರೆ "ಸಾವಿರ ಹೇಳಿದರೂ ನಾನು ಕಮಲ ಕುಮಾರಿ ಯನ್ನು ಔರಂಗಜೇಬರ ಬಳಿಗೆ ಕರಕೊಂಡು ಹೋಗತಕ್ಕದ್ದಿದ್ದಿಲ್ಲ. ಈ ಮಾತನ್ನು ಎಷ್ಟು ಸಾರೆ ಆಡಿದರೂ ಎಷ್ಟು ಪಶ್ಚಾತ್ತಾಪ ಪಟ್ಟರೂ ಆದ ಹಾನಿಯು ಇನ್ನು ಕೂಡಿ ಬರುವಂತೆ ಇಲ್ಲ–ಎಂದು ಚಿಂತಿಸಿದನು" ಎಂಬಂಥ ಕೆಲವು ಕೈಗಂಟಿನ ವಾಕ್ಯಗಳನ್ನು ಸೇರಿಸಿ, ಉದಯ ಭಾನುವಿನ ಅಂತರಾಳವನ್ನು ಚಿತ್ರಿಸಲು ಯತ್ನಿಸಿದ್ದು ಅಷ್ಟೊಂದು ಫಲಪ್ರದವಾಗಿಲ್ಲ. ಪ್ರಕರಣದ ಹೆಸರನ್ನು 'ಹೊನ್ನು ಹೆಣ್ಣುಗಳ ಹುಚ್ಚು' ಎಂದು ಇಟ್ಟಿರುವುದರಿಂದಲೇ ಗಳಗ ನಾಥರು ಪ್ರಕರಣದ ಕೊನೆಯ "ಮಾಘ ವದ್ಯ ನವಮಿಯು ಎಷ್ಟು ದಿವಸ ಉಳಿಯಿ ತೆಂಬುದನ್ನು (ಉದಯಭಾನು) ಬೊಟ್ಟು ಹಾಕಿ ಎಣಿಸುತ್ತ ಕುಳಿತನು" ಎಂಬ ವಾಕ್ಯಕ್ಕೆ ತಮ್ಮದೇ ಆದ "ಹೊನ್ನು ಹೆಣ್ಣುಗಳ ಹುಚ್ಚು ಹಿಡಿದವರ ಗತಿಯು ಹೀಗೆಯೇ ಸರಿ" ಎಂಬ ಮಾತನ್ನು ಸೇರಿಸಿರುವರು.

ಕಾದಂಬರಿಯ ಮುಂದಿನ ಪ್ರಕರಣಗಳ ತಲೆಬರಹಗಳು ಮಾತ್ರ ಆಪಟೆಯವರ ತಲೆ ಬರಹಗಳ ಪ್ರಾಮಾಣಿಕ ಶಾಬ್ದಿಕ ಪರಿವರ್ತನಗಳೇ ಆಗಿವೆ. 'ಮಹಾರಾಜಾಂಚಿ ಚಿಂತಾ', 'ತೋತಾರಾಮ ಗೋಂಧಳೀ', 'ದಿಲ್ಲೀಚೆ ಪತ್ರ', 'ಮಾಘ ವದ್ಯ ನವಮೀ', 'ಮಧ್ಯರಾತ್ರಿ' ಮೊದಲಾದವುಗಳೆಲ್ಲ 'ಮಹಾರಾಜರ ಚಿಂತೆ', 'ಗೊಂದಲಿಗರ ತೋತಾರಾಮನು', 'ದಿಲ್ಲಿಯ

ಪತ್ರ'. 'ಮಾಘ ವದ್ಯ ನವಮಿಯು', 'ಮಧ್ಯರಾತ್ರಿ' ಎಂದು ಮೊದಲಾಗಿ ಅಕ್ಷರಶಃ ಭಾಷಾಂತರಗಳಾಗಿವೆ. 'ಕೊಂಡಾಣೆ ಕಿಲ್ಲ್ಯಾವರ' ಎಂಬುದು ಮಾತ್ರ 'ಕೊಂಡಾಣೆಯ ದುರ್ಗವು' ಎಂದಾಗಿದೆ. ಅದು 'ಕೊಂಡಾಣೆಯ ದುರ್ಗದ ಮೇಲೆ' ಎಂದಾಗಬೇಕಾಗಿತ್ತು; ಅಷ್ಟೇ.

ಮುಂದಿನ ಪ್ರಕರಣಗಳ ಪಠ್ಯಭಾಗದಲ್ಲಿ ಕೂಡ ಗಳಗನಾಥರು ಒಡೆದು ಕಾಣುವ ವ್ಯತ್ಯಾಸಗಳನ್ನು ಮಾಡಿಕೊಂಡಿಲ್ಲವೆಂದೇ ಹೇಳಬೇಕಾಗುತ್ತದೆ; ಇದ್ದರೂ ಅವು ತೀರ ಚಿಕ್ಕ ಪುಟ್ಟ ವ್ಯತ್ಯಾಸಗಳಾಗಿವೆ.

'ಥೂ, ನಿಮ್ಮ ಗಳಿಕೆಗೆ ಬೆಂಕಿ ಹಚ್ಚಲಿ' ಎಂಬ ಪ್ರಕರಣದಲ್ಲಿ "ತೋತಾರಾಮನ ಗೋಂದಲವನ್ನು ಕೇಳಿ ಎಲ್ಲರೂ ಕೆಲವು ಹೊತ್ತು ತಟಸ್ಥರಾಗಿ ಕುಳಿತುಕೊಂಡರು" ಎಂಬ ಮೂಲವಾಕ್ಯದ ಜೊತೆಗೆ ಗಳಗನಾಥರು "ಕುಳಿತುಕೊಂಡ ಬಳಿಕ, ಜನರು ತಮ್ಮ ತಮ್ಮೊಳಗೆ, ಕುಜುಕುಜು ಮಾತಾಡತೊಡಗಿದರು" (ಪುಟ–99) ಎಂದು ಸೇರಿಸಿರುವರು. ಅದರಂತೆ 'ಜಗತ್ಸಿಂಗ' ಎಂಬ ಪ್ರಕರಣದಲ್ಲಿಯ ಆ ವಿಕ್ಷಿಪ್ತ ಸಿಪಾಯಿಯ ವರ್ಣನೆಯಲ್ಲಿಯ "ಎಲ್ಲಿ ಯಾದರೂ ಸ್ವಸ್ಥ ಮಲಗಿಕೊಂಡು ನಿದ್ದೆಮಾಡುತ್ತಿದ್ದನು" ಎಂಬ ವಾಕ್ಯಕ್ಕೆ "ರಾತ್ರಿ ಮಾತ್ರ ಕಣ್ಣಿಗೆ ಕಣ್ಣು ಹಚ್ಚುತ್ತಿದ್ದಿಲ್ಲ" (ಪುಟ–105) ಎಂಬ ತಮ್ಮ ಕೈಗಂಟಿನ ಮಾತನ್ನು ಸೇರಿಸಿ ರುವರು. ಹೀಗೆ ಇಡೀ ಕಾದಂಬರಿಯಲ್ಲಿ 6–8 ಕಡೆಗಳಲ್ಲಿ ಗಳಗನಾಥರು ತಮ್ಮ ಕೆಲವು ಮಾತುಗಳನ್ನು ಸೇರಿಸಿದ್ದನ್ನು ಕಾಣಬಹುದಾಗಿದೆ.

ಆದರೆ 'ಗೋಂದಲಿಗರ ತೋತಾರಾಮನು' ಮತ್ತು 'ಥೂ ನಿಮ್ಮ ಗಳಿಕೆಗೆ ಬೆಂಕಿ ಹಚ್ಚಲಿ' ಎಂಬ ಪ್ರಕರಣಗಳಲ್ಲಿ ಬಂದಿರುವ ಮರಾಠಿಯ ಲಾವಣಿಯ ಅವತರಣಿಕೆಗಳನ್ನು ಮಾತ್ರ ಗಳಗನಾಥರು ಸರಳ ಗದ್ಯದಲ್ಲಿಯೇ ಭಾಷಾಂತರಿಸಿರುವರು. ಪದ್ಯವನ್ನು ಪದ್ಯದಲ್ಲಿಯೇ ಭಾಷಾಂತರಿಸಬೇಕೋ, ಗದ್ಯದಲ್ಲಿ ಭಾಷಾಂತರಿಸಬೇಕೋ ಎಂಬ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಗಳಗನಾಥರು ಮಾತ್ರ ಪದ್ಯಕ್ಕೆ ಪದ್ಯವನ್ನು ಇಡುವ ಗೋಜಿಗೆ ಹೋಗಿಲ್ಲ. ಆಪಟೆಯವರಿಗೆ ಮರಾಠಿಯಲ್ಲಿ ತುಳಸೀದಾಸ ಎಂಬ ಲಾವಣಿಕಾರನಿಂದ ರಚಿತವಾದ 'ಶಿವಾಜಿಯ ಲಾವಣಿ'ಯೇ ಲಭ್ಯವಾಗಿತ್ತು. ಅವರು ಅದರ ಕೆಲವು ನುಡಿಗಳನ್ನೇ ಎತ್ತಿಕೊಂಡಿರುವರು.

ಗಳಗನಾಥರು ಲಾವಣಿಯನ್ನು ಗದ್ಯದಲ್ಲಿ ಭಾಷಾಂತರಿಸಿದ್ದರೂ ಮೂಲವನ್ನು ಪ್ರಾಮಾಣಿಕವಾಗಿಯೇ ಅನುಸರಿಸಿರುವರು. ಗಳಗನಾಥರು ಗದ್ಯದಲ್ಲಿ ಹೇರಳವಾಗಿ ಬರೆದಿರುವರಾದರೂ, ಪದ್ಯದಲ್ಲಿ ಏನನ್ನೂ ಬರೆದಿಲ್ಲವೆಂಬುದನ್ನು ಇಲ್ಲಿ ನೆನೆದರೆ, ಪದ್ಯಸೃಷ್ಟಿ ಅವರಿಗೆ ಅಡಚಣೆ ಎನ್ನಿಸಿರಬಹುದೆಂದು ಊಹಿಸಬಹುದಾಗಿದೆ. ಅಥವಾ ಕಾದಂಬರಿಯಲ್ಲಿ ಪದ್ಯವನ್ನೇಕೆ ತರಬೇಕೆಂದೂ ಅವರು ಯೋಚಿಸಿರಬಹುದು. ಅಂತೂ ಅವರು ಪದ್ಯಾನುವಾದ ಮಾಡಲಿಲ್ಲ.

ಪದ್ಯದ ಭಾಷಾಂತರದ ಅಡಚಣೆ ಗಳಗನಾಥರಿಗೆ ಕಾದಂಬರಿಯ ಕೊನೆಯ ಭಾಗದಲ್ಲೂ ಕಂಡಿದೆ. "ತಾನಾಜಿಯು ಸತ್ತು ಹದಿಮೂರು ದಿನಗಳಾದ ಮೇಲೆ ಶಿವಾಜಿ ಮಹಾರಾಜರು ಸ್ವತಃ ಉಮರಾದೆಗೆ ಹೋಗಿ, ತಾನಾಜಿಯ ಮಗನಾದ ರಾಯಾಜಿಯ ಲಗ್ನವನ್ನು ಸುಮುಹೂರ್ತದಲ್ಲಿ ಮಾಡಿದರೆಂತಲೂ, ಸೂರ್ಯಾಜಿಯನ್ನು ಸಿಂಹಗಡದ ಸುಬೇದಾರನನ್ನು ಮಾಡಿ ಕೆಲವು ಊರುಗಳನ್ನು ಇನಾಮು ಹಾಕಿಕೊಟ್ಟರೆಂತಲೂ ಎರಡೇ ಎರಡು ಮಾತುಗಳನ್ನು ಕಟ್ಟ ಕಡೆಯಲ್ಲಿ ಹೇಳಿಬಿಡುತ್ತೇವೆ" ಎಂಬ ಮಾತುಗಳು ಮೂಲ ಕಾದಂಬರಿಯಲ್ಲಿ

ಯುವುಗಳೇ ಆಗಿವೆಯಾದರೂ ಆಪಟೆಯವರು ಇನ್ನೂ ಮುಂದುವರೆದು, "... ಗದ್ಯದಲ್ಲಿ ಬರೆಯಲಾದ ತಾನಾಜಿರಾಯನ ಈ ಲಾವಣಿಯನ್ನು ತುಲಸೀದಾಸ ಶಾಹೀರನ (ಲಾವಣಿಕಾರ) ಪ್ರಖರವಾದ ಮಾತುಗಳಿಂದ ಮುಗಿಸುತ್ತೇನೆ" ಎಂದು ಹೇಳಿ ಆ ಲಾವಣಿಕಾರನ ಏಳು ಸಾಲುಗಳನ್ನೇ ಎತ್ತಿ ಕೊಟ್ಟಿರುವರು. ಅದರಿಂದ ಕಾದಂಬರಿಯ ಕೊನೆ ಒಳ್ಳೇ ಭಾವ-ಪೂರ್ಣವಾಗಿ, ಚುರುಕಾಗಿದೆ.

ಗಳಗನಾಥರು ಆ ಲಾವಣಿಯ ಚರಣಗಳನ್ನು ಭಾಷಾಂತರಿಸಿಲ್ಲ; ಅಷ್ಟೇ ಅಲ್ಲ ಆ ಮರಾಠಿ ಲಾವಣಿಕಾರನ ಪ್ರಸ್ತಾಪವನ್ನೇ ತಂದಿಲ್ಲ. ಬಹುಶಃ ಅವರಿಗೆ ಲಾವಣಿಯ ಪದ್ಯದ ಭಾಷಾಂತರ ಕಠಿಣವೆನಿಸಿರಬಹುದು, ಅಥವಾ ಅನಾವಶ್ಯಕವೆನಿಸಿರಬಹುದು.

ಆದರೆ, ಗಳಗನಾಥರು ಕಾದಂಬರಿಯ ಕೊನೆಯ ವಾಕ್ಯವೃಂದದಲ್ಲಿ ತಮ್ಮ ಎರಡು ವಾಕ್ಯಗಳನ್ನು ಸೇರಿಸಿರುವ ಔಚಿತ್ಯವನ್ನು ಪ್ರಶ್ನಿಸಬೇಕಾಗುತ್ತದೆ.

"ಪ್ರಿಯ ವಾಚಕರೇ, ಇಲ್ಲಿಗೆ ನಮ್ಮ ಶೋಕಪರ್ಯವಸಾಯಿಯಾದ ಕಾದಂಬರಿಯು ಮುಗಿಯಿತು.................... ದೇವಲದೇವಿಯು ಪತಿಯೊಡನೆ ಪರಮಾನಂದ ಪಟ್ಟಳೆಂಬು ದನ್ನು ಮರೆಯಬೇಡಿರಿ!!"

ವಾಚಕರನ್ನು ಕುರಿತ ಸಂಬೋಧನೆ ಆಪಟೆಯವರಲ್ಲಿಯೂ ಇದೆ. ಮೊದಲ ವಾಕ್ಯ ವನ್ನು ಗಳಗನಾಥರು ಸೇರಿಸಿದ್ದರೂ ಅದು ಆ ಕಾಲದ ಶೈಲಿಗೆ ಅನುಚಿತವೆನಿಸುವುದಿಲ್ಲ. ಆದರೆ ಕಾದಂಬರಿಯನ್ನು "ದೇವಲದೇವಿಯು ಪತಿಯೊಡನೆ ಪರಮಾನಂದ ಪಟ್ಟಳೆಂಬುದನ್ನು ಮರೆಯಬೇಡಿರಿ" ಎಂಬ ವಾಕ್ಯದಿಂದ ಮುಗಿಸಿರುವುದು ಎಷ್ಟೂ ಉಚಿತವಾಗಿಲ್ಲ. ಇಲ್ಲಿ ದೇವಲದೇವಿಯ ವಿಚಾರವೇ ಅನಾವಶ್ಯಕವಾಗಿತ್ತು.

ಆಪಟೆ ಅವರ ಮಾತುಗಳನ್ನು ತಮಗೆ ಸರಿಕಂಡಲ್ಲಿ ಗಳಗನಾಥರು ಬದಲಿಸಿರುವರು. ಕೆಲವು ವಾಕ್ಯಗಳನ್ನು ಬಿಟ್ಟು ಬಿಟ್ಟಿದ್ದರೆ, ಹಲವು ವಾಕ್ಯಗಳನ್ನು ಹೊಸದಾಗಿ ಸೇರಿಸಿರುವರು. ಅಂದರೆ ಶಬ್ದಶಃ ಭಾಷಾಂತರದ ಬಂಧನಕ್ಕೆ ಸಂಪೂರ್ಣವಾಗಿ ಅವರು ಒಳಗಾಗಿಲ್ಲ.

ಇನ್ನು, ಈ ಭಾಷಾಂತರದಲ್ಲಿ ಗಳಗನಾಥರು ಭಾಷೆಯ ದೃಷ್ಟಿಯಿಂದ ಪಡೆದ ಸಫಲತೆ-ವಿಫಲತೆಗಳನ್ನೂ ಗಮನಿಸಬಹುದಾಗಿದೆ. ಭಾಷಾಂತರಕಾರನಿಗೆ ತನ್ನ ಭಾಷೆ ಮತ್ತು ತಾನು ಭಾಷಾಂತರಿಸಲಿರುವ ಮೂಲಭಾಷೆ ಇವೆರಡರ ನಿಕಟವಾದ ಪರಿಚಯವಿರಬೇಕಲ್ಲದೆ, ಅವುಗಳ ಮೇಲೆ ಸಾಕಷ್ಟು ಪ್ರಭುತ್ವವೂ ಅವಶ್ಯ. ಭಾಷಾಂತರಕಾರನು ಮೂಲಭಾಷೆಯ ಸೂಕ್ಷ್ಮ ಅಭ್ಯಾಸವುಳ್ಳವನಾಗಿರುವುದು ಅವಶ್ಯವಾಗಿದೆ. "The translator's knowledge of the translated language must be wide; it must also be critically applied so that no detail is likely to be missed"[1] ಎಂದು ಪಂಡಿತರು ಹೇಳುವರು.

ತಮಗೆ ಮರಾಠಿ ಭಾಷೆಯ ವಿಶೇಷ ಅಭ್ಯಾಸವಿರಲಿಲ್ಲವೆಂದು ತಮ್ಮ 'ಗಾವಿಲತನ' ವನ್ನು ಹೇಳುತ್ತ ಗಳಗನಾಥರು, "ಕೊಂಕಣಸ್ಥರ ಸಹವಾಸದಿಂದ ತಿಳಿಯಬಹುದಾದಷ್ಟು ಮಹಾರಾಷ್ಟ್ರ ಭಾಷೆಯು ನನಗೆ ತಿಳಿಯುತ್ತಿರುವದು".[2] ಎಂದು ತಾವೇ ಹೇಳಿರುವರು. ಆದರೆ ಮರಾಠಿ

1. Theodore Savory: The Art of Translation, p-33.
2. ಗಳಗನಾಥ : ಸದ್ಗುರು-ಪ್ರಭಾವ, ಪುಟ 5

ಭಾಷೆಯ ಜ್ಞಾನದ ಬಗ್ಗೆ ಗಳಗನಾಥರು ಹೇಳಿಕೊಳ್ಳುವಷ್ಟು ಗಾವಿಲರಾಗಿರಲಿಲ್ಲ. ಒಂದು ಪರ-ಭಾಷೆಯ ಮೇಲೆ ಪ್ರಭುತ್ವವನ್ನು ಪಡೆಯಬೇಕಾದರೆ ಸೂಕ್ಷ್ಮಮತಿಯಾದವರಿಗೆ ಆ ಭಾಷಿಕರ ಒಡನಾಟ ಬಹುಮಟ್ಟಿಗೆ ಸಹಾಯಕ; ಅಷ್ಟೇ ಅಲ್ಲ, ಅದು ಅವಶ್ಯವೂ ಅಹುದು. ಕೇವಲ ಗ್ರಂಥಸ್ಥ ಭಾಷಾಜ್ಞಾನ ಸಾಲದು. ಗಳಗನಾಥರಿಗೆ ಈ ಎರಡೂ ಲಭ್ಯವಾಗಿದ್ದುವು. ಮರಾಠಿ ಗ್ರಂಥಗಳನ್ನೂ ಪತ್ರಿಕೆಗಳನ್ನೂ ಓದುವುದು ಆ ಕಾಲಕ್ಕೆ ಉತ್ತರ ಕರ್ನಾಟಕದ ಕನ್ನಡಿಗರಿಗೆ ಸಹಜವೇ ಆಗಿತ್ತು; ಅನಿವಾರ್ಯವೂ ಆಗಿತ್ತು. ಅದು ಮುಂದೆ ಭಾಷಾಂತರಕಾರ ಗಳಗನಾಥರಿಗೆ ಅನುಕೂಲವೇ ಆಯಿತು. ಮರಾಠಿಯಲ್ಲಿಯೇ ಗ್ರಂಥರಚನೆ ಮಾಡುವಷ್ಟು ಶಕ್ತಿ ಗಳಗನಾಥರಿಗೆ ಇರಲಿಲ್ಲವಾದರೂ, ಮರಾಠಿಯ ಕಾದಂಬರಿಗಳನ್ನು ಕನ್ನಡದಲ್ಲಿ ಭಾಷಾಂತರಿಸುವಷ್ಟು ಜ್ಞಾನವು ಅವರಿಗೆ ಖಚಿತವಾಗಿಯೂ ಇದ್ದಿತು. ಅಷ್ಟೇ ಅಲ್ಲದೆ, ಕನ್ನಡದಲ್ಲಿಯೇ ಸ್ವತಂತ್ರವಾದ ಗ್ರಂಥರಚನಾಸಾಮರ್ಥ್ಯವುಳ್ಳ ಗಳಗನಾಥರಿಗೆ ಈ ಭಾಷಾಂತರಕಾರ್ಯ ಯಾವ ರೀತಿಯಿಂದಲೂ ಕಠಿಣವಾಗಲಿಲ್ಲ. ಅವರ 'ಕಮಲ ಕುಮಾರಿ'ಯ ಭಾಷಾಂತರವನ್ನು ಗಮನಿಸಿದಾಗ ಈ ಮಾತು ವೇದ್ಯವಾಗುತ್ತದೆ.

ಹಿಂದೆ ಸೂಚಿಸಿದಂತೆ ಒಳ್ಳೆಯ ಭಾಷಾಂತರಕಾರನು ಮೂಲಭಾಷೆಯ ಒಂದೊಂದು ಪದವನ್ನು ಮೂಲ-ಮಾನ (unit) ಎಂದು ತೆಗೆದುಕೊಳ್ಳದೆ, ಒಂದೊಂದು ವಾಕ್ಯವನ್ನೇ ಭಾಷಾಂತರಿಸುತ್ತ ಹೋಗಬೇಕು. ಗಳಗನಾಥರು ಈ ತತ್ತ್ವವನ್ನೇ ಹೆಚ್ಚಾಗಿ ಅನುಸರಿಸಿರುವರು. ಇದರಿಂದ ಕೆಲವೆಡೆ ಗಳಗನಾಥರ ಭಾಷಾಂತರವು ಮೂಲಕ್ಕಿಂತಲೂ ಹೆಚ್ಚು ಉಚಿತವೆಂಬಷ್ಟು ಸಹಜವಾಗಿದೆ.

"ಶೇಲಾರಮಾಮಾ ಸುಮಾರೆ 80 ವರ್ಷಾಂಚಾ, ತಾನಾಜಿ ಸುಮಾರೆ 40 ವರ್ಷಾಂಚಾ" ಎಂಬ ಮರಾಠಿ ವಾಕ್ಯವನ್ನು ಗಳಗನಾಥರು "ತಾನಾಜಿಯು ಹೆಚ್ಚು ಕಡಿಮೆ 40 ವರ್ಷದ ತರುಣನಾಗಿದ್ದನು, ಸೇಲಾರ ಮಾಮಾನು 80 ವರ್ಷದ ಒಳಹೊರಗಿನ ಮುದುಕನಾಗಿದ್ದನು" (ಪುಟ–45) ಎಂದು ಭಾಷಾಂತರಿಸಿರುವರು. ಆಪಟೆಯವರು ಪ್ರತಿಸಲವೂ 'ಸುಮಾರು' ಎಂಬ ಪದವನ್ನು ಬಳಸಿದ್ದಕ್ಕಿಂತ ಗಳಗನಾಥರ ಭಾಷಾಂತರದಲ್ಲಿಯ 'ಹೆಚ್ಚು ಕಡಿಮೆ' 'ಒಳ-ಹೊರಗಿನ' ಎಂಬ ಭಿನ್ನ ಪದ ಪ್ರಯೋಗಗಳು ಶೈಲಿಯ ದೃಷ್ಟಿಯಿಂದ ಅಪೇಕ್ಷಣೀಯವೆನ್ನಬಹುದು.

"ಏಕ ನಾ ದೋನ, ಪಂಚವೀಸ ಹಜಾರ ವಿಚಾರ ಮನಾಂತ ಉಭೇ ರಾಹಿಲೇ" (ಪುಟ–112)[1] ಎಂಬ ವಾಕ್ಯವನ್ನು ಶಬ್ದಶಃ ಭಾಷಾಂತರ ಮಾಡಿದ್ದರೆ, "ಒಂದಲ್ಲ, ಎರಡಲ್ಲ, 25ಸಾವಿರ ವಿಚಾರಗಳು ತಲೆಯಲ್ಲಿ ಎದ್ದು ನಿಂತವು" ಎಂದಾಗುತ್ತಿತ್ತು. ಆದರೆ ಗಳಗನಾಥರು ಇದನ್ನು "ಒಂದಲ್ಲ, ಎರಡಲ್ಲ, ಹದಿನೆಂಟು ಆಲೋಚನೆಗಳು ಉತ್ಪನ್ನವಾದವು" (ಪುಟ–121) ಎಂದು ಭಾಷಾಂತರಿಸಿರುವುದು ಕನ್ನಡದ ಜಾಯಮಾನಕ್ಕೆ ಸಹಜವಾಗಿದೆ. ಹೀಗೆ ಗಳಗನಾಥರು ಕನ್ನಡ ನುಡಿಗೆ ಸಹಜವೆನಿಸುವಂತೆಯೇ ಮರಾಠಿಯ ಪದಗಳನ್ನು, ವಾಕ್ಯಗಳನ್ನು ಭಾಷಾಂತರಿಸಿರುವರು. ಅದಕ್ಕೆ ಕೆಲವು ಉದಾಹರಣೆಗಳನ್ನು ನೋಡಬಹುದು.

"ತ್ಯಾಚಾ ಚೇಹರಾ ಫಾರ ಪ್ರಫುಲ್ಲಿತ ಝಾಲಾ" (117) "ಅವನ ಮೋರೆಯು ಹಿಗ್ಗಿ

1. ಮರಾಠಿ ವಾಕ್ಯದ ಮುಂದಿನ ಪುಟಸಂಖ್ಯೆಯು 'ಗಡ ಆಲಾ ಪಣ ಸಿಂಹ ಗೇಲಾ' ಕಾದಂಬರಿಯ 21ನೆಯ ಆವೃತ್ತಿಗೂ, ಕನ್ನಡದವುಗಳು 'ಕಮಲ ಕುಮಾರಿ'ಯ 7ನೆಯ ಆವೃತ್ತಿಗೂ ಅನ್ವಯಿಸುತ್ತವೆ.

ಇಪ್ಪಗಲವಾಯಿತು" (126).

"ಏಕ ಪ್ರಹರ ಝಾಲಾ, ದೋನ ಝಾಲೇ, ತೀನ ಝಾಲೆ,' (124). "ಮೂರು ತಾಸಾಯಿತು, ಆರು ತಾಸಾಯಿತು, ಒಂಬತ್ತು ತಾಸಾಯಿತು" (134), 'ಪ್ರಹರ' ಎಂಬ ಸಂಸ್ಕೃತ ಪದಕ್ಕೆ 180 ಮಿನಿಟುಗಳು ಎಂಬ ಅರ್ಥವಾಗುತ್ತದೆ. ಮರಾಠಿ ಭಾಷೆಯಲ್ಲಿ ಈ 'ಪ್ರಹರ' ಶಬ್ದವನ್ನು ಬಳಸುತ್ತಾರೆ. ಆದರೆ ಕನ್ನಡದಲ್ಲಿ ಅದು ಅಷ್ಟು ರೂಢಿಯಲ್ಲಿ ಇಲ್ಲ. ಆದ್ದರಿಂದ ಕನ್ನಡಿಗರು ಸಹಜವಾಗಿ ಬಳಸುವ "ಮೂರು ತಾಸಾಯಿತು" ಎಂಬ ಪದವನ್ನು ಗಳಗನಾಥರು ಪ್ರಯೋಗಿಸಿರುವುದು ಉಚಿತವಾಗಿದೆ. ಇನ್ನೊಂದೆಡೆ "ಅರ್ಧ ಪ್ರಹರ" ಎಂಬು ದನ್ನು "ಸುಮಾರು ಎರಡು ತಾಸು ಹೊತ್ತು ಏರಲು" (ಪುಟ–3) ಎಂದೂ ಭಾಷಾಂತರಿಸಿರು ವರು.

ತಾನಾಜಿಯನ್ನು ಕೊಂದ ಉದಯಭಾನುವಿನ ಮೇಲೇರಿ ಹೋಗುವ ಸೇಲಾರ ಮಾಮಾ "ಪಿಸಾಳಲೇಲಾ ವಾಘಾ ಪ್ರಮಾಣೇ" (144) "ಹುಚ್ಚೆದ್ದು ಹರಿಯುವ ಹುಲಿಯಂತೆ" (158) ಕಂಡನು.

"ಅಗದಿ ಚಕಿತ ಝಾಲೋ" (45); "ಆಶ್ಚರ್ಯದಿಂದ ಬೊಟ್ಟೇ ಕಚ್ಚಿದೆವು" (45)

"ಶಿವಾಜಿ ಮಹಾರಾಜ ಸಾಧಾರಣತಃ ಫಾರ ಬೋಲಣಾರೆ ನಸತ" (153); "ಸಾಧಾರಣ ವಾಗಿ ಶಿವಾಜಿ ಮಹಾರಾಜರು ಮಿತಭಾಷಿಗಳಾಗಿದ್ದರು". (169)

"ತ್ಯಾಚ್ಯಾ ರಂಗಾಚಾ ಬೇರಂಗ ಕೇಲಾ" (140); "ಅವನ ಸುಖದಲ್ಲಿ ಮಣ್ಣು ಕೂಡಿಸಿ ದನು" (153)

"ಸಂಕಟಾಂತ ಡಗಮುಗಣ–ಭಿಣ ಹೇ ಕಸ ತೇ ತ್ಯಾಂಚಾ ಗಾಂವೀ ಸುದ್ಧಾ ನಸತ" (46); "ಸಂಕಟದಲ್ಲಿ ಎದೆಗುಂದುವುದು ಮಹಾರಾಜರಿಗೆ ಕನಸಿನಲ್ಲಿ ಸಹ ಗೊತ್ತಿಲ್ಲ" (47)

"ಉದಯಭಾನೂಚ್ಯಾ ಪಾಷಾಣಹೃದಯಾಸ ಹಿ ಅತೋನಾತ ವಾಈಟ ವಾಟಲೇ" (55); ಉದಯಭಾನುವಿನ ಪಾಷಾಣ ಹೃದಯವು ಕೂಡ ಕರಗಿ ನೀರಾಯಿತು" (57)

"ಫಾರ ಐಟ ಕರತೋ" (107); "ಬಹಳ ಡೌಲು ತೋರಿಸುವನು" (115)

"ತೊಂಡಾವಾಟೇ ಶಬ್ದ ನ ಕಾಢತಾ" (133); "ಬಾಯಿಂದ ಚಕಾರ ಶಬ್ದವನ್ನು ನುಡಿ ಯದೆ" (145)

"ಗಹನ ಅರಣ್ಯ–ಅರವಲೀ ಪರ್ವತಾಚ್ಯಾ ಏಕಾ ಭಾಗಾಮಧಲೇ ಅರಣ್ಯ; ಅರ್ಥಾತ್, ತ್ಯಾಂತ ಮೋಠಮೋಠಾಲ್ಯಾ ವೃಕ್ಷಾಂಚೀ ವಿಲಕ್ಷಣ ದಾಟೀ ಹೋತೀ, ಆಣಿ ಮಧ್ಯಾಹ್ನೀವರ ಸೂರ್ಯ ಆಲಾ ಅಸತಾಂಹಿ ತ್ಯಾ ವೃಕ್ಷಾಂಚ್ಯಾ ನಿಬಿಡ ಛಾಯೇತೂನ ತ್ಯಾಚಾ ಪ್ರಕಾಶಾಚಾ ಅಂತ ಪ್ರವೇಶ ಹೋಣೇ ಕೇವಳ ದುರಾಪಾಸ್ತ ಹೋತೆ" (1) ಎಂಬ ಈ ಇಡೀ ವಾಕ್ಯವು "ಅರವಲೀ ಪರ್ವತದ ಕಟ್ಟಡವಿಯು; ದೊಡ್ಡ ದೊಡ್ಡ ಗಿಡಗಳು ದಟ್ಟವಾಗಿ ಬೆಳೆದದ್ದರಿಂದ ಮಧ್ಯಾಹ್ನ ಕಾಲದಲ್ಲಿಯೂ ಅಲ್ಲಿ ಸೂರ್ಯ ಕಿರಣಗಳಿಗೆ ಆಸ್ಪದವಿದ್ದಿಲ್ಲ." (1) ಎಂದು ಭಾಷಾಂತರವಾಗಿದೆ.

ಹೀಗೆ, ಇಡೀ ವಾಕ್ಯದ ಅರ್ಥವೇನು ಎಂಬುದನ್ನು ಗ್ರಹಿಸಿಕೊಂಡೇ ಗಳನಾಥರು ಅದನ್ನು ಕನ್ನಡಕ್ಕೆ ಭಾಷಾಂತರಿಸಿರುವುದು ತುಂಬ ಮೆಚ್ಚಬೇಕಾದ ಅಂಶವಾಗಿದೆ. ಅವರಂತೆ

ಮರಾಠಿಯ ಪಡೆನುಡಿಗಳನ್ನು ಕೂಡ ಗಳಗನಾಥರು ಶಬ್ದಶಃ ಭಾಷಾಂತರಿಸದೆ, ಅದಕ್ಕೆ ಸಮಾನಾರ್ಥವನ್ನು ಕೊಡುವ ಕನ್ನಡ ಪಡೆನುಡಿಗಳನ್ನೇ ಬಳಸಿದ್ದಾರೆ. ಅದು ದೊರೆಯದಿದ್ದಾಗ ಅದರ ಅರ್ಥವನ್ನು ವಿವರಿಸಿದ್ದಾರೆ. ನಿದರ್ಶನಕ್ಕಾಗಿ ಕೆಳಗಿನ ಕೆಲವನ್ನು ನೋಡಬಹುದು.

"ಚಂದನ ಉಡವೂನ" (45) "ಮಗ್ಗಲು ಮುರಿದು" (46)
"ಚಿಟಪಾಖರೂ ಸುದ್ಧಾ" (3); "ಪಿಳ್ಳೆ ಸಹ" (3)
"ಹಿಕಮತೀಜಾ ಪಡಶಾ ಕರೂನ" (62); "ಅಧಿಕಾರವನ್ನು ಬಕ್ಕ ಬೋರಲು ಹಾಕಿ" (63)
"ಚಂದನ ಉಡವಿಲೇ" (133); "ಗೊತ್ತಿಗೆ ಹಚ್ಚಿದರು". (145)
"ವಜ್ರ ಪಡಲ್ಯಾ ಪ್ರಮಾಣೆ" (34); "ಸಿಡಿಲು ಬಡಿದಂತೆ" (35)
"ಏಕಚ ಹಶಾ ಪಿಕಲಾ" (40); "ಬಿದ್ದು ಬಿದ್ದು ನಕ್ಕರು" (40)
"ಸ್ನಾನ–ಭೋಜನ" (62); "ಊಟ–ಉಡಿಗೆ" (63).

ಮರಾಠಿಯ ಕೆಲವೊಂದು ಪದಗಳನ್ನು ಭಾಷಾಂತರಿಸಿ ಗಳಗನಾಥರು ಕನ್ನಡದಲ್ಲಿ ಅವಕ್ಕೆ ಹೆಚ್ಚಿನ ಜೋರನ್ನೇ ತಂದಿರುವರು.

ಬಾಮುನ–ಹಾರುವ; ಪ್ರಥಮ – ಬಿಟ್ಟಿದ್ದು ಬಿಟ್ಟು; ತಾಕತ – ಕಸುವು; ಗುಲಾಮಾ–ಮಕ್ಕಳಿರಾ; ಗುಲಾಮಾ–ಗೆಣೆಯಾ; ಲಾಡಕ್ಯಾ–ಅಚ್ಚಿಯ

ಈ ಪರಿಶೀಲನೆಯಿಂದ, ಗಳಗನಾಥರು ಶಬ್ದಶಃ ಭಾಷಾಂತರಕ್ಕಿಂತ ಮುಕ್ತ ಭಾಷಾಂತರವನ್ನೇ ಮಾಡಿರುವರೆಂಬುದು ಸ್ಪಷ್ಟವಾಗುತ್ತದೆ. ಆದರೆ ಹೀಗೆ ಮಾಡುವಾಗ ಕೆಲವು ಸಲ ಗಳಗನಾಥರು ಹೆಚ್ಚಿನ ಸ್ವಾತಂತ್ರ್ಯವನ್ನು ವಹಿಸಿದ್ದೂ ಗೋಚರಿಸುತ್ತದೆ.

"ಪಣ ಮಹಾರಾಜ ಕಸಲೇ ವಸ್ತಾದ!" (45). ಈ ವಾಕ್ಯದಲ್ಲಿಯ 'ವಸ್ತಾದ' ಶಬ್ದದ ಅರ್ಥವನ್ನು ಕನ್ನಡದಲ್ಲಿ ಹೇಳಲಾಗದ ಗಳಗನಾಥರು, "ನಮ್ಮ ಮಹಾರಾಜರೇನು ಸಾಮಾನ್ಯರೇ ? ಹಾರುವ ಹಕ್ಕಿಯ ಪುಚ್ಚಾ ಎಣಿಸುವವರು" (47) ಎಂದು ವಿವರಿಸಿರುವರು. 'ವಸ್ತಾದ' ಎಂಬುದಕ್ಕೆ 'ಜಬರದಸ್ತ, ಜೋರಾದವರು' ಎಂದು ಅರ್ಥ.

"ಹಸೂನ ಹಸೂನ ಮಂಡಳೀನಾ ಕಂಟಾಳಾ ಆಲಾ ಹೋತಾ" (87) ಎಂಬುದು "ನಕ್ಕು ನಕ್ಕು ಜನರ ಹೊಟ್ಟೆಗಳೂ ಹುಣ್ಣು ಹುಣ್ಣು ಆದವು" (91) ಎಂದಾಗಿರುವುದು ಮಾತ್ರ ಮೂಲ ಅರ್ಥವನ್ನು ಪ್ರತಿಪಾದಿಸುವುದಿಲ್ಲ.

"ಸಂತಾಪಾನೆ ತ್ಯಾಚ್ಯಾವರ ಉಸಳೂನ ಜಾವುನ" (121);"ಈದ ಹುಲಿಯಂತೆ ಅವನ ಮೇಲೆ ಹರಿ ಹಾಯ್ದು" (131), ಇಲ್ಲಿಯ ಉಪಮೆ ಮುಕ್ತ ಭಾಷಾಂತರದ ದ್ಯೋತಕ. "ಉಸಳೂನ ಜಾವುನ" ಎಂಬುದಕ್ಕೆ "ಕುದಿದು, ಸಂತಾಪಗೊಂಡು" ಎಂದರ್ಥ.

"ಔರಂಗಜೇಬಾಚೇ ಮಾರ್ಗ ಕಧೀಚ ಸರಳ ನಸಾವಯಾಚೇ" (15); "ಔರಂಗಜೇಬನು ಮಹಾ ಕಪಟಿ ಎಂಬುದು ಪ್ರಸಿದ್ಧವಿರುವದು" (16) ಇಲ್ಲಿ ಅರ್ಥವ್ಯತ್ಯಾಸ ಹೆಚ್ಚಾಗಿಲ್ಲವಾದರೂ ಭಾಷಾಂತರದಲ್ಲಿ ಲೇಖಕರು ಸ್ವಾತಂತ್ರ್ಯವಹಿಸಿದ್ದಾರೆ. ಆದರೆ "ಗಳ್ಯಾಂತ ಏಕ ಮೋತ್ಯಾಂಚಾ ಸರ ಹೋತಾ ವ ಹಾತಾಂತ ಏಕ ಏಕಚ ಕಂಕಣ ಹೋತೇ" (5) ಎಂಬುದನ್ನು "ಅವಳ ಕಂಠದಲ್ಲಿ ಮುತ್ತಿನದೊಂದು ಸರವೂ, ಕೈಗಳಲ್ಲಿ ಒಂದೆಂದರೆ ಒಂದೇ ಕಂಕಣವೂ ಒಪ್ಪುತ್ತಿದ್ದವು" (5) ಎಂದು ಭಾಷಾಂತರಿಸುವಲ್ಲಿ ಅರ್ಥವ್ಯತ್ಯಾಸವೂ ಆಗಿದೆ. "ಕೈಗಳಲ್ಲಿ ಒಂದೊಂದೇ ಬಳೆ

ಯನ್ನು ತೊಟ್ಟಿದ್ದಳು" ಎಂಬುದು ಮೂಲದ ಅರ್ಥ. ಅದರಂತೆ "ಕಾವಳ್ಯಾನೆ ಕಿತೀಹಿ ಆಪಲೇ ಪಂಖ ಘುನ್ಯಾತ ಬುಡವೂನ ಪಾಂಢರೇ ಕರಣ್ಯಾಚಾ ಪ್ರಯತ್ನ ಕೇಲಾ, ತರೀ ತ್ಯಾಲಾ ಹುಸೀ ಮಿಳಣಾರ ನಾಹೀ" (15) ಎಂಬುದನ್ನು ಗಳಗನಾಥರು "ಕಾಗೆಯು ಸುಣ್ಣದಲ್ಲಿ ಗರಿಗಳನ್ನೆದ್ದಿ ಎಷ್ಟು ಬೆಳ್ಳಗೆ ಮಾಡಿಕೊಂಡು ಬಂದರೂ ಅದಕ್ಕೆ ಆ ಹಂಸ ಶಬ್ದವು ದೊರೆಯಲಾರದು" (15) ಎಂದು ಭಾಷಾಂತರಿಸಿರುವಲ್ಲಿ ಮೂಲಾರ್ಥಬಾಧೆಯುಂಟಾಗಿದೆ. ಕಾಗೆಗೆ ಹಂಸಿಯು (ಹೆಣ್ಣು ಹಂಸ ಪಕ್ಷಿ) ದೊರೆಯಲಾರದು ಎಂಬುದು ಮೂಲ ಅರ್ಥ. ಉದಯಭಾನು ಎಂಥ ಪದವಿ ಪಡೆದುಕೊಂಡಿದ್ದರೂ ಆತನಿಗೆ ಕಮಲ ಕುಮಾರಿ ದೊರೆಯಲಾರಳೆಂಬ ಸೂಚನೆ ಇಲ್ಲಿದೆ. ಗಳಗನಾಥರ ಭಾಷಾಂತರದಲ್ಲಿ ಈ ಅರ್ಥ ಬರುವುದೇ ಇಲ್ಲ.

ಕಾದಂಬರಿಯ ಮೊದಲನೆಯ ಪುಟದಲ್ಲಿಯೇ ಬಂದಿರುವ "ಬೈಲಾ ಚಿ ಗಾಡಿ" ಎಂಬುದನ್ನು ಗಳಗನಾಥರು ಒಮ್ಮೆ "ಎತ್ತಿನ ಗಾಡಿ" ಎಂದಿದ್ದರೂ ಮುಂದೆ ಮಾತ್ರ ಪ್ರತಿಸಲವೂ "ರಥ"ವೆಂದೇ ಕರೆದಿರುವರು. ಕಥಾನಾಯಕಿಯಾದ ರಜಪೂತ ಕಮಲ ಕುಮಾರಿಯು ಎತ್ತಿನ ಗಾಡಿಯಲ್ಲಿ ಬಂದಳೆಂದು ಹೇಳುವುದು ಗಳಗನಾಥರಿಗೆ ಸರಿ ಕಾಣಲಿಲ್ಲವೇನೊ! ಅದರಂತೆ ಮರಾಠಿ ಕಾದಂಬರಿಯ ಎಲ್ಲ ಅಂಕಿತನಾಮಗಳನ್ನೂ – ಕೃಷ್ಣಘೋಡಾ (ಕರಿಯ ಕುದುರೆ) ಎಂಬುದನ್ನೂ ಸಹ ಬದಲಿಸದೆ– ತದ್ರೂಪವಾಗಿಯೇ ಇರಿಸಿದ ಗಳಗನಾಥರು "ಉಮರಾಠ" ಎಂಬ ಗ್ರಾಮನಾಮವನ್ನು ಮಾತ್ರ "ಉಮರಾದೆ" ಎಂದು ಹೇಳಿರುವುದಕ್ಕೆ ಕಾರಣ ತಿಳಿಯುವುದಿಲ್ಲ.

ಗಳಗನಾಥರು ಕೆಲವು ಸಲ ಮರಾಠಿ ಪದಗಳಿಗೆ ಕನ್ನಡದಲ್ಲಿ ವಿವರಣೆಯನ್ನು ಕೊಟ್ಟ ನಿದರ್ಶನಗಳೂ ದೊರೆಯುತ್ತವೆ. 'ಸುರವಾರೀ ತುಮಾನ, ಪಾಯಘೋಳ ಝಗಾ, ಕುಡತೇ' (151) ಮೊದಲಾದ ಮರಾಠಿ ಪದಗಳನ್ನು ಗಳಗನಾಥರು ಈ ರೀತಿ ಭಾಷಾಂತರಿಸಿರುವರು. "ಮಹಾರಾಜರು ತಮ್ಮ ಸುರವಾರೀ ತುಮಾನನ್ನು ಅಂದರೆ ಮೊಣಕಾಲವರೆಗೆ ಬಿಗಿಯಾಗಿದ್ದು ಮೇಲೆ ಸೈಲಾಗಿರುವ ಚಣ್ಣವನ್ನು ಹಾಕಿಕೊಂಡರು; ಮತ್ತು ಮೈಯೊಳಗೆ ತಿಳುವಾದ ಬಂಡಿಯನ್ನು ಹಾಕಿಕೊಂಡು.... ಆ ಚಿಲಖಿತ್ತಿನ ಮೇಲೊಂದು ಕಿನಕಾಫಿನ ವಾಸಕೋಟನ್ನು ಅಂದರೆ ತೋಳಿಲ್ಲದ ಅಂಗಿಯನ್ನು ತೊಟ್ಟರು" (166). ಆದರೆ ಅವರು ಕೆಲ ಕೆಲವು ಕಡೆಗಳಲ್ಲಿ ಮರಾಠಿಯ ಪದಗಳಿಗೆ ಸರಿಯಾದ ಕನ್ನಡ ಪದಗಳನ್ನು ಹುಡುಕಲಿಕ್ಕೆ ಅಸಮರ್ಥರಾದಂತೆಯೂ ಭಾಸವಾಗುತ್ತದೆ.

"ದಂಡವತ ಘಾಲ" (49) "ದಂಡವತ ನಮಸ್ಕಾರ ಮಾಡು" (50). ಇಲ್ಲಿ "ಸಾಷ್ಟಾಂಗ ಹಾಕು" "ಅಡ್ಡ ಬೀಳು" ಎಂದಿದ್ದರೆ ಹೆಚ್ಚು ಉಚಿತವಾಗಬಹುದಿತ್ತು.

"ಕಥಾ ಲಾವಾವೀ" (87) ಎಂಬುದನ್ನು "ಕಥೆ ಹಚ್ಚಬೇಕು" (91) ಎನ್ನುವುದಕ್ಕಿಂತ "ಕಥೆ ಹೇಳಿಸಬೇಕು" ಎಂದು ಅನುವಾದಿಸಿದ್ದರೆ ಹೆಚ್ಚು ಒಳಿತಾಗುತ್ತಿತ್ತು.

ಮರಾಠಿಯಲ್ಲಿ ಅವಮಾನ, ತೇಜೋವಧೆ ಎಂಬರ್ಥದಲ್ಲಿ 'ವಿಟಂಬನಾ' ಎಂಬ ಪದವನ್ನು ಬಳಸುತ್ತಾರೆ. ಗಳಗನಾಥರು ಪ್ರಸ್ತುತ ಕಾದಂಬರಿಯಲ್ಲಿ ಈ ಪದವನ್ನು ಅನೇಕ ಸಲ 'ವಿಟಂಬನೆ' ಎಂದೇ ಬಳಸಿರುವರು. ಆದರೆ ಆ ಪದಕ್ಕೆ ಕನ್ನಡದಲ್ಲಿ ಈ ಅರ್ಥವು ರೂಢವಾಗಿಲ್ಲ.

ಸೇನಾಭಾಗ ಎಂಬರ್ಥದಲ್ಲಿ ಮರಾಠಿಯಲ್ಲಿಯ 'ತುಕಡೀ' (109) ಎಂಬುದನ್ನು ಗಳಗನಾಥರು 'ತುಕ್ಕಡಿ' (117) ಎಂದಿರುವುದು ಅನಿವಾರ್ಯವಾಗಿರಲಿಲ್ಲ. ಅದರಂತೆ ಚೇಲ ಎಂಬರ್ಥದ 'ಥೈಲೀ' (118) ಪದವನ್ನೂ ಇದ್ದಕ್ಕಿದ್ದಂತೆ ಸ್ವೀಕರಿಸುವ ಆವಶ್ಯಕತೆ ಕಾಣುವುದಿಲ್ಲ. 'ಗಡವು ಸೇರಿತು, ಆದರೆ....(177)" ಎಂಬುದು "ಕೋಟೆ ಕೈವಶವಾಯಿತು, ಆದರೆ...." ಎಂದಾಗಬಹುದಿತ್ತು.

ಮದುವೆಯ ಕಾಲಕ್ಕೆ ವರನಿಗೆ ಕೊಡುವ ವರದಕ್ಷಿಣೆಯನ್ನುಳಿದು ಬೇರೆ ಉಡುಗೊರೆ, ಕಾಣಿಕೆಗಳನ್ನು ಮರಾಠಿಯಲ್ಲಿ 'ಆಂದಣ' ಎಂದು ಕರೆಯುತ್ತಾರೆ. ಗಳಗನಾಥರು ಅದಕ್ಕೆ ಪ್ರತಿಯಾಗಿ 'ಅಂದಣ' ಪದವನ್ನು ಬಳಸಿರುವರು. "ಆಕೆಯ ಸಂಗಡ ಅಂದಣವೆಂದು ಇಂಥ ಇಂಥ ಪ್ರಾಂತಗಳನ್ನು ನಿನಗೆ ಇನಾಮು ಹಾಕಿ ಕೊಟ್ಟಿದ್ದೇನೆ" (129) ಇದು ಸರಿಯಾದ ಅರ್ಥವನ್ನು ಕೊಡಲಸಮರ್ಥವಾಗಿದೆ.

ಪ್ರೀತಿ, ವಿಶ್ವಾಸ ಎಂಬರ್ಥದಲ್ಲಿ ಮರಾಠಿಯಲ್ಲಿ ಬಳಸುವ 'ಲೋಭ' ಎಂಬುದನ್ನು ಗಳಗನಾಥರು 'ಲೋಭ'ವೆಂದೇ ಬಳಸಿರುವರು. ಕನ್ನಡದಲ್ಲಿ ಲೋಭವನ್ನು ಆ ಅರ್ಥದಲ್ಲಿ ಪ್ರಯೋಗಿಸುವುದು ಕಡಿಮೆ.

"ಶಿವಾಜಿ ಮಹಾರಾಜರ ಚಾಕರನಾಗಿರುತ್ತೇನೆ" (100) ಎನ್ನುವಲ್ಲಿ 'ಸೇವಕ' ಶಬ್ದವನ್ನು ಬಳಸಬಹುದಾಗಿತ್ತು.

ಆದರೆ "ಅಡಲೇ ಹೊತೇ" (116) ಎಂಬುದನ್ನು ಗಳಗನಾಥರು "ಅಡಗಾಣಿಸಿತ್ತು" (125) ಎಂದು ಭಾಷಾಂತರಿಸುವಲ್ಲಿ ಅಚ್ಚರಿಯಿಲ್ಲ. ಯಾಕೆಂದರೆ 'ಅವಶ್ಯವಾಗಿರು' ಎಂಬರ್ಥದಲ್ಲಿ ಧಾರವಾಡ–ಬೆಳಗಾವಿ ಭಾಗದಲ್ಲಿಯ ಜನರು ಇಂದಿಗೂ 'ಅಡಗಾಣಿಸು' ಎಂಬುದನ್ನು ಉಪಯೋಗಿಸುತ್ತಾರೆ.

ಹೀಗೆ ಗಳಗನಾಥರು ಮರಾಠಿ ಪದಗಳನ್ನೇ ಕೆಲವು ಸಲ ಬಳಸಿರುವುದು ಅವರ ಶಬ್ದ ದಾರಿದ್ರ್ಯ ಅಥವಾ ಕನ್ನಡ ಪದಸಂಪತ್ತಿಯ ನ್ಯೂನತೆ ಎನ್ನುವುದಕ್ಕಿಂತ. ಆಗ ಇಂಥ ಪದಗಳನ್ನು ಧಾರವಾಡ ಪ್ರಾಂತದ ಜನರು ಸಹಜವಾಗಿ ಅರ್ಥ ಮಾಡಿಕೊಳ್ಳುತ್ತಿದ್ದರೆಂದು ಹೇಳಿದರೆ ತಪ್ಪಾಗಲಾರದು.

ರಾಮ ರಾಮ ಕೇಲೆ–ರಾಮ ರಾಮ ಮಾಡಿದರು (ನಮಸ್ಕರಿಸಿದರು); ಭಳಣಾರ–ಭಲಿಸುತ್ತೇನೆ; ಮುಜರೇ ಕೇಲೆ–ಮುಜುರೆ ಮಾಡಿದನು; ಎಂದು ಮೊದಲಾಗಿ ಗಳಗನಾಥರು ಮರಾಠಿಯ ಮಾದರಿಯಲ್ಲಿಯೇ ಬರೆದಿರುವುದನ್ನೂ ಗಮನಿಸಬಹುದು. ಕನ್ನಡದ ಕೆಲವು ಕಡೆಗಳಲ್ಲಿ 'ರಾಮ ರಾಮರೀಯಪ್ಪಾ' ಎನ್ನುವ ಜನರನ್ನು ಈಗಲೂ ಕಾಣಬಹುದು.

ಅನೇಕ ಮರಾಠಿ ಪದಗಳಿಗೆ ಸಮಾನಾರ್ಥಕವಾದ ಕನ್ನಡ ಪದಗಳು ಲಭ್ಯವಾಗಬಹುದಿದ್ದರೂ, ಗಳಗನಾಥರು ಅವುಗಳನ್ನು ಬೇಕೆಂತಲೇ ಕನ್ನಡದಲ್ಲಿ ಬಳಸಿರಬೇಕೆಂದು ತೋರುತ್ತದೆ. ಇಂಥ ಪದಗಳಲ್ಲಿ ಉರ್ದು ಅಥವಾ ಪಾರಸೀ ಮೂಲದ ಪದಗಳೂ ಸೇರಿಕೊಂಡಿವೆ. ಉದಾಹರಣೆಗಾಗಿ :

ಪಟ್ಟಾಕತ್ತಿ, ಥಾಲ, ಮುಜರೆ, ಚಿಟಣೀಸ, ಹೇಟಕರೀಜನರು, ಶಿಲೇದಾರ (ಸಿಪಾಯಿ),

ತೋಬಾ ತೋಬಾ, ಹಜರತ್, ಖಂಜೀರ, ಚಾಕರಿ, ಥೈಲೀ, ಹರಾಮ ಜಾದಾ, ಬಾರಗೀರ, ಬಾಜಾರ ಬುಣುಗು, ಭಾಲೆ, ಭರ್ಚಿ, ಹೇಜೀಬ ಮೊದಲಾದುವು.

ಬಹುಶಃ ಇಂಥ ಪದಪ್ರಯೋಗದಿಂದ ಮರಾಠಾ–ಐತಿಹಾಸಿಕ ವಾತಾವರಣ ನಿರ್ಮಾಣ ವಾಗಬಹುದೆಂದು ಅವರು ಬಗೆದರು. ಅದಕ್ಕೆ ಅವರು ಮೂಲ 'ಕಾಳೂದಾದಾ'ನನ್ನು 'ಕಾಳೂ ಅಣ್ಣ' ಎನ್ನದೆ ಕಾಳೂದಾದಾ ಎಂದೇ ಕರೆದರು. ಅದರಂತೆ 'ರಾಯಬಾ' ಹಾಗೇ ಉಳಿದನಲ್ಲದೆ 'ರಾಯಣ್ಣ'ನಾಗಲಿಲ್ಲ.

ಆದರೆ, ಕೆಲವು ಸಲ ಗಳಗನಾಥರಲ್ಲಿ ಒಮ್ಮೆಲೇ ಅಚ್ಚ ಕನ್ನಡತನದ ಮೋಹ ಕಾಣಿಸಿ ಕೊಳ್ಳುತ್ತದೆ. "ಮೀ ಮ್ಹಣತೋ ತೇ ಖರ ಕಾ ಖೋಟ?" (46) ಎಂಬುದನ್ನು "ನಾನೆ ನ್ನುವದು ಸಟೆಯೋ ದಿಟವೊ?" (48) ಎಂದು ಭಾಷಾಂತರಿಸುವ ಬದಲು ಗಳಗನಾಥರು "ಖರೇನೋ ಸುಳ್ಳೋ" ಎನ್ನಬಹುದಿತ್ತು. "ಖರೆ" ಎಂಬ ಪದವು ಉತ್ತರ ಕರ್ನಾಟಕದಲ್ಲಿ ವಿಪುಲವಾಗಿ ಬಳಕೆಯಲ್ಲಿದೆ. ಅದರಂತೆ "ಡೇರೆ" (57) ಎಂಬುದನ್ನು "ರಾಹುಟಿ" (54) ಎಂದಿರುವುದೂ ತುಸು ಅಸಹಜವೆನಿಸುತ್ತದೆ; ಅಂದರೆ ಗಳಗನಾಥರ ಸಹಜ ಶೈಲಿಯಲ್ಲಿ "ರಾಹುಟಿ" ಎಂಬ ಪದಪ್ರಯೋಗ ಹೊಂದಿಕೊಂಡಿಲ್ಲ. ಅದರಂತೆ ಮರಾಠಿಯ ಕೆಲವು ವಿಶಿಷ್ಟ ಬಳಕೆಯ ಪದಗಳನ್ನು ಕನ್ನಡದಲ್ಲಿ ಭಾಷಾಂತರಿಸಿರುವುದೂ ಅಷ್ಟೊಂದು ಒಗ್ಗಿಲ್ಲ. ಮರಾಠಿಯ "ಬರಕಾ" ಕನ್ನಡದಲ್ಲಿ "ಕಂಡಿಯಾ" ಆಗಿದೆ; "ಸಮಜಲೀಸ?" ಕೂಡ "ಕಂಡಿಯಾ?" ಎಂದೇ ಆಗಿದೆ. ಇದನ್ನು "ತಿಳಿಯಿತೇ?" ಎನ್ನಬಹುದಿತ್ತು. ಮರಾಠಿಯ 'ಚಿಡವಿಣೇ' ಎಂಬುದನ್ನು 'ಛಲಿಸು' ಎನ್ನುವುದಕ್ಕಿಂತ 'ಕಾಡು, ಪೀಡಿಸು' ಎಂದಿದ್ದರೆ ಮೂಲಾರ್ಥಕ್ಕೆ ಹೆಚ್ಚು ಸಮೀಪವಾಗುತ್ತಿತ್ತು.

ಅಪರೂಪವಾಗಿ ಕೆಲವೆಡೆ ಗಳಗನಾಥರ ಭಾಷಾಂತರವು ಅನಾವಶ್ಯಕ ಸಂಸ್ಕೃತಮಯ ವಾಗಿದೆ. "ತೀ ಶುಭ್ರ ವಸ್ತ್ರ ನೇಸಲೀ ಹೋತೀ" (4); "ಅವಳು ಶುಭ್ರ ವಸ್ತ್ರ ಪರಿಧಾನ ಮಾಡಿದ್ದಳು" (5). ಇಲ್ಲಿ "ಬಿಳಿಯ ಸೀರೆಯನ್ನು ಉಟ್ಟಿದ್ದಳು" ಎಂದಿದ್ದರೆ ಸಾಕಾಗಿತ್ತು.

ಇಂಥ ಕೆಲವು ನ್ಯೂನತೆಗಳು ಕಂಡಿಪೆಯಾದರೂ, ಒಟ್ಟಿನಲ್ಲಿ ಗಳಗನಾಥರು ಮರಾಠಿಯ ಮಾತನ್ನು ಸರಿಯಾಗಿ ಕನ್ನಡಿಸಲು ಸಮರ್ಥರಾಗಿರುವರು. ಇದಕ್ಕೆ ಅವರಿಗಿದ್ದ ಎರಡೂ ಭಾಷೆಗಳ ಆಳವಾದ ಪರಿಚಯವೂ ಕಾರಣವಾಗಿರುವಂತೆ, ಈ ಎರಡೂ ಭಾಷೆಗಳಲ್ಲಿ ಇರುವ ಅನೇಕ ಸಾಮ್ಯಗಳೂ ಕಾರಣವೆನ್ನಬಹುದು. ಅನೇಕ ಪಡೆನುಡಿಗಳು, ಪದಗಳು, ನಾಣ್ಣುಡಿಗಳು, ಗಾದೆಯ ಮಾತುಗಳು ಈ ಎರಡೂ ಭಾಷೆಗಳಲ್ಲಿ ಹೆಚ್ಚು ಕಡಿಮೆ ಸಮಾನವಾಗಿವೆ.

"ತೋಂಡ ವಾಕಡ ಕರೂನ" (42); "ಸೊಟ್ಟ ಮೋರೆ ಮಾಡಿ" (43)

"ತ್ಯಾಚಾ ಬಾಲಾ ಮೀ ಭ್ಯಾಯಚಾ ನಾಹೀ" (42); "ಅವನಪ್ಪನಿಗೂ ನಾನು ಹೆದರುವವನಲ್ಲ" (44).

"ಮಾಶ್ಯಾ ಮಾರೀತ" (150); "ನೊಣ ಜಾಡಿಸುತ್ತ" (165)

"ಕಾಜಳಾಚೇ ಪಕದಮ ಪಾಣೀ ಝಾಲೇ" (155); "ಎದೆಯೊಡೆದು ನೀರಾಯಿತು" (170)

"ಮಹಾರಾಜಾಂಚೀ ಸ್ವಾರೀ" (155); "ಮಹಾರಾಜರ ಸವಾರಿಯು". (167)

"ಮನಾತ ಮಾಂಡೆ ಖಾತ" (19) "ಮನಸ್ಸಿನಲ್ಲಿ ಮಂಡಿಗೆ ತಿನ್ನುತ್ತ" (20)

"ಹೇ ದೋನ ಕಿಲ್ಲೆ ಮ್ಹಣಜೆ ತ್ಯಾ ಪ್ರಾಂತಾಚೆ ನಾಕ ಹೋತ" (77); "ಅವೆರಡು ದುರ್ಗಗಳು ಆ ಪ್ರಾಂತಗಳ ಮೂಗಿನಂತೆ ಇದ್ದವು" (80)

"ನಾಕ ಛಾಟಲ್ಯಾ ಪ್ರಮಾಣೇ" (77) "ಮೂಗು ಕೊಯ್ದಂತೆ...." (81)

"ಕಪಾಳಮೋಕ್ಷ ಹೋವೂನ" (104) ; "ಕಪಾಳ ಮೋಕ್ಷವಾಗಿ" (112)

ಇಂಥ ಹಲವಾರು ನಿದರ್ಶನಗಳನ್ನು ಕಾಣಬಹುದಾಗಿದೆ.

ಕನ್ನಡದಲ್ಲಿರುವಂತೆ ಮರಾಠಿಯಲ್ಲಿ ಕೂಡ ನಾಗರಿಕ ಭಾಷೆ ಮತ್ತು ಗ್ರಾಮೀಣ ಭಾಷೆಗಳಲ್ಲಿ ಅಂತರವನ್ನು ಕಾಣುತ್ತೇವೆ. ಆಪಟೆಯವರು ಹಳ್ಳಿಗರ ಮಾತಿನಲ್ಲಿ ಗ್ರಾಮೀಣ ಪದ ಪ್ರಯೋಗಗಳನ್ನು ಆಗಾಗ ಮಾಡಿರುವರು. ಆದರೆ ಗಳಗನಾಥರು ಮಾತ್ರ ಹಳ್ಳಿಗರ ಮಾತಿನಲ್ಲಿ ಕೂಡ ನಾಗರಿಕ ಪದಗಳನ್ನೇ ಬಳಸಿರುವರು. ಇದು ಭಾಷಾಂತರದ ದೃಷ್ಟಿಯಿಂದ ಅಷ್ಟು ಸರಿಯಾಗಿಲ್ಲ. ಅದರಂತೆ ಆಯಾ ಸನ್ನಿವೇಶದಲ್ಲಿ ಬರಬಹುದಾಗಿದ್ದ ಸಹಜತೆಗೂ ಕೊರತೆಯನ್ನು ತಂದಿದೆ.

"ಲಗೀನ" (ಲಗ್ನ), ಅನ್ (ಆಣಿ), "ವ್ಹಯ (ಹೋಯ). "ಬಾಮನ" (ಬ್ರಾಹ್ಮಣ), "ಈರೇಸರೀ" (ವೀರಶ್ರೀ) —ಎಂಬಂತೆ ಆಪಟೆ ಅವರು ಸನ್ನಿವೇಶಕ್ಕೆ ತಕ್ಕಂತೆ ಕೆಲವೆಡೆಯಾದರೂ ಹಳ್ಳಿಗರ ಮಾತುಗಳನ್ನು ಆಯಾ ಪಾತ್ರಗಳ ಬಾಯಿಂದ ನುಡಿಸಿದ್ದಾರೆ.[1] ಗಳಗನಾಥರು ಈ ವಿಷಯದಲ್ಲಿ ಬಹುಶಃ 'ಮಡಿವಂತಿಕೆ'ಯನ್ನು ಹೊಂದಿದ್ದರೆನ್ನಬಹುದು.

ಗಳಗನಾಥರು ಶಬ್ದಶಃ ಭಾಷಾಂತರವನ್ನು ಹೆಚ್ಚಾಗಿ ಮಾಡಿಲ್ಲವೆಂದರೂ, ಮರಾಠಿ ವಾಕ್ಯರಚನೆಯನ್ನು ಅನುಸರಿಸಿದ ಕೆಲವು ಉದಾಹರಣೆಗಳು ಕಣ್ಣಿಗೆ ಬೀಳುತ್ತವೆ.

"ಶಿವಾಜಿ ಮಹಾರಾಜಾಂಚೀ ಆಜ್ಞಾ ಜೀ ಕಾಯ ಹೋಈಲ ತೀ ಅಗದೀ ಅಕ್ಷರಶಃ ಪಾಳಣಾರಾ ಜರ ಕೋಣೀ ಸೇವಕ ಅಸೇಲ, ತರ ತೋ ಏಕ ತಾನಾಜೀಚ ಹೋಯ" (147) ಎಂಬ ವಾಕ್ಯವನ್ನು ಗಳಗನಾಥರು "ಶಿವಾಜಿ ಮಹಾರಾಜರ ಅಪ್ಪಣೆಯನ್ನು ಅಕ್ಷರಶಃ ಪಾಲಿಸುವಂಥ ಅವರ ಸೇವಕನು ಯಾವನಾದರೂ ಇದ್ದರೆ, ಆತನು ತಾನಾಜಿಯೇ ಆಗಿದ್ದನು" (162) ಎಂದು ಭಾಷಾಂತರಿಸಿರುವರು.

ಗಳಗನಾಥರ ಭಾಷಾಂತರವನ್ನು ಸ್ಥೂಲವಾಗಿ ತೃಪ್ತಿಕರ ಭಾಷಾಂತರವೆಂದು ಕರೆಯಬಹುದು. ಅವರು ಹೆಚ್ಚಾಗಿ ಕನ್ನಡದ ನುಡಿಗೆ ಸಹಜವೆಂಬಂತೆಯೇ ಭಾಷಾಂತರಿಸಿರುವರು. ಆದರೂ ಮೇಲಿನ ಕೆಲವು ನಿದರ್ಶನಗಳನ್ನು ನೋಡಿದಾಗ ಕೆಲವೆಡೆ ಮೂಲ ಮರಾಠಿಯ ಸ್ವಾದವನ್ನೂ ಉಳಿಸಿಕೊಂಡಿರುವರೆಂದು ತೋರುತ್ತದೆ. ಮರಾಠಿ ಭಾಷೆಯ ಪ್ರಭಾವವು ಹೆಚ್ಚಾಗಿದ್ದ ಧಾರವಾಡ ಭಾಗದವರಾದ ಅವರಿಗೆ ಇದು ಸಹಜವೇ ಆಯಿತು. ಅದರಂತೆ ಅವರ ವಾಚಕರಿಗೂ ಗಳಗನಾಥರ ಈ ಭಾಷಾಂತರವು ಪರಕೀಯವಾಗಿ ಕಾಣಲಿಲ್ಲ.

ಏನೇ ಆದರೂ ಭಾಷಾಂತರ ಕಾರ್ಯವು ಸುಲಭವಾದುದಲ್ಲ. "a literal-

---

1. ಆಪಟೆಯವರು ಕೂಡ ಗ್ರಾಮೀಣ ಭಾಷೆಯನ್ನು ಹೆಚ್ಚಾಗಿ ಬಳಸುವುದಿಲ್ಲ. ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಹೆಚ್ಚಿನವು ಮರಾಠಾವೀರರ ಕಥೆಗಳಾಗಿದ್ದರೂ, ಅಲ್ಲಿಯ ಭಾಷೆಯಲ್ಲಿ ಕೂಡ ಪುಣೆ ಪಟ್ಟಣದ ನಾಗರಿಕ ಛಾಯೆ ಹೆಚ್ಚಾಗಿದೆ.

translation is too difficult a task to be performed efficiently"[1] ಎಂದು ಪಂಡಿತರು ಹೇಳುವಲ್ಲಿ ಅತಿಶಯೋಕ್ತಿಯಿಲ್ಲ. ಗಳಗನಾಥರು ಇಂಥ ಒಂದು ಕಠಿಣವಾದ ಕಾರ್ಯಕ್ಕೆ ಕೈಹಾಕಿದರಷ್ಟೇ ಅಲ್ಲ; ಅದರಲ್ಲಿ ಬಹುಮಟ್ಟಿನ ಸಫಲತೆಯನ್ನೂ ಪಡೆದರೆಂಬಲ್ಲಿ ಸಂದೇಹವಿಲ್ಲ. ಅವರ ಭಾಷಾಂತರದಲ್ಲಿ ಪಂಡಿತರು ಕೆಲವು ದೋಷಗಳನ್ನು, ನ್ಯೂನತೆಗಳನ್ನು ಕಾಣಬಹುದು. ಆದರೆ ಒಟ್ಟಿನಲ್ಲಿ ಅವರು ಸಾಧಿಸಿದ ಯಶಸ್ಸು ಪ್ರಶಂಸಾರ್ಹವಾಗಿದೆ. ಒಳ್ಳೆಯ ಭಾಷಾಂತರಕಾರ ಕೇವಲ ದ್ವಿಭಾಷಾಪಂಡಿತನಾಗಿದ್ದರೆ ಸಾಲದು. ತಾನು ಭಾಷಾಂತರಿಸಲಿರುವ ಗ್ರಂಥವಿಷಯದ ಜ್ಞಾನ ಮತ್ತು ಅದರ ಬಗ್ಗೆ ಆಸಕ್ತಿ ಇವು ಆತನಲ್ಲಿ ಅತ್ಯವಶ್ಯವಾಗಿ ಇರಬೇಕು. ಗಳಗನಾಥರಲ್ಲಿ ಈ ಎಲ್ಲ ಅರ್ಹತೆಗಳೂ ಇದ್ದುವು. ಆಪಟೆಯವರು ಅವರಿಗೆ ಪ್ರಿಯವಾದ ಲೇಖಕರು. ಈ ಕಾದಂಬರಿಯು (ಗಡ ಆಲಾ ಪಣ ಸಿಂಹ ಗೇಲಾ) ಅವರನ್ನು ಅತೀವವಾಗಿ ಆಕರ್ಷಿಸಿತ್ತು. ಅದಕ್ಕಾಗಿ ಅವರು ಸ್ವತಃ ಸಿಂಹಗಡಕ್ಕೆ ಹೋಗಿ. ಸಿಂಹಗಡದ ಕೋಟೆಯನ್ನು ಕಣ್ಣಾರೆ ಕಂಡು ಬಂದ ಮೇಲೆಯೇ ಕಾದಂಬರಿಯ ಭಾಷಾಂತರಕ್ಕೆ ಕೈಹಾಕಿದರು. ಹೀಗಿರುವಾಗ ಅವರ 'ಕಮಲ ಕುಮಾರಿ'ಯು ಯಶಸ್ವಿಯಾದದ್ದು ಸಹಜವೇ ಆಗಿದೆ.

'ಕಮಲ ಕುಮಾರಿ'ಯ ಯಶಸ್ಸಿಗೆ ಕಾದಂಬರಿಯ ಕಥೆಯೂ ಕಾರಣವಾಯಿತು. ಮರಾಠಿಯಲ್ಲಿ ಕೂಡ ಆಪಟೆಯವರ ಉಳಿದ ಐತಿಹಾಸಿಕ ಕಾದಂಬರಿಗಳಿಗಿಂತ 'ಗಡ ಆಲಾ ಪಣ ಸಿಂಹ ಗೇಲಾ' ತುಂಬ ಜನಪ್ರಿಯವಾಗಿದೆ. ಇದರಲ್ಲಿ ಆಪಟೆಯವರು ವೀರ ತಾನಾಜಿಯು[2] ಮತ್ತು ಪತಿವ್ರತಾಧರ್ಮ ಪಾಲನೆಗಾಗಿ ಸತೀ ಹೋಗುವ ಕಮಲ ಕುಮಾರಿಯ ಕಥೆಗಳನ್ನು ಮೇಳವಿಸಿದ್ದಾರೆ. ಅವರ ಉದ್ದೇಶ ತಾನಾಜಿಯ ವೀರಶ್ರೀಯನ್ನೇ ಬಣ್ಣಿಸಬೇಕೆಂದಿದ್ದರೂ. ನಿರೂಪಣೆಯಲ್ಲಿ ಕಮಲ ಕುಮಾರಿಯ ದಾರುಣ ಕಥೆಗೇ ಪ್ರಾಧಾನ್ಯ ಬಂದುಬಿಟ್ಟಿದೆ. ಅದರಿಂದ ಅವರು ಮರಾಠಿ ವಿಮರ್ಶಕರ ಟೀಕೆಗೂ ಗುರಿಯಾದರು. ತಾನಾಜಿಯ ಕಥೆ ತೀರ ಚಿಕ್ಕದಾಗಿರುವುದರಿಂದ ಬಹುಶಃ ಅವರು ಕಮಲ ಕುಮಾರಿಯ ಕಲ್ಪಿತ ಕಥೆಯನ್ನು ಅದರಲ್ಲಿ ಹೆಣೆದರು. ಆದರೆ ಕಾದಂಬರಿಯಲ್ಲಿ ಇವೆರಡೂ ಕಥೆಗಳು ಒಂದಾಗಿ ಹೊಂದಿಕೊಂಡಿಲ್ಲ. ಎರಡೂ ಬೇರೆ ಬೇರೆ ಕಥೆಗಳಂತೆ ಬೆಳೆಯುತ್ತ ಹೋಗಿ, ಕೊನೆಯ ಭಾಗದಲ್ಲಿ ಒಂದುಗೂಡುತ್ತವೆ. ಆದರೂ ಕಾದಂಬರಿಯ ಕಮಲ ಕುಮಾರಿ, ಉದಯಭಾನು ಮತ್ತು ತಾನಾಜಿ ಇವರು ವಾಚಕರ ಮನವನ್ನು ಸೆಳೆದುಕೊಳ್ಳುವಷ್ಟು ಆಕರ್ಷಕರಾಗಿರುವರು. ಸೇಲಾರಮಾಮಾ, ದೇವಲದೇವಿ, ಶಿವಾಜಿ, ಜೀಜಾಬಾಯಿ ಮೊದಲಾದ ಪೋಷಕ ಪಾತ್ರಗಳನ್ನು ಆಪಟೆಯವರು ಚೆನ್ನಾಗಿ ಚಿತ್ರಿಸಿರುವರು.

ತನ್ನ ಪತಿಯ ಪಾದುಕೆಗಳೊಂದಿಗೆ ಅಗ್ನಿ ಪ್ರವೇಶಮಾಡಲು ಸಿದ್ಧಳಾದ ಕಮಲ ಕುಮಾರಿಯನ್ನು ಔರಂಗಜೇಬನ ಸರದಾರ ಉದಯಭಾನು ತಡೆಯುವನು; ಅವಳನ್ನು ನಿಕಾ ಮಾಡಿಕೊಳ್ಳಲೂ ಪ್ರಯತ್ನಿಸುವನು. ಬಾದಶಹ ಮೂರು ತಿಂಗಳ ಗಡುವನ್ನು ಹಾಕುವನು. ಅದು

1. Theodore Savory : The Art of Translation, p. 51

2. ವೀರ ತಾನಾಜಿಯ ಕಥೆ ಮರಾಠಿಯಲ್ಲಿ ಅತ್ಯಂತ ಜನಪ್ರಿಯವೂ ಸ್ಫೂರ್ತಿದಾಯಕವೂ ಆಗಿದೆ. ಹಲವು ಲಾವಣಿಗಳೂ ತಾನಾಜಿಯನ್ನು ಕುರಿತು ರಚಿತವಾಗಿವೆ. ಕನ್ನಡದಲ್ಲಿ ಡಾ. ಕುವೆಂಪು ಅವರೂ ಕೂಡ 'ತಾನಾಜಿ' ಎಂಬ ಕಥನ ಕವನವನ್ನು ಬರೆದಿರುವರು.

ಮಾಘವದ್ಯ ನವಮಿಯೆಂದು ತೀರುತ್ತಿತ್ತು. ಅಷ್ಟರಲ್ಲಿ ಅವಳ ಮನವನ್ನು ಒಲಿಸಿಕೊಳ್ಳಲು ಯತ್ನಿಸಿ ಉದಯಭಾನು ವಿಫಲನಾಗುವನು. ಸ್ನೇಹಿತೆ ದೇವಲದೇವಿ ಮತ್ತು ಅವಳ ಪತಿ ಜಗತ್ಸಿಂಹರ ಪ್ರಯತ್ನಗಳನ್ನು ನಂಬಿ ತನ್ನ ಬಿಡುಗಡೆಯ ದಾರಿಯನ್ನು ಕಾಯುತ್ತ ಕುಳಿತ ಕಮಲ ಕುಮಾರಿಗೆ ನಿರಾಸೆಯೇ ಕಾಯ್ದಿತ್ತು. ಜಗತ್ಸಿಂಹ ತಾನಾಜಿಯ ಕೈಯಲ್ಲಿ ಸಿಕ್ಕು-ಬಿದ್ದು ಕಮಲ ಕುಮಾರಿಯ ಕರುಣ ಕಥೆಯನ್ನು ತಿಳಿಸುವನು. ಶಿವಾಜಿಯ ಆದೇಶದ ಮೇರೆಗೆ ಕೋಟೆಯನ್ನು ಕೈವಶಮಾಡಿಕೊಳ್ಳುವ ಪ್ರಯತ್ನದಲ್ಲಿದ್ದ ತಾನಾಜಿಯು ಆ ಅಸಹಾಯ ಸ್ತ್ರೀಯನ್ನು ಸಂರಕ್ಷಿಸುವುದಕ್ಕಾಗಿ. ತನ್ನ ಸೈನ್ಯಸಿದ್ಧತೆ ಪೂರ್ಣವಾಗುವ ಮೊದಲೇ ಕೋಟೆಯ ಮೇಲೇರಿ ಹೋಗುವನು. ಈ ಸಾಹಸದಲ್ಲಿ ಆತ ಮಡಿದರೂ ಕೋಟೆ ಕೈವಶವಾಯಿತು. ಆದಕ್ಕೇ ಶಿವಾಜಿ ಕೊನೆಗೆ "ಕೋಟೆ ಕೈವಶವಾಯಿತು. ಆದರೆ ಸಿಂಹವು ವಿಧಿವಶವಾಯಿತು" ಎಂದು ಉದ್ಗಾರ ತೆಗೆಯುವನು. ಅಂತೂ ಕೊನೆಗೆ ಕಮಲ ಕುಮಾರಿ ತನ್ನ ಸತೀಧರ್ಮವನ್ನು ಪಾಲಿಸಲು ಸಮರ್ಥಳಾದಳು.

ಮರಾಠಿ ವಾಚಕರು ಈ ಕಾದಂಬರಿಯನ್ನು ಒಳ್ಳೇ ಆಸಕ್ತಿಯಿಂದ ಓದಿದರು. 1904 ರಿಂದ 1967ರ ವರೆಗಿನ ಕಾಲಾವಧಿಯಲ್ಲಿ ಈ ಮರಾಠಿ ಕಾದಂಬರಿಯ 86000 ಪ್ರತಿಗಳು ಅಚ್ಚಾಗಿ ಮಾರಾಟವಾದುವು. ಕನ್ನಡದ 'ಕಮಲ ಕುಮಾರಿ' ಕೂಡ ಎಂಟು ಸಲ ಪುನರ್ಮುದ್ರಣ ಹೊಂದುವ ಭಾಗ್ಯವನ್ನು ಪಡೆದಿದೆ.

'ಕಮಲ ಕುಮಾರಿ'ಯಲ್ಲಿ ನಿಜವಾಗಿ ವೀರ ಮತ್ತು ಕರುಣ ರಸಗಳ ಪ್ರತಿಪಾದನೆಯಿದ್ದರೂ. ಧಾರ್ಮಿಕ ಮನೋಭಾವದ ಗಳಗನಾಥರು ಇಲ್ಲಿ ಧರ್ಮಶ್ರದ್ಧೆ ಹಾಗು ರಾಜನಿಷ್ಠೆಗಳನ್ನೇ ಕಂಡರು. 1910ರಲ್ಲಿ ಇದು ಗ್ರಂಥರೂಪದಿಂದ ಪ್ರಕಟವಾಗುವ ಮೊದಲು 'ಸದ್ಬೋಧ ಚಂದ್ರಿಕೆ'ಯಲ್ಲಿ ಎರಡು ವರ್ಷ ಧಾರಾವಾಹಿಯಾಗಿ ಬಂದಿತು. ಆಗ ಗಳಗನಾಥರು ಇದನ್ನು ಕುರಿತು, "ಧಾರ್ಮಿಕ ಲೇಖಗಳಿಗೆ ತುಂಬಾ ಆಶ್ರಯ ಕೊಡುತ್ತಿರುವ ಸದ್ಬೋಧ ಚಂದ್ರಿಕೆಯಲ್ಲಿ ಕಮಲ ಕುಮಾರಿಯು ಪ್ರಸಿದ್ಧವಾದದ್ದಕ್ಕಾಗಿ ನನಗೆ ಬಹಳ ಸಮಾಧಾನವಾಗಿದೆ: ಯಾಕೆಂದರೆ, ಕಮಲ ಕುಮಾರಿಯಂಥ ಧರ್ಮಿಷ್ಠ ಸಾಧ್ವಿಯ, ಹಾಗು ತಾನಾಜಿಯಂಥ ಧರ್ಮನಿಷ್ಠ ಹಾಗು ರಾಜನಿಷ್ಠ ವೀರನ ಪವಿತ್ರವಾದ ವರ್ಣನೆಗಳಿಗೆ ಇದಕ್ಕಿಂತ ಪವಿತ್ರವಾದ ಸ್ಥಳವು ದೊರೆಯುವದು ದುರ್ಲಭವು" ಎಂದರು. ಪ್ರಸ್ತಾವನೆಯಲ್ಲಿ ಎಲ್ಲ ಪ್ರಮುಖ ಮತ್ತು ಅಪ್ರಮುಖ ಪಾತ್ರಗಳನ್ನು ವಿಮರ್ಶಿಸಿದ ಗಳಗನಾಥರು "ಹೀಗೆ ಈ ಕಾದಂಬರಿಯೊಳಗಿನ ಧೀರೋದಾತ್ತ ಪಾತ್ರಗಳಿಂದ ನಾವು ಸದ್ಗುಣಗಳನ್ನು ಸ್ವೀಕರಿಸಿ, ನಮ್ಮ ನಮ್ಮ ಧರ್ಮಗಳಲ್ಲಿ ಶ್ರದ್ಧೆಯುಳ್ಳವರೂ, ದೇವರಲ್ಲಿ ಭಕ್ತಿಯುಳ್ಳವರೂ, ನಮ್ಮ ಸರಕಾರದ ವಿಷಯವಾಗಿ ನಿಷ್ಠೆಯುಳ್ಳವರೂ ಆಗತಕ್ಕದ್ದು" ಎಂದು ನಿವೇದಿಸಿರುವರು.

ಆಪಟೆಯವರ ಹಲವಾರು ಐತಿಹಾಸಿಕ ಕಾದಂಬರಿಗಳನ್ನು ಭಾಷಾಂತರಿಸಿದ. ಅನುವಾದಿಸಿದ ಗಳಗನಾಥರು ಆಪಟೆಯವರಲ್ಲಿದ್ದ ಸ್ವದೇಶಪ್ರೇಮವನ್ನು ಉಳ್ಳವರಾಗಿದ್ದರೂ, ರಾಜನಿಷ್ಠೆಯ ವಿಷಯದಲ್ಲಿ ಮಾತ್ರ ತುಸು ಭಿನ್ನ ಮನೋಭಾವದವರಾಗಿದ್ದರೆಂಬುದು ಗಮನಾರ್ಹವಾಗಿದೆ.

ಅದೇನೇ ಇದ್ದರೂ, ಕಾದಂಬರೀ ಲೇಖನ ವಿಷಯದಲ್ಲಿ ಆಪಟೆಯವರೇ ಗಳಗನಾಥರಿಗೆ ಗುರುಗಳಾದರು. 'ಕಮಲ ಕುಮಾರಿ' ಭಾಷಾಂತರದಿಂದ ಗಳಗನಾಥರು ಹೊಸ ಮನುಷ್ಯರೇ

ಆದರು. ಅವರ ಮೊದಲಿನ ಚಿಕ್ಕಪುಟ್ಟ ಪುಸ್ತಕಗಳು ಮತ್ತು 'ಪದ್ಮನಯನಾ' ಕಾದಂಬರಿ–ಇವು ಗಳಗನಾಥರಿಗೆ ಲೇಖಕರೆಂಬ ಹೆಸರನ್ನು ತಂದುಕೊಟ್ಟಿದ್ದುವಾದರೂ, 'ಕಮಲ ಕುಮಾರಿ'ಯಿಂದ ಕಾದಂಬರಿಕಾರರೆಂಬ ಅವರ ವ್ಯಕ್ತಿತ್ವ ಒಮ್ಮೆಲೇ ಬೆಳೆದು ನಿಂತಿತು. ಜನರ ದೃಷ್ಟಿಯಲ್ಲಿ ಭಾಷಾಂತರಕಾರರೆಂದು ಗಳಗನಾಥರ ಬೆಲೆ ಕಡಿಮೆಯಾಗಲಿಲ್ಲ; ಅಷ್ಟೇ ಅಲ್ಲ ಕಾದಂಬರಿಕಾರರೆಂದು ಗಳಗನಾಥರ ಕೀರ್ತಿ ಬೆಳೆಯಿತು. ಅದರಂತೆ 'ಕಮಲ ಕಮಾರಿ'ಯ ಪ್ರಕಟಣೆಯಿಂದ 'ಸದ್ಬೋಧ ಚಂದ್ರಿಕೆ'ಯ ಪ್ರಸಾರವೂ ಹೆಚ್ಚಾಯಿತು. ಜನರಲ್ಲಿ ಹೊಸ ಕಾದಂಬರಿಯ ಸವಿ ಹುಟ್ಟಿಕೊಂಡಿತು. ಆದರಿಂದ ಗಳಗನಾಥರು ಒಂದರ ಅನಂತರ ಇನ್ನೊಂದರಂತೆ ಕಾದಂಬರಿಗಳನ್ನು ಬರೆಯತೊಡಗಿದರು.

1910ರ ಅನಂತರ ಗಳಗನಾಥರು ಪುಂಖಾನುಪುಂಖವಾಗಿ ಎಂಬಂತೆ ಕಾದಂಬರಿಗಳನ್ನು ಕನ್ನಡ ವಾಚಕರಿಗೆ ಒದಗಿಸಿದರು. ಆದರೆ ಮುಂದೆ ಅವರು 'ಕಮಲ ಕುಮಾರಿ'ಯ ಮಾದರಿಯಲ್ಲಿ ಭಾಷಾಂತರಿಸಲಿಲ್ಲ. ಭಾಷಾಂತರಕಾರನ ಕಷ್ಟ–ಸುಖಗಳ ಅನುಭವ ಅವರಿಗೆ ಉಂಟಾಗಿತ್ತು. ಅವರ ಅನುಭವದಲ್ಲಿ ಸುಖಕ್ಕಿಂತ ಕಷ್ಟವೇ ಹೆಚ್ಚಾಗಿರಬೇಕು. ಭಾಷಾಂತರ-ಕಾರ ಹೆಚ್ಚಾಗಿ ಮೂಲವನ್ನೇ ಅನುಸರಿಸಬೇಕಾಗಿರುವ ಬಂಧನ ಅವರಿಗೆ ಸರಿದೋರಲಿಲ್ಲ. ಆದ್ದರಿಂದ ಮುಂದೆ ಅವರು ಅನಿರ್ಬಂಧವಾಗಿ ಭಾಷಾಂತರಿಸಿದರು. ಈ ಅನಿರ್ಬಂಧವು ಭಾಷಾವಿಷಯದಂತೆ ಕಥಾನಕದಲ್ಲೂ ಕಾಣುತ್ತದೆ. ಆದ್ದರಿಂದ ಅವು ಭಾಷಾಂತರಗಳಾಗಿರದೆ, ಅನುವಾದಗಳಾಗಿವೆ. ಬೇಕಾದರೆ ಅವುಗಳನ್ನು ಭಾವಾನುವಾದ ಎಂದೂ ಕರೆಯಬಹುದು. ಯಾಕೆಂದರೆ ಮೂಲ ಕಾದಂಬರಿಯಷ್ಟು ವಿಸ್ತಾರವಾಗದೆ ಇವು ಸಂಕ್ಷಿಪ್ತ ಅನುವಾದಗಳಾಗಿವೆ. ಆದರೆ ಅಲ್ಲಲ್ಲಿ ಕೆಲವೆಡೆ ಗಳಗನಾಥರು ಹೊಸ ಮಾತುಗಳನ್ನೂ, ವಿಷಯವನ್ನೂ ಸೇರಿಸಿರುವರು. ಆದ್ದರಿಂದ ಇಂಥವುಗಳನ್ನು ಕೇವಲ ಭಾಷಾಂತರವೆಂದು ಕರೆಯುವುದು ಸರಿಯಲ್ಲ.

ಸ್ವತಃ ಗಳಗನಾಥರೇ ಈ ಮಾತನ್ನು ಹೆಮ್ಮೆಯಿಂದಲೇ ಹೇಳಿರುವರು. "ನನ್ನ ಆಯುಷ್ಯದಲ್ಲಿ ನಾನು ಕೈ. ವಾ. ಆಪಟೆಯವರ 'ಕಮಲ ಕುಮಾರಿ' ಎಂಬ ಒಂದು ಕಾದಂಬ-ರಿಯ ಹೊರತು ಯಾವ ಕಾದಂಬರಿಯನ್ನೂ ಅಕ್ಷರಶಃ ಭಾಷಾಂತರ ಮಾಡಿರುವದಿಲ್ಲ. ಬೇಕಾದವರ ಕಾದಂಬರಿಯಿರಲಿ.....ನಾನು ಕಾದಂಬರಿಯನ್ನು ಬೇಕಾದಲ್ಲಿ ಹಿಗ್ಗಿಸಿರುವೆನು, ಬೇಡಾದಲ್ಲಿ ಕುಗ್ಗಿಸಿರುವೆನು. ಬೇಕಾದ ಹೊಸ ವಿಷಯವನ್ನು ಸೇರಿಸಿರುವೆನು. ಬೇಡಾದಲ್ಲಿ ಇದ್ದ ವಿಷಯವನ್ನು ತೆಗೆದು ಹಾಕಿರುವೆನು. ಆ ಕಾದಂಬರಿಯೇ ನನ್ನ ಕೈಗೊಂಬೆಯಾಗಿದೆಯಲ್ಲದೆ, ನಾನು ಕಾದಂಬರಿಯ ಕೈಗೊಂಬೆಯಾಗಿರುವದಿಲ್ಲ".[1]

ಬೇರೆಯವರ ಕಾದಂಬರಿಯನ್ನು ಅನುವಾದಿಸಿದರೂ ಗಳಗನಾಥರಿಗೆ ಆ ಕಾದಂಬರಿಯ ಕೈಗೊಂಬೆಯಾಗುವುದು ಬೇಕಾಗಿರಲಿಲ್ಲ. ಅವರ ಇಂಥ ಸ್ವತಂತ್ರ ಭಾಷಾಂತರಗಳನ್ನು ಅನುವಾದಗಳೆಂದು ಕರೆಯುವುದೇ ಸೂಕ್ತ. ಅವುಗಳನ್ನು ಸೃಜನಶೀಲ ಅನುವಾದಗಳೆನ್ನುವುದು ಇನ್ನೂ ಹೆಚ್ಚು ಉಚಿತ.

ಇಂಥ ಅನುವಾದಗಳು :

1. ಮೃಣಾಲಿನಿ (1911) (ಮುಂದೆ 1928ರಲ್ಲಿ 'ರಾಣಿ ಮೃಣಾಲಿನಿ')

1. ಗಳಗನಾಥ : ಸದ್ಗುರು-ಪ್ರಭಾವ, ಪುಟ 39

2. ವೈಭವ ಅಥವಾ ಚಾಣಕ್ಯನ ಕಾರಸ್ಥಾನ (1912)
3. ಈಶ್ವರೀ ಸೂತ್ರ (1913)
4. ಕ್ಷಾತ್ರತೇಜ ಅಥವಾ ಸ್ವಾಮಿಭಕ್ತಿ ಪ್ರದರ್ಶನ (1914)
5. ಧರ್ಮರಹಸ್ಯ ಅಥವಾ ಸತ್ಸಮಾಗಮ-ಪ್ರಭಾವ (1914)
6. ಕನ್ನಡಿಗರ ಕರ್ಮಕಥೆ ಅಥವಾ ವಿಜಯನಗರ ರಾಜ್ಯದ ನಾಶ (1916)
7. ತಿಲೋತ್ತಮೆ ಅಥವಾ ಸರಸ ಪ್ರೇಮ (1917)
8. ಮರಾಟರ ಅಭ್ಯುದಯ (1918)
9. ಶಿವಪ್ರಭುವಿನ ಪುಣ್ಯ (1918)
10. ಛತ್ರಪತಿ (1919)
11. ಕುರುಕ್ಷೇತ್ರ (1919)
12. ಗೃಹಕಲಹ ಅಥವಾ ನೀಚ-ಸ್ವಾರ್ಥ-ಶೂಲ (1921)
13. ಸಂಸಾರ ಸುಖ ಅಥವಾ ಲೋಕಭ್ರಮ-ವಿಲಾಸ (1928)
14. ರಾಣಾ ರಾಜಸಿಂಹ (1928)
15. ಧಾರ್ಮಿಕ ತೇಜ (1928)

ಈ ಎಲ್ಲ ಅನುವಾದಿತ ಕಾದಂಬರಿಗಳಲ್ಲಿಯೂ ಗಳಗನಾಥರು ತಮಗೆ ಬೇಕಾದಂತೆ ಬದಲಾವಣೆಗಳನ್ನು ಮಾಡಿಕೊಂಡಿರುವರು. ಆದರೆ ಇವುಗಳನ್ನು ರೂಪಾಂತರಗಳೆಂದು ಕರೆಯ ಬೇಕಾಗಿಲ್ಲ. ಇಡೀ ಕಾದಂಬರಿಯ ರೂಪವನ್ನೇ ಅವರು ಬದಲಿಸಿಲ್ಲ. ಕಾದಂಬರಿಯ ಕಥಾನಕ, ಪಾತ್ರ, ಸನ್ನಿವೇಶ, ವರ್ಣನೆಗಳಲ್ಲಿ ಮಾತ್ರ ಅಲ್ಲಲ್ಲಿ ಹೆಚ್ಚು ಕಡಿಮೆ ಮಾಡಿ ಕೊಂಡಿದ್ದಾರಲ್ಲದೆ, ಕಾದಂಬರಿಯ ಇಡೀ ಸ್ವರೂಪವನ್ನೇ ಗುರುತು ಹಿಡಿಯಲಾರದಷ್ಟು ಬದಲಿಸಿಲ್ಲ. ಕೆಲವೆಡೆ ಮೂಲದ ಕಥೆಯನ್ನು ಸಂಕ್ಷೇಪಗೊಳಿಸಿದ್ದಾರೆ, ಒಂದೆರಡು ಸನ್ನಿವೇಶ ಗಳನ್ನು ಹಿಂದು ಮುಂದು ಮಾಡಿದ್ದಾರೆ, ಎಲ್ಲೋ ಕೆಲವು ಪಾತ್ರಗಳನ್ನು ಹೊಸದಾಗಿ ಸೃಷ್ಟಿಸಿದ್ದಾರೆ, ವರ್ಣನೆಗಳನ್ನು ಮೊಟಕುಗೊಳಿಸಿದ್ದಾರೆ, ಅಲ್ಲಲ್ಲಿ ನೀತಿಯ ಮಾತುಗಳನ್ನು, ತಾತ್ತ್ವಿಕ ವಿಚಾರಗಳನ್ನು, ಉಪದೇಶವನ್ನು ಮತ್ತು ತಮ್ಮ ಅಭಿಪ್ರಾಯಗಳನ್ನು ಸೇರಿಸಿದ್ದಾರೆ. ಹೀಗೆ ಮಾಡುವುದರಿಂದ ತಮ್ಮ ಅನುವಾದಗಳು ಮೂಲಕ್ಕಿಂತ ಉತ್ತಮಗೊಂಡವೆಂದೇ ಅವರು ಭಾವಿಸಿದರು. ಅಲ್ಲದೆ ಈ ಹೆಚ್ಚು-ಕಡಿಮೆಗಳು ಅವರ ಅನುಕೂಲತೆಯನ್ನೂ ಅವಲಂಬಿಸುತ್ತಿದ್ದವು. ಅತಿ ದೀರ್ಘವಾದ ಒಂದು ಕಾದಂಬರಿಯನ್ನು 'ಕಮಲ ಕುಮಾರಿ'ಯ ಮಾದರಿಯಲ್ಲಿ ಶಬ್ದಶಃ ಭಾಷಾಂತರ ಮಾಡಿದ್ದರೆ, ಅಷ್ಟು ದೊಡ್ಡ ಗಾತ್ರದ ಕನ್ನಡ ಕಾದಂಬರಿ ಯನ್ನು ಅಚ್ಚು ಮಾಡುವ ಕಷ್ಟವೆಷ್ಟು ? 'ಸದ್ಬೋಧ ಚಂದ್ರಿಕೆ'ಯಲ್ಲಿ ಕೆಲ ಕೆಲವು ಕಾದಂಬರಿ ಗಳು ಎರಡೆರಡು ವರ್ಷ ಧಾರಾವಾಹಿಯಾಗಿ ಅಚ್ಚಾದುವು. ಇನ್ನು ಮೂಲಗಾತ್ರವನ್ನೆಲ್ಲಾ ಭಾಷಾಂತರಿಸಿದ್ದರೆ ಇನ್ನೂ ಹೆಚ್ಚಿನ ಅವಧಿಯವರೆಗೆ ಅವುಗಳನ್ನು ಧಾರಾವಾಹಿಯಾಗಿ ಕೊಡುತ್ತ ಹೋಗಬೇಕಾಗುತ್ತಿತ್ತು. ವಾಚಕರು ಹಿಂದಿನ ಕಥೆಯನ್ನೆಲ್ಲ ಎಷ್ಟು ಕಾಲದವರೆಗೆ ನೆನಪಿಟ್ಟುಕೊಂಡು ಓದಬೇಕು ? ಅಲ್ಲದೆ ಗ್ರಂಥರೂಪದಲ್ಲಿ ಪ್ರಕಟಿಸಿದಾಗ ಕೂಡ ಅಂಥ ದೊಡ್ಡ ಗಾತ್ರದ ಕಾದಂಬರಿಗಳನ್ನು ಓದುವ ಕನ್ನಡಿಗರೆಷ್ಟು ಜನರಿದ್ದರು ? ಓದಿದರೂ ಕೊಂಡುಕೊಳ್ಳುವವರೆಷ್ಟು ಜನರಿದ್ದರು ?

ಇಂಥ ಎಲ್ಲ ಸಮಸ್ಯೆಗಳೂ ಅವರನ್ನು ಕಾಡಿದುವು. ಅಲ್ಲದೆ ಮಹಾರಾಷ್ಟ್ರದ ಅಥವಾ ರಜಪೂತ ಇತಿಹಾಸದ ಹಿನ್ನೆಲೆಯಲ್ಲಿ ಬರೆದ ವರ್ಣನೆಗಳೆಲ್ಲ ಕನ್ನಡ ವಾಚಕರಿಗೆ ಅನಾವಶ್ಯಕವೆಂದೂ ಗಳಗನಾಥರು ಭಾವಿಸಿರಬಹುದು. ಕನ್ನಡಿಗರಿಗೆ ಎಷ್ಟು ಬೇಕು, ಏನು ಬೇಕು ಎಂಬುದನ್ನವರು ಚೆನ್ನಾಗಿ ಅರಿತಿದ್ದರು. ತಮ್ಮ ತಿಳಿವಳಿಕೆಯಂತೆ ಅವರು ಕನ್ನಡಿಗರಿಗೆ ಹಿತಕರವಾದುದನ್ನು ಒದಗಿಸಿದರು. ಅದಕ್ಕಾಗಿ ಭಾಷಾಂತರಕ್ಕಿಂತ ಅನುವಾದದ ರೀತಿ ಅವರಿಗೆ ಸರಿಯೆನಿಸಿತು. ಆದ್ದರಿಂದ ಅವರು 'ಕಮಲ ಕುಮಾರಿ'ಯ ಅನಂತರ ಭಾಷಾಂತರದ ಗೊಡವೆಯನ್ನು ಬಿಟ್ಟು ಅನುವಾದಕ್ಕೆ ಒಲಿದರು. ತಾವು ಕಾದಂಬರಿಯ ಕೈಗೊಂಬೆಯಾಗದೆ, ಕಾದಂಬರಿಯನ್ನೇ ತಮ್ಮ ಕೈಗೊಂಬೆಯಾಗಿ ಮಾಡಿಕೊಂಡರು; ಕೈಗೊಂಬೆಯಂತೆ ಅವುಗಳನ್ನು ಬೇಕಾದಂತೆ ಕುಣಿಸಿದರು.

ಗಳಗನಾಥರು ತಮ್ಮ ಅನುವಾದಗಳಲ್ಲಿ ಏನು ಮತ್ತು ಹೇಗೆ ಬದಲಾವಣೆಗಳನ್ನು ಮಾಡಿಕೊಂಡರೆಂಬುದನ್ನು ನೋಡಿದರೆ, ಅವರ ಈ ಬದಲಾವಣೆಗಳ ಉದ್ದೇಶವೂ ನಮಗೆ ಅರ್ಥವಾಗಬಹುದು. ಅವರ ಪ್ರತಿಯೊಂದು ಅನುವಾದದ, ಪ್ರತಿಯೊಂದು ಬದಲಾವಣೆಯನ್ನು ಪಟ್ಟಿ ಮಾಡುವುದಕ್ಕಿಂತ ಅವರ ರೀತಿಯನ್ನು ಪ್ರತಿಬಿಂಬಿಸುವ ಕೆಲವು ಅನುವಾದಗಳಲ್ಲಿಯ ಬದಲಾವಣೆಗಳನ್ನೂ, ಅವುಗಳ ಉದ್ದೇಶವನ್ನೂ, ಸಫಲತೆ–ವಿಫಲತೆಗಳನ್ನೂ ಗಮನಿಸಿದರೆ ಒಳಿತು.

ಗಳಗನಾಥರು ಮರಾಠಿಯಿಂದ ಕನ್ನಡಕ್ಕೆ ತಂದ ಕಾದಂಬರಿಗಳಲ್ಲಿ ಆಪಟೆಯವರ 'ಕಮಲ ಕುಮಾರಿ'ಯೇ ಪ್ರಪ್ರಥಮವಾದುದು. ಆದರೆ ಪುಣೆಯ ವಾಸ್ತವ್ಯದಲ್ಲಿ ಅವರನ್ನು ಆಪಟೆಯವರ ಕಾದಂಬರಿಗಳು ಆಕರ್ಷಿಸುವ ಮೊದಲೇ, 'ಮೃಣಾಲಿನಿ'ಗೆ ಅವರು ಮಾರು ಹೋಗಿದ್ದರು. 'ಮೃಣಾಲಿನಿ'ಯು ಬಂಕಿಮಚಂದ್ರರ ಬಂಗಾಲಿ ಕಾದಂಬರಿಯು. ಆದರೆ ಅದನ್ನು ಗಳಗನಾಥರು ಮರಾಠಿಯ ಮೂಲಕವಾಗಿಯೇ ಓದಿದ್ದರು.[1] ಗಳಗನಾಥರು 1911 ರಲ್ಲಿ 'ಮೃಣಾಲಿನಿ'ಯನ್ನು ಪ್ರಕಟಿಸಿದಾಗ ಅದರ ಪ್ರಸ್ತಾವನೆಯಲ್ಲಿ,

"ಈಗ ಸುಮಾರು 10–15 ವರ್ಷಗಳ ಹಿಂದೆ ಈ ಕಾದಂಬರಿಯನ್ನು 'ಮಾಸಿಕ ಮನೋರಂಜನ'ವೆಂಬ ಸುಪ್ರಸಿದ್ಧ ಮರಾಠೀ ಮಾಸಿಕ ಪುಸ್ತಕದಲ್ಲಿ ಮೊಟ್ಟಮೊದಲು ನಾನು ಓದಿದೆನು. ಇದು ಬಲು ಸವಿಯಾದದ್ದು. ಈ ಪಡಿಕಟ್ಟಿನ ಕಾದಂಬರಿಗಳು ವಿರಲವೆಂದು ಹೇಳಬಹುದು.....ಮಳೆ ನಿಂತರೂ ಮರದ ಹನಿ ನಿಲ್ಲಲಿಲ್ಲವೆಂಬಂತೆ, ನಾನು ಈ ಕಾದಂಬರಿಯನ್ನು ಓದಿಬಿಟ್ಟರೂ, ಓದಿದ್ದರಿಂದ ನನ್ನ ಮನಸ್ಸಿಗಾಗಿದ್ದ ಸುಖವು ನನ್ನನ್ನು ಬಿಟ್ಟು ಹೋಗಲಿಲ್ಲ. ಮೃಣಾಲಿನಿಯ ಸ್ಮರಣವಾದ ಕೂಡಲೇ ನನ್ನ ಮನಸ್ಸು ಪ್ರಸನ್ನವಾಗ ಹತ್ತಿತ್ತು ........ ಇಂಥ ರುಚಿವೈಚಿತ್ರ್ಯದ ಪಾತ್ರಗಳ ಸುರುಚಿರ ಚರಿತ್ರಶ್ರವಣದಿಂದ ಯಾರ ಅಂತಃಕರಣವು ಪ್ರಸನ್ನವಾಗಲಿಕ್ಕಿಲ್ಲ ?....."

—ಎಂದು ಮೊದಲಾಗಿ ಬರೆದು, ತಾವು ಅದನ್ನು ಅನುವಾದಿಸಿದ ಹಿನ್ನೆಲೆಯನ್ನು ತಿಳಿಸಿರುವರು. 'ಮೃಣಾಲಿನಿ'ಯು 'ಸದ್ಬೋಧ ಚಂದ್ರಿಕೆ'ಯಲ್ಲಿ 'ಕಮಲ ಕುಮಾರಿ'ಯ ತರುವಾಯ ಧಾರಾವಾಹಿಯಾಗಿ ಬರತೊಡಗಿತು.

1. ಕಾಶೀನಾಥ ರಘುನಾಥ ಮಿತ್ರ ಎಂಬವರು 'ಮೃಣಾಲಿನಿ'ಯನ್ನು ಭಾಷಾಂತರಿಸಿ, ತಮ್ಮ 'ಮಾಸಿಕ ಮನೋರಂಜನ' ಎಂಬ ಪತ್ರಿಕೆಯಲ್ಲಿ ಕ್ರಮಶಃ ಪ್ರಕಟಿಸಿದ್ದರು.

ಬಂಕಿಮಚಂದ್ರರ 'ಮೃಣಾಲಿನಿ' ಅತಿ ಜನಪ್ರಿಯವಾದ ಕಾದಂಬರಿ. ಬಂಗಾಲದ ಇತಿಹಾಸದ ಹಿನ್ನೆಲೆಯಲ್ಲಿ ಬಂಕಿಮರು ಈ ರಮ್ಯವಾದ ಕಲ್ಪಿತ ಕಥೆಯನ್ನು ಹೆಣೆದಿರುವರು. ಈ ಕಾದಂಬರಿಯ ರೊಮ್ಯಾಂಟಿಕ್ ಅಂಶಕ್ಕೆ ಗಳಗನಾಥರು ಮಾರುಹೋಗಿರುವರು. ಆದರೆ ಅವರು ಕಾದಂಬರಿಯನ್ನು ಮೊದಲು ನೇರವಾಗಿ ಅನುವಾದಿಸಿದ್ದರೂ, ಎರಡನೆಯ ಆವೃತ್ತಿಯಲ್ಲಿ ಮೂಲ ಕಾದಂಬರಿಯ ಕಥೆ ಮುಗಿದ ಮೇಲೆ ಅದನ್ನು ತಮ್ಮದೇ ಆದ ರೀತಿಯಲ್ಲಿ ತುಸು ಬೆಳೆಸಿದರು. ಅದರಂತೆ 1911ರಲ್ಲಿ ಪ್ರಕಟವಾದಾಗ ಕೇವಲ 'ಮೃಣಾಲಿನಿ' ಯಾಗಿದ್ದುದು 1928ರ ಆವೃತ್ತಿಯಲ್ಲಿ 'ರಾಣಿ-ಮೃಣಾಲಿನಿ'ಯಾಯಿತು. "ಈ. ಹೊಸ ಆವೃತ್ತಿಯಲ್ಲಿ ಹೆಚ್ಚು ವಿಷಯವನ್ನು ಸೇರಿಸಿ ದೊಡ್ಡ ಪುಸ್ತಕವಾಗಿ ಮಾಡಿರುತ್ತದೆ.... ಈ ಕಾದಂಬರಿಗೆ ಹೊಸದಾಗಿ ಜೋಡಿಸಿದ ವಿಷಯವು ಸ್ವತಂತ್ರವಾಗಿ ಬರೆದದ್ದು"[1] ಎಂದು ಗಳಗನಾಥರು ತಮ್ಮ ಕೈಗಂಟಿನ ವಿಷಯವಾಗಿ ಅಭಿಮಾನದಿಂದ ಬರೆದುಕೊಂಡರು.

ಬಂಕಿಮಚಂದ್ರರ 'ಮೃಣಾಲಿನಿ'ಯಲ್ಲಿ ಮನೋರಮೆಯ ಕಥೆಗೆ ಸಾಕಷ್ಟು ಅವಕಾಶವಿದ್ದರೂ. ಗಳಗನಾಥರು ಅವಳ ಪಾತ್ರವನ್ನು ತಮ್ಮದೇ ಆದ ರೀತಿಯಲ್ಲಿ ಉದಾತ್ತೀಕರಿಸಿ ಬೆಳೆಯಿಸಿದ್ದಾರೆ. ಗಳಗನಾಥರ ಕಾದಂಬರಿಯಲ್ಲಿ ಮೃಣಾಲಿನಿಗಿಂತ ಮನೋರಮೆಯೇ ಒಂದು ರೀತಿಯಿಂದ ಪ್ರಾಮುಖ್ಯವನ್ನು ಪಡೆದು ಬಿಡುತ್ತಾಳೆ. ಇದು ಅಷ್ಟೇನೂ ಹಿತಕರವಾದ ಬದಲಾವಣೆಯೆನಿಸುವುದಿಲ್ಲ.

ಬಂಕಿಮಚಂದ್ರರ ಕಾದಂಬರಿಯ ಪ್ರಕಾರ, ಹೇಮಚಂದ್ರನೆಂಬ ಮಗಧ ರಾಜಪುತ್ರ ಕಥಾನಾಯಕ. ಮಥುರಾ ನಗರದ ಬೌದ್ಧಮತಾವಲಂಬಿಯಾದ ವಣಿಜನೊಬ್ಬನ ಮಗಳು (ಮೃಣಾಲಿನಿ) ನದಿಯಲ್ಲಿ ತೇಲಿ ಹೋಗುತ್ತಿರುವಾಗ ಅವಳನ್ನು ರಕ್ಷಿಸಿದ ಹೇಮಚಂದ್ರ ಅವಳಲ್ಲಿ ಮೋಹಿತನಾದ. ಇಬ್ಬರೂ ಗಾಂಧರ್ವ ರೀತಿಯಿಂದ ವಿವಾಹವಾದರು. ಈ ಮದುವೆಯ ವಿಷಯವು ಹೇಮಚಂದ್ರನ ಗುರುವಾದ ಮಾಧವಾಚಾರ್ಯನಿಗೂ ತಿಳಿಯಲಿಲ್ಲ. ಬಂಗಾಳ ಪ್ರಾಂತವನ್ನು ಆಕ್ರಮಿಸಲು ಹವಣಿಸುತ್ತಿದ್ದ ಯವನರನ್ನು ಹೇಮಚಂದ್ರನು ಹೊಡೆದೋಡಿಸಬೇಕೆಂದೂ ಅದು ಅವನಿಂದಲೇ ಸಾಧ್ಯವೆಂದೂ ಮಾಧವಾಚಾರ್ಯ ಜ್ಯೋತಿಷವನ್ನು ಗುಣಿಸಿ ತಿಳಿದುಕೊಂಡಿದ್ದ. ಹೇಮಚಂದ್ರ ಮೃಣಾಲಿನಿಯಲ್ಲಿ ಮೋಹಿತನಾಗಿರುವನೆಂದು ತಿಳಿದ ಮಾಧವಾಚಾರ್ಯ ಅವರಿಬ್ಬರನ್ನೂ ಅಗಲುವಂತೆ ವ್ಯವಸ್ಥೆ ಮಾಡಿದ.

ಮಾಧವಾಚಾರ್ಯನ ಆದೇಶದಂತೆ ಹೇಮಚಂದ್ರನು ವಂಗದೇಶದ ರಾಜಧಾನಿಯಾದ ನವೀಯಕ್ಕೆ ಬಂದನು. ಅಲ್ಲಿಯ ಅರಸು ವೃದ್ಧ, ಅಶಕ್ತ. ಪಶುಪತಿಯೆಂಬ ಅವನ ಮಂತ್ರಿಯೇ ಸರ್ವಾಧಿಕಾರಿಯಾಗಿದ್ದ. ಆತ ಕಪಟದಿಂದ ರಾಜ್ಯವನ್ನು ಬಖ್ತಿಯಾರ ಖಿಲ್ಜಿಯ ಪ್ರತಿನಿಧಿಯಾದ ಮಹಮ್ಮದಾಲಿಗೆ ಒಪ್ಪಿಸಿಬಿಟ್ಟ. ಆದರೆ ತುರುಕರು ಕರಾರಿನಂತೆ ಅವನನ್ನು ರಾಜನನ್ನಾಗಿ ಮಾಡಲಿಲ್ಲ; ಊರನ್ನೆಲ್ಲ ಸುಲಿದು ಹಾಳುಗೆಡವಿದರು. ಪಶ್ಚಾತ್ತಾಪಗೊಂಡ ಪಶುಪತಿ ತನ್ನ ಅರಮನೆಯಿಂದ ಪಾರಾಗಬೇಕೆನ್ನುವಷ್ಟರಲ್ಲಿ ಅಗ್ನಿಗೆ ಆಹುತಿಯಾದ. ಆತನ ಹೆಂಡತಿಯೇ ಮನೋರಮೆ. ಮದುವೆಯಾದ ಮರುದಿನವೇ ಮನೋರಮೆಯನ್ನು ಅವಳ ತಂದೆ ಪತಿಯಿಂದ ಅಗಲಿಸಿದ್ದ. ಮಗಳಿಗೆ ವೈಧವ್ಯ ಬರುತ್ತದೆಯೆಂದು ಆತ ಜ್ಯೋತಿಷ ತಿಳಿದುದೇ ಈ ಅಗಲಿಕೆಗೆ ಕಾರಣ. ಈಗ ಪಶುಪತಿ ಮನೋರಮೆಯನ್ನು ವಿಧವೆಯೆಂದೇ ತಿಳಿದಿದ್ದ. ಅವಳಿಗೆ ಮಾತ್ರ

1. ಗಳಗನಾಥ: ಸದ್ಗುರು-ಪ್ರಭಾವ, ಪುಟ 121

ಪಶುಪತಿಯೇ ತನ್ನ ಪತಿಯೆಂದು ತಿಳಿದಿತ್ತು. ಆತನ ಮರಣಾನಂತರ ಅವಳು, ತನಗೆ ಅಣ್ಣನ ಸಮಾನನಾದ ಹೇಮಚಂದ್ರನಿಗೆ ಪಶುಪತಿಯ ಗುಪ್ತಧನವನ್ನು ಅರ್ಪಿಸಿ, ಹಿಂದೂ ರಾಜ್ಯ ಸ್ಥಾಪಿಸಲು ಅದನ್ನು ಬಳಸಬೇಕೆಂದು ಹೇಳಿ, ಪತಿಯ ಶವದ ಜೊತೆಗೆ ಚಿತೆಯನ್ನೇರುವಳು. ಮುಂದೆ ಹೇಮಚಂದ್ರ ಹೊಸದೊಂದು ನಗರವನ್ನು ಕಟ್ಟಿ, ರಾಜ್ಯವನ್ನು ಸ್ಥಾಪಿಸಿ ತುರುಕರನ್ನು ಬಂಗಾಳದೇಶದಿಂದ ಹೊಡೆದೋಡಿಸಿದನು.

ಈ ಮಧ್ಯೆ ಅನೇಕ ಕಷ್ಟಪರಂಪರೆಗೆ ಈಡಾಗಿ ತನ್ನ ಪಾವಿತ್ರ್ಯವನ್ನೂ, ಪತಿಭಕ್ತಿಯನ್ನೂ ಉಳಿಸಿಕೊಂಡ ಮೃಣಾಲಿನಿಯನ್ನು ಹೇಮಚಂದ್ರ ಪಡೆದು, ರಾಣಿಯನ್ನಾಗಿ ಮಾಡಿಕೊಂಡನು. ಬಂಕಿಮರು ಮೃಣಾಲಿನಿಯ ಕಥೆಗೂ ಸಾಕಷ್ಟು ಅವಕಾಶವನ್ನು ಒದಗಿಸಿದ್ದಾರೆ. ಅಷ್ಟೇ ಅಲ್ಲ, ಅವಳಿಗೆ ಸಹಾಯಕಳಾದ ಗಿರಿಜಾಯೆ ಎಂಬ ಭಿಕ್ಷುಕಿಯನ್ನೂ ಚೆನ್ನಾಗಿಯೇ ಚಿತ್ರಿಸಿದ್ದಾರೆ.

ಈ ಕಾದಂಬರಿಯಲ್ಲಿ ಬಂದಿರುವ ಐತಿಹಾಸಿಕ ಹಿನ್ನೆಲೆ ಹೆಸರಿಗೆ ಮಾತ್ರ ಇದೆ. "ಚರಿತ್ರೆಯಲ್ಲಿ ಸಿಕ್ಕುವ ವೃತ್ತಾಂತವೇ ಅಲ್ಪ, ಅವಿಶ್ವಸನೀಯ. ಅದರ ಸುತ್ತ ಕಟ್ಟಿರುವ ವಸ್ತು ಪಾತ್ರಗಳೆಲ್ಲವೂ ಪೂರ್ತಿಯಾಗಿ ಕಲ್ಪಿತ".[1] ಕಾದಂಬರಿಯಲ್ಲಿ ಬಂಕಿಮರು ಮೃಣಾಲಿನಿ, ಮನೋರಮೆ, ಗಿರಿಜಾಯೆ, ಮಾಧವಾಚಾರ್ಯ ಮೊದಲಾದ ಕಲ್ಪಿತ ಪಾತ್ರಗಳನ್ನು ರಮ್ಯವಾಗಿ ಚಿತ್ರಿಸುವಲ್ಲಿಯೇ ಹೆಚ್ಚಿನ ಆಸಕ್ತಿಯನ್ನು ಪಡೆದಂತಿದೆ. ಗಳಗನಾಥರು ಈ ಕಾದಂಬರಿಯನ್ನು ಬಹುವಾಗಿ ಮೆಚ್ಚಿದ್ದರು. 'ಮೃಣಾಲಿನಿ' ಕಾದಂಬರಿಯನ್ನು ಕುರಿತು ಅವರು "ಇದರ ಸ್ವಾರಸ್ಯವೆಷ್ಟು, ಲಾಲಿತ್ಯವೆಷ್ಟು, ಗಾಂಭೀರ್ಯವೆಷ್ಟು! ಶಾಬಸ್ ! ಕಾದಂಬರಿಕಾರರಿದ್ದರೆ ಬಂಕೀಮಚಂದ್ರರಂಥ ಕಾದಂಬರಿಕಾರರಿರಬೇಕು ![2] ಎಂದು ಉದ್ಗಾರ ತೆಗೆದರು.

ಆದರೂ ಅವರಿಗೆ ಬಂಕಿಮರು ಚಿತ್ರಿಸಿದ ಮನೋರಮೆಯ ಸಾಹಸ–ತ್ಯಾಗಗಳಿಂದ ತೃಪ್ತಿಯಾಗಲಿಲ್ಲ. ಅದಕ್ಕೆಂದೇ ಅವರು 1928ರಲ್ಲಿ ಕಾದಂಬರಿಗೆ ಸುಮಾರು 65–70 ಪುಟಗಳಷ್ಟು ಹೆಚ್ಚಿನ ವಿಷಯವನ್ನು ಸೇರಿಸಿದರು.

ಗಳಗನಾಥರ 'ರಾಣಿ-ಮೃಣಾಲಿನಿ'ಯ ಪ್ರಕಾರ ಪಶುಪತಿಯ ಚಿತೆಯಲ್ಲಿಯೇ ಮನೋರಮೆ ಸತೀ ಹೋಗುವುದಿಲ್ಲ. ಹಾಗೆ ಸತೀ ಹೋಗಲು ಸಿದ್ಧಳಾದ ಅವಳನ್ನು ಮಾಧವಾಚಾರ್ಯನು ಬಂದು ತಡೆಯುವನು. ಪಶುಪತಿಯ ಮರಣಕಾಲದ ಆಸೆಯ ಪ್ರಕಾರ ಅವಳು ಹಿಂದೂ ರಾಜ್ಯಸ್ಥಾಪನೆಯ ಕಾರ್ಯದಲ್ಲಿ ನೆರವಾಗಬೇಕೆಂದು ತಿಳಿಸುವನು; ಪಶುಪತಿಯ ಕೈಯಲ್ಲಿದ್ದ ಖಡ್ಗವನ್ನು ಅವಳ ಕೈಗೆ ಕೊಡುವನು. ಮಾಧವಾಚಾರ್ಯನ ಮಾತುಗಳನ್ನು ಕೇಳಿ, ಆ ಖಡ್ಗವನ್ನು ಸ್ವೀಕರಿಸಿ ಅವಳು "ಪತಿಯ ಚಿತೆಯನ್ನು ದುಃಖದಿಂದ ನೋಡುತ್ತಾ, ಅದಕ್ಕೆ ಪ್ರದಕ್ಷಿಣ ನಮಸ್ಕಾರ ಮಾಡಿ ಅಲ್ಲಿಂದ ತಟ್ಟನೆ ಹೊರಟು ಹೋಗಿಬಿಟ್ಟಳು!"

ಮುಂದೆ ಹೇಮಚಂದ್ರನು ಪಶುಪತಿಯ ಸಂಪತ್ತಿನಿಂದ ರಾಜಧಾನಿಯನ್ನು ಕಟ್ಟಿ, ಯವನರನ್ನು ಬಂಗಾಳ ದೇಶದಿಂದ ಹೊಡೆದೋಡಿಸುವ ಕಾರ್ಯದಲ್ಲಿ ಮಗ್ನನಾಗುವನು. ಆತನು ಮೂರು ಸಲ ಯುದ್ಧಮಾಡುವ ಪ್ರಸಂಗ ಬರುವುದು. ಆ ಎಲ್ಲ ಸಮಯಗಳಲ್ಲಿಯೂ ಮನೋರಮೆ ಯಾರಿಗೂ ತಿಳಿಯದಂತೆ ಒಮ್ಮೆಲೇ ರಣರಂಗದಲ್ಲಿ ಖಡ್ಗಪಾಣಿಯಾಗಿ ಬಂದು ಹೇಮಚಂದ್ರನಿಗೆ ಸಹಾಯ ಮಾಡುವಳು; ಅವನ ಪ್ರಾಣವನ್ನೂ ರಕ್ಷಿಸುವಳು! ಯವನರ

1. ಎ. ಆರ್. ಕೃಷ್ಣಶಾಸ್ತ್ರೀ ; ಬಂಕಿಮಚಂದ್ರ, ಪುಟ 147
2. ಗಳಗನಾಥ ; ಸದ್ಗುರು - ಪ್ರಭಾವ, ಪುಟ 121

ಗುಪ್ತಕಾರಸ್ಥಾನಗಳನ್ನೆಲ್ಲ ಅವಳು ಹೇಗೋ ತಿಳಿದುಕೊಂಡಿರುವಳು. ಯುದ್ಧಭೂಮಿಯಲ್ಲಿ ಹೇಮಚಂದ್ರನಿಗಿಂತ ಅವಳೇ ಹೆಚ್ಚಿನ ಸಾಹಸ–ಪರಾಕ್ರಮಗಳನ್ನು ಮೆರೆಯುವಳು. ಅದನ್ನು ಕಂಡು ಹೇಮಚಂದ್ರ ಕೂಡ ಬೆರಗಾಗುವನು. ತೀರ ಸಂಕಟ ಸಮಯದಲ್ಲಿ ಮಾತ್ರ ಅವಳು ಹೇಮಚಂದ್ರನಿಗೆ ಕಾಣಿಸಿಕೊಂಡು, ಸಲಹೆ–ಸೂಚನೆಗಳನ್ನು ಕೊಟ್ಟು, "ನನ್ನನ್ನು ನೀನು ಪುನಃ ಕಾಣುವದು ರಣಮಂಡಲದಲ್ಲಿಯೇ" ಎಂದು ನುಡಿದು "ತಟ್ಟನೆ ಅಲ್ಲಿಂದ ಹೊರಟು ಹೋಗುವಳು." ಕಪಟದಿಂದ ಹೇಮಚಂದ್ರನನ್ನು ತುರುಕ ಸರದಾರನು ಸಂಹರಿಸಬಯಸಿದ ಸಮಾಚಾರವನ್ನು "ಮನೋರಮೆಯು ಯಾವ ಮಾಯದಿಂದಲೋ ತಿಳಿದು ಹೇಮಚಂದ್ರನಿಗೆ ಮುಂಚೆಯೇ" ತಿಳಿಸಿಬಿಡುವಳು. ತುರುಕ ಸರದಾರನಿಗೆ ಬರೆದ ಗುಪ್ತ ಪತ್ರವನ್ನು "ಈಶ್ವರೀ ಕೃಪೆಯಿಂದ ಹೇಗೆ ಹೇಗೋ ಸಂಪಾದಿಸಿ" ತಂದು ಹೇಮಚಂದ್ರನಿಗೆ ಮುಟ್ಟಿಸುವಳು. ಕೊನೆಯ ಯುದ್ಧದಲ್ಲಂತೂ "ಜಯ ಚಂಡಿ" ಎಂದು ಗರ್ಜಿಸುತ್ತ ಮುಸಲ್ಮಾನ ಸೇನೆಯನ್ನು ಸಂಹರಿಸಿ ಜಯವನ್ನು ಸಂಪಾದಿಸುವಳು.

ಇಂಥ ಮನೋರಮೆಯನ್ನು ಕುರಿತು, ಹೇಮಚಂದ್ರನು ಹಲವು ಸಲ, "ತಂಗೀ ಏನಮ್ಮಾ ನಿನ್ನ ಪರಾಕ್ರಮವು! ಇಂದಿನ ನಿನ್ನ ಪರಾಕ್ರಮವನ್ನು ನೋಡಿ ನಾನು ಧನ್ಯನಾದೆನು". "ತಂಗೀ, ನಮ್ಮ ಈ ನೂತನ ಹಿಂದೂ ರಾಜ್ಯದ ಮೇಲೆ ನಿನ್ನದೆಷ್ಟು ಉಪಕೃತಿಯಮ್ಮಾ! ನೀನು ಮನುಷ್ಯ ಮಾತ್ರಳೆಂದು ನಾನು ಹೇಗೆ ತಿಳಿಯಲಿ? ದುಷ್ಟಶಾಸನ–ಶಿಷ್ಟಪರಿಪಾಲನಗಳಿಗಾಗಿ ಅವತರಿಸಿದ ಸಾಕ್ಷಾತ್ ಆದಿಶಕ್ತಿಯೆಂದು ತಿಳಿಯುವೆನು" ಎಂದು ಮುಂತಾಗಿ ಶ್ಲಾಘಿಸುವನು. ಕೊನೆಗೆ ಗುರು ಮಾಧವಾಚಾರ್ಯನೂ ಕೂಡ ಅವಳನ್ನು ಹೊಗಳುವನು. ಕೊನೆಗೆ ಈ ಮನೋರಮೆಯು ತನ್ನ ಪತಿಯ ಖಡ್ಗದ ಜೊತೆಗೆ ಸಹಗಮನ ಮಾಡಿದಾಗ, ಹೇಮಚಂದ್ರನು ಅವಳ ಸಮಾಧಿಯನ್ನು ಕಟ್ಟಿಸುವನು.

ಹೀಗೆ ಗಳಗನಾಥರು ಮನೋರಮೆಯ ಅದ್ಭುತ–ರಮ್ಯ ಚರಿತ್ರೆಯನ್ನು ಬಂಕಿಮ ಚಂದ್ರರ ಕಾದಂಬರಿಗೆ ಜೋಡಿಸಿ, ಮೊದಲಿದ್ದ ರಮ್ಯಕಥಾ ಮಂದಿರಕ್ಕೆ ಕಳಸವನ್ನಿಟ್ಟಂತಾಗಿದೆ. ಗಳಗನಾಥರು ಮಾಧವಾಚಾರ್ಯನ ಪಾತ್ರವನ್ನು ಕೂಡ ಅತಿಮಾನುಷವನ್ನಾಗಿ ಮಾಡಿರುವರು. ಆತ ರಣರಂಗದಲ್ಲಿ ಮೂರ್ಛೆಹೋದ ಹೇಮಚಂದ್ರನನ್ನೂ ಉಳಿದವರನ್ನೂ ತನ್ನ ಕಮಂಡಲದ ಉದಕವನ್ನು ಪ್ರೋಕ್ಷಿಸಿ ಎಬ್ಬಿಸಿದ ವಿಚಾರವನ್ನು ಗಳಗನಾಥರು ಅನೇಕ ಸಲ ಬಣ್ಣಿಸಿರುವರು.

"ಈ ಕಾದಂಬರಿಯೊಳಗಿನ ಮನೋರಮೆಯಂಥ ಉದಾತ್ತ ಪಾತ್ರಗಳಿಂದ ನಾವು ಆತ್ಮ ಸಂಯಮನಾದಿ ಹಲವು ಉದಾತ್ತ ಗುಣಗಳ ಮಹತ್ವವನ್ನು ತಿಳಿದುಕೊಳ್ಳಬಹುದಾಗಿದೆ. ರಾಜದ್ರೋಹಿಯಾದ ಪಶುಪತಿಗೊದಗಿದ ಯೋಗ್ಯಶಾಸನದಿಂದ ರಾಜದ್ರೋಹಕ್ಕೆ ಯಾರಾದರೂ ಅಂಜಿ ಹೇಸಿಕೊಳ್ಳುವ ಹಾಗಿದೆ. ಮಾಧವಾಚಾರ್ಯರಂಥ ಗಂಭೀರವಾದ ಪವಿತ್ರ ಪಾತ್ರದಿಂದ ನಾವು ಕರ್ತವ್ಯನಿಷ್ಠರಾಗಬಹುದಾಗಿದೆ...." ಎಂದು ಗಳಗನಾಥರು ಪ್ರಸ್ತಾವನೆಯಲ್ಲಿ ಬರೆದಿರುವರು. ಬಂಕಿಮಚಂದ್ರರೂ ಮಾಧವಾಚಾರ್ಯನ ಚಿತ್ರವನ್ನು ಘನವಾಗಿಯೇ ಚಿತ್ರಿಸಿರುವರು. "ವಿಜಯನಗರದ ಸಂಸ್ಥಾಪನೆಗೆ ಮೂಲ ಕಾರಣನಾದ ಸ್ಫೂರ್ತಿದಾಯಕನಾದ ಮಾಧವಾಚಾರ್ಯನನ್ನು ಬಂಕಿಮನು ಮನಸ್ಸಿನಲ್ಲಿಟ್ಟುಕೊಂಡಿದ್ದನು"[1] ಎಂದು ಎ. ಆರ್. ಕೃಷ್ಣಶಾಸ್ತ್ರಿಗಳು ಅಭಿಪ್ರಾಯ ಪಟ್ಟಿರುವರು. ಗಳಗನಾಥರಿಗಂತೂ ಈ ಮಾಧವಾಚಾರ್ಯನ

1. ಎ. ಆರ್. ಕೃಷ್ಣಶಾಸ್ತ್ರೀ : ಬಂಕಿಮಚಂದ್ರ, ಪುಟ 185

ಪಾತ್ರದ ಬಗ್ಗೆ ಹೆಚ್ಚಿನ ಗೌರವಾದರಗಳು ಕಂಡುಬರುತ್ತವೆ. ಮುಂದೆ ಅವರು 'ಮಾಧವಕರುಣಾ ವಿಲಾಸ'ವನ್ನು ಬರೆಯಲಿಕ್ಕೆ ಬಂಕಿಮರ ಈ ಮಾಧವಾಚಾರ್ಯನೂ ಪ್ರೇರಣೆ ನೀಡಿರಬಹುದು.

'ಮೃಣಾಲಿನಿ'ಯಲ್ಲಿ ಮನೋರಮೆಯ ಕರುಣಕಥೆ ಗಳಗನಾಥರ ಮನವನ್ನು ಹೆಚ್ಚಾಗಿ ಮಿಡಿದುದು ಸಹಜ. ಮೃಣಾಲಿನಿ, ಭಿಕ್ಷುಕಿ ಗಿರಿಜಾಯೆ ಕೂಡ ಅವಳಿಗಿಂತ ಒಂದು ರೀತಿಯಲ್ಲಿ ಸುದೈವಿಗಳೇ. ಮದುವೆಯ ರಾತ್ರಿಯೇ ಪತಿಯಿಂದ ಅಗಲಿದ ಅವಳು ಕೇವಲ ಸಹಗಮನಕ್ಕಾಗಿ ಮಾತ್ರ ಮದುವೆಯಾದಂತಾಯಿತು. ಭವಿಷ್ಯಶಾಸ್ತ್ರದಲ್ಲಿಯ ತಂದೆಯ ವಿಶ್ವಾಸವು ಮನೋ-ರಮೆಗೆ ದೊರೆಯಬಹುದಾಗಿದ್ದ ನಾಲ್ಕು ದಿನದ ಸುಖವನ್ನೂ ಕರಲಿಲ್ಲ. ಆದರೆ ಕೊನೆಗೂ ಆತನ ಭವಿಷ್ಯವೇ ನಿಜವಾಯಿತು. ಗಳಗನಾಥರು ಅವಳ ಈ ಕರುಣ ಕಥೆಗೆ ತುಸು ಸಾಹಸದ ಬಣ್ಣವನ್ನು ಬಳೆದು ಅದನ್ನು ಬೆಳೆಸಿದರು. ಆದರೆ ಇದರಿಂದ ಅವಳ ಪಾತ್ರನಿರೂಪಣೆಯಲ್ಲಿ ಅಸಹಜತೆಯೇ ಹೆಚ್ಚಾಯಿತು.

ಬಂಕಿಮಚಂದ್ರರ ಕಾದಂಬರಿಯ ಕೊನೆಯ ಭಾಗವನ್ನು ಗಳಗನಾಥರು ಹೀಗೆ ಬೆಳೆ-ಸಿದ್ದರೂ, ಉಳಿದೆಡೆಗಳಲ್ಲಿ ಅಲ್ಲಲ್ಲಿ ಕತ್ತರಿ ಪ್ರಯೋಗವನ್ನು ಮಾಡಿರುವರು. ಮುಖ್ಯವಾಗಿ ಬಂಕಿಮರ ವರ್ಣನೆಗಳನ್ನು ಗಳಗನಾಥರು ಮೊಟಕುಗೊಳಿಸಿರುವರು.

"ರಜನೀದತ್ತ ತಿಮಿರಾವರಣದಿಂದ ಗಂಗೆಯ ವಿಶಾಲ ಹೃದಯವು ಅಸ್ಪಷ್ಟವಾಯಿತು. ಸಭಾಮಂಡಲದಲ್ಲಿ ಪರಿಚಾರಕರ ಹಸ್ತಗಳಲ್ಲಿ ಜ್ವಲಿಸುವ ದೀಪಮಾಲೆಯ ಹಾಗೆ, ಅಥವಾ ಪ್ರಭಾತದಲ್ಲಿ ಉದ್ಯಾನಕುಸುಮ ಸಮೂಹದಂತೆ, ಆಕಾಶದಲ್ಲಿ ನಕ್ಷತ್ರಗಣವು ಅರಳಲು ಮೊದ-ಲಾಯಿತು. ಪ್ರಾಯಾಂಧಕಾರ ನದೀ ಹೃದಯದಲ್ಲಿ ಶೈತ ಸಮೀರಣವು ಸ್ವಲ್ಪ ಖರತರ ವೇಗದಿಂದ ಬೀಸಲು ಮೊದಲಾಯಿತು. ಅದರಿಂದ ರಮಣೀ ಹೃದಯದಲ್ಲಿ ನಾಯಕ ಸಂಸ್ಪರ್ಶಜನಿತ ಪ್ರಕಂಪದಂತೆ, ನದೀವಕ್ಷದಲ್ಲಿ ತರಂಗ ಏಳಲು ಮೊದಲಾಯಿತು...."[1] ಇದು ಬಂಕಿಮಚಂದ್ರರ ಗಂಗಾನದೀ ವರ್ಣನೆ. ಇಂಥ ಸಂಸ್ಕೃತ ಭೂಯಿಷ್ಠವಾದ, ಪಂಡಿತ-ಮಾನ್ಯವಾದ ದೀರ್ಘತರ ವರ್ಣನೆಗಳನ್ನು ಗಳಗನಾಥರು ಬಿಟ್ಟಿರುವರು.

'ಮೃಣಾಲಿನಿ'ಯಂತೆ ಉಳಿದ ಅನುವಾದಗಳನ್ನೂ ಗಳಗನಾಥರು ಹಲವೆಡೆ ಸಂಕ್ಷೇಪಿಸಿ-ದರು. ಅದರಿಂದ ಮೂಲಕಾದಂಬರಿಗಳ ಗಾತ್ರವನ್ನು ಕಿರಿದುಗೊಳಿಸಲು ಗಳಗನಾಥರು ಸಮರ್ಥ-ರಾದರು. ಕೆಲವು ನಿದರ್ಶನಗಳನ್ನು ನೋಡಬಹುದು.

'ಕನ್ನಡಿಗರ ಕರ್ಮಕಥೆ'ಯು ಆಪಟೆಯವರು 'ವಜ್ರಾಘಾತ ಅಥವಾ ವಿಜಯನಗರಚಾ ವಿನಾಶಕಾಲ' ಎಂಬುದರ ಅನುವಾದವಾಗಿದ್ದು, ಇದು ಮೂಲ ಕಾದಂಬರಿಯ 75% ರಷ್ಟು ದೀರ್ಘವಾಗಿದೆ. 'ಶಿವಪ್ರಭುವಿನ ಪುಣ್ಯ'ವು ಆಪಟೆಯವರ 'ಕೇವಳ ಸ್ವರಾಜ್ಯಾ ಸಾಠಿ' ಎಂಬುದರ ಅನುವಾದವಾಗಿದ್ದು, ಅದರ 65% ಇದ್ದರೆ, ಆಪಟೆಯವರ 'ಚಂದ್ರಗುಪ್ತ' ಎಂಬ ಕಾದಂಬರಿಯ ಆಧಾರದ ಮೇಲೆ ಬರೆದ 'ವೈಭವ'ವು ಕೇವಲ 60% ಮಾತ್ರವಿದೆ. 'ಸುರ್ಯೋದಯ', 'ರೂಪನಗರಚೀ ರಾಜಕನ್ಯಾ' ಮತ್ತು 'ಸೂರ್ಯಗ್ರಹಣ' ಕಾದಂಬರಿಗಳ ಆಧಾರದ ಮೇಲೆ ಗಳಗನಾಥರು ಕನ್ನಡದಲ್ಲಿ ಅನುವಾದಿಸಿದ 'ಮರಾಠರ ಅಭ್ಯುದಯ', 'ಕ್ಷಾತ್ರತೇಜ' ಮತ್ತು 'ಛತ್ರಪತಿ'ಗಳು ತಮ್ಮ ಮೂಲ ಕಾದಂಬರಿಗಳ 55% ಮಾತ್ರ ಇವೆ.

1. ಅದೇ, ಪುಟ 188.

ಇವೆಲ್ಲವುಗಳಿಗಿಂತಲೂ ಗಳಗನಾಥರು ಅತಿ ಸಂಕ್ಷಿಪ್ತವಾಗಿ ಅನುವಾದಿಸಿದ ಕಾದಂಬರಿಯೆಂದರೆ ಅವರ 'ಈಶ್ವರೀಸೂತ್ರ'. ಇದು ಆಪಟೆಯವರ 'ಉಷಃಕಾಲ'ದ ಕೇವಲ 36% ಮಾತ್ರವಿದೆ. ಹೀಗೆ ಒಟ್ಟಿನಲ್ಲಿ ಗಳಗನಾಥರ ಅನುವಾದಗಳೆಲ್ಲ ಮೂಲ ಕಾದಂಬರಿಗಳಿಗಿಂತ ಗಾತ್ರದಲ್ಲಿ ಚಿಕ್ಕ-ವಾಗಿಯೇ ಇವೆ.

ಹೀಗೆ ಮೂಲ ಕಾದಂಬರಿಗಳನ್ನು ಸಂಕ್ಷೇಪಗೊಳಿಸಿ ಅನುವಾದಿಸುವ ಗಳಗನಾಥರ ರೀತಿಯನ್ನು ಕೆಲವು ವಾಚಕರು ಮೆಚ್ಚಲಿಲ್ಲ. ಮೂಲಕೃತಿಯ ಅಕ್ಷರಶಃ ಭಾಷಾಂತರವನ್ನೇ ಅವರು ಬಯಸಿದರು. ಆಗಿನ ನೈಜಾಮು ಪ್ರಾಂತದ ಪಲಗಲದಿನ್ನಿ ಗ್ರಾಮದ ಗುಂಡೋ ತಿರುಮಲ ದೇಸಾಯಿ ಎಂಬವರು 'ಸದ್ಬೋಧ ಚಂದ್ರಿಕೆ'ಯ ಬಗ್ಗೆ, ಅದರಲ್ಲಿ ಪ್ರಕಟವಾಗುತ್ತಿರುವ ಲೇಖನಗಳ ಬಗ್ಗೆ ಮತ್ತು ಗಳಗನಾಥರ ಕಾದಂಬರಿಗಳ ಬಗ್ಗೆ 'ಸದ್ಬೋಧ ಚಂದ್ರಿಕೆ'ಯಲ್ಲಿ "ಚಂದ್ರಿಕೆಗೆ ಏನೆನ್ನುವರು ?" ಎಂಬ ವಾಚಕರ ಅಭಿಪ್ರಾಯಗಳ ಕಾಲಮ್ಮಿನಲ್ಲಿ (Column) ಒಂದು ದೀರ್ಘವಾದ ಪತ್ರವನ್ನು ಬರೆದಿದ್ದರು. ಅದರಲ್ಲಿ "ಗಳಗನಾಥ ಇವರು ಲೇಖದಲ್ಲಿ ಕಿಂಚಿತ್ ಬೇಸರವನ್ನು ತೋರ್ಪಡಿಸಹತ್ತಿದ್ದಾರೆ. ಇದಕ್ಕೆ ಉದಾಹರಣೆ — ಮ. ರಾ. ರಾ. ಆಪಟೆಯವರ ಕಾದಂಬರಿಗಳನ್ನು 'ಕಮಲ ಕುಮಾರಿ'ಯ ಹೊರತು ಅಕ್ಷರಶಃ ಭಾಷಾಂತರಿಸದೆ ಇದ್ದದ್ದು"[1] ಎಂದು ತಕರಾರು ಮಾಡಿದ್ದರು. ಇದು ಕೆಲವು ವಾಚಕರ ಪ್ರಾತಿನಿಧಿಕ ಅಭಿಪ್ರಾಯದಂತಿದೆ.

ಇದಕ್ಕೆ ಉತ್ತರವಾಗಿ ಗಳಗನಾಥರು "ಮ. ರಾ. ರಾ. ಆಪಟೆಯವರ ಕಾದಂಬರಿಗಳನ್ನು ಅಕ್ಷರಶಃ ಭಾಷಾಂತರ ಮಾಡತಕ್ಕದ್ದೆಂದು ನಮ್ಮ ಮಿತ್ರರು ಹೇಳುವರು. ವಾಚನಾಭಿರುಚಿಯ ಸಂಬಂಧದಿಂದ ಇರುವ ಕನ್ನಡಿಗರ ಸ್ಥಿತಿಯನ್ನೂ, ಪುಸ್ತಕ ಕೊಂಡುಕೊಳ್ಳುವ ಯೋಗ್ಯತೆಯನ್ನೂ ಅವರ ವಿಷಯದ ಆಕಲನ ಶಕ್ತಿಯನ್ನೂ, ಅಚ್ಚುಕಟ್ಟಿನ ವಿವೇಚನದ ಸಾಮರ್ಥ್ಯವನ್ನೂ, 'ಚಂದ್ರಿಕೆ'ಯ ಉದ್ದೇಶವನ್ನೂ 'ಚಂದ್ರಿಕೆ'ಯ ಚಾಲಕರಷ್ಟು ನಮ್ಮ ಮಿತ್ರರು ಅರಿತಿದ್ದರೆ, ಅವರು ಹೀಗೆ ಎಂದಿಗೂ ಬರೆಯುತ್ತಿದ್ದಿಲ್ಲ........'ಉಷಃಕಾಲ'ದ ಅಕ್ಷರಶಃ ಭಾಷಾಂತರವು ಎಷ್ಟು ದೊಡ್ಡದಾದೀತೆಂಬಿವೇ ಮೊದಲಾದ ಸಂಗತಿಗಳ ವಿಚಾರವನ್ನು ನಮ್ಮ ಮಿತ್ರರು ಮಾಡಿದರೆ, ನಮ್ಮ ಕಾದಂಬರಿಯ ಸಂಕೋಚಕ್ಕಾಗಿ ಅವರು ಮೂಗು ಮುರಿಯಲಿಕ್ಕಿಲ್ಲೆಂದು ನಮಗೆ ತೋರುತ್ತದೆ"[2] ಎಂದು ಬರೆದು ತಮ್ಮ ಅಡಚಣೆಗಳನ್ನು ವಿವರಿಸಿದರು. ಗಳಗನಾಥರ ಈ ನಿವೇದನೆಗೆ ಸ್ಪಷ್ಟೀಕರಣದ ಆವಶ್ಯಕತೆಯೇ ಇಲ್ಲ.

ಸಂಕ್ಷೇಪಾನುವಾದಗಳ ಬಗ್ಗೆ ಗಳಗನಾಥರು ತಮ್ಮ 'ಕ್ಷಾತ್ರತೇಜ'ದ ಪ್ರಸ್ತಾವನೆಯಲ್ಲಿ ಕೂಡ (ಜೂನ 1914 ರಲ್ಲಿ) ಪ್ರಸ್ತಾಪಿಸಿರುವರು. "ಈ ಪುಸ್ತಕವು ಮ. ರಾ. ರಾ. ಹರಿ ನಾರಾಯಣ ಆಪಟೆಯವರು ಮಹಾರಾಷ್ಟ್ರದಲ್ಲಿ ಬರೆದಿದ್ದ 'ರೂಪನಗರಚಿ ರಾಜಕನ್ಯಾ' ಎಂಬ ಐತಿಹಾಸಿಕ ಕಾದಂಬರಿಯ ಆಧಾರದಿಂದ ಬರೆದದ್ದಾಗಿದೆ.... ಪುಸ್ತಕವು ಮಿತಿಮೀರಿ ದೊಡ್ಡದಾಗದಂತೆಯೂ, ಕನ್ನಡ ವಾಚಕರಿಗೆ ಓದುವಾಗ ಬೇಸರವಾಗದಂತೆಯೂ ಮೂಲ ಕಾದಂಬರಿಯಲ್ಲಿಯ ಕೆಲವು ವಿಷಯವನ್ನು ಬಿಟ್ಟಿರುತ್ತದೆ. ಇದನ್ನು ಮಹಾರಾಷ್ಟ್ರ ಭಾಷೆಯನ್ನರಿತ ಕನ್ನಡಿಗರು, ಮೂಲ ಕಾದಂಬರಿಯನ್ನು ಮರ್ಮವರಿತು ಓದಿ ಮನಗಾಣಬಹುದು"[3] ಎಂದು ಹೇಳಿರುವರಲ್ಲದೆ

1. ಸದ್ಬೋಧ ಚಂದ್ರಿಕೆ, ಅಗಸ್ಟ - ಸಪ್ಟೆಂಬರ 1914, ಪುಟ 5
2. ಅದೇ, ಪುಟ 8–9 ('ಉಷಃಕಾಲ'ದ ಅಕ್ಷರಶಃ ಭಾಷಾಂತರವು 630 ಪುಟಗಳಾಗುತ್ತಿತ್ತು.)
3. ಗಳಗನಾಥ: ಕ್ಷಾತ್ರತೇಜ, ಪ್ರಸ್ತಾವನೆ, ಪುಟ 1

ತಮ್ಮ ಅನುವಾದಿತ ಕಾದಂಬರಿಯ ಗುಣಗಳ ಬಗ್ಗೆ ಆತ್ಮವಿಶ್ವಾಸವನ್ನೂ ವ್ಯಕ್ತಪಡಿಸಿರುವರು. "ಮಹಾರಾಷ್ಟ್ರವರಿಯದ ಕನ್ನಡಿಗರು, ಇದೊಂದು ಮನೋರಂಜಕ ನೈತಿಕ ಕಾದಂಬರಿಯು, ವಿಚಾರಪೂರ್ವಕವಾಗಿ ಮರ್ಮವರಿತು ಬರೆಯಲ್ಪಟ್ಟಿರುತ್ತದೆಂಬ ನಂಬಿಗೆಯಿಂದ ಸಮಾಧಾನ ಪಡಬೇಕಲ್ಲದೆ, ಇನ್ನೂ ಮೂಲ ಕಾದಂಬರಿಯಲ್ಲಿ ಎಷ್ಟು ಸವಿಯಿತ್ತೋ ಏನೋ ಎಂದು ಅಸಮಾಧಾನ ಪಡಬಾರದು"[1] ಎಂದೂ ನುಡಿದಿರುವರು.

ಅಂತೂ ಒಂದಲ್ಲ, ಅನೇಕ ಕಾರಣಗಳ ಮೂಲಕ ಗಳಗನಾಥರು ಮರಾಠಿ ಕಾದಂಬರಿಗಳ ಸಂಕ್ಷೇಪಾನುವಾದಕ್ಕೆ ತೊಡಗಿದರು.[2] ಆದರೆ ಅವರು ಎಲ್ಲಿಯೂ 'ಅನುವಾದ' ಪದವನ್ನು ಬಳಸಿಲ್ಲ. ನಿದರ್ಶನಕ್ಕಾಗಿ, ಅವರು ತಮ್ಮ ಕಾದಂಬರಿಗಳಿಗೆ ಬರೆದ ಪ್ರಸ್ತಾವನೆಯಲ್ಲಿಯ ಕೆಳಗಿನ ಕೆಲವು ಮಾತುಗಳನ್ನು ನೋಡಬಹುದು.

"ಈ ಕಾದಂಬರಿಯು (ಸಂಸಾರ ಸುಖ) ಬಂಗಾಲದ ಪ್ರಸಿದ್ಧ ಕಾದಂಬರಿಕಾರರಾದ ಶ್ರೀಯುತ ಬಾಬುಹರಿ ಸಧನ ಮುಕರ್ಜಿ ಇವರ 'ಖುಸರು' ಎಂಬ ಉತ್ಕೃಷ್ಟ ಕಾದಂಬರಿಯ ಆಧಾರದಿಂದ ಬರೆದದ್ದಾಗಿದ್ದರೂ...."

"ಈ ಪುಸ್ತಕವು ಮ. ರಾ. ರಾ. ಹರಿ ನಾರಾಯಣ ಆಪಟೆಯವರು ಮಹಾರಾಷ್ಟ್ರದಲ್ಲಿ ಬರೆದಿದ್ದ 'ರೂಪನಗರಚಿ ರಾಜಕನ್ಯಾ' ಎಂಬ ಐತಿಹಾಸಿಕ ಕಾದಂಬರಿಯ ಆಧಾರದಿಂದ ಬರೆದದ್ದಾಗಿರುತ್ತದೆ".

"ಇದು (ವೈಭವ) ಆಪಟೆ ಎಂಬವರ 'ಚಂದ್ರಗುಪ್ತ' ಎಂಬ ಕಾದಂಬರಿಯ ಆಧಾರದಿಂದ ಬರೆದದ್ದಾಗಿರುತ್ತದೆ".

"ಧಾರ್ಮಿಕ ತೇಜವೆಂಬ ಗೌರವದ ಈ ಕಾದಂಬರಿಯು ಮಹಾರಾಷ್ಟ್ರದಲ್ಲಿ ಬರೆದ 'ಛತ್ರ-ಸಾಲ'ವೆಂಬ ಕಾದಂಬರಿಯ ರೂಪಾಂತರವಾಗಿದೆ."

"ಇದು (ಕನ್ನಡಿಗರ ಕರ್ಮಕಥೆ).... 'ವಜ್ರಾಘಾತ' ವೆಂಬ ಕಾದಂಬರಿಯ ರೂಪಾಂತರ ವಾಗಿರುವದು".

"ಇದು (ಈಶ್ವರೀ ಸೂತ್ರ).... 'ಉಷಃಕಾಲ' ವೆಂಬ ಹೆಸರಿನ ಮರಾಠಿ ಕಾದಂಬರಿಯ ರುಚಿಕರ ಸಾರಶೋಷಣವಾಗಿರುತ್ತದೆ".

"ಈ ಕಾದಂಬರಿಗೆ (ಧರ್ಮ ರಹಸ್ಯ) ಮೂಲಧನವಾಗಿರುವ 'ಸಾಮ್ರಾಟ ಅಶೋಕ' ಮತ್ತು 'ಅಶೋಕ ಅಥವಾ ಆರ್ಯಾವೃತ್ತಾತಲಾ ಪಹಿಲಾ ಚಕ್ರವರ್ತಿ ರಾಜಾ' ಎಂಬ ಎರಡು ಮರಾಠಿ ಪುಸ್ತಕ...."

---

1. ಅದೇ, ಪುಟ 2
2. ವಾಚಕರ ದೃಷ್ಟಿಯಿಂದ ಗಳಗನಾಥರು ಮಾಡಿದ ಈ ಸಂಕ್ಷಿಪ್ತೀಕರಣವು ನಿಜವಾಗಿಯೂ ಸ್ವಾಗತಾರ್ಹ ವಾದುದು, ಸಮಂಜಸವಾದುದು. ಆಪಟೆಯವರ ಅತಿ ದೀರ್ಘವಾದ ಕಾದಂಬರಿಗಳ ಸಂಕ್ಷಿಪ್ತ ಆವೃತ್ತಿಗಳು ಮುಂದೆ ಮಹಾರಾಷ್ಟ್ರದಲ್ಲಿ ಕೂಡ ಬಂದುವು. 'ಕೇವಳ ಸ್ವರಾಜಾ ಸಾಠೀ', 'ಉಷಃಕಾಲ,' 'ಸೂರ್ಯೋದಯ' ಮೊದಲಾದ ಕಾದಂಬರಿಗಳ ಸಂಕ್ಷಿಪ್ತ ಆವೃತ್ತಿಗಳೇ ಹೆಚ್ಚು ಜನಪ್ರಿಯವಾದುವು. ಸಂಕ್ಷಿಪ್ತ ಆವೃತ್ತಿಯ ಈ ಪ್ರಯೋಜನವನ್ನು ಮೊದಲೇ ಗುರುತಿಸಿದ ಗಳಗನಾಥರ ಜಾಣತನವನ್ನು ಮೆಚ್ಚಬೇಕು.

"ಯೋಗ್ಯತಾಸಂಪನ್ನ ಮಹಾರಾಷ್ಟ್ರ ಲೇಖಕರಾದ ಮ. ರಾ. ರಾ. ನಾಗೇಶ ವಿನಾಯಕ ಬಾಪಟರವರ 'ಪಾನಿಪತಚಿ ಮೋಹೀಮ' ಎಂಬ ಕಾದಂಬರಿಯು ನಮ್ಮ ಈ ಕಾದಂಬರಿಯ (ಕುರುಕ್ಷೇತ್ರ) ಮೂಲಧನವಾಗಿರುವದು."

ಹೀಗೆ ಗಳಗನಾಥರು ತಮ್ಮ ಈ ಕಾದಂಬರಿಗಳನ್ನು 'ಆಧಾರಿತ', 'ರೂಪಾಂತರ' ಮತ್ತು ಸಾರಶೋಷಣ'ಗಳೆಂದು ಕರೆದರು. ಆಧಾರವನ್ನು ಕೆಲವು ಸಲ 'ಮೂಲಧನ'ವೆಂದೂ ಕರೆದರು. ಆದರೆ ಅವರು ರೂಪಾಂತರ ಎಂದು ಕರೆದಿರುವುದು ಅನುವಾದಗಳನ್ನೇ. ಹ್ಯಾಮ್ಲೆಟ್ ನಾಟಕವು 'ರಕ್ತಾಕ್ಷಿ'ಯಾಗಿ 'ರೂಪಾಂತರ'ವಾದಂತೆ ಗಳಗನಾಥರ ಯಾವ ಕಾದಂಬರಿಗಳೂ ರೂಪಾಂತರಗಳಾಗಿಲ್ಲ. 'ಕಮಲ ಕುಮಾರಿ'ಯಂತೆ ಭಾಷಾಂತರಿಸದೆ ಸಾಕಷ್ಟು ಸ್ವಾತಂತ್ರ್ಯ ವಹಿಸಿ ಅನುವಾದಿಸಿದ ಮುಕ್ತ ಭಾಷಾಂತರಗಳನ್ನೇ ಅವರು ರೂಪಾಂತರವೆಂದು ಕರೆದಿದ್ದಾರೆ; ಅಷ್ಟೇ.ಆದ್ದರಿಂದ ಈ ಕಾದಂಬರಿಗಳು ಭಾಷಾಂತರಗಳೂ ಅಲ್ಲ, ರೂಪಾಂತರಗಳೂ ಅಲ್ಲ; ಅನುವಾದಗಳು ಮಾತ್ರ ಆಗಿವೆ. ಇವುಗಳನ್ನು ಸಂಕ್ಷೇಪಾನುವಾದಗಳೆಂದೂ ಕರೆಯಬಹುದು. ಈ ಅನುವಾದ ಕಾರ್ಯ ತೀರ ಸಂಕ್ಷೇಪವಾದಾಗ ಗಳಗನಾಥರು ಅವುಗಳನ್ನು 'ಸಾರಶೋಷಣ' ಎಂದು ಕರೆದರು. 'ಈಶ್ವರೀಸೂತ್ರ'ವು 'ಉಷಃಕಾಲ'ದ ನಿಜವಾದ ಸಾರಶೋಷಣ.[1] ಅದು ಮೂಲ ಕಾದಂಬರಿಯ ಅರ್ಧಕ್ಕಿಂತಲೂ ಬಹಳ ಕಡಿಮೆ ಗಾತ್ರವುಳ್ಳದ್ದಾಗಿದೆ.

ಗಳಗನಾಥರು ತಮ್ಮ ಅನುವಾದಗಳಲ್ಲಿ ಮಾಡಿಕೊಂಡ ವ್ಯತ್ಯಾಸಗಳ ಸ್ವರೂಪವನ್ನು ಅರಿಯಲು, ಕೆಲವು ಅನುವಾದಗಳನ್ನು ಮೂಲ ಕಾದಂಬರಿಗಳ ಜೊತೆಗೆ ಹೋಲಿಸಿ ನೋಡ ಬಹುದು. ಅವರ ಅನುವಾದಗಳಲ್ಲಿ ಅತಿ ವಿಸ್ತೃತವಾದ ಅಂದರೆ ಮೂಲಕಾದಂಬರಿಯ ಸುಮಾರು ನೂರಕ್ಕೆ 75 ಭಾಗವನ್ನು ಉಳಿಸಿಕೊಂಡ 'ಕನ್ನಡಿಗರ ಕರ್ಮಕಥೆ' ಮತ್ತು ಮೂಲ ಕಾದಂಬರಿಯ ಕೇವಲ ನೂರಕ್ಕೆ 36 ಭಾಗವನ್ನು ಮಾತ್ರ ಉಳಿಸಿಕೊಂಡು ತೀರ ಸಂಕ್ಷಿಪ್ತಾನುವಾದ ವಾಗಿರುವ 'ಉಷಃಕಾಲ' ಈ ಎರಡೂ ಕಾದಂಬರಿಗಳನ್ನು ಪ್ರಾತಿನಿಧಿಕವೆಂದು ಪರೀಕ್ಷಿಸ ಬಹುದಾಗಿದೆ.

ಕಾದಂಬರಿಯ ಅನುವಾದಕನು ಮೂಲದಿಂದ ಹೆಚ್ಚುಕಡಿಮೆ ಮಾಡಿಕೊಳ್ಳಬಹುದಾದ ಪ್ರಸಂಗಗಳಲ್ಲಿ ಮುಖ್ಯವಾದವುಗಳು ಹೀಗಿರಬಹುದು. ಮೂಲದ ಸನ್ನಿವೇಶಗಳಲ್ಲಿ ಕೆಲವನ್ನು ಕೈಬಿಡಬಹುದು, ಸಂಕ್ಷೇಪಿಸಬಹುದು ಅಥವಾ ವಿಸ್ತರಿಸಬಹುದು. ಅದರಂತೆ ಮೂಲದ ವರ್ಣನೆಗಳ ಮತ್ತು ಪಾತ್ರಗಳ ವಿಷಯದಲ್ಲೂ ಇಂಥ ಬದಲಾವಣೆಗಳನ್ನು ಮಾಡಿಕೊಳ್ಳ ಬಹುದು. ಈ ವ್ಯತ್ಯಾಸಗಳನ್ನು ಮಾಡಿಕೊಳ್ಳುವ ಬಗ್ಗೆ ನಿರ್ದಿಷ್ಟವಾದ ಯಾವ ತತ್ತ್ವಗಳೂ ಇಲ್ಲ. ಅನುವಾದಕನ ಪ್ರತಿಭೆ ಮತ್ತು ಔಚಿತ್ಯ–ಪ್ರಜ್ಞೆಗಳನ್ನೇ ಅವಲಂಬಿಸಿ ಈ ವ್ಯತ್ಯಾಸಗಳು ಗುಣದೋಷವಾಗಿ ಪರಿಣಮಿಸುತ್ತವೆ. ಒಂದು ಸನ್ನಿವೇಶದ, ಪಾತ್ರದ ಅಥವಾ ವರ್ಣನೆಯ ಸಂಕೋಚವನ್ನೋ ವಿಕಸನವನ್ನೋ ಮಾಡುವ–ಬಿಡುವ ನಿರ್ಣಯವನ್ನು ಅನುವಾದಕನೇ ಕೈಕೊಳ್ಳಬೇಕಾಗುತ್ತದೆ. ಅದರಿಂದ ಆ ಕಾದಂಬರಿಯ ಗುಣ ಹೆಚ್ಚಾಗದಿದ್ದರೂ, ಕಡಿಮೆ ಯಾಗದಂತೆ ಅತ ನೋಡಿಕೊಳ್ಳುವುದು ಆವಶ್ಯಕವಾಗುತ್ತದೆ. ಗಳಗನಾಥರು ತಮ್ಮ ಅನುವಾದ

1. ಪರಿಪರ ಕವಿಯ 'ಗಿರಿಜಾ ಕಲ್ಯಾಣ'ವನ್ನು ಗಳಗನಾಥರು ಸುಲಭ ಗದ್ಯದಲ್ಲಿ ಕೇವಲ 52 ಪುಟ ಗಳಲ್ಲಿ "ಸಂಗ್ರಹಿಸಿ", ತಮ್ಮನ್ನು "ಸಾರಶೋಷಕನಾದ ವಿಧೇಯ–ಗಳಗನಾಥ" ಎಂದು ಕರೆದು ಕೊಂಡುದನ್ನೂ ಇಲ್ಲಿ ನೆನೆಯಬಹುದಾಗಿದೆ.

ಗಳಲ್ಲಿ ಯಾವ ಪ್ರತಿಭೆಯನ್ನು, ಔಚಿತ್ಯಪ್ರಜ್ಞೆಯನ್ನು ಮತ್ತು ಸ್ವೋಪಜ್ಞತೆಯನ್ನು ತೋರಿದ್ದಾರೆ, ಅಥವಾ ಎಷ್ಟು ವಿಫಲರಾಗಿದ್ದಾರೆ ಎಂಬುದರ ವಿಶ್ಲೇಷಣೆಯನ್ನು ಮಾಡುವುದು ಅವಶ್ಯ.

ಗಳಗನಾಥರ **'ಕನ್ನಡಿಗರ ಕರ್ಮಕಥೆ'** ಅಥವಾ **'ವಿಜಯನಗರ ರಾಜ್ಯದ ನಾಶ'** (1916) ಎಂಬುದು ಹರಿ ನಾರಾಯಣ ಆಪಟೆಯವರ 'ವಜ್ರಾಘಾತ' ಅಥವಾ 'ವಿಜಯನಗರಚಾ ವಿನಾಶಕಾಲ' (1915) ಎಂಬುದರ ಅನುವಾದ. Robert Sewel ಅವರ 'A Forgotten Empire' ಎಂಬ ಗ್ರಂಥದ 14 ಮತ್ತು 15ನೆಯ ಪ್ರಕರಣಗಳು ಆಪಟೆಯವರ ಕಾದಂಬರಿಗೆ ಮೂಲ ಐತಿಹಾಸಿಕ ಹಿನ್ನೆಲೆಯನ್ನು ಒದಗಿಸಿವೆ. ಮೋಹರಜಾನ. ರಣಮಸ್ತಖಾನ ಮತ್ತು ನೂರಜಹಾನ ಮೊದಲಾದ ಪಾತ್ರಸೃಷ್ಟಿಯಲ್ಲಿ ಆಪಟೆಯವರು ದಂತಕಥೆಯನ್ನೂ ತಮ್ಮ ಕಲ್ಪಕತೆಯನ್ನೂ ಅವಲಂಬಿಸಿರುವರು. ವಿಜಯನಗರದ ನಾಶಕ್ಕೆ ಕಾರಣಗಳೇನೆಂಬುದನ್ನು ಇತಿಹಾಸ ಪಂಡಿತರು ಬೇರೆ ಬೇರೆಯಾಗಿ ಹೇಳಬಹುದು. ಆದರೆ ಕಲ್ಪಕ ಬುದ್ಧಿಯ ಆಪಟೆಯವರು ರಾಮರಾಜನ ಅಪಾತ್ರ ಪ್ರೇಮ ಮತ್ತು ಆತನ ಸ್ವಾರ್ಥ ಸಾಧಕ, ಕೃತಘ್ನ ಗುಣಗಳೇ ಆತನ ನಾಶಕ್ಕಲ್ಲದೆ, ಇಡೀ ರಾಜ್ಯದ ನಾಶಕ್ಕೆ ಹೇಗೆ ಕಾರಣವಾದುವೆಂಬುದನ್ನು ಅತ್ಯಂತ ಹೃದ್ಯವಾಗಿ ಚಿತ್ರಿಸಿರುವರು.

ತರುಣ ರಾಮರಾಜನು, ಮೋಹರಜಾನ ಎಂಬ ಮುಸಲ್ಮಾನ ತರುಣಿಯನ್ನು ಪ್ರೇಮಿಸಿದ; ಅವಳನ್ನೇ ಮದುವೆಯಾಗುವುದಾಗಿ ವಚನವಿತ್ತ. ಆದರೆ ರಾಜನ ಅಳಿಯನಾಗುವ ಅವಕಾಶ ದೊರೆತಾಗ ಮಹತ್ವಾಕಾಂಕ್ಷಿಯಾದ ರಾಮರಾಯ ಕೃಷ್ಣರಾಜನ ಮಗಳನ್ನು ಕೈಹಿಡಿದು ಮೋಹರಜಾನಳನ್ನು ನಿರ್ಲಕ್ಷಿಸಿದ. ಗರ್ಭಿಣಿಯಾಗಿದ್ದ ಮೋಹರಜಾನಳ ದುಃಖವು ದ್ವೇಷವಾಗಿ ಪರಿಣಮಿಸಿ, ಅವಳು ವಿಜಯನಗರವನ್ನು ತ್ಯಜಿಸಿ ಹೋದಳು. ವಿಶ್ವಾಸಘಾತಮಾಡಿದ ರಾಮರಾಯನ ಮೇಲೆ ಸೇಡು ತೀರಿಸಿಕೊಳ್ಳಬಯಸಿದ ಮೋಹರಜಾನ ತನ್ನ ಮಗ ರಣಮಸ್ತ, ಖಾನನು ವಿಜಾಪೂರ ಸುಲ್ತಾನನ ವಕೀಲನಾಗಿ ವಿಜಯನಗರಕ್ಕೆ ಬರುವಂತೆ ಪ್ರಯತ್ನಿಸಿದಳು. ರಣಮಸ್ತಖಾನನ ದ್ವೇಷಕ್ಕೆ ನೂರಜಹಾನಳೂ ಕಾರಣಳಾದಳು. ಅವಳ ಪ್ರೀತಿಗೋಸ್ಕರವಾಗಿ ರಣಮಸ್ತಖಾನ ರಾಮರಾಯನ ತಲೆಯನ್ನು ಕತ್ತರಿಸಿ ತರುವ ಪ್ರತಿಜ್ಞೆ ಕೈಕೊಂಡು, ಅದರಂತೆ ಯುಕ್ತಿ–ಕುಯುಕ್ತಿಗಳಿಂದ ಅದನ್ನು ಪೂರೈಸಿದ. ಆದರೆ ತಾನು ಕೊಯ್ದು ಕುತ್ತಿಗೆ ತನ್ನ ತಂದೆಯದೆಂದು ಆತನಿಗೆ ತೀರ ತಡವಾಗಿ ತಿಳಿಯಿತು. ತಾಯಿ–ಮಗ–ಪ್ರೇಯಸಿ ಎಲ್ಲರೂ ಕೊನೆಗೆ ಪ್ರಾಣತ್ಯಾಗ ಮಾಡುವಂತಾಯಿತು.

ಆಪಟೆಯವರ ಕಾದಂಬರಿಗೆ ಇತಿಹಾಸಕ್ಕಿಂತ ದಂತಕಥೆಯೇ ಮಹತ್ವದ ಆಕರವಾಗಿದೆ. ವಿಜಾಪೂರ, ಗೋವಳಕೊಂಡ, ಬೀದರ, ಅಮ್ಮದನಗರಗಳ ಸುಲ್ತಾನರು ಒಟ್ಟಾಗಿ ಬಂದು ವಿಜಯನಗರವನ್ನು ಮುತ್ತಿದರು. ರಾಮರಾಯ ಯುದ್ಧದಲ್ಲಿ ಸೋತ. ಮಹಮ್ಮದೀಯರು ವಿಜಯನಗರವನ್ನು ಹಾಳುಮಾಡಿದರು–ಎಂಬುದು ಇತಿಹಾಸ. ಈ ಸರ್ವನಾಶಕ್ಕೆ ರಾಮರಾಯನ ವ್ಯಕ್ತಿತ್ವ ಹೇಗೆ ಕಾರಣವಾಯಿತೆಂಬುದನ್ನು ಆಪಟೆಯವರು ಕಲಾತ್ಮಕವಾಗಿ ನಿರೂಪಿಸಿರುವರು. ಗಳಗನಾಥರು ಈ ಕಾದಂಬರಿಯನ್ನು ಬಹುವಾಗಿ ಮೆಚ್ಚಿ ಶ್ರದ್ಧೆಯಿಂದ ಅನುವಾದಿಸಿವರು.

ಈ ಕಾದಂಬರಿಯಲ್ಲಿ ಗಳಗನಾಥರು ಅಲ್ಲಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿರುವರು. ಕಾದಂಬರಿಯ ಹೆಸರಿನಿಂದಲೇ ಈ ಮಾರ್ಪಾಡು ಆರಂಭವಾಗುತ್ತದೆ. ಆಪಟೆ

ಯವರಿಗೆ 'ವಜ್ರಾಘಾತ'ವಾದುದು ಗಳಗನಾಥರಿಗೆ 'ಕನ್ನಡಿಗರ ಕರ್ಮಕಥೆ'ಯಾಗಿ ಕಂಡಿತು. ಆದರೂ ಈ ಕಾದಂಬರಿಯಲ್ಲಿ ಗಳಗನಾಥರು ಮಾಡಿಕೊಂಡ ವ್ಯತ್ಯಾಸಗಳು ಹೆಚ್ಚಾಗಿಲ್ಲ. ಗಳಗನಾಥರು ಕಾದಂಬರಿಯನ್ನು, ವಾಚನೀಯತೆಗೆ ಕುಂದು ಬಾರದಂತೆ, ಸಂಕ್ಷೇಪಿಸಿರುವರು. ಕೆಲವು ಸನ್ನಿವೇಶಗಳನ್ನು ಹಿಂದು-ಮುಂದು ಮಾಡಿಕೊಂಡುದೂ ಉಂಟು. ಕೆಲವೆಡೆ ಮಾತ್ರ ಗಳಗನಾಥರು ಆಪಟೆಯವರ ವರ್ಣನೆಗಳನ್ನು ಬಿಟ್ಟುಕೊಟ್ಟಿದ್ದಾರೆ. ಅದರಂತೆ ಗಳಗನಾಥರ ಕೈಗಂಟು ಏನೂ ಇಲ್ಲ ಎನ್ನುವಂತೆಯೂ ಇಲ್ಲ.

ರಾಮರಾಯ ಮತ್ತು ಮೇಹರಜಾನ ಇವರು ಬೆಳುದಿಂಗಳ ಸುಂದರ ರಾತ್ರಿಯಲ್ಲಿ ಆ ಆಹ್ಲಾದಕರವಾದ ಕುಂಜವನದಲ್ಲಿ ನೌಕಾವಿಹಾರ ಮಾಡುತ್ತ ಕಾಲ ಕಳೆದ ರಮ್ಯ ವರ್ಣನೆ-ಯೊಂದಿಗೆ 'ವಜ್ರಾಘಾತ'ವು ಆರಂಭವಾಗುತ್ತದೆ. ಆದರೆ 'ಕರ್ಮಕಥೆ'ಯು ರಾಮರಾಯನು ಹುಲಿಯ ಬೇಟೆಗೆ ಹೋದಾಗ ಮೇಹರಜಾನಳನ್ನು ಪಡೆದುಕೊಂಡ ಸನ್ನಿವೇಶದಿಂದ ಆರಂಭ ವಾಗುತ್ತದೆ. ಆಪಟೆಯವರ ಆರಂಭವು ಕಲಾತ್ಮಕವೂ ರಮ್ಯವೂ ಆಗಿದ್ದರೆ, ಗಳಗನಾಥರ ಆರಂಭವು ಸಾಂಪ್ರದಾಯಿಕವಾಗಿ ಕಾಣುತ್ತದೆ. ಆಪಟೆಯವರು ತಮ್ಮ ಕಾದಂಬರಿಯ 'ರಾಮ ರಾಯನ ಜಾಗೃತೀ ಸ್ವಪ್ನಗಳು' ಎಂಬ 27ನೆಯ ಪ್ರಕರಣದಲ್ಲಿ ಸಿಂಹಾವಲೋಕನ ಕ್ರಮದಿಂದ ಹೇಳುವ ರಾಮರಾಯ ಮತ್ತು ಮೇಹರಜಾನ ಇವರ ಪ್ರಥಮ ದರ್ಶನದ ಕಥೆಯನ್ನು ಗಳಗನಾಥರು ಆರಂಭವಲ್ಲಿಯೇ ಹೇಳಿಬಿಟ್ಟಿರುವರು. ಆಪಟೆಯವರ ಕಥಾನಿರೂಪಣಾತಂತ್ರ ದಲ್ಲಿರುವ ನಾವೀನ್ಯವನ್ನು ಗಳಗನಾಥರು ಸ್ವೀಕರಿಸಿಲ್ಲ. ತಮ್ಮ ವಾಚಕರ ಗ್ರಹಣಶಕ್ತಿಯ ಬಗ್ಗೆ ಗಳಗನಾಥರು ಸಂದೇಹಪಟ್ಟು, ಕಥೆಯನ್ನು ಹಿಂದುಮುಂದಾಗಿ ಹೇಳಿದರೆ ವಾಚಕರಿಗೆ ತಿಳಿಯಲು ತೊಂದರೆಯಾಗಬಹುದೆಂದು ಭಾವಿಸಿರಬಹುದು. ಗಳಗನಾಥರು ಕಥೆ ಘಟಿಸುತ್ತ ಹೋದ ಕ್ರಮದಲ್ಲಿಯೇ ನಿರೂಪಿಸಿರುವುದರಿಂದ, ಆಪಟೆಯವರ ಮೊದಲನೆಯ ಪ್ರಕರಣವು ಗಳಗನಾಥರಲ್ಲಿ ಮೂರನೆಯ ಪ್ರಕರಣವಾಯಿತು. ಆದರೆ 'ನೂರಜಹಾನಳ ಸಾಹಸ' (ಪ್ರಕರಣ-30)ದ ಕಥೆ ಮಾತ್ರ ತದ್ವಿರುದ್ಧವಾಗಿ ನಿರೂಪಿತವಾಗಿದೆ. ಆಪಟೆಯವರು ಘಟನೆಗಳನ್ನು ಕಾಲಕ್ರಮದಲ್ಲಿಯೇ ಹೇಳಿದ್ದರೆ, ಗಳಗನಾಥರು ತುಸು ತಿರುವು-ಮುರುವಾಗಿ ಹೇಳಿರುವರು.

ತನ್ನ ಮನೆಯವರೆಲ್ಲ ವಿಜಯನಗರದ ವಿರುದ್ಧ ಯುದ್ಧಕ್ಕೆ ತೆರಳಿದಾಗ ನೂರಜಹಾನ ಕೂಡ ಪುರುಷವೇಷ ಧರಿಸಿ ವಿಜಾಪುರದಿಂದ ಹೊರಟು, ದಾರಿಯಲ್ಲಿ ಹಿಂದೂ ಸೈನಿಕರ ಕೈಯಲ್ಲಿ ಸಿಕ್ಕು, ರಾಮರಾಜನ ಎದುರಿಗೆ ಹೋಗಿ ನಿಲ್ಲಬೇಕಾಗಿ ಬಂದುದನ್ನೂ ಆತ ಅವಳನ್ನು ಮೇಹರಜಾನಳ ಹತ್ತರ ಕುಂಜವನಕ್ಕೆ ಕಳಿಸಿದುದನ್ನೂ ಆಪಟೆಯವರು ಅನುಕ್ರಮವಾಗಿ ಬಣ್ಣಿಸಿರುವರು. ಆದರೆ ಗಳಗನಾಥರು ಹಾಗೆ ಮಾಡಿಲ್ಲ. ಮೇಹರಜಾನಳ ಕಡೆಗೆ ರಾಮರಾಜ ಒಬ್ಬ ತರುಣಿಯನ್ನು ಕಳಿಸಿದನೆಂದೂ, ಅವಳನ್ನು ಕಂಡು ಮೇಹರ್ಜಾನ ಸಿಟ್ಟಾದಳೆಂದೂ, ಅನಂತರ ನೂರಜಹಾನಳ ಸಾಹಸದ ಕಥೆಯನ್ನು ಅವಳ ಬಾಯಿಯಿಂದಲೇ ಕೇಳಿ ತಿಳಿದಾಗ, ಅವಳ ಬಗ್ಗೆ ಸಹಾನುಭೂತಿಯನ್ನು ತೋರಿದಳೆಂದೂ ಬರೆದಿರುವರು. ಇಲ್ಲಿ ಗಳಗನಾಥರ ನಿರೂಪಣೆ ಹೆಚ್ಚು ನಾಟಕೀಯವಾಗಿದೆ. ಗಳಗನಾಥರ ಈ ಬದಲಾವಣೆ ನಿಜವಾಗಿಯೂ ಕಲಾತ್ಮಕವಾಗಿದೆ.

ಆಪಟೆಯವರ ನಿರೂಪಣೆಯಲ್ಲಿಯ ವಿವರಗಳನ್ನು ಹಲವು ಸಲ ಗಳಗನಾಥರು

ಸಂಕ್ಷೇಪಿಸಿರುವರು. 'ಸ್ತ್ರೀ ಸಾಹಸ' ಎಂಬ 5ನೆಯ ಪ್ರಕರಣದಲ್ಲಿ 'ದರಗಾ'ದ ಹೊರವಲಯದಲ್ಲಿ ಧನಮಲ್ಲ ಗಾಢನಿದ್ರೆಯಿಂದ ತಡವಾಗಿ ಎಚ್ಚತ್ತುದನ್ನು ಗಳಗನಾಥರು,

"....ಆ ನಿಶ್ಚಿಂತ ಪುರುಷನಿಗೆ ಗಾಢವಾದ ನಿದ್ರೆಯು ಹತ್ತಿತು. ತಾಸಾಯಿತು, ಎರಡು ತಾಸಾಯಿತು, ಮೂರು ತಾಸಾಯಿತು; ಆದರೂ ಧನಮಲ್ಲನಿಗೆ ಎಚ್ಚರವಾಗಲಿಲ್ಲ. ಮುಂದೆ ಒಂಭತ್ತು ತಾಸಿನ ಸುಮಾರಕ್ಕೆ ಆತನಿಗೆ ಪಕ್ಕನೆ ಎಚ್ಚರಿಕೆಯಾಯಿತು"[1] ಎಂದು ಕೇವಲ ಮೂರು ವಾಕ್ಯಗಳಲ್ಲಿ ಬಣ್ಣಿಸಿರುವರು. ಆಪಟೆಯವರಾದರೆ, ಗಾಢ ನಿದ್ರೆಯಲ್ಲಿ ಮುಳುಗಿದ ಧನಮಲ್ಲನಿಗೆ ಎಚ್ಚರವಾಗಿ ಆತ ಕಾರ್ಯ ಪ್ರವೃತ್ತನಾಗಲಿಕ್ಕೆ ತಡವಾಗಲು ಕಾರಣವೇನಾಯಿತೆಂಬುದನ್ನು ವಿವರವಾಗಿ ಎರಡು ವಾಕ್ಯವೃಂದಗಳಲ್ಲಿ ಬಣ್ಣಿಸಿರುವರು. ಇಲ್ಲಿ ಗಳಗನಾಥರ ಸಂಕ್ಷೇಪದ ಬಗ್ಗೆ ಯಾವ ಆಕ್ಷೇಪಗಳನ್ನೂ ಎತ್ತುವಂತಿಲ್ಲ. ಅಷ್ಟೇ ಅಲ್ಲ, ಆಪಟೆಯವರ ವಿವರಗಳನ್ನು ಒಂದು ದೃಷ್ಟಿಯಿಂದ ಅನಾವಶ್ಯಕ ವಿವರಗಳೆಂದೇ ಕರೆಯಬಹುದಾಗಿದೆ. ಅದರಂತೆ ನಿದ್ರೆಯ ಬಗ್ಗೆ ಆಪಟೆಯವರು ಮಾಡಿದ ಚರ್ಚೆಯನ್ನು (ಪುಟ 40) ಗಳಗನಾಥರು ಎರಡೇ ವಾಕ್ಯಗಳಲ್ಲಿ ಹೇಳಿಬಿಟ್ಟು (ಪುಟ 40) ಮುಂದಿನ ಕಥೆಗೆ ತೊಡಗಿರುವುದೂ ಉಚಿತವೇ ಆಗಿದೆ.

'ಕುಂಜವನಾತ'ದಿಂದ 'ಉಪಸಂಹಾರ'ದ ವರೆಗಿನ ಮೂಲ 59 ಪ್ರಕರಣಗಳನ್ನು ಗಳಗನಾಥರು ಕೇವಲ 29 ಪ್ರಕರಣಗಳಲ್ಲಿ ಸಂಗ್ರಹಿಸಿರುವರು. ಅದಕ್ಕಾಗಿ ಅವರು ಎರಡು-ಮೂರು ಪ್ರಕರಣಗಲ್ಲಿಯ ಕಥೆಯನ್ನು ಒಂದೇ ಪ್ರಕರಣದಲ್ಲಿ ಅಳವಡಿಸಿರುವರು. 'ಸಂವಾದ' ಮತ್ತು 'ಪ್ರತಿಜ್ಞಾ' ಎಂಬೆರಡು ಪ್ರಕರಣಗಳನ್ನು ಗಳಗನಾಥರು 'ಪ್ರತಿಜ್ಞೆ' ಎಂಬ ಒಂದೇ ಪ್ರಕರಣದಲ್ಲಿ ಸಂಗ್ರಹಿಸಿರುವರು. ಅದರಂತೆ 'ವಿಜಾಪುರಾಹೂನ ಪರತ ಆಲ್ಯಾವರ', 'ರಾಮರಾಜಾ ವ ರಣಮಸ್ತಾಖಾನ' ಮತ್ತು 'ರಾಮರಾಜಾ ಚಕಿತ ಝಾಲಾ' ಇವು ಗಳಗನಾಥರ 'ಒಳಸಂಚಿ'ನಲ್ಲಿ ಸಮಾವೇಶವಾಗಿ ಬಿಟ್ಟಿವೆ. ಅದೇ ರೀತಿಯಲ್ಲಿ 'ರಾಮರಾಜಾ ಕುಂಜವನಾತ ಜಾತೋ' ಮತ್ತು 'ಅಪೂರ್ವಭೇಟ' ಇವುಗಳನ್ನು ಗಳಗನಾಥರು 'ಆತ್ಮಹತ್ಯೋಪಕ್ರಮ'ದಲ್ಲಿ ಸಂಗ್ರಹಿಸಿರುವರು. ಅದರಂತೆ 'ಶೇವಟಚಾ ಖಲಿತಾ' ಮತ್ತು 'ರಾಮರಾಜಾಚೆ ಉತ್ತರ'ಗಳು 'ಬಾದಶಹನ ಪತ್ರ'ದಲ್ಲಿಯೂ, 'ರಾಮರಾಜಾಚಾ ಶೇವಟ' ಮತ್ತು 'ಕುಂಜವನಾತ'ಗಳು 'ದಂಪತಿಗಳ ಅಂತವು' ಎಂಬುದರಲ್ಲಿಯೂ, 'ದುಸರೀ ಜಲಸಮಾಧಿ' ಮತ್ತು 'ಉಪಸಂಹಾರ'ಗಳು 'ಸರ್ವಸ್ವದ ನಾಶ' ಎಂಬ ಒಂದೇ ಪ್ರಕರಣದಲ್ಲಿಯೂ ನಿರೂಪಿತವಾಗಿವೆ.

ಹೀಗೆ ಬೇರೆ ಬೇರೆ ಪ್ರಕರಣಗಳಲ್ಲಿ ಪಸರಿಸಿರುವ ಕಥಾನಕವನ್ನು ಗಳಗನಾಥರು ಸಂಕ್ಷೇಪಿಸಿದಂತೆ, ಕೆಲವೊಂದು ವರ್ಣನೆಗಳನ್ನು ಚುಟುಕಿನಲ್ಲಿ ಮುಗಿಸಿಬಿಟ್ಟಿರುವರು. ನೂರಜಹಾನಳ ಬುರಖಾವನ್ನು ತೆಗೆಯಿಸಿದ ತರುವಾಯ ರಾಮರಾಯ ತಾನು ಮಾಡಿದುದು ಸರಿಯಾಯಿತೇ ಎಂದು ತನ್ನಲ್ಲಿಯೇ ವಿಚಾರಕ್ಕೆ ತೊಡಗುವನು. ಅವನ ಮನಸ್ಸಿನ ಆಂದೋಲನದ ಚಿತ್ರವನ್ನು ಆಪಟೆಯವರು 'ರಾಮರಾಜಾಚೆ ಮನ'ಎಂಬ ಒಂದು ಇಡೀ ಪ್ರಕರಣದಲ್ಲಿಯೇ ನಿರೂಪಿಸಿರುವರು. ಗಳಗನಾಥರು ಅವನ ವಿಚಾರದ ತಾಕಲಾಟವನ್ನು ಕೇವಲ ಎರಡು ವಾಕ್ಯವೃಂದಗಳಲ್ಲಿ ವಿವರಿಸಿರುವರು. ಅದರಂತೆ ಮಗ ರಣಮಸ್ತಖಾನನ ವಿಕ್ಷಿಪ್ತ ವರ್ತನೆಯನ್ನು ಕಂಡು, ತಾನು ಆತನಿಗೆ ಅವನ ಜನನವೃತ್ತಾಂತವನ್ನು ಹೇಳಿಬಿಟ್ಟಿದ್ದರೆ ಒಳಿತಾಗುತ್ತಿತ್ತೋ ಏನೋ. ಈಗ ಏನಾಗಬಹುದು ಎಂದು ಮುಂತಾಗಿ ವಿಚಾರದ ತುಮುಲದಲ್ಲಿ ಸಿಕ್ಕಿಬಿದ್ದ 'ಮಾಸಾಹೇಬ'ಳ

1. ಗಳಗನಾಥ : ಕನ್ನಡಿಗರ ಕರ್ಮಕಥೆ. ಪುಟ 62

ಚಿತ್ರಣವನ್ನು ಆಪಟೆಯವರು ಮೂರು–ನಾಲ್ಕು ಪುಟಗಳಲ್ಲಿ ವಿಸ್ತರಿಸಿದ್ದರೆ, ಗಳಗನಾಥರು "ಈ ಮೇರೆಗೆ ಮಾಸಾಹೇಬರ ಮನಸ್ಸಿನಲ್ಲಿ ಹಲವು ವಿಚಾರಗಳು ಉತ್ಪನ್ನವಾದುವು" (ಪುಟ 236) ಎಂದು ಸಂಕ್ಷೇಪವಾಗಿಯೇ ತಿಳಿಸಿಬಿಡುವರು. ಹೀಗೆ ಪಾತ್ರಗಳ ಚಿತ್ತಭಿತ್ತಿಯಲ್ಲಿ ನಡೆದ ನಾಟಕವನ್ನು ಗಳಗನಾಥರು ಚುಟುಕಾಗಿ ತಿಳಿಸಿರುವುದು ಆಯಾ ವ್ಯಕ್ತಿಗಳ ಮನೋವಿಶ್ಲೇಷಣೆಗೆ ಅಡ್ಡಿಯಾದಂತಾಗಿದೆ. ಆದರೆ ಆ ವ್ಯಕ್ತಿಗಳ ಮನದಲ್ಲಿಯ ವಿಚಾರಗಳನ್ನು ಅವರು ಸ್ವಲ್ಪದರಲ್ಲಿಯೇ ಆದರೂ ಸ್ಪಷ್ಟವಾಗಿ ಹೇಳಿಬಿಟ್ಟು ಮುಂದಿನ ಕಥೆಗೆ ತೊಡಗುವುದನ್ನು ನೋಡಿದರೆ, ಅವರ ದೃಷ್ಟಿ ಹೆಚ್ಚಾಗಿ ಕಥಾನಕದ ಮೇಲೆಯೇ ಇದೆಯೆಂಬುದು ವ್ಯಕ್ತವಾಗುತ್ತದೆ. ಇದರಿಂದ ಪಾತ್ರಗಳ ಮನೋವಿಶ್ಲೇಷಣೆಗೆ ಅವಕಾಶ ಕಡಿಮೆಯಾಗಿದೆ.

ಕುಂಜವನವನ್ನು ತ್ಯಜಿಸಿ ದರಗಾದಲ್ಲಿ ತಪ್ಪಿಸಿಕೊಂಡು ಹೋದ ಮೇಹರಜಾನ ಮತ್ತು ಮಾರ್ಜಿನೇ ಇವರು ಏನಾದರು, ಎಲ್ಲಿ ಹೋದರು, ಮಾಸಾಹೇಬ ಮತ್ತು ಲಿಲ್ಲಿ ಎಂಬ ಹೆಸರುಗಳಿಂದ ರಣಮಸ್ತಖಾನನ ಜೊತೆಗೆ ಪುನಃ ಕುಂಜವನಕ್ಕೆ ಬರುವ ವರೆಗೆ ಏನೇನು ನಡೆಯಿತೆಂಬುದನ್ನು ಆಪಟೆಯವರು ವಿವರವಾಗಿ ತಿಳಿಸಿದ್ದರೆ. ಗಳಗನಾಥರು ತೀರ ಸ್ವಲ್ಪದರಲ್ಲಿ ಹೇಳಿ ಮುಗಿಸಿಬಿಟ್ಟಿರುವರು. 'ವಿಜಾಪುರಾಸ ಮಾಸಾಹೇಬ', 'ನವಾ ಕೋಣ ಆಲಾ', 'ಭೇಟ' 'ಮಾಸಾಹೇಬಾನೀ ಕೋಣ ಪಾಹಿಲೇ' ಮೊದಲಾದ ಕೆಲವು ಪ್ರಕರಣಗಳನ್ನೇ ಗಳಗನಾಥರು ಲುಪ್ತಗೊಳಿಸಿ, ಅಲ್ಲಿ ಬರುವ ಕಥೆಯನ್ನು ಒಂದೋ ಎರಡೋ ವಾಕ್ಯಗಳಲ್ಲಿ ಹೇಳಿ ಮುಗಿಸಿರುವರು. ಅದರಂತೆ ತೋಟಿಗನು ರಾಮರಾಯನಿಗೆ ಹಾಲು–ಹಣ್ಣು ಕೊಟ್ಟಂಥ ಕೆಲವು ಸಣ್ಣಪುಟ್ಟ ಸಂಗತಿಗಳನ್ನೂ, ಆಪಟೆಯವರು 'ವೇಳೆ ಸರಿಯುವ ಬಗ್ಗೆ' ಮತ್ತು 'ನೆಳಲು–ಬೆಳಕು'ಗಳ ಬಗ್ಗೆ-ಹೀಗೆ ಅಲ್ಲಲ್ಲಿ ನಡೆಸುವ ತಾತ್ತ್ವಿಕ ವಿವೇಚನೆಗಳನ್ನೂ ಕೈಬಿಟ್ಟಿರುವರು. ಇಂಥ ವಜಾಬಾಕಿಯಿಂದ ಕಾದಂಬರಿಗೆ ಹೆಚ್ಚಿನ ನ್ಯೂನತೆಯೂ ಬಂದಿಲ್ಲ. ಆಪಟೆಯವರು ಇಂಥ ತಾತ್ತ್ವಿಕ ಚರ್ಚೆಗಳನ್ನು ಅಲ್ಲಲ್ಲಿ ತಂದಿರುವರು. ಅವುಗಳಲ್ಲಿ ಕೆಲವು ತುಂಬ ದೀರ್ಘವೂ ಆಗಿವೆ. ಗಳಗನಾಥರು ಅವುಗಳನ್ನು ಕೆಲವು ಸಲ ಮೊಟಕುಗೊಳಿಸಿದರೆ, ಕೆಲವು ಸಲ ಬಿಟ್ಟೇಬಿಟ್ಟಿದ್ದಾರೆ. ಸಂಗ್ರಹಾನುವಾದದ ಹಿನ್ನೆಲೆಯಲ್ಲಿ ನೋಡಿದರೆ ಗಳಗನಾಥರ ಈ ಉಪಕ್ರಮವು ಉಚಿತವಾಗಿದೆಯೆಂದೇ ಹೇಳಬೇಕಾಗುತ್ತದೆ.

ಆದರೆ ಗಳಗನಾಥರು ಆಪಟೆಯವರ ನಿರೂಪಣೆಯನ್ನು ಕೆಲವು ಸಲ ಬದಲಿಸುವ ಪ್ರಯತ್ನ ಮಾಡಿದಂತೆ ಕಂಡುಬರುತ್ತದೆ. 'ರಾಮರಾಜನ ಪಶ್ಚಾತ್ತಾಪ' ಎಂಬ ಪ್ರಕರಣದ ಕೊನೆಯ ಭಾಗದಲ್ಲಿ ಇಂಥದೊಂದು ವ್ಯತ್ಯಾಸ ಕಂಡುಬರುತ್ತದೆ.

ಕುಂಜನವನದಿಂದ ಮೇಹರಜಾನಳು ತಪ್ಪಿಸಿಕೊಂಡು ಹೋದಳೆಂಬ ವಿಷಯವನ್ನು ಧನಮಲ್ಲನು ಬಂದು ರಾಮರಾಜನಿಗೆ ತಿಳಿಸಿದಾಗ ಆತ ಅತಿಯಾಗಿ ಕ್ರೋಧಗೊಂಡು ಧನಮಲ್ಲನನ್ನು ಬಾಯಿಗೆ ಬಂದಂತೆ ತೆಗಳುವನು. ಡೊಣಗ, ಬಾವುಗ, ನಾಯಿ ಎಂದು ಮೊದಲಾಗಿ ಬೈದಂಥ ತನ್ನ ಒಡೆಯನ ಮೇಲೆ ಧನಮಲ್ಲನೂ ಕುಪಿತನಾದನು. "ಆಗ ಧನಮಲ್ಲನೂ ಸಿಟ್ಟು ಬೆಂಕಿಯಾದನು. ಆತನ ಬಾಹುಗಳು ಸ್ಫುರಣ ಹೊಂದಿದವು." (ಪುಟ 72) ಮೇಹರಜಾನಳನ್ನು ಹುಡುಕಿಕೊಂಡೇ ತನ್ನನ್ನು ಕಾಣಬೇಕು, ಹಾಗೇ ತನಗೆ ಕಂಡರೆ ಧನಮಲ್ಲನನ್ನು ಶೂಲಕ್ಕೇರಿಸುವುದಾಗಿ ಕಠೋರವಾಗಿ ನುಡಿದು ರಾಮರಾಜನು ಅಶ್ವಾರೂಢನಾಗಿ ಹೊರಟು ಹೋದನು. "ಆಗ ಧನಮಲ್ಲನು ಅತ್ಯಂತ ಸಂತಪ್ತ ಮುದ್ರೆಯಿಂದ ರಾಮರಾಜನನ್ನು ನೋಡುತ್ತ, ಸ್ಥಳ ಬಿಟ್ಟು ಕದಲದೆ ಅವಡುಗಚ್ಚಿ ತಲೆಯಲ್ಲಾಡಿಸಿದನು....ಮರುದಿನ ಬೆಳಗಾಗುತ್ತಲೆ ತನ್ನ ಕುದುರೆ

ಯನ್ನು ಹತ್ತಿಕೊಂಡು ತುಂಗಭದ್ರೆಯನ್ನು ದಾಟಿ ಉತ್ತರ ದಿಕ್ಕಿಗೆ ಸಾಗಿದನು" (ಪುಟ 73) ಎಂಬ ವರ್ಣನೆಯಲ್ಲಿ ಮೂಲವೇ ಪ್ರತಿಬಿಂಬಿತವಾಗಿದೆ.

ಆದರೆ ಮೂಲದಲ್ಲಿ "ಆತನ ಬಾಹುಗಳು ಸ್ಫುರಣಗೊಂಡವು" ಎಂಬ ವಾಕ್ಯದ ಅನಂತರ "ಆಗ ಆತನ ಮನದಲ್ಲೇನಿತ್ತೆಂಬುದನ್ನು ಯಾರು ಬಲ್ಲರು!" ಎಂಬ ಉದ್ಗಾರವನ್ನು ಗಳಗನಾಥರು ಬಿಟ್ಟಿರುವರು. ಅದರಂತೆ, ಅವಡುಗಚ್ಚಿದ ಧನಮಲ್ಲನನ್ನು ಬಣ್ಣಿಸಿ ಆಪಟೆ ಯವರು "ಅವನ ಮನದಲ್ಲಿ ಯಾವುದೋ ಕ್ರೂರ ವಿಚಾರವು ಬಂದಿರಬೇಕೆಂದು ಸ್ಪಷ್ಟವಾಗಿ ಕಾಣುತ್ತಿತ್ತು. ಆದರೆ ಅವನು ಆ ವಿಚಾರಕ್ಕೆ ಆಸ್ಪದವೀಯಲಿಲ್ಲ" ಎಂದಿರುವುದನ್ನು ಬಿಟ್ಟು-ಕೊಟ್ಟು, "ಆತನ ಹೃದಯದಲ್ಲಿ ತನ್ನ ಒಡೆಯನ ಸೇಡು ತೀರಿಸಿಕೊಳ್ಳುವ ವಿಚಾರವು ಉತ್ಪನ್ನ-ವಾಗಿ, ಅದು ಭರದಿಂದ ಬೆಳೆಯತೊಡಗಿತು" (ಪುಟ 73) ಎಂದು ಬದಲಿಸಿರುವರು.

ಆಪಟೆಯವರಲ್ಲಿ ಇರುವ ಸೂಚನೆಯನ್ನು ಗಳಗನಾಥರು ಸ್ಪಷ್ಟಪಡಿಸಿರುವರು. ಆದರೆ ಆಪಟೆಯವರ ಸೂಚನೆಯಲ್ಲಿರುವ ಶಕ್ತಿಯನ್ನು ಗಳಗನಾಥರ ಸ್ಪಷ್ಟಮಾತು ಕಳೆದುಕೊಂಡಿದೆ.

ಇದೇ ಧನಮಲ್ಲನ ಚಿತ್ರಣದಲ್ಲಿ ಗಳಗನಾಥರು ಕಾದಂಬರಿಯ ಕೊನೆಯಲ್ಲೂ ತುಸು ವ್ಯತ್ಯಾಸವನ್ನು ಮಾಡಿರುವರು. ರಾಮರಾಜನ ರುಂಡವನ್ನು ಕೈಯಲ್ಲಿ ತೆಗೆದುಕೊಂಡು ಪುಷ್ಕರಿಣಿ ಯಲ್ಲಿ ಹಾರಿಕೊಂಡ ಮೇಹರಜಾನಳನ್ನು ಬದುಕಿಸಲು ಅವಳ ಮಗ ರಣಮಸ್ತಖಾನ ಏನೂ ಪ್ರಯತ್ನವನ್ನು ಮಾಡದೆ, ಹಾಗೇ ದಂಗು ಬಡಿದವನಂತೆ ನಿಂತಿದ್ದನು. ಆಗ ಇದನ್ನೆಲ್ಲ ದೂರ-ದಿಂದ ನೋಡುತ್ತಿದ್ದ ಧನಮಲ್ಲನು ಓಡಿಬಂದು ತಾನೂ ಪುಷ್ಕರಿಣಿಯಲ್ಲಿ ಜಿಗಿದನು. ಮೇಹರ-ಜಾನಳನ್ನು ಬದುಕಿಸಬೇಕೆಂಬುದೇ ಅವನ ಉದ್ದೇಶವಾಗಿತ್ತು. ಆದರೆ ಅದು ಅವನಿಗೆ ಸಾಧ್ಯ-ವಾಗಲಿಲ್ಲ. ಕಮಲದ ಬಳ್ಳಿಯಲ್ಲಿ ಸಿಕ್ಕುಬಿದ್ದು, ಒದ್ದಾಡಿ ಒದ್ದಾಡಿ ಆತನೂ ಪುಷ್ಕರಿಣಿಯ ತಳಕಂಡ ಚಿತ್ರವನ್ನು ಆಪಟೆಯವರು ಅತ್ಯಂತ ತೀಕ್ಷ್ಣವಾಗಿ, ಓದುವಾಗ ಮನಕ್ಕೆ ಅತಿ ಭಾರ-ವೆನಿಸುವಂತೆ ಚಿತ್ರಿಸಿರುವರು. ಆದರೆ ಗಳಗನಾಥರು ಈ ಪ್ರಸಂಗದಲ್ಲಿ ಧನಮಲ್ಲನ ಹೆಸರನ್ನೇ ಎತ್ತಿಲ್ಲ. ಇದರಿಂದ ಆಪಟೆಯವರ ಧನಮಲ್ಲನ ಚಿತ್ರದಲ್ಲಿರುವ ಪೂರ್ಣತೆಯನ್ನು ಗಳಗನಾಥರು ಕಳೆದುಕೊಂಡಿರುವರು.

ಮೇಹರಜಾನಳು ಪುಷ್ಕರಿಣಿಯಲ್ಲಿ ಹಾರಿಕೊಂಡು ಪ್ರಾಣಕಳೆದುಕೊಳ್ಳದಂತೆ ಜಾಗ್ರತೆ ವಹಿಸಬೇಕೆಂದು ರಾಮರಾಜ ಧನಮಲ್ಲನಿಗೆ ಆಜ್ಞಾಪಿಸಿದ್ದ. ಅದನ್ನು ಪಾಲಿಸುವುದಕ್ಕಾಗಿ ಆತ ಪುಷ್ಕರಿಣಿಯಲ್ಲಿ ಹಾರಿಕೊಂಡನೋ, ಅಥವಾ ಮೇಹರಜಾನಳಿಗಾಗಿ ಆತನ ಹೃದಯದಲ್ಲಿದ್ದ ಕುರುಡು ಪ್ರೇಮಕ್ಕಾಗಿ ಆತ ಅವಳನ್ನು ಬದುಕಿಸಲು ಯತ್ನಿಸಿದನೋ ಅವನಿಗೇ ಗೊತ್ತು. ಆದರೆ ಆತನ ಬಲಿದಾನವು ಅರ್ಥಪೂರ್ಣವಾಗಿದೆ. ಅದನ್ನು ಗಳಗನಾಥರು ಗುರುತಿಸದೆ ಹೋದರು.

ಗಳಗನಾಥರು ಧನಮಲ್ಲನಂಥ ಹೀನ ಪಾತ್ರಕ್ಕೆ ಯಾಕೆ ಹೆಚ್ಚಿನ ಮಹತ್ತ್ವ ಕೊಡ-ಬೇಕೆಂದೂ ಯೋಚಿಸಿರಬಹುದು. ತನ್ನ ಒಡೆಯನ ಪ್ರೇಯಸಿಯನ್ನೇ ಮೂಕವಾಗಿಯಾದರೂ ಪ್ರೇಮಿಸಿದ, ಅವಳನ್ನು ಬಯಸಿದ ಧನಮಲ್ಲನ ಬಗ್ಗೆ ಗಳಗನಾಥರಲ್ಲಿ ಎಂದಿಗೂ ಅನುಕಂಪ ಇರಲಾರದು. ಆದ್ದರಿಂದ ಕೊನೆಗೆ ಅವನು ಪುಷ್ಕರಿಣಿಯಲ್ಲಿ ಹಾರಿಕೊಂಡನೆಂದು ಹೇಳಿ, ಆತನಿಗೇಕೆ ಹೆಚ್ಚಿನ ಸ್ಥಾನವನ್ನು ಕಲ್ಪಿಸಬೇಕು?—ಎಂದು ಗಳಗನಾಥರು ಬಹುಶಃ ವಿಚಾರಿಸಿರ ಬಹುದು.

ಧನಮಲ್ಲನ ಪಾತ್ರದ ಈ ವಿವೇಚನೆಯಿಂದ ಗಳಗನಾಥರ ದೃಷ್ಟಿಕೋನವು ಸ್ಪಷ್ಟವಾಗುತ್ತದೆ. ಅದೇನೇ ಇದ್ದರೂ, ಆಪಟೆಯವರ ಧನಮಲ್ಲನ ಚಿತ್ರದಲ್ಲಿದ್ದ ದಟ್ಟವಾದ ಬಣ್ಣವು ಗಳಗನಾಥರಲ್ಲಿ ಮಸಕುಮಸಕಾಗಿದೆಯೆಂಬುದಂತೂ ಸತ್ಯ.

ರಾಮರಾಜನಿಂದ ಪರಿತ್ಯಕ್ತಳಾಗಿ ಜೀವನದಲ್ಲಿ ನಿರಾಶಳಾದ ಮೋಹರಜಾನಳು ತಮ್ಮ ಮಗ ರಣಮಸ್ತಖಾನನಿಂದ ರಾಮರಾಜನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಬಯಸಿದ್ದಳು. ಮಗನೂ ತನ್ನನ್ನು ಬಿಟ್ಟು ಹೋದಾಗ ಅವಳ ನಿರಾಸೆ ಹೆಚ್ಚಾಗಿ, ಅವಳು ಒಂದು ರಾತ್ರಿ ಪುಷ್ಕರಿಣಿಯಲ್ಲಿ ಹಾರಿಕೊಂಡಳು. ಆದರೆ ಅದೇ ಕಾಲಕ್ಕೆ ಅವಳನ್ನು ಭೆಟ್ಟಿಯಾಗಿ, ಅವಳ ಕ್ಷಮೆ ಕೋರಬೇಕೆಂದು ಗುಪ್ತವಾಗಿ ಬಂದು ಅವಳ ಚಲನವಲನಗಳನ್ನು ಗಮನಿಸುತ್ತಿದ್ದ ರಾಮರಾಜ ಅವಳನ್ನು ಬದುಕಿಸಿದ. ತನ್ನನ್ನು ಬದುಕಿಸಿದವ ರಾಮರಾಜನೆಂದು ಅವಳು ಅರಿತಳೆಂದು ಆಪಟೆಯವರಲ್ಲಿದೆ.

ಆದರೆ "ಪುಷ್ಕರಿಣಿಯಲ್ಲಿ ಹಾರಿಕೊಂಡ ಮಾಸಾಹೇಬರನ್ನು ರಾಮರಾಜನು ಹೊರಗೆ ತೆಗೆದು, ಕುಂಜವನದಿಂದ ಹೊರಡಿಸಿ, ಬೇರೆ ಕಡೆಯಲ್ಲಿಡಿಸಿದ್ದನು. ಆದರೆ ಅವರಿಗೆ ತನ್ನ ಗುರುತು ಹತ್ತಗೊಟ್ಟಿದ್ದಿಲ್ಲ. ಅವರೊಡನೆ ತಾನು ಮಾತಾಡಿದ್ದಿಲ್ಲ. ತಮ್ಮನ್ನು ರಾಮರಾಜನೇ ತೆಗೆದನೆಂದು ಮಾಸಾಹೇಬರಿಗೂ ಗೊತ್ತಾಗಿದ್ದಿಲ್ಲ" (ಪುಟ 283) ಎಂದು ಗಳಗನಾಥರು ಹೇಳಿರುವರು. ಆದರೆ ಈ ವ್ಯತ್ಯಾಸದಿಂದ ಕಥಾನಕದ ಮೇಲಾಗಲಿ, ಯಾವ ಪಾತ್ರದ ಮೇಲಾಗಲಿ ಹೆಚ್ಚಿನ ಪರಿಣಾಮವಾಗಿಲ್ಲ.

ಆದರೆ ಗಳಗನಾಥರು ಒಂದೆಡೆ ಬಳಸಿದ ಮೂರೇ ಮೂರು ಪದಗಳು ಮಾತ್ರ ಮೋಹರ-ಜಾನಳ ವ್ಯಕ್ತಿತ್ವಕ್ಕೆ ಕಲಂಕ ತಂದಿವೆ.

ರಣಮಸ್ತಖಾನನು ರಾಮರಾಜನ ಶಿರಚ್ಛೇದನ ಮಾಡಿ, ಅದನ್ನು ತಂದು ತನ್ನ ತಾಯಿಗೂ, ಪ್ರೇಯಸಿಗೂ ತೋರಿಸಿದನು. ತಾಯಿಯು "ಇದನ್ನು ನೀನೇ ನಿನ್ನ ಕೈಯಿಂದಲೇ ಕತ್ತರಿಸಿದೆಯಾ ?" ಎಂದು ಕೇಳಿದಾಗ, ಆತ ಅಭಿಮಾನದಿಂದ ಹೌದು ಎಂದುತ್ತರಿಸಿದ. ಆಗ ಮೋಹರ-ಜಾನಳು "ತಮ್ಮಾ, ಮಗುವೇ, ಅಲ್ಲೋ, ಅವನು ನಿಮ್ಮ ತಂದೆಯು: ಆದರೆ ಇನ್ನು ಪ್ರಯೋಜನವೇನು? ಈಗಾಗುವ ಪ್ರಯೋಜನ ಇಷ್ಟೇ...." ಎಂದು ನುಡಿದು, "ಆ ಶಿರಸ್ಸನ್ನು ಬಲಗೈ-ಯಿಂದ ಎತ್ತಿ ಹಿಡಿದು, ಅದನ್ನು ಒಮ್ಮೆ ದಿಟ್ಟಿಸಿ ನೋಡಿದಳು. ಇನ್ನು ಮೇಲೆ ಈಕೆಯು ಏನು ಮಾಡುವಳೆಂಬುದರ ತರ್ಕ ಮಾಡುವದರೊಳಗೆ ಆ ಪುಷ್ಕರಿಣಿಯ ಗಂಭೀರ ಜಲದಲ್ಲಿ ಅವಳು ಒಮ್ಮೆಲೆ ಹಾರಿಕೊಂಡಳು" ಎಂದು ಮೂಲ ಕಾದಂಬರಿಯಲ್ಲಿ (ಪುಟ 360) ಬಂದಿದೆ.

ಗಳಗನಾಥರು ಮೋಹರಜಾನಳ ವಿಷಯವಾಗಿ ಬರೆಯುವಾಗ, ".... ಆ ಪತಿಘಾತಕಳಾದ ಕರ್ಕಶ ಸ್ವಭಾವದ ಮೋಹರಜಾನಳು" (ಪುಟ 351) ಎಂದು ಪದಪ್ರಯೋಗ ಮಾಡಿರುವರು. ಗಳಗನಾಥರ ಈ ವಿಶೇಷಣಗಳು ಅನಾವಶ್ಯಕವೆಂದೇ ಹೇಳಬೇಕು. ಮೋಹರಜಾನಳು ರಾಮ ರಾಜನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಬಯಸಿದ್ದಳೆಂಬುದು ನಿಜ. ಆದರೆ ಈಗ ಆತನ ತಲೆಯೊಂದಿಗೆ ಪುಷ್ಕರಿಣಿಯಲ್ಲಿ ಹಾರಿಕೊಂಡು ಪ್ರಾಣಬಿಡುತ್ತಿರುವ ಅಥವಾ ಸಹಗಮನ ಮಾಡುತ್ತಿರುವ ಮೋಹರಜಾನಳಿಗೆ ಈ ವಿಶೇಷಣಗಳು ಯೋಗ್ಯವೇ? ಅಲ್ಲದೆ ಹಿಂದೆ, 'ಮಾಸಾಹೇಬರ ಮರವಸ್ಥೆ' ಎಂಬ ಪ್ರಕರಣದ ಒಂದು ಪ್ರಸಂಗದಲ್ಲಿ ಗಳಗನಾಥರು ಮೋಹರಜಾನಳನ್ನು 'ಮಹಾ

ಪತಿವ್ರತೆ' ಎಂದು ಕರೆದಿರುವುದಕ್ಕೂ (ಪುಟ 313), ಈಗ ಅವಳನ್ನು 'ಪತಿಘಾತಕ'ಳೆಂದು ಕರೆದಿರುವುದಕ್ಕೂ ಹೊಂದಿಕೆಯಾಗುವುದಿಲ್ಲ.

'ರಾಮರಾಜಾಚೀ ಜಾಗೃತಿಸ್ವಪ್ನೆ' ಎಂಬ ತಮ್ಮ 27ನೆಯ ಪ್ರಕರಣದಲ್ಲಿ ಆಪಟೆಯವರು ರಾಮರಾಜ ಹುಲಿಯ ಬೇಟೆಗೆ ಹೋದಾಗ ಮೇಹರಜಾನಳನ್ನು ಕಂಡು, ಮೋಹಗೊಂಡು ಅವಳನ್ನು ತನ್ನವಳಾಗಿ ಮಾಡಿಕೊಂಡುದನ್ನು ಗಳಗನಾಥರು ಕಾದಂಬರಿಯ ಆರಂಭದಲ್ಲಿಯೇ ಹೇಳಿರುವರು. ಅದೇನೂ ಸರಿಯಾಯಿತು. ಆದರೆ ಈ ಸ್ಥಾನಪಲ್ಲಟದ ಜೊತೆಗೆ ಗಳಗನಾಥರು ಮೂಲದಲ್ಲಿಲ್ಲದ ಕೆಲವು ಹೆಚ್ಚಿನ ಮಾತುಗಳನ್ನು ಸೇರಿಸಿರುವರು.

ರಾಮರಾಯ ಮೇಹರಜಾನಳ ಆಸೆಯ ಮೇರೆಗೆ ಅವಳ ಪರಿವಾರಲ್ಲಿದ್ದ ಮಾರ್ಜಿನೆಯನ್ನು ಕರೆಯಿಸಿ ಅವಳ ಮುಂದೆ ತನ್ನ ಪ್ರೇಮಾಭಿಲಾಷೆಯನ್ನು ಹೇಳಿ, ತಾನು ಮೇಹರಜಾನಳನ್ನು, ದುಷ್ಯಂತನು ಶಕುಂತಲೆಯನ್ನು ವರಿಸಿದಂತೆ. ಗಾಂಧರ್ವ ವಿಧಿಯಿಂದ ಕೈಹಿಡಿಯುವುದಾಗಿ, ನಾನಾ ಪರಿಯಿಂದ ತಿಳಿಸಿ ಅವಳ ಒಪ್ಪಿಗೆ ಪಡೆದ. ಆಗ ರಾಮರಾಜ ಮತ್ತು ಮಾರ್ಜಿನೆಯರ ನಡುವೆ ನಡೆದ ಮಾತುಕತೆಯ ವಿವರಗಳನ್ನು ಆಪಟೆಯವರು ಕೊಟ್ಟಿಲ್ಲ. ಆದರೆ ಗಳಗನಾಥರು ಆ ಮಾತುಕತೆಯನ್ನು ತಮ್ಮ ಕಲ್ಪನೆಯ ಪ್ರಕಾರ ಸೃಷ್ಟಿಸಿರುವರು. ಇಲ್ಲಿ ರಾಮರಾಜನಕ್ಕಿಂತ ಮಾರ್ಜಿನೆಯ ಮಾತುಗಳೇ ಪ್ರಮುಖವಾಗಿವೆ. ಮತ್ತು ಅವಳದೆಲ್ಲ ಉಪದೇಶಾಮೃತವೇ. ಇಲ್ಲಿಯ ಮಾರ್ಜಿನೆಯ ಮಾತುಗಳನ್ನು ಕೇಳಿದರೆ ಸ್ವತಃ ಗಳಗನಾಥರೇ ಅವುಗಳನ್ನು ನುಡಿದಂತೆ ಭಾಸವಾಗುತ್ತದೆ.

"ಸ್ವಾಭಾವಿಕ ಪ್ರೇಮವೆಂದರೆ ರೂಪ, ಯೌವನ, ಐಶ್ವರ್ಯ, ಅಧಿಕಾರ, ಕೃತಜ್ಞತೆ ಮುಂತಾದ ಬಾಹ್ಯ ಕಾರಣಗಳೇನೂ ಇಲ್ಲದೆ ತಾನಾಗಿ ಉಂಟಾಗುವ ಪ್ರೇಮವು; ಇಂಥ ಹೊರಗಿನ ಕಾರಣಗಳಿಂದುಂಟಾಗುವ ಸಹೇತುಕ ಪ್ರೇಮಕ್ಕಿಂತ ಸ್ವಾಭಾವಿಕ ಪ್ರೇಮದ, ಅಂದರೆ ನಿರ್ಹೇತುಕ ಪ್ರೇಮದ ಯೋಗ್ಯತೆಯು ಹೆಚ್ಚಿನದು....ಸತ್ಪುರುಷರು ಮಾತ್ರ ಜಗತ್ತಿನ ಮೇಲೆ ಇಂಥ ಪ್ರೇಮ ಮಾಡುವರೆಂದು ತಿಳಿದಿರುವೆನು....ನಿಮ್ಮ ಹಿಂದುಗಳಲ್ಲಿ ಬ್ರಾಹ್ಮಣರೊಳಗೆ ವೈವಾಹಿಕ ಬಂಧನವು ಮರಣ ಪರ್ಯಂತರ ದೃಢವಾಗಿರುವದರಿಂದ ಬ್ರಾಹ್ಮಣ ದಂಪತಿಗಳು ಪರಸ್ಪರ ಪ್ರೇಮವನ್ನು ಮರಣ ಪರ್ಯಂತರ ಕಾಯ್ದುಕೊಳ್ಳುವದು ಹೆಚ್ಚು........ಅಂಥ ಪವಿತ್ರ ವೈವಾಹಿಕ ಬಂಧನಕ್ಕೆ ವಿಧರ್ಮಿಗಳಾದ ನೀವಿಬ್ಬರು ಅಯೋಗ್ಯರಾಗಿರುವದರಿಂದ ನೀವಿಬ್ಬರೂ ಈ ಹಾದಿಯನ್ನು ಬಿಡಬೇಕೆಂದು ನಾನು ಸ್ಪಷ್ಟವಾಗಿ ಹೇಳುವೆನು." (ಪುಟ 18.19).

ಎಂದು ಮುಂತಾಗಿ ಮಾರ್ಜಿನೆಯು ಉಪದೇಶವನ್ನು ಮಾಡುವುದಲ್ಲದೆ, ಕೊನೆಯ ಎಚ್ಚರಿಕೆಯನ್ನೂ ಕೊಡುವಳು.

"ಮಹಾರಾಜ, ಕೈಯಲ್ಲಿ ಕಡ್ಡಿಯನ್ನು ಕೊಟ್ಟು ಹೇಳುತ್ತೇನೆ: ಮೇಹರಜಾನಳ ಹೃದಯವನ್ನು ಪರೀಕ್ಷಿಸದೆ ಆಕೆಯನ್ನು ನಿಮ್ಮ ಪ್ರಾಣೇಶ್ವರಿಯನ್ನಾಗಿ ಸರ್ವಥಾ ಮಾಡಿಕೊಳ್ಳಬೇಡಿರಿ. ಪಠಾಣರು ಪ್ರಸಂಗ ಬಂದರೆ ಕೃಷ್ಣಸರ್ಪಕ್ಕೆ ಸಮಾನರು. ಆದ್ದರಿಂದ ಮೇಹರಜಾನಳನ್ನು ಕೃಷ್ಣಸರ್ಪವೆಂದು ಭಾವಿಸಿರಿ. ಪ್ರಸಂಗದಲ್ಲಿ ನೀವು ಕೃತಘ್ನರಾದರೆ ಆಕೆಯು ಎಂದಿಗೂ ಡಂಕು ಬಿಡಲಿಕ್ಕಿಲ್ಲ; ಮಹಾರಾಜರೆದುರಿನಲ್ಲಿ ಇಷ್ಟು ಮಾತಾಡುವ ಯೋಗ್ಯತೆಯು ನನ್ನದಲ್ಲ;

ಯಾರೋ ನಿಮ್ಮ ಗುರುಗಳೇ ನನ್ನ ಮುಖದಿಂದ ಈ ಮಾತುಗಳನ್ನು ಆಡಿಸುತ್ತಾರೆಂದು ತಿಳಿದು, ನನ್ನನ್ನು ಕ್ಷಮಿಸಿರಿ." (ಪುಟ 20,21)

ಮಾರ್ಜಿನೆಯ ಮುಖದಿಂದ ಇಂಥ ಮಾತುಗಳನ್ನು ಹೇಳಿಸಿದ್ದು ತೀರ ಹೆಚ್ಚಾಯಿತೆಂದು ಬಹುಶಃ ಗಳಗನಾಥರಿಗೂ ಭಾಸವಾಯಿತು. ಅದಕ್ಕೇ ಅವರು,

"ಈ ಮೇರೆಗೆ ಮಾರ್ಜಿನೆಯು ತತ್ತ್ವಜ್ಞಾನಿಯಂತೆ ಪ್ರೇಮದ ಸ್ವರೂಪವನ್ನು ಅಸ್ಖಲಿತವಾಗಿ ಪ್ರತಿಪಾದಿಸಿದ್ದನ್ನು ನೋಡಿ ರಾಮರಾಜನು ಬೆರಗಾದನು...." ಎಂದೂ ಹೇಳುವರು.

ಮೂಲದಲ್ಲಿ ಇಲ್ಲದ ಮಾರ್ಜಿನೆಯ ಈ ಉಪದೇಶದಿಂದ ಗಳಗನಾಥರ ವಿಚಾರಸರಣೆ ಸ್ಪಷ್ಟವಾಗಿ ಗೊತ್ತಾಗುತ್ತದೆ. ಅಲ್ಲದೆ ಮೇಹರಜಾನಳನ್ನು ಅವರು ಮೊದಲಿನಿಂದಲೂ 'ಕೃಷ್ಣಸರ್ಪ'ದಂತೆಯೇ ಕಂಡಿದ್ದರೆಂದೂ ಸೂಚಿತವಾಗುತ್ತದೆ. ಆದರೆ ಆಪಟೆಯವರು ಮೇಹರಜಾನಳ ಬಗ್ಗೆ ಕೂಡ ಅನುಕಂಪೆಯುಳ್ಳವರಾಗಿದ್ದಾರೆ. ಆದರೆ ಗಳಗನಾಥರ ಪ್ರಕಾರ ರಾಮರಾಜನ ಮತ್ತು ವಿಜಯನಗರ ರಾಜ್ಯದ ನಾಶಕ್ಕೆ ಮೇಹರಜಾನಳೇ ಕಾರಣಳು, ರಾಮ-ರಾಜನ ಒಂದು ತಪ್ಪಿಗೆ ಅವಳು ಡಂಕು ಹಿಡಿದು ಕೃಷ್ಣಸರ್ಪದಂತೆ ಕಚ್ಚಿ ಅವನ ನಾಶಕ್ಕೆ ಕಾರಣಳಾದಳು. ಅದಕ್ಕೆ, ರಾಮರಾಜನ ತಲೆಯೊಂದಿಗೆ ಪುಷ್ಕರಿಣಿಯಲ್ಲಿ ಹಾರಿಕೊಂಡು ಪ್ರಾಣಕೊಡುವ ಕಾಲಕ್ಕೆ ಕೂಡ ಮೇಹರಜಾನಳನ್ನು ಅವರು "ಪತಿಘಾತಕಳಾದ ಕರ್ಕಶ ಸ್ವಭಾವದ"ವಳೆಂದು ಬಣ್ಣಿಸಿರುವರು.

ಹೀಗೆ, ಆಪಟೆಯವರು ಚಿತ್ರಿಸಿದ ಮೇಹರಜಾನಳ ರೇಖಾಚಿತ್ರದಲ್ಲಿ ಗಳಗನಾಥರು ಒಂದೋ ಎರಡೋ ಹೆಚ್ಚಿನ ಗೆರೆಗಳನ್ನು ಎಳೆದು, ಆ ಚಿತ್ರದ ಇಡೀ ಸ್ವರೂಪವನ್ನೇ ಬದಲು ಮಾಡಿದ್ದಾರೆನ್ನಬಹುದು.[1]

ಗಳಗನಾಥರು ತಮ್ಮವೇ ಆದ ಕೆಲವು ಮಾತುಗಳಿಂದ ವಾಚಕರನ್ನು ಒಮ್ಮೊಮ್ಮೆ ಗೊಂದಲದಲ್ಲಿಯೂ ಸಿಕ್ಕಿಸುತ್ತಾರೆ.

'ವಿಲಕ್ಷಣ ಭಾವನೆ' ಎಂಬ ಪ್ರಕರಣದ ಕೊನೆಯ ಭಾಗದಲ್ಲಿ ರಣಮಸ್ತಖಾನನು ಕುಂಜ-ವನದಲ್ಲಿದ್ದ ನೂರಜಹಾನಳನ್ನು ಕಂಡು ಸಮಾಧಾನ ಪಡಿಸಬೇಕೆಂದು ಹೋಗಿ ಅವಳ ಎದುರಿಗೆ ನಿಲ್ಲುವನು. "ಅವನನ್ನು ಕಂಡ ಕೂಡಲೇ ಅವಳು ಒಮ್ಮೆಲೇ ಗಾಬರಿಯಾಗಿ ಎದ್ದು ನಿಂತಳು" ಎಂದು ಆಪಟೆಯವರು ಬಣ್ಣಿಸಿರುವರು (ಪುಟ 140). ಆದರೆ ಗಳಗನಾಥರು "ಆಕೆಯು ಬೆಚ್ಚಿಬಿದ್ದು ತಟ್ಟನೆ ಎದ್ದು ನಿಂತುಕೊಂಡು ಮೈತುಂಬ ಸೆರಗು ಹೊದ್ದುಕೊಂಡಳು" ಎಂದು ಹೇಳುವರು (ಪುಟ 156).

ಇಲ್ಲಿ "ಮೈತುಂಬ ಸೆರಗು ಹೊದ್ದುಕೊಂಡಳು" ಎಂದಿರುವುದು ಗಳಗನಾಥರ ಸ್ವಂತ ವರ್ಣನೆ. ಈ ಮಾತನ್ನು ಯಾವುದೇ ಹಿಂದೂ ತರುಣಿಯ ಬಗ್ಗೆ ಹೇಳಿದ್ದರೆ ಅದು ಉಚಿತವೇ ಆಗುತ್ತಿತ್ತು. ಒಬ್ಬ ಅಪರಿಚಿತ ತರುಣ ಒಮ್ಮೆಲೇ ತನ್ನೆದುರು ಬಂದು ನಿಂತರೆ ಲಜ್ಜಾವತಿಯೂ ಮಾನವತಿಯೂ ಆದ ಹಿಂದೂ ತರುಣಿ ಹೀಗೆಯೇ ವರ್ತಿಸಬಹುದು.

1. ಆದ್ದರಿಂದಲೇ ಗಳಗನಾಥರ ಅನುವಾದಗಳನ್ನು ಕೇವಲ ಅನುವಾದ ಎನ್ನದೆ, ಸೃಜನಶೀಲ ಅನುವಾದ ಅಥವಾ ಪುನಃಸೃಷ್ಟಿ ಎನ್ನುವುದು ವಿಹಿತವಾಗಬಹುದು.

ಆದರೆ ಇಲ್ಲಿರುವವಳು ಮಹಮ್ಮದೀಯ ತರುಣಿಯಾದ್ದರಿಂದ ಅವಳು ಮೈತುಂಬ ಸೆರಗು ಹೊದ್ದುಕೊಂಡದ್ದು ಹೇಗೆ–ಎಂದು ವಾಚಕರು ಕೇಳಿಕೊಳ್ಳುವಂತಾಗಿದೆ. ಕುರ್ತಾ ಮತ್ತು ಪಾಯಜಾಮಾಗಳನ್ನು ಹಾಕಿಕೊಂಡು ಬುರಕಾದಲ್ಲಿರುವ ಮಹಮ್ಮದೀಯ ತರುಣಿಯರನ್ನು ತಮ್ಮ ಬಗೆಗಣ್ಣೆದುರು ತಂದುಕೊಂಡಿದ್ದರೆ, ಬಹುಶಃ ಗಳಗನಾಥರು "ಮೈತುಂಬ ಸೆರಗು ಹೊದ್ದುಕೊಂಡಳು" ಎಂದು ನೂರಜಹಾನಳನ್ನು ಬಣ್ಣಿಸುತ್ತಿರಲಿಲ್ಲವೇನೋ.

ಆಪಟೆಯವರು ಕೂಡ ಗಳಗನಾಥರಂತೆ ಕಾದಂಬರಿಯ ಮಧ್ಯದಲ್ಲಿ ಹಲವು ಸಲ ತಾತ್ತ್ವಿಕ ವಿಚಾರಗಳನ್ನು ಚರ್ಚಿಸುತ್ತಾರೆ. ಆದರೆ ಅವರು ಓದುಗರನ್ನು ಕುರಿತು ಉಪದೇಶಕ್ಕೆ ತೊಡಗುವುದಿಲ್ಲ. ಗಳಗನಾಥರೂ ಕೂಡ 'ಕಮಲ ಕುಮಾರಿ'ಯಲ್ಲಿ ಹಾಗೆ ಉಪದೇಶಕ್ಕೆ ತೊಡಗಿಲ್ಲ. ಯಾಕೆಂದರೆ ಅದು ಭಾಷಾಂತರವಾಗಿತ್ತು. ಈ 'ಕನ್ನಡಿಗರ ಕರ್ಮಕಥೆ'ಯು ಅನುವಾದವಾಗಿರುವುದರಿಂದ ಅವರಿಗೆ ಭಾಷಾಂತರಕಾರನ ಬಂಧನಗಳಿಲ್ಲ. ಆದ್ದರಿಂದ ತಮ್ಮವೇ ಆದ ಕೆಲವು ವಿಚಾರಗಳನ್ನೂ, ಉಪದೇಶಗಳನ್ನೂ ಅವರು ಕಾದಂಬರಿಯಲ್ಲಿ ಸೇರಿಸಿರುವರು.

"ಪ್ರಿಯವಾಚಕರೇ, 'ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿಕರ್ಷತಿ' ಎಂಬ ಮಹಾತ್ಮರ ಉಕ್ತಿಯಂತೆ ಇಂದ್ರಿಯಗಳ ಸಮೂಹವು ವಿದ್ವಾಂಸನನ್ನಾದರೂ ಜಗ್ಗಿಕೊಳ್ಳುತ್ತದೆಂಬ ಮಾತು ಸುಳ್ಳಲ್ಲ. ತುಂಬಿ ಹೊರಸೂಸುವ ಪ್ರಾಯದ ಸೊಕ್ಕಿನಲ್ಲಿ ನಾವು ಮನಸ್ಸಿಗೆ ಹೊರಚಾಳಿಯನ್ನು ಒಮ್ಮೆ ಹಚ್ಚಿಬಿಟ್ಟರೆ, ಆ ಖೋಡಿ ಮನಸ್ಸು ಅಸುಗೊಳ್ಳದೆ, ತಕ್ಕ ಪ್ರಸಂಗ ಒದಗಿದಾಗೆಲ್ಲ ನಮ್ಮನ್ನು ಎಳೆದೆಳೆದು ಗಾಸಿಮಾಡುತ್ತದೆಂಬುದನ್ನು ಪ್ರಾಯಸ್ಥರಾದ ನಿಮ್ಮಲ್ಲಿ ಬಹು ಜನರು ಮನಸ್ಸಿನಲ್ಲಿಯಾದರೂ ಒಪ್ಪಿಕೊಳ್ಳಬಹುದೆಂದು ಅನುಭವದಿಂದ ಹೇಳಬಹುವಾಗಿದೆ; ಆದ್ದರಿಂದ ಪರನಾರೀ ಸೋದರರಾಗುವಂತೆ ಪ್ರತಿ ಒಬ್ಬ ತರುಣನೂ, ಅವರ ಹಿತಚಿಂತಕರೂ ಮೊದಲೇ ಜಾಗರೂಕರಾಗಿ ಅತ್ಯಂತ ನಿಗ್ರಹದಿಂದ ಆಚರಿಸತಕ್ಕದ್ದು. ಇರಲಿ...." (ಪುಟ 22).

"ಪ್ರಿಯ ತರುಣವಾಚಕರೇ, ಎಚ್ಚರಿಕೆ. ಸಿಕ್ಕ ಸಿಕ್ಕ ಬೀಜಗಳು ನಿಮ್ಮ ಮನೋಭೂಮಿಯಲ್ಲಿ ಬಿತ್ತದಂತೆ ನೀವು ಜಾಗರೂಕರಾಗಿರತಕ್ಕದ್ದು. ಇಲ್ಲದಿದ್ದರೆ ಮೇಹರಜಾನ–ರಾಮರಾಜರಂತೆ ನೀವೂ ವಿವೇಕ ಭ್ರಷ್ಟರಾದೀರಿ !!!" (ಪುಟ 25)

ಇಂಥ ಉಪದೇಶಪರ ಮಾತುಗಳನ್ನು ಗಳಗನಾಥರ ಈ ಕಾದಂಬರಿಯಂತೆ, ಉಳಿದ ಅನುವಾದಗಳಲ್ಲಿಯೂ, ಅವರ ಸ್ವತಂತ್ರ ಕಾದಂಬರಿಗಳಲ್ಲಿಯೂ ವಿಪುಲವಾಗಿ ಕಾಣಬಹುದು.

ಅದರಂತೆ ಗಳಗನಾಥರು ಒಂದು ಘಟನೆಯನ್ನೂ, ಅಲ್ಲಿ ವ್ಯಕ್ತಿಯ ಪಾತ್ರವನ್ನೂ ಬಣ್ಣಿಸಿ, ಆ ಪಾತ್ರದ ಗುಣದೋಷಗಳನ್ನು ಅಲ್ಲಿಯೇ ಚರ್ಚಿಸಿ, ತಮ್ಮ ನಿರ್ಣಯವನ್ನೂ ಹೇಳಿಬಿಡುವರು. ನಿದರ್ಶನವೆಂದು ಕೆಳಗಿನ ಮಾತುಗಳನ್ನು ನೋಡಬಹುದು.

"ಆ ತರುಣರ ಅಕೃತ್ರಿಮ ಪ್ರೇಮವು ರಾಮರಾಜನ ಮಹತ್ವಾಕಾಂಕ್ಷೆಯಿಂದ ಕೃತ್ರಿಮ ಸ್ವರೂಪವನ್ನು ತಾಳಹತ್ತಿತು..... 'ಯೇನಕೇನ ಪ್ರಕಾರೇಣ ಪ್ರಸಿದ್ಧ ಪುರುಷೋಭವ' ಎಂಬ ಹೀನವಾದ ಉಕ್ತಿಗೆ ಸಂಬಂಧಿಸುವಂಥ ನೀಚ ಮಹತ್ವಾಕಾಂಕ್ಷೆಯನ್ನು ಯಾವನೂ ತಾಳಲಾಗದು.... (ರಾಮರಾಜನು) ತನ್ನ ವೈದಿಕ ಧರ್ಮಕ್ಕೆ ವಿರುದ್ಧವಾಗಿ ಆತನು ಮೇಹರಜಾನಳ ಪಾಣಿಗ್ರಹಣವನ್ನೇ ಮಾಡತಕ್ಕದ್ದಿದ್ದಿಲ್ಲ; ಒಂದು ಪಕ್ಷದಲ್ಲಿ ಮಾಡಿದರೂ ಮಾಡಲಿ, ಮುಖ್ಯ ಪತ್ನಿಯನ್ನಾಗಿ ಮಾಡುವೆನೆಂದು ಆಕೆಗೆ ವಚನ ಕೊಡತಕ್ಕದ್ದಿದ್ದಿಲ್ಲ; ಒಮ್ಮೆ ವಚನಕೊಟ್ಟ ಬಳಿಕ

ಅದರಂತೆ ನಡೆಯುವುದು ಪೌರುಷಕ್ಕೆ ಒಪ್ಪುವ ಮಾತಾಗಿತ್ತು; ಆದರೆ ರಾಮರಾಜನು ಹಾಗೆ ಮಾಡದೆ ಮಹತ್ವಾಕಾಂಕ್ಷೆಯಿಂದ ವಚನಭಂಗದ ಹಾದಿಯನ್ನು ಹಿಡಿದನು" (ಪುಟ 27,28).

ಆಪಟೆಯವರು ಒಂದು ಪಾತ್ರದ ಬಗ್ಗೆ ತಮ್ಮ ನ್ಯಾಯನಿರ್ಣಯವನ್ನು ವಾಚಕರ ಮೇಲೆ ಹೇರುವುದಿಲ್ಲ. ಗಳಗನಾಥರಿಗೆ ತಮ್ಮ ವಾಚಕರ ಬುದ್ಧಿಶಕ್ತಿಯ ಮೇಲೆ ಬಹುಶಃ ಭರವಸೆ ಕಡಿಮೆ. ಅದಕ್ಕೇ ಅವರು ಅಲ್ಲಲ್ಲಿ ಇಂಥ ಮಾತುಗಳಿಂದ ವಾಚಕರ ನೆರವಿಗೆ ಬರುವರು. ಆದರೆ ಇದರಿಂದ ಕಲಾತ್ಮಕ ನಿರೂಪಣೆಗೆ ಅತಂಕವಾಗುತ್ತದೆ ಎಂಬುದನ್ನು ಗಳಗನಾಥರು ಮನಗಾಣಲಿಲ್ಲ.

ಹೀಗೆ ಗಳಗನಾಥರ 'ಕನ್ನಡಿಗರ ಕರ್ಮಕಥೆ'ಯಲ್ಲಿ ಕೆಲವು ದೋಷಗಳನ್ನು ನಾವು ಕಾಣಬಹುದಾದರೂ, ಈ ಅನುವಾದದಲ್ಲಿ ಕಂಡುಬರುವ ಒಂದು ದೊಡ್ಡ ಗುಣವೆಂದರೆ ಮೂಲ ಕಾದಂಬರಿಯ ಆಶಯವನ್ನೂ, ಅಲ್ಲಿಯ ಸುಂದರವಾದ, ರಸವತ್ತಾದ ಅಂಶಗಳನ್ನೂ ಉಳಿಸಿಕೊಂಡಿರುವುದು. ಕೆಲವು ಸನ್ನಿವೇಶಗಳನ್ನು ಬಿಟ್ಟಿರಬಹುದು ಅಥವಾ ತುಸು ಹೆಚ್ಚು ಕಡಿಮೆ ಮಾಡಿಕೊಂಡಿರಬಹುದು; ಆದರೆ ಮೂಲ ಕಾದಂಬರಿಯ ಸತ್ತ್ವವೆಲ್ಲ ಬಹುಶಃ ಇಲ್ಲಿ ಉಳಿದುಕೊಂಡಿದೆ. 'ವಜ್ರಾಘಾತ'ದ ಕೇವಲ ಕಾಲು ಭಾಗವನ್ನು ಮಾತ್ರ ಬಿಟ್ಟು, ಉಳಿದೆಲ್ಲವನ್ನೂ ಉಳಿಸಿಕೊಂಡಿರುವುದರಿಂದ 'ಕನ್ನಡಿಗರ ಕರ್ಮಕಥೆ'ಯು ಹೆಚ್ಚಾಗಿ ಮೂಲಾನುವರ್ತಿಯಾಯಿತು. ಅದರಿಂದ ಮೂಲದ ಸ್ವಾರಸ್ಯವನ್ನು ಸ್ವಲ್ಪದರಲ್ಲಿಯೇ ಹಿಡಿದಿಟ್ಟಿರುವ 'ಕರ್ಮಕಥೆ'ಯು 'ವಜ್ರಾಘಾತ'ಕ್ಕಿಂತಲೂ ಹೆಚ್ಚು ವಾಚನೀಯವಾಗಿದೆ. ಸಾಮಾನ್ಯ ವಾಚಕರ ದೃಷ್ಟಿಯಿಂದ ನೋಡಿದರಂತೂ ಇದು ಹೆಚ್ಚು ರಂಜನೀಯವೂ ಆಗಿದೆ.

ಆದರೆ ಇದೇ ಮಾತನ್ನು **'ಈಶ್ವರೀ ಸೂತ್ರ'**ದ ಬಗ್ಗೆ ಹೇಳಲಿಕ್ಕಾಗದು. 'ಈಶ್ವರೀ ಸೂತ್ರ'ವು ಹರಿ ನಾರಾಯಣ ಆಪಟೆಯವರ 'ಉಷಃಕಾಲ ಅಥವಾ ಅಡೀಚಶೇ ವರ್ಷಾಪೂರ್ವೀಚಾ ಮಹಾರಾಷ್ಟ್ರ' (ಎರಡೂವರೆ ನೂರು ವರ್ಷಗಳ ಪೂರ್ವದ ಮಹಾರಾಷ್ಟ್ರ) ಎಂಬ ಕಾದಂಬರಿಯ ಸಂಕ್ಷಿಪ್ತಾನುವಾದವಾಗಿದೆ. 'ಉಷಃಕಾಲ'ವು ಮೊದಲು 'ಕರಮಣೂಕ'ಎಂಬ ಸಾಪ್ತಾಹಿಕದಲ್ಲಿ ಧಾರಾವಾಹಿಯಾಗಿ ಬಂದು, ಅನಂತರ 1911ರಲ್ಲಿ ಪುಸ್ತಕರೂಪದಲ್ಲಿ ಪ್ರಕಟವಾಯಿತು. ಶಿವಾಜಿಯು ಕ್ರಿ. ಶ. 1646ರಲ್ಲಿ 'ತೋರಣಾ'ಎಂಬ ಕೋಟೆಯನ್ನು ವಶಪಡಿಸಿಕೊಂಡನು. ಆ ಕಥೆಯನ್ನೇ ಆಪಟೆಯವರು 'ಉಷಃಕಾಲ'ದಲ್ಲಿ ಬರೆದಿರುವರಾದರೂ, ಇಲ್ಲಿ 'ತೋರಣಾ' ಕೋಟೆಯ ಬದಲು 'ಸುಲ್ತಾನಗಡ' ಕೋಟೆಯನ್ನು ಆತ ಜಯಿಸಿದ ವಿಷಯ ಬಂದಿದೆ.

ವಿಜಾಪುರ ಬಾದಶಹನ ಸೇವಕನಾದ ಶಹಾಜಿಯು ಅತ್ಯಂತ ಸ್ವಾಮಿನಿಷ್ಠನೆಂದು ಹೆಸರು ಪಡೆದಿದ್ದನು. ಆತನ ಮಗನೇ ಶಿವಾಜಿ. ಸ್ವತಂತ್ರ ಮನೋವೃತ್ತಿಯ ಶಿವಾಜಿಯು ಕಳವು, ಸುಲಿಗೆಗಳಲ್ಲಿ ನಿರತನಾಗಿ ತಂದೆಯ ಅಪ್ರೀತಿಗೆ ಪಾತ್ರನಾದ. ಆದರೆ ಆತನ ಉದ್ದೇಶ ಕೇವಲ ಕೊಲೆ–ಸುಲಿಗೆಗಳಾಗಿದ್ದಿಲ್ಲ. ಆತ ತಾನಾಜಿ, ಏಸಾಜಿ, ಸೂರ್ಯಾಜಿ, ನಾನಾಸಾಹೇಬ ಮೊದಲಾದ ವೀರ ತರುಣರ ಸಹಾಯದಿಂದ ಮಾವಳೆ ಜನರನ್ನು ಕೂಡಿಸಿಕೊಂಡು ಬಾದಶಹನ ಒಂದೊಂದೇ ಕೋಟೆಯನ್ನು ಜಯಿಸುತ್ತ ನಡೆದನು. ಆತನ ಸ್ವರಾಜ್ಯವೆಂಬ ಸೂರ್ಯನ ಅರುಣೋದಯವನ್ನು ಚಿತ್ರಿಸುವ ಕಾದಂಬರಿಯೇ 'ಉಷಃಕಾಲ'.

ಸುಲ್ತಾನಗಡ ಕೋಟೆಯ ಅಧಿಪತಿಯಾದ ರಂಗರಾವ ಅಪ್ಪಾ ವಿಜಾಪುರ ಬಾದಶಹನ ಅಧೀನವಲ್ಲಿದ್ದನು. ಆತನ ಮಗ ನಾನಾಸಾಹೇಬ ತಂದೆಯ ಗುಲಾಮಗಿರಿ ಮನೋಭಾವದ ವಿರುದ್ಧ ಸಿಡಿದೆದ್ದು, ಶಿವಾಜಿಯನ್ನು ಕೂಡಿಕೊಳ್ಳುವನು. ಶಿವಾಜಿಯೂ ಆತನ ಸಂಗಡಿಗರೂ ಶ್ರೀಧರಸ್ವಾಮಿಗಳ ಸಹಾಯದಿಂದ ಸಾಸವಡದ ಹತ್ತಿರವಿರುವ ಮಾರುತಿ ಗುಡಿಯ ಕೆಳಗಿರುವ ಗುಹೆಯಲ್ಲಿ ಒಂದುಗೂಡಿ ಧನ–ಜನಗಳ ಸಂಗ್ರಹಣೆಯಲ್ಲಿ ತೊಡಗಿರುವರು. ಇದರ ಸುಳಿವು ಹತ್ತಿದ ಬಾದಶಹನು ಅವರನ್ನು ದಂಡಿಸಲು ತನ್ನ ಸರದಾರರನ್ನು ಕಳಿಸಿ ವಿಫಲನಾಗುವನು. ಕೊನೆಗೆ ಶಿವಾಜಿಯ ಸಹಾಯಕರಾದ ಶ್ರೀಧರಸ್ವಾಮಿಗಳನ್ನೇ ಬಂಧಿಸಿ ಪುರಂದರಗಡ ಕೋಟೆಯಲ್ಲಿ ಸೆರೆಯಿಡುವನು. ಶಿವಾಜಿಯು ಆತನ ಸಹಾಯಕರೊಂದಿಗೆ ಯುಕ್ತಿಯಿಂದ ಶ್ರೀಧರಸ್ವಾಮಿಗಳನ್ನು ಬಿಡಿಸುವನು. ಅನಂತರ ಸುಲ್ತಾನಗಡ ಕೋಟೆಯನ್ನು ವಶಪಡಿಸಿ-ಕೊಳ್ಳುವ ಯೋಜನೆ ಹಾಕಿ, ಯುಕ್ತಿ–ಕುಯುಕ್ತಿಗಳಿಂದ ಯಶಸ್ಸನ್ನು ಪಡೆಯುವನು. ಅನೇಕ ಮರಾಠಾ ವೀರರು ಆತನಿಗೆ ಸಹಾಯ ಮಾಡುವರು. ಇವರಲ್ಲಿ ರಾಮದೇವನಂತೆ, ಸೂರ್ಯಾಜಿ-ಯಂತೆ ಮುಸಲ್ಮಾನರ ಅನ್ಯಾಯಕ್ಕೆ ಒಳಗಾಗಿ ಜೀವನದಲ್ಲಿ ನಿರಾಶರಾದವರೂ ಇದ್ದರು. ದೀನ–ದುರ್ಬಲರನ್ನೂ ಅನಾಥರನ್ನೂ ಗೋ–ಬ್ರಾಹ್ಮಣರನ್ನೂ ಕ್ರೂರ ಮುಸಲ್ಮಾನರ ಉಪಟಳ-ದಿಂದ ರಕ್ಷಿಸುವ ಉದ್ದೇಶದಿಂದ ರಾಜ್ಯ ಸ್ಥಾಪನೆಯ ಕಾರ್ಯವನ್ನು ಕೈಕೊಂಡ ಶಿವಾಜಿಯನ್ನು ರಾಮದಾಸ ಸ್ವಾಮಿಗಳು ಸ್ವತಃ ಸುಲ್ತಾನಗಡಕ್ಕೆ ಬಂದು ದರ್ಶನನೀಡಿ ಆಶೀರ್ವದಿಸುವುದ-ರೊಂದಿಗೆ ಕಾದಂಬರಿಯು ಮುಕ್ತಾಯವಾಗುತ್ತದೆ.

ಆಪಟೆಯವರ ಕಾದಂಬರಿಯಲ್ಲಿ ಸುಮಾರು ಐವತ್ತಕ್ಕೂ ಹೆಚ್ಚು ಪಾತ್ರಗಳಿವೆ. ಅವರಲ್ಲಿ ಸರ್ಜೇಖಾನ, ಶಿವದೇವರಾಯ, ರಣದುಲ್ಲಾಖಾನ, ಸೈಯದುಲ್ಲಾಖಾನ ಮೊದಲಾದ ಬಾದಶಹನ ಸರದಾರರೂ ಸಖೋಜಿ ಅಥವಾ ಸಟವಾಜಿ, ಸುಭಾನ, ಸಾವಳ್ಯಾ ಮೊದಲಾದ ಶಿವಾಜಿಯ ಸಹಾಯಕರೂ ಇರುವರು. ಆಪಟೆಯವರು ಇವರೆಲ್ಲರಿಗೂ ತಕ್ಕ ಅವಕಾಶವನ್ನು ಒದಗಿಸಿದ್ದಲ್ಲದೆ, ಬಾದಶಹನ ದರ್ಬಾರು, ಆತನ ಕಾಮುಕತೆ, ಅವನ ರಾಣೀವಾಸ, ಅಲ್ಲಿ ಸೆರೆಸಿಕ್ಕ ಕರುಣಾಮೂರ್ತಿ ರಂಭಾವತಿಯಂಥವರ ಚಿತ್ರಣಕ್ಕೂ, ರಣದುಲ್ಲಾಖಾನ ಮತ್ತು ಸೈಯದುಲ್ಲಾಖಾನರ ಸ್ವಭಾವ ಚಾರಿತ್ರ್ಯಗಳ ನಿರೂಪಣೆಗೂ, ಚಂದ್ರಾವತಿ, ರಂಭಾದೇವಿ, ಸೂರ್ಯಾಜಿಯ ಆ ಹುಚ್ಚಿಯಾದ ಹೆಂಡತಿ, ರಣದುಲ್ಲಾಖಾನನ ಚಿರವಿರಹಿಣಿಯಾದ ಮಗಳು ಮೇಹರಜಾನ ಮೊದಲಾದವರ ಕಥೆಗಳಿಗೂ, ಸುಲ್ತಾನಗಡದ ಕಿಲ್ಲೇದಾರನಾದ ಅತ್ಯಂತ ಸ್ವಾಮಿನಿಷ್ಠನಾದ ವೃದ್ಧ ರಂಗರಾವ ಅಪ್ಪಾನ ವ್ಯಕ್ತಿತ್ವ ಚಿತ್ರಣಕ್ಕೂ ಸಾಕಷ್ಟು ಗಮನ-ವನ್ನಿತ್ತಿರುವರು. ಅಲ್ಲದೆ ಅವರು ಬಣ್ಣಿಸಿರುವ ಆ ಭೀಕರ ಮಳೆಗಾಲದ ಚಿತ್ರ, ಸುಲ್ತಾನಗಡ ಕೋಟೆಯ ಇತಿಹಾಸ, ಧಾರಗಾವಕರ ದೇಶಮುಖರ ಅರಮನೆಯಲ್ಲಿಯ ಅತ್ಯಾಚಾರ, ಬೆಂಕಿಗಾಹುತಿಯಾದ ಆ ಬಣವೆಗಳು–ಈ ಮೊದಲಾದ ಹಲವು ವರ್ಣನೆಗಳು ಆಪಟೆಯವರ ಚಿತ್ರಶೈಲಿಗೆ ಸಾಕ್ಷಿಗಳಾಗಿವೆ. ಒಟ್ಟಿನಲ್ಲಿ ಹೆಸರಿಗೆ ತಕ್ಕಂತೆ ಅವರ ಕಾದಂಬರಿಯು 'ಎರಡೂವರೆ ನೂರು ವರ್ಷಗಳ ಪೂರ್ವದ ಮಹಾರಾಷ್ಟ್ರ'ವನ್ನು ಯಥಾವತ್ತಾಗಿ ಚಿತ್ರಿಸುತ್ತದೆ- ಎಂದು ಹೇಳಬಹುದು.

ಆದರೂ ಆಪಟೆಯವರ ಕಾದಂಬರಿಗಳಲ್ಲಿ ಕೆಲವು ದೋಷಗಳೂ ಇಲ್ಲದಿಲ್ಲ. ಹಲವಾರು ಪಾತ್ರಗಳು, ಮುಖ್ಯ ಕಥೆಯಲ್ಲಿಯ ಏಳೆಂಟು ಉಪಕಥೆಗಳು, ಕೆಲವು ಅನಾವಶ್ಯಕ ಸನ್ನಿವೇಶ

ಗಳು ಇವುಗಳಿಂದ ಕಾದಂಬರಿಯ ಸಮತೋಲಕ್ಕೆ ಬಾಧೆ ತಟ್ಟಿದೆ. ಮುಖ್ಯವಾಗಿ ಕಾದಂಬ-ರಿಯ ನಾಯಕನು ಶಿವಾಜಿಯೊ ಅಥವಾ ನಾನಾಸಾಹೇಬನೊ ಎಂಬ ಸಂದೇಹ ಬರುವಂತಾ-ಗಿದೆ. ಕಾದಂಬರಿಯು ಅಮಿತವಾಗಿ ಬೆಳೆದಿರುವುದೇ ಇಲ್ಲಿಯ ಕೆಲವು ದೋಷಗಳಿಗೆ, ನ್ಯೂನತೆ-ಗಳಿಗೆ ಬಹುಶಃ ಮುಖ್ಯ ಕಾರಣವಾಗಿದೆ. ಇದು ಆಪಟೆಯವರ ಮೊದಲ, ಐತಿಹಾಸಿಕೆ ಕಾದಂಬರಿ[1] ಎಂಬುದನ್ನು ನೆನೆದರೆ ಅವರ ರಚನಾಕೌಶಲ್ಯ ಮೆಚ್ಚುವಂತೆಯೇ ಇದೆ.

ಡೆಮಿ $\frac{1}{8}$ ಆಕಾರದ 504 ಪುಟಗಳ ಈ ಬೃಹತ್ ಕಾದಂಬರಿಯನ್ನು ಗಳಗನಾಥರು ಕ್ರೌನ $\frac{1}{8}$ ಆಕಾರದ 237 ಪುಟಗಳಲ್ಲಿ 'ಈಶ್ವರೀ ಸೂತ್ರ'ವೆಂದು ಅನುವಾದಿಸಿರುವರು. "ಸಾಂಸಾರಿಕ ಕಾರ್ಯಗಳಾಗಲಿ, ಸಾಮಾಜಿಕ ಕಾರ್ಯಗಳಾಗಲಿ, ರಾಜಕೀಯ ಕಾರ್ಯಗಳಾಗಲಿ, ಬೇರೆ ಯಾವ ಕಾರ್ಯಗಳೇ ಆಗಲಿ ಈಶ್ವರೀ ಸೂತ್ರದಿಂದಲೇ ಆಗುತ್ತವೆಂಬ ಮಾತಿನ ಅನುಭವವು ಈ ಕಾದಂಬರಿಯಿಂದ ಚೆನ್ನಾಗಿ ಆಗುವ ಹಾಗಿರುವ ಕಾರಣ, ಇದಕ್ಕೆ ಈಶ್ವರೀ ಸೂತ್ರವೆಂಬ ಹೆಸರನ್ನಿಡಲಾಯಿತು."[2] ಎಂದು ಹೇಳಿ ಈಶ್ವರೀ ಸೂತ್ರದ ನಿದರ್ಶನ-ವನ್ನೂ ಕೊಟ್ಟಿರುವರು. "ಕಳವು–ದರವಡೆ"ಗಳಲ್ಲಿ ನಿರತನಾಗಿದ್ದ ಮತ್ತು "ತಂದೆತಾಯಿಗಳ ಮಾತುಮೀರಿ ದಡ್ಡಿಯನ್ನು ಬಿಟ್ಟು ಹೋದ ತುಂಟ ಮರಿಟಗರಿನಂತೆ ಇದ್ದ ಶಿವಾಜಿಯು ಕುರಿಯ ಹಿಂಡನ್ನು ಹೋಲುವ ಮಾವಳರ ಸಹಾಯದಿಂದ, ಇಡೀ ಹಿಂದುಸ್ಥಾನವನ್ನೇ ತಮ್ಮ ಭಯಂಕರ ಗರ್ಜನೆಯಿಂದ ಗಡಗುಟ್ಟಿ ನಡುಗಿಸಿದ ಮುಸಲ್ಮಾನ ವ್ಯಾಘ್ರಗಳನ್ನು ದಂಗು-ಬಡಿಸಿ ಸ್ವರಾಜ್ಯವನ್ನು ಸ್ಥಾಪಿಸಿ, ತಾನೂ ತನ್ನ ಪರಿವಾರವೂ ಸತ್ವಾತಿಶಯದಿಂದ ಕ್ಷಣದಲ್ಲಿ ಸಿಂಹರೂಪವನ್ನು ಹೊಂದಿದ್ದು ಈಶ್ವರೀ ಸೂತ್ರದಿಂದಲೋ, ಕಾರ್ಯಕಾರಣದ ಭಾವ ದಿಂದಲೋ ಎಂಬುದನ್ನು ವಾಚಕರೇ ವಿಚಾರಿಸತಕ್ಕದ್ದು".[3]

ಆಪಟೆಯವರೂ ಕೂಡ ಶಿವಾಜಿಯ ಮೇಲೆ ಈಶ್ವರೀಕೃಪೆಯಿದ್ದಿತೆಂಬುದನ್ನು ಹೇಳು-ವರು. ಭವಾನಿಯು ಶಿವಾಜಿಗೆ 'ದೃಷ್ಟಾಂತ'ಗಳನ್ನು ತಿಳಿಸುತ್ತಿದ್ದಳೆಂದು ಅನೇಕ ಸಲ ಬಣ್ಣಿಸಿರು-ವರು. ಧ್ಯಾನಮಗ್ನನಾಗಿ ಕುಳಿತ ಶಿವಾಜಿಯ ಮುಖದಿಂದ ದೇವಿಯೇ ಭವಿಷ್ಯಸೂಚಕ ಮಾತುಗಳನ್ನು ನುಡಿಯುತ್ತಿದ್ದಳು. ಈ ಭವಿಷ್ಯವಾಣಿಯ ವಿಚಾರವು 'ಉಷಃಕಾಲ'ದಲ್ಲಿ ಮಾತ್ರ ವಲ್ಲದೆ ಉಳಿದ ಕೆಲವು ಕಾದಂಬರಿಗಳಲ್ಲಿಯೂ ಬಂದಿದೆ.[4] ಅಲ್ಲದೆ ಶಿವಾಜಿಗೆ ರಾಮದಾಸ ಸ್ವಾಮಿಗಳ ಅನುಗ್ರಹವೂ ವಿಶೇಷವಾಗಿತ್ತು. ಅವರ ದರ್ಶನದಿಂದಲೇ ಆತನ ಅನೇಕ ಕಾರ್ಯಗಳು ನಿರ್ವಿಘ್ನವಾಗಿ ಕೊನೆಗಂಡವು. ಈ ಎಲ್ಲ ಸಂಗತಿಗಳು ಈಶ್ವರ ಕೃಪೆಯಿಂದಲೇ

1. ಆಪಟೆಯವರು ಈ ಮೊದಲೇ ಅನೇಕ ಸಾಮಾಜಿಕ ಕಾದಂಬರಿಗಳನ್ನೂ, 'ಮೈಸೂರಚಾ ವಾಘ' (ಮೈಸೂರಿನ ಹುಲಿ) ಎಂಬ ಅನುವಾದಿತ ಕಾದಂಬರಿಯನ್ನೂ ಬರೆದಿದ್ದರು.
2. ಗಳಗನಾಥ : ಈಶ್ವರೀಸೂತ್ರ, ಪ್ರಸ್ತಾವನೆ, ಪುಟ 4
3. ಗಳಗನಾಥ : ಈಶ್ವರೀಸೂತ್ರ, ಪ್ರಸ್ತಾವನೆ, ಪುಟ 5
4. 'ಇದೇನು ಗದ್ದಲವು ಎಂಬ ಪ್ರಕರಣದಲ್ಲಿ, ಇತ್ತಂಡದಲ್ಲಿ ಸಿಕ್ಕ ಶಿವಾಜಿಯು ಅಂಬಾಭವಾನಿಯನ್ನು ಧ್ಯಾನಿಸುತ್ತಾ ಕುಳಿತಾಗ, ದೇವಿಯ ಸಾಕ್ಷಾತ್ಕಾರವಾಗಿ "ಈ ಪ್ರಸಂಗದಲ್ಲಿ ನಿನಗೆ ಸುಮ್ಮನೆ ತ್ರಾಸಃಗಬಾರದೆಂದು ನಾನೇ ಎಲ್ಲ ಯೋಗವನ್ನು ಒದಗಿಸಿಕೊಟ್ಟಿರುವೆನು. ನೀನು ಸ್ವಲ್ಪವಾದರೂ ಧೈರ್ಯಗೆಡದೆ ಕಾರ್ಯವನ್ನು ಸಾಧಿಸಿಕೋ" ಎಂದು ಸೂಚಿಸಿದಳೆಂಬ ನಿರೂಪಣೆಯಲ್ಲಿ ಅತಿಶಯೋಕ್ತಿಯಿದೆ. ಇದು ಆಪಟೆಯವರ 'ಉಷಃಕಾಲ'ದ 'ದ್ವಿಧಾಚಿತ್ತ' ಎಂಬ ಪ್ರಕರಣದಲ್ಲಿಯೂ ಬಂದಿದೆ. ಪುಟ 448.

ಘಟಿಸಿದುವೆಂಬುದನ್ನು ಆಪಟೆಯವರೂ ಸೂಚಿಸಿರುವರು.

ಆದರೆ ಭಾವಿಕರಾದ ಗಳಗನಾಥರಿಗೆ ಇಂಥ ಸಂಗತಿಗಳು ಹೆಚ್ಚು ಭಾವಪೂರ್ಣವಾಗಿ ಕಂಡಿವೆ. ಶಿವಾಜಿಯ ರಾಜ್ಯಸ್ಥಾಪನೆಗೆ ಆತನ ಸಾಮರ್ಥ್ಯಕ್ಕಿಂತ ಈಶ್ವರೀಕೃಪೆಯೇ ಪ್ರಮುಖ-ವೆಂದು ಅವರು ನಂಬಿದ್ದಾರೆ. ಅದಕ್ಕೇ ಅವರು ಪ್ರಸಂಗಗಳನ್ನು ಸೃಷ್ಟಿಸಿ, "ಈಶ್ವರೀ ಸೂತ್ರದಿಂದಲೇ ಈ ಜಗತ್ತಿನ ಸ್ಥಿತ್ಯಂತರವಾಗುತ್ತದೆಂಬ ಮಾತು ಸುಳ್ಳಲ್ಲ"[1] ಎಂಬ ತಮ್ಮ ಸ್ವಂತ ಅಭಿಪ್ರಾಯವನ್ನು ಮಂಡಿಸಿರುವರು. ಆಪಟೆಯವರ 'ಬಾದಶಹ' ಎಂಬ ಎರಡು ಪ್ರಕರಣಗಳಲ್ಲಿ ಇಂಥ ಮಾತುಗಳಿಗೆ ಅವಕಾಶವೇ ಇಲ್ಲವಾದರೂ, ಗಳಗನಾಥರು ಆ ಎರಡೂ ಪ್ರಕರಣಗಳ ಸಾರಾಂಶವನ್ನು ಬರೆಯುತ್ತ ಈ ಮಾತನ್ನು ತಂದಿರುವರು. ಒಟ್ಟಿನಲ್ಲಿ 'ಈಶ್ವರೀ ಸೂತ್ರ'ವೆಂಬ ಹೆಸರು ಕಾದಂಬರಿಗೆ ಹೊಂದುವಂತೆ ಗಳಗನಾಥರ ನಿರೂಪಣೆಯಿದೆ. ಅದಕ್ಕೆಂದೇ ಅವರು ಆಪಟೆಯವರ ಎರಡನೆಯ ಹೆಸರನ್ನು–'ಎರಡೂವರೆನೂರು ವರ್ಷಗಳ ಹಿಂದಿನ ಮಹಾರಾಷ್ಟ್ರ'–ಕೈಬಿಟ್ಟಿರುವರು. ಆ ಹೆಸರು ಈ ಅನುವಾದಿತ ಕಾದಂಬರಿಗೆ ಹೊಂದಿಕೆಯಾಗುತ್ತಿರಲಿಲ್ಲ.

ಆಪಟೆಯವರಿಗೆ ಶಿವಾಜಿಯು ಸುಲ್ತಾನಗಡವನ್ನು ಗೆದ್ದುಕೊಂಡ ಕಥೆಯನ್ನು ಹೇಳ-ಬೇಕಾಗಿದೆಯಾದರೂ, ಅವರಿಗೆ ಆ ಕಾಲದ ಮಹಾರಾಷ್ಟ್ರದ ಚಿತ್ರವನ್ನೂ ಕೊಡಬೇಕಾಗಿತ್ತು. ಗಳಗನಾಥರ ದೃಷ್ಟಿ ಮಾತ್ರ ಕೇವಲ ಕಥಾನಿರೂಪಣೆಯ ಕಡೆಗೇ ಕೇಂದ್ರೀಕೃತವಾಗಿದೆ. ಆಪಟೆಯವರಲ್ಲಿ ಬರುವ ಹಲವು ಉಪಕಥೆಗಳನ್ನೂ, ಸನ್ನಿವೇಶಗಳನ್ನೂ, ಪಾತ್ರಗಳನ್ನೂ ಗಳಗನಾಥರು ಅನಿವಾರ್ಯವಾಗಿ ಬಿಡಬೇಕಾಯಿತು. ಮೂಲ ಕಾದಂಬರಿಯಲ್ಲಿದ್ದ 80 ಪ್ರಕರಣಗಳು 'ಈಶ್ವರೀ ಸೂತ್ರ'ದಲ್ಲಿ ಕೇವಲ 21ಕ್ಕೆ ಇಳಿದಿವೆ. ಮೂರು–ನಾಲ್ಕು ಪ್ರಕರಣ-ಗಳ ಕಥೆಯನ್ನು ಗಳಗನಾಥರು ಒಂದು ಪ್ರಕರಣದಲ್ಲಿ, ಕೆಲವು ಸಲ ಅರ್ಧ ಪ್ರಕರಣದಲ್ಲಿಯೇ ಹೇಳಿ ಬಿಟ್ಟಿರುವರು. ಕೆಲವು ಪ್ರಕರಣಗಳ ಕಥೆಯನ್ನಂತೂ ಸಂಪೂರ್ಣವಾಗಿ ತ್ಯಜಿಸಿರುವರು. 24, 33, 37, 38, 46, 57, 58, 61 ರಿಂದ 65, ಮತ್ತು 77 ಹೀಗೆ ಹಲವು ಪ್ರಕರಣ-ಗಳು ಲುಪ್ತವಾಗಿದ್ದರೆ, 23, 27, 40 ರಿಂದ 42, 47ರಿಂದ 51, 59, 60, 66 ರಿಂದ 69, 71, 76 ಹೀಗೆ ಹಲವು ಪ್ರಕರಣಗಳು ತೀರ ಮೊಟಕುಗೊಂಡಿವೆ. ಉಳಿದವುಗಳು ಸ್ಥೂಲವಾಗಿ ಅನುವಾದಗೊಂಡಿವೆ. 75, 80ರಂಥ ಕೆಲವು ಪ್ರಕರಣಗಳನ್ನು ಮಾತ್ರ ಗಳಗನಾಥರು ಚಾಚೂ ತಪ್ಪದೆ ಭಾಷಾಂತರಿಸಿರುವರು.

ಈ ರೀತಿ ತೀರ ಸಂಕ್ಷಿಪ್ತಗೊಂಡ 'ಈಶ್ವರೀ ಸೂತ್ರ'ವು ಕೆಲವು ಗುಣಗಳನ್ನು ಪಡೆದರೂ ಹಲವು ದೋಷಗಳಿಗೆ ಗುರಿಯಾಯಿತು. ಆಪಟೆಯವರ 'ಉಷಃಕಾಲ'ದಲ್ಲಿದ್ದ ಹಲವು ಉಪ-ಕಥೆಗಳ ಗೊಂದಲ ಕಡಿಮೆಯಾಗಿ 'ಈಶ್ವರೀ ಸೂತ್ರ'ವು ಎಷ್ಟೋ ಮಟ್ಟಿಗೆ ಏಕಮುಖತೆ-ಯನ್ನು ಪಡೆಯಿತು. ಗಳಗನಾಥರು ನಾನಾಸಾಹೇಬನ ಕಥೆಯನ್ನು ನಿರ್ಲಕ್ಷಿಸಿಲ್ಲವಾದರೂ ಅದನ್ನು ಅಲ್ಲಲ್ಲಿ ಮೊಟಕುಗೊಳಿಸಿ ಶಿವಾಜಿಯೇ ನಾಯಕನೆಂಬಂತೆ ಚಿತ್ರಿಸಿರುವರು. ಆದರೆ ಉಳಿದ ಅನೇಕ ಪಾತ್ರಗಳು ತೀರ ಮಸಕು–ಮಸಕಾದುವು. ಜಿಂಗಿ, ಸುಭಾನ್ಯಾ, ನರಹರಸ್ವಾಮಿ, ಸರ್ಫೋಜಿ, ಮುರಾರಸಾಹೇಬ ಮೊದಲಾದ ಮೂಲ ಪಾತ್ರಗಳು 'ಈಶ್ವರೀ ಸೂತ್ರ'ದಲ್ಲಿ ಸ್ಥಾನವನ್ನು ಪಡೆಯಲಿಲ್ಲವಾದರೆ, ಬಾದಶಹ, ಸಾವಳ್ಯಾ, ತಾನಾಜಿ, ಸೂರ್ಯಾಜಿ ಮತ್ತು

1. ಗಳಗನಾಥ: ಈಶ್ವರೀ ಸೂತ್ರ, ಪುಟ 116.

ಆತನ ಹುಚ್ಚ ಹೆಂಡತಿ–ಈ ಮೊದಲಾದವರು ಇನ್ನೂ ಜೀವಂತವಾಗಿ ಮೂಡಿಬರಬೇಕಾಗಿತ್ತು. ಪಾತ್ರಗಳು ಮಸಕು ಮಸಕಾದರೂ 'ಈಶ್ವರೀ ಸೂತ್ರ'ದ ಕಥೆಯಲ್ಲಿ ಒಳ್ಳೆಯ ಓಟವಿದೆ.

'ಉಷಃಕಾಲ' ಕಾದಂಬರಿಯ 'ಖಾನಾಚೀ ಬೀಬೀ ಝಾಲೀ' 'ಬೀಬೀಚೆ ಕಾಮುಝಾಲೆ" ಮತ್ತು 'ಪುಢೇ' ಎಂಬ ಮೂರು (63,65) ಪ್ರಕರಣಗಳಲ್ಲಿ ನಿರೂಪಿತವಾದ ಮುಹಮ್ಮದನ ಫಜೀತಿಯ ಕಥೆ ಗಳಗನಾಥರಿಗೆ ತಮ್ಮ ಕಾದಂಬರಿಯಲ್ಲಿ ಅಪ್ರಸ್ತುತವೆನಿಸಿತು. ಅದರಂತೆ ಅವರು ಸೈಯದುಲ್ಲಾಖಾನನ ತಲೆಹಿಡುಕತನ, ಮತ್ತು ಕೈಲಾಗದ ಪ್ರೇಮವೀರ ರಣದುಲ್ಲಾಖಾನನ ಸಾತ್ವಿಕ ಸಾಹಸ, ಮೆಹರಜಾನಳ 'ಅಮರ ಪ್ರೇಮ' ಮೊದಲಾದವುಗಳನ್ನು ಸಹಜವಾಗಿ ಬಿಟ್ಟುಬಿಡಬಹುದಾಗಿತ್ತು. 'ಉಷಃಕಾಲ'ದಲ್ಲಿ ಇವೆಲ್ಲವುಗಳು ಕಾದಂಬರಿಯ ರೋಮ್ಯಾಂಟಿಕ್ ಅಂಶವನ್ನು ಪುಷ್ಟೀಕರಿಸಿವೆ; ಆದರೆ 'ಈಶ್ವರೀ ಸೂತ್ರ'ದಲ್ಲಿ ತೀರ ಮೋಟಕಾಗಿ ಬಂದು ನೀರಸವಾಗಿವೆ. ಸೂರ್ಯಾಜಿಯ ಹುಚ್ಚ ಹೆಂಡತಿಯ ಕಥೆಯ ವಿವರಗಳನ್ನು ಬಿಟ್ಟಂತೆ ಗಳಗನಾಥರು ರಂಭಾವತಿ ಮತ್ತು ಚಂದ್ರಾವತಿಯರ ಕಥೆಗಳನ್ನು ಬಿಡಬಹುದಾಗಿತ್ತು. ಅಥವಾ ಅವುಗಳನ್ನು ಇನ್ನೂ ಅರ್ಥಪೂರ್ಣವಾಗುವಂತೆ ನಿರೂಪಿಸಬೇಕಾಗಿತ್ತು. ಮೂಲ ಕಾದಂಬರಿಯ ಇಂಥ ಎಲ್ಲ ಉಪಕಥೆಗಳು ಮುಸಲ್ಮಾನರ ದಬ್ಬಾಳಿಕೆ, ಕ್ರೂರಕೃತ್ಯ, ಅತ್ಯಾಚಾರ, ಅನಾಚಾರಗಳನ್ನು ಭೂತಕನ್ನಡಿಯಲ್ಲಿ ಹಿಡಿದು ತೋರಿಸುತ್ತವೆ. ಅದರಿಂದ ಅವು ಅಲ್ಲಿ ಪರಿಣಾಮಕಾರಿಯಾಗಿವೆ. ಇಂಥವುಗಳನ್ನು ಓದಿ ಮರಾಠಿ ವಾಚಕರು ರೋಮಾಂಚಗೊಂಡ-ರೆಂಬುದು ಐತಿಹಾಸಿಕ ಸತ್ಯವಾಗಿದೆ. ಅದೇ ರೀತಿಯ ಪರಿಣಾಮವು ಕನ್ನಡ ವಾಚಕರ ಮೇಲೂ ಆಗಬೇಕೆಂದು ನಿರೀಕ್ಷಿಸುವುದು ಹೆಚ್ಚಾದೀತು.

'ಈಶ್ವರೀ ಸೂತ್ರ'ದಲ್ಲಿ ಗಳಗನಾಥರ ಮನೋಭಾವದ ಕೆಲವು ಅಂಶಗಳೂ ವ್ಯಕ್ತವಾಗಿವೆ. ಗಳಗನಾಥರು ಮೂಲದಲ್ಲಿ ಇಲ್ಲದ ತಮ್ಮವೇ ಆದ ಕೆಲವು ಮಾತುಗಳನ್ನು ಹೇಳುವಲ್ಲಿ ಅದನ್ನು ಗುರುತಿಸಬಹುದು.

"ಮುಸಲ್ಮಾನರಲ್ಲಿಯೇ ಆಗಲಿ, ಹಿಂದೂ ಜನರಲ್ಲಿಯೇ ಆಗಲಿ, ಬೇರೆ ಯಾವ ಧರ್ಮದವರಲ್ಲಿಯೇ ಆಗಲಿ ಎಲ್ಲರೂ ಸಜ್ಜನರೇ ಇರುತ್ತಾರೆಂದು ಹೇಳಲಿಕ್ಕಾಗುವದಿಲ್ಲ. ಎಲ್ಲರೂ ದುರ್ಜನರಿರುತ್ತಾರೆಂತಲೂ ಹೇಳಲಿಕ್ಕಾಗುವದಿಲ್ಲ. ಸಜ್ಜನರೂ ಇರುವರು, ದುರ್ಜನರೂ ಇರುವರು; ಆದರೆ ಸಜ್ಜನರ ಸಂಖ್ಯೆಯು ಹೆಚ್ಚಾದಾಗ ಯಾವದೊಂದು ಜಾತಿಯ ಉತ್ಕರ್ಷ-ವಾಗುತ್ತದೆಂಬದನ್ನೂ, ದುರ್ಜನರ ಸಂಖ್ಯೆಯು ಹೆಚ್ಚಾದಾಗ ಯಾವದೊಂದು ಜಾತಿಯು ಅಧೋಗತಿ ಹೊಂದುವದೆಂಬದನ್ನೂ ಮಾತ್ರ ನಾವು ಮರೆಯತಕ್ಕದ್ದಲ್ಲ"[1] ಎಂಬುದು ಗಳಗನಾಥರ ನಿಷ್ಪಕ್ಷಪಾತ ವಿಚಾರಸರಣಿ. ಇಂಥ ಕೆಲವು ತಮ್ಮ ವಿಚಾರಗಳನ್ನು ಗಳಗ-ನಾಥರು ಬೇರೆ ಬೇರೆ ಸನ್ನಿವೇಶಗಳಲ್ಲಿ ಕೆಲವು ಸಲ ದೀರ್ಘವಾಗಿ, ಕೆಲವು ಸಲ ಚುಟು-ಕಿನಲ್ಲಿ ಹೇಳಿರುವರು.

ಗಳಗನಾಥರು 'ಈಶ್ವರೀ ಸೂತ್ರ'ದಲ್ಲಿ ತಮ್ಮ ಕೈಗಂಟನ್ನು ಹೆಚ್ಚಾಗಿ ಸೇರಿಸಿಲ್ಲವೆಂದೇ ಹೇಳಬೇಕು. ಮುಹಮ್ಮದನು ಕೊಲ್ಲಲ್ಪಟ್ಟಾಗ ಶಿವಾಜಿಯು ಆತನ ಶವಸಂಸ್ಕಾರವನ್ನು ಸ್ವತಃ ನಿಂತು ಮಾಡಿಸಿದನೆಂದು ಬಣ್ಣಿಸುವಲ್ಲಿ ಗಳಗನಾಥರು ಆಪಟೆಯವರನ್ನೇ ಅನುಸರಿಸಿರುವರು.

1. ಗಳಗನಾಥ : ಈಶ್ವರೀಸೂತ್ರ, ಪುಟ 98.

ಆದರೆ "ಯುದ್ಧದಲ್ಲಿ ಮರಣಹೊಂದಿದ ಬೇರೆ ಮುಸಲ್ಮಾನರ ಶವಗಳ ವ್ಯವಸ್ಥೆಯನ್ನಾದರೂ ಆ ಉದಾರ ಪುರುಷನು ಇದರಂತೆಯೇ ಮಾಡಿಸಿದನು"[1] ಎಂಬುದು ಗಳಗನಾಥರು ಸೇರಿ-ಸಿದ ಹೆಚ್ಚಿನ ವಿಚಾರ. ಕಥಾನಾಯಕನಾದ "ಆ ಉದಾರ ಪುರುಷ"ನಾದ ಶಿವಾಜಿಯ ವ್ಯಕ್ತಿತ್ವದ ಉದಾತ್ತೀಕರಣವೇ ಗಳಗನಾಥರ ಉದ್ದೇಶವಾಗಿದೆ.

'ಉಷಃಕಾಲ'ದ ಕೊನೆಯ ಪ್ರಕರಣ 'ಸಮಾಪ್ತಿ'ಯಾದರೆ 'ಈಶ್ವರೀ ಸೂತ್ರ'ದಲ್ಲಿ ಅದು 'ಸತ್ಸಮಾಗಮ ಪ್ರಭಾವ'ವಾಗಿದೆ. ಗಳಗನಾಥರು ಸತ್ಸಮಾಗಮ ಪ್ರಭಾವದಲ್ಲಿ ಅತ್ಯಂತ ಆಳವಾದ ವಿಶ್ವಾಸವುಳ್ಳವರು. ಸತ್ಸಮಾಗಮವನ್ನು ಹೊಗಳುವ ಯಾವ ಪ್ರಸಂಗವನ್ನೂ ಅವರು ಕಳೆದುಕೊಳ್ಳುವುದಿಲ್ಲ. ಶಿವಾಜಿಯು ರಾಮದಾಸ ಸ್ವಾಮಿಗಳ ಆಶೀರ್ವಾದವನ್ನು ಪಡೆಯುವ ಸನ್ನಿವೇಶವುಳ್ಳ ಈ ಪ್ರಕರಣವನ್ನು ಗಳಗನಾಥರು ಆಪಟೆಯವರಂತೆ ಕೇವಲ 'ಸಮಾಪ್ತಿ' ಎಂದು ಕರೆಯದೆ, 'ಸತ್ಸಮಾಗಮ ಪ್ರಭಾವ' ಎಂದು ಕರೆದಿರುವುದು ಗಳಗನಾಥರ ಮನೋಭವಕ್ಕೆ ತೀರ ಉಚಿತವಾಗಿದೆ.

ಕಾದಂಬರಿಯ ಕೊನೆಗೆ ಸಮರ್ಥ ರಾಮದಾಸರು ಶಿವಾಜಿಯ ಆಗ್ರಹದ ವಿನಂತಿಯ ಪ್ರಕಾರ ಆತನಿಗೆ ತಮ್ಮ ಕೆಂಪು ಶಾಟಿಯನ್ನೇ ಕೊಟ್ಟು "ಇದೇ ನನ್ನ ಗುರುತು, ಇದನ್ನೇ ಸಂಕೇತ ಮಾಡಿಕೋ" ಎಂದು ಹೇಳಿದಾಗ "ಶಿವಾಜಿಯು ಶಾಟಿಯನ್ನು ತನ್ನ ಮಸ್ತಕದ ಮೇಲೆ ಇಟ್ಟುಕೊಂಡು ಅತ್ಯಾನಂದದಿಂದ ಅದನ್ನು ಸ್ವೀಕರಿಸಿದನು" ಎಂಬಲ್ಲಿಗೆ ಆಪಟೆಯವರ ಕಾದಂಬರಿಯು ಮುಕ್ತಾಯವಾಗುತ್ತದೆ. ಆದರೆ ಗಳಗನಾಥರು ಇದಕ್ಕೆ ಇನ್ನೂ ಒಂದು ವಾಕ್ಯವನ್ನು ಜೋಡಿಸಿರುವರು. "ಆ ಶಾಟಿಯ ನಿಶಾನೆಯೇ ಭಗವಾಝೇಂಡೆಯು"[2]. ಮರಾಠಿ ವಾಚಕರಿಗೆ ಈ ಕೊನೆಯ ವಾಕ್ಯದ ಅವಶ್ಯಕತೆಯಿಲ್ಲವಾದರೂ, ಕನ್ನಡಿಗರಿಗೆ ಅದರ ವಿವರಣೆ ಅವಶ್ಯವೆಂದು ಗಳಗನಾಥರು ಭಾವಿಸಿದರು. ಅದು ಸರಿಯೂ ಆಗಿದೆ.

"ಶಕೆ 1568ನೆಯ ವರ್ಷದ ಆಷಾಢ ಕೃಷ್ಣ ದಶಮಿಯ ದಿವಸ"[3] ಎಂಬುದು 'ಸನ್ 1645ನೇ ಇಸವಿಯ ಜುಲೈ ತಿಂಗಳ 8ನೇ ತಾರೀಖು"[4] ಎಂದಾದುದು, ಅಥವಾ 'ಉಷಃಕಾಲ'ದ 'ರಾಣೋಜಿ'ಯು 'ಈಶ್ವರೀ ಸೂತ್ರ'ದಲ್ಲಿ 'ರಾಮದೇವ'ನಾದುದು ಮಹತ್ತ್ವದ ಬದಲಾ-ವಣೆಗಳಲ್ಲ. ಇಂಥ ಚಿಕ್ಕ ಪುಟ್ಟ ವ್ಯತ್ಯಾಸಗಳಿಗೆ ಕಾರಣಗಳನ್ನು ಹುಡುಕುವುದು ಕಠಿಣ ಮತ್ತು ಅನಾವಶ್ಯಕ.

ಆಪಟೆಯವರ ಉಳಿದ ಐತಿಹಾಸಿಕ ಕಾದಂಬರಿಗಳಲ್ಲಿ ಹೆಚ್ಚಾಗಿ ಕಂಡುಬಾರದ ಒಂದು ರೀತಿಯ ಗಂಭೀರ ವಾತಾವರಣವು 'ಉಷಃಕಾಲ'ದಲ್ಲಿದೆ. ಗಳಗನಾಥರ 'ಈಶ್ವರೀ ಸೂತ್ರ' ದಲ್ಲಿಯೂ ಅದು ಇನ್ನೂ ಹೆಚ್ಚಾಗಿ, ಅದೊಂದು ಪತ್ತೇದಾರಿ ಕಾದಂಬರಿ ಎಂಬಂತೆಯೇ ಓದಿಸಿ ಕೊಂಡು ಹೋಗುತ್ತದೆ. ಮಾರುತಿಯ ಗುಡಿಯಲ್ಲಿಯ ಸರಿದಾಡುವ ಮಾರುತಿಯ ಮೂರ್ತಿ, ಗುಪ್ತ ಗುಹೆ, ಅಲ್ಲಿಯ ಗೋಸಾವಿ, ವಿಜಾಪುರದಲ್ಲಿಯ ದೆವ್ವದ ಮನೆ, ಅಲ್ಲಿಯ ಕರಿಯ ಮನುಷ್ಯ, ಅವನ ಅನಿರ್ಬಂಧಿತ ಅಕಲ್ಪಿತ ಚಲನವಲನ, ವಿಜಾಪುರದಲ್ಲಿ ಒಮ್ಮೆಲೇ ಅದೃಶ್ಯನಾಗುವ ನಾನಾ

1. ಗಳನಾಥ : ಈಶ್ವರೀ ಸೂತ್ರ, ಪುಟ 220
2. ಅದೇ, ಪುಟ 237
3. ಹ. ನಾ. ಆಪಟೆ : ಉಷಃಕಾಲ, ಪುಟ 1
4. ಗಳಗನಾಥ : ಈಶ್ವರೀ ಸೂತ್ರ, ಪುಟ 1

ಸಾಹೇಬ, ಆತನ ಕತ್ತಲಕೋಣೆಯ ವಾಸ- ಈ ಮೊದಲಾದವುಗಳೆಲ್ಲ ಒಂದಕ್ಕಿಂತ ಒಂದು ಗೂಢತರವಾಗಿ ಚಿತ್ರಿತವಾಗಿ, ಓದುಗರ ಕುತೂಹಲವನ್ನೂ ಉತ್ಕಂಠೆಯನ್ನೂ ತೀವ್ರಗೊಳಿಸುತ್ತವೆ.[1] ಆದರಿಂದ ರೋಮಾಂಚಿತಗೊಂಡ ವಾಚಕರು ಗಳಗನಾಥರ ಈ ಕಾದಂಬರಿಯನ್ನು ಅತೀವ ಆಸಕ್ತಿಯಿಂದ ಓದಿದರು. ಕನ್ನಡಿಗರಲ್ಲಿ ವಾಚನಾಭಿರುಚಿಯನ್ನು ಹೆಚ್ಚಿಸುವ ಘನೋದ್ದೇಶವನ್ನು ಹೊಂದಿದ ಗಳಗನಾಥರ ಈ ಸಂಕ್ಷಿಪ್ತಾನುವಾದವು ಆ ರೀತಿಯಿಂದ ಸಫಲ ಕೃತಿಯೆಂದೇ ಹೇಳಬೇಕು. ಆದರೂ ಮೂಲಾನುವರ್ತಿಯಾಗಿ ಅನುವಾದಿಸಿದ 'ಕನ್ನಡಿಗರ ಕರ್ಮಕಥೆ'ಯ ಸಫಲತೆ 'ಈಶ್ವರೀ ಸೂತ್ರ'ಕ್ಕೆ ಲಭಿಸಲಾರದು. ಗಳಗನಾಥರು ಇದನ್ನು "ರುಚಿಕರ ಸಾರಶೋಷಣ" ಎಂದು ಕರೆದಿರುವರು.[2] ಇದು 'ಉಷಃಕಾಲ'ದ ಸಾರಶೋಷಣವಾಗಿದೆ ಎಂಬಲ್ಲಿ ಭಿನ್ನಾಭಿಪ್ರಾಯವಿಲ್ಲ; ಆದರೆ ಅದು ರುಚಿಕರವಾಗಿದೆಯೇ ಎಂಬುದು ಅವರವರ ಅಭಿರುಚಿಯನ್ನು ಅವಲಂಬಿಸಿದೆ. ಏನೇ ಆದರೂ ಈ ಅತಿ ಸಂಕ್ಷಿಪ್ತಾನುವಾದವು ಮೂಲಕೃತಿಗೆ ಸಾಕಷ್ಟು ನ್ಯಾಯವನ್ನು ಮಾಡಿದೆಯೆಂದು ಹೇಳುವುದು ಕಠಿಣ.

ಗಳಗನಾಥರು ಶಬ್ದಶಃ ಭಾಷಾಂತರಿಸಿದ 'ಕಮಲ ಕುಮಾರಿ'ಯನ್ನು ಬಿಟ್ಟು, ಅವರು ಒಟ್ಟು 15 ಕಾದಂಬರಿಗಳನ್ನು ಮರಾಠಿಯಿಂದ ಅನುವಾದಿಸಿದರು. ಇವುಗಳಲ್ಲಿ ಕೆಲವು ಬಂಗಾಲಿ ಮೂಲದವುಗಳಾಗಿದ್ದರೂ ಗಳಗನಾಥರು ಮಾತ್ರ ಅವುಗಳ ಮರಾಠಿ ಭಾಷಾಂತರಗಳನ್ನೇ ತಮ್ಮ ಅನುವಾದಕ್ಕಾಗಿ ಅವಲಂಬಿಸಿದರು. ತಮ್ಮ ಅನುವಾದಗಳ ಪ್ರಸ್ತಾವನೆಯಲ್ಲಿ ಅವರು ಮೂಲ ಕಾದಂಬರಿಯ ಮತ್ತು ಅದರ ಲೇಖಕರ ಹೆಸರುಗಳನ್ನು ಬಹುಶಃ ತಿಳಿಸಿದ್ದಾರೆ. ಆದರೆ ಕೆಲವು ಸಲ ಯಾವುದನ್ನೂ ಹೇಳಿಲ್ಲ. 'ತಿಲೋತ್ತಮೆ', 'ಮರಾಠರ ಅಭ್ಯುದಯ', ಶಿವಪ್ರಭುವಿನ ಪುಣ್ಯ'. ಮತ್ತು 'ರಾಣಾ ರಾಜಸಿಂಹ' ಈ ಕಾದಂಬರಿಗಳ ಮೂಲದ ಬಗ್ಗೆ ಏನೂ ಹೇಳಿಲ್ಲವಾದರೆ, 'ಛತ್ರಪತಿ'ಯು ಆಪಟೆಯವರ ಕೃತಿಯೆಂದು ಮಾತ್ರ ತಿಳಿಸಿದ್ದಾರೆ; ಕಾದಂಬರಿಯ ಹೆಸರು ಹೇಳಿಲ್ಲ. 'ಧರ್ಮ ರಹಸ್ಯ' ಮತ್ತು 'ಧಾರ್ಮಿಕ ತೇಜ'ಗಳ ಮೂಲ ಕೃತಿಗಳ ನಾಮನಿರ್ದೇಶವನ್ನು ಮಾತ್ರ ಮಾಡಿದ ಗಳಗನಾಥರು ಗ್ರಂಥಕರ್ತರ ಹೆಸರುಗಳನ್ನು ಸೂಚಿಸಿಲ್ಲ. 'ಸಂಸಾರ ಸುಖ'ದ ಮೂಲ ಬಂಗಾಲಿ ಲೇಖಕರ ಮತ್ತು ಕೃತಿಯ ಹೆಸರು ಸೂಚಿಸಿದ್ದರೂ, ಮರಾಠಿ ಭಾಷಾಂತರದ ಹೆಸರನ್ನಾಗಲಿ ಭಾಷಾಂತರಕಾರರ ಹೆಸರನ್ನಾಗಲಿ ಗಳಗನಾಥರು ಹೇಳಿಯೇ ಇಲ್ಲ. ತಮ್ಮ ಕನ್ನಡ ವಾಚಕರಿಗೆ ಈ ಎಲ್ಲ ವಿವರ ಅನಾವಶ್ಯಕವೆಂದು ಅವರು ಭಾವಿಸಿರಬಹುದು. ಆದರೆ ಬಂಗಾಲಿ ಮತ್ತು ಮರಾಠಿ ಕಾದಂಬರೀ ಸಾಹಿತ್ಯದ ವಿರವರಗಳನ್ನು ಪರಿಶೀಲಿಸಿ, ಗಳಗನಾಥರು ಹೇಳದೆ ಬಿಟ್ಟ ಅನೇಕ ವಿವರಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಆದರೆ ಇಂದು ಇವುಗಳಲ್ಲಿಯ ಕೆಲವು ಮೂಲ ಕೃತಿಗಳು ದುರ್ದೈವದಿಂದ ಅಲಭ್ಯವಾಗಿವೆ. ಈಗ ಖಚಿತವಾಗಿ ಹೇಳಲು ಸಾಧ್ಯವಾದ ವಿವರಗಳು ಕೆಳಗಿನಂತಿವೆ.

---

1. ಇಂಥ ಬಿಗಿಗೊಂಡ ವಾತಾವರಣವನ್ನು ಸಡಿಲುಗೊಳಿಸಲು, 'ಉಷಃಕಾಲ'ದಲ್ಲಿ ಕೆಲವು ನವಿರಾದ ವಿನೋದದ ಪ್ರಸಂಗಗಳೂ ಇವೆ. ಆದರೆ ಗಳಗನಾಥರು ಅವುಗಳಿಗೆ ತಮ್ಮ 'ಈಶ್ವರೀ ಸೂತ್ರ'ದಲ್ಲಿ ಸ್ಥಾನವನ್ನು ಕಲ್ಪಿಸಿಲ್ಲ.

2. ಗಳಗನಾಥ : ಈಶ್ವರೀ ಸೂತ್ರ, ಪ್ರಸ್ತಾವನೆ, ಪುಟ 4

'ಕಮಲ ಕುಮಾರಿ'ಯನ್ನಲ್ಲದೆ 'ರಾಣಿ ಮೃಣಾಲಿನಿ', 'ಕನ್ನಡಿಗರ ಕರ್ಮಕಥೆ' ಮತ್ತು 'ಈಶ್ವರೀ ಸೂತ್ರ' ಈ ಅನುವಾದಗಳ ಮೂಲವನ್ನು ಆಗಲೇ ಹೇಳಲಾಗಿದೆ. ಈಗ ಉಳಿದವು-ಗಳ ಬಗ್ಗೆ ವಿಚಾರಿಸಬಹುದು.

'ವೈಭವ' ಅಥವಾ 'ಚಾಣಕ್ಯನ ಕಾರಸ್ಥಾನ' ಎಂಬುದನ್ನು ಗಳಗನಾಥರು ಆಪಟೆಯವರ 'ಚಂದ್ರಗುಪ್ತ ಅಥವಾ ದೋನ ಅಡೀಚ ಹಜಾರ ವರ್ಷಾಪೂರ್ವೀಚೆ ಹಿಂದುಸ್ಥಾನ' ಎಂಬುದರ ಆಧಾರದಿಂದ 1912ರಲ್ಲಿ ಅನುವಾದಿಸಿದರು.

ಆಪಟೆಯವರ 'ರೂಪನಗರಚಿ ರಾಜಕನ್ಯಾ' ಎಂಬುದು 'ಕ್ಷಾತ್ರತೇಜ ಅಥವಾ ಸ್ವಾಮಿ ಭಕ್ತಿ ಪ್ರದರ್ಶನ'ವೆಂದು 1914ರಲ್ಲಿ ಅನುವಾದಿತವಾಯಿತು.

'ಧರ್ಮರಹಸ್ಯ ಅಥವಾ ಸತ್ಸಮಾಗಮ ಪ್ರಭಾವ'ಕ್ಕೆ (1914) 'ಸಮ್ರಾಟ ಅಶೋಕ' ಮತ್ತು 'ಅಶೋಕ ಅಥವಾ ಆರ್ಯಾವೃತ್ತಾಂತಲಾ ಪಹಿಲಾ ಚಕ್ರವರ್ತಿ ರಾಜಾ' ಎಂಬ ಎರಡು ಪುಸ್ತಕಗಳು ಮೂಲಧನವನ್ನು ಒದಗಿಸಿವೆ. 'ಸಮ್ರಾಟ ಅಶೋಕ' ಎಂಬುದನ್ನು ಬಾಲಚಂದ್ರ ನಾನಚಂದ್ರ ಶಹಾ ಎಂಬವರು ಬರೆದಿದ್ದಾರೆ.

'ತಿಲೋತ್ತಮೆ ಅಥವಾ ಸರಸಪ್ರೇಮ' ಎಂಬ ಚಿಕ್ಕ ಕಾದಂಬರಿಯು 1917ರಲ್ಲಿ, ದಾಮೋದರ ಮುಖ್ಯೋಪಾಧ್ಯಾಯರ 'ನವಾಬ ನಂದಿನೀ' ಎಂಬ ಬಂಗಾಲಿ ಕಾದಂಬರಿಯ 'ಆಯೇಷಾ' ಎಂಬ ಮರಾಠಿ ಭಾಷಾಂತರದ ಅನುವಾದ.[1]

ಆಪಟೆಯವರ 'ಸೂರ್ಯೋದಯ'ವು 1918ರಲ್ಲಿ ಪ್ರಕಟವಾದ ಗಳಗನಾಥರ 'ಮರಾಠರ ಅಭ್ಯುದಯ' ಎಂಬುದಕ್ಕೆ ಆಧಾರವಾಗಿದೆ.

1918ರಲ್ಲಿಯೇ ಪ್ರಕಟವಾದ 'ಶಿವಪ್ರಭುವಿನ ಪುಣ್ಯ ಅಥವಾ ಕೆಚ್ಚೆದೆಯ ಮರಾಟರು' ಎಂಬುದಕ್ಕೆ ಆಪಟೆಯವರ 'ಕೇವಳ ಸ್ವರಾಜ್ಯಾಸಾಠಿ' ಎಂಬುದು ಆಧಾರ.

1919ರಲ್ಲಿ ಅನುವಾದಿತವಾದ 'ಛತ್ರಪತಿ'ಗೆ ಆಪಟೆಯವರ 'ಸೂರ್ಯಗ್ರಹಣ'ವು ಆಧಾರ.

ನಾಗೇಶ ವಿನಾಯಕ ಬಾಪಟ ಅವರ 'ಪಾನಿಪತಚಿ ಮೋಹೀಮ' ಎಂಬುದರ ಆಧಾರ-ದಿಂದ 'ಕುರುಕ್ಷೇತ್ರ'ವು 1919ರಲ್ಲಿ ಅನುವಾದಿತವಾಯಿತು.

'ಗೃಹಕಲಹ ಅಥವಾ ನೀಚ-ಸ್ವಾರ್ಥ-ಶೂಲ'ವು ಲಕ್ಷ್ಮಣ ನಾರಾಯಣ ಜೋಶಿ ಅವರ 'ಅಸ್ತೋದಯ'ದ ಆಧಾರದಿಂದ 1921ರಲ್ಲಿ ಪ್ರಕಟವಾಯಿತು.

1928ರಲ್ಲಿ ಪ್ರಕಟವಾದ 'ಸಂಸಾರ-ಸುಖ ಅಥವಾ ಲೋಕಭ್ರಮ ವಿಲಾಸ'ಕ್ಕೆ ಬಾಬು

---

1. "ಇದನ್ನು (ತಿಲೋತ್ತಮೆ) ಯಾವುದಾದರೂ ಒಂದೇ ಕೃತಿಯ ಅನುವಾದ ಎನ್ನುವುದಂತೂ ನಿಜ ವಲ್ಲ. ಹಾಗಿದ್ದರೆ ಗಳಗನಾಥರು ಖಂಡಿತವಾಗಿ ಉಲ್ಲೇಖಿಸುತ್ತಿದ್ದರು. ಬಹುಶಃ ಟಾಡನ 'Annals of Rajastan'ದಲ್ಲಿ ಬಂದ ಪ್ರಸಂಗವನ್ನೇ ಹಿಗ್ಗಿಸಿ ಗಳಗನಾಥರು ಈ ಸ್ವತಂತ್ರ ಕಾದಂಬರಿ-ಯನ್ನು ಬರೆದಿರಬೇಕು" ಎಂದು ಡಾ. ಹಾವನೂರ ಅವರು (ಗಳಗನಾಥ ಮಾಸ್ತರರು. ಪುಟ 37) ಊಹಿಸಿರುವರು. ಆದರೆ ಇದು ಸರಿಯಲ್ಲ. 'ತಿಲೋತ್ತಮೆ'ಯು 'ನವಾಬ ನಂದಿನಿ'ಯ ಸಂಕ್ಷಿಪ್ತಾ-ನುವಾದ. ಅನೇಕ ಪ್ರಕರಣಗಳೂ, ಕೆಲವೆಡೆಯ ಸಂಭಾಷಣೆಗಳೂ, ವಾಕ್ಯವೃಂದಗಳೂ. ತೀರ ಅಭಿ-ನ್ನವಾಗಿವೆ.

ಹರಿ ಸಧನ ಮುಖರ್ಜಿ ಅವರ 'ಖುಸರು' ಎಂಬ ಬಂಗಾಲಿ ಕಾದಂಬರಿಯು ಆಧಾರವಾಗಿದೆ. ಇದನ್ನು 'ರಾಜಸಂಸಾರ ಅಥವಾ ಶಹಜಾದಾ ಖುಸರು' ಎಂಬ ಹೆಸರಿನಿಂದ ತಾತ್ಯಾ ನೇಮಿನಾಥ ಪಾಂಗಳ ಎಂಬವರು 1919ರಲ್ಲಿ ಮರಾಠಿಗ ಭಾಷಾಂತರಿಸಿದ್ದರು.

1928ರಲ್ಲಿ ಪ್ರಕಟವಾದ 'ರಾಣಾ ರಾಜಸಿಂಹ' ಎಂಬುದಕ್ಕೆ ಬಂಕಿಮಚಂದ್ರರ 'ರಾಜ ಸಿಂಹ'ವೇ ಮೂಲಾಧಾರವಾಗಿದೆ. ವಾ. ಗೋ. ಆಪಟೆ ಎಂಬವರು ಇದನ್ನು ಮರಾಠಿಗೆ ಭಾಷಾಂತರಿಸಿದ್ದರು. ಗಳಗನಾಥರು ಮರಾಠಿಯ ಕೃತಿಯನ್ನು ಅನುವಾದಿಸಿದ್ದಾರೆ.

ಬಾಲಚಂದ್ರ ನಾನಚಂದ್ರ ಶಹಾ ಅವರ ಮರಾಠಿ 'ಛತ್ರಸಾಲ' (1915) ಎಂಬುದರ ಆಧಾರದಿಂದ 'ಧಾರ್ಮಿಕ ತೇಜ'ವು 1928ರಲ್ಲಿ ಅನುವಾದಗೊಂಡಿತು.

ಈ ಎಲ್ಲ ಕಾದಂಬರಿಗಳೂ ಐತಿಹಾಸಿಕ ಕಾದಂಬರಿಗಳೇ ಆಗಿದ್ದು, ಇವುಗಳಲ್ಲಿ ಮಹಾರಾಷ್ಟ್ರರ ಐತಿಹಾಸಿಕ ಹಿನ್ನೆಲೆಯಲ್ಲಿ 7, ರಜಪೂತರ ಐತಿಹಾಸಿಕ ಹಿನ್ನೆಲೆಯಲ್ಲಿ 5, ಮುಹಮ್ಮದೀಯರ ಐತಿಹಾಸಿಕ ಹಿನ್ನೆಲೆಯಲ್ಲಿ 1, ಮೌರ್ಯರ ಐತಿಹಾಸಿಕ ಹಿನ್ನೆಲೆಯಲ್ಲಿ 2 ಮತ್ತು ಕನ್ನಡಿಗರ ಐತಿಹಾಸಿಕ ಹಿನ್ನೆಲೆಯಲ್ಲಿ 1–ಹೀಗೆ ರಚಿತವಾಗಿವೆ.

ಸಾಧಾರಣವಾಗಿ ಈ ಎಲ್ಲ ಅನುವಾದಗಳು ಮೂಲ ಕಾದಂಬರಿಗಳ ಪ್ರತಿಶತ 55 ರಿಂದ 60ರಷ್ಟು ಗಾತ್ರವನ್ನು ಉಳಿಸಿಕೊಂಡಿವೆ. ಇವುಗಳಲ್ಲಿ ಅತಿ ವಿಸ್ತೃತ ಅನುವಾದ 'ಕನ್ನಡಿಗರ ಕರ್ಮಕಥೆ', ಅತಿ ಸಂಕ್ಷಿಪ್ತ ಅನುವಾದ 'ಈಶ್ವರೀ ಸೂತ್ರ', ಮತ್ತು ಮಧ್ಯಮ ಗಾತ್ರದ 'ರಾಣಿ ಮೃಣಾಲಿನಿ' ಇವುಗಳ ವಿವರವಾದ ಅಭ್ಯಾಸದಿಂದ ಗಳಗನಾಥರು ತಮ್ಮ ಅನುವಾದದಲ್ಲಿ ಅನುಸರಿಸಿದ ಧೋರಣೆ ಏನು ಎಂಬುದನ್ನು ಕಂಡುಕೊಳ್ಳಲಾಗಿದೆ. ಅವರ ಅನುವಾದಗಳ ಮುಖ್ಯ ಲಕ್ಷಣಗಳನ್ನು ಹೀಗೆ ಕ್ರೋಢೀಕರಿಸಬಹುದು:

1. ಸಂಕ್ಷಿಪ್ತತೆ ಒಡೆದು ಕಾಣುವ ಅಂಶವಾಗಿದೆ. ಗಳಗನಾಥರ ಯಾವ ಕಾದಂಬರಿಯೂ ಮೂಲ ಕಾದಂಬರಿಗಿಂತ ದೀರ್ಘವಾಗಿಲ್ಲ.

2. ಗಳಗನಾಥರು ಕಾದಂಬರಿಗಳನ್ನು ಅನುವಾದಿಸುವಾಗ ಕಥೆಯ ಓಟದ ಕಡೆಗೇ ತಮ್ಮ ಗಮನವನ್ನು ಕೇಂದ್ರೀಕರಿಸಿದರು.

3. ಅದರಿಂದಾಗಿ ಅನೇಕ ಸನ್ನಿವೇಶಗಳನ್ನು, ವರ್ಣನೆಗಳನ್ನು, ಕಥಾಭಾಗಗಳನ್ನು ಸಂಕೋಚಗೊಳಿಸಿದರು, ಅಥವಾ ತ್ಯಜಿಸಿಯೇ ಬಿಟ್ಟರು.

4. ಅನುವಾದಗಳಲ್ಲಿ ಸ್ಥೂಲವಾಗಿ ಮೂಲವನ್ನೇ ಅನುಸರಿಸಿದರೂ ಅಲ್ಲಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿರುವರು. ಕೆಲವೆಡೆ ಕಥೆಯನ್ನು ಬೆಳೆಸಿದ್ದಾರೆ. ಕೆಲವೆಡೆ ಪಾತ್ರ-ಗಳ ಬಣ್ಣವನ್ನು ಬದಲಿಸಿದ್ದಾರೆ, ಕೆಲವೆಡೆ ಸನ್ನಿವೇಶಗಳನ್ನು ಚಿತ್ರಿಸುವಾಗ ತಮ್ಮ ಕೈವಾಡವನ್ನು ತೋರಿದ್ದಾರೆ. ವರ್ಣನೆಗಳಲ್ಲೂ ಕ್ವಚಿತ್ತಾಗಿ ತಮ್ಮ ಮಾತುಗಳನ್ನು ಸೇರಿಸಿದ್ದಾರೆ.

5. ಈ ವ್ಯತ್ಯಾಸಗಳ ಮುಖ್ಯ ಉದ್ದೇಶವೆಂದರೆ ಕಥೆಯನ್ನು, ಪಾತ್ರಗಳನ್ನು—ಅದರಲ್ಲೂ, ಅವರ ದೃಷ್ಟಿಯಲ್ಲಿ ಧಾರ್ಮಿಕವಾದ ಪಾತ್ರಗಳನ್ನು– ಉದಾತ್ತೀಕರಿಸುವುದು. ಧಾರ್ಮಿಕವೆಂದರೆ ಸಚ್ಚಾರಿತ್ರ್ಯವುಳ್ಳ ಪಾತ್ರಗಳು. ಉಳಿದವರ ಬಗ್ಗೆ ಒಂದು ರೀತಿಯ ಔದಾಸೀನ್ಯವನ್ನು ಅಥವಾ ವಿರೋಧವನ್ನು ಅವರು ಪ್ರಕಟಿಸಿದ್ದಾರೆ.

6. ಸತ್ಸಮಾಗಮದ ಮಹತ್ತ್ವವನ್ನು ಸಾಧ್ಯವಿದ್ದಲ್ಲೆಲ್ಲ ಎತ್ತಿ ತೋರಿಸುತ್ತಾರೆ. ಅಂಥ ಸನ್ನಿವೇಶಗಳು ಮೂಲದಲ್ಲಿ ಇಲ್ಲವಿದ್ದರೆ ಕಲ್ಪಿಸಿದ್ದಾರೆ; ಅಥವಾ ಇದ್ದವುಗಳನ್ನು ತುಸು ತಿದ್ದಿದ್ದಾರೆ.

7. ತಮ್ಮ ಉದ್ದೇಶವನ್ನು ಸೂಚ್ಯವಾಗಿ ಇಡದೆ, ಬಿಚ್ಚು ಮಾತುಗಳಲ್ಲಿಯೇ ಹೇಳುತ್ತಾರೆ.

8. ವಾಚಕರ ಗ್ರಹಣಶಕ್ತಿಯ ಬಗ್ಗೆ ಅವರಿಗೆ ಅವಿಶ್ವಾಸವಿದ್ದಂತೆ ಕಾಣುತ್ತದೆ. ವಾಚಕರನ್ನು ಕುರಿತು ಅಲ್ಲಲ್ಲಿ ಬೋಧಿಸುವುದೂ ಬಹುಶಃ ಇದೇ ಉದ್ದೇಶದಿಂದ. ತಮ್ಮ ಹೃದ್ಗತವನ್ನು ಅವರು ನೇರವಾಗಿ ವಾಚಕರ ಮುಂದೆ ಹೇಳಿಕೊಳ್ಳುತ್ತಾರೆ.

9. ಸ್ವತಃ ಸನಾತನ ಧರ್ಮದಲ್ಲಿ ವಿಶ್ವಾಸವುಳ್ಳ, ಈಶ್ವರಶ್ರದ್ಧೆಯುಳ್ಳ ಗಳಗನಾಥರು ಕಾದಂಬರಿಯಲ್ಲಿಯ ಮುಖ್ಯ ಘಟನೆಗಳಿಗೂ, ಪರಿವರ್ತನೆಗಳಿಗೂ ಈಶ್ವರಸಂಕೇತವೇ ಕಾರಣವೆಂದು ಭಾವಿಸುತ್ತಾರೆ. ಕೆಲವು ಸಲ ಅದನ್ನು ಸೂಚ್ಯವಾಗಿ, ಇನ್ನು ಕೆಲವು ಸಲ ಬಿಚ್ಚು ಮಾತುಗಳಲ್ಲಿ ಹೇಳುತ್ತಾರೆ.

10. ಕಾದಂಬರೀ ತಂತ್ರದ ದೃಷ್ಟಿಯಿಂದ ಹೆಚ್ಚು ಬದಲಾವಣೆಗಳನ್ನು ಮಾಡಿಕೊಂಡಿಲ್ಲವಾದರೂ, ಗಳಗನಾಥರ ಅನುವಾದಗಳ ಮೊದಲು ಪ್ರಕರಣವು ಯಾವಾಗಲೂ ಕಾದಂಬರೀ ಕಥೆಯ ಹಿನ್ನೆಲೆಯನ್ನು ತಿಳಿಸುತ್ತದೆ. ಅದರಂತೆ ಮೂಲದಲ್ಲಿಯ ಅನೇಕ ಸಂಭಾಷಣೆಗಳು ಮೊಟಕುಗೊಂಡಿವೆ, ಇಲ್ಲವೆ ಲುಪ್ತವಾಗಿವೆ.

11. 'ರಾಣಿ ಮೃಣಾಲಿನಿ', 'ಛತ್ರಪತಿ' ಮೊದಲಾದ ಕೆಲವೇ ಕಾದಂಬರಿಗಳಲ್ಲಿಯ ಕಥೆಯನ್ನು ತುಸು ಬೆಳೆಸಿ ಬರೆದಿದ್ದಾರೆ, ಆದರೆ ಪ್ರತಿಯೊಂದು ಅನುವಾದದಲ್ಲಿಯೂ ನೀತಿಬೋಧಕ ಮಾತುಗಳನ್ನು ತಪ್ಪದೇ ಸೇರಿಸಿರುವರು.

ಹೀಗೆ ಕೆಲವು ವಿಚಾರಗಳು ಗಳಗನಾಥರ ಎಲ್ಲ ಅನುವಾದಗಳಲ್ಲಿಯೂ ಸಾಧಾರಣವಾಗಿ ಕಂಡುಬರುತ್ತವೆ. ಅಲ್ಲಲ್ಲಿ ಕೆಲವು ಚಿಕ್ಕಪುಟ್ಟ ವ್ಯತ್ಯಾಸಗಳು ಇರಬಹುದು. ಆದರೆ ಪ್ರತಿಯೊಂದು ಅನುವಾದದ ಬಗ್ಗೆ ವಿವರವಾದ ವಿಶ್ಲೇಷಣೆ ಮಾಡುವ ಅವಶ್ಯಕತೆಯಿಲ್ಲ. ಪ್ರತಿಯೊಂದು ಅನುವಾದವು ಮೂಲ ಕಾದಂಬರಿಯಿಂದ ಹೇಗೆ ಭಿನ್ನವಾಗಿದೆ, ಅದರ ವಿವರಗಳೇನು ಎಂಬುದರ ಚರ್ಚೆಯಿಂದ ಹೆಚ್ಚಿನ ಪ್ರಯೋಜನವಿಲ್ಲ. ಆದ್ದರಿಂದ ಈಗ ಮೇಲೆ ಚರ್ಚಿಸಿದ ಮೂರು ಕಾದಂಬರಿಗಳನ್ನು ಬಿಟ್ಟು ಉಳಿದವುಗಳ ವಸ್ತುವೇನೆಂಬುದನ್ನೂ, ಅವುಗಳಲ್ಲಿ ಎತ್ತಿ ಹೇಳಬೇಕಾದ ವೈಶಿಷ್ಟ್ಯಗಳೇನಿವೆ ಎಂಬುದನ್ನೂ ನೋಡುವುದು ಕ್ರಮಪ್ರಾಪ್ತವಾಗುತ್ತದೆ.

ಆಪಟೆಯವರ 'ಚಂದ್ರಗುಪ್ತ ಅಥವಾ ಎರಡು-ಎರಡೂವರೆ ಸಾವಿರ ವರ್ಷಗಳ ಪೂರ್ವದ ಹಿಂದೂಸ್ಥಾನ'ಎಂಬ ಕಾದಂಬರಿಯನ್ನು ಗಳಗನಾಥರು 'ವೈಭವ'ಎಂಬ ಹೆಸರಿನಿಂದ ಅನುವಾದಿಸಿದರು. ಇದು ಚಾಣಕ್ಯ–ಚಂದ್ರಗುಪ್ತ ಮತ್ತು ನಂದಮಂತ್ರಿಯಾದ ರಾಕ್ಷಸ ಇವರ ಕಥೆ. ನಂದವಂಶದ ಅರಸು ಧನಾನಂದನ ಮೇಲಿನ ದ್ವೇಷದಿಂದ ಚಾಣಕ್ಯನು ನವನಂದರನ್ನು ಸಂಹರಿಸಿ, ಚಂದ್ರಗುಪ್ತನನ್ನು ಪಟ್ಟಕ್ಕೆ ಕೂಡ್ರಿಸಿ, ರಾಕ್ಷಸನು ಚಂದ್ರಗುಪ್ತನ ಮಂತ್ರಿಪದವಿಯನ್ನು ಸ್ವೀಕರಿಸುವಂತೆ ಮಾಡುವನು. ಚಾಣಕ್ಯನ ಕಾರಸ್ಥಾನಗಳನ್ನು ಪ್ರಧಾನ

ವಾಗಿ ಬಳಸಿಕೊಂಡು ವಿಶಾಖದತ್ತನು ಸಂಸ್ಕೃತದಲ್ಲಿ 'ಮುದ್ರಾ ರಾಕ್ಷಸ'ವನ್ನು ಬರೆದನು. ಆದರೆ ಆ ನಾಟಕಕ್ಕೂ ಆಪಟೆಯವರ ಈ ಕಾದಂಬರಿಗೂ ಏನೂ ಸಂಬಂಧವಿಲ್ಲ. ಅಲ್ಲಿ ರಾಕ್ಷಸ ಸೋತುಹೋಗಲಿಕ್ಕೆ ಆತನ ಮುದ್ರೆಯ ಉಂಗುರವೇ ಪ್ರಧಾನವಾದರೆ ಇಲ್ಲಿ ಅದರ ಪ್ರಸ್ತಾಪವೇ ಬರುವುದಿಲ್ಲ. ಕೊನೆಗೆ ಮಿತ್ರವತ್ಸಲನಾದ ಚಂದನದಾಸನ ಪ್ರಾಣರಕ್ಷಣೆಗಾಗಿ ರಾಕ್ಷಸನು ಚಂದ್ರಗುಪ್ತನ ಪ್ರಧಾನೀಪದವನ್ನು ಸ್ವೀಕರಿಸಿದಂತೆ ವಿಶಾಖದತ್ತ ಚಿತ್ರಿಸಿದ್ದರೆ, ಆಪಟೆಯವರ ರಾಕ್ಷಸ ಅದಕ್ಕೂ ಸೋಲದ ನಂದನಿಷ್ಠನು. ಕೊನೆಗೆ ಚಂದ್ರಗುಪ್ತನು ವ್ಯಾಧಪತಿ ಪ್ರದ್ಯುಮ್ನದೇವನ ಮಗನಲ್ಲವೆಂದೂ ಧನಾನಂದನ ಮಗನೇ ಎಂದೂ ಖಚಿತ ವಾದಾಗ ಮಾತ್ರ ಆತ ಮಂತ್ರಿಯಾಗಲು ಒಪ್ಪಿಕೊಂಡ. ಕಾದಂಬರಿಯಲ್ಲಿ ಚಂದನದಾಸ, ಭಾಗುರಾಯಣ, ಪರ್ವತರಾಜ ಮೊದಲಾದ ಪಾತ್ರಗಳು ನಾಟಕದಲ್ಲಿಯಿಲ್ಲದ ಭಿನ್ನವಾದ ವ್ಯಕ್ತಿತ್ವಗಳನ್ನೇ ಪಡೆದಿರುವವು.

ಆದರೂ 'ಚಂದ್ರಗುಪ್ತ' ಕಾದಂಬರಿಯು 'ಮುದ್ರಾರಾಕ್ಷಸ'ದ ಭವ್ಯತೆಯನ್ನೂ ಸಂಕೀರ್ಣತೆಯನ್ನೂ ಪಡೆದಿಲ್ಲ. ಅಲ್ಲಿಯ ರಾಜತಾಂತ್ರಿಕತೆಯ ಪರಿಣತಿ ಇಲ್ಲಿ ಕಂಡಿಲ್ಲ. "ಆಪಟೆಯವರ ಕಾದಂಬರಿ ಐತಿಹಾಸಿಕ ಕಾದಂಬರಿ ಎನಿಸುತ್ತದೆಯಲ್ಲದೆ ರಾಜಕೀಯ ಕಾದಂಬರಿ ಎನಿಸುವುದಿಲ್ಲ. ಇಲ್ಲಿ ಚಾಣಕ್ಯ ಮತ್ತು ರಾಕ್ಷಸ ಇವರ ವಿದ್ವತ್ತು ಮತ್ತು ರಾಜಕರಣ ಪಟುತ್ವಗಳು ಹೆಚ್ಚಿನ ಕಳೆಯನ್ನು ಪಡೆದಿಲ್ಲ".[1]

ಆದರೆ ಕಾದಂಬರಿಯಲ್ಲಿಯ ಮುರಾದೇವಿಯ ಪಾತ್ರವು ಆಪಟೆಯವರ ಒಳ್ಳೆಯ ಸೃಷ್ಟಿ. ಗಳಗನಾಥರು ಅವಳನ್ನು "ಕರ್ಕಶ ಸ್ತ್ರೀ" ಎಂದು ಕರೆದಿದ್ದರೂ, ಈ ಪಾತ್ರ ತುಂಬ ಜೀವಂತವಾಗಿದೆ. ಈ ಕಾದಂಬರಿಯಲ್ಲಿ ಅವಳು ಒಬ್ಬ ಸಾಮಾನ್ಯ ದಾಸಿಯಾಗಿರದೆ, ಕಿರಾತ ರಾಜಕನ್ಯೆಯಾಗಿದ್ದು ಅನಂತರ ಧನಾನಂದನ ಪತ್ನಿಯೂ ಆಗಿದ್ದಾಳೆ. ಪುತ್ರಪ್ರೇಮದಿಂದ ಪ್ರೇರಿತವಾದ ಅವಳ ಪತಿದ್ವೇಷ, ಆದರೂ ಸ್ತ್ರೀಸಹಜವಾದ ಪತಿಭಕ್ತಿ–ಚಂಚಲ ಸ್ವಭಾವಗಳು, ಮತ್ತು ಕೊನೆಗೆ ಪತಿಹಂತಕಳೆನಿಸಿಕೊಳ್ಳಲೊಲ್ಲದೆ ಮಾಡುವ ಆತ್ಮ ಬಲಿದಾನ— ಇವೆಲ್ಲವೂ ತುಂಬ ಸಹಜತೆಯಿಂದ ಮೂಡಿ ಬಂದಿವೆ. ಕೊನೆಗೆ ಚಂದ್ರಗುಪ್ತನು ತನ್ನನ್ನು ಮುರೆಯ ಮಗ 'ಮೌರ್ಯ'ನೆಂದು ಕರೆದುಕೊಂಡು ಮಾತೃಋಣವನ್ನು ತೀರಿಸುವನು.

ಗಳಗನಾಥರು ಮೂಲ ಕಾದಂಬರಿಯನ್ನೇ ಪ್ರಾಮಾಣಿಕವಾಗಿ ಅನುವಾದಿಸಿರುವರು. ಹೆಚ್ಚಾಗಿ ತಮ್ಮ ಕೈಗಂಟನ್ನು ಸೇರಿಸಿಲ್ಲ. ಪಾತ್ರಗಳ ಚಿತ್ರಣದಲ್ಲಿ ಕೂಡ ವ್ಯತ್ಯಾಸಗಳನ್ನು ಮಾಡಿಕೊಂಡಿಲ್ಲವಾದರೂ, ಗಳಗನಾಥರು ಚಾಣಕ್ಯನನ್ನು "ಧೂರ್ತ ಚಾಣಕ್ಯ"ನೆಂದೇ ಹಲವು ಸಲ ಕರೆದಿರುವರು. ಅಲ್ಲದೆ ತಮ್ಮದೇ ಆದ ಕೆಲವು ಮಾತುಗಳನ್ನು ಮಾತ್ರ ಅಲ್ಲಲ್ಲಿ ಸೇರಿಸಿರುವರು.

ಮುರಾದೇವಿ ಬಸಿರಾಗಿದ್ದಾಳೆಂದು ಸುಮತಿಕೆಯ ಮುಖದಿಂದ ಕೇಳಿ ತಿಳಿದ ಧನಾನಂದನು ಆನಂದಪಟ್ಟನು. ಆಗ ಗಳಗನಾಥರು "ಹೆಂಡತಿಯ ಬಸಿರು ಸೋಸಿನ ಗಂಡಸರಿಗೆ ಬಹು ಉತ್ತೇಜನಕರ, ಬಹು ಅಭಿಮಾನಕರ"[2] ಎಂದು ಹೇಳುವರು. ಅಲ್ಲದೆ "ವಿನಾಶ

1. ಹಾ. ಮಾ. ನಾಯಕ (ಸಂ): ಗಳಗನಾಥ (1970), ಕೃಷ್ಣಮೂರ್ತಿ ಕಿತ್ತೂರ ಅವರ ಲೇಖನ, ಪುಟ 38

2. ಗಳಗನಾಥ: ವೈಭವ, ಪುಟ 112

ಕಾಲೇ ವಿಪರೀತ ಬುದ್ಧಿ" (ಪುಟ, 121), "ದೈವದುರ್ವಿಪಾಕವು ಬಲವತ್ತರವಾದದು" (ಪುಟ, 129), "ಗತಾನುಗತಿಕೋ ಲೋಕಃ" (ಪುಟ, 143)–ಇಂಥ ಮಾತುಗಳನ್ನು ಗಳಗನಾಥರು ಅಲ್ಲಲ್ಲಿ ಸೇರಿಸಿರುವರು.

ಪರ್ವತರಾಜನನ್ನು ಸೋಲಿಸಿ ಹಿಡಿದು ತರಬೇಕೆಂದೂ, ಹಾಗೆ ಮಾಡದೆ ತನಗೆ ಮುಖವನ್ನೇ ತೋರಿಸಬಾರದೆಂದೂ ಚಾಣಕ್ಯನು ಚಂದ್ರಗುಪ್ತನಿಗೆ ಹೇಳುವನು. ಆ ಪ್ರಸಂಗದಲ್ಲಿ ಗಳಗನಾಥರು, "ಅರಸೊತ್ತಿಗೆಯನ್ನು ಸತ್ವಾತಿಶಯದಿಂದ ತಾನೇ ಸಂಪಾದಿಸುವದು ಉತ್ತಮ ಪಕ್ಷವು, ಅನ್ಯರ ಸಹಾಯದಿಂದ ಸಂಪಾದಿಸುವದು ಮಧ್ಯಮ ಪಕ್ಷವು. ತನ್ನಲ್ಲಿ ಯೋಗ್ಯತೆಯೇನೂ ಇಲ್ಲದೆ ಕೇವಲ ಪರದತ್ತವಾಗಿ ಸಂಪಾದಿಸುವದು ಅಧಮ ಪಕ್ಷವು. ಅಧಮನನ್ನು ರಾಜ್ಯಲಕ್ಷ್ಮಿಯು ಓಲೈಸಳು. ನೀನು ಮಧ್ಯಮ ಪಕ್ಷದವನೆಂದಾದರೂ ಅನಿಸಿಕೊಳ್ಳಲಿಚ್ಛಿಸುತ್ತಿದ್ದರೆ ಪರ್ವತೇಶ್ವರನನ್ನು ಬೆನ್ನಟ್ಟಿಹೋಗಿ ಆತನನ್ನು ಕೈಸೆರೆ ಹಿಡಿದುಕೊಂಡು ಬಾ".[1] ಎಂದು ಚಾಣಕ್ಯನಿಂದ ಹೇಳಿಸುವರು.

ಆಪಟೆಯವರ ಕಾದಂಬರಿಯಲ್ಲಿ ನಿಜವಾಗಿ ಚಾಣಕ್ಯನೇ ಪ್ರಧಾನವಾಗಿದ್ದಾನೆ. ಚಂದ್ರಗುಪ್ತನು ಕಥಾನಾಯಕನೆನಿಸಿಕೊಳ್ಳುವಷ್ಟು ಮೈತುಂಬಿಕೊಂಡಿಲ್ಲ. ಆದರೂ ಆಪಟೆಯವರು ಕಾದಂಬರಿಯನ್ನು 'ಚಂದ್ರಗುಪ್ತ'ಎಂದು ಕರೆದರು. ಈ ನ್ಯೂನತೆಯನ್ನು ಗಳಗನಾಥರು ಗಮನಿಸಿ ಕಾದಂಬರಿಗೆ 'ವೈಭವ'ಎಂದು ಹೆಸರಿಟ್ಟರು. ಆ ಬಗ್ಗೆ ಅವರು, "ಈ ಕಾದಂಬರಿಯಲ್ಲಿರುವ ರಾಕ್ಷಸನೆಂಬ ಹೆಸರಿನ ಘನವಂತನಿಂದ ಸ್ವಾಮಿನಿಷ್ಠೆಯ ವೈಭವವೂ, ಚಾಣಕ್ಯನೆಂಬ ಹೆಸರಿನ ಪರಮ ತೇಜಸ್ವಿಯಿಂದ ಬುದ್ಧಿಯ ವೈಭವವೂ, ಚಂದ್ರಗುಪ್ತನೆಂಬ ಹೆಸರಿನ ಭಾಗ್ಯಶಾಲಿಯಿಂದ ಪ್ರತಾಪವೈಭವವೂ, ವಸುಭೂತಿಯೆಂಬ ಹೆಸರಿನ ಸಾತ್ವಿಕನಿಂದ ಶಾಂತಿಯ ವೈಭವವೂ, ಮುರೆಯೆಂಬ ಕರ್ಕಶ ಸ್ತ್ರೀಯ ಯೋಗದಿಂದ ಕ್ರೂರತನದ ವೈಭವವೂ ಪ್ರಕಟವಾಗುವದರಿಂದ ಈ ಕಾದಂಬರಿಯು ಹಲವು ವೈಭವಗಳ ಸಮುಚ್ಚಯ ಸ್ಥಾನವೆಂದು ತಿಳಿದು ಇದಕ್ಕೆ ವೈಭವವೆಂಬ ಹೆಸರು ಕೊಡಲ್ಪಟ್ಟಿರುವದು"[2]ಎಂದು ವಿವರಿಸಿರುವರು.

ಅಲ್ಲದೆ ಗಳಗನಾಥರು ತಮ್ಮ ಪ್ರಸ್ತಾವನೆಯಲ್ಲಿ ಕಾದಂಬರಿಯ ಚಾಣಕ್ಯ, ರಾಕ್ಷಸ ಮತ್ತು ಮುರಾದೇವಿಯರ ಪಾತ್ರಗಳನ್ನು ಕುರಿತು ತುಸು ವಿವರವಾಗಿಯೇ ವಿವೇಚಿಸಿರುವರು. ಅದರಂತೆ ಕನ್ನಡ 'ಮುದ್ರಾಮಂಜೂಷ'ವನ್ನೂ ಓದಿದ ಗಳಗನಾಥರು ಈ ಕಾದಂಬರಿಯನ್ನು ಅದಕ್ಕೆ ಹೋಲಿಸಿರುವುದೂ ಸಹಜವೇ ಆಗಿದೆ. ಈ ಎರಡೂ ಕೃತಿಗಳನ್ನು ತೂಗಿ ನೋಡಿ ಕೊನೆಗೆ "ಅಂತರ್ರಚನೆಯ ಸಂಬಂಧದಿಂದಲೂ, ತಂತ್ರಗಳ ಚಮತ್ಕೃತಿಯ ಸಂಬಂಧದಿಂದಲೂ ಕೆಲಕೆಲವು ಕಡೆಯಲ್ಲಿ 'ಮುದ್ರಾಮಂಜೂಷ'ವು 'ವೈಭವ'ಕ್ಕಿಂತ ಕೆಲಮಟ್ಟಿಗೆ ಸರಸವಾಗಿದ್ದರೂ ಸತ್ಯಮೇವ ಜಯತೇ ಎಂಬ ದೃಷ್ಟಿಯಿಂದ ನೋಡಿದರೆ, 'ವೈಭವ'ವು 'ಮುದ್ರಾಮಂಜೂಷ'ಕ್ಕಿಂತ ಗಂಭೀರವಾಗಿರುತ್ತದೆಯೆಂದು ನಮಗೆ ತೋರುತ್ತದೆ"[3] ಎಂದು ಹೇಳಿರುವರು. ಅವರ ಈ ಅಭಿಪ್ರಾಯವು ಸರ್ವಗ್ರಾಹ್ಯವಾಗದೆ ಇರಬಹುದಾದರೂ, ಇದು ಅವರ ತೌಲನಿಕ ವಿಮರ್ಶಾದೃಷ್ಟಿಗೆ ನಿದರ್ಶನವಾಗಿದೆ.

---

1. ಗಳಗನಾಥ : ವೈಭವ, ಪುಟ 141
2. ಅದೇ ಪ್ರಸ್ತಾವನೆ, ಪುಟ 1
3. ಅದೇ, ಪುಟ 5, 6

ಚಂದ್ರಗುಪ್ತನ ಮೊಮ್ಮಗನೇ ಅಶೋಕ. ಆತನ ಕಥೆಯು **'ಧರ್ಮರಹಸ್ಯ'**ದಲ್ಲಿ ಬಂದಿದೆ. ಅಶೋಕನು ಮೊದಲು ಶೂರನಾದಂತೆ ಕ್ರೂರನೂ ಆಗಿದ್ದನು. ಕ್ಷಮಾಗುಣದ ಪರಿಚಯವೇ ಇಲ್ಲದ ಆತ ಪಾಟಲೀಪುತ್ರದಲ್ಲಿ ಒಂದು ಶಾಸ್ತ್ರೋಕ್ತ ನರಕವನ್ನೇ ನಿರ್ಮಿಸಿದ್ದನು. ಸಣ್ಣ ತಪ್ಪಿಗೆ ಮರಣ ದಂಡನೆ ವಿಧಿಸುತ್ತಿದ್ದ ಆತ ತನ್ನ ಕುರೂಪವನ್ನು ಆಡಿಕೊಂಡದ್ದಕ್ಕೆ ತನ್ನ ಹೆಂಡತಿಯೊಬ್ಬಳನ್ನು ಅಗ್ನಿಕುಂಡದಲ್ಲಿ ಹಾಕಿ ಸುಡಿಸಿದ್ದ. ಬುದ್ಧನ ಜ್ಞಾನೋದಯದ ಸ್ಥಾನವಾದ ಬೋಧಿವೃಕ್ಷವನ್ನೇ ಆತ ಕಡಿಸಿಹಾಕಿದ್ದ. ಅಂಥ ಅವನು ಕಲಿಂಗ ಯುದ್ಧದ ಅನಂತರ ನಿಜವಾದ ಬೌದ್ಧನಾದ.

ಅಶೋಕನ ತಮ್ಮ ವೀತಾಶೋಕ. ಆತನಿಗೆ ಕಲಿಂಗ ರಾಜಕುಮಾರಿಯನ್ನು ಕೊಡಬೇಕೆಂದು ಅಶೋಕ ಕೋರಿದಾಗ, ವೈದಿಕ ಧರ್ಮಾನುಯಾಯಿಯಾದ ಕಲಿಂಗರಾಜ ಮೃಗೇಂದ್ರ ಒಪ್ಪಲಿಲ್ಲ. ಯುದ್ಧಕ್ಕೆ ಅದೇ ಕಾರಣವಾಯಿತು. ಯುದ್ಧಾನಂತರ ಅಶೋಕನಲ್ಲಿ ಜ್ಞಾನೋದಯವಾಯಿತು. ನಿಜವಾದ ಬೌದ್ಧ ಭಿಕ್ಷು ಮೊಗ್ಗಲೀಪುತ್ರ ತಿಷ್ಯರ ಪ್ರಭಾವದಿಂದ ಅಶೋಕ ಮಹಾಪುರುಷನಾದ. ಬೌದ್ಧ ಮಹಾಸಭೆಯನ್ನು ನೆರವಿ ದಿಕ್ಕು ದಿಕ್ಕುಗಳಿಗೆ ಧರ್ಮಪ್ರಸಾರಕರನ್ನು ಕಳಿಸಿದ. ಕೊನೆಗೆ ತನ್ನ ಸರ್ವಸ್ವವನ್ನೂ ದಾನಮಾಡಿ ನಿರ್ವಾಣವನ್ನು ಪಡೆದ.

ಕಾದಂಬರಿಯಲ್ಲಿ ಕಲಿಂಗರಾಜಪುತ್ರ ಜಿತೇಂದ್ರ ಮತ್ತು ಅಶೋಕನ ತಂಗಿ ಇಂದಿರೆ, ಹಾಗು ಕಲಿಂಗರಾಜಪುತ್ರಿ ಪ್ರಣಯಿನಿ ಹಾಗೂ ಅಶೋಕ ಇವರ ಪವಿತ್ರ ಪ್ರೇಮದ ಕಥೆಗಳೂ ಸೇರಿವೆ. ಅದರಂತೆ ಕಲಿಂಗದ ಸರದಾರನೊಬ್ಬನ ಮಗಳೂ, ಮಂತ್ರಿಯ ಪತ್ನಿಯೂ ಆದ ಪ್ರಮೀಳೆಯ ಮತ್ತು ಅಶೋಕನ ಮಲತಾಯಿ ಬುದ್ಧಿಮತಿ ಇವರ ಕುತಂತ್ರಗಳೂ ಹೀನ ಕೃತ್ಯಗಳೂ ಅನಾವಶ್ಯಕವಾಗಿ ಪ್ರಾಧಾನ್ಯ ಪಡೆದಿವೆ. ಉಪಗುಪ್ತನ ಕಥೆ ಚೆನ್ನಾಗಿ ಬಂದಿದೆ. ಆದರೂ ಅಶೋಕನ ಹೃದಯ ಪರಿವರ್ತನೆಯ ವರ್ಣನೆ ಮಾತ್ರ ಸಹಜಸುಂದರವಾಗಿ ನಿರೂಪಿತವಾಗಿಲ್ಲ.

ಗಳಗನಾಥರು ಬಾ. ನಾ. ಶಹಾ ಅವರ 'ಸಮ್ರಾಟ ಅಶೋಕ'ವನ್ನೇ ಹೆಚ್ಚಾಗಿ ಅನುಸರಿಸಿರುವರಾದರೂ, ಮಧ್ಯೆ ತಮ್ಮ ಅನೇಕ ವಿಚಾರಗಳನ್ನು ಸೇರಿಸದೆ ಬಿಟ್ಟಿಲ್ಲ. ಕೊನೆಯಲ್ಲಿ ವೈದಿಕ ಮತ್ತು ಬೌದ್ಧ ಧರ್ಮಾನುಯಾಯಿಗಳಲ್ಲಿ ವಿವಾಹವು ಏರ್ಪಟ್ಟು ಎರಡೂ ರಾಜಮನೆತನಗಳಲ್ಲಿ ಸ್ನೇಹವು ಸಂಘಟಿಸುತ್ತದೆ. ಗಳಗನಾಥರ ಪ್ರಕಾರ ಎಲ್ಲ ಧರ್ಮಗಳ ಮೂಲವೂ ಒಂದೇ. ಆದ್ದರಿಂದಲೇ ಅವರು ಅಶೋಕನ ಈ ಕಥೆಗೆ 'ಧರ್ಮರಹಸ್ಯ' ಎಂದು ಕರೆದರು. ಅದರಂತೆ ಕಾದಂಬರಿಯಲ್ಲಿ ಬಂದಿರುವ ಚಿದಾನಂದ ಸ್ವಾಮಿಗಳು, ಉಪಗುಪ್ತಾಚಾರ್ಯ ಮತ್ತು ಮೊಗ್ಗಲೀಪುತ್ರ ತಿಷ್ಯರಂಥವರ ಸತ್ಸಮಾಗಮದಿಂದಲೇ ಎರಡೂ ರಾಜಮನೆತನಗಳು ಒಗ್ಗೂಡಿದುವು. ಅದಕ್ಕೆ ಗಳಗನಾಥರು ಈ ಕಾದಂಬರಿಗೆ 'ಸತ್ಸಮಾಗಮ ಪ್ರಭಾವ'ವೆಂಬ ಎರಡನೆಯ ಹೆಸರನ್ನೂ ಕೊಟ್ಟಿರುವರು.

"ಈ ಕಾದಂಬರಿಯನ್ನು ಓದಿದವರಲ್ಲಿ ಒಬ್ಬರಾದರೂ ಸ್ವಧರ್ಮನಿಷ್ಠೆಯನ್ನೂ, ಪರ-ಧರ್ಮಸಹಿಷ್ಣುತೆಯನ್ನೂ ತಾಳಿ, ಎಲ್ಲ ಧರ್ಮದವರೊಡನೆ ನಿಜವಾದ ಪ್ರೇಮದಿಂದಲೂ ಗೌರವದಿಂದಲೂ ನಡಕೊಂಡರೆ ಲೇಖಕನ ಶ್ರಮವು ಸಾರ್ಥಕವಾಯಿತೆಂದು ತಿಳಿಯಲಾಗುವದು. ಪರಧರ್ಮದಲ್ಲಿ ಆದರವೂ, ಪರಧರ್ಮದ ಗುರುಗಳಲ್ಲಿ, ಸತ್ಪುರುಷರಲ್ಲಿ, ದೇವರಲ್ಲಿ ಭಕ್ತಿಯೂ

ಯಾವನ ಅಂತರಂಗದಲ್ಲಿ ಉತ್ಪನ್ನವಾಗುವವೋ ಆ ಭಾಗ್ಯಶಾಲಿಯಲ್ಲಿಯೇ ಸ್ವಧರ್ಮನಿಷ್ಠೆ-ಯಿರುತ್ತದೆಂದು ತಿಳಿಯತಕ್ಕದ್ದು. ಅವನೇ ಧನ್ಯನು!"[1] ಎಂದು ಉದ್ಗಾರ ತೆಗೆಯುವಲ್ಲಿ ಗಳಗನಾಥರ ಮನೋಭಾವವೂ, ಈ ಕಾದಂಬರಿಯ ಅನುವಾದದ ಉದ್ದೇಶವೂ ವ್ಯಕ್ತವಾಗಿವೆ.

**'ಕ್ಷಾತ್ರತೇಜ'** ಅಥವಾ **'ಸ್ವಾಮಿಭಕ್ತಿ ಪ್ರದರ್ಶನ'**ವು ರಾಜಸ್ಥಾನದ ರೂಪನಗರದ ರಾಜಕುಮಾರಿಯಾದ ರೂಪಮತಿಯ ಕಥೆ. ಅವಳನ್ನು ತನ್ನ ಜನಾನಖಾನೆಗೆ ಸೇರಿಸ ಬಯಸಿದ ವಿಷಯಾಸಕ್ತ, ದುಷ್ಟ ಔರಂಗಜೇಬನನ್ನು ಅವಳ ತಂದೆ ವೃದ್ಧರಾಜ ವಿಜಯ-ಸಿಂಹನು ಪ್ರತಿಭಟಿಸಿದನು. ದಿಲ್ಲಿಯ ಸೈನ್ಯವು ಸಾದತಖಾನನ ನಾಯಕತ್ವದಲ್ಲಿ ಬಂದು ರೂಪನಗರವನ್ನು ಮುತ್ತಿತು. ಬೇರೆ ರಜಪೂತ ವೀರರ ಸಹಾಯ ದೊರೆಯದೆ ಹೋದಾಗ, ರೂಪಮತಿಯು ಉದೇಪುರದ ಅರಸು ರಾಜಸಿಂಹನ ಸಹಾಯವನ್ನೂ ಪ್ರೇಮವನ್ನೂ ಯಾಚಿ-ಸಿದಳು. ಅದರಂತೆ ಆತ ಸಾದತಖಾನನ ಸೈನ್ಯವನ್ನು ಹೊಡೆದೋಡಿಸಿದಾಗ, ಸಂತುಷ್ಟ-ನಾದ ವಿಜಯಸಿಂಹನು, ಅಗ್ನಿಪ್ರವೇಶಕ್ಕೆ ಸಿದ್ಧಳಾದ ಮಗಳನ್ನು ರಾಜಸಿಂಹನಿಗೆ ಧಾರೆ-ಯೆರೆದುಕೊಟ್ಟನು. ಮುಂದೆ ಸ್ವತಃ ಔರಂಗಜೇಬನೇ ಮಹಾಸೈನ್ಯಸಮೇತ ಬಂದಾಗಲೂ ರಾಜಸಿಂಹನ ಮುಂದೆ ಅವನ ಆಟ ನಡೆಯದೆ ಸೋತು ಅವಮಾನಿತನಾಗಿ ಹೋದ.

ಆಪಟೆಯವರು ತಮ್ಮ 'ರೂಪನಗರಚಿ ರಾಜಕನ್ಯಾ' ಕಾದಂಬರಿಯಲ್ಲಿ ರೂಪಮತಿಯ ಈ ಮುಖ್ಯ ಕಥೆಯಲ್ಲಿ ಚಂದ್ರಾವತಿ, ದುರ್ಗಾದಾಸ, ಇಂದಿರೆ, ಜಸವಂತಸಿಂಗ, ನಯನಪಾಲ, ಮೊದಲಾದ ರಜಪೂತರ ಮತ್ತು ಔರಂಗಜೇಬನ ತಂಗಿ ರೋಷನಾರಾ ಮತ್ತು ಆತನ ರಾಣಿಯಾದ ಉದೇಪುರಿ ಬೇಗಮೆ ಮೊದಲಾದವರ ಕಥೆಗಳನ್ನೂ ಸೇರಿಸಿದ್ದಾರೆ. ಅದರಿಂದ ಕಥಾನಕ ದಲ್ಲಿ ಸಂಕೀರ್ಣತೆ ಬಂದಿದ್ದರೂ, ಈ ಕಥೆಗಳು ಪ್ರಮಾಣಮೀರಿ ಬೆಳೆದಿವೆ. ಅಲ್ಲದೆ ಈ ಕಥೆಗಳ ಹೆಣಿಕೆ ಕೂಡ ಸರಿಯಾಗಿ ಹೊಂದಿಕೊಂಡಿಲ್ಲ. ರೂಪಮತಿ-ರಾಜಸಿಂಹರ ಕಥೆ ಒಂದಾದರೆ, ರಾಣಿ ಚಂದ್ರಾವತಿಯ ಕಥೆಯೇ ಬೇರೆಯಾಗಿದೆ. ಅಲ್ಲದೆ ರೋಷನಾರಾ, ಉದೇಪುರಿ ಬೇಗಮೆ, ಇಂದಿರೆ ಮತ್ತು ದುರ್ಗಾದಾಸ ಇವರ ಕಥೆಗಳಲ್ಲಿ ಔರಂಗಜೇಬನ ಜನಾನಖಾನೆಯ ಕಾರಸ್ಥಾನದ ಕರಾಳಚಿತ್ರವೂ ಬಂದಿದೆ. ಕಥೆಯ ಈ ಮೂರು ತಂತುಗಳು ಮುಪ್ಪುರಿಗೊಂಡು ಒಂದಾಗಿಲ್ಲ. ಕಾದಂಬರಿಯಲ್ಲಿ ಯಾವ ಕಥೆಗೆ ಪ್ರಾಧಾನ್ಯವೆಂಬುದೇ ತಿಳಿಯದಂತಾಗುವಷ್ಟು ಇವು ಮೂರೂ ಕಥೆಗಳು ಸಿಕ್ಕಾಪಟ್ಟೆಯಾಗಿ ಬೆಳೆದು ಬಿಟ್ಟಿವೆ.

ಈ ದೋಷವೆಲ್ಲ ಗಳಗನಾಥರ ಅನುವಾದದಲ್ಲಿಯೂ ಇಳಿದುಬಿಟ್ಟಿದೆ. ಮೂಲದಲ್ಲಿ ಕೆಲವು ಘಟನೆಗಳು, ಸನ್ನಿವೇಶಗಳು ವಿವರವಾಗಿ ಚಿತ್ರಿತವಾಗಿರುವುದರಿಂದ ಕನಿಷ್ಠ ಅವಕ್ಕೆ ಆ ಮಟ್ಟಿಗೆಯಾದರೂ ಸ್ವಾರಸ್ಯವುಂಟಾಗುತ್ತದೆ. ಆದರೆ ಗಳಗನಾಥರ ಸಂಕ್ಷಿಪ್ತಾನುವಾದದಲ್ಲಿ ಇಂಥ ರಸಸ್ಥಾನಗಳೂ ಮೊಟಕಾಗಿವೆ.

ಆದರೂ ಗಳಗನಾಥರು 'ರೂಪನಗರದ ರಾಣಿ' ಎಂಬ ಮೂಲ ಹೆಸರನ್ನು 'ಕ್ಷಾತ್ರ ತೇಜ' ಎಂದು ಮಾರ್ಪಡಿಸಿದ್ದು ಎಷ್ಟೋ ಉಚಿತವಾಗಿದೆಯೆನ್ನಬಹುದು. ಯಾಕೆಂದರೆ ಕಾದಂಬರಿಯಲ್ಲಿ ವಿಜಯಸಿಂಹ, ರಾಜಸಿಂಹ, ದುರ್ಗಾದಾಸ, ರೂಪಮತಿ, ಚಂದ್ರಾವತಿ, ಇಂದಿರೆ, ಪದ್ಮೆ ಈ ಪಾತ್ರಗಳೆಲ್ಲ ತಮ್ಮ ತಮ್ಮ ರೀತಿಯಲ್ಲಿ ಕ್ಷಾತ್ರತೇಜಸ್ಸನ್ನು ಮೆರೆದಿವೆ.

1. ಗಳಗನಾಥ : ಧರ್ಮರಹಸ್ಯ, ಪ್ರಸ್ತಾವನೆ, (1ನೆಯ ಆವೃತ್ತಿ) ಪುಟ 2

ಆದರೆ ಗಳಗನಾಥರು ಕಾದಂಬರಿಗೆ ಕೊಟ್ಟಿರುವ ಪರ್ಯಾಯನಾಮ–'ಸ್ವಾಮಿಭಕ್ತಿ ಪ್ರದರ್ಶನ'–ಮಾತ್ರ ಅಷ್ಟು ಸಮರ್ಪಕವೆನಿಸುವುದಿಲ್ಲ. ಕಾದಂಬರಿ ಮಾತ್ರ ವಾಚನೀಯವಾಗಿದೆ. "ಒಟ್ಟಿನಿಂದ ಕಾದಂಬರಿಯು ಚಿತ್ತಾಕರ್ಷಕವಾಗಿದ್ದು ರಾಜಸಗುಣ ಪ್ರಧಾನವಾದ ನೀತಿಯನ್ನು ಚನ್ನಾಗಿ ವ್ಯಕ್ತಮಾಡುತ್ತದೆ"[1] ಎಂಬ ಗಳಗನಾಥರ ಅಭಿಪ್ರಾಯವನ್ನು ಒಪ್ಪಬಹುದಾಗಿದೆ.

ರೂಪನಗರದ ಈ ರಾಜಕುಮಾರಿಯ ಕಥೆಯನ್ನೇ ಗಳಗನಾಥರು 14 ವರ್ಷಗಳನಂತರ ಮತ್ತೊಮ್ಮೆ ಬರೆದರು. ಬಂಗಾಲಿಯ ಪ್ರಸಿದ್ಧ ಕಾದಂಬರಿಕಾರ ಬಂಕಿಮಚಂದ್ರರ 'ರಾಜಸಿಂಹ' ಎಂಬ ಕಾದಂಬರಿಯನ್ನು ವಾ. ಗೋ. ಆಪಟೆ ಎಂಬವರು ಮರಾಠಿಗೆ ಭಾಷಾಂತರಿಸಿದ್ದರು. ಅದನ್ನೇ ಗಳಗನಾಥರು 1928ರಲ್ಲಿ **'ರಾಣಾ ರಾಜಸಿಂಹ'** ಎಂಬ ಹೆಸರಿನಿಂದ ಅನುವಾದಿಸಿದರು.[2] ತಮ್ಮ ಪ್ರಸ್ತಾವನೆಯಲ್ಲಿ ಬಂಗಾಲಿ ಅಥವಾ ಮರಾಠಿ ಲೇಖಕರ ಹೆಸರನ್ನು ಹೇಳಿಲ್ಲವಾದರೂ, "ಒಂದೇ ಪ್ರಸಂಗವನ್ನು ಕುರಿತು ಬೇರೆ ಬೇರೆ ಕಾದಂಬರಿಕಾರರು........ ತೀರ ಹೊಸವಾಗಿರುವಂತೆ ಕಾದಂಬರಿಗಳನ್ನು ಹೇಗೆ ಬರೆಯುತ್ತಾರೆಂಬುದನ್ನು ತೋರಿಸುವದಕ್ಕಾಗಿಯೇ ಈ ಕಾದಂಬರಿಯನ್ನು ಬರೆದಿರುತ್ತದೆ. ನಾನು ಈ ಮೊದಲೇ ಬರೆದಿರುವ 'ಕ್ಷಾತ್ರತೇಜ'ವೆಂಬ ಸುರಸ ಕಾದಂಬರಿಯೂ, ಇದೂ, ರೂಪನಗರದ ಒಂದೇ ಪ್ರಸಂಗವನ್ನು ಕುರಿತು ಬರೆದವಾಗಿದ್ದರೂ, ಅವು ಒಂದಕ್ಕೊಂದು ಸಂಬಂಧವಿಲ್ಲದವಾಗಿ ತೀರ ಹೊಸ ಕಾದಂಬರಿಗಳಂತೆ ವಾಚಕರ ಚಿತ್ತವನ್ನು ಆಕರ್ಷಿಸುತ್ತ, ಉದಾತ್ತ ನೀತಿತತ್ವಗಳನ್ನು ಪ್ರಕಾಶಗೊಳಿಸುತ್ತಿರುವವು"[3] ಎಂದು ಗಳಗನಾಥರು ತಿಳಿಸಿರುವರು.

ಬಂಕಿಮಚಂದ್ರರ ಈ ಕಾದಂಬರಿ ಮುಖ್ಯವಾಗಿ ರೂಪನಗರದ ರಾಜಕುಮಾರಿ(ಇಲ್ಲಿ ಅವಳ ಹೆಸರು–ಚಂಚಲಕುಮಾರಿ)ಯ ಮೇಲೆ ಔರಂಗಜೇಬನ ಕ್ರೂರ ಕಟಾಕ್ಷ, ಅವಳ ತಂದೆಯ ಅಸಹಾಯಕತೆ, ರಾಜಸಿಂಹನ ಸಹಾಯ, ಔರಂಗಜೇಬನ ಪರಾಭವ ಮತ್ತು ಫಜೀತಿಗಳನ್ನೇ ನಿರೂಪಿಸುತ್ತದೆ. ಇಲ್ಲಿ ದುರ್ಗಾದಾಸ ಮತ್ತು ಚಂದ್ರಾವತಿಯರ ಕಥೆಗೆ ಆಸ್ಪದವಿಲ್ಲ. ಆದರೆ ಉದೇಪುರಿ ಬೇಗಮೆಯ ಜೊತೆಗೆ ಜೋಧಪುರಿ ಬೇಗಮೆಯ ಚಿತ್ರವೂ ಇಲ್ಲಿ ಮೂಡಿದೆ. ಅಲ್ಲಿ ಔರಂಗಜೇಬನ ತಂಗಿ ರೋಷನಾರಾ ಬಂದಿದ್ದರೆ, ಇಲ್ಲಿ ಅವನ ಮಗಳು ಜೇಬುನ್ನಿಸೆ ಇದ್ದಾಳೆ. ಇವಳು ಕ್ರೂರಿಯಾದಂತೆ ಸ್ವಚ್ಛಂದಪ್ರಣಯಿನಿಯೂ ಅಹುದು. ಅವಳಿಗೆ ಬಲಿಯಾದ ಮುಬಾರಕ ಮತ್ತು ಆತನ ಹೆಂಡತಿ ದರಿಯಾಬೇಗಮೆಯರ ಕಥೆಗಳೂ ಇಲ್ಲಿ ಅವಕಾಶ ಪಡೆದಿವೆ. ಒಟ್ಟಿನಲ್ಲಿ ಅಲ್ಲಿಯಂತೆ ಇಲ್ಲಿಯೂ ಔರಂಗಜೇಬನ ಜನಾನಖಾನೆಯ ಚಿತ್ರ ರಂಗುರಂಗಾಗಿಯೇ ಚಿತ್ರಿತವಾಗಿದೆ. ಅಲ್ಲಿಯ ಇಂದಿರೆಯ ಬದಲು ಇಲ್ಲಿ ನಿರ್ಮಲೆ ಇದ್ದಾಳೆ. ಇವಳ ಪಾತ್ರಚಿತ್ರಣದಲ್ಲಿ ಬಂಕಿಮರ ಅದ್ಭುತ ಕಲ್ಪನಾವಿಲಾಸ ಮತ್ತು ಮಾನವತೆ ಕಂಡುಬಂದಿವೆ. ಔರಂಗಜೇಬನಂಥ ಮಹಾಪ್ರತಾಪಿಯೂ ಶೀಘ್ರಕೋಪಿಯೂ

---

1. ಗಳಗನಾಥ: ಕ್ಷಾತ್ರತೇಜ, ಪ್ರಸ್ತಾವನೆ, ಪುಟ 1
2. " 'ಕ್ಷಾತ್ರತೇಜ'ಕ್ಕೆ ಆಪಟೆ ನಿರ್ಮಿತ ಕಥಾನಕವಿದ್ದರೆ 'ರಾಣಾ ರಾಜಸಿಂಹ'ಕ್ಕೆ ವಿವಿಧ ಮೂಲಗಳಿಂದ ಗಳಗನಾಥರೇ ಸಾಮಗ್ರಿಯನ್ನು ಆಯ್ದುಕೊಂಡಂತೆ ತೋರುತ್ತದೆ" ಎಂದು ಡಾ. ಶ್ರೀನಿವಾಸ ಹಾವನೂರ ಅವರು ಹೇಳಿರುವುದು (ಗಳಗನಾಥ ಮಾಸ್ತರರು ಪುಟ, 84) ಸರಿಯಲ್ಲ. ಗಳಗನಾಥರ 'ರಾಣಾ ರಾಜಸಿಂಹ'ಕ್ಕೆ ವಾ. ಗೋ. ಆಪಟೆಯವರ 'ರಾಜಸಿಂಹ'ಎಂಬ ಮರಾಠಿ ಭಾಷಾಂತರವೇ ಮೂಲವಾಗಿದೆ.
3. ಗಳಗನಾಥ: ರಾಣಾರಾಜಸಿಂಹ, ಪ್ರಸ್ತಾವನೆ, ಪುಟ 1

ಕೂಡ ಅವಳ ವ್ಯಕ್ತಿತ್ವಕ್ಕೆ ಮಾರುಹೋಗಿ, ಅವಳನ್ನು 'ಇಮಲಿ ಬೇಗಂ' ಎಂದು ಕರೆದು, ತನ್ನ ಪಾಷಾಣ ಹೃದಯದಲ್ಲಿ ಅವಳಿಗೆ ಸ್ಥಾನವನ್ನು ಕಲ್ಪಿಸಿದ.

ಹೀಗೆ ಈ 'ರಾಣಾ ರಾಜಸಿಂಹ'ವು ಅನೇಕ ರೀತಿಯಿಂದ 'ಕ್ಷಾತ್ರತೇಜ'ಕ್ಕಿಂತ ಕಲಾತ್ಮಕವಾಗಿದೆ, ಹೃದ್ಯವಾಗಿದೆ. ಆಪಟೆಯವರಿಗೂ ಬಂಕಿಮಚಂದ್ರರಿಗೂ ದೊರೆತ ಐತಿಹಾಸಿಕ ಸಾಮಗ್ರಿ ಹೆಚ್ಚಾಗಿಲ್ಲ. ಆಪಟೆಯವರಂತೆ ಬಂಕಿಮಚಂದ್ರರೂ ಬಹುಶಃ ಟಾಡನ 'ರಾಜಸ್ಥಾನ ಚರಿತ್ರೆ'ಯನ್ನೇ ಆಧಾರವಾಗಿಟ್ಟುಕೊಂಡಿರಬಹುದು. ಇಬ್ಬರೂ ತಮ್ಮ ತಮ್ಮ ಕಲ್ಪಕತೆಯಿಂದ ಇತಿಹಾಸವನ್ನು ಕಾದಂಬರಿಗಳನ್ನಾಗಿ ನಿರ್ಮಿಸಿರುವರು. ಗಳಗನಾಥರು ಬಂಕಿಮರ 'ರಾಜಸಿಂಹ'ವನ್ನು ಮೊದಲೇ ಓದಿದ್ದರೆ, ಬಹುಶಃ ಆಪಟೆಯವರ 'ರೂಪನಗರಚೀ ರಾಜಕನ್ಯಾ'ವನ್ನು ಅನುವಾದಿಸುತ್ತಿರಲಿಲ್ಲವೆಂದು ಊಹಿಸಿದರೆ ತಪ್ಪಾಗಲಾರದು. ಬಂಕಿಮರ ಈ ಕಾದಂಬರಿ ರವೀಂದ್ರನಾಥ ಠಾಕೂರರನ್ನೂ ಮುಗ್ಧಗೊಳಿಸಿತ್ತು. "ಇದನ್ನು ಓದಿ ತಮ್ಮ ಹೃದಯದಲ್ಲಿದ್ದ ಸಾಹಿತ್ಯರಸ ಪಿಪಾಸೆಯು ಅಣಗಿತು ಎಂದು ರವೀಂದ್ರನಾಥ ಠಾಕೂರರು ಹೊಗಳಿದ್ದಾರೆ".[1]

**'ಧಾರ್ಮಿಕ ತೇಜ' ಅಥವಾ 'ಪರಹಿತ ದಕ್ಷತಾ'** ಎಂಬುದೂ ಕೂಡ ರಜಪೂತರ ಇತಿಹಾಸಕ್ಕೆ ಸಂಬಂಧಿಸಿದ ಕಥೆ. ತಮ್ಮ ತಮ್ಮಲ್ಲಿಯ ಒಳಜಗಳ, ಅತ್ಯಾಸೆ, ಪುಕ್ಕತನಗಳಿಂದ ಅನೇಕ ರಜಪೂತರು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳಬೇಕಾಯಿತು. ಔರಂಗಜೇಬನಂಥ ಮಹತ್ವಾಕಾಂಕ್ಷಿಯಾದ ಬಾದಶಹನನ್ನೂ ಪ್ರತಿಭಟಿಸಿ ನಿಂತ ವೀರರೂ ಕೆಲವರಿದ್ದರು. ಅವರಲ್ಲಿ ಬುಂದೇಲಖಂಡದ ಮಹೋಬದ ಅರಸು ಚಂಪತರಾಯ ಒಬ್ಬ. ಗೋ–ಬ್ರಾಹ್ಮಣರ ಪರಿಪಾಲನೆ, ದೇವಸ್ಥಾನಗಳ ಸಂರಕ್ಷಣೆಗಳಲ್ಲಿ ನಿರತನಾದ ಅತ್ಯಂತ ಧರ್ಮನಿಷ್ಠ ರಾಜನಾದ ಚಂಪತರಾಯನು ಔರಂಗಜೇಬನ ಜಿಜಿಯಾಕರ ಮೊದಲಾದ ಹಿಂದುಗಳ ಪೀಡನೆಗಾಗಿ ಸಂತಾಪಗೊಂಡನು. ಬುಂದೇಲಿಗಳ ಪವಿತ್ರಸ್ಥಾನವಾದ ವಿಂಧ್ಯವಾಸಿನಿಯ ದೇವಾಲಯವನ್ನು ಹಾಳುಗೆಡವಲು ಬಂದ ಬಾದಶಹನ ಸರದಾರ ರಣದುಲ್ಲಾಖಾನನನ್ನು ಹಣಿದು ಸೆರೆಯಲ್ಲಿಟ್ಟನು. ಔರಂಗಜೇಬನ ಪರವಾದ ಕೆಲವು ರಜಪೂತ ರಾಜರು ಕೂಡ ಆತನಿಗೆ ವಿರುದ್ಧವಾದರೂ ಆತ ಹೆದರಲಿಲ್ಲ. ಆತನ ತರುವಾಯ ಆತನ ಮಗನಾದ ಛತ್ರಸಾಲನೂ ಅದೇ ರೀತಿ ಧರ್ಮಶ್ರೀಯನ್ನೂ, ವೀರಶ್ರೀಯನ್ನೂ ಮೆರೆದನು. ಆತನಿಗೆ ಸಭಾಕರಣನೆಂಬ ಅರಸು ಮೊದಲು ವಿರೋಧಿಯಾಗಿದ್ದರೂ ಕೊನೆಗೆ ಆತನ ಬಲಗೈಯಾಗಿ ನಿಂತನು. ಮಹಾರಾಷ್ಟ್ರದ ಶಿವಾಜಿಯೂ ಛತ್ರಸಾಲನಿಗೆ ಸ್ಫೂರ್ತಿ ನೀಡಿದನು. ಕೊನೆಗೆ ಛತ್ರಸಾಲನಿಗೆ ವಿಜಯಶ್ರೀ ಮಾಲೆಹಾಕಿದಳು. ಅದರಂತೆ ಆತ ತಾನು ಒಲಿದ ವಿಜಯೆ ಮತ್ತು ವಿಮಲೆಯರನ್ನು ಕೈಹಿಡಿದು ಮಹೋಬದ ಪಟ್ಟವನ್ನೇರಿದನು. ಛತ್ರಸಾಲನ ಗುಣಗಳನ್ನು ಎತ್ತಿ ತೋರಿಸುವಂತೆ ಗಳಗನಾಥರು ಈ ಅನುವಾದಕ್ಕೆ 'ಧಾರ್ಮಿಕ ತೇಜ' ಅಥವಾ 'ಪರಹಿತ ದಕ್ಷತೆ' ಎಂದು ಕರೆದರು.

ಈ ಕಾದಂಬರಿಯಲ್ಲಿ ಔರಂಗಜೇಬನ ರಾಣಿ ಆಯೇಷೆಯ ಕಥೆಯೂ ಸೇರಿಕೊಂಡಿದೆ. ಅವಳು ಸಭಾಕರಣನ ಸಹೋದರಿ, ಲಲಿತೆ. ಕುತಂತ್ರಿಯಾದ ಹೀರಾದೇವಿಯ ಕಪಟದಿಂದ

1. ಎ. ಆರ್. ಕೃಷ್ಣಶಾಸ್ತ್ರೀ : ಬಂಕಿಮಚಂದ್ರ, ಪುಟ 217

ಅವಳು ಔರಂಗಜೇಬನ ಕೈಹಿಡಿಯಬೇಕಾಯಿತು. ಅವಳ ಮಗಳೇ ಬದ್ರುನ್ನಿಸೆಯು. ಅವಳು ವೀರ ಮತ್ತು ಸುಂದರ ತರುಣನಾದ ದಲಪತರಾಯನನ್ನು ಮೋಹಿಸಿ, ತಂದೆಯ ವಿರೋಧ ಕಟ್ಟಿಕೊಂಡು, ಬುಂದೇಲಖಂಡಕ್ಕೆ ಓಡಿಬಂದು ತನ್ನ ಪ್ರಿಯತಮನನ್ನು ವರಿಸಿದಳು. ಹೀಗೆ ವೀರರಸ ಪ್ರಧಾನವಾದ ಕಾದಂಬರಿಯಲ್ಲಿ ಶೃಂಗಾರಕ್ಕೂ ತುಸು ಅವಕಾಶ ದೊರೆತಿದೆ. ಆದರೂ ಕಾದಂಬರಿ ಸಫಲವಾಗಿಲ್ಲ. "ಕಾದಂಬರಿಯಲ್ಲಿ ಬರುವ ಪಾತ್ರಗಳ ಬಾಹುಳ್ಯದಿಂದ ವಾಚಕರು ಕೆಲವೆಡೆ ಗೊಂದಲದಲ್ಲಿ ಬೀಳುವಂತಾಗಿದೆ."[1]

**'ತಿಲೋತ್ತಮೆ'** ಅಥವಾ 'ಸರಸಪ್ರೇಮ'ವೂ ಒಂದು ಅಸಫಲ ಅನುವಾದವೇ ಆಗಿದೆ. 'ಸದ್ಬೋಧ ಚಂದ್ರಿಕೆ'ಯ ವಾಚಕರೂ ಇದನ್ನು ಅಷ್ಟಾಗಿ ಮೆಚ್ಚಲಿಲ್ಲ. "ಈ ವರೆಗೆ ಚಂದ್ರಿಕೆಯ ದ್ವಾರದಿಂದ ಪ್ರಸಿದ್ಧವಾದ ಹಲವು ಕಾದಂಬರಿಗಳಲ್ಲಿ ಈ 'ತಿಲೋತ್ತಮಾ' ಎಂಬ ಕಾದಂಬರಿಯು ಮನೋರಂಜನದ ದೃಷ್ಟಿಯಿಂದ ಕೆಲವರಿಗೆ ಅಷ್ಟು ಉಜ್ವಲವಾಗಿ ತೋರದಿದ್ದರೂ, ಇದರೊಳಗಿನ ಆಯೇಷೆ, ತಿಲೋತ್ತಮೆ, ಉಸ್ಮಾನ, ಜಗತ್ಸಿಂಗ ಮೊದಲಾದ ಸದ್ಗುಣಮಂಡಿತ ಪಾತ್ರಗಳ ಯೋಗದಿಂದ ಇದು ಬಹು ಮಹತ್ವದ್ದಾಗಿರುವದೆಂದು ನಾವು ಹೇಳದೆ ಇರಲಾರೆವು"[2] ಎಂದು ಗಳಗನಾಥರು ಈ ಕಾದಂಬರಿಯು ಗ್ರಂಥರೂಪದಲ್ಲಿ ಪ್ರಕಟ-ವಾದಾಗ (1917) ಹೇಳಿದರು.

ಅಕಬರ ಬಾದಶಹನ ನಿಷ್ಠ ಸರದಾರನಾದ ಮಾನಸಿಂಹನ ಮಗನೇ ಜಗತ್ಸಿಂಗನು. ಈತ ಸುಂದರಿಯೂ ಸದ್ಗುಣಿಯೂ ಆದ ತಿಲೋತ್ತಮೆಯನ್ನು ಮೋಹಿಸಿ ವರಿಸಿದ. ತನ್ನ ಮಾತನ್ನು ಮೀರಿ, ಕಡಿಮೆ ದರ್ಜೆಯವನ ಮಗಳನ್ನು ಮದುವೆಯಾದ ಮಗನ ಮೇಲೆ ಮಾನಸಿಂಹ ಕೋಪಗೊಂಡು ಅವನನ್ನು ಬಂಧಿಸಿ ಸೆರೆಮನೆಯಲ್ಲಿಟ್ಟ. ಕೊನೆಗೆ ತಿಲೋತ್ತಮೆಯ ಗುಣಗಳಿಗೆ ಮೆಚ್ಚಿ ಮಗನನ್ನು ಬಿಡುಗಡೆ ಮಾಡಿದ.



ಜಗತ್ಸಿಂಗನನ್ನು ಪಠಾಣರು ಸೆರೆ ಹಿಡಿದಾಗ, ಪಠಾಣ ದೊರೆಯ ತಮ್ಮನ ಮಗಳಾದ ಆಯೇಷೆ ಎಂಬವಳು ಜಗತ್ಸಿಂಗನನ್ನು ಮೋಹಿಸಿದಳು. ಅವಳದು ನಿರ್ವ್ಯಾಜ ಪ್ರೇಮ. ಜಗತ್ಸಿಂಗ ತನಗೆ ದೊರೆಯದಿದ್ದರೂ, ತನ್ನನ್ನು ಪ್ರೇಮಿಸಿದ ಉಸ್ಮಾನನನ್ನು ತಿರಸ್ಕರಿಸಿ ಅವಳು ಆಮರಣ ಬ್ರಹ್ಮಚಾರಿಣಿಯಾಗಿಯೇ ಉಳಿದಳು!

ಅಂತೂ 'ತಿಲೋತ್ತಮೆ'ಯಲ್ಲಿ ವೀರಶ್ರೀಗಿಂತ ಪ್ರೇಮಕಥನಕ್ಕೆ ಪ್ರಾಧಾನ್ಯ. ಅದಕ್ಕೇ ಗಳಗನಾಥರು 'ಸರಸ ಪ್ರೇಮ'ವೆಂದೂ ಇದನ್ನು ಕರೆದರು. ಆದರೆ ಇಲ್ಲಿಯ ಪ್ರೇಮದಲ್ಲಿ ಸರಸಕ್ಕಿಂತ ವಿರಸವೇ ಹೆಚ್ಚು. ತಿಲೋತ್ತಮೆಯದು ಮುಗ್ಧಪ್ರೇಮ, ಆಯೇಷೆಯದು ನಿಷ್ಕಾಮ ಪ್ರೇಮ ಮತ್ತು ಉಸ್ಮಾನನದು ನಿಷ್ಫಲ ಪ್ರೇಮ.

ಬಂಕಿಮಚಂದ್ರರ 'ದುರ್ಗೇಶ ನಂದಿನಿ' ಬಂಗಾಲಿಯಲ್ಲಿ ಸುಪ್ರಸಿದ್ಧ ಕಾದಂಬರಿ. ಆ ಕಥೆಯನ್ನೇ ಬೆಳೆಸಿ ದಾಮೋದರ ಮುಖ್ಯೋಪಾಧ್ಯಾಯರು 'ನವಾಬ ನಂದಿನಿ'ಯನ್ನು ಬರೆದರು. ಈ 'ನವಾಬ ನಂದಿನಿ'ಯೇ ಗಳಗನಾಥರ 'ತಿಲೋತ್ತಮೆ'ಗೆ ಮೂಲಾಧಾರವಾಗಿದೆ.

---

1. ಹಾ. ಮಾ. ನಾಯಕ (ಸಂ) : ಗಳಗನಾಥ (1970), ಕೃಷ್ಣಮೂರ್ತಿ ಕಿತ್ತೂರ ಅವರ ಲೇಖನ, ಪುಟ 34
2. ಗಳಗನಾಥ : ತಿಲೋತ್ತಮೆ, ಪ್ರಸ್ತಾವನೆ, ಪುಟ 1.

ಆ ದೃಷ್ಟಿಯಿಂದ ಗಳಗನಾಥರು ಅನುವಾದಿಸಿದ ಮಹಾರಾಷ್ಟ್ರ ವೀರರ ಕಥೆಗಳೇ ಹೆಚ್ಚು ರಂಜನೀಯವಾಗಿರುವಂತೆ, ಅವುಗಳಲ್ಲಿ ಒಂದು ರೀತಿಯ ಸುಸಂಬದ್ಧತೆಯೂ ಇದೆ. 'ಈಶ್ವರೀಸೂತ್ರ'ದಲ್ಲಿ ಶಿವಾಜಿಯು ಸುಲ್ತಾನಗಡವನ್ನೂ, 'ಕಮಲಕುಮಾರಿ'ಯಲ್ಲಿ ಕೊಂಡಾಣಾ ಕೋಟೆಯನ್ನೂ ವಶಪಡಿಸಿಕೊಂಡ ವಿಷಯ ನಿರೂಪಿತವಾಗಿದೆ. ಹೀಗೆ ಆತ ದಿಲ್ಲಿ ಮತ್ತು ವಿಜಾಪುರ ಬಾದಶಹರ ವಶದಲ್ಲಿದ್ದ ಒಂದೊಂದೇ ಕೋಟೆಯನ್ನು ವಶಪಡಿಸಿಕೊಳ್ಳುತ್ತ, ತನ್ನ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡು ಸ್ವರಾಜ್ಯವನ್ನೇ ಸ್ಥಾಪಿಸಿ ಛತ್ರಪತಿಯಾದನು. ಈ ಮಧ್ಯೆ ಅವನಿಗೆ ಅನೇಕ ವಿಘ್ನಗಳು ಎದುರಾದುವು. ಅವುಗಳನ್ನು ಆತ ಶ್ರೀಸಮರ್ಥ ರಾಮ ದಾಸರ ಆಶೀರ್ವಾದದಿಂದಲೂ ಮರಾಠಾ ವೀರ ಸ್ನೇಹಿತರ ಸಹಾಯ–ಸಹಕಾರಗಳಿಂದಲೂ ಜಯಿಸಿದನು. ಹೀಗೆ ಗಳಗನಾಥರ ಅನುವಾದಗಳಲ್ಲಿ ಮುಖ್ಯವಾಗಿ ಶಿವಾಜಿಯೇ ಕೇಂದ್ರ ವ್ಯಕ್ತಿಯಾಗಿರುವುದು ಸ್ಪಷ್ಟವಿದೆ. ಕೆಲವು ಕಾದಂಬರಿಗಳಲ್ಲಿ ಮಾತ್ರ ಆತನ ಅನಂತರದ ಮಹಾ-ರಾಷ್ಟ್ರದ ಕಥೆಯೂ ಬಂದಿದೆ.

ಶಿವಾಜಿಯು ಶಕ್ತಿವಂತನಿದ್ದಂತೆ ಯುಕ್ತಿವಂತನೂ ಇದ್ದನು. **'ಮರಾಠರ ಅಭ್ಯು-ದಯ'**ದಲ್ಲಿ ಆತನು ಯುಕ್ತಿಯಿಂದ ಅಫಜಲಖಾನನನ್ನು ಕೊಂದು ತನ್ನ ಮೇಲೆ ಬಂದ ಗಂಡಾಂತರದಿಂದ ಪಾರಾದ ಕಥೆಯಿದೆ. ಅಫಜಲಖಾನನು ಶಿವಾಜಿಯನ್ನು ಮೋಸದಿಂದ ಸೆರೆ ಹಿಡಿಯಬೇಕು ಅಥವಾ ಕೊಲ್ಲಬೇಕೆಂಬ ವಿಚಾರದಿಂದಲೇ ಬಂದಿದ್ದ. ಅದನ್ನು ತಿಳಿದ ಶಿವಾಜಿಯು ಅವನಿಗೆ ತಕ್ಕ ದಾರಿಯನ್ನೇ ಹುಡುಕಬೇಕಾಯಿತೆಂದು ಆಪಟೆಯವರು ನಿರೂಪಿ-ಸಿರುವರು. ಇದರಲ್ಲಿ ಶಿವಾಜಿಗೆ ಕಾಪಟ್ಯದ ಆರೋಪ ಹೊರಿಸುವ ಕಾರಣವಿಲ್ಲವೆಂದು ಅವರ ಮತ. ಈ ಅಫಜಲಖಾನನ ವಧೆಯು ಕಥೆಯು ಮಹಾರಾಷ್ಟ್ರದಲ್ಲಿ ತುಂಬ ಸ್ಫೂರ್ತಿ-ದಾಯಕವಾದುದು. ಆಪಟೆಯವರು ಈ ಮುಖ್ಯ ಕಥೆಯಲ್ಲಿ ಶಿವಾಜಿ, ಅಫಜಲಖಾನ, ಏಸಾಜಿ ಇವರ ಪಾತ್ರಗಳನ್ನು ಚೆನ್ನಾಗಿ ಚಿತ್ರಿಸಿರುವರು. ಆದರೆ ಕಾದಂಬರಿಗೆ ಈ ಕಥೆ ತುಂಬ ಚಿಕ್ಕದೆನಿಸಿದ್ದರಿಂದ, ಮಧ್ಯೆ ಚಂದ್ರರಾವ ಮೋರೆ ಎಂಬವನ ಉಪಕಥೆಯನ್ನೂ ತಂದಿರುವರು. ಅದರಿಂದ ಕಾದಂಬರಿಯ ಗತಿ ಕುಂಠಿತವಾಗಿದೆ. ತನ್ನ ನಾಶಕ್ಕೇ ಪ್ರಯತ್ನಿ-ಸುತ್ತಿದ್ದ ಚಂದ್ರರಾವನ ಮಗಳು ತಾರೆಯನ್ನು ಕ್ಷಮಿಸಿದ ಶಿವಾಜಿಯ ಉದಾತ್ತತೆ ಎದ್ದು ಕಾಣುತ್ತದೆ. ಶಿವಾಜಿಯ ಘನತೆಯನ್ನು ಎತ್ತಿ ತೋರಿಸುವ ಇಂಥ ಕೆಲವು ಸನ್ನಿವೇಶಗಳು ಕಾದಂಬರಿಯಲ್ಲಿ ನಿರೂಪಿತವಾಗಿವೆ. ಶಿವಾಜಿಯ ಸ್ವರಾಜ್ಯಸ್ಥಾಪನೆಯ ಸೂಚಕವಾದ ಈ ಕಾದಂಬರಿಯನ್ನು ಆಪಟೆಯವರು 'ಸೂರ್ಯೋದಯ' ಎಂದು ಕರೆದರೆ, ಗಳಗನಾಥರು ಅದನ್ನು 'ಮರಾಠರ ಅಭ್ಯುದಯ' ಎಂದು ವಾಚ್ಯವಾಗಿ ಕರೆದರು.

ಗಳಗನಾಥರ **'ಛತ್ರಪತಿ'**ಯು ಆಪಟೆಯವರ 'ಸೂರ್ಯಗ್ರಹಣ'ದ ಅನುವಾದ. ದಿಲ್ಲಿಯ ಬಾದಶಹನ ಕಾಟದಿಂದ ಶಿವಾಜಿಯ ಸ್ವರಾಜ್ಯಸೂರ್ಯನಿಗೆ ಕೆಲಕಾಲ ಗ್ರಹಣ ಹಿಡಿದಂತಾಯಿತು. ದಕ್ಷಿಣದಲ್ಲಿ ಶಿವಾಜಿಯು ಒಂದೊಂದೇ ಕೋಟೆಯನ್ನು ಜಯಿಸುತ್ತ ನಡೆದುದನ್ನು ಕೇಳಿ ಕೋಪಗೊಂಡ ಔರಂಗಜೇಬನು ಶಿವಾಜಿಯನ್ನು ಸೋಲಿಸಿ ಸೆರೆಹಿಡಿದು ತರುವಂತೆ ತನ್ನ ಮಗನಲ್ಲದೆ ಜಯಸಿಂಗ, ದಿಲೇರಖಾನ, ಮಿರ್ಝಾರಾವ ಮೊದಲಾದ ಸರದಾರರನ್ನು ಸೈನ್ಯಸಮೇತ ಕಳಿಸಿದನು. ಆಗ ಶಿವಾಜಿಯ ಆಟ ಅವರ ಮುಂದೆ ನಡೆಯಲಿಲ್ಲ. ಶಿವಾಜಿಯ ಶೂರ ಸಹಾಯಕರಾದ ಏಸಾಜಿ, ಮುರಾರಬಾಜಿ ಮೊದಲಾದವರು ಎಷ್ಟೇ

ಪರಾಕ್ರಮವನ್ನು ತೋರಿದರೂ ಶಿವಾಜಿ ಸೋತು ಒಪ್ಪಂದಕ್ಕೆ ಅಂಕಿತ ಹಾಕಬೇಕಾಯಿತು; ತನ್ನ ವಶದಲ್ಲಿದ್ದ ಕೆಲವು ಕೋಟೆಗಳನ್ನು ಬಿಟ್ಟು ಕೊಡಬೇಕಾಯಿತು; ಔರಂಗಜೇಬನ ಸ್ವಾಮಿತ್ವ-ವನ್ನು ಒಪ್ಪಿಕೊಳ್ಳಬೇಕಾಯಿತು. ಅದರ ಪರಿಣಾಮವಾಗಿ ಆತ ಸ್ವತಃ ಆಗ್ರಾಪಟ್ಟಣಕ್ಕೆ ಹೋಗಿ ಔರಂಗಜೇಬನನ್ನು ದರ್ಬಾರದಲ್ಲಿ ಕಾಣಬೇಕಾಯಿತು. ಆದರೆ ದರ್ಬಾರದಲ್ಲಾದ ಅವಮಾನದಿಂದ ಆತ ಸಂತಾಪಗೊಂಡು ತುಂಬಿದ ಸಭೆಯನ್ನು ತ್ಯಜಿಸಿ ಬಂದುಬಿಟ್ಟ. ಇದ ರಿಂದ ಔರಂಗಜೇಬನೂ ಕೋಪಗೊಂಡು ಕೈಯಲ್ಲಿ ಸಿಕ್ಕ ವೈರಿಯನ್ನು ಹೇಗಾದರೂ ನಾಶ-ಪಡಿಸಬೇಕೆಂದು ಯೋಚಿಸಿದ. ಅಲ್ಲಿಂದ ಹೇಗೆ ಪಾರಾಗಿ ಬರಬೇಕೆಂದು ಶಿವಾಜಿ ಯುಕ್ತಿಗಳನ್ನು ಹುಡುಕತೊಡಗಿದ.

ಆಪಟೆಯವರ ಕಾದಂಬರಿ ಇಲ್ಲಿಗೇ ಮುಗಿದಿದೆ. ಆದರೆ ಗಳಗನಾಥರು ಅದನ್ನು ಬೆಳೆಸಿ ಶಿವಾಜಿ ಮಿಠಾಯಿಯ ಬುಟ್ಟಿಯಲ್ಲಿ ಕುಳಿತು ಪಾರಾಗಿ ಬಂದುದನ್ನು ವಿವರಿಸಿರುವರು.[1] 'ಛತ್ರ ಪತಿ' ಯಲ್ಲಿಯ 193ರಿಂದ ಮುಂದಿನ ಸುಮಾರು 45 ಪುಟಗಳ ಕಥೆ ಗಳಗನಾಥರದು. 'ಹಕೀಮ' ಎಂಬ ಪ್ರಕರಣದಲ್ಲಿ ಔರಂಗಜೇಬನ ಮಗಳು ನಿಸಾಬೇಗಮೆಯು ತನ್ನ ದಾಸಿಯನ್ನು ಹಕೀಮನ ವೇಷದಿಂದ ಕಳಿಸಿ, ತನ್ನ ಪ್ರೇಮವನ್ನು ವ್ಯಕ್ತಪಡಿಸಿ, ಶಿವಾಜಿಯ ಪ್ರೇಮವು ತನಗೆ ಅಲಭ್ಯ-ವಾದುದರಿಂದ ಆಮರಣ ಬ್ರಹ್ಮಚರ್ಯದಿಂದ ಇರುವುದಾಗಿ ತಿಳಿಸಿದಳು. ಅವಳ ಪ್ರೇಮದ ಉಂಗುರಕ್ಕೆ ಪ್ರತಿಯಾಗಿ ಶಿವಾಜಿ ಮಹಾರಾಜರು ತಮ್ಮ ಉಂಗುರವನ್ನು ಕಳಿಸಿದರೆಂದು ಗಳಗನಾಥರು ಬರೆದಿರುವರು. ಅದರಂತೆ ಆಪಟೆಯವರು ಸೃಷ್ಟಿಸಿದ ಮಾತಾ ರಣದೇವಿಯ ಪಾತ್ರಕ್ಕೆ ಇನ್ನೂ ಹೆಚ್ಚಿನ ಜೀವಕಳೆಯನ್ನು ತುಂಬಲು ಗಳಗನಾಥರು ಯತ್ನಿಸಿರುವರು. ಆಗ್ರಾದಿಂದ ತಪ್ಪಿಸಿಕೊಂಡು ಪರಿಮಿತ ಪರಿವಾರದೊಡನೆ ಬರುತ್ತಿದ್ದ ಶಿವಾಜಿಯನ್ನು ಕೆಲ ಮೊಗಲ ಸೈನಿಕರು ಮುತ್ತಿದಾಗ ಮಾತಾ ರಣದೇವಿಯು ಎಂಟು ಜನ ರಾವುತರೊಂದಿಗೆ "ಎಲ್ಲಿಂ ದಲೊ ಬಂದು" ಶಿವಾಜಿಯನ್ನು ರಕ್ಷಿಸಿ ತಾನು ತನ್ನ ಮಗನೊಡನೆ ಬಲಿದಾನ ಮಾಡುವಳು. ಇಂಥಲ್ಲಿ ಗಳಗನಾಥರ ಉದಾತ್ತ ಚಿತ್ರಣದ ಅಸಫಲ ಪ್ರಯತ್ನಗಳನ್ನು ಕಾಣಬಹುದು.

ಗಳನಾಥರ ಶಿವಾಜಿಯು ಆಗ್ರಾದಿಂದ ತಪ್ಪಿಸಿಕೊಂಡು ಬಂದು, ಪ್ರತಾಪದಿಂದ ಮತ್ತೆ ತನ್ನ ದುರ್ಗಗಳನ್ನು ಗೆದ್ದು, 1674 ಸೆಯ ಇಸ್ವಿ ಜೂನ 6ನೆಯ ತಾರೀಖಿನಂದು "ರಾಜಾ ಶಿವಛತ್ರಪತಿ' ಎಂಬ ಬಿರುದಿನೊಂದಿಗೆ ರಾಜ್ಯಾಭಿಷಿಕ್ತನಾದನು. ಹೀಗೆ ಆಪಟೆಯವರ 'ಸೂರ್ಯಗ್ರಹಣ'ವು ಗಳಗನಾಥರ ಕೈಯಲ್ಲಿ 'ಛತ್ರಪತಿ'ಯಾದುದು ಅರ್ಥಪೂರ್ಣವಾಗಿದೆ.

**'ಗೃಹಕಲಹ'** ಅಥವಾ **'ನೀಚ-ಸ್ವಾರ್ಥ-ಶೂಲ'** ಎಂಬ ಅನುವಾದವು ಶಿವಾಜಿಯ ಮರಣವನ್ನೂ, ಅದಕ್ಕೆ ಕಾರಣಳಾದ ಆತನ ಹೆಂಡತಿ ಸೊಯರಾಬಾಯಿಯ ಭಯಂಕರ ಕಾರಸ್ಥಾನಗಳನ್ನೂ, ಸಂಭಾಜಿಯ ಉಗ್ರಸ್ವರೂಪವನ್ನೂ ಚಿತ್ರಿಸುತ್ತದೆ. ಲಕ್ಷ್ಮಣ ನಾರಾಯಣ ಜೋಶಿ ಎಂಬವರ 'ಅಸ್ತೋದಯ'ದ ಆಧಾರದಿಂದ ಗಳಗನಾಥರು 'ಗೃಹಕಲಹ'ವನ್ನು ರಚಿಸಿರುವರು.

1. ಭಕ್ಷ್ಯಗಳನ್ನು ಹಂಚುವ ನೆಪದಿಂದ ಶಿವಾಜಿಯು ಪಾರಾಗಿ ಬಂದ ಸನ್ನಿವೇಶಕ್ಕೆ ಗಳಗನಾಥರು ಚ. ವಾಸುದೇವಯ್ಯನವರ 'ಆರ್ಯಕೀರ್ತಿ, ದ್ವಿತೀಯ ಖಂಡ'ದಿಂದ ಸೂಚನೆಯನ್ನು ಪಡೆದಿರುವ ಸಂಭವವಿದೆ.

1674 ರಲ್ಲಿ ಪಟ್ಟಾಭಿಷಿಕ್ತನಾದ ಶಿವಾಜಿಯು ಮುಂದೆ ಐದೇ ವರ್ಷಗಳಲ್ಲಿ ತನ್ನ ಎಲ್ಲ ಧೀರತನವನ್ನೂ ಪರಾಕ್ರಮವನ್ನೂ ಕಳೆದುಕೊಂಡು ಗೃಹಕಲಹದಿಂದ ಇಷ್ಟು ಹಣ್ಣಾದ-ನೆಂದರೆ ಅಚ್ಚರಿಯೇ ಸರಿ. ಈಗ ಆತನಿಗೆ ಹೊರಗಿನ ವೈರಿಗಳಿರಲಿಲ್ಲ. ಶೂರನಾದರೂ ಅವಿವೇಕಿಯೂ ಉದ್ಧತನೂ ಆದ ಸಂಭಾಜಿಯ ಚಿಂತೆ, ಮತ್ತು ಕಪಟಿಯೂ ಕಾರಸ್ಥಾನಿಯೂ ಸ್ವಾರ್ಥಿಯೂ ಆದ ಹೆಂಡತಿ ಸೊಯಿರಾಬಾಯಿಯ ಚಿಂತೆ–ಇವುಗಳಿಂದ ಶಿವಾಜಿ ತನ್ನ ಸತ್ತ್ವವನ್ನೇ ಕಳೆದುಕೊಂಡನು. ದುಡುಕಿನಿಂದ ಮೊಗಲರನ್ನು ಕೂಡಲು ಯತ್ನಿಸಿದ ಸಂಭಾಜಿಯನ್ನು ಸೆರೆಯಲ್ಲಿರಿಸಿದ ಶಿವಾಜಿಯು, ಹೆಂಡತಿಯ ಮೇಲೆ ಯಾವ ಕ್ರಮವನ್ನೂ ತೆಗೆದು-ಕೊಳ್ಳದೆ ತಪ್ಪುಮಾಡಿದ. ಸೊಯರಾಬಾಯಿಯೇ ವಿಷಪ್ರಯೋಗದಿಂದ ಶಿವಾಜಿಯ ಮರಣಕ್ಕೆ ಕಾರಣಳಾಗಿ, ತನ್ನ ಮಗ ರಾಜಾರಾಮನಿಗೆ ಪಟ್ಟಗಟ್ಟುವ ಏರ್ಪಾಡು ಮಾಡಿದಳು. ರಾಜ್ಯ-ದಲ್ಲಿ ಕೆಲವು ಮಂತ್ರಿಗಳೂ, ಸರದಾರರೂ ಸಂಭಾಜಿಯ ಪಕ್ಷವನ್ನು ವಹಿಸಿದರು. ಕೊನೆಗೆ ಸಂಭಾಜಿಯೇ ಪಟ್ಟವನ್ನು ಆಕ್ರಮಿಸಿ ರಾಜಾರಾಮನನ್ನು ಸೆರೆಯಲ್ಲಿರಿಸಿ, ಸೊಯರಾಬಾಯಿ-ಯನ್ನು ಉಗ್ರವಾಗಿ ಶಿಕ್ಷಿಸಿ, ಅವಳ ಸಹಾಯಕರನ್ನು ಕ್ರೂರವಾಗಿ ಕೊಲ್ಲಿಸಿದ.

ಹೀಗೆ ಗೃಹ ಕಲಹದಿಂದ ಎಂಥ ಅನಾಹುತಗಳಾದುವೆಂಬುದನ್ನು ಚಿತ್ರಿಸುವ ಈ ಕಾದಂಬರಿಯನ್ನು ಗಳಗನಾಥರು 'ಗೃಹಕಲಹ' ಎಂದು ಕರೆದುದು ಸರಿಯೇ ಆಗಿದೆ. ಅದನ್ನು 'ನೀಚ–ಸ್ವಾರ್ಥ–ಶೂಲ' ಎಂದೂ ಕರೆದಿರುವುದು ಅವರ ಭಾವನಾತ್ಮಕ ಆಕ್ರೋಶವನ್ನು ಅಥವಾ ಸಾತ್ತ್ವಿಕ ಸಂತಾಪವನ್ನು ಸೂಚಿಸುತ್ತದೆ.

ಕಾದಂಬರಿಯಲ್ಲಿ ಶಿವಾಜಿಯ ಮತ್ತು ಸೊಯಿರಾಬಾಯಿಯ ಪಾತ್ರಗಳು ವಿರೋಧಾ-ತ್ಮಕವಾಗಿ ನಿರೂಪಿತವಾಗಿವೆ. ಅದೇ ರೀತಿಯ ನಿರೂಪಣೆ ರಾಜಾರಾಮ ಮತ್ತು ಸಂಭಾಜಿಯ ಚಿತ್ರಣದಲ್ಲಿದೆ. ಸಾಧ್ವಿ ಪುತಳಾಬಾಯಿಯ ಸಹಗಮನದ ವರ್ಣನೆಯಲ್ಲಿ ಗಳಗನಾಥರು ತಮ್ಮ-ತನವನ್ನು ತೋರಿರುವರು. ಈ ಕಾದಂಬರಿಯು "ಮೂಲ ಕಾದಂಬರಿಯ ಭಾಷಾಂತರವಾಗಲಿ ರೂಪಾಂತರವಾಗಲಿ ಇರುವುದಿಲ್ಲ. ಕಾದಂಬರಿಯು ಹೆಚ್ಚು ಬೋಧಪ್ರದವೂ, ಮನೋರಂಜಕವೂ ಆಗುವದಕ್ಕಾಗಿ ನಮ್ಮ ವಾಡಿಕೆಯ ಪದ್ಧತಿಯಂತೆ ಮೂಲ ಕಾದಂಬರಿಯನ್ನು ಕುಗ್ಗಿಸುವಲ್ಲಿ ಕುಗ್ಗಿಸಿ, ಹಿಗ್ಗಿಸುವಲ್ಲಿ ಹಿಗ್ಗಿಸಿ, ಹೊಸ ವಿಷಯ ಸೇರಿಸತಕ್ಕಲ್ಲಿ ಹೊಸ ವಿಷಯ ಸೇರಿಸಿ, ಶ್ರಮಬಟ್ಟು ಹೊಸ ಪಾಕವನ್ನು ಸಿದ್ಧಮಾಡಿರುವೆವು"[1] ಎಂದು ಹೇಳಿದಂತೆ ಗಳಗನಾಥರು ಅನೇಕ ಕಡೆಗೆ ತಮ್ಮ ಮಾತುಗಳನ್ನು ಸೇರಿಸಿರುವರು. 5, 6, 39, 139, 142, 217 ಮೊದಲಾದ ಪುಟಗಳಲ್ಲಿ ಗಳಗನಾಥರು ತಮ್ಮ ಕೈಗಂಟನ್ನು ಸೇರಿಸಿರುವರು. ಅಷ್ಟೇ ಅಲ್ಲದೆ ಕಾದಂಬರಿಗೆ 'ಉಪಸಂಹಾರ' ಎಂಬ ಒಂದು ಹೆಚ್ಚಿನ ಪ್ರಕರಣವನ್ನೇ ಸೇರಿಸಿ, ವಾಚಕರಿಗೆ ಬೋಧವನ್ನೂ ಮಾಡಿರುವರು. ದೇಶಬಾಂಧವರಲ್ಲಿ ಒಕ್ಕಟ್ಟು, ಬ್ರಾಹ್ಮಣ–ಬ್ರಾಹ್ಮಣೇತರಲ್ಲಿ ಒಕ್ಕಟ್ಟು ಅವಶ್ಯವೆಂದು ಅವರು ಈ ಪ್ರಕರಣದಲ್ಲಿ ಬೋಧಿಸಿರುವುದು ಅಪ್ರಸ್ತುತವೇ ಸರಿ. ಆದರೂ ಅದು ಅವರ ಕಾಲಕ್ಕೆ ಅವರಿಗೆ ಬಂದಂಥ ಯಾವುದೋ ಕಹಿ ಅನುಭವವನ್ನು ಸೂಚಿಸುತ್ತದೆ, ಎಂದು ಊಹಿಸಬಹುದಾಗಿದೆ.

**'ಶಿವಪ್ರಭುವಿನ ಪುಣ್ಯ'** ಅಥವಾ **'ಕೆಚ್ಚೆದೆಯ ಮರಾಟರು'** ಎಂಬುದು ಗಳಗನಾಥರು ಅನುವಾದಿಸಿದ ಆಪಟೆಯವರ ಕೊನೆಯ ಕಾದಂಬರಿ. ಆಪಟೆಯವರ ಈ

1. ಗಳಗನಾಥ : ಗೃಹಕಲಹ, ಪ್ರಸ್ತಾವನೆ, ಪುಟ 1.

ಕಾದಂಬರಿಯು–'ಕೇವಳ ಸ್ವರಾಜ್ಯಾಸಾಠೀ'–ಮಹಾರಾಷ್ಟ್ರ ವಾಚಕರ ಮನವನ್ನು ಸಂಪೂರ್ಣವಾಗಿ ಗೆದ್ದುಕೊಂಡ ಕೃತಿಯಾಗಿದೆ. ಶಿವಾಜಿಯ ಮರಣದ ತರುವಾಯ ಸಂಭಾಜಿಯ ಕೈಗೆ ರಾಜ್ಯಸೂತ್ರಗಳು ಹೋಗಿ ಆತ ಅನನ್ವಿತ ಅತ್ಯಾಚಾರಗಳನ್ನು ಎಸಗಿದ. ಕಲುಷನ ದುರ್ಬೋಧನೆ, ಮದ್ಯಪಾನದ ಚಟ ಮತ್ತು ತುಳಸಿ ಎಂಬವಳ ಸಹವಾಸ ಎಂಬ ತ್ರಿದೋಷ-ಗಳಿಂದ ಆತ ಸಂಪೂರ್ಣವಾಗಿ ಭ್ರಷ್ಟನಾದನು. ಮರಾಠಾ ಸರದಾರರಲ್ಲಿ ಒಕ್ಕಟ್ಟು ಉಳಿಯ-ಲಿಲ್ಲ. ಔರಂಗಜೇಬ ಇದರ ದುರ್ಲಾಭವನ್ನು ಪಡೆದು, ಸಂಭಾಜಿಯನ್ನು ಬಂಧಿಸಿ, ಕ್ರೂರವಾಗಿ ಹಿಂಸಿಸಿ ಕೊಲ್ಲಿಸಿದ.

ಆದರೆ ಸಂಭಾಜಿಯ ಕೊಲೆಯೇ ಉಳಿದ ಮರಾಠಾ ವೀರರನ್ನು ಒಂದೆಡೆ ತಂದಿತು. ಅವರು ಸ್ವರಾಜ್ಯ ರಕ್ಷಣೆಗಾಗಿ ತಮ್ಮ ಪ್ರಾಣಗಳನ್ನು ಪಣಕ್ಕೆ ಹಚ್ಚಿ ಪ್ರಯತ್ನಿಸಿದರು. ಆದರೂ ಔರಂಗಜೇಬನ ಬಲಾಢ್ಯ ಸೈನ್ಯದ ಎದುರಿಗೆ ಅವರು ಕೆಲಕಾಲ ಕೈಯೂರಬೇಕಾಯಿತು. ಏಸೂಬಾಯಿ ಮತ್ತು ಬಾಲಶಿವಾಜಿ ಇಬ್ಬರೂ ಬಾದಶಹನ ಸೆರೆಯಾದರು. ರಾಜಾರಾಮ ತಪ್ಪಿಸಿಕೊಂಡು ಕರ್ನಾಟಕಕ್ಕೆ ಓಡಿ ಬಂದು ಕೆಲಕಾಲ ಜಿಂಜಿಯಲ್ಲಿ ಆಶ್ರಯ ಪಡೆದನು. ಆದರೆ ಆತನು ತನ್ನ ಸಂಗಡಿಗರ ಸಹಾಯದಿಂದ ಪುನಃ ಸಾತಾರೆಯಲ್ಲಿ ಮರಾಠಾ ಸಿಂಹಾಸನವನ್ನು ಸ್ಥಾಪಿಸಿದನು. ಅಂತೂ ಶಿವಪ್ರಭುವಿನ ಪುಣ್ಯದಿಂದ ಮರಾಠಾ ರಾಜ್ಯ ಬದುಕಿಕೊಂಡಿತು.

ಆಗ ದುಡಿದ, ಮಡಿದ ಮರಾಠಾ ವೀರರೆಲ್ಲ ಕೇವಲ ಸ್ವರಾಜ್ಯರಕ್ಷಣೆಗಾಗಿ ಕಾರ್ಯ-ನಿರತರಾಗಿದ್ದರು. ಆದ್ದರಿಂದ ಉಜ್ವಲ ದೇಶಾಭಿಮಾನದಿಂದ, ಸಾಹಸ–ಪರಾಕ್ರಮಗಳಿಂದ ಪ್ರೇರಿತರಾದ ಈ ವೀರರ ಕಥೆಯನ್ನು ಆಪಟೆಯವರು 'ಕೇವಲ ಸ್ವರಾಜ್ಯಕ್ಕಾಗಿ' ಎಂದು ಕರೆದರು. ಅಷ್ಟೇ ಅಲ್ಲ, "ಪರಮ ದುರ್ಧರ ಆಪತ್ಕಾಲದಲ್ಲಿ ಸ್ವಾಮಿನಿಷ್ಠೆಯಿಂದ ಸ್ವರಾಜ್ಯ ನಿಷ್ಠೆಯಿಂದ ಸ್ವಾರ್ಥತ್ಯಾಗದಿಂದ ಪ್ರಾಣತ್ಯಾಗದಿಂದ ಮರಾಠರ ಸ್ವರಾಜ್ಯವನ್ನು ರಕ್ಷಿಸುವುದಕ್ಕಾಗಿ ದುಡಿದಂಥ ಮುತ್ಸದ್ದಿ ಮತ್ತು ಶೂರ ಪ್ರಹ್ಲಾದ ನಿರಾಜಿ, ಬಂಡೋ ಬಲ್ಲಾಳ, ರಘು ನಾಥರಾವ, ಸಂತಾಜಿ ಘೋರ್ಪಡೆ ಮೊದಲಾದ ಮಹಾಪುರುಷರ ಆತ್ಮಗಳಿಗೆ, ಅವರ ತ್ಯಾಗ ಗುಣದ ಈ ಕಥೆ ಭಕ್ತಿಯಿಂದ ಮತ್ತು ಆದರದಿಂದ ಅರ್ಪಿತವಾಗಿವೆ" –ಎಂದು ಆಪಟೆಯವರು ಆ ಮಹಾತ್ಮರನ್ನು ಕೃತಜ್ಞತೆಯಿಂದ ಸ್ಮರಿಸಿ, ತಮ್ಮ ಕಾದಂಬರಿಯನ್ನು ಆ ಹುತಾತ್ಮರಿಗೆ ಅರ್ಪಿಸಿದರು.

ಆಪಟೆಯವರ ಕಾದಂಬರಿ ನಿಜವಾಗಿಯೂ ರೋಮಾಂಚಕಾರಿಯಾಗಿದೆ. ಆದರೆ ಗಳಗನಾಥರ ಅನುವಾದವು ಸಂಕ್ಷಿಪ್ತವಾಗಿರುವುದರಿಂದ ಅಲ್ಲಿಯ ಅನೇಕ ರಸಸ್ಥಾನಗಳಿಗೆ ಎರವಾಗಿ, ಹಲವೆಡೆ ಕೇವಲ ಇತಿಹಾಸದ ವಿವರದಂತೆ ತೋರುತ್ತದೆ. ಆದರೂ ಔರಂಗಜೇಬನ ದರ್ಬಾರು, ಅಲ್ಲಿ ಸಂಭಾಜಿಯ ವರ್ತನೆ, ಅವನ ಕ್ರೂರ ಕೊಲೆ, 'ವೀರಸ್ನುಷೆ'ಯಾದ ಏಸೂಬಾಯಿಯ ಧೈರ್ಯ ಸಾಹಸಗಳು, ತಾರಾಬಾಯಿಯ ಅಸೂಯೆ, ರಾಧಾಬಾಯಿಯ ಕಾಮುಕತೆ, ಸೂರ್ಯಾಜಿಯ ಸ್ವಾಮಿದ್ರೋಹ, ಗಣೋಜಿ ಶಿರ್ಕೆಯ ಸೇಡು, ರಾಜಕುವರ ಜೋತ್ಯಾಜಿ ಸಂತಾಜಿ ಧನಾಜಿ ಮೊದಲಾದವರ ಸಾಹಸಗಳು, ಪ್ರಹ್ಲಾದ ಪಂತ ಮತ್ತು ಖಂಡೋಜಿ ಚಿಟಣೀಸ ಮೊದಲಾದವರ ನಿಷ್ಠೆ– ಇವು ಚುಟುಕಿನಲ್ಲಿಯೇ ಆದರೂ ಚುರುಕಾಗಿ ಮೂಡಿಬಂದಿವೆ.

**'ಕುರುಕ್ಷೇತ್ರ'**ವೂ ಮಹಾರಾಷ್ಟ್ರ ಶೂರರ ಕಥೆಯೇ ಆಗಿದೆ. ಆದರೆ ಅದು ಮರಾಠಾ

ವೀರರ ಕಥೆಯಲ್ಲ: ಪೇಶ್ವೆ ವೀರರ ಕಥೆ. ಗಳಗನಾಥರು ಇದನ್ನು ಹೆಚ್ಚಿನ ಭಾವಾವೇಶದಿಂದ ಅನುವಾದಿಸಿರುವರು. ಅದಕ್ಕೆ ಮುಖ್ಯ ಕಾರಣವೆಂದರೆ ಅಲ್ಲಿಯ ವೀರ ಮತ್ತು ಕರುಣ ರಸಗಳು.

ಇದು ನಾನಾಸಾಹೇಬ ಪೇಶ್ವೆಯ ಕಾಲಕ್ಕೆ ನಡೆದ ಕೊನೆಯ ಪಾನಿಪತ್ತದ ಯುದ್ಧ-ವನ್ನು ಚಿತ್ರಿಸುತ್ತದೆ. ನಾನಾಸಾಹೇಬ ಪೇಶ್ವೆಗೆ ಅವನ ತಮ್ಮನಾದ ರಘುನಾಥರಾಯನೂ, ಕಕ್ಕನ ಮಗನಾದ ಸದಾಶಿವರಾಯನೂ, ಸಿಂಧೆ, ಹೋಳಕರ, ಗಾಯಕವಾಡ, ಭೋಸಲೆ ಮೊದಲಾದ ವೀರರೂ ಸಹಾಯಕರಾಗಿದ್ದರು. ಪೇಶ್ವೆಯವರ ಅಸಂಖ್ಯ ಸೈನ್ಯವು ಉತ್ತರದ ದಂಡ ಯಾತ್ರೆಗೆ ನಡೆದಾಗ ನಾನಾಸಾಹೇಬನ ತರುಣ ಮಗ ವಿಶ್ವಾಸರಾಯನೂ ರಾಜಮನೆತನದ ಕೆಲವು ಸ್ತ್ರೀಯರೂ ಆಗ್ರಹದಿಂದ ಅವರನ್ನು ಸೇರಿಕೊಂಡಿದ್ದರು. ಪೇಶ್ವೆಯವರು ದಿಲ್ಲಿಯನ್ನು ಗೆದ್ದರು. ಆದರೆ ಪಾನಿಪತ್ತದಲ್ಲಿ ಅಬದಾಲಿಯನ್ನು ಎದುರಿಸಿ ಸೋಲಬೇಕಾಯಿತು. ಅಬದಾಲಿಯು ಶೂರನಾದಂತೆ ಬುದ್ಧಿಶಾಲಿಯೂ ದೂರದರ್ಶಿಯೂ ಆಗಿದ್ದನು. ಭಾವೂ-ಸಾಹೇಬನೂ ಹೆಚ್ಚಿನ ವೀರನೇ ಸರಿ. ಆದರೂ ಆತನ ಹಟಮಾರಿತನ, ಅತಿ ಆತ್ಮವಿಶ್ವಾಸ ಮತ್ತು ಆತನ ಸರದಾರರಲ್ಲಿಯ ಅಂತಃಕಲಹ ಇವುಗಳು ಮರಾಠರ ಸೋಲಿಗೆ ಮುಖ್ಯ ಕಾರಣಗಳಾದುವು. ವಿಶ್ವಾಸರಾಯನೂ ಭಾವೂರಾಯನೂ ಯುದ್ಧದಲ್ಲಿ ಅತಿ ಶೌರ್ಯದಿಂದ ಕಾದಿ ಹತರಾದರು. ಈ ಸಮಾಚಾರ ತಿಳಿದ ನಾನಾಸಾಹೇಬನು ಮುಂದೆ ಐದೇ ತಿಂಗಳಲ್ಲಿ "ಭಾವೂ ಭಾವೂ! ವಿಶ್ವಾಸಾ ವಿಶ್ವಾಸಾ!" ಎನ್ನುತ್ತ ದುಃಖದಿಂದ ಮರಣವನ್ನಪ್ಪಿದನು.

ಈ ಮಹಾ ಭಯಂಕರ ಯುದ್ಧದಿಂದ ಅಸಂಖ್ಯ ಹಿಂದುಗಳ ಪ್ರಾಣಹಾನಿಯೂ ವಿತ್ತಹಾನಿಯೂ ಉಂಟಾದುವು. "ಈ ಘೋರ ಪ್ರಸಂಗದಿಂದ ಒಬ್ಬಳಾದರೂ ವಿಧವೆ-ಯಾಗದಿದ್ದ ನಾಲ್ಕಾರು ಗುಡಿಸಲುಗಳಿದ್ದ ಸೊಟ್ಟ ಹಳ್ಳಿಯನ್ನು ಸಹ ಮಹಾರಾಷ್ಟ್ರದಲ್ಲಿ ಕಾಣುವ ಹಾಗಿದ್ದಿಲ್ಲ"[1]ವಂತೆ. ಕಾದಂಬರಿಯಲ್ಲಿ ಭಾವೂಸಾಹೇಬ ಮತ್ತು ವಿಶ್ವಾಸರಾಯರ ಶೌರ್ಯದಂತೆ ಅವರ ಮರಣಪ್ರಸಂಗಗಳೂ ಹೃದ್ಯವಾಗಿ ನಿರೂಪಿತವಾಗಿವೆ. ಯುದ್ಧದ ತಂತ್ರ–ಕುತಂತ್ರಗಳು, ಗುಪ್ತಚಾರರು, ವೈರೀವೀರರನ್ನು ಒಡಕೊಳ್ಳುವಿಕೆ, ಸೇನಾಪತಿಗಳ ಸ್ವಾರ್ಥಸಾಧಕತೆ ಮೊದಲಾದ ವರ್ಣನೆಗಳು ಈ ಐತಿಹಾಸಿಕ ಕಾದಂಬರಿಗೆ ಜೀವಂತಿಕೆಯ ಕಳೆ ತಂದಿದೆ. ಸೈನ್ಯದ ಜೊತೆಗೆ ಹೋಗಿದ್ದ ಪೇಶ್ವೆಪತ್ನಿಯರ ಸ್ಥಿತಿಯಂತೂ ಅತ್ಯಂತ ಕರುಣಮಯವಾಗಿದೆ.

"ಈ ಶ್ರೀಮಂತರಾದ ರಮಾ–ಉಮೆಯರ ವೃತ್ತಾಂತವನ್ನು ಬರೆಯುವಾಗ ನಮಗೆ ಪರಮಾವಧಿ ದುಃಖವಾಗುತ್ತದೆ. ಯಾಕೆಂದರೆ ಇವರು ಕಾದಂಬರಿಯೊಳಗಿನ ಕಾಲ್ಪನಿಕ ಪಾತ್ರಗಳಲ್ಲ........ಇದೊಂದು ಕಲ್ಪಿತ ಕಾದಂಬರಿಯಾಗಿದ್ದು. ಇವರಿಬ್ಬರು ಕಲ್ಪಿತ ಸ್ತ್ರೀಯ ರಾಗಿದ್ದರೆ ಇಂಥ ಸುಕುಮಾರಿಯರನ್ನು ಇಷ್ಟು ದೂರ ಕರೆತಂದು ಈ ಪರಿಯ ಸಂಕಟಕ್ಕೆ ನಾವು ಎಂದೂ ಗುರಿಮಾಡುತ್ತಿದ್ದಿಲ್ಲ. ಅಷ್ಟು ಕಠಿಣ ಹೃದಯವು ನಮ್ಮದಲ್ಲವೆಂತಲೂ ವಾಚಕರಿಗೆ ಹೇಳಬಹುದು. ಹಿಂದಕ್ಕೆ ನಾವು 'ಕುಮುದಿನೀ' ಕಾದಂಬರಿಯಲ್ಲಿ ಚಿನ್ನ ಓಬಲನ ಕ್ರೂರತನವನ್ನು ವರ್ಣಿಸುವಾಗ ನಮ್ಮ ಕಣ್ಣೀರುಗಳುದುರಿದವು.... ಆದರೆ ಮಾಡುವದೇನು?

1. ಗಳಗನಾಥ: ಕುರುಕ್ಷೇತ್ರ, ಪುಟ 178

ನಡೆದದ್ದನ್ನು ನಡೆದಹಾಗೆ ವರ್ಣಿಸದಿದ್ದರೆ ನಿರ್ವಾಹವಿಲ್ಲ!"[1] ಎಂದು ಅನುವಾದಕರೂ ಮಿಡುಕಿರುವರು. ಮೂಲದಲ್ಲಿ ಇಲ್ಲದ ಇಂಥ ಮಾತುಗಳಿಂದ ಕಾದಂಬರಿಯ ಕಲಾತ್ಮಕತೆಗೆ ಧಕ್ಕೆ ತಗುಲಿದ್ದರೂ, ಗಳಗನಾಥರ ಸಹೃದಯತೆ ವ್ಯಕ್ತವಾಗಿದೆ. ಗಳಗನಾಥರ ಅನುವಾದ ಗಳಲ್ಲಿ 'ಕುರುಕ್ಷೇತ್ರ'ವು ಹೆಚ್ಚು ಭಾವಪೂರ್ಣವಾಗಿದೆ ಎಂದು ಹೇಳಬಹುದು. ಇದಕ್ಕೆ ಮೂಲ ಲೇಖಕರಾದ ಜೋಶಿಯವರಂತೆ ಅನುವಾದಕರಾದ ಗಳಗನಾಥರೂ ಕಾರಣ ರಾಗಿರುವರು. ಗಳಗನಾಥರು ಈ ಕಾದಂಬರಿಯ ಕೇವಲ ರಸಚಿತ್ರದಿಂದ ತೃಪ್ತರಾಗದೆ, ಕಾದಂಬರಿ ಕಲಿಸುವ ಪಾಠವೇನೆಂಬುದನ್ನೂ ಸೂಚಿಸಿದರು. ಕಾದಂಬರಿಯ ಕೊನೆಯ ಭಾಗ ದಲ್ಲಿ "ಅತಿಗರ್ವವು ನಾಶಕರವೆಂದು ಹೇಳಲವಶ್ಯವಿಲ್ಲ. 'ಅತಿ ಗರ್ವೇಣ ರಾವಣಃ' ಎಂಬಂತೆ ಮಹಾ ಬಲಿಷ್ಠನೂ ಅತ್ಯಂತ ವೈಭವಶಾಲಿಯೂ ಆದ ರಾವಣನ ನಾಶವು ಅತಿಗರ್ವದಿಂದಲೇ ಆಯಿತೆಂಬುದು ಶ್ರೀಮದ್ರಾಮಾಯಣದಿಂದ ಗೊತ್ತಾಗುವದು. ಅದರಂತೆ ಪ್ರಭಾವಶಾಲಿಯಾದ ಭಾವೂಸಾಹೇಬನ ಅತಿಗರ್ವದ ಬಾಧೆಯಿಂದ ಮಹಾರಾಷ್ಟ್ರದ ಉತ್ಕರ್ಷವು ಕುಗ್ಗಿತೆಂಬುದು ನಮ್ಮ ಈ ಕುರುಕ್ಷೇತ್ರದ ಕಾದಂಬರಿಯಿಂದ ಗೊತ್ತಾಗಬಹುದಾಗಿದೆ"[2] ಎಂದು ಸ್ಪಷ್ಟವಾಗಿ ಉಪದೇಶಿಸಿದರು.

**'ಸಂಸಾರ ಸುಖ'**ವು ಲೋಕಭ್ರಮಕಾರಕವಿರುತ್ತದೆಯೆಂದು ನಂಬಿದ ಗಳಗನಾಥರು ಈ ಕಾದಂಬರಿಗೆ 'ಲೋಕಭ್ರಮ–ವಿಲಾಸ' ಎಂಬ ಪರ್ಯಾಯನಾಮವನ್ನು ಕೊಟ್ಟಿರುವರು. ಮುಖರ್ಜಿ ಅವರ ಮೂಲ ಬಂಗಾಲಿ ಕಾದಂಬರಿಯನ್ನು ತಾತ್ಯಾ ನೇಮಿನಾಥ ಪಾಂಗಳ ಎಂಬವರು ಮರಾಠಿಯಲ್ಲಿ ಭಾಷಾಂತರಿಸಿದ್ದು, ಇದೇ ಗಳಗನಾಥರಿಗೆ ಆಕರವಾಗಿದ್ದರೂ ಗಳಗನಾಥರು ಕಾದಂಬರಿಯ ಮಧ್ಯೆ ತಮ್ಮ ನೀತಿಬೋಧಕ ಮಾತುಗಳನ್ನು "ವಾಚಕರ ಹಿತಾರ್ಥವಾಗಿ" ಸೇರಿಸಿರುವರು.

ಮೊಗಲ ಇತಿಹಾಸಕ್ಕೆ ಸಂಪೂರ್ಣವಾಗಿ ಸಂಬಂಧಿಸಿದ ಗಳಗನಾಥರ ಕಾದಂಬರಿ 'ಸಂಸಾರ ಸುಖ'. ಅಕಬರ ಬಾದಶಹನ ಕೊನೆಗಾಲದಲ್ಲಿ ಆತನ ಸಂಸಾರದಲ್ಲಿ ಯಾರಿಗೂ ಸುಖವಿರಲಿಲ್ಲವೆಂಬುದನ್ನು ತೋರಿಸುವುದೇ ಈ ಕಾದಂಬರಿಯ ಉದ್ದೇಶವಾಗಿದೆ. ಅಕಬರನ ಮಗ ಸೆಲೀಮ, ಆತನ ಮಗನೇ ಖುಸ್ರು. ಅಕಬರನ ವಿರುದ್ಧ ಸೆಲೀಮನು ಬಂಡೆದ್ದಂತೆ, ಸೆಲೀಮನ ವಿರುದ್ಧ ಖುಸ್ರುವೂ ಬಂಡೆದ್ದನು. ಆದರೆ ಅಕಬರನು ಉದಾರ ಹೃದಯದಿಂದ ಮಗನನ್ನು ಕ್ಷಮಿಸಿದಂತೆ, ಸೆಲೀಮ ತನ್ನ ಮಗನನ್ನು ಕ್ಷಮಿಸಲಿಲ್ಲ. ಅಕಬರನ ಅನಂತರ ತನಗೆ ಪಟ್ಟವಾಗಬೇಕೆಂದು ಖುಸ್ರು ಒಮ್ಮೆ ಆಸೆ ಮಾಡಿದ. ಆತನ ಸೋದರಮಾವನಾದ ಮಾನಸಿಂಹನೂ, ಹೆಂಡತಿಯ ತಂದೆಯಾದ ಅಜೀಮಖಾನನೂ ಅವನಿಗೆ ಸಹಾಯಕರು. ಉದ್ಧತವೃತ್ತಿಯ ಖುಸ್ರು ಚಂಚಲಸ್ವಭಾವದವನೂ ಆಗಿದ್ದನು. ಮದಿರೆ ಮತ್ತು ಮದಿರಾಕ್ಷಿಯರ ಮೋಹವೂ ಅವನ ವಿನಾಶಕ್ಕೆ ಕಾರಣವಾಯಿತು. ಅಕಬರನ ಅನಂತರ ಬಾದಶಹನಾದ ಸೆಲೀಮನು ಮಗನ ಕಣ್ಣು ಕೀಳಿಸಿದರೆ, ಆತನ ನೂತನ ರಾಣಿ ನೂರಜಹಾನಳು ಖುಸ್ರುವಿನ ಕೊಲೆಯನ್ನೇ ಮಾಡಿಸಿದಳು.

1. ಅದೇ, ಪುಟ 125

2. ಅದೇ, ಪ್ರಸ್ತಾವನೆ, ಪುಟ 1

ಖುಸ್ರುವಿನ ಕಥೆಯಲ್ಲಿ ಆತನ ತಾಯಿ ಜೋಧಬಾಯಿಯ ಕಥೆಯೂ ಸೇರಿಕೊಂಡಿದೆ. ಅವಳ ಪತಿಭಕ್ತಿ, ಮಾತೃವಾತ್ಸಲ್ಯಗಳನ್ನೂ ಅವುಗಳ ತುಮುಲವನ್ನೂ ಮುಖರ್ಜಿಯವರು ಚೆನ್ನಾಗಿ ಚಿತ್ರಿಸಿರುವರು. ಖುಸ್ರು ಮೋಹಿಸಿದ ಮಂದಾಕಿನಿ ಮತ್ತು ಅವಳ ಪತಿ ದುರ್ಜಯಸಿಂಹರ ಪೋಷಕ ಪಾತ್ರಗಳೂ ಚೆನ್ನಾಗಿ ಮೂಡಿಬಂದಿವೆ. ಖುಸ್ರುವಿನ ಹೆಂಡತಿ ಪ್ಯಾರಿಯ ಮುಗ್ಧ ಚಿತ್ರವು ಕಾದಂಬರಿಯಲ್ಲಿ ಮೋಹಕವಾಗಿ ಮಿಂಚಿ ಹೋಗಿದೆ. ಜೋಧಬಾಯಿಯ ಕರುಣಮಯ ಜೀವನ ಮತ್ತು ಅವಳ ದೈವದುರ್ವಿಪಾಕದ ಮರಣ ಹೃದಯವನ್ನು ಮಿಡಿಯುತ್ತವೆ. ಇಡೀ ಕಾದಂಬರಿಯಲ್ಲಿಯೇ ಕರುಣದ ತಂತಿ ಮಿಡಿಯುತ್ತಿರುವಂತಿದೆ. ಕಾದಂಬರಿಯ ಕೊನೆಗೆ "ಇನ್ನು ಮುಂದಿನ ದುಃಖಕಾರಕ ಸ್ಥಿತಿಯನ್ನು ಕಾದಂಬರಿಯಲ್ಲಿ ವರ್ಣಿಸಲು ನಾನು ಇಚ್ಛಿಸುವದಿಲ್ಲ"[1] ಎಂದು ಅನುವಾದಕ ಗಳಗನಾಥರು ಹೇಳಿಬಿಟ್ಟಿದ್ದಾರೆ.

ಬಾಬುಹರಿ ಮುಖರ್ಜಿಯವರು ಈ ಕಾದಂಬರಿಯನ್ನು 'ಖುಸರು' ಎಂದು ಹೆಸರಿಸಿದರು; ಮರಾಠಿ ಅನುವಾದಕರಾದ ಪಾಂಗಳರು 'ರಾಜಸಂಸಾರ ಅಥವಾ ಶಹಜಾದಾ ಖುಸರು' ಎಂದು ಕರೆದರು; ಗಳಗನಾಥರು 'ಸಂಸಾರ ಸುಖ'ವೆಂದು ಕರೆದರು. ಮುಖರ್ಜಿಯವರಿಗೆ ಇದು ಖುಸರುವಿನ ಕಥೆ ಮಾತ್ರವಾಗಿದ್ದರೆ, ಪಾಂಗಳರಿಗೆ ಇದು 'ರಾಜ ಸಂಸಾರ'ದ ಕಥೆಯಾಗಿ ಕಂಡಿತು. ಗಳಗನಾಥರಿಗೆ ಮಾತ್ರ ಇದು ಸಾರ್ವತ್ರಿಕವಾದ ದುಃಖಮಯ ಸಂಸಾರದ ಕಥೆಯಾಗಿ ಕಂಡಿದ್ದರಿಂದ ಅವರು ಅದನ್ನು ವ್ಯಂಗ್ಯವಾಗಿ 'ಸಂಸಾರ ಸುಖ'ವೆಂದು ಕರೆದರು, ಗಳಗನಾಥರ ಈ ನಾಮಕರಣವು ಅತ್ಯಂತ ಅರ್ಥಪೂರ್ಣವಾಗಿದೆ.[2]

ಅನುವಾದಕರೂ ಪ್ರತಿಭಾವಂತರಾದರೆ, ಮೂಲಕೃತಿಯಲ್ಲಿ ಹೆಚ್ಚಿನ ಅರ್ಥವನ್ನು ಕಂಡು, ತಮ್ಮ ವಾಚಕರಿಗೆ ಅದನ್ನು ತೋರಿಸಬಲ್ಲರು–ಎಂಬುದಕ್ಕೆ ಗಳಗನಾಥರ ಅನೇಕ ಅನುವಾದಗಳು ಸಾಕ್ಷಿಯಾಗಿವೆ. 'ಸಂಸಾರ ಸುಖ'ವೆಂಬೀ ಕಾದಂಬರಿಯ ನಾಮಪರಿವರ್ತನವೂ ಕೂಡ ಈ ಮಾತಿಗೆ ಸಾಕ್ಷಿಯಾಗಿದೆ.

ಅಂತೂ ಗಳಗನಾಥರು 1910ರಿಂದ 1928ರ ವರೆಗೆ 'ಕಮಲ ಕುಮಾರಿ'ಯನ್ನು ಭಾಷಾಂತರಿಸಿದ್ದಲ್ಲದೆ, ಬೇರೆ 15 ಕಾದಂಬರಿಗಳನ್ನು ಅನುವಾದಿಸಿದರು.[3] ಈ ಎಲ್ಲ ಅನುವಾದಗಳು ಮರಾಠಿಯಿಂದಲೇ ಬಂದವುಗಳು. ಇವುಗಳಲ್ಲಿ ಹೆಚ್ಚಿನವು ಆಪಟೆಯವರ ಕಾದಂಬರಿಗಳೇ ಆಗಿರುವುದರಿಂದ, "ಗಳಗನಾಥರು ಆಪಟೆಯವರ ಮರಾಠಿ ಕಾದಂಬರಿಗಳನ್ನು ಅನುವಾದಿಸಿದರು" ಎಂದು ಸಾಮಾನ್ಯವಾಗಿ ಹೇಳಲಾಗುತ್ತದೆ. ಅವರು ಅನುವಾದಿಸಿದ ಕಾದಂಬರಿಗಳ ಮೂಲ ಲೇಖಕರ ವಿವರ ಹೀಗಿದೆ:

ಹರಿ ನಾರಾಯಣ ಆಪಟೆ ಅವರ ಅನುವಾದಗಳು........8[4]

---

1. ಗಳಗನಾಥ: ಸಂಸಾರ ಸುಖ, ಪುಟ 236
2. 'ಸಂಸಾರ ಸುಖ'ದ 78, 79, 88, 118, 120, 146, 147 ಮತ್ತು 185 ಈ ಮೊದಲಾದ ಪುಟಗಳಲ್ಲಿ ಗಳಗನಾಥರು ವ್ಯಕ್ತಪಡಿಸಿದ ಜೀವನ ವಿಮರ್ಶೆಯು ಅನೇಕ ವಿಚಾರಗಳಿಗೆ ಕಾದಂಬರಿಯ ಹೆಸರು ಸಂವಾದಿಯಾಗಿದೆ.
3. 1928ರ ನಂತರ ಗಳಗನಾಥರು ಬರೆದ ಎರಡೇ ಕಾದಂಬರಿಗಳು ಅನುವಾದಗಳಲ್ಲ; ಸ್ವತಂತ್ರ ಕಾದಂಬರಿಗಳು.
4. ಆಪಟೆಯವರು ಬರೆದ 11 ಐತಿಹಾಸಿಕ ಕಾದಂಬರಿಗಳಲ್ಲಿ ಗಳಗನಾಥರು ಅನುವಾದಿಸದೆ ಬಿಟ್ಟವುಗಳು 1) ಮೈಸೂರಿನ ಹುಲಿ 2) ಮಧ್ಯಾಹ್ನ ಮತ್ತು 3) ಕಾಲಕೂಟ (ಅಪೂರ್ಣಕೃತಿ)

| | | | |
|---|---|---|---|
| | ಬಂಕಿಮಚಂದ್ರ ಚಟರ್ಜಿ | ಅವರ ಅನುವಾದಗಳು | ........2 |
| | ಬಾಲಚಂದ್ರ ನಾನಚಂದ್ರ ಶಹಾ | " " | ........2 |
| | ದಾಮೋದರ ಮುಖ್ಯೋಪಾಧ್ಯಾಯ | " " | ........1 |
| | ನಾಗೇಶ ವಿನಾಯಕ ಬಾಪಟ | " " | ........1 |
| | ಲಕ್ಷ್ಮಣ ನಾರಾಯಣ ಜೋಶಿ | " " | ........1 |
| ಮತ್ತು | ಬಾಬುಹರಿ ಸಧನ ಮುಖರ್ಜಿ | " " | ........1 |

ಈ ಒಟ್ಟು 16 ಕಾದಂಬರಿಗಳಲ್ಲಿ 12 ಕಾದಂಬರಿಗಳು ಮೂಲ ಮರಾಠಿಯಲ್ಲಿಯೇ ರಚಿತವಾದವುಗಳಾದರೆ, 4 ಕಾದಂಬರಿಗಳು ಮೊದಲು ಬಂಗಾಲಿ ಭಾಷೆಯಲ್ಲಿ ರಚಿತವಾಗಿದ್ದು, ವಾ. ಗೋ. ಆಪಟೆ, ತಾತ್ಯಾ ನೇಮಿನಾಥ ಪಾಂಗಳ, ಕಾಶಿನಾಥ ರಘುನಾಥ ಮಿತ್ರ ಮತ್ತು ಬಾಲಚಂದ್ರ ನಾನಚಂದ್ರ ಶಹಾ ಅವರಿಂದ ಮರಾಠಿಗೆ ಅನುವಾದಿತವಾಗಿದ್ದುವು. ಗಳಗನಾಥರಿಗೆ ಮರಾಠಿಯನ್ನು ಬಿಟ್ಟರೆ ಬೇರೆ ಯಾವ ಭಾಷೆಯ ಮೇಲೆಯೂ ಪ್ರಭುತ್ವವಿಲ್ಲದ್ದರಿಂದ ಅವರು ತಮ್ಮ ಅನುವಾದಗಳಿಗೆ ಮರಾಠಿ ಕೃತಿಗಳನ್ನೇ ಅವಲಂಬಿಸಬೇಕಾಯಿತು.

ಅದೇನೇ ಇದ್ದರೂ ಕನ್ನಡಿಗರು ಇವು ಮರಾಠಿಯ ಅನುವಾದಗಳೆಂದು ಅವುಗಳನ್ನು ಕೀಳಾಗಿ ಕಾಣಲಿಲ್ಲ. ಸಾಮಾನ್ಯವಾಗಿ ಗಳಗನಾಥರ ಪ್ರತಿಯೊಂದು ಕಾದಂಬರಿ ಕನಿಷ್ಠ ನಾಲ್ಕು ಅಥವಾ ಐದು ಸಲ ಪುನರ್ಮುದ್ರಿತವಾಗಿದೆ. 1928ರಲ್ಲಿ ಪ್ರಕಟಿತವಾದ ಅವರ 'ಧಾರ್ಮಿಕ ತೇಜ', 'ರಾಜಸಿಂಹ' ಮತ್ತು 1926ರಲ್ಲಿ ಪ್ರಕಟವಾದ 'ಸಂಸಾರ ಸುಖ' ಈ ಕಾದಂಬರಿಗಳು ಮಾತ್ರ ಕೇವಲ ಎರಡು ಸಲ ಪುನರ್ಮುದ್ರಣಗೊಂಡಿವೆ. 1938ರಲ್ಲಿ ಪ್ರಕಟವಾದ ಅವರ ಸ್ವತಂತ್ರ ಕೃತಿ 'ದುರ್ಗದ ಬಿಚ್ಚುಗತ್ತಿ' ಮಾತ್ರ ಪುನರ್ಮುದ್ರಣದ ಭಾಗ್ಯವನ್ನೇ ಪಡೆಯಲಿಲ್ಲ. ಆದರೆ ಗಳಗನಾಥರ ಅತ್ಯಂತ ಜನಪ್ರಿಯ ಕಾದಂಬರಿಗಳಲ್ಲಿ 'ಈಶ್ವರೀಸೂತ್ರ', 'ಕನ್ನಡಿಗರ ಕರ್ಮಕಥೆ' ಮತ್ತು 'ಕುಮುದಿನಿ' ಇವು ಹೆಚ್ಚು ಆವೃತ್ತಿ-ಗಳನ್ನು ಪಡೆದುವು. 'ಈಶ್ವರೀಸೂತ್ರ'ವು ಏಳು ಸಲ ಮುದ್ರಣವಾದರೆ, ಅವರ ಪ್ರಥಮ ಭಾಷಾಂತರ 'ಕಮಲ ಕುಮಾರಿ' ಎಂಟು ಸಲ ಅಚ್ಚಾಯಿತು.

ಈ ಎಲ್ಲ ಕಾದಂಬರಿಗಳು ಇಷ್ಟು ಜನಪ್ರಿಯವಾಗಲು ಗಳಗನಾಥರ ಅನುವಾದ ಕಲೆಯೇ ಮುಖ್ಯಕಾರಣ. ಈ ಕಾದಂಬರಿಗಳ ಕಥೆಗಳೂ ಆಕರ್ಷಕವಾಗಿದ್ದವೆಂಬುದು ಕೂಡ ಒಂದು ಪ್ರಬಲ ಕಾರಣವೇ ಸರಿ. ಆದರೆ ಗಳಗನಾಥರು ಇವುಗಳ ಅನುವಾದದಲ್ಲಿ ಒಂದು ಹೊಸ ಜೀವಕಳೆಯನ್ನು ತುಂಬಿದರು. ಅವರು ತಮ್ಮ ಕಾಲದ ಬೇರೆ ಕೆಲವು ಭಾಷಾಂತರಕಾರರಂತೆ ಶಬ್ದಕ್ಕೆ ಶಬ್ದ ಭಾಷಾಂತರ ಮಾಡುತ್ತ ಹೋಗದೆ, ಅವುಗಳನ್ನು ಭಾವಾನುವಾದ ಮಾಡಿ, ಇವು ಕನ್ನಡದಲ್ಲಿಯೇ ಬರೆದ ಮೂಲ ಕಾದಂಬರಿಗಳು ಎನ್ನುವಂಥ ಸಹಜಶೈಲಿಯಲ್ಲಿ ಬರೆದರು. ಕನ್ನಡದ ಇನ್ನೊಬ್ಬ ಸುಪ್ರಸಿದ್ಧ ಭಾಷಾಂತರಕಾರರಾದ ಬಿ. ವೆಂಕಟಾಚಾರ್ಯರಿಗೂ ಗಳಗನಾಥರಿಗೂ ಇರುವ ಮುಖ್ಯ ವ್ಯತ್ಯಾಸವೇ ಇದು. ಬಿ. ವೆಂಕಟಾಚಾರ್ಯರು ಬಂಗಾಲಿ-ಯಿಂದ ಕನ್ನಡಕ್ಕೆ ಭಾಷಾಂತರಿಸುವಾಗ ಬಂಗಾಲಿ ಶೈಲಿಯನ್ನೇ ಅನುಸರಿಸಿದರು. ಆದರಿಂದ ಅವರ ಕಾದಂಬರಿಗಳ ಭಾಷೆ ಕೃತ್ರಿಮವೆನಿಸಿತು. ಬಂಕಿಮಚಂದ್ರರ ಕಥೆಗಳೂ ಸುರಮ್ಯವಾದವು ಗಳೇ. ಆದರೂ ವೆಂಕಟಾಚಾರ್ಯರ ಭಾಷಾಂತರಗಳು ಸಾಮಾನ್ಯರಲ್ಲಿ ಅಷ್ಟು ಜನಪ್ರಿಯ ವಾಗಲಿಲ್ಲ. 'ಈಶ್ವರೀಸೂತ್ರ', 'ಕನ್ನಡಿಗರ ಕರ್ಮಕಥೆ', 'ರಾಣಿ ಮೃಣಾಲಿನಿ', 'ಕಮಲ

ಕುಮಾರಿ' ಮೊದಲಾದವುಗಳನ್ನು ವಾಚಕರು ಗಳಗನಾಥರ ಕಾದಂಬರಿಗಳೆಂದೇ ಭಾವಿಸಿದರು. ಇವು ಭಾಷಾಂತರಗಳು ಅಥವಾ ಅನುವಾದಗಳೆಂಬ ಕಲ್ಪನೆಯೇ ಅವರಿಗೆ ಬರಲಿಲ್ಲ. ಸಾಮಾನ್ಯ ವಾಚಕರ ಮಾತಂತೂ ಇರಲಿ, ಪ್ರಾಜ್ಞರಾದವರೂ ಕೆಲವು ಸಲ ಹಾಗೆ ಭಾವಿಸುವಂತಾಯಿತು.[1]

ಗಳಗನಾಥರು ಎಲ್ಲ ಅನುವಾದಗಳಲ್ಲಿಯೂ ತಮ್ಮದೆಂಬ ಅಂಶವನ್ನು ಸೇರಿಸಿದ್ದಾರೆ. ಆದ್ದರಿಂದ ಈ ಅನುವಾದಗಳು ಗಳಗನಾಥರ ಕಾದಂಬರಿಗಳೇ ಆದುವಲ್ಲದೆ, ಆಪಟೆಯವರ ಅಥವಾ ಬಂಕಿಮಚಂದ್ರರ ಅಥವಾ ಮತ್ತೊಬ್ಬರ ಕಾದಂಬರಿಗಳಾಗಿ ಉಳಿಯಲಿಲ್ಲ. ಆದ್ದರಿಂದ ಗಳಗನಾಥರ ಈ ಕಾದಂಬರಿಗಳನ್ನು ಕೇವಲ ಅನುವಾದಗಳು ಅಥವಾ ಮುಕ್ತ ಅನು-ವಾದಗಳು ಎಂದು ಕರೆಯುವುದಕ್ಕಿಂತ, ಇವುಗಳನ್ನು ಸೃಜನಶೀಲ ಅನುವಾದಗಳೆಂದು ಕರೆದರೂ ತಪ್ಪಾಗಲಾರದು. ಗಳಗನಾಥರ ಈ ಸೃಜನಶೀಲ ಅನುವಾದಗಳು ಒಂದು ರೀತಿಯಲ್ಲಿ ಪುನಃಸೃಷ್ಟಿಗೆ ಸಮವಾಗಿವೆ. ಆದ್ದರಿಂದ ಗಳಗನಾಥರ ಅನುವಾದಗಳು ಗಳಗನಾಥರ ಕಾದಂಬರಿಗಳೆಂದೇ ಕರೆಯಿಸಿಕೊಂಡವು.

ಈ ಅನುವಾದಗಳು ಗಳಗನಾಥರ ಕಾದಂಬರಿಗಳಾಗಲಿಕ್ಕೆ ಅವರ ಭಾಷೆಯೂ ಮುಖ್ಯ ಕಾರಣವಾಯಿತು. 'ಕಮಲ ಕುಮಾರಿ'ಯ ಭಾಷಾಂತರದಲ್ಲಿ ಕಂಡು ಬಂದ ಕೆಲವು ಭಾಷೆಯ ಅಡಚಣೆಗಳೂ, ಅದರಿಂದುಂಟಾದ ದೋಷಗಳೂ, ನ್ಯೂನತೆಗಳೂ, ಈ ಅನುವಾದಗಳಲ್ಲಿ ಇನ್ನೂ ಕಡಿಮೆಯಾದುವು. ಗಳಗನಾಥರು ಅಚ್ಚ ಕನ್ನಡ ಭಾಷೆಯ ಸತ್ತ್ವವನ್ನು ಸಂಪೂರ್ಣ ವಾಗಿ ಬಳಸಿಕೊಂಡು, ತಮ್ಮ ಅನುವಾದಗಳು ಕನ್ನಡ ಕಾದಂಬರಿಗಳೇ ಎಂಬಂಥ ಒಂದು ಪ್ರಭಾವಮುದ್ರೆಯನ್ನು ಮೂಡಿಸಿದರು.

ರಹಿತಮಾಡು, ಇಸಮು, ವಾಟಾಘಾಟ, ಝುಪಾಟಿ, ಅವಾಢವ್ಯ, ಕರಾಮತಿ–ಈ ಮೊದಲಾದ ಕೆಲವು ಮರಾಠಿಯ ಪದಗಳನ್ನು ಗಳಗನಾಥರು ಅನುವಾದಗಳಲ್ಲಿ ಕೂಡ ಬಳಸಿದ್ದರೂ, ಇವುಗಳಲ್ಲಿ ಹಲವು ಉತ್ತರ ಕರ್ನಾಟಕದಲ್ಲಿ ಬಳಕೆಯ ಶಬ್ದಗಳೇ ಆಗಿದ್ದು ವೆಂಬುದು ಅನುಭವದ ಮಾತು. ಅಲ್ಲದೆ ಇಂಥವುಗಳ ಸಂಖ್ಯೆ ಕೂಡ ತೀರ ಪರಿಮಿತವಾಗಿದೆ. ಆದರೆ, ಕುಕ್ಕರ ಬಡಿ, ಕಿವಿಯನ್ನು ಊದು, ಪಿತ್ತ ನೆತ್ತಿಗೇರು, ಮೋರೆ ಕಿವುಚು, ಜೀವದ ಸುತ್ತ ಬಂದಿತು, ಕಸರಿಲ್ಲದೆ ಸಹಾಯಮಾಡಿದರು, ಅಕ್ಕಸದಿಂದ ಹರಿಹಾಯ್ದು, ಕುತ್ತಿಗೆ ಗೊಯ್ಕತನ, ಹೊಯ್ಮಾಲಿತನ, ಡೋಕಾರಿತನ, ಸೊಂಡೆಗಳು ಒಣಗಿದವು, ಝುಳ ಝುಳ ಮಾತ ನಾಡು, ಅಪ್ಪಗೈ ಹಚ್ಚಿಕೊಂಡು, ಅಬಚಿ, ಬಿದ್ದು ಸಾಯುತ್ತಿದ್ದರು, ಎಟ್ಟಿಮಾತು, ಹೊಟ್ಟೆಯಲ್ಲಿ ಡೊಂಬರಾಡು, ಹೊಟ್ಟೆಯಲ್ಲಿ ಸಾಸಿವೆ ಅರೆದು ಹಾಕು, ಹಿಂದಿನದನ್ನು ನೆನಸಿ ಹಿತ್ತಲಲ್ಲಿ ಅತ್ತಂತೆ, ಕೈ ತೊಳಕೊಂಡು ಬೆನ್ನುಹತ್ತು, ಮೈಯುಂಡು ಹೋಗು, ತಲೆಯ ಮೇಲೆ ಮೆಣಸು ಅರೆ, ಬಾಲ ಗುಂಡಾಡಿಸುತ್ತ, ಚಳ್ಳ ಹಣ್ಣ ತಿನ್ನಿಸಲಿಕ್ಕೆ, ಮಂಗಳಾರತಿ ಮಾಡಿಸಿಕೊಂಡು, ಡುಬ್ಬ ಕೆರೆಯಹತ್ತಿದಳು, ಸಮಾಚಾರ ತಕ್ಕೊಳ್ಳು, ಕಣ್ಣುಗಳಲ್ಲಿ ದೀಪ ಹಚ್ಚಿದಂತಾಯಿತು, ಹಣೆ ಕೊಯ್ದು ಮಣೆ ಮಾಡಿದರು, ಉಲಕೋಚಿ ಸ್ವಭಾವ,–ಎಂಬಂಥ ನೂರಾರು ಸಾವಿರಾರು

1. "ಓದು ತಿಳಿದ ಕನ್ನಡಿಗರಲ್ಲಿ ಗಳಗನಾಥರವರ ಹಲವು ಕಾದಂಬರಿಗಳನ್ನಾದರೂ ಓದದಿರುವವರು ಅಪರೂಪ. ಅವರು ಕನ್ನಡ ಸಾಹಿತ್ಯಕ್ಕೆ ಮಾಡಿರುವ ಸೇವೆಯು ಅಮೋಘವಾದುದು. ರಾಣಿ ಮೃಣಾಲಿನಿಯು ಅವರು ಸ್ವತಂತ್ರವಾಗಿ ಬರೆದ ಗ್ರಂಥ" ಎಂದು ವಿ. ಸೀ. ಅವರು 'ರಾಣಿ ಮೃಣಾಲಿನಿ'ಯ ವಿಮರ್ಶೆ ಮಾಡುತ್ತ ಬರೆದರು (ಪ್ರಬುದ್ಧ ಕರ್ಣಾಟಕ, 10–4).

ಕನ್ನಡದ ಪಡೆನುಡಿಗಳನ್ನು ಸಹಜವಾಗಿ ಬಳಸಿರುವ ಗಳಗನಾಥರ ಭಾಷಾಶೈಲಿಗೆ ತನ್ನದೇ ಆದ ಒಂದು ಒಗರು ಬಂದಿದೆ.

ಅಂತೂ ಬೇರೆಯವರ ಕಾದಂಬರಿಗಳನ್ನೇ ತಮ್ಮ ಕಾದಂಬರಿಗಳನ್ನಾಗಿ ಮಾಡಿಕೊಂಡ ಈ ಅನುವಾದಕ ಗಳಗನಾಥರ ಶಕ್ತಿಯನ್ನೂ ಯುಕ್ತಿಯನ್ನೂ ಮೆಚ್ಚಬೇಕು. ಅಲ್ಲದೆ ಈ ಅನುವಾದಗಳು ಮುಂದೆ ಅವರಿಗೆ ಸ್ವತಂತ್ರ ಕಾದಂಬರಿಗಳನ್ನು ಬರೆಯಲಿಕ್ಕೆ ಸ್ಫೂರ್ತಿಯನ್ನೂ ಮಾರ್ಗದರ್ಶನವನ್ನೂ ನೀಡಿದುವೆಂದರೆ ತಪ್ಪಾಗಲಾರದು. ಗಳಗನಾಥರು 'ಕಮಲಕುಮಾರಿ'ಯನ್ನೂ ಉಳಿದ ಅನುವಾದಗಳನ್ನೂ ಬರೆಯುವುದಕ್ಕಿಂತ ಬಹಳ ಕಾಲ ಮೊದಲೇ-1898ರಲ್ಲಿ–ಕನ್ನಡದಲ್ಲಿ ಸ್ವತಂತ್ರವಾದ ಕಾದಂಬರಿಯನ್ನು ಬರೆದಿದ್ದರೆಂಬುದು ನಿಜವೇ. ಆದರೆ ಅವರ 'ಪದ್ಮನಯನಾ' ಕಾದಂಬರಿಗೂ, ಆಪಟೆಯವರ ಈ ಅನುವಾದಗಳ ಅನಂತರ ಗಳಗನಾಥರು ಬರೆದ 'ಕುಮುದಿನಿ'ಯಂಥ ಸ್ವತಂತ್ರ ಕಾದಂಬರಿಗಳಿಗೂ ಅಜಗಜಾಂತರವಿದೆ. ಆಪಟೆಯವರ ಕಾದಂಬರಿಗಳನ್ನು ಓದಿ ಹೊಸ ಕಾದಂಬರಿಯ ಸವಿಯನ್ನು ಕಂಡ ಗಳಗನಾಥರು, ಅವುಗಳನ್ನು ಅನುವಾದಿಸಿ, ಕನ್ನಡದಲ್ಲಿ ಹೊಸ ಕಾದಂಬರಿಯ ದಾರಿಯನ್ನು ಕಂಡುಕೊಂಡರು. ಆದ್ದರಿಂದ ಅವರ ಅನುವಾದಗಳು ಸ್ವತಂತ್ರ ಕಾದಂಬರಿಯ ಮಾರ್ಗವನ್ನು ಸುಗಮವಾಗಿಸಿದುವು ಎನ್ನಬಹುದು.

ಆದ್ದರಿಂದ ಈ ಅನುವಾದಗಳಿಗೆ ಗಳಗನಾಥರಂತೆ ಕನ್ನಡಿಗರೂ ಒಂದು ರೀತಿಯಲ್ಲಿ ಋಣಿಯಾಗಿರುವರೆಂದರೆ ಅತಿಶಯೋಕ್ತಿಯಲ್ಲ. ಯಾಕೆಂದರೆ, ಈ ಕಾದಂಬರಿಗಳಲ್ಲಿಯ ವಸ್ತುವಿಷಯ, ಪಾತ್ರಗಳು ಕನ್ನಡಿಗರಲ್ಲಿ ಇನ್ನಿಲ್ಲದ ಜಾಗೃತಿಯನ್ನುಂಟು ಮಾಡಿದುವು. ಈ ಕಾದಂಬರಿಗಳಲ್ಲಿ ಚಿತ್ರಿತವಾದ ಸ್ವದೇಶ, ಸ್ವಧರ್ಮಗಳ ಅಭಿಮಾನವು ಅನ್ಯಾದೃಶ. ರಜಪೂತ ಮತ್ತು ಮರಾಠಾ ವೀರರು ತೋರಿದ ಶೌರ್ಯ–ಸಾಹಸಗಳು ಅದ್ವಿತೀಯ. ರಜಪೂತರ ಕಥೆಗಳಲ್ಲಿ ವೀರದೊಂದಿಗೆ ಶೃಂಗಾರ ತುಸುವಾದರೂ ಬರುತ್ತದೆ. ಆದರೆ ಮರಾಠರ ಕಥೆಗಳಲ್ಲಿ ಆಪಟೆಯವರು ವೀರವನ್ನೇ ಹೆಚ್ಚಾಗಿ ಮೆರೆದಿರುವರು. ಈ ಕಾದಂಬರಿಗಳಲ್ಲಿ ಮರಾಠಾ ವೀರರ ಚಿತ್ರ ಸ್ಪಷ್ಟವಾಗಿ ಕಣ್ಣಮುಂದೆ ಕಟ್ಟುವಂತಿದೆ. ಅವರ ಶಕ್ತಿ–ಯುಕ್ತಿಗಳ ಸಂಮಿಶ್ರಣ, ಅವರು ಬಳಸುವ ಸಂಕೇತಗಳು, ಅವರ ಕುದುರೆಗಳ ಪ್ರೇಮ,[1] ಅವರು ಶಿವಾಜಿಯನ್ನು[2] ದೇವರ ಅವತಾರವೆಂದೇ ಕಾಣುವ ಸ್ವಾಮಿಭಕ್ತಿ, ಶಿವಾಜಿಯಲ್ಲಿರುವ ಮಾತೃಪ್ರೇಮ, ಅವನು ರಾಮದಾಸ ಸ್ವಾಮಿಗಳಲ್ಲಿ ತೋರಿದ ಅನನ್ಯಶ್ರದ್ಧೆ, ಅಂಬಾಭವಾನಿಯಲ್ಲಿಯ ಅವನ ದೃಢಭಕ್ತಿ, ಅವಳು ಆತನಿಗೆ ಒಲಿದ ಬಗೆ, ಶಿವಾಜಿಯ ಉದಾತ್ತ ವ್ಯಕ್ತಿತ್ವ, ಆತನ ಸ್ತ್ರೀದಾಕ್ಷಿಣ್ಯ, ಸ್ವಧರ್ಮಾಭಿಮಾನದ ಜೊತೆಗೆ ಆತ ತೋರಿದ ಪರಮತ ಸಹಿಷ್ಣುತೆ, ಈ ಮೊದಲಾದವುಗಳ ಜೊತೆಗೆ ಕೆಲವು ಮರಾಠಾ ವೀರರು ತೋರಿದ ಮನೆಮುರುಕತನ ಸ್ವಾರ್ಥ ವಂಚನೆಗಳು, ಅವುಗಳ ದುಷ್ಪರಿಣಾಮಗಳು–ಇವೆಲ್ಲವು ಕನ್ನಡಿಗರ ಕಣ್ಣ ಮುಂದೆ

1. ಅವರು ಪ್ರೀತಿಯಿಂದ ರಣಭೋಡ, ದಿಲಪಾಕ, ಝೋಂಡ್ಯಾ ಎಂದು ಮುಂತಾಗಿ ತಮ್ಮ ಕುದುರೆಗಳಿಗೆ ಹೆಸರು ಇಟ್ಟಿದ್ದರು. ಕುದುರೆಗಳನ್ನು ಅವರು ಮಾನವ ಸಂಗಾತಿಗಳಂತೆಯೇ ಕಂಡರು. ''ಝೋಂಡ್ಯಾ, ಮಗನೇ'' ಎಂದು ಮುಂತಾಗಿ ಕರೆದು ಲಲ್ಲೆಗೈದರು.

2. ಗಳಗನಾಥರ ಅನುವಾದಗಳನ್ನು ಓದಿ ಎ. ಆರ್. ಕೃಷ್ಣಶಾಸ್ತ್ರಿಗಳು ''ರಾಜರ್ಷಿಯಂತಿದ್ದ ಶಿವಾಜಿ. ಅವನು ಹಗಲು ದರೋಡೆಯ ಕಳ್ಳನೆಂಬ ಅಭಿಪ್ರಾಯವನ್ನು ಇನ್ನಾದರೂ ಬಿಟ್ಟಬಿಡೋಣ'' ಎಂದು ಉದ್ಗಾರ ತೆಗೆದರು. (ಭಾಷಣಗಳು ಮತ್ತು ಲೇಖನಗಳು, ಪುಟ 239)

ಕಟ್ಟಿದುವು. ಈ ವೀರರೆಲ್ಲ ಪರಕೀಯರಲ್ಲ, ನಮ್ಮವರೇ ಎಂಬ ಅಭಿಮಾನ ಕನ್ನಡಿಗರಲ್ಲಿ ಮೂಡಿತು.

ಮರಾಠರಂತೆ ರಜಪೂತರೂ ವೀರಶ್ರೀಯನ್ನು ಮೆರೆದರಷ್ಟೇ ಅಲ್ಲದೆ, ಅವರ ರಮಣಿಯರೂ ವೀರ ಮಣಿಯರು. ಅವರ ಪತಿಪ್ರೇಮ ಅಮರವಾದಂತೆ, ಅವರ ಸ್ವಧರ್ಮಾಭಿಮಾನವೂ ಅಮರ. ಅವರು ಅಗ್ನಿಯಲ್ಲಿ ಪ್ರಾಣಕೊಡುತ್ತಿದ್ದರೇ ವಿನಾ ಯವನರ ಕೈವಶರಾಗಲಿಲ್ಲ. ಪ್ರಸಂಗ ಬಂದರೆ ಅವರು ಗಂಡುವೇಷ ತೊಟ್ಟು, ಕುದುರೆ ಏರಿ, ಕತ್ತಿ ಹಿಡಿದು ಯುದ್ಧವನ್ನೂ ಮಾಡಿದರು; ಗುಪ್ತವೇಷ ತೊಟ್ಟು ವೈರಿಗಳ ಮಧ್ಯೆ ಸೇರಿಕೊಂಡು ತಮ್ಮ ಕಾರ್ಯ ಸಾಧನೆಗಾಗಿ ಪ್ರಾಣವನ್ನೇ ಪಣಕ್ಕಿಟ್ಟರು. ಪ್ರತಿಜ್ಞೆಗೈದಂತೆ ದಿಲ್ಲಿ ಬಾದಶಹನ ರಾಣಿಯರಿಂದ ತಮ್ಮ ಗುಡಗುಡಿಯನ್ನೂ ತುಂಬಿಸಿಕೊಂಡರು! ಇಂಥ ರಜಪೂತರ ಕಥೆಗಳನ್ನು ಗಳಗನಾಥರು ತಮ್ಮ ಅನುವಾದಗಳಿಂದ ಕನ್ನಡಿಗರಿಗೆ ಹೇಳಿ, ಕನ್ನಡಿಗರಲ್ಲಿ ಕೆಚ್ಚನ್ನು ತುಂಬಿದರು.

ಗಳಗನಾಥರು ಈ ಮುಕ್ತ ಅನುವಾದಗಳಲ್ಲಿ ಆಗಾಗ ತಂದಿರುವ ಜೀವನ ವಿಮರ್ಶೆ, ನೀತಿಬೋಧೆ ಇವು ಕೂಡ ಕನ್ನಡಿಗರಿಗೆ ಆಪ್ಯಾಯಮಾನವೇ ಆದುವು. ಕಲೆಯ ದೃಷ್ಟಿಯಿಂದ ಗಳಗನಾಥರ ಈ ರೀತಿಯು ದೋಷವೆಂದು ಕಂಡರೂ, ಸಾಮಾನ್ಯ ವಾಚಕರನ್ನು ತಮ್ಮ ಕಣ್ಣೆದುರು ಇಟ್ಟುಕೊಂಡು ಕಾದಂಬರಿಗಳನ್ನು ಬರೆದ ಗಳಗನಾಥರ ಈ ಉಪಕ್ರಮದಲ್ಲಿ ಹೆಚ್ಚಿನ ದೋಷವನ್ನು ಕಾಣಲಾಗದು.

ವಿನಾಶಕಾಲೇ ವಿಪರೀತ ಬುದ್ಧಿಃ, ಧರ್ಮೋರಕ್ಷತಿ ರಕ್ಷಿತಃ, ಬುದ್ಧಿಃ ಕರ್ಮಾನುಸಾರಿಣೀ, ಗತಾನುಗತಿಕೋ ಲೋಕಃ, ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ–ಎಂಬಂಥ ಹಲವಾರು ಸಂಸ್ಕೃತದ ಸೂಕ್ತಿಗಳನ್ನು ಅವರು ಕಾದಂಬರಿಗಳಲ್ಲಿ ಮೇಲಿಂದ ಮೇಲೆ ಉದ್ಧರಿಸಿ ಹೇಳುತ್ತಾರೆ. ಅದರಲ್ಲೂ "ವಿನಾಶಕಾಲೇ ವಿಪರೀತ ಬುದ್ಧಿಃ" ಎಂಬ ವಚನವಂತೂ ಅವರಿಗೆ ಅತೀವ ಪ್ರಿಯವಾದದು. ಅದರಷ್ಟು ಪುನರುಕ್ತಿಯಾದ ಮಾತೇ ಬೇರೊಂದಿಲ್ಲ. ಇದು ಬಹುಶಃ ಅವರ ಎಲ್ಲ ಕಾದಂಬರಿಗಳಲ್ಲೂ ಬಂದೇ ಬಂದಿದೆ.

ಅದರಂತೆ "ಭವಿತವ್ಯವನ್ನು ತಪ್ಪಿಸುವದು ಯಾರಿಂದಲೂ ಆಗದು", "ನಿದ್ರೆ ಆಲಸ್ಯ ಅಹಂಕಾರ ಪರಾವಲಂಬನ ಶೀಘ್ರಕೋಪ ದೀರ್ಘದ್ವೇಷ ಇವು ಆರು ಆತ್ಮಘಾತಕ ಗುಣಗಳೆಂದು ದೊಡ್ಡವರು ಹೇಳುವರು", "ದೈವ ದುರ್ವಿಪಾಕವು ಬಲವತ್ತರವಾದದ್ದು", "ಗೃಹ ಕಲಹವು ಬಾಯಲ್ಲಿ ಹಾಕಿಕೊಂಡ ಬಿಸಿ ತುಪ್ಪದಂತೆ ಇರುವದು. ಉಗುಳಿದರೆ ತುಪ್ಪವು ವ್ಯರ್ಥವಾಗುವದು. ಉಗುಳದಿದ್ದರೆ ಬಾಯಿ ಸುಡುತ್ತದೆನ್ನುವಂತೆ ಗೃಹಕಲಹದ ಮಾತಿರುವದು", "ತುಂಬಿ ಹೊರಸೂಸುವ ಪ್ರಾಯದ ಸೊಕ್ಕಿನಲ್ಲಿ ನಾವು ಮನಸ್ಸಿಗೆ ಹೊರಚಾಳಿಯನ್ನು ಒಮ್ಮೆ ಹಚ್ಚಿಬಿಟ್ಟರೆ, ಆ ಖೋಡಿ ಮನಸ್ಸು ಅಸುಗೊಳ್ಳದೆ, ತಕ್ಕ ಪ್ರಸಂಗ ಒದಗಿದಾಗಲೆಲ್ಲ ನಮ್ಮನ್ನು ಎಳೆದೆಳೆದು ಗಾಸಿಮಾಡುತ್ತದೆಂಬುದನ್ನು ಪ್ರಾಯಸ್ಥರಾದ ನಿಮ್ಮಲ್ಲಿ ಬಹು ಜನರು ಮನಸ್ಸಿನಲ್ಲಾದರೂ ಒಪ್ಪಿಕೊಳ್ಳಬಹುದೆಂದು ಅನುಭವದಿಂದ ಹೇಳಬಹುದಾಗಿದೆ! ಅದ್ದರಿಂದ ಪರನಾರೀ ಸೋದರರಾಗುವಂತೆ ಪ್ರತಿ ಒಬ್ಬ ತರುಣನೂ, ಅವರ ಹಿತಚಿಂತಕರೂ ಮೊದಲೇ ಜಾಗರೂಕರಾಗಿ ಅತ್ಯಂತ ನಿಗ್ರಹದಿಂದ ಆಚರಿಸತಕ್ಕದ್ದು"...............

ಇಂಥ ಮಾತುಗಳನ್ನು ಗಳಗನಾಥರು ಬೇರೆ ಬೇರೆ ಪ್ರಸಂಗಗಳಲ್ಲಿ ತಂದಿರುತ್ತಾರೆ. ಗಳಗನಾಥರ ಆಕರ ಗ್ರಂಥಕಾರರು ಇಂಥವುಗಳನ್ನು ಹೇಳಿಲ್ಲ. ಬಂಕಿಮಚಂದ್ರ ಮತ್ತು ಆಪಟೆಯವರು ಒಳ್ಳೆಯ ಕಲಾವಿದರು. ಇಂಥ ಮಾತುಗಳನ್ನು ಅನಾವಶ್ಯವಾಗಿ ತಂದರೆ ಅದು ಅಸಂಬದ್ಧವೂ ಕಲಾವಿಹೀನವೂ ಆಗುವುದೆಂದು ಅವರು ಅರಿತಿದ್ದರು. ಆದರೆ ಗಳಗನಾಥರ ಉದ್ದೇಶ ಕೇವಲ ಕಲೆಯಾಗಿರಲಿಲ್ಲ. ಜನಹಿತವೂ ಅವರ ಉದ್ದೇಶವಾಗಿತ್ತು. ಸೂಚ್ಯವಾಗಿ ಹೇಳಿದ್ದನ್ನು ತಮ್ಮ ವಾಚಕರು ಅರಿಯದೆ ಹೋಗಬಹುದು ಎಂದು ಭಾವಿಸಿ, ಅವರು ಅವು-ಗಳನ್ನು ಬಿಚ್ಚಿ ಹೇಳಿದರು; ಮತ್ತೆ ಮತ್ತೆ ಹೇಳಿದರು. ಈ ವಿಚಾರವಾಗಿ ಡಾ. ಎ. ಆರ್. ಕೃಷ್ಣ ಶಾಸ್ತ್ರಿಗಳ ಅಭಿಪ್ರಾಯ ಗಮನಾರ್ಹವಾಗಿದೆ.

"ಅವರ (ಗಳಗನಾಥರ) ಗ್ರಂಥಗಳಲ್ಲಿ ತಮ್ಮ ಜೀವನ ವಿಮರ್ಶೆಯನ್ನು ಮೇಲಿಂದ ಮೇಲೆ ಒತ್ತಿ ಹೇಳುವುದು ಒಂದು ದೋಷವಾಗಿ ಕಾಣುತ್ತದೆ. ಆದರೆ ಅದು ಕಾವ್ಯದೃಷ್ಟಿ ಯಿಂದ ದೋಷವೇ ಹೊರತು ಅದು ಸಂಸಾರಿಕರಿಗೆ ಅನುಪಯುಕ್ತವೆಂಬ ಅರ್ಥವಲ್ಲ.... ಸತ್ಸಾಹಿತ್ಯವು ಸತ್ಪರಿಣಾಮದಲ್ಲಿ ಸಹಕಾರಿಯಾಗುವುದೆಂಬುದು ಅವರಿಗೆ ಗೊತ್ತಿತ್ತು.... ಇದರಿಂದ ಕಾವ್ಯಸೌಂದರ್ಯಕ್ಕೆ ಉಂಟಾಗಬಹುದಾದ ಕೊರತೆ ಏನಾದರೂ ಇರಲಿ, ಕಾವ್ಯ ನೀತಿಯು ಹರಿತವಾದ ಕೋರೆ ಹಲ್ಲುಗಳಂತೆ ಎಷ್ಟು ಮುಂದೆ ಹಾಯ್ದು ಬಂದಾದರೂ ತೋರುತ್ತಿರಲಿ, ಇವರ ಗ್ರಂಥಗಳನ್ನು ಓದುತ್ತ ಓದುತ್ತ ಅಲಸರಾದ ನಮ್ಮ ಮೇಲೂ ಕೊರಡೆಯ ಪೆಟ್ಟುಗಳು ಬಿದ್ದು ಬಾಸುಂಡೆಗಳು ಬರುವವು"[1] ಎಂದು ತಮ್ಮ 'ಕನ್ನಡ ಐತಿಹಾಸಿಕ ಕಾದಂಬರಿಗಳು' ಎಂಬ ಪ್ರಬಂಧದಲ್ಲಿ ಹೇಳಿರುವ ಕೃಷ್ಣಶಾಸ್ತ್ರಿಗಳ ಅಭಿಪ್ರಾಯವು ಆ ಕಾಲದ (1919) ವಿಚಾರ ಧಾರೆಯನ್ನು ಸೂಚಿಸುತ್ತದೆ.

ಗಳಗನಾಥರ ಅನುವಾದಗಳು, ಅವುಗಳಲ್ಲಿ ಕೆಲವು ನ್ಯೂನತೆಗಳಿದ್ದರೂ, ತುಂಬ ಯಶಸ್ವಿಯಾದುವೆಂಬುದರಲ್ಲಿ ಸಂದೇಹವಿಲ್ಲ. ಕೃಷ್ಣಶಾಸ್ತ್ರಿಗಳೂ ಈ ಮಾತನ್ನು ಹೇಳಿದ್ದಾರೆ. "ಇವರು (ಗಳಗನಾಥರು) ಸ್ವತಂತ್ರವಾಗಿ ಕೆಲವು ಗ್ರಂಥಗಳನ್ನು ಬರೆದಿದ್ದರೂ, ಇವರು ಭಾಷಾಂತರ ಮಾಡಿರುವ ಗ್ರಂಥಗಳ ಬೆಲೆಯು ಅವಕ್ಕೆ ಎಂದಿಗೂ ಬರಲಾರದು."[2]

ಗಳಗನಾಥರ ಅನುವಾದಿತ ಕಾದಂಬರಿಗಳ ಬಗ್ಗೆ ಎ. ಆರ್. ಕೃಷ್ಣಶಾಸ್ತ್ರಿಗಳ ಅಭಿಪ್ರಾಯ ವನ್ನು ಸ್ವೀಕರಿಸಿ, ಅವರ ಸ್ವತಂತ್ರ ಕೃತಿಗಳ ಮೌಲ್ಯಮಾಪನಕ್ಕೆ ತೊಡಗುವುದು ವಿಹಿತ.

1. ಎ. ಆರ್. ಕೃಷ್ಣಶಾಸ್ತ್ರಿ : ಭಾಷಣಗಳು ಮತ್ತು ಲೇಖನಗಳು, ಪುಟ 237
2. ಅದೇ, ಪುಟ 231.

# ಸ್ವತಂತ್ರ ಕಾದಂಬರಿಗಳು

ಗಳಗನಾಥರು ಮರಾಠಿ ಕಾದಂಬರಿಗಳ ಅನುವಾದಕರೆಂದೇ ಹೆಚ್ಚಾಗಿ ಭಾವಿಸಲಾಗಿದೆಯಾದರೂ, ಅವರು ಅನೇಕ ಸ್ವತಂತ್ರ ಕಾದಂಬರಿಗಳನ್ನೂ ಬರೆದಿದ್ದಾರೆ. ಅವರ ಮೊದಲ ಕಾದಂಬರಿಯೇ ಸ್ವತಂತ್ರ ಕಾದಂಬರಿಯಾಗಿದೆ. ಆದರೂ ಅನೇಕ ಪ್ರಾಜ್ಞ ವಿಮರ್ಶಕರು ಗಳಗನಾಥರ ಸ್ವತಂತ್ರ ಕಾದಂಬರಿಗಳನ್ನು ಗಮನಿಸದಿರುವುದು ವಿಷಾದನೀಯ. ಗಳಗನಾಥರು ಬರೆದ ಸ್ವತಂತ್ರ ಕಾದಂಬರಿಗಳ ಮೌಲ್ಯದ ಬಗ್ಗೆ ಭಿನ್ನಾಭಿಪ್ರಾಯವಿರಬಹುದು. ಆದರೆ ಅವರು ಸ್ವತಂತ್ರ ಕಾದಂಬರಿಗಳನ್ನೂ ಬರೆದರೆಂಬುದು, ಅಷ್ಟೇ ಅಲ್ಲದೆ ಉತ್ತರ ಕರ್ನಾಟಕದ ಸ್ವತಂತ್ರ ಕಾದಂಬರಿಯ ಇತಿಹಾಸದಲ್ಲಿ ಅವರ ಹೆಸರು ಪ್ರಮುಖವಾಗಿದೆಯೆಂಬುದು ಅಗತ್ಯವಾಗಿ ಲಕ್ಷಿಸಬೇಕಾದ ವಿಷಯ.

ಗಳಗನಾಥರ ಪರಿಸರವನ್ನೂ ಹಿನ್ನೆಲೆಯನ್ನೂ ನೋಡುವಾಗ 19ನೆಯ ಶತಮಾನದ ಉತ್ತರಾರ್ಧದಲ್ಲಿ ಹಳೆಯ ಮೈಸೂರು ಪ್ರದೇಶದಲ್ಲಿ ನಡೆದ, ಸಾಹಿತ್ಯಿಕ ಕಾರ್ಯಗಳನ್ನು ಸಮೀಕ್ಷಿಸಲಾಯಿತು. ಅದಕ್ಕೆ ತೀರ ವಿರುದ್ಧವಾದ ವಾತಾವರಣವು ಉತ್ತರ ಕರ್ನಾಟಕದಲ್ಲಿ ಇದ್ದಿತೆಂಬುದು ಒಡೆದು ಕಾಣುವ ಅಂಶವಾಗಿದೆ. 19ನೆಯ ಶತಮಾನದ ಉತ್ತರಾರ್ಧದಲ್ಲಿ ಉತ್ತರ ಕರ್ನಾಟಕದ ಹಿರಿಯರು ಇಲ್ಲಿ ಕನ್ನಡ ಭಾಷೆಯನ್ನು ಪುನಃ ಪ್ರತಿಷ್ಠಾಪಿಸುವುದರಲ್ಲಿಯೇ ತಮ್ಮ ಶಕ್ತಿಯನ್ನು ಮುಡುಪಾಗಿ ಇಡಬೇಕಾಯಿತು. ಮತ್ತೆ ಕೆಲವರು ಕನ್ನಡ ಶಾಲಾಬಾಲಕರಿಗೂ ಕನ್ನಡ ಶಾಲಾಶಿಕ್ಷಕರಿಗೂ ಅವಶ್ಯವಾಗಿದ್ದ ಪಠ್ಯಪುಸ್ತಕಗಳನ್ನು ಬರೆಯುವುದರಲ್ಲಿ ತೊಡಗಬೇಕಾಯಿತು, ತೊಡಗಿದರು. ಇದರಿಂದಾಗಿ ಕನ್ನಡದಲ್ಲಿ ಸಾಹಿತ್ಯವನ್ನು ನಿರ್ಮಿಸುವುದಕ್ಕೆ ಅವರಿಗೆ ಶಕ್ತಿಯಿದ್ದರೂ ಅವರಿಗೆ ಹೆಚ್ಚಿನ ಅವಕಾಶಗಳಿರಲಿಲ್ಲವೆಂದು ಹೇಳಬೇಕಾಗುತ್ತದೆ.

'ಗಳಗನಾಥರ ಪರಿಸರ' ಎಂಬ ಅಧ್ಯಾಯದಲ್ಲಿ ಹೇಳಿದಂತೆ 1890ರಿಂದ 1920ರ ವರೆಗಿನ ಕಾಲವನ್ನು ಕನ್ನಡದ ಅರುಣೋದಯದ ಕಾಲವೆಂದು ಕರೆಯಬಹುದು. 19ನೆಯ ಶತಮಾನದ ಕೊನೆಯ ದಶಕದಲ್ಲಿಯೇ ಉತ್ತರ ಕರ್ನಾಟಕದಲ್ಲಿ ಸ್ವತಂತ್ರ ಕಾದಂಬರಿ ಹುಟ್ಟಿಕೊಂಡಿತು. ಈ ಸ್ವತಂತ್ರ ಕಾದಂಬರಿಯ ಹುಟ್ಟಿಗೆ ಪ್ರೇರಣೆ ನೀಡಿದ ಶ್ರೇಯಸ್ಸು ಆ ಕಾಲಕ್ಕೆ ಸ್ಥಾಪಿತವಾಗಿದ್ದ ಧಾರವಾಡದ 'ಕರ್ನಾಟಕ ವಿದ್ಯಾವರ್ಧಕ ಸಂಘ'ಕ್ಕೆ ಸಲ್ಲುತ್ತದೆ.

ದಿನಾಂಕ 27-9-1891ರಂದು ಸೇರಿದ 'ವಿದ್ಯಾವರ್ಧಕ ಸಂಘ'ದ ಸಭೆಯಲ್ಲಿ "ಕನ್ನಡದಲ್ಲಿ ಹೊಸ ಕಾದಂಬರಿಯನ್ನು ಗಂಗಾಧರಯ್ಯನವರ ಕಾದಂಬರಿಯಷ್ಟಾಗಲಿ ಹೆಚ್ಚಾಗಲಿ

ಯೆಲ್ಲಕ್ಕೂ ಉತ್ತಮವಾಗಿ ಬರಿದವನಿಗೆ" ಮೂವತ್ತು ರೂಪಾಯಿ ಬಹುಮಾನ ಕೊಡುವುದಾಗಿ ನಿರ್ಧರಿಸಲಾಯಿತು. ಅದರ ಮರುವರ್ಷವೇ (1892) ಲಕ್ಷ್ಮಣ ಭೀಮರಾವ ಗದಗಕರ ಎಂಬವರು 'ಸೂರ್ಯಕಾಂತ' ಎಂಬ ಸ್ವತಂತ್ರ ಕಾದಂಬರಿಯನ್ನು ಬರೆದು 'ಸಂಘ'ದ ಬಹುಮಾನವನ್ನು ಪಡೆದರು. ಗಳಗನಾಥರು ಕೂಡ ಸಂಘದ ಬಹುಮಾನದ ಆಸೆಯಿಂದಲೇ 1897ರಲ್ಲಿ 'ಪದ್ಮನಯನಾ' ಎಂಬ ಸ್ವತಂತ್ರ ಕಾದಂಬರಿಯನ್ನು ಬರೆದರು.[1] ಅದು ಸಂಘದ 'ವಾಗ್ಭೂಷಣ'ದಲ್ಲಿ 1898ರಲ್ಲಿ ಪ್ರಕಟವಾಯಿತು. ಮುಂದೆ ಮರುವರ್ಷವೇ ಅಂದರೆ 1899 ರಲ್ಲಿ 'ವಾಗ್ಭೂಷಣ ಗ್ರಂಥಮಾಲೆ'ಯಲ್ಲಿ ಗೂಳಪ್ಪ ಕೊಟ್ರಪ್ಪ ಅರಳಿ ಅವರ 'ಕನ್ನಡ ಶೌರ್ಯ ಸಾಗರ' ಎಂಬ ಮತ್ತೊಂದು ಸ್ವತಂತ್ರ ಕಾಲ್ಪನಿಕ ಕಾದಂಬರಿಯು ಪ್ರಕಟವಾಯಿತು. ಹೀಗೆ ಧಾರವಾಡದ 'ಕರ್ನಾಟಕ ವಿದ್ಯಾವರ್ಧಕ ಸಂಘ' ಉತ್ತರ ಕರ್ನಾಟಕದಲ್ಲಿ ಸ್ವತಂತ್ರ ಕಾದಂಬರಿಯ ಜನನಕ್ಕೆ ಕಾರಣವಾಯಿತು. ಆ ದಶಕದಲ್ಲಿ ಪ್ರಕಟವಾದ 25 ಕೃತಿಗಳಲ್ಲಿ ಮೂರು ಸ್ವತಂತ್ರ ಕಾದಂಬರಿಗಳಿವೆ; ಅವುಗಳಲ್ಲಿ ಗಳಗನಾಥರದೂ ಒಂದಾಗಿದೆ. 'ಸೂರ್ಯಕಾಂತ', 'ಪದ್ಮನಯನಾ' ಮತ್ತು 'ಕನ್ನಡ ಶೌರ್ಯಸಾಗರ' ಈ ಕಾದಂಬರಿಗಳ ಸತ್ತ್ವವೇನು ಎಂಬ ಮಾತು ಬೇರೆ. ಕನ್ನಡ ಜನಕ್ಕೆ ಕಾದಂಬರಿ ಎಂದರೆ ಏನೆಂಬುದು ಗೊತ್ತಿಲ್ಲದ ಆ ಕಾಲಕ್ಕೆ ಈ ಲೇಖಕರು ಸ್ವತಂತ್ರವಾಗಿ ಬರೆದು, ಅವಕ್ಕೆ 'ಕಾದಂಬರಿ' ಎಂದು ಕರೆದು,[2] ಕನ್ನಡಿಗರ ವಾಚನಾಭಿರುಚಿಯನ್ನು ಹೆಚ್ಚಿಸಲು ಯತ್ನಿಸಿದರು. ಈ ಮೂವರಲ್ಲಿ ಗಳಗನಾಥರು ಮಾತ್ರ ಮುಂದೆ ಕಾದಂಬರಿಕಾರರೆಂದು ಖ್ಯಾತರಾಗಿ ಹಲವಾರು ಕೃತಿರಚನೆ ಮಾಡಿದರು. ಅವರ

---

1. "ಪಾರಿತೋಷಕದ ಆಶೆಯನ್ನು ತೋರಿಸಿ, ಈ ಕಾದಂಬರಿಯನ್ನು ಬರೆಯಲ್ಹಚ್ಚಿದ ಕರ್ನಾಟಕ ವಿದ್ಯಾವರ್ಧಕ ಸಂಘದ ಉಪಕಾರವನ್ನೂ...ಸ್ಮರಿಸದೆ ಇರೆನು" ಗಳಗನಾಥ : ಪ್ರಬುದ್ಧ ಪದ್ಮನಯನಾ, ಪ್ರಸ್ತಾವನೆ.

2. 19ನೆಯ ಶತಮಾನದಲ್ಲಿ ಭಾರತಕ್ಕೆ ಬಂದ ಆಂಗ್ಲ Novel ಬಂಗಾಲಿ ಮತ್ತು ಹಿಂದಿ ಭಾಷೆಗಳಲ್ಲಿ 'ಉಪನ್ಯಾಸ'ವೆಂದು ಪ್ರಚುರವಾಯಿತು. ಮರಾಠಿಯಲ್ಲಿ 1829ರಲ್ಲಿ ಪ್ರಕಟವಾದ 'ಮಹಾರಾಷ್ಟ್ರ ಭಾಷೇಚಾ ಕೋಶ'ದಲ್ಲಿ ಮಾತ್ರ 'ಕಾದಂಬರಿ' ಎಂಬ ಪದಕ್ಕೆ 'ಕಲ್ಪಿತ ಕಥೆ' ಎಂಬ ಅರ್ಥವನ್ನು ಕೊಡಲಾಗಿದೆ. ಮುಂದೆ 1850ರ ದಶಕದಲ್ಲಿ ಕೆಲವು ಮರಾಠಿ ಕಾದಂಬರಿಗಳು ಪ್ರಕಟವಾದುವು. ಆದರೆ ರಾ. ಬ. ಮರಾಠೆ ಎಂಬವರು ಈ ಸಾಹಿತ್ಯ ಪ್ರಕಾರವನ್ನು 'ನಾವಲ' ಎಂದೇ ಕರೆದರು. ಇದು ಆಂಗ್ಲ Novel ದ ಪರ್ಯಾಯ ಪದವಾಗಿರುವಂತೆ, ಅದರಲ್ಲಿಯ ಆಶ್ಚರ್ಯಜನಕ (ನವಲಪೂರ್ಣ) ಶೈಲಿಯನ್ನೂ ಧ್ವನಿಸುತ್ತಿತ್ತು. ಅವರು 1872ರಲ್ಲಿ 'ನಾವಲ ವ ನಾಟಿಕಾ' ಎಂಬ ಗ್ರಂಥವನ್ನು ಬರೆದು, ಈ ಪ್ರಕಾರದ ಸಾಹಿತ್ಯವನ್ನೂ ಕಟುವಾಗಿ ಟೀಕಿಸಿದರು. ಆದರೂ ಮುಂದೆ ಕಾದಂಬರಿ ಬಹು ಜನಪ್ರಿಯವಾಯಿತು. ಈ ಪದವು ಮುಂದೆ ಗುಜರಾತಿಯಲ್ಲೂ, ಕನ್ನಡದಲ್ಲೂ ರೂಢಿಗೆ ಬಂದಿತು.

   ಈ ಪದವನ್ನು ಮೊದಲು ಕನ್ನಡದಲ್ಲಿ ಬಳಸಿದವರು ಲ. ಭೀ. ಗದಗಕರ ಅವರು. ತಮ್ಮ ಕಾಲ್ಪನಿಕ 'ಸೂರ್ಯಕಾಂತ'ವನ್ನು ಅವರು ಕಾದಂಬರಿ ಎಂದೇ ಕರೆದರು. ಆ ಮೊದಲು ಕನ್ನಡದಲ್ಲಿ, ಮುಖ್ಯವಾಗಿ ಮೈಸೂರಿನ ಬಿ. ವೆಂಕಟಾಚಾರ್ಯ ಮೊದಲಾದವರು 'ನಾವೆಲು' ಎಂಬ ಪದವನ್ನೇ ಬಳಸುತ್ತಿದ್ದರು.

   ಗಳಗನಾಥರಿಂದ ಈ 'ಕಾದಂಬರಿ' ಉತ್ತರ ಕರ್ನಾಟಕದಲ್ಲಿ ಜನಬಳಕೆಯ ಪದವಾಗಿ, ಈಗ ಸಮಗ್ರ ಕರ್ನಾಟಕದಲ್ಲಿ ಈ ಪದವೇ ರೂಢವಾಗಿದೆ. ಆದ್ದರಿಂದ ಕನ್ನಡದಲ್ಲಿ 'ಕಾದಂಬರಿ' ಎಂಬ ಪದವನ್ನು ಮೊದಲು ಬಳಸಿದವರು ಗದಗಕರರಾದರೂ, ರೂಢಿಗೆ ತಂದ ಶ್ರೇಯಸ್ಸು ಗಳಗನಾಥರಿಗೆ ಸಲ್ಲಬೇಕು.

'ಪದ್ಮನಯನಾ' ಕೂಡ ಏಳು ಸಲ ಪುನರ್ಮುದ್ರಣದ ಭಾಗ್ಯವನ್ನು ಪಡೆಯಿತು.

ಹೀಗೆ ಗಳಗನಾಥರು ತಮ್ಮ ಪ್ರಥಮ ಸ್ವತಂತ್ರ ಕಾದಂಬರಿಯನ್ನು 1898 ರಲ್ಲಿಯೇ ಪ್ರಕಟಿಸಿದರು. ಅವರ ಪ್ರಥಮ ಭಾಷಾಂತರವು (ಕಮಲ ಕುಮಾರಿ) 1910ರಲ್ಲಿ ಪ್ರಕಟವಾಯಿತು. ಅವರ ಕೊನೆಯ ಕೃತಿ (ದುರ್ಗದ ಬಿಚ್ಚುಗತ್ತಿ, 1938) ಕೂಡ ಸ್ವತಂತ್ರ ಕಾದಂಬರಿಯಾಗಿದೆ. ಅಂದರೆ ಗಳಗನಾಥರ ಕಾದಂಬರೀ ಲೇಖನವು ಸ್ವತಂತ್ರ ಕಾದಂಬರಿಯಿಂದಲೇ ಆರಂಭವಾಗಿ, ಸ್ವತಂತ್ರ ಕೃತಿಯಿಂದಲೇ ಕೊನೆಗೊಂಡಿದೆ. ಆಗಲೇ ನೋಡಿದಂತೆ ಅವರು ಮರಾಠಿಯಿಂದ ಕನ್ನಡಕ್ಕೆ ಅನುವಾದಿಸಿದ ಕಾದಂಬರಿಗಳೆಲ್ಲ 1910ರಿಂದ 1928ರ ಮಧ್ಯದಲ್ಲಿಯೇ ಪ್ರಕಟವಾದುವು.

ಗಳಗನಾಥರ ಸ್ವತಂತ್ರ ಕಾದಂಬರಿಗಳ ವಿವರ ಹೀಗಿದೆ:

1. ಪದ್ಮನಯನಾ ................................ 1898
2. ಕುಮುದಿನಿ ................................ 1913
3. ಸತ್ವಸಾರ .................................... 1915
4. ಮಾಧವ ಕರುಣಾವಿಲಾಸ .................... 1923
5. ಸ್ವರಾಜ್ಯ ಸುಗಂಧ ........................ 1938
6. ದುರ್ಗದ ಬಿಚ್ಚುಗತ್ತಿ ........................ 1938

ಹೀಗೆ ಗಳಗನಾಥರು ನಾಲ್ವತ್ತು ವರ್ಷಗಳ ಕಾಲಾವಧಿಯಲ್ಲಿ ಆರು ಸ್ವತಂತ್ರ ಕಾದಂಬರಿಗಳನ್ನು ಬರೆದರು. ಈ ಆರೂ ಕೃತಿಗಳು ವಸ್ತು ಮತ್ತು ನಿರೂಪಣೆಯ ದೃಷ್ಟಿಯಿಂದ ಭಿನ್ನವಾಗಿವೆಯಾದರೂ, ಇವುಗಳಲ್ಲಿ ಅವರ 'ಪದ್ಮನಯನಾ' ತೀರ ಒಡೆದು ಕಾಣುವಷ್ಟು ಭಿನ್ನವಾದ ವಿಶಿಷ್ಟ ಕೃತಿ. ಆ ಮಾದರಿಯ ಕೃತಿಯನ್ನು ಮುಂದೆ ಗಳಗನಾಥರು ಬರೆಯಲೇ ಇಲ್ಲ.

ಗಳಗನಾಥರ ಈ **'ಪದ್ಮನಯನಾ'** ಮುಂದೆ **'ಪ್ರಬುದ್ಧ ಪದ್ಮನಯನಾ'** ಆಗಿ 1912 ರಲ್ಲಿ ಪ್ರಕಟವಾಯಿತು. ಈ ಬದಲಾವಣೆಯ ಇತಿಹಾಸವೂ ರಂಜಕವಾಗಿದೆ. 1898 ರಲ್ಲಿ ಧಾರವಾಡದ 'ಕರ್ನಾಟಕ ವಿದ್ಯಾವರ್ಧಕ ಸಂಘ'ದವರು ಅದನ್ನು ಪ್ರಕಟಿಸಿದ ಅನಂತರ, ಅದರ ಪುನರ್ಮುದ್ರಣಕ್ಕಾಗಿ 1900ರಿಂದ 1904ರ ವರೆಗೆ ಸತತವಾಗಿ ಪ್ರಯತ್ನಿಸಿದರು. ಸಂಘದ ಕಾರ್ಯದರ್ಶಿ ಶ್ರೀ. ನಾರಾಯಣ ಕರಗುದರಿ ಅವರು ಸಂಘದ ವಾರ್ಷಿಕ ಸಭೆಗೆ 'ಪದ್ಮನಯನಾ' ಪುನರ್ಮುದ್ರಣದ ವಿಷಯವಾಗಿ ತಮ್ಮ ಅಸಹಾಯಕತೆಯ ವರದಿಯನ್ನು ಪ್ರತಿವರ್ಷ ಒಪ್ಪಿಸಿದರು.[1] 15-5-1904ರಂದು ಒಪ್ಪಿಸಿದ ವರದಿಯಲ್ಲಿ "ಈ ಪುಸ್ತಕದ 2ನೆಯ ಆವೃತ್ತಿಯನ್ನು ತೆಗೆಯುವ ಸುದಿನವಂತೂ ಒದಗಲೇವಲ್ಲದು. ಈಗೆರಡು ವರ್ಷಗಳಿಂದ ಈ ಬಗ್ಗೆ ಮಂಜೂರಾದ ಹಣ ಸಹ ಖರ್ಚು ಮಾಡಲಿಕ್ಕೆ ಧೈರ್ಯ ಸಾಲದೆ ಹಾಗೆ ಉಳಿದಿದೆ. ಇದನ್ನು ಮುದ್ರಿಸಿದರೆ ತಮಿಳು ಪುಸ್ತಕಕ್ಕೆ ಬಂದ ಸ್ಥಿತಿಯೇ ಬರಬಹುದಂತ ಭಯಪಡುತ್ತೇನೆ. ಆದರೂ ಈ ಪ್ರಕಾರ ಧೈರ್ಯಗುಂದದೆ ಬರುವ ವರ್ಷ ಕೆಲವೊಂದು ಶರ್ತಿನಿಂದ ಸಂಘಕ್ಕೆ ತುಸು ಖರ್ಚು ಬರುವ ಉಪಾಯ ಮಾಡಿ ಮುದ್ರಿಸುವ ಯತ್ನ

1. ಈ ವರದಿಗಳನ್ನು 'ವಿದ್ಯಾವರ್ಧಕ ಸಂಘ'ದ 'ನಿರ್ಣಯಗಳ ಪುಸ್ತಕ'ದಲ್ಲಿ ಈಗಲೂ ನೋಡಬಹುದು.

ಮಾಡುವೆವು"[1] ಎಂದು ಕಾರ್ಯದರ್ಶಿಯವರು ತಿಳಿಸಿದರು. ಆದರೆ ಅವರ ಯತ್ನ ಯಶಸ್ವಿ-ಯಾಗಲಿಲ್ಲ; ಗಳಗನಾಥರ 'ಪದ್ಮನಯನಾ'ದ 2ನೆಯ ಮುದ್ರಣ ಹೊರಬರಲಿಲ್ಲ.

ಮುಂದೆ ಗಳಗನಾಥರು 'ಸದ್ಬೋಧ ಚಂದ್ರಿಕೆ'ಯನ್ನು ಪ್ರಾರಂಭಿಸಿ, ಕಾದಂಬರಿಗಳನ್ನು ಧಾರಾವಾಹಿಯಾಗಿ ಕೊಡತೊಡಗಿದರು. ಅವರು ಪ್ರತಿವರ್ಷವೂ 'ಚಂದ್ರಿಕೆ'ಯ ಚೈತ್ರ-ವೈಶಾಖ ಸಂಯುಕ್ತ ಸಂಚಿಕೆಯಾಗಿ ಒಂದೊಂದು ಇಡೀ ಕಾದಂಬರಿಯನ್ನೇ ಪ್ರಕಟಿಸಿ, ಅದಕ್ಕೆ 'ಇನಾಮಿನ ಕಾದಂಬರಿ' ಎಂದು ಕರೆಯುತ್ತಿದ್ದರು. ಇದು ಚಂದಾದಾರರಿಗೆ ಪುಕ್ಕಟೆಯಾಗಿ ದೊರೆಯುವ ಕಾದಂಬರಿಯಾದ್ದರಿಂದ ಇದಕ್ಕೆ 'ಇನಾಮಿನ ಕಾದಂಬರಿ' ಎಂದು ಹೆಸರು ಬಂದಿತು. ಹಾಗೆ 1912ರಲ್ಲಿ 'ಪದ್ಮನಯನಾ' ಇನಾಮಿನ ಕಾದಂಬರಿಯಾಗಿ ಪ್ರಕಟವಾದಾಗ ಅದು 'ಪ್ರಬುದ್ಧ ಪದ್ಮನಯನಾ' ಆಯಿತು.

ಪ್ರಸ್ತಾವನೆಯಲ್ಲಿ ಗಳಗನಾಥರು ಕಾದಂಬರಿಯ ಹೆಸರಿನ ಬದಲಾವಣೆಯ ಬಗ್ಗೆ "ಈಗ 'ಪ್ರಬುದ್ಧ ಪದ್ಮನಯನೆ'ಯಾಗಿದ್ದಾಳೆ ಮುಂದೆ 'ವೃದ್ಧ ಪದ್ಮಾನಯನೆ'ಯೂ ಆಗಬಹುದು" ಎಂದು ವಿನೋದವಾಗಿ ಬರೆದಿದ್ದರು. ಆದರೆ ಈ ಬದಲಾವಣೆಯ ಹಿಂದೆ ಒಂದು ಕಾರಣ-ವಿರಬೇಕೆನಿಸುತ್ತದೆ. 'ಕರ್ನಾಟಕ ವಿದ್ಯಾವರ್ಧಕ ಸಂಘ'ದವರು ಗಳಗನಾಥರಿಗೆ ಬಹುಮಾನದ ಹಣವನ್ನಲ್ಲದೆ, ಕಾದಂಬರಿಯ ನೂರು ಪ್ರತಿಗಳನ್ನು ಹೆಚ್ಚಿಗೆ ಕೊಟ್ಟು ಕಾದಂಬರಿಯ ಹಕ್ಕನ್ನು ಕೊಂಡುಕೊಂಡಿದ್ದರು. ಗಳಗನಾಥರು "ಪದ್ಮನಯನಾ ಕಾದಂಬರಿಯ ಯಾವತ್ತೂ ಹಕ್ಕನ್ನು ಸಂಘಕ್ಕೆ ಸಂತೋಷದಿಂದ ಕೊಟ್ಟಿರುತ್ತೇನೆ. ಪುಸ್ತಕ ಮುಗಿದ ಕೂಡಲೇ ಗೊತ್ತಾದ ಪ್ರಕಾರ ಅದರ ಬಾಯುಂಡಿಂಗಿನ ನೂರು ಪ್ರತಿಗಳನ್ನು ಕೊಡಬೇಕು" ಎಂದು ದಿ. 12-12-1897 ರಂದು, ಸಂಘದ ಪುಸ್ತಕದಲ್ಲಿಯೇ ಬರೆದು ಸಹಿ ಮಾಡಿದ್ದು ಕಂಡು ಬರುತ್ತದೆ. ಮುಂದೆ ತಾವೇ ಪ್ರಕಟಿಸಬಯಸಿದಾಗ, ಈ ಹಕ್ಕಿನ ಪ್ರಶ್ನೆ ಉದ್ಭವಿಸಬಾರದೆಂದು ಕಾದಂಬರಿಯ ಹೆಸರನ್ನೇ ಬದಲು ಮಾಡಿರಬಹುದು.

ಅಂತೂ, 'ವಿದ್ಯಾವರ್ಧಕ ಸಂಘ'ದ ಪ್ರಕಟನೆಯಾಗಿದ್ದ 'ಪದ್ಮನಯನಾ' 'ಶೇಷಾಚಲ ಗ್ರಂಥಮಾಲೆ'ಯಲ್ಲಿ 'ಪ್ರಬುದ್ಧ ಪದ್ಮನಯನೆ'ಯಾಯಿತು. ಅಷ್ಟೇ ಅಲ್ಲದೆ ಎರಡನೆಯ ಆವೃತ್ತಿಯನ್ನು ಹೊರತರಲಿಕ್ಕೆ 'ವಿದ್ಯಾವರ್ಧಕ ಸಂಘ'ದವರು ಹೆದರಿದ ಇದೇ ಕಾದಂಬರಿಯು 1928ರೊಳಗೆ ಐದು ಸಲ ಪುನರ್ಮುದ್ರಣಗೊಂಡಿತು. ಗಳಗನಾಥರೇ ಈ ವಿಷಯವನ್ನು ತಿಳಿಸಿರುವರು.

"ಪ್ರಬುದ್ಧ ಪದ್ಮನಯನೆ–ಇದೊಂದು ಕನ್ನಡಿಗರ ಪ್ರೀತಿಯ ಅತಿ ಮನೋಹರವಾದ ಸ್ವತಂತ್ರ ಕಾಲ್ಪನಿಕ ಕಾದಂಬರಿಯು. ಈ ವರೆಗೆ ಈ ಕಾದಂಬರಿಯ ಐದು ಆವೃತ್ತಿಗಳಾಗಿ ಹೋಗಿರುವವು. ಇದರ ಭಾಷಾಂತರವನ್ನು ಸಂಸ್ಕೃತದಲ್ಲಿ ಒಬ್ಬರು ಮಾಡಿರುವರು. ಹಳ್ಳಿಯ ಜನರು ಇದರ ಆಟಗಳನ್ನು ಕಟ್ಟಿ ಆಡಿರುವರು. ರಸಿಕರು ಅವಶ್ಯವಾಗಿ ಓದತಕ್ಕ ಕಾದಂಬರಿಯು."[2]

---

1. ಸಂಘದವರು 'ತಮಿಳು ಪುಸ್ತಕ'ವನ್ನು ಪ್ರಕಟಿಸಿ ಕೈಸುಟ್ಟುಕೊಂಡಿದ್ದರು. ಅದರ ಪ್ರತಿಗಳು ಮಾರಾಟವಾಗದೆ ಹಾಗೇ ಉಳಿದಿದ್ದುವು.

2. ಗಳಗನಾಥ: ಸದ್ಗುರು–ಪ್ರಭಾವ (1928), ಪುಟ 122

ಗಳಗನಾಥರ ಈ ಹೇಳಿಕೆಯನ್ನು ನಂಬದಿರಲಿಕ್ಕೆ ಕಾರಣಗಳಿಲ್ಲ; ಈ ಕಾದಂಬರಿಯು ಆಗ ಬಹಳೇ ಜನಪ್ರಿಯವಾಗಿತ್ತು. ಇಂದು ಕನ್ನಡದ ಖ್ಯಾತ ಕಾದಂಬರಿಕಾರರಲ್ಲಿ ಒಬ್ಬರಾದ ಶ್ರೀ ಬಸವರಾಜ ಕಟ್ಟೀಮನಿಯವರು ತಾವು ಇನ್ನೂ ಶಾಲಾಬಾಲಕರಾಗಿರು-ವಾಗಲೇ (1933) ಈ ಕಾದಂಬರಿಯನ್ನು ಓದಿ ಮೆಚ್ಚಿದ್ದರು.

"ಪ್ರಬುದ್ಧ ಪದ್ಮನಯನಾ, ಗಳಗನಾಥರ ಪ್ರಪ್ರಥಮ ಕಾದಂಬರಿ; ನಾನು ಓದಿದ ಪ್ರಪ್ರಥಮ ಕಾದಂಬರಿಯೂ ಅದೇ.

ಮನೆಯ ಪಡಸಾಲೆಯಲ್ಲಿ, ಹೊಗೆ ಕಾರುವ ಚಿಮಣೀ ದೀಪದೆದುರು ಕುಳಿತು ರಾತ್ರಿಯಿಡೀ ನಿದ್ರೆಗೆಟ್ಟು ನಾನು ಆ ಕಾದಂಬರಿಯನ್ನೋದಿ ಮುಗಿಸಿದ್ದೆ. ಗಳಗನಾಥರ ಆ ರಮ್ಯ ಕಥಾಲೋಕ, ಕಮಲಾಕ್ಷ, ಪದ್ಮನಯನಾ, ಕಪಿಂಜಲ, ದುಷ್ಟಬುದ್ಧಿ, ಸುಮತಿ, ಮೇಘನಾದ, ಸಿಂಹನಾದ ಎಂಬ ವಿಚಿತ್ರ ಹೆಸರುಗಳ ಅವರ ಪಾತ್ರಗಳು; ವಾಸ್ತವ ಜೀವನವನ್ನು ಮರೆಯಿಸಿ, ವಾಚಕರನ್ನು ಸುಂದರವಾದ ಕಲ್ಪನಾಪ್ರಪಂಚಕ್ಕೆ ಕರೆದೊಯ್ದು ವಿಹಾರ ಮಾಡಿಸುವ ಕೈಚಳಕ.

....ನನ್ನಲ್ಲಿ ಸಾಹಿತ್ಯಪ್ರೀತಿಯನ್ನು ಹುಟ್ಟಿಸಿ, ನಾನು ಕಾದಂಬರಿಕಾರನಾಗಲು ಮೂಲ ಪ್ರೇರಣೆಯೊದಗಿಸಿದ ಕೀರ್ತಿ ಗಳಗನಾಥರ ಪದ್ಮನಯನೆ'ಯದು".[1] ಎಂದು ಕಟ್ಟೀಮನಿಯವರು ಪ್ರಾಂಜಲ ಮನಸ್ಸಿನಿಂದ ಹೇಳಿದ್ದಾರೆ.

ಹಾಗೆಂದು ಇಂದಿನ ವಿಮರ್ಶಕ ಈ ಕಾದಂಬರಿಯನ್ನು ಓದಿದರೆ ನಿರಾಶನಾಗಬಹುದು; ಇದು ಕಾದಂಬರಿಯೇ ಅಲ್ಲವೆಂದೂ ಹೇಳಬಹುದು. ವಾಸ್ತವ ಕಾದಂಬರಿಯ ಸವಿಯನ್ನುಂಡ ಇಂದಿನ ನಮಗೆ 'ಪದ್ಮನಯನೆ' ಕೇವಲ ಅದ್ಭುತರಮ್ಯ ಕಥೆಯಾಗಿ ಕಂಡರೆ ಅಚ್ಚರಿಯಿಲ್ಲ.

'ಪ್ರಬುದ್ಧ ಪದ್ಮನಯನೆ' ಅದ್ಭುತರಮ್ಯ ಕಾದಂಬರಿಯೇ ಸರಿ. ಆ ಕಾಲಕ್ಕೆ ರಚಿತವಾದ ಗದಗಕರರ 'ಸೂರ್ಯಕಾಂತ' (1892), ಮೈಸೂರಿನ ಗುಬ್ಬಿ ಮುರಗಾರಾಧ್ಯರ 'ಶೃಂಗಾರಚಾತುರ್ಯೋಲ್ಲಾಸಿನಿ', (1896) ಮತ್ತು ಗೂಳಪ್ಪ ಅರಳಿ ಅವರ 'ಕನ್ನಡ ಶೌರ್ಯ ಸಾಗರ' ಇವೆಲ್ಲ ಸ್ವತಂತ್ರ ಕಾದಂಬರಿಗಳಾದರೂ ಅದ್ಭುತರಮ್ಯ ಕಥೆಗಳೇ ಆಗಿವೆ. ಈ ಎಲ್ಲ ಕಾದಂಬರಿಗಳಿಗೆ ಆಗ ತುರಮರಿಯವರ ಕನ್ನಡ 'ಬಾಣಕಾದಂಬರೀ ಕಥೆ'ಯೇ (ಸು. 1875) ಆದರ್ಶವಾಗಿತ್ತು.

ಕನ್ನಡದಂತೆ ಮರಾಠಿಯಲ್ಲಿ ಕೂಡ ಮೊದಮೊದಲು ಇಂಥ ಅದ್ಭುತರಮ್ಯ ಕಾದಂಬರಿ-ಗಳೇ ರಚಿತವಾಗಿವೆಯೆಂಬುದನ್ನು ಇಲ್ಲಿ ನೆನೆಯಬಹುದಾಗಿದೆ. 1857ರಲ್ಲಿ ಬಾಬಾ ಪದಮನಜೀ ಅವರು ಬರೆದ 'ಯಮುನಾ ಪರ್ಯಟನ'ವು, ಹಾಗೆ ನೋಡಿದರೆ, ತುಂಬ ವಾಸ್ತವ ಕಾದಂಬರಿ. ಆದರೆ ಈ ಪ್ರಪ್ರಥಮ ಮರಾಠಿ ಕಾದಂಬರಿಯು ಅನೇಕ ಕಾರಣಗಳ ಮೂಲಕ ಜನಪ್ರಿಯವಾಗಲಿಲ್ಲ. ಆದರೆ 1861ರಲ್ಲಿ ಪ್ರಕಟವಾದ ಲಕ್ಷ್ಮಣಶಾಸ್ತ್ರಿ ಹಳಬೇ ಅವರ 'ಮುಕ್ತಾಮಾಲಾ' ಎಂಬ ಅದ್ಭುತರಮ್ಯ ಕಾದಂಬರಿ ಬಹಳೇ ಜನಪ್ರಿಯವಾಗಿ, 1870 ರಲ್ಲಿಯೇ ಅದು ಪುನರ್ಮುದ್ರಣಗೊಂಡಿತು. ಮುಂದೆ ಹಳಬೇ ಅವರೂ ಇತರರೂ ಇಂಥ

---

1. ಕರ್ಮವೀರ, 5-1-1969

ಅನೇಕ ಮರಾಠಿ ಕಾದಂಬರಿಗಳನ್ನು ಬರೆದರೆಂಬುದು, ಬಹುಶಃ ಆ ಕಾಲದ ವಾಚಕರ ಅಭಿರುಚಿಯನ್ನು ಸೂಚಿಸುತ್ತದೆಯೆನ್ನಬಹುದು.

ಇಂಗ್ಲಿಷ ಕಾದಂಬರಿ ಕೂಡ, ಮೊದಲು ಹೀಗೆಯೇ ಅವಾಸ್ತವ ರಮ್ಯ ಕಥಾ-ನಿರೂಪಣೆಯೇ ಆಗಿತ್ತು. ಸರ್ ಫಿಲಿಪ್ ಸಿಡ್ನಿ (1554–1586) ಬರೆದ ಅರ್ಕೇಡಿಯಾ (Arcadia) ವನ್ನು ಹಾಗೆ ನೋಡಿದರೆ ಕಾದಂಬರಿ ಎನ್ನುವುದೇ ಕಠಿಣ. 18ನೆಯ ಶತಮಾನದ ವರೆಗೆ ಇಂಥ ಪ್ರಯತ್ನಗಳೇ ಮುಂದುವರೆದು, ಹಲವಾರು ಅದ್ಭುತರಮ್ಯ ಮತ್ತು ಅದ್ಭುತಭಯಾನಕ ಕಾದಂಬರಿಗಳು ಹುಟ್ಟಿಕೊಂಡವು. ಮುಂದೆ ಫೀಲ್ಡಿಂಗ್, ಸ್ಯಾಮ್ಯುಅಲ್ ರಿಚರ್ಡ್‌ಸನ್ ಮೊದಲಾದವರು ವಾಸ್ತವ ಕಾದಂಬರಿಯ ತಳಹದಿಯನ್ನು ಹಾಕಿದರು. 18ನೆಯ ಶತಮಾನದ ಸರ್ ವಾಲ್ಟರ್ ಸ್ಕಾಟ್ (1771–1832) ಭಾರತದ ಕಾದಂಬರಿಕಾರರಿಗೆ ಆದರ್ಶ ಲೇಖಕನಾದನು. ಬಂಗಾಲಿಯ ಬಂಕಿಮಚಂದ್ರರಂತೆ ಮರಾಠಿಯ ಆಪಟೆಯವರೂ ಸ್ಕಾಟ್‌ನ ಮಾದರಿಯಲ್ಲಿ ಐತಿಹಾಸಿಕ ರಮ್ಯ ಕಾದಂಬರಿ-ಗಳನ್ನು ಬರೆಯಲಿಕ್ಕೆ ಪ್ರಯತ್ನಿಸಿದರು. ಇವರ ಅನುವಾದಗಳಿಂದಲೇ ನಿಜವಾದ ಕನ್ನಡ ಕಾದಂಬರಿ ಆರಂಭವಾಯಿತು. ಅದಕ್ಕಿಂತ ಮೊದಲು ಕಾದಂಬರಿಯ ಹೆಸರಿನಿಂದ ಬಂದವುಗಳು ಕೇವಲ ಕಾಲ್ಪನಿಕ ಅದ್ಭುತರಮ್ಯ ಗದ್ಯಕಥೆಗಳಾಗಿದ್ದುವೆಂದರೆ ತಪ್ಪಾಗಲಾರದು.

ಗಳಗನಾಥರ **'ಪದ್ಮನಯನಾ'** ಈ ಮಾದರಿಯ ಕಾದಂಬರಿಯೇ ಆಗಿದೆ. ಅವರು ತುರಮುರಿಯವರ 'ಕನ್ನಡ ಬಾಣಕಾದಂಬರಿ'ಯಂತೆ, ಯಾದವಕಬ್ಬಿಗನ 'ಕಲಾವತೀ ಪರಿಣಯ'ವನ್ನೂ ಓದಿರುವ ಸಂಭವವಿದೆ. 'ಕಲಾವತೀ ಪರಿಣಯ'ವು ಇಂಥ ಅದ್ಭುತರಮ್ಯ ಕಥೆಯನ್ನೇ ಒಳಗೊಂಡಿದ್ದು, ಅದರಲ್ಲಿ ಕೂಡ ಅನೇಕ ಅಲೌಕಿಕ ವಿಸಂಗತಿಗಳಿವೆ.

ಆದರೆ ಗಳಗನಾಥರು ತಮ್ಮ 'ಪದ್ಮನಯನೆ'ಯು ಸ್ವತಂತ್ರ ಕೃತಿಯೆಂದೇ ಸಾರಿದ್ದಾರೆ. "ಕಥಾಸಂವಿಧಾನವು ನನ್ನ ಸ್ವಂತ ಕಲ್ಪನೆಯದಿದ್ದು ಅವಾಂತರ ಭಾಗದ ಹತ್ತೆಂಟು ಪುಟಗಳು ಮಾತ್ರ ಅನ್ಯ ಕಾದಂಬರಿಗಳ ಸಹಾಯದಿಂದ ಬರೆಯಲ್ಪಟ್ಟಿವೆ. ಇಷ್ಟರ ಹೊರತು ಇದರಲ್ಲಿ ಬೇರೆ ಗ್ರಂಥಗಳ ಎಂಜಲವು ಬಹುತರವಾಗಿ ದೊರೆಯಲಾರದು"[1] ಎಂದು ನುಡಿದಿರುವ ಗಳಗನಾಥರ ಸ್ವತಂತ್ರ ರಚನೆಯ ಹಂಬಲವನ್ನೂ, ಅಭಿಮಾನವನ್ನೂ ಗುರುತಿಸಬಹುದಾಗಿದೆ.

'ಪ್ರಬುದ್ಧ ಪದ್ಮನಯನೆ'ಯ ಇತ್ತೀಚಿನ ಆವೃತ್ತಿಯ ಮುಖಪುಟದ ಮೇಲೆ ಇದನ್ನು ಐತಿಹಾಸಿಕ ಸ್ವತಂತ್ರ ಕಾದಂಬರಿ ಎಂದು ಕರೆಯಲಾಗಿದೆಯಾದರೂ ಗಳಗನಾಥರು ಕೇವಲ "ಕಲ್ಪಿತ ಕಾದಂಬರಿ" ಎಂದೇ ಕರೆದಿದ್ದರು. ಗಳಗನಾಥರ ಅನಂತರದ ಐತಿಹಾಸಿಕ ಕಾದಂಬರಿಗಳಿಗೂ, ಈ 'ಪ್ರಬುದ್ಧ ಪದ್ಮನಯನೆ'ಗೂ ಬಹಳ ವ್ಯತ್ಯಾಸವಿದೆ. ಇದರಲ್ಲಿ ಕೂಡ ಐತಿಹಾಸಿ ಕಥೆಯ ಭಾಸವನ್ನು ಉಂಟುಮಾಡುವ ಕೆಲವು ವ್ಯಕ್ತಿಗಳ ಮತ್ತು ಪಟ್ಟಣಗಳ ಉಲ್ಲೇಖವು ಬಂದಿದ್ದರೂ, ಇದು ಯಾವ ನಿರ್ದಿಷ್ಟ ಇತಿಹಾಸದ ಹಿನ್ನೆಲೆಯಲ್ಲಿಯೂ ರಚಿತವಾಗಿಲ್ಲ. ಕಪಿಂಜಲನಂಥ ದಿವ್ಯ ಶಕ್ತಿಯ ಋಷಿ, ಮೇಘನಾದ–ಸಿಂಹನಾದರಂಥ ರಾಕ್ಷಸರು, ಅವರ ಮಾಯಾರೂಪಗಳು, ಮಾಯಾಸೃಷ್ಟಿಯ ಅರಮನೆಗಳು, ಅಮಾನುಷ ಘಟನೆಗಳು— ಇವುಗಳನ್ನೆಲ್ಲ ಒಳಗೊಂಡ ಈ ಕಾದಂಬರಿಯು ಐತಿಹಾಸಿಕವೂ ಅಲ್ಲ, ಸಾಮಾಜಿಕವೂ ಅಲ್ಲ.

1. ಗಳಗನಾಥ: ಪ್ರಬುದ್ಧ ಪದ್ಮನಯನೆ, ಪ್ರಸ್ತಾವನೆ.

ಗಂಧರ್ವರು ಯಕ್ಷರು ಕಿನ್ನರರು ರಾಕ್ಷಸರು ಮೊದಲಾದವರ ಅದ್ಭುತರಮ್ಯ ಕಥೆಗಳು ನಮ್ಮ ಪ್ರಾಚೀನ ಪುರಾಣಗಳಲ್ಲಿಯೂ, ಕೆಲವು ಕಾವ್ಯನಾಟಕಗಳಲ್ಲಿಯೂ ಇವೆ. ಅಂಥ ಕೃತಿಗಳನ್ನು ನಾವು ಮಾನವೀಯ ವಾಸ್ತವತೆಯ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸುವುದಿಲ್ಲ. ಆಂಗ್ಲ ಸಾಹಿತ್ಯದಲ್ಲಿ ಇಂಥ ಪ್ರಕಾರವನ್ನು ಚಿತ್ರಕವೆಂದು (Fantasy) ಕರೆಯಲಾಗಿದೆ. ಲೇಖಕನ ಅತಿರೇಕದ ಊಹಾಶಕ್ತಿಯೇ ಇಂಥ ಕಥೆಗಳಿಗೆ ಪ್ರೇರಕ. ಇಲ್ಲಿಯ ಕಥೆ, ಪಾತ್ರಗಳು, ಸನ್ನಿವೇಶಗಳು, ಘಟನೆಗಳು ಎಲ್ಲವೂ ಸ್ವಚ್ಛಂದವಾಗಿರುತ್ತವೆ. ಅವುಗಳ ನಡೆವಳಿಯಲ್ಲಿ ಸಮಂಜಸತೆ, ತಾರ್ಕಿಕತೆ, ನೈಸರ್ಗಿಕತೆ ಇರಬೇಕಾಗಿಲ್ಲ. ಇವು ಹೆಚ್ಚಾಗಿ ಪದ್ಯದಲ್ಲಿಯೇ ಇರುತ್ತವೆ. ಗದ್ಯದಲ್ಲಿ ಮಕ್ಕಳಿಗಾಗಿ ಬರೆದ ಯಕ್ಷರ ಕಥೆಗಳೂ ಇದೇ ಮಾದರಿಯವು. ಇತ್ತೀಚೆ ಇಂಥ ಅಂಶಗಳನ್ನು ಬಳಸಿ ಕಾದಂಬರಿಕಾರರು ಹೆಚ್ಚಿನ ಅರ್ಥವತ್ತಾದ ವಸ್ತುವನ್ನು ನಿರೂಪಿಸಲು ಯತ್ನಿಸುತ್ತಿರುವರು. ಆದರೆ ಅದಕ್ಕೆ ಲೇಖಕನ ಕಲ್ಪಕ ಶಕ್ತಿಯ ಜೊತೆಗೆ ಪ್ರತಿಭಾಸಂಪನ್ನತೆಯೂ ತೀರ ಉನ್ನತ ಮಟ್ಟದ್ದಿರಬೇಕಾಗುತ್ತದೆ.[1]

ಗಳಗನಾಥರೂ ತಮ್ಮ 'ಪದ್ಮನಯನೆ'ಯಲ್ಲಿ ಸಾಮಾನ್ಯ ಮಾನವರ ಕಥೆಯಲ್ಲಿ ಅಸಾಮಾನ್ಯ ಅತಿಮಾನವರನ್ನು ತಂದಿರುವರು. ಆದರೆ ಅದರಿಂದ ಕಾದಂಬರಿಗೆ ಹೆಚ್ಚಿನ ಅರ್ಥಪೂರ್ಣತೆ ಬಂದಿದೆಯೇ ಎಂದು ಪರೀಕ್ಷಿಸಿದಾಗ ಹೆಚ್ಚಿನ ಪಾಲು ನಿರಾಸೆಯೇ ಆಗುತ್ತದೆ. ಕಾದಂಬರಿಯ ಶೈಶವಾವಸ್ಥೆಯಲ್ಲಿ ಹುಟ್ಟಿದ ಈ ಕೃತಿಯಲ್ಲಿ ಅಂಥ ಅರ್ಥಪೂರ್ಣತೆಯನ್ನು ಹುಡುಕುವುದೇ ತಪ್ಪಾಗಬಹುದು.

ಕಾದಂಬರಿಯ ನಾಯಿಕೆಯಾದ ಪದ್ಮನಯನೆ ಕಪಿಂಜಲ ಋಷಿಯ ಆಶೀರ್ವಾದದಿಂದಲೇ ಜನಿಸಿದಳು. ಆಗ ಆತ ಪದ್ಮನಯನೆಯ ತಂದೆಯಾದ ವೀರವರ್ಮನಿಗೆ "ಈ ಕೂಸಿಗೆ ಪದ್ಮನಯನೆಯೆಂದು ಹೆಸರನ್ನಿಡು. ಸಾರ್ವಭೌಮನ ಮಗಳಾದ ಪದ್ಮನಯನೆಯು ಸಾರ್ವಭೌಮನ ಹೆಂಡತಿಯೂ ಸಾರ್ವಭೌಮನ ತಾಯಿಯೂ ಆಗುವಳು. ಅದನ್ನು ನೀನು ಕಣ್ಣಾರೆ ನೋಡುವೆ. ಇದೆಲ್ಲ ಸರಿ, ಆದರೆ ನಿನ್ನ ಪುತ್ರಿಯು ಹದಿನಾರನೆಯ ವರುಷದ ಪ್ರಾಯದಲ್ಲಿ ನಿನ್ನನ್ನು ಅಗಲಿ ಬಹಳ ಸಂಕಟಗಳನ್ನು ಅನುಭವಿಸುವಳು" ಎಂದು ಭವಿಷ್ಯವಚನವನ್ನು ನುಡಿಯುವನು. ಹೀಗೆ ಕಾದಂಬರಿಯ ಸ್ವರೂಪ, ಕಥೆಯ ಬೆಳವಣಿಗೆ ಮತ್ತು ಸುಖಾಂತಗಳ ಸೂಚನೆಯನ್ನು ಗಳಗನಾಥರು ಕಾದಂಬರಿಯ ಆರಂಭದಲ್ಲಿಯೇ ಕೊಟ್ಟಿರುವರು.

ಕಾದಂಬರಿಯು ಅದೇ ಕ್ರಮದಲ್ಲಿ ಮುಂದೆ ಸಾಗುತ್ತದೆ. ಆದರೆ ಘಟನೆಗಳಲ್ಲಿ ಆಕಸ್ಮಿಕತೆ ಅತಿಯಾಗಿದೆ. ಹದಿನಾರನೆಯ ವಯಸ್ಸಿನಲ್ಲಿ ಪದ್ಮನಯನೆ ಆಕಸ್ಮಿಕವಾಗಿ ರಾಜಧಾನಿಯಿಂದ ತಪ್ಪಿಸಿಕೊಳ್ಳುವಳು. ಭೀಕರಾರಣ್ಯದಲ್ಲಿ ಅವಳ ಸಹಾಯಕ್ಕೆ ಬಂದ ಧನಮಲ್ಲನು ರಾಜನ ಸೇವಕನಾಗಿದ್ದರೂ ಅವನು ಕಪಟವೇಷಧಾರಿ. ಆತ ನಿಜವಾಗಿ ದೈತ್ಯರಾಜನಾದ ಮೇಘನಾದ. ಸಿಂಹಲದ್ವೀಪದ ಶೋಣಿತಪುರವು ಆತನ ರಾಜಧಾನಿ. ಪದ್ಮನಯನೆಯ

1. "...Writers of fantastic turn have used such as the introduction of a god, ghost, angel, monkey, monster, midget, witch into ordinary life or the introduction of ordinary men into no man's land....................; but all will depend on the handling". E. M. Forster: *Aspects of the Novel*, page 118

ಮೋಹದಿಂದಲೇ ಆತ ಇಷ್ಟು ದಿನ ಹೊಂಚು ಹಾಕಿ ಕುಳಿತಿದ್ದ. ಅಸಹಾಯಕಳಾದ ಪದ್ಮನಯನೆ ಅವನ ಮಾಯಾಸಾಮ್ರಾಜ್ಯದ ಗುಪ್ತ ಅರಮನೆ ಸೇರಬೇಕಾಯಿತು. ಒಂದು ವರ್ಷದ ಗೌರೀ ವ್ರತದ ತರುವಾಯ ಸಿಂಹನಾದನನ್ನು ಮದುವೆಯಾಗುವೆನೆಂದು ಪದ್ಮನಯನೆ ಆತನನ್ನು ನಂಬಿಸಿದಳು. ಅಷ್ಟರಲ್ಲಿ ಉಜ್ಜಯನಿಯ ರಾಜಪುತ್ರನಾದ ಕಮಲಾಕ್ಷ ಮೇಘನಾದನ ಈ ಗುಪ್ತ ಅರಮನೆಗೆ ಬಂದುದು ತೀರ ಆಕಸ್ಮಿಕ. ಪದ್ಮನಯನೆ ಮತ್ತು ಕಮಲಾಕ್ಷರು ಪರಸ್ಪರ ಮೋಹಿಸಿದರು. ಪದ್ಮನಯನೆ ರಾಕ್ಷಸನ ಬಿಲ್ಲನ್ನು ಹೇಗೋ ಪಡೆದಳು; ಕಮಲಾಕ್ಷ ಆ ಬಿಲ್ಲಿನಿಂದಲೇ ಅವನನ್ನು ಕೊಂದು, ಪದ್ಮನಯನೆಯ ಜೊತೆಯಲ್ಲಿ ಗಾಂಧರ್ವ ವಿವಾಹ ಮಾಡಿಕೊಳ್ಳುವನು.

ಮೇಘನಾದನ ತಮ್ಮ ಸಿಂಹನಾದನು ತನ್ನ ಅಣ್ಣನ ಮರಣಕ್ಕೆ ಕಾರಣಳಾದ ಪದ್ಮನಯನೆಯನ್ನು ಕಮಲಾಕ್ಷನಿಂದ ಅಗಲಿಸುವನು. ಅದಕ್ಕೆ ಅವನು ಮಾಯಾಗಿಳಿಯ ರೂಪವನ್ನು ಧರಿಸುವನು. ಆದರೆ ಪದ್ಮನಯನೆಯನ್ನು ಅಪಹರಿಸಿಕೊಂಡು ಹೋಗುತ್ತಿರುವ ಆತ ತನ್ನ ವೈರಿಯಾದ ಬೇರೊಬ್ಬ ರಾಕ್ಷಸನನ್ನು ಎದುರಿಸಿದಾಗ ಕಾದಾಟದಲ್ಲಿ ಅವರಿಬ್ಬರೂ ಸಾಯುವರು. ಅದೇ ಸಮಯಕ್ಕೆ ಮೃಗಯಾರ್ಥವಾಗಿ ಬಂದ ಪಾಂಡ್ಯರಾಜನು ಗರ್ಭಿಣಿಯಾದ ಪದ್ಮನಯನೆಯನ್ನು ತನ್ನ ರಾಜಧಾನಿಗೆ ಕರೆದೊಯ್ದು ಸೋದರಪ್ರೀತಿಯಿಂದ ಸಲುಹಿದ. ಆತನ ಹೆಂಡತಿ ಮಂಜುಘೋಷೆಯೂ ಪದ್ಮನಯನೆಯನ್ನು ಪ್ರೀತಿಯಿಂದಲೇ ಕಂಡಳು.

ಇತ್ತ, ಮಗಳು ಅಡವೀಪಾಲಾದುದರಿಂದ ವೀರವರ್ಮ ದುಃಖಿತನಾದ. ಆತನ ಗುರು ಕಪಿಂಜಲ ಆಗಲೇ ನಿರ್ಯಾಣಗೊಂಡಿದ್ದ. ಆತನ ಶಿಷ್ಯ ಸುಮತಿಯು ರಾಜಪುತ್ರಿಯ ಶೋಧಾರ್ಥವಾಗಿ ಹೊರಟು, ಮಾರ್ಗದಲ್ಲಿ ಕಮಲಾಕ್ಷನನ್ನು ಕೂಡಿಕೊಳ್ಳುವನು. ಇಬ್ಬರಿಗೂ ಕಪಿಂಜಲನು ಕನಸಿನಲ್ಲಿ ಕಾಣಿಸಿಕೊಂಡು ಮಾರ್ಗದರ್ಶನ ಮಾಡುವನು. ಕಮಲಾಕ್ಷ ಸುಮತಿಯಿಂದ ಅಗಲಿ ಆಕಸ್ಮಿಕವಾಗಿ ವೀರವರ್ಮನಲ್ಲಿ ಬಂದು ಸೇನಾಪತಿಯಾಗುವನು. ಅಲ್ಲಿ ಮಂತ್ರಿಸುತೆಯಾದ ಜೀವನಕಲೆಯು ಅವನನ್ನು ಪ್ರೇಮಿಸಿ ಕೈಹಿಡಿದು, ಅವನ ಕಥೆಯನ್ನು ತಿಳಿಯುವಳು. ಪದ್ಮನಯನೆಯ ಶೋಧವಾಗುವ ವರೆಗೆ ಬ್ರಹ್ಮಚರ್ಯವನ್ನು ಪಾಲಿಸುವುದಾಗಿ ಜೀವನಕಲೆ ಪ್ರತಿಜ್ಞೆಗೈಯುವಳು. ಕಮಲಾಕ್ಷ ಮತ್ತೆ ಪತ್ನಿಯ ಶೋಧಕ್ಕೆ ತೊಡಗಿ ಅನೇಕ ವಿಘ್ನಗಳನ್ನು ಎದುರಿಸುವನು. ಇಷ್ಟರಲ್ಲಿ ಪಾಂಡ್ಯ ರಾಜನ ಪತ್ರದ ಪ್ರಕಾರ ಪದ್ಮನಯನೆಯನ್ನು ಕರೆತರಲು ಮಂತ್ರಿ ಹೊರಡುವನು, ಜೀವನಕಲೆಯೂ ಜೊತೆಗೆ ಹೊರಡುವಳು. ಅಲ್ಲಿ ಅವಳು ಪದ್ಮನಯನೆಯ ಪಾತಿವ್ರತ್ಯವನ್ನು ಪರೀಕ್ಷಿಸಿ, ಅವಳನ್ನು ಕರೆತರುವಳು. ಮಾರ್ಗಮಧ್ಯೆ ಕಮಲಾಕ್ಷನ ಭೆಟ್ಟಿಯಾಗುವುದು. ಪದ್ಮನಯನೆ ತನ್ನ ಮಗ ವಿಕ್ರಮಾರ್ಕನ ಜೊತೆ ಕನೋಜವನ್ನು ಸೇರುವಳು. ನಿಪುತ್ರಕನಾದ ವೀರವರ್ಮನು ಕಮಲಾಕ್ಷನಿಗೇ ತನ್ನ ರಾಜ್ಯವನ್ನು ಒಪ್ಪಿಸುವನು. "ಒಟ್ಟಿಗೆ ಸತ್ಸಮಾಗಮದಿಂದ ಸತ್ವಶೀಲರಾದ ಅವರೆಲ್ಲರೂ ಕಡೆಗೆ ಸುಖ ಸಾಮ್ರಾಜ್ಯವನ್ನು ಹೊಂದಿದರು."

ಕಾದಂಬರಿಯ ಕಥಾರಚನೆಯಲ್ಲಿಯೇ ಅದ್ಭುತ-ರಮ್ಯ ಕಲ್ಪಕತೆಯಿದೆ. ಎಲ್ಲ ಘಟನೆಗಳೂ ಲೇಖಕರ ಪೂರ್ವ ಯೋಜನೆಯ ಪ್ರಕಾರವೇ ನಡೆಯುತ್ತವೆ. ಇವುಗಳಲ್ಲಿ ಆಕಸ್ಮಿಕತೆಯಿದ್ದರೂ ಪೂರ್ವಕಲ್ಪಿತ ಉದ್ದೇಶದಿಂದಲೇ ಲೇಖಕರು ಇವುಗಳನ್ನು ಒಂದು ಕ್ರಮದಲ್ಲಿ

ಹೆಣೆದಿರುವರು. ಸದ್ಗುರುವಿನ ಪ್ರಭಾವದಿಂದ ಸಜ್ಜನರಾದವರ ಕಾಮನೆಗಳು ಪೂರ್ಣಗೊಂಡು, ಎಂಥ ವಿಪತ್ತುಗಳು ಬಂದರೂ ಅವೆಲ್ಲ ಗುರುವಿನ ಆಶೀರ್ವಾದದಿಂದ ಪರಿಹಾರಗೊಂಡು ಎಲ್ಲವೂ ಕಲ್ಯಾಣಕರವಾಗುವುದೆಂಬ ಅಚಲ ವಿಶ್ವಾಸ ಗಳಗನಾಥರದು. ಈ ತತ್ವವನ್ನೇ ಗಳಗನಾಥರು ಈ ಅದ್ಭುತ ಘಟನಾವಳಿಗಳ ಕಾದಂಬರಿಯಲ್ಲಿ ನಿರೂಪಿಸಿರುವರು. ಗುರುವಿನ ಅಸಾಮಾನ್ಯ ಶಕ್ತಿಯನ್ನು ಬಿಂಬಿಸಲಿಕ್ಕೆಂದೇ ಗಳಗನಾಥರು ಅಘಟಿತ ಘಟನೆಗಳನ್ನೂ ಅಸಾಮಾನ್ಯ ವ್ಯಕ್ತಿಗಳನ್ನೂ, ಅಸಾಮಾನ್ಯ ಕಷ್ಟಗಳನ್ನೂ ತಂದಿರುವರು. ಗುಡ್ಡದಂತೆ ಕಂಡ ಕಷ್ಟಗಳು-ವಿಘ್ನಗಳು ಸದ್ಗುರುವಿನ ಕೃಪೆಯಿಂದ ಕರ್ಪುರದಂತೆ ಕರಗಿಹೋದವು. ಆದರೆ ಎಂಥ ಸದ್ಗುರುವಿನ ಕೃಪೆಯಿದ್ದರೂ ಮಾನವನು ಅನುಭವಿಸಬೇಕಾದುದನ್ನು ತಪ್ಪಿಸಲಿಕ್ಕೆ ಸಾಧ್ಯವಿಲ್ಲ; ವಿಧಿಲಿಖಿತವನ್ನು ಯಾರೂ ತಪ್ಪಿಸಬಾರದು; ಆದರೆ ವಿಪತ್‌ಪರಂಪರೆಯ ಸಾಗರವನ್ನೇ ಗುರುವಿನ ಕೃಪಾಶೀರ್ವಾದದ ತೆಪ್ಪದಿಂದ ದಾಟಬಹುದು—ಎಂಬ ಗಳಗನಾಥರ ಜೀವನಶ್ರದ್ಧೆ ಈ ಕಥೆಯಲ್ಲಿ ವ್ಯಕ್ತವಾಗಿದೆ. ಕಾದಂಬರಿಯ ಕೊನೆಯ ವಾಕ್ಯಗಳೂ ಇದನ್ನೇ ಸೂಚಿಸುತ್ತವೆ. "ಸತ್ಸಮಾಗಮದಿಂದ ಸತ್ವಶೀಲರಾದ ಅವರೆಲ್ಲರೂ ಕಡೆಗೆ ಸುಖಸಾಮ್ರಾಜ್ಯವನ್ನು ಹೊಂದಿದರು. ಅವರ ಚರಿತ್ರಶ್ರವಣದಿಂದ ಸರ್ವರೂ ಸುಖಸಾಮ್ರಾಜ್ಯವನ್ನು ಹೊಂದುವಂತೆ ಶ್ರೀಸದ್ಗುರುವು ಅನುಗ್ರಹಿಸಲಿ!" ಎಂದು ಆಶಿಸುವ ಗಳಗನಾಥರ ದೈವಭಕ್ತಿ, ಗುರುಭಕ್ತಿಗಳು ಒಡೆದು ಕಾಣುತ್ತವೆ.

'ಪ್ರಬುದ್ಧ ಪದ್ಮನಯನೆ'ಯ "ಪಾತ್ರಚಿತ್ರಣವು ಸ್ಫುಟವಾಗಿರುವುದು ಮೆಚ್ಚತಕ್ಕದ್ದಾಗಿದೆ"[1] ಎಂದು ಡಾ. ಹಾವನೂರ ಹೇಳುವರು. ವಾಸ್ತವ ನೆಲೆಯಲ್ಲಿ ನಿಲ್ಲದಿದ್ದರೂ ಪಾತ್ರಗಳ ವೈಯಕ್ತಿಕತೆ ಸ್ಫುಟವಾಗಿದೆಯೆಂಬರ್ಥದಲ್ಲಿ ಈ ರೀತಿ ಹೇಳಬಹುದಾಗಿದೆ. ಘಟನಾಪ್ರಧಾನವಾದ ಈ ಕಾದಂಬರಿಯಲ್ಲಿ ಪಾತ್ರಚಿತ್ರಣಕ್ಕೆ ಹೆಚ್ಚಿನ ಅವಕಾಶವಿಲ್ಲವೆಂದೇ ಹೇಳಬೇಕು. ಈ ಕಾದಂಬರಿಯಲ್ಲಿ ಮಾನವ ಮತ್ತು ಅದರಂತೆ ಅತಿಮಾನವ ಪಾತ್ರಗಳು ಬಂದಿವೆ. ವೀರವರ್ಮ, ದೇವದತ್ತ ಮೊದಲಾದವರು ಶ್ರದ್ಧಾವಂತ ವ್ಯಕ್ತಿಗಳು. ಕಮಲಾಕ್ಷ ಸುಮತಿಯರು ಒಳ್ಳೇ ಸ್ನೇಹಸಂಪನ್ನರು. ಸಾಹಸದಲ್ಲಿ ಕಮಲಾಕ್ಷನಿಗಿಂತ ಪದ್ಮನಯನೆಯದೇ ಒಂದು ಕೈ ಮೇಲೆಂದರೂ ತಪ್ಪಿಲ್ಲ. ಅಚಾತುರ್ಯ, ನಿರಾಸೆಗಳಿಗೆ ಆತ ಒಮ್ಮೊಮ್ಮೆ ತುತ್ತಾಗುತ್ತಾನೆ. ಜೀವನಕಲೆಯನ್ನು ಕೈಹಿಡಿಯುವಾಗ ಆತನ ಪತ್ನೀಪ್ರೇಮ ಮರವೆಯಾಗುತ್ತದೆ. ಪಶ್ಚಾತ್ತಾಪದಿಂದ ತನ್ನನ್ನು ತಾನೇ ಹಳಿದುಕೊಂಡು, ಮತ್ತೆ ಪದ್ಮನಯನೆಯ ಶೋಧಕ್ಕೆ ತೊಡಗುತ್ತಾನೆ. ದುಷ್ಟಬುದ್ಧಿಯ ಕಪಟವನ್ನು ಊಹಿಸಲಾರದ ಮುಗ್ಧ ರಾಜಕುಮಾರನಾತ. ಕೊನೆಗೆ, ಪುರುಷವೇಷದಿಂದ ತನ್ನೆದುರೇ ನಿಂತ ಹೆಂಡಂದಿರನ್ನೂ ಗುರುತಿಸದೆ ಹೋಗುವ ಪೆದ್ದನಾಗಿ ಕಾಣುತ್ತಾನೆ.

ಪದ್ಮನಯನೆ ಮೇಘನಾದನನ್ನು ಆಡಿಸಿದ ರೀತಿಯನ್ನು ನೋಡಿದರೆ ಅವಳನ್ನು ಪ್ರಬುದ್ಧ ಪದ್ಮನಯನೆ ಎಂದೇ ಕರೆಯಬೇಕಾಗುತ್ತದೆ. ಆದರೆ ಕಮಲಾಕ್ಷನಿಗೆ ಹೃದಯವನ್ನರ್ಪಿಸಿದ ಪದ್ಮನಯನೆಯ ನಡೆವಳಿ ತುಂಬ ಮಾರ್ದವವಾಗಿದೆ. ಅವಳ ಪತಿಭಕ್ತಿಯೂ ಅಷ್ಟೇ ಗಾಢವಾಗಿದೆ. ಕಮಲಾಕ್ಷ ತೀರಿಕೊಂಡನೆಂದು ತಿಳಿದು, ಅವಳು ಅಗ್ನಿಪ್ರವೇಶಕ್ಕೆ ಸಿದ್ಧಳಾದಳು. ಅವಳ ಗೆಳತಿ ಜೀವನಕಲೆ, ಮಂಜುಘೋಷೆ, ಸುಮಧ್ಯಮೆಯರು ಸೌಂದರ್ಯ - ಸುಗುಣಗಳಿಂದ

1. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ 550

ಒಂದೇ ಬಣ್ಣದ ಹಕ್ಕಿಗಳು. ಆದರೂ ಜೀವನಕಲೆ ಕೂಡ ಪದ್ಮನಯನೆಯಂತೆ ಪ್ರಸಂಗ ಬಂದಾಗ ಬಿಲ್ಲು ಹಿಡಿದು ಹುಲಿಯನ್ನೂ ಕೊಲ್ಲಬಲ್ಲ ಸಾಹಸಿಯಾಗಿ ಚಿತ್ರಿತವಾಗಿದ್ದಾಳೆ.

ಮೇಘನಾದ ಮಾಯಾವಿ ರಾಕ್ಷಸ. ಇಂದ್ರಜಾಲದಿಂದ ಏನನ್ನೂ ಸಾಧಿಸಬಲ್ಲವನಾಗಿದ್ದ. ಅವನ ಸಿರಿವಂತಿಕೆ ಅಪರಿಮಿತ. ಶೋಣಿತಪುರದ ಈ ರಾಕ್ಷಸ ರಾವಣನ ಕುಲದವನೇ. ಪದ್ಮನಯನೆ ಅವನನ್ನು ತನ್ನ ಗೌರೀವ್ರತದ ನೆಪದಿಂದ ದೂರವಿಟ್ಟಳು. ರಾಕ್ಷಸನಾದರೂ ಆತನೂ ಇಲ್ಲಿ ಧರ್ಮಭೀರುವಾಗಿ ಕಾಣುತ್ತಾನೆ. ಪದ್ಮನಯನೆಯ ಕಪಟಪ್ರೇಮದ ಮಾತುಗಳಿಗೆ ಮರುಳಾಗಿ ತನ್ನ ಆತ್ಮಘಾತಕ ಧನುಸ್ಸನ್ನೇ ಅವಳಿಗೆ ಕೊಟ್ಟ ಮೂರ್ಖನವ. ಆತನ ತಮ್ಮ ಸಿಂಹನಾದ ಮಾತ್ರ ಮಹಾಚತುರ. ಮಾಯಾಗಿಳಿಯಾಗಿ ಕಮಲಾಕ್ಷನನ್ನೂ ಪದ್ಮನಯನೆಯನ್ನೂ ಮೋಸಗೊಳಿಸಿದ. ಆದರೆ ದುರ್ದೈವದಿಂದ ವೈರಿಯ ಜೊತೆ ಕಾದುತ್ತ ಮಡಿದುಹೋದ.

ಕಾದಂಬರಿಯ ಪ್ರಮುಖ ಶಕ್ತಿ ಕಪಿಂಜಲನೇ. ಕಾದಂಬರಿಯ ಘಟನೆಗಳಿಗೆಲ್ಲ ಅವನೇ ಸೂತ್ರಧಾರನಂತಿರುವನು. ಪದ್ಮನಯನೆಯ ಜನನ, ಅವಳ ವಿದ್ಯಾಭ್ಯಾಸ, ಮೇಘನಾದನಿಂದ ಅವಳ ಸಂರಕ್ಷಣೆ — ಇವುಗಳಿಗೆ ಅವನೇ ಕಾರಣ. ಅವನು ಮರಣವನ್ನೈದಿದ ಮೇಲೂ ತನ್ನ ಶಿಷ್ಯರ ಕನಸಿನಲ್ಲಿ ಕಂಡೋ, ಬೇರೆ ಋಷಿಯ ರೂಪದಿಂದ ಅಕಸ್ಮಾತ್ತಾಗಿ ಕಾಣಿಸಿಕೊಂಡೋ ಅವರಿಗೆ ದಾರಿದೀಪವಾಗುವನು! ಹೀಗೆ ಈ ಎಲ್ಲ ಮಾನವ ಮತ್ತು ಅತಿಮಾನವ ಪಾತ್ರಗಳು ಲೇಖಕರ ಕೈಗೊಂಬೆಗಳಾಗಿ ಮೂಡಿ ಬಂದಿವೆ.

'ಪ್ರಬುದ್ಧ ಪದ್ಮನಯನೆ'ಯ ಕಥಾನಕವು ತಮ್ಮ ಸ್ವಂತ ಕಲ್ಪನೆಯದೆಂದು ಗಳಗನಾಥರು ಹೇಳಿರುವರು. ಆದರೂ ಪ್ರಾಚೀನ ಪುರಾಣ–ಕಾವ್ಯ–ನಾಟಕಗಳು ಲೇಖಕರಿಗೆ ಈ ಕಥಾರಚನೆಯಲ್ಲಿ ಪ್ರೇರಣೆ ನೀಡಿದಂತೆ ಕಂಡುಬರುತ್ತದೆ. ಸಿಂಹಳದ ರಾಕ್ಷಸ ಮೇಘನಾದನಿಂದ ಪದ್ಮನಯನೆಯ ಅಪಹರಣ ಮತ್ತು ಪಂಚವರ್ಣದ ಗಿಳಿಯ ಸನ್ನಿವೇಶಗಳು ರಾಮಾಯಣದ ರಾವಣನಿಂದ ಸೀತಾಪಹರಣದ ಮತ್ತು ಮಾಯಾ ಚಿಗರೆಯ ಸನ್ನಿವೇಶಗಳನ್ನು ನೆನಪಿಗೆ ತರುತ್ತವೆ. ಅದರಂತೆ ಪುರುಷವೇಷದಲ್ಲಿರುವ ಪದ್ಮನಯನೆ ಮತ್ತು ಜೀವನಕಲೆಯರನ್ನು ಕಮಲಾಕ್ಷನು ಗುರುತಿಸದೆ ಇದ್ದರೂ "....ಸಮೀಪವಲ್ಲಿಯೇ ಆಡುತ್ತಿದ್ದ ವಿಕ್ರಮಾರ್ಕನು ಓಡುತ್ತ ಬಂದು ಕಮಲಾಕ್ಷನ ಮೇಲೆ ಬಿದ್ದನು. ಕೂಡಲೇ ಕಮಲಾಕ್ಷನು ವಿಕ್ರಮಾರ್ಕನನ್ನು ಹಿಡಿದೆತ್ತಿ ಮುದ್ದಿಡುತ್ತ, ಅವನನ್ನು ಬಿಗಿಯಾಗಿ ಅಪ್ಪಿಕೊಂಡನು"[1] ಎಂಬ ವರ್ಣನೆಯಲ್ಲಿ ಕಾಲಿದಾಸನ 'ಶಾಕುಂತಲ' ನಾಟಕದ ಪ್ರಭಾವವನ್ನು ಗುರುತಿಸಬಹುದಾಗಿದೆ. ಅದರಂತೆ ಈ ಕಾದಂಬರಿಯ ಕಥಾರಚನೆಯಲ್ಲಿ ಬಾಣಕಾದಂಬರಿಯ ಮತ್ತು ಜಾನಪದ ಕಥೆಗಳ ಪ್ರಭಾವವನ್ನು ಅಲ್ಲಲ್ಲಿ ಗುರುತಿಸಬಹುದಾಗಿದೆ.

"ಈ ಕಾದಂಬರಿಯು ಮುಖ್ಯವಾಗಿ ಶೃಂಗಾರ–ವೀರ–ಶೋಕಾದ್ಭುತ ರಸಪ್ರಧಾನವಾಗಿರುವದು" ಎಂದು ಗಳಗನಾಥರು ಪ್ರಸ್ತಾವನೆಯಲ್ಲಿ ಹೇಳಿರುವರು. ವೀರರಸಕ್ಕೆ ಇಲ್ಲಿ ಹೆಚ್ಚಿನ ಸ್ಥಾನವಿಲ್ಲ. ಶೃಂಗಾರ–ಶೋಕ–ಅದ್ಭುತಗಳು ಮಾತ್ರ ಬಂದಿವೆ. ಗಳಗನಾಥರ ಇತರ ಕಾದಂಬರಿಗಳಲ್ಲಿ ಹೆಚ್ಚಾಗಿ ಕಾಣದೊರೆಯದ ಶೃಂಗಾರವು ಇಲ್ಲಿ ಸ್ಫುಟವಾಗಿದೆ.

ಪದ್ಮನಯನೆಯನ್ನು ಕುರಿತು ಮೇಘನಾದನು, "ಕೋಮಲವಾದ ನಿನ್ನ ಚರಣಗಳು

---

1. ಗಳಗನಾಥ : ಪ್ರಬುದ್ಧ ಪದ್ಮನಯನೆ, ಪುಟ 195

ಮೊಲೆ–ಮುಡಿ–ತಿಗಗಳ ಭಾರದಿಂದ ರಕ್ತವರ್ಣವನ್ನು ಹೊಂದಿವೆ. ನಿನ್ನ ಸೂಕ್ಷ್ಮವಾದ ಕಟಿಯು ಮೊಲೆ–ಮುಡಿಗಳ ಭಾರವನ್ನು ಹೊರಲಾರದೆ ಬಾಗಿದೆ. ನಿನ್ನ ಕೆಳದುಟಿಯು ಹಲ್ಲುಗಳಿಂದ ಆಗುವ ಆಘಾತವನ್ನು ತಡೆಯದಾಗಿದೆ. ಇಲ್ಲಿಯ ವರೆಗೆ ನಿನ್ನನ್ನು ನಿಲ್ಲಗೊಟ್ಟು ಈ ಕ್ರೂರನಾದ ಮೇಘನಾದನು ಮಹಾಪರಾಧಿಯಾಗಿರುವನು. ಬಾ, ನನ್ನ ಪಾರ್ಶ್ವಭಾಗದಲ್ಲಿ ವಿಶ್ರಮಿಸು" ಎಂದು ಅವಳ ಕೈಯನ್ನು ಹಿಡಿಯಹೋಗುವನು.[1]

"....ಈ ಪ್ರಕಾರ ರಾಜಪುತ್ರಿಯು ತರತರದ ಸುಗಂಧ ತೈಲಗಳಿಂದಲೂ, ಹೂಮಾಲೆಗಳಿಂದಲೂ, ಅಮೂಲ್ಯವಾದ ಆಭರಣಗಳಿಂದಲೂ ನನ್ನನ್ನು ಅಲಂಕರಿಸಿ, ಸುಮ್ಮನೆ ತನ್ನ ಕೈಬೆರಳುಗಳನ್ನು ತಿಕ್ಕಿಕೊಳ್ಳುತ್ತ, ತಲೆಬಾಗಿ ಕಡೆಗಣ್ಣಿನ ನೋಟಗಳಿಂದ ಆಗಾಗ್ಗೆ ನನ್ನನ್ನು ನೋಡುತ್ತ ಚಿನ್ನದ ಪುತ್ಥಳಿಯಂತೆ ನನ್ನೆದುರಿಗೆ ನಿಂತುಕೊಂಡಳು. ಆಗ್ಗೆ ಅವಳ ಮುಖದಲ್ಲಿ ಬೆವರ ಹನಿಗಳು ಮಿನುಗುತ್ತಿರಲು, ಅವುಗಳ ಮಧ್ಯದಲ್ಲಿದ್ದ ಮೂಗುಬಟ್ಟು ನಕ್ಷತ್ರಮಂಡಲದ ಚಂದ್ರನಂತೆ ಹೊಳೆಯುತ್ತಿತ್ತು. ಅವಳು ಬೆವರಿನ ಹನಿಗಳನ್ನು ಒರಿಸಿಕೊಳ್ಳುವುದಕ್ಕಾಗಿ, ತರ್ಜನಿಯ ಬೆರಳನ್ನು ಮೇಲ್ದುಟಿಯ ಮೇಲೆ ಆಡಿಸಿಕೊಳ್ಳುತ್ತಿರಲು, ನಿನ್ನ ಮನಸ್ಸನ್ನು ಸ್ವಾಧೀನ ಮಾಡಿಕೊಳ್ಳದೆ ಬಿಡುವದಿಲ್ಲೆಂಬ ಪುರುಷಾರ್ಥವನ್ನು ಪ್ರೇಮಮತ್ಸರದಿಂದ ನನಗೆ ತೋರಿಸುವಳೆಂಬ ಭಾವವು ವ್ಯಕ್ತವಾಗುತ್ತಿತ್ತು. ಅವಳು ಚಾತುರ್ಯದಿಂದ ಮಾಡುವ ಅಂಗವಿಕ್ಷೇಪದಿಂದ ನನ್ನಲ್ಲಿ ಕಾಮವಿಕಾರವು ಹೆಚ್ಚಿತು".[2]

ಇಂಥ ವರ್ಣನೆಯಲ್ಲಿ ನಿಜವಾದ ಶೃಂಗಾರ ಭಾವ ಪ್ರಕಟನೆಗಿಂತ ಸಾಂಪ್ರದಾಯಿಕವಾದ ಶೃಂಗಾರ ವರ್ಣನೆಯೇ ಕಾಣುತ್ತದೆ. ಅಲ್ಲದೇ, ನವಯೌವನೆಯಾದ ಪದ್ಮನಯನೆಯ "ಕುಪ್ಪಸವನ್ನು ಒತ್ತಿ ದೃಷ್ಟಿಗೆ ಬೀಳುವ ಬಟ್ಟಕುಚ" ಗಳನ್ನೂ, ಅವಳನ್ನು "ಅತ್ಯಾದರದಿಂದ ಹಲವು ಸಾರೆ ಚುಂಬಿಸಿ ಕೃತಕೃತ್ಯನಾಗುವ" ಕಮಲಾಕ್ಷನನ್ನೂ ತರುಣ ಗಳಗನಾಥರು (ಆಗ ಅವರಿಗೆ ಸು. 28 ವರ್ಷಗಳು) ಧಾರಾಳವಾಗಿ ಈ ಕಾದಂಬರಿಯಲ್ಲಿ ಬಣ್ಣಿಸಿದಂತೆ ತಮ್ಮ ಮುಂದಿನ ಕಾದಂಬರಿಗಳಲ್ಲಿ ಬಣ್ಣಿಸಿರುವುದಿಲ್ಲ.

ಈ ಕಾದಂಬರಿಯಲ್ಲಿ ಹಲವು ಶೋಕಸನ್ನಿವೇಶಗಳು ಬಂದಿವೆ. ಮಗಳನ್ನು ಅಗಲಿದ ವೀರವರ್ಮ. ಅರಣ್ಯದಲ್ಲಿ ಭೀತಳಾದ ಪದ್ಮನಯನೆ, ಪತ್ನಿಯನ್ನು ಕಳೆದುಕೊಂಡ ಕಮಲಾಕ್ಷ, ಪತಿಯ ಮರಣದ ಸಮಾಚಾರ ಕೇಳಿದ ಪದ್ಮನಯನೆ ಇವರೆಲ್ಲ ಶೋಕಪಡುವುದನ್ನು ಗಳಗನಾಥರು ವರ್ಣಿಸಿರುವರು. ಆದರೆ ಅಡವಿಯಲ್ಲಿ ಏಕಾಕಿಯಾದ ಪದ್ಮನಯನೆಯು ದುಃಖಿಸುವ ವರ್ಣನೆಯಲ್ಲಿ ಗಾಂಭೀರ್ಯಕ್ಕೆ ಕುಂದು ಬಂದಂತೆ ಕಾಣುತ್ತದೆ. ರಾಜಕುಮಾರಿಯಾದ, ಪುರುಷನಂತೆ ಸೈನಿಕ ಆದಿಯಾಗಿ ಸರ್ವಶಿಕ್ಷಣವನ್ನು ಪಡೆದ ಪದ್ಮನಯನೆ ತೀರ ಅಪ್ರಬುದ್ಧ ಹೆಣ್ಣುಮಗಳಂತೆ "ಹಲುಬಿ ಹಂಬಲಿಸಿ ಚೀರಿ ಹಣೆಯುಪ್ಪಳಿಸಿ ಎದೆ ಬಡಕೊಂಡು"[3] ಅಳುವುದು ಸಮಂಜಸವಾಗಿ ಕಾಣುವುದಿಲ್ಲ.

ಇಂಥ ಕೆಲವು ವರ್ಣನೆಗಳಲ್ಲಿ ಗಳಗನಾಥರ ಕಲ್ಪಕತೆಗೆ ನ್ಯೂನತೆ ಬಂದಿದ್ದರೂ ಉಳಿದ ವರ್ಣನೆಗಳಲ್ಲಿ ಅವರು ತಮ್ಮ ಸ್ವೋಪಜ್ಞತೆಯನ್ನು ತೋರಿರುವರು. ಕಾದಂಬರಿಯ ಆರಂಭ

1. ಅದೇ, ಪುಟ 27
2. ಅದೇ, ಪುಟ 86
3. ಅದೇ, ಪುಟ 15

ದಲ್ಲಿ ಬಂದಿರುವ ಪ್ರಾತಃಕಾಲದ ವರ್ಣನೆ, ಕಪಿಂಜಲ ಋಷಿ ಮತ್ತು ಆತನ ಭಕ್ತರ ವರ್ಣನೆಗಳು ಪುಣ್ಯಮಯ ವಾತಾವರಣವನ್ನು ನಿರ್ಮಿಸಿದರೆ, ಯೌವನೋದಯದ ಪದ್ಮನಯನೆ–ಜೀವನ ಕಲೆಯರು, ಮೇಘನಾದನ ಮಾಯಾಮಂದಿರ, ರಮ್ಯ ಸರೋವರ, ಕಮಲಾಕ್ಷ–ಪದ್ಮನಯನೆ ಯರ ಸಮಾಗಮ, ಪಂಚವರ್ಣದ ಗಿಳಿ, ಜೀವನಕಲೆಯ ಶಯ್ಯಾಗಾರ ಮೊದಲಾದ ವರ್ಣನೆ ಗಳು ರಮ್ಯ ವಾತಾವರಣವನ್ನು ನಿರ್ಮಿಸಲು ಸಮರ್ಥವಾಗಿವೆ. ಅದರಂತೆ ಉಗ್ರರಾದ ರಾಕ್ಷಸರು, ಘೋರಾರಣ್ಯ, ಅಲ್ಲಿಯ ಭಯಂಕರ ಸರ್ಪ ಮೊದಲಾದ ಹಿಂಸ್ರ ಜೀವಿಗಳ ವರ್ಣನೆಗಳು ರುದ್ರಮನೋಹರವಾಗಿವೆ. ಇವೆಲ್ಲ ಕಾದಂಬರಿಯ ಚಿತ್ರಕ ಅಂಶಕ್ಕೆ ಪೋಷಕ ವಾಗಿ, ರಮ್ಯವಾಗಿವೆ.

ಪ್ರಾತಃಕಾಲದ ವರ್ಣನೆಯಲ್ಲಿ ಬಂದಿರುವ "ನವವಧುಗಳು ತಮ್ಮ ಪತಿಗಳ ಮಗ್ಗುಲಲ್ಲಿ ಪಕ್ಕನೆ ಎಚ್ಚತ್ತು, ನಿದ್ದೆಗಣ್ಣು ತಿಕ್ಕುತ್ತ, ತತ್ತರಿಸುತ್ತ, ಲಜ್ಜಿತರಾಗಿ ಅವಸರದಿಂದ ಹೊರಗೆ ಬರತೊಡಗಿದ್ದಾರೆ" ಎಂಬ ವರ್ಣನೆಯಲ್ಲಿ ಹೆಚ್ಚಿನ ನಾವೀನ್ಯವಿಲ್ಲವಾದರೂ, "ಸೋಮಾರಿಗಳು ಮಾತ್ರ ಮುಸುಕಿನೊಳಗಿಂದ ಹಣಿಕಿ ನೋಡಿ ನೋಡಿ, ಇನ್ನೂ ಬೆಳಗಾಗಿಲ್ಲವೆಂದು ಮತ್ತೆ ಮತ್ತೆ ಮುದುಡಿಕೊಂಡು ಬೀಳತೊಡಗಿದ್ದಾರೆ. ಕಾಗೆಗಳ ಕರ್ಕಶವಾದ ಕೂಗಿಗೂ ಅವರು ಎಚ್ಚರಿಯಲೊಲ್ಲರು" ಎಂಬ ಮಾತುಗಳಲ್ಲಿ ಗಳಗನಾಥರ ಸ್ವಂತಿಕೆಯನ್ನೂ ಕಾಣಬಹುದಾಗಿದೆ. ಅದರಂತೆ ದುಃಖಿಸುತ್ತಿದ್ದ ಪದ್ಮನಯನೆ ಮತ್ತು ಜೀವನಕಲೆಯರನ್ನು ಕಮಲಾಕ್ಷನು "ತನ್ನ ಧೋತರದ ಸೆರಿಗಿನಿಂದ ಅವರ ಕಣ್ಣುಗಳನ್ನು ಒರಿಸುತ್ತಿ"ದ್ದನೆಂಬ ವರ್ಣನೆಯಲ್ಲಿ ಪ್ರಾಪಂಚಿಕ ಗಳಗನಾಥರು ವ್ಯಕ್ತವಾಗಿದ್ದಾರೆ. ಹೀಗೆ ಗಳಗನಾಥರು ಅಲ್ಲಲ್ಲಿ ತಮ್ಮ ಸ್ವೋಪಜ್ಞತೆಯನ್ನು ತೋರಿದ್ದಾರೆ. ಇದಕ್ಕೆ ಇನ್ನೊಂದು ಉತ್ತಮ ನಿದರ್ಶನವೆಂದರೆ "ನಾನು ಕುಳಿತುಕೊಂಡಿದ್ದ ಅರಣ್ಯ ಪ್ರದೇಶವು ಉಷ್ಣಕಟಿಬಂಧದಲ್ಲಿದ್ದ ಮೂಲಕ, ಅಲ್ಲಿಯ ಫಲಯುಕ್ತ ವೃಕ್ಷಗಳು ಮುಗಿಲಿಗೆ ಮುಟ್ಟಿದ್ದವು"[1] ಎಂದು ಹೇಳುವ ಕಮಲಾಕ್ಷನ ಮಾತುಗಳಲ್ಲಿ ಗಳಗನಾಥ ಮಾಸ್ತರರು ತಮ್ಮ ಭೂಗೋಲಜ್ಞಾನವನ್ನು ಬಳಸಿಕೊಂಡಿರುವುದು ಅಸಮರ್ಪಕವೆನಿಸಿದರೂ ರಂಜಕ ವಾಗಿದೆ. ಬಹಳ ವರ್ಷಗಳ ನಂತರ ವೀರವರ್ಮನಿಗೆ ಕಪಿಂಜಲ ಋಷಿಯ ಅನುಗ್ರಹದಿಂದ ಪದ್ಮನಯನೆ ಜನಿಸಿದಾಗ, "ಆಗ ಅರಸನಿಗಾದ ಆನಂದವನ್ನು ವರ್ಣಿಸುವದು ಸುಸಾಧ್ಯವಲ್ಲ. ಬಹು ದಿವಸ ಮಕ್ಕಳು ಮಕ್ಕಳು ಎಂದು ಹಲುಬಿದವರಿಗೆ ಗಂಡಾಗಲಿ ಹೆಣ್ಣಾಗಲಿ ಸಂತತಿ ಯಾದರೆ, ಎಷ್ಟು ಸಂತೋಷವಾಗುತ್ತದೆಂಬುದನ್ನು ಬರೆದು ತಿಳಿಸಲಾಗುವದಿಲ್ಲ" ಎನ್ನುವ ಗಳಗನಾಥರ ಮಾತುಗಳಲ್ಲಿ ಅವರ ಜೀವನಾನುಭವವನ್ನೇ ಕಾಣಬಹುದಾಗಿದೆ.

ಗಳಗನಾಥರು ಕೆಲವು ಸನ್ನಿವೇಶಗಳನ್ನು ಹೃದಯಸ್ಪರ್ಶಿಯಾಗಿ, ಸಮಯೋಚಿತವಾಗಿ ಚಿತ್ರಿಸಿರುವುದು ಅವರ ಪ್ರತಿಭೆಗೆ ಸಾಕ್ಷಿ. ಐದು ವರ್ಷ ಅಗಲಿ ಹೋಗಿದ್ದ ಮಗಳನ್ನು ಕಂಡು "ಭ್ರಮಿಷ್ಟನಂತೆ ಆಚರಿಸಿದ" ವೃದ್ಧ ವೀರವರ್ಮನ ಪಿತೃವಾತ್ಸಲ್ಯ, ಗರ್ಭಿಣಿಯಾದ ಸುಕೋಮಲೆ ಅರಣ್ಯದಲ್ಲಿ ದಣಿದು ಮಲಗಿದಾಗ ಅವರ ಮೈಮೇಲೆ ತನ್ನ ಉತ್ತರೀಯವನ್ನು ಹೊದಿಸುವ ಕಮಲಾಕ್ಷನ ಮಧುರ ಅಂತಃಕರಣ, ಪತಿಯನ್ನು ಸ್ವಾಗತಿಸುವ ಮಂಜುಘೋಷೆಯ ಲಜ್ಜಾನ್ವಯ, ಕಮಲಾಕ್ಷನನ್ನು ಪೀಡಿಸಬಯಸಿದ ಜೀವನಕಲೆಯ ಪ್ರಣಯಕೋಪ, ಸತಿ ಹೋಗಲು ಸಿದ್ಧಳಾದ ಪದ್ಮನಯನೆಯನ್ನು ಕುರಿತು ನೂರೊಂದು ಪ್ರಶ್ನೆ ಕೇಳುವ ವಿಕ್ರಮಾರ್ಕನ ಬಾಲ

1. ಅದೇ, ಪುಟ 48

ಮನೋಭಾವ–ಇಂಥವುಗಳನ್ನು ಗಳಗನಾಥರು ತುಂಬ ಸಹಜ ಸುಂದರವಾಗಿಯೇ ಚಿತ್ರಿಸಿರುವರು. ಹೀಗೆ ಗಳಗನಾಥರು ತಮ್ಮ ಅನುಭವವನ್ನೂ ಜ್ಞಾನವನ್ನೂ ಬಳಸಿಕೊಂಡು 'ಪದ್ಮನಯನೆ'ಯ ರಮ್ಯ ಕಥೆಯನ್ನು ಬಣ್ಣಿಸಿದರು.

"ವಾಚನಾಭಿರುಚಿ ಇಲ್ಲದ ಜನರಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸಲಿಕ್ಕೂ, ಉದ್ಯೋಗಾತಿಶಯದಿಂದ ಶ್ರಾಂತರಾದವರಿಗೆ ವಿಶ್ರಾಂತಿಯಲ್ಲಿ ಆನಂದಗೊಳಿಸಲಿಕ್ಕೂ ಮನೋರಂಜನವಾಗಿ ನೀತಿ ಬೋಧವಾಗಲಿಕ್ಕೂ ಉತ್ತಮ ಕಾದಂಬರಿಗಳು ಬೇಕೇ ಬೇಕು" ಎಂದು ಪ್ರಸ್ತಾವನೆಯಲ್ಲಿ ತಮ್ಮ ಕಾದಂಬರಿಯ ಉದ್ದೇಶವನ್ನು ಸ್ಪಷ್ಟಪಡಿಸಿದ ಗಳಗನಾಥರು, ತಮ್ಮ ಉದ್ದೇಶ ಸಾಧನೆಯಲ್ಲಿ ಬಹುಮಟ್ಟಿನ ಯಶಸ್ಸನ್ನು ಪಡೆದರೆಂದೇ ಹೇಳಬೇಕು. ವಾಚನಾಭಿರುಚಿ ಮನರಂಜನೆಗಳೊಂದಿಗೆ ಈ ಕಾದಂಬರಿಯು ನೀತಿಬೋಧೆಗೂ ತೊಡಗಿದೆ. ಕಪಿಂಜಲನೂ, ಸುಮತಿಯೂ ವೀರವರ್ಮನಿಗೆ ಮಾಡುವ ಸದ್ಬೋಧವು ಕೆಲವು ಪುಟಗಳನ್ನೇ ವ್ಯಾಪಿಸಿದಂತೆ, ಸುಮಧ್ಯೆಯು ಪದ್ಮನಯನೆಗೆ ಮಾಡುವ ಉಪದೇಶವೂ ಸಾಕಷ್ಟು ಸುದೀರ್ಘವಾಗಿಯೇ ಇದೆ. ಇವುಗಳನ್ನು ಲೇಖಕರು 'ಸರ್ವಾಂಗಸುಂದರವಾದ ಸದುಪದೇಶ', 'ಸದ್ಬೋಧ' ಎಂದು ಕರೆದಿರುವರು. ಕಾದಂಬರಿಕಾರರು ನೇರವಾಗಿ ವಾಚಕರನ್ನು ಕುರಿತು ಮಾಡುವ ಉಪದೇಶ, ಈ ಕಾದಂಬರಿಯಲ್ಲಿ ಕಾಣುವುದಿಲ್ಲವಾದರೂ, ಕಾದಂಬರಿಯ ಪಾತ್ರಗಳ ಮುಖಾಂತರ ಮಾಡಿಸಿದ ಅನೇಕ ಸಣ್ಣ–ದೊಡ್ಡ ನೀತಿಬೋಧೆಯ ಮಾತುಗಳಿಗೆ ಕೊರತೆಯಿಲ್ಲ. ಈ ನೀತಿ ಬೋಧೆಯಲ್ಲಿ ಪುರಾಣ ಶಾಸ್ತ್ರಗಳ ಸುಪ್ರಸಿದ್ಧ ವಿಚಾರಗಳಿರುವಂತೆ ಕೆಲವು ಸಲ ಲೇಖಕರ ಸ್ವಂತ ವಿಚಾರಗಳೂ, ಅನುಭವಗಳೂ ನುಸುಳಿದಂತೆ ಕಾಣುತ್ತವೆ.

ಕಾದಂಬರಿಯ ನಿರೂಪಣಾತಂತ್ರವೆಲ್ಲ 'ಪ್ರಿಯ ವಾಚಕರನ್ನು ಕುರಿತು ಸಂಬೋಧಿಸುವ' ಹಳೆಯ ಮಾರ್ಗವೇ ಆದರೂ, ಈ ಘಟನಾಪ್ರಧಾನ ಕಾದಂಬರಿಯ ಕಥೆಯನ್ನು ಗಳಗನಾಥರು ವಾಚಕರ ಕುತೂಹಲ ಕೆರಳುವಂತೆ ಹೇಳಿರುವುದು ಮೆಚ್ಚಬೇಕಾದ ಅಂಶವಾಗಿದೆ. ಘಟನೆಗಳನ್ನು ಅನುಕ್ರಮವಾಗಿ ಅವು ನಡೆದ ಕ್ರಮದಲ್ಲಿ ಲೇಖಕರೇ ಹೇಳದೆ, ಕೆಲವು ಕಥಾಭಾಗವನ್ನು ಕೆಲವು ಪಾತ್ರಗಳು ತಮ್ಮ ಬಾಯಿಯಿಂದಲೇ ಬೇರೆ ಪಾತ್ರಕ್ಕೆ ಹೇಳಿದಂತೆ ನಿರೂಪಿಸಿರುವರು. 'ಬಾಣ ಕಾದಂಬರಿ'ಯ ಗಿಳಿಯು ತನ್ನ ಕಥೆಯನ್ನು ಹೇಳಿದಂತೆ, ಇಲ್ಲಿಯ ಕಮಲಾಕ್ಷನು ತನ್ನ ಕಥೆಯನ್ನು ಸುಮತಿಯ ಎದುರಿಗೆ ಹೇಳುವನು. ಈ ತಂತ್ರವು ಇಲ್ಲಿ ಸಫಲವಾಗಿದೆ. ಆದರೆ ಒಂದೆಡೆ ಮಾತ್ರ ಗಳಗನಾಥರು ತುಸು ಎಡವಿದ್ದಾರೆ. ತಾನೂ ಪದ್ಮನಯನೆಯೂ ಕೂಡಿ ಮೇಘನಾದನನ್ನು ಸಂಹರಿಸಿದ ಪ್ರಸಂಗವನ್ನು ವಿವರಿಸುತ್ತ ಕಮಲಾಕ್ಷನು ಸುಮತಿಗೆ ಹೇಳುತ್ತಾನೆ :

"(ಪದ್ಮನಯನೆಯು) ಅವನನ್ನು ಇರಿದು ಸಾಂಕೇತಿಕ ಶಬ್ದವನ್ನು ಉಚ್ಚರಿಸಿದಳು. ಕೂಡಲೇ ಅಲ್ಲಿಯೇ ಮರೆಗೆ ಇದ್ದ ಕಮಲಾಕ್ಷನು ಅಶ್ವಾರೂಢನಾಗಿ ಬಂದು ಪದ್ಮನಯನೆಯನ್ನು ಬೆನ್ನಿಗೆ ಹಾಕಿಕೊಂಡು ನಿಂತುಕೊಂಡನು.

ಮಿತ್ರಶ್ರೇಷ್ಠನೇ, ಅಕಸ್ಮಾತ್ತಾಗಿ ನಾನು ಬಂದದ್ದನ್ನು ನೋಡಿ ಮೇಘನಾದನು ಬೆಪ್ಪನಾದನು."[1]

---

1. ಅದೇ, ಪುಟ 92

ಇಲ್ಲಿ ಕಥೆ ಹೇಳುತ್ತಿರುವ ಕಮಲಾಕ್ಷ ಒಮ್ಮೆ 'ನಾನು' ಎಂದುಕೊಂಡರೆ, ಮತ್ತೊಮ್ಮೆ 'ಕಮಲಾಕ್ಷನು' ಎಂದು ನುಡಿದಿರುವುದು ಅಸಂಗತವಾಗಿದೆ. ಕಥಾನಿರೂಪಣೆಯ ಓಘದಲ್ಲಿ ಗಳಗನಾಥರ ಕಣ್ಣು ತಪ್ಪಿ ಉಳಿದುಕೊಂಡ ದೋಷವಿದು. ಆದರೆ ಇಂಥ ನಿದರ್ಶನಗಳು ಮತ್ತೆ ಬೇರೆಡೆ ದೊರೆಯುವುದಿಲ್ಲ.

ಇಂಥ ನ್ಯೂನತೆಗಳಿರಬಹುದೆಂಬ ಕಲ್ಪನೆ ಗಳಗನಾಥರಿಗೂ ಇತ್ತು. ಅದಕ್ಕೆ ಅವರು "ಇದು ನನ್ನ ಮೊದಲನೆಯ ಪ್ರಯತ್ನವಾದುದರಿಂದ ಇದರಲ್ಲಿ ಅಸಮಂಜಸ ವರ್ಣನೆಗಳು, ಅಪಪ್ರಯೋಗಗಳೂ, ಬೇರೆ ಕೆಲವು ದೋಷಗಳೂ ತುಂಬಿರಬಹುದು. ಆದರೆ ವಿದ್ವಜ್ಜನರು ನನ್ನ ವಿಷಯವಾಗಿ ಶಿಷ್ಯಪ್ರೇಮವನ್ನು ವಹಿಸಿ ನಿರಭಿಮಾನದಿಂದ ತಪ್ಪುಗಳನ್ನು ತಿಳಿಸಿದರೆ ಕೃತಜ್ಞನಾಗುವೆನು" ಎಂದು ಪ್ರಸ್ತಾವನೆಯಲ್ಲಿ ಬಿನ್ನವಿಸಿಕೊಂಡರು.

'ಪದ್ಮನಯನೆ' ಗಳಗನಾಥರ ಪ್ರಥಮ ಕಾದಂಬರಿ. ಕಾದಂಬರೀ ರಚನೆಯ ಅನುಭವದ ಕೊರತೆ ಗಳಗನಾಥರಿಗೆ ಇದ್ದಂತೆ, ಆ ಕಾಲಕ್ಕೆ ಕನ್ನಡ ಸಾಹಿತ್ಯದಲ್ಲಿಯೇ ಕಾದಂಬರಿಗಳ ಕೊರತೆಯಿದ್ದಿತು. ಕಾದಂಬರಿಗಳ ತಂತ್ರ–ಶೈಲಿಗಳ ಪರಿಚಯ ಕನ್ನಡ ವಾಚಕರಿಗೆ ಇರಲೇ ಇಲ್ಲವೆಂದರೆ ತಪ್ಪಾಗಲಾರದು. ಆದ್ದರಿಂದ ಗಳಗನಾಥರ ಕಾದಂಬರಿಯಲ್ಲಿಯ ದೋಷಗಳಾಗಲಿ, ನ್ಯೂನತೆಗಳಾಗಲಿ ಆ ಕಾಲದ ಕನ್ನಡ ವಾಚಕರ ಗಮನಕ್ಕೆ ಬಾರದೆ, ರಮ್ಯತೆಯೇ ಕಾದಂಬರಿಯ ಪ್ರಮುಖ ಅಂಶವೆಂದು ಗ್ರಹಿಸಿದ ವಾಚಕರು 'ಪದ್ಮನಯನೆ'ಯನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿದರು. ಸಾಮಾನ್ಯ ವಾಚಕರ ವಿಚಾರವಿರಲಿ, ವಿದ್ಯಾವರ್ಧಕ ಸಂಘದಂಥ ಸಾಹಿತ್ಯಿಕ ಸಂಸ್ಥೆಯ ಪಂಡಿತರೂ ಈ ಕಾದಂಬರಿಯನ್ನು ಮೆಚ್ಚಿ ಇದಕ್ಕೆ ಪಾರಿತೋಷಕವನ್ನು ಕೊಟ್ಟರೆಂಬುದು, ಆ ಕಾಲದ ಅಭಿರುಚಿಯ ಸೂಚಕವಾಗಿದೆ. 'ಪ್ರಬುದ್ಧ ಪದ್ಮನಯನೆ' ಇಂದಿನ ವಾಚಕರಿಗೆ ಅಥವಾ ವಿಮರ್ಶಕರಿಗೆ ಅಪ್ರಬುದ್ಧವಾಗಿ ಕಂಡರೂ, ಆ ಕಾಲಕ್ಕೆ ಅದು ಸಮಯೋಚಿತವೇ ಆಗಿತ್ತೆಂದು ಹೇಳಬೇಕು.

'ಪ್ರಬುದ್ಧ ಪದ್ಮನಯನೆ'ಯನ್ನು ಕುರಿತು ಡಾ. ಹಾವನೂರ ಅವರು "ಕನ್ನಡ ಕಾದಂಬರಿ ಕಲೆಯು ಮುಂದಡಿ ಇಟ್ಟಿದ್ದರ ಕುರುಹೆಂದರೆ ಈ ಕಾದಂಬರಿ"[1] ಎಂದಿರುವರು. ಒಟ್ಟಿನಲ್ಲಿ ಗಳಗನಾಥರ ಈ ಪ್ರಥಮ ಸ್ವತಂತ್ರ ಕೃತಿಯು ಕನ್ನಡ ಕಾದಂಬರಿಯ ಇತಿಹಾಸದಲ್ಲಿ ಒಂದು ಮೈಲುಗಲ್ಲಾಗಿ ತನ್ನ ಮಹತ್ತ್ವವನ್ನು ಪಡೆದಿದೆ ಎಂಬುದರಲ್ಲಿ ಸಂದೇಹವಿಲ್ಲ.

ಗಳಗನಾಥರ ಸ್ವತಂತ್ರ ಕಾದಂಬರಿಗಳಲ್ಲಿ 'ಪದ್ಮನಯನಾ' ಒಂದು ವಿಶಿಷ್ಟ ಕೃತಿಯಾದರೆ, ಉಳಿದ ಐದು ಕೃತಿಗಳು ಐತಿಹಾಸಿಕ ಕಾದಂಬರಿಗಳೇ ಆಗಿವೆ. ಅವುಗಳಲ್ಲಿ ಒಂದು ರಜಪೂತ ಮತ್ತು ಇನ್ನೊಂದು ಮರಾಠಾ ಇತಿಹಾಸಕ್ಕೆ ಸಂಬಂಧಿಸಿದವುಗಳಾದರೆ, 'ಕುಮುದಿನಿ', 'ಮಾಧವ ಕರುಣಾವಿಲಾಸ' ಮತ್ತು 'ದುರ್ಗದ ಬಿಚ್ಚುಗತ್ತಿ' ಇವು ಕನ್ನಡಿಗರ ಇತಿಹಾಸಕ್ಕೆ ಸಂಬಂಧಿಸಿದ ಕಾದಂಬರಿಗಳು. 'ಕುಮುದಿನಿ'ಯು ಮೊದಲೆರಡು ವರ್ಷ 'ಸದ್ಬೋಧ ಚಂದ್ರಿಕೆ'ಯಲ್ಲಿ ಧಾರಾವಾಹಿಯಾಗಿ ಬಂದು, 1913ರಲ್ಲಿ ಗ್ರಂಥರೂಪದಲ್ಲಿ ಪ್ರಕಟವಾಯಿತು. ಇದು ಕನ್ನಡದ ಪ್ರಥಮ ಸ್ವತಂತ್ರ ಐತಿಹಾಸಿಕ ಕಾದಂಬರಿ ಎಂಬ ಪ್ರಶಂಸೆಗೂ ಪಾತ್ರವಾಗಿದೆ.

---

1. ಶ್ರೀನಿವಾಸ ಹಾವನೂರ : ಹೊಸಗನ್ನಡ ಸಾಹಿತ್ಯದ ಅರುಣೋದಯ, ಪುಟ 550

"ಇವರ (ಗಳಗನಾಥರ) 'ಕುಮುದಿನಿ'ಯನ್ನು ಪ್ರಾಯಶಃ ಆಧುನಿಕ ಕನ್ನಡದಲ್ಲಿ ಪ್ರಥಮ ಐತಿಹಾಸಿಕ ಕಾದಂಬರಿಯೆಂದರೆ ತಪ್ಪಾಗಲಾರದು"[1] ಮತ್ತು "ಕನ್ನಡದಲ್ಲಿ ಪ್ರಕಟವಾಗಿರುವ ಐತಿಹಾಸಿಕ ಕಾದಂಬರಿಗಳಲ್ಲಿ ಶ್ರೀಮಾನ್ ಗಳಗನಾಥರು ಬರೆದಿರುವ 'ಕುಮುದಿನಿ ಅಥವಾ ಬಾಲಕ್ಕೆ ಬಡಿದಾಟ' ಎಂಬುದೇ ಮೊದಲನೆಯದು; 'ಯದುಮಹಾರಾಜ' ಎರಡನೆಯದು ಎಂದು ಹೇಳಬಹುದು"[2] ಎಂಬ ಅಭಿಪ್ರಾಯಗಳನ್ನು ಒಪ್ಪದೆ ಇರಲಿಕ್ಕೆ ಸಬಲವಾದ ಕಾರಣಗಳಿಲ್ಲ.

ಡಾ. ಶ್ರೀನಿವಾಸ ಹಾವನೂರ ಅವರು ಮಾತ್ರ ಕೆಂಪುನಾರಾಯಣನ 'ಮುದ್ರಾ ಮಂಜೂಷ'ವನ್ನು "ಹೊಸಗನ್ನಡದ ಪ್ರಥಮ ಸ್ವತಂತ್ರ ಐತಿಹಾಸಿಕ ಕಾದಂಬರಿಯೆಂದು ವಿಶೇಷಿಸತಕ್ಕದ್ದು"[3] ಎಂದಿರುವರಾದರೂ, 'ಮುದ್ರಾಮಂಜೂಷ'ವನ್ನು ಆಧುನಿಕ ಕಾದಂಬರಿ ಎಂದು ಕರೆಯುವುದು ಅಷ್ಟು ಸಮಂಜಸವಾಗಲಾರದು. ಆದ್ದರಿಂದ ಗಳಗನಾಥರ ಪ್ರಥಮ ಸ್ವತಂತ್ರ ಐತಿಹಾಸಿಕ ಕಾದಂಬರಿ 'ಕುಮುದಿನಿ'ಯು ಕನ್ನಡದಲ್ಲಿಯೇ ಅಂಥ ಪ್ರಥಮ ಕೃತಿಯೂ ಆಗಿದೆ.

ಗಳಗನಾಥರು **'ಕುಮುದಿನಿ'**ಯನ್ನು 'ಸದ್ಬೋಧ ಚಂದ್ರಿಕೆ'ಯಲ್ಲಿ ಮೊದಲು ಅಳು ಕುತ್ತಲೇ ಆರಂಭಿಸಿದರು. ಅವರ ಅಳುಕಿಗೆ ಕಾರಣವನ್ನು ಅವರೇ ತಿಳಿಸಿರುವರು. "ಕನ್ನಡ ದಲ್ಲಿ ಐತಿಹಾಸಿಕ ಸಾಧನಗಳು ಕಡಿಮೆ. ಲೇಖಕನಿಗೆ ಇಂಥ ಹೊಸ ಕಾದಂಬರಿಗಳನ್ನು ಬರೆದು ಅನುಭವವಿಲ್ಲ. ಮೇಲಾಗಿ ಮನರಂಜನಕ್ಕೆ ವಿಶೇಷವಾಗಿ ಮೆಚ್ಚಿದ ಕನ್ನಡ ಸಮಾಜಕ್ಕೆ ಕಾಲ್ಪನಿಕ ಕಾದಂಬರಿಗಳಷ್ಟು ಐತಿಹಾಸಿಕ ಕಾದಂಬರಿಗಳು ಸೇರವು. ಈ ಕೊರತೆಗಳನ್ನು ಮನಸ್ಸಿನಲ್ಲಿ ತಂದು, ಇವುಗಳಿಂದ ವಿಶೇಷ ಬಾಧೆಯು ತಟ್ಟಬಾರದೆಂಬ ಪಡಿಕಟ್ಟಿಗಾಗಿ ಈ ಕಾದಂಬರಿಯನ್ನು ಮೊದಲು ಬರೆದು ನೋಡಿರುತ್ತದೆ"[4] ಎಂದು ಗಳಗನಾಥರು ಹೇಳುವ ಕಾರಣಗಳೆಲ್ಲ ನಿಜವೇ ಆಗಿವೆ.

ಐತಿಹಾಸಿಕ ಕಾದಂಬರಿಗಳನ್ನು ಬರೆಯಲಿಕ್ಕೆ ಬೇಕಾಗುವ ಸಾಮಗ್ರಿಯನ್ನು ಒದಗಿಸುವ ಕನ್ನಡ ಗ್ರಂಥಗಳು ಆಗ ವಿಶೇಷವಾಗಿರಲಿಲ್ಲ. ಮರಾಠಿಯಲ್ಲಿದ್ದವುಗಳು ಮರಾಠಾ ಮತ್ತು ರಾಜಸ್ಥಾನದ ಇತಿಹಾಸವನ್ನು ತಿಳಿಸುವಂಥವುಗಳು. ಇಂಗ್ಲಿಷ ಬಾರದ ಗಳಗನಾಥರು ರಾಬರ್ಟ ಸಿವೆಲ್ ಅವರ ವಿಜಯನಗರ ಇತಿಹಾಸದ ಗ್ರಂಥದ ಪ್ರಯೋಜನವನ್ನು ಪಡೆಯಲು ಅಸಮರ್ಥರಾದರು. ಆದರೂ ಅವರ 'ಕುಮುದಿನಿ' ಕಥಾವಸ್ತುವಿನ ಮೂಲವು, ಸಿವೆಲ್ ಅವರ 'ದಿ ಫರಗಾಟನ್ ಎಂಪಾಯರ್, ವಿಜಯನಗರ' ಎಂಬ ಐತಿಹಾಸಿಕ ಗ್ರಂಥದಲ್ಲಿಯೇ ಇದೆ. ಅದರಲ್ಲೂ 17ನೆಯ ಪ್ರಕರಣದಲ್ಲಿ ಬರುವ 'The story of Barradas' ಎಂಬುದು ಕಾದಂಬರಿಯ ಸಂಪೂರ್ಣ ಹಂದರವನ್ನು ಒದಗಿಸಿದೆ.[5]

---

1. ಗುರುನಾಥ ಜೋಶಿ : 'ಕನ್ನಡ ಐತಿಹಾಸಿಕ ಕಾದಂಬರಿಗಳು,' ಕನ್ನಡ ನುಡಿ, 1959, ಪುಟ 16
2. ಕೆರೂರ ವಾಸುದೇವಾಚಾರ್ಯ : ಯದುಮಹಾರಾಜ, ಹಿನ್ನುಡಿ
3. ಶ್ರೀನಿವಾಸ ಹಾವನೂರ : ಹೊಸಗನ್ನಡ ಸಾಹಿತ್ಯದ ಅರುಣೋದಯ, ಪುಟ 532
4. ಗಳಗನಾಥ : ಕುಮುದಿನಿ, ಪುಟ 3
5. ಗಳಗನಾಥರು ಇಂಗ್ಲಿಷ ಬಲ್ಲವರಿಂದ ಈ ಕಥೆಯನ್ನು ತಿಳಿದುಕೊಂಡಿರಬಹುದು. ಅಥವಾ ಸಿವೆಲ್ ಅವರ ಗ್ರಂಥವನ್ನೇ ಅವಲಂಬಿಸಿ ಕನ್ನಡದಲ್ಲಿ ಬರೆದ ಶ್ರೀ ಹಾಲಭಾವಿ ಅವರ 'ವಿಜಯ ನಗರದ ಸಾಮ್ರಾಜ್ಯ' (1902)ವನ್ನು ಅವರು ನೋಡಿರಬಹುದು.

ವಿಜಯನಗರವು 1565ರಲ್ಲಿ ನಾಶವಾದ ಬಳಿಕ ಆ ಅರಸು ಮನೆತನದವರು ಚಂದ್ರಗಿರಿಯಲ್ಲಿ ಕೆಲಕಾಲ ರಾಜ್ಯವನ್ನು ಆಳಿದರು. ಅವರಲ್ಲಿ 1586ರಿಂದ 1614ರ ವರೆಗೆ 1ನೆಯ ವೆಂಕಟರಾಯನೆಂಬವನು ಆಳಿದನು. ಆತನ ಮರಣಾನಂತರ, ರಾಜ್ಯಕ್ಕಾಗಿ ವಿಪ್ಲವ ನಡೆಯಿತೆಂದು ಇತಿಹಾಸಕಾರರು ತಿಳಿಸಿರುವರಾದರೂ ಅದರ ವಿವರಗಳು ಲಭ್ಯವಾಗಿಲ್ಲ. ಆದರೆ 1616ನೆಯ ಇಸ್ವಿಯ ಡಿಸೆಂಬರ ತಿಂಗಳ 12ನೆಯ ತಾರೀಖಿನಂದು ಕೋಚೀನ ಪಟ್ಟಣದಿಂದ ಮ್ಯಾನ್ಯುಎಲ್ ಬರಾಡಾಸ್ ಎಂಬ ಪೋರ್ತುಗೀಜನು ಈ ಬಗ್ಗೆ ಬರೆದ ಪತ್ರವು ಲಿಸ್‌ಬನ್ನಿನ ಹಳೆಯ ಪತ್ರಾಗಾರದಲ್ಲಿ ದೊರೆತಿದ್ದು, ಅದರ ಮುಖ್ಯಾಂಶಗಳನ್ನು ಸಿವೆಲ್‌ರು ಆಂಗ್ಲ ಭಾಷೆಗೆ ಅನುವಾದಿಸಿ ತಮ್ಮ ಗ್ರಂಥದಲ್ಲಿ ಕೊಟ್ಟಿರುವರು. ಈ ಪತ್ರದ ಎಲ್ಲ ವಿವರಗಳನ್ನೂ ನಿಜವೆಂದು ಒಪ್ಪಬಹುದೇ ಎಂಬ ಸಂದೇಹವನ್ನೂ ಅವರು ವ್ಯಕ್ತಪಡಿಸಿರುವರು. ಆದರೆ ಗಳಗನಾಥರ 'ಕುಮುದಿನಿ' ಮಾತ್ರ ಈ ಪತ್ರದ ಕಥೆಯನ್ನೇ ಸಂಪೂರ್ಣವಾಗಿ ಬಳಸಿಕೊಂಡಿದೆ. ಆ ಪತ್ರದ ಮುಖ್ಯಾಂಶಗಳು ಹೀಗಿವೆ:

ಮರಣೋನ್ಮುಖನಾದ ಅಪುತ್ರಕ ವೆಂಕಟಪತಿರಾಯನು ತನ್ನ ಸಹೋದರನ ಮಗ ಚಿಕ್ಕರಾಯನನ್ನು ಪಟ್ಟಕ್ಕೆ ವಾರಸುದಾರನೆಂದು ಘೋಷಿಸಿ, ಅವನಿಗೆ ತನ್ನ ರಾಜಮುದ್ರೆಯನ್ನು ಒಪ್ಪಿಸಬಯಸಿದ. ರಾಣಿ ಬಾಯಮ್ಮ ತನಗೆ ಮಕ್ಕಳಾಗದೆ ಇದ್ದಾಗ, ಬ್ರಾಹ್ಮಣದಾಸಿಯೊಬ್ಬಳ ಕೂಸನ್ನೇ ತಾನು ಹೆತ್ತುದಾಗಿ ಹೇಳಿ, ಅದನ್ನೇ ರಾಜಕುಮಾರನಂತೆ ಬೆಳೆಸಿದ್ದಳು. ಜನರಿಗೆ ಇದು ಗೊತ್ತಿರದಿದ್ದರೂ, ಬಾಯಮ್ಮನ ಕಾರಸ್ಥಾನವನ್ನು ಅರಿತ ರಾಜನು ನಿಜವಾಗಿ ವಿಜಯನಗರದ ರಾಯರ ವಂಶದವರೇ ಪಟ್ಟವೇರಬೇಕೆಂಬ ಆಕಾಂಕ್ಷೆಯಿಂದ ಚಿಕ್ಕರಾಯನನ್ನು ಪಟ್ಟಕ್ಕಾಗಿ ಆರಿಸಿದ. ಚಿಕ್ಕರಾಯನಿಗೆ ರಾಜಮುದ್ರೆಯನ್ನು ಸರದಾರರ ಎದುರಿನಲ್ಲಿ ಒಪ್ಪಿಸಿದಾಗ ಆತ ರಾಜನ ಕಾಲುಗಳನ್ನು ಹಿಡಿದುಕೊಂಡು ಕಣ್ಣೀರು ಸುರಿಸುತ್ತ ತನಗೆ ರಾಜಪದವಿ ಬೇಡವೆಂದು ತಿಳಿಸಿದರೂ, ಕೊನೆಗೆ ಒತ್ತಾಯಕ್ಕೆ ಮಣಿದು ಒಪ್ಪಿಕೊಂಡನು. ರಾಜನು ತನ್ನೆಲ್ಲ ಅಮೂಲ್ಯ ಸಂಪತ್ತನ್ನು ಆತನಿಗೆ ಒಪ್ಪಿಸಿದ. ಕೆಲ ಸರದಾರರು ಇದನ್ನು ಮೆಚ್ಚಲಿಲ್ಲ.

ಮೂರು ದಿನಗಳ ನಂತರ 67 ವರ್ಷದ ಮುಪ್ಪಿನ ರಾಜ ತೀರಿಕೊಂಡ ಮೇಲೆ ಚಿಕ್ಕರಾಯ ಪಟ್ಟವೇರಿದ. ತನಗೆ ಪ್ರತಿಕೂಲರಾದ ಕೆಲವು ಸರದಾರರನ್ನು ಆತ ರಾಜಧಾನಿಯಿಂದ ಹೊರ ಹಾಕಿದ. ತಿಮ್ಮನಾಯಕ, ಮಕರರಾಯ ಮತ್ತು ರಾಣಿ ಬಾಯಮ್ಮನ ತಂದೆಯಾದ ಜಗರಾಯ ಇವರನ್ನು ಬಿಟ್ಟು ಉಳಿದವರು ಹೊಸ ರಾಜನಿಗೆ ನಿಷ್ಠೆಯನ್ನು ವ್ಯಕ್ತಪಡಿಸಿದರು. ಜಗರಾಯನು ಕೆಲವು ಸರದಾರರ ಸಹಾಯದಿಂದ ಕುತಂತ್ರವನ್ನು ನಡೆಸಿ, ರಾಜನನ್ನು ಸೆರೆಯಲ್ಲಿರಿಸಿ, ಬಾಯಮ್ಮನ ಮಗನನ್ನು ಪಟ್ಟಕ್ಕೆ ಕುಳ್ಳಿರಿಸಿ, ಅಪಾರ ಸಂಪತ್ತನ್ನು ಕೈವಶ ಮಾಡಿಕೊಂಡ. ಆಗ ಎಚ್ಚಮನಾಯಕನನ್ನು ಬಿಟ್ಟು ಉಳಿದೆಲ್ಲ ದಂಡನಾಯಕರೂ ಜಗರಾಯನ ಪಕ್ಷಕ್ಕೆ ಸೇರಿದರು.

ಜಗರಾಯನು ಎಚ್ಚಮನನ್ನೂ ತನ್ನ ಪಕ್ಷಕ್ಕೆ ಸೆಳೆದುಕೊಳ್ಳಲು ಯತ್ನಿಸಿ ಅನೇಕ ಕೊಡುಗೆಗಳನ್ನು ಮುಂದೆ ಮಾಡಿದ. ಆದರೆ ಯಾರ ಮಗನೆಂದೂ ಯಾವ ಜಾತಿಯವನೆಂದೂ ಗೊತ್ತಿಲ್ಲದ ಯಾವನೋ ಒಬ್ಬನನ್ನು ತಾನು ರಾಜನೆಂದು ಒಪ್ಪಿಕೊಳ್ಳಲಾರೆನೆಂದು ಎಚ್ಚಮನು ತಿಳಿಸಿ, ಜಗರಾಯನನ್ನು ಎದುರಿಸಲು ಯುದ್ಧ ಸಿದ್ಧತೆಗೆ ತೊಡಗಿದನು. ಅದರಂತೆ

ಸೆರೆಮನೆಯಲ್ಲಿದ್ದ ರಾಜನನ್ನೂ ಅವನ ಹೆಂಡತಿ–ಮಕ್ಕಳನ್ನೂ ಸೆರೆಯಿಂದ ಬಿಡಿಸಲು ಎಚ್ಚಮನು ಅನೇಕ ಪ್ರಯತ್ನಗಳನ್ನು ಮಾಡಿದನು; ಅಗಸನ ಸಹಾಯದಿಂದ ಒಬ್ಬ ರಾಜ ಕುಮಾರನನ್ನು ಸೆರೆಯಿಂದ ಬಿಡಿಸಲು ಸಮರ್ಥನೂ ಆದನು. ಆಗ ಕೆಲವು ಸೇನಾಪತಿಗಳು ಎಚ್ಚಮನ ಪಕ್ಷವನ್ನು ಸೇರಿಕೊಂಡರು. ಆದರೆ ರಾಜನನ್ನು ಬಿಡಿಸಲು ಮಾಡಿದ ಎಚ್ಚಮನ ಬೇರೆ ಎರಡು ಪ್ರಯತ್ನಗಳು–ನೆಲಮಾರ್ಗ ಕೊರೆಯುವುದು ಮತ್ತು ಓಬಲೇಶ್ವರನೆಂಬವನಿಗೆ ವಿಪುಲವಾದ ಧನವನ್ನಿತ್ತು ಫಿತೂರಿ ಮಾಡಿಕೊಳ್ಳುವುದು–ವಿಫಲವಾಹುವು. ಓಬಲೇಶ್ವರನೂ ಆತನ ಐದು ನೂರು ಜನರೂ ಇದರಲ್ಲಿ ಪ್ರಾಣವನ್ನು ಕಳೆದುಕೊಂಡರು.

ಎಚ್ಚಮನ ಈ ಪ್ರಯತ್ನಗಳಿಂದ ಕೋಪಗೊಂಡ ಜಗರಾಯನು ಸೆರೆಯಲ್ಲಿದ್ದ ರಾಜ ಪರಿವಾರವನ್ನೆಲ್ಲ ಕೊಂದುಬಿಡುವಂತೆ ಚಿನ್ನಓಬಲನೆಂಬವನಿಗೆ ನಿಯಮಿಸಿದ. ರಾಜ ತಾನು ನಿರಪರಾಧಿಯೆಂದು ವಾದಿಸಿದರೂ ಓಬಲ ಕೇಳಲಿಲ್ಲ. ಕೊನೆಗೆ ಆತನ ಹೇಳಿಕೆಯ ಪ್ರಕಾರ ಚಿಕ್ಕರಾಯನು ತನ್ನ ಹೆಂಡತಿ–ಮಕ್ಕಳನ್ನು ತನ್ನ ಕೈಯಿಂದಲೇ ಕೊಂದು ತಾನೂ ಆತ್ಮಘಾತ ಮಾಡಿಕೊಂಡನು. ಈ ಸಮಾಚಾರದಿಂದ ಎಚ್ಚಮ ತಪ್ತನಾದ. ಜಗರಾಯನ ಈ ಕ್ರೂರತನ ವನ್ನು ಕಂಡು ಕೆಲವು ಸರದಾರರು ಅವನನ್ನು ತ್ಯಜಿಸಿ ಎಚ್ಚಮನನ್ನು ಕೂಡಿಕೊಂಡರು. ಎಚ್ಚಮನು ತನ್ನ 20 ಸಾವಿರ ಸೈನಿಕರಿಂದಲೇ ಜಗರಾಯನ 60 ಸಾವಿರದ ಸೈನ್ಯವನ್ನು ಎದುರಿಸಿ, ಸೋಲಿಸಿ, ಚಿಕ್ಕರಾಯನ ಮಗನಿಗೆ ಪಟ್ಟಗಟ್ಟಿದ. ಸೋತ ಜಗರಾಯ ಅಡವಿ ಸೇರಿದರೂ ಮುಂದೆ ಎರಡು ವರ್ಷಗಳ ವರೆಗೆ ಕಾಳಗಗಳನ್ನು ನಡೆಸಿದ. ಈ ಅಂತರಿಕ ವಿಪ್ಲವದ ಪರಿಣಾಮವಾಗಿ ಪೋರ್ತುಗೀಜರು ಮೈಲಾಪುರ ಕೋಟೆಯನ್ನು ಸ್ವತಂತ್ರಗೊಳಿಸಿ ಕೊಂಡರು............

'ಕುಮುದಿನಿ'ಯಲ್ಲಿ ಗಳಗನಾಥರು ಎಚ್ಚಮನನ್ನು ಕಥಾನಾಯಕನನ್ನಾಗಿ ಮಾಡಿಕೊಂಡು, ಅವನಿಗೆ ತಕ್ಕ ಕುಮುದಿನಿಯೊಬ್ಬಳನ್ನು ಸೃಷ್ಟಿಸಿ ಅವಳಿಗೆ ನಾಯಿಕೆಯ ಪಟ್ಟವನ್ನು ಕಟ್ಟಿರು ವರಾದರೂ, ಬರಾಡಾಸನ ವರದಿಯನ್ನು ಯಥಾವತ್ತಾಗಿ ಬಳಸಿಕೊಂಡೇ ಚಂದ್ರಗಿರಿಯ ರಾಯರ ಕಥೆಯನ್ನು ಹೇಳಿರುವರು. ಆದರೆ ಕೇವಲ ಹತ್ತು ಪುಟಗಳಲ್ಲಿ ಬಂದಿರುವ ಈ ಕಂಕಾಲಸ್ವರೂಪದ ಇತಿಹಾಸಕ್ಕೆ ತಮ್ಮ ಕಲ್ಪಕತೆಯಿಂದ ರಕ್ತಮಾಂಸಗಳನ್ನು ಒಂದಿಸಿ, ಗಳಗ ನಾಥರು ಒಂದು ಒಳ್ಳೆಯ ಕಾದಂಬರಿಯನ್ನಾಗಿ ಪರಿವರ್ತಿಸಿರುವುದು ಅವರ ಪ್ರತಿಭೆಗೆ ಸಾಕ್ಷಿ ಯಾಗಿದೆ. ಇದು ಗಳಗನಾಥರ ಪ್ರಥಮ ಸ್ವತಂತ್ರ ಐತಿಹಾಸಿಕ ಕಾದಂಬರಿಯಾದರೂ, ಆಗಲೇ ಆಪಟೆಯವರ ಎರಡು[1] ಐತಿಹಾಸಿಕ ಕಾದಂಬರಿಗಳನ್ನು ಅನುವಾದಿಸಿದ ಗಳಗನಾಥರು ತಮ್ಮ ಅನುಭವದ ಸರಿಯಾದ ಉಪಯೋಗವನ್ನು ಮಾಡಿಕೊಂಡರೆಂಬುದಕ್ಕೆ ತುಂಬ ವಾಚನೀಯ ವಾದ ಈ ಕಾದಂಬರಿಯೇ ಸಾಕ್ಷಿಯಾಗಿದೆ.

ಕಾದಂಬರಿಯ ನಾಲ್ಕನೆಯ ಮತ್ತು ಎಂಟನೆಯ ಪ್ರಕರಣಗಳನ್ನು ಬಿಟ್ಟು ಉಳಿದ ಭಾಗದಲ್ಲಿ ಗಳಗನಾಥರ ಕಲ್ಪಕಶಕ್ತಿ ಹೆಚ್ಚಾಗಿ ಕೆಲಸಮಾಡಿದೆ. ಮೊದಲಿನ ಮೂರು ಪ್ರಕರಣ ಗಳಲ್ಲಿ ಎಚ್ಚಮನಾಯಕನು ಹಾಳು ಹಂಪೆಯನ್ನು ಕಂಡು ಉದ್ವೇಗಗೊಂಡುದನ್ನೂ, ಚಂಪೆ ಯನ್ನು (ಕುಮುದಿನಿ) ಆದಿಪಂಪಾಕ್ಷೇತ್ರದ ವಿರೂಪಾಕ್ಷ ದೇವಾಲಯದಲ್ಲಿ ಕಂಡು ಮೋಹ ಗೊಂಡುದನ್ನೂ ನಿರೂಪಿಸಿರುವರು. ಮುಂದೆ ಚಂದ್ರಗಿರಿಗೆ ಹೋಗಿ, ಚಿಕ್ಕರಾಯನನ್ನು

1. ಕಮಲ ಕುಮಾರಿ (1910) ಮತ್ತು ವೈಭವ (1912)

ಪಟ್ಟಕ್ಕೆ ಕೂಡ್ರಿಸಿ, ಎಚ್ಚಮನಾಯಕನು ಚಂಪೆಯನ್ನು ಕಾಣುವ ತವಕದಿಂದ ಮರಳುವನು. ಆತ ಚಂದ್ರಗಿರಿಯಲ್ಲಿ ಇಲ್ಲದ ಸಮಯವನ್ನು ಸಾಧಿಸಿ ಜಗರಾಯನು ಕುತಂತ್ರಗಳನ್ನು ಮಾಡಿದನು. ಆ ಸಮಾಚಾರ ಎಚ್ಚಮನ ಲಗ್ನದ ದಿನವೇ ಆತನಿಗೆ ತಿಳಿಯಿತು. ಅದೇ ದಿನ ಆತ ಚಂದ್ರಗಿರಿಗೆ ಹೊರಟ. ನವವಧು ಕುಮುದಿನಿ ಕೂಡ ಗಂಡುವೇಷಧರಿಸಿ ಎಚ್ಚಮನ ಜೊತೆಗೆ ಚಂದ್ರಗಿರಿಗೆ ಹೊರಟಳು. ಅವಳು ಲಗ್ನದ ದಿನವೇ ಪತಿಗೆ ಒದಗಿದ ಒಂದು ವಿಪತ್ತಿನಿಂದ ಆತನನ್ನು ಪಾರು ಮಾಡಿದಳಲ್ಲದೆ, ಮುಂದೆ ಕೂಡ ಅನೇಕ ವಿಧವಾಗಿ ಆತನಿಗೆ ಸಹಾಯಕಳಾದಳು. ಸೆರೆಮನೆಯಲ್ಲಿಂದ ಚಿಕ್ಕರಾಯನ ಮಗನನ್ನು ಪಾರುಮಾಡಲು ಅಗಸಗಿತ್ತಿಯ ವೇಷದಿಂದ ಅವಳೇ ಹೋದಳು. ದಾರಿಯಲ್ಲಿ ಅವಳನ್ನು ತಡೆದ ದುರಗಪ್ಪ ನಾಯಕನನ್ನು ಧೈರ್ಯದಿಂದಲೇ ಎದುರಿಸಿದಳು; ಮಾತಿನಿಂದಲೇ ಅವನನ್ನು ಸೋಲಿಸಿ ತನ್ನ ಕಾರ್ಯವನ್ನು ಸಾಧಿಸಿಕೊಂಡಳು. ಜಗರಾಯನ ರಾಜಸಭೆಯಲ್ಲಿ ಪೌರುಷವನ್ನು ತೋರಿ, ರಾಜಕುಮಾರನ ಜೊತೆ ಪಾರಾಗಿ ಬಂದಳು. ಹೀಗೆ ಈ ಕಾಲ್ಪನಿಕ ಪಾತ್ರಕ್ಕೆ ಗಳಗನಾಥರು ಸೌಂದರ್ಯ, ಸಾಹಸ, ಚಾತುರ್ಯಗಳ ಬಣ್ಣಗಳನ್ನು ಬಳಿದಿರುವರು. ಇಷ್ಟೆಲ್ಲ ಧೈರ್ಯ–ಶೌರ್ಯಗಳನ್ನು ತೋರಿದ ಕುಮುದಿನಿ ಕಾದಂಬರಿಯ ಕೊನೆಯ 'ಶೃಂಗಾರ ಸಾಗರ', 'ಸಂಶಯ ಪಿಶಾಚ' ಮತ್ತು 'ಬಾಲಕ್ಕೆ ಬಡಿದಾಟ' ಎಂಬ ಪ್ರಕರಣಗಳಲ್ಲಿ ಮಾತ್ರ ಅತ್ಯಂತ ಮುಗ್ಧ ತರುಣಿಯಾಗಿ ಪತಿವ್ರತೆಯಾಗಿ ಚಿತ್ರಿತಳಾಗಿರುವಳು. ಕಾದಂಬರಿಯ ನಾಯಕಿಯಾದ ಅವಳನ್ನು ಗಳಗನಾಥರು ಹೆಚ್ಚು ಕಾಳಜಿಯಿಂದಲೇ ಚಿತ್ರಿಸಿರುವರು. ಆದರೂ "ಹಲವಾರು ಸದ್ಗುಣಗಳ ಖಣಿಯಾದ ಅವಳ ಪಾತ್ರಸೃಷ್ಟಿ ಕನ್ನಡ ಕಾದಂಬರೀ ಪ್ರಪಂಚದಲ್ಲಿ ಚಿರಕಾಲ ಉಳಿಯುವಂತಹದಾಗಿದೆ"[1] ಎಂಬ ಪ್ರಶಂಸೆ ತುಸು ಹೆಚ್ಚೇ ಆಯಿತೆಂದು ಹೇಳಬೇಕು.

ಎಚ್ಚಮನಾಯಕ ಐತಿಹಾಸಿಕ ಪುರುಷನಾದರೂ, ಗಳಗನಾಥರು ಈ ಪಾತ್ರಕ್ಕೆ ಒಂದು ವ್ಯಕ್ತಿತ್ವವನ್ನು ತಂದುಕೊಡುವಲ್ಲಿ ಎಷ್ಟೋ ಮಟ್ಟಿಗೆ ಯಶಸ್ಸನ್ನು ಪಡೆದಿರುವರು. ತನ್ನ ತಂದೆಯ ಕೊನೆಯ ಆದೇಶದಂತೆ ಆತ ವಿಜಯನಗರ ರಾಜರ ಸೇವೆಯನ್ನು ಮಾಡಬೇಕೆಂದು ನಿರ್ಧರಿಸಿದ್ದ. ಆದರೆ ಹಾಳು ಹಂಪೆಯನ್ನು ನೋಡಿ ಉದ್ವಿಗ್ನಗೊಂಡ ಅವನು ನಿರಾಶನಾಗಿ ದೇವನನ್ನೇ ಹಳಿದು, ವಿರೂಪಾಕ್ಷನೇ ಮುಸಲ್ಮಾನರಿಗೆ ಸಹಾಯಕನಾಗಿರುವಾಗ, ಕನ್ನಡಿಗರ ರಾಜ್ಯವನ್ನು ರಕ್ಷಿಸಲು ತನ್ನಿಂದ ಸಾಧ್ಯವಿಲ್ಲವೆಂದು ನಿರ್ಧರಿಸಿ ಶಸ್ತ್ರತ್ಯಾಗಕ್ಕೆ ಸಿದ್ಧನಾದನು. ಭಾವಾವೇಶಗೊಂಡ ಈ ಚಂಚಲ ಸ್ವಭಾವದ ತರುಣನನ್ನು ಗುಡಿಯ ಅರ್ಚಕನು ಸಮಾಧಾನಗೊಳಿಸುವನು. ಅನಂತರ ಚಂಪೆಯನ್ನು ಕಂಡು ಮೋಹಿಸಿದ ಎಚ್ಚಮ ರಾಜಕಾರ್ಯವನ್ನು ಕಡೆಗಣಿಸಿ ಎಲ್ಲ ಅನರ್ಥಕ್ಕೆ ಕಾರಣನಾಗುವನು. ಅದಕ್ಕೇ ಲೇಖಕರು "ನಾಯಕನು ಶೂರನಿದ್ದನು, ಧೀರನಿದ್ದನು, ಸುವಿಚಾರಿಯಿದ್ದನು, ಸುಶೀಲನಿದ್ದನು; ಆದರೆ ಒಮ್ಮೊಮ್ಮೆ ಅವನ ಮನಸ್ಸಿನ ಚಾಂಚಲ್ಯದ ದೋಷದಿಂದ ಪಶ್ಚಾತ್ತಾಪಕ್ಕೆ ಗುರಿಯಾಗಬೇಕಾಗುತ್ತಿತ್ತು"[2] ಎಂದು ಹೇಳುವರು.

ಜಗರಾಯನು ಚಿಕ್ಕರಾಯನನ್ನೂ ಉಳಿದವರನ್ನೂ ಸೆರೆಮನೆಯಲ್ಲಿ ಕೊಲ್ಲಿಸಿದ ಸಮಾಚಾರ ತಿಳಿದು ಎಚ್ಚಮನು ಅತಿ ಕ್ರೋಧಗೊಂಡು ಜಗರಾಯನ ಮೇಲೆ ಕೂಡಲೇ ಏರಿಹೋದ

1. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 31
2. ಗಳಗನಾಥ : ಕುಮುದಿನಿ, ಪುಟ 50

ನೆಂದು ಬರಾಡಾಸನು ಹೇಳಿದ್ದಾನೆ. ಆದರೆ ಕಾದಂಬರಿಯಲ್ಲಿಯ ಎಚ್ಚಮನು ಅತೀವ ದುಃಖಿತನಾಗಿ "ಜಡಮೂಢನಂತೆ ಒಂದೇ ಸವನೇ ಕಣ್ಣೀರು ಸುರಿಸಹತ್ತಿದನು. ಆತನಿಗೆ ಅನ್ನನೀರುಗಳ ಪರಿವೆಯಿಲ್ಲದಾಯಿತು. ಸ್ವೀಕೃತಕಾರ್ಯದ ಮೇಲಿನ ಆತನ ನಿಷ್ಠೆಯು ಸಮೂಲ ನಷ್ಟವಾದಂತಾಯಿತು".[1] ತನ್ನ ಒಡೆಯನ ಮರಣಕ್ಕೆ ತಾನೇ ಕಾರಣನಾದೆನೆಂದು ಆತ ಅತೀವ ಪಶ್ಚಾತ್ತಾಪದಿಂದ ಹೃದ್ರೋಗವನ್ನೇ ತಂದುಕೊಂಡನು. ಇದು ವೀರನಿಗೆ ಶೋಭಿಸುವ ರೀತಿಯಲ್ಲ. ಆದರೆ ಅವನ ಈ ಸ್ಥಿತಿಯನ್ನು ಬಣ್ಣಿಸಿದ ಗಳಗನಾಥರು "ಶಾಬಾಸ್, ನಾಯಕಾ, ನೀನೇ ಧನ್ಯನು, ನೀನೇ ಸ್ವಾಮಿನಿಷ್ಠನು" ಎಂದು ಹೊಗಳಿ ರುವರು.

ಈ ರೀತಿ ಅವನನ್ನು ಚಿತ್ರಿಸುವಲ್ಲಿ ಗಳಗನಾಥರ ಉದ್ದೇಶವೇ ಬೇರೆಯಾಗಿದೆ. ಆತ ಇಂಥ ಅಸಹಾಯ ಸ್ಥಿತಿಯಲ್ಲಿರುವಾಗ ಕುಮುದಿನಿ, ಚಾಂದಖಾನ ಆದಿಯಾಗಿ ಯಾರು ಎಷ್ಟೇ ಹೇಳಿದರೂ, ಸಮಾಧಾನಹೊಂದದ ಎಚ್ಚಮನಾಯಕನ ಉದ್ಧಾರಕ್ಕಾಗಿ, ಅವನಿಗೆ ಮೊದಲು ಆಶೀರ್ವದಿಸಿದ ಋಷಿವರ್ಯನನ್ನೇ ಗಳಗನಾಥರಿಗೆ ತರಬೇಕಾಗಿದೆ. ಋಷಿ ವರ್ಯನ ದರ್ಶನ, ಉಪದೇಶ ಮತ್ತು ಆಶೀರ್ವಾದಗಳಿಂದ ಎಚ್ಚಮ ಒಮ್ಮೆಲೇ ಹೊಸ ಮನುಷ್ಯನಾಗಿ, ಕೊಡಲೇ ಕಾರ್ಯನಿರತನಾದ. ಅಷ್ಟೇ ಅಲ್ಲದೆ ಋಷಿಯ ಅನುಗ್ರಹದಿಂದ ಆತನಿಗೆ ಯುದ್ಧದಲ್ಲಿ ಜಯವೂ ದೊರೆಯಿತು. ರಾಜಕುಮಾರನ ಪಟ್ಟಾಭಿಷೇಕದ ಜೊತೆಗೆ ಎಚ್ಚಮನ ನಿಜವಾದ ವಿವಾಹ ಸಮಾರಂಭವೂ (ಮತ್ತೊಮ್ಮೆ) ನಡೆಯಿತು. ಪತಿಕಾರ್ಯ ಕೈಗೂಡುವ ವರೆಗೆ "ವಿಷಯ ಸುಖದ ನೆರಳಿಗೆ ಹೋಗಲಿಕ್ಕಿಲ್ಲೆಂದು" ಪ್ರತಿಜ್ಞೆಗೈದಿದ್ದ ಕುಮುದಿನಿ ಅಂದು ನಿಜವಾದ ಸತಿಯಾದಳು.

ಎಚ್ಚಮನ ಚಂಚಲತೆಯನ್ನೂ ಸಂಶಯ ಸ್ವಭಾವವನ್ನೂ ಚಾಂದಖಾನನ ಸತ್ಯ ಸ್ನೇಹ ವನ್ನೂ ಕುಮುದಿನಿಯ ಪಾತಿವ್ರತ್ಯವನ್ನೂ ಬಣ್ಣಿಸಲಿಕ್ಕೆ ಗಳಗನಾಥರು 'ಬಾಲಕ್ಕೆ ಬಡಿದಾಟ' ಎಂಬ ಪ್ರಕರಣವನ್ನೇ ಸೃಷ್ಟಿಸಿರುವರು. ತನ್ನ ಜೀವದ ಗೆಳೆಯನಾದ ಚಾಂದಖಾನನಿಗೆ ಕುಮುದಿನಿಯೂ ಸ್ವತಃ ತಾನೇ ಕುಸುರೆಳ್ಳು ಕೊಟ್ಟಿದ್ದನ್ನು ನೋಡಿದ ಎಚ್ಚಮನು ಸಂಶಯ ಗ್ರಸ್ತನಾಗಿ ಕೊರಗತೊಡಗುವನು. ಅದರಿಂದ ಕುಮುದಿನಿಯೂ ಅಸುಖಿಯಾದಳು. ಆಗ ಪುನಃ ಋಷಿವರ್ಯನೇ ಬರಬೇಕಾಯಿತು. ಚಾಂದಖಾನನು ತನ್ನ ಸಚ್ಚಾರಿತ್ರ್ಯದ ಸಾಕ್ಷಿಯಾದ ಬಾದಶಹನ ಸನದನ್ನು ತೋರಿಸಿದಾಗ "ಅದನ್ನು ಓದಿ ನಾಯಕನ ಸೊಂಡಿಯು ಒಣಗಿತು".[2] ಕೊನೆಗೆ ಋಷೀಶ್ವರನು ಎಚ್ಚಮನನ್ನು ಕುರಿತು "ಎಲೈ ವಿಕಾರವಶನಾದ ಎಚ್ಚಮನಾಯಕಾ, ಹೀಗೆ ತಟ್ಟನೆ ಪ್ರತಿಜ್ಞೆ ಮಾಡಿಬಿಡುವ ಚಾಳಿಯು ಒಳ್ಳೆಯದಲ್ಲ" ಎಂದು ಉಪದೇಶ ಗೈಯುವನು. ಹೀಗೆ ಗಳಗನಾಥರ ಎಚ್ಚಮನಾಯಕ ಶೌರ್ಯ–ಸಾಹಸಗಳ, ಸ್ವಾಮಿನಿಷ್ಠೆಯ ಜೊತೆಗೆ ಚಂಚಲತೆಯ ದುರ್ಗುಣಕ್ಕೂ ಪಕ್ಕಾದವನಾಗಿದ್ದಾನೆ. ಪೋರ್ತುಗೀಜ ನಾಗರಿಕನಾದ ಬರಾಡಾಸ ಕೂಡ ಎಚ್ಚಮನ ಸ್ವಾಮಿನಿಷ್ಠೆಯನ್ನೂ ಪರಾಕ್ರಮವನ್ನೂ ಬಣ್ಣಿಸಿರುವನು. ಗಳಗ ನಾಥರು ಅಂಥ ಸತ್ತ್ವಶಾಲಿಯಾದ ಐತಿಹಾಸಿಕ ಪಾತ್ರಕ್ಕೆ ಯೌವನ ಸಹಜವಾದ ರೂಪ ಮೋಹವನ್ನೂ ಚಂಚಲತೆಯನ್ನೂ ಆರೋಪಿಸಿ, ಅದಕ್ಕೆ ಸಹಜತೆಯ ಜೀವಕಳೆಯನ್ನು

1. ಅದೇ, ಪುಟ 156
2. ಅದೇ, ಪುಟ 193

ತಂದಿರುವರು. "ಎಚ್ಚಮನಾಯಕನ ಪಾತ್ರವು ಅಮರವಾಗಿದೆ. ಆತನ ಸ್ವಾಮಿನಿಷ್ಠೆಯು ರಜಪೂತ ಚರಿತ್ರೆಯಲ್ಲಿನ ಮಹಾವ್ಯಕ್ತಿಯಾದ ದುರ್ಗಾದಾಸನ ನೆನಪನ್ನು ತರುತ್ತದೆ"[1] ಎಂದು ಹೇಳಿದುದನ್ನು ಒಟ್ಟಿನಲ್ಲಿ ಒಪ್ಪಬಹುದು. ಮುಂದೆ ಇದೇ ಎಚ್ಚಮನ ಕಥೆಯು ಕೆಲವು ನಾಟಕಗಳಿಗೂ ವಸ್ತುವಾಯಿತು.

ಗಳಗನಾಥರ ಎಲ್ಲ ಕಾದಂಬರಿಗಳಲ್ಲಿರುವಂತೆಯೇ 'ಕುಮುದಿನಿ'ಯ ಋಷಿವರ್ಯನೂ ಸರ್ವಥಾ ಸಮರ್ಥನು. ಅವನ ಸತ್ಸಂಗದಿಂದಲೇ ಕುಮುದಿನಿಯು ಧನ್ಯಳಾದಳು. ಮುಸಲ್ಮಾನರಿಗೆ ಬಲಿಯಾಗಬಹುದಾದ ಅವಳನ್ನು ಸಂರಕ್ಷಿಸಿದ ಆತ ಅವಳನ್ನು ಸತ್ಪಾತ್ರದಲ್ಲಿ ಧಾರೆಯೆರೆದು ಕೊಡುವನು. ಆತ ನವದಂಪತಿಗಳಿಗೆ ಭವಿಷ್ಯದ ಸೂಚನೆಯನ್ನೂ ಕೊಡುವನು. ಅವರ ಕಷ್ಟ ಕಾಲದಲ್ಲಿ ಎಲ್ಲಿಂದಲೋ ಬಂದು ದರ್ಶನಭಾಗ್ಯವನ್ನಿತ್ತು ಅವರನ್ನು ಉದ್ಧರಿಸುವನು. ಅಷ್ಟೇ ಅಲ್ಲದೆ ಆತ ತ್ರಿಕಾಲಜ್ಞಾನಿಯೂ ಆಹುದು. ಕೊನೆಯ ಪ್ರಕರಣದಲ್ಲಿ ಆತ ಎಚ್ಚಮನಾಯಕನಿಗೆ, "ಈ ಪುಣ್ಯಭೂಮಿಯನ್ನು ಉದ್ಧರಿಸುವದಕ್ಕಾಗಿ ಆಂಗ್ಲಭೂಮಿಯಿಂದ ಯೋಗ್ಯರಾದ ಗುರುಗಳು ಬಂದು, ಸರಾಸರಿ ಇನ್ನೂರು ವರ್ಷಗಳ ಮೇಲೆ ಭರತಭೂಮಿಯ ಆಧಿಪತ್ಯವನ್ನು ಸಂಪಾದಿಸುವರು.... ವ್ಯಾಪಾರಕ್ಕಾಗಿ ಬಂದ ಬುದ್ಧಿಶಾಲಿಗಳಾದ ಆಂಗ್ಲರು ಇನ್ನು ಕೆಲವು ವರ್ಷಗಳ ಮೇಲೆ ಈ ಚಂದ್ರಗಿರಿಯ ಅರಸನಿಂದಲೇ ಚನ್ನಪಟ್ಟಣ (ಮದ್ರಾಸ)ವನ್ನು ಕೊಂಡುಕೊಂಡು ತಮ್ಮ ರಾಜ್ಯಸಂಪಾದನೆಯ ಕಾರ್ಯವನ್ನು ಆರಂಭಿಸುವರು" ಎಂದು ಭವಿಷ್ಯವಾಣಿಯನ್ನೂ ನುಡಿಯುವನು ! ಗಳಗನಾಥರು ಇಂಥ ಭವಿಷ್ಯವಾಣಿಯನ್ನು ಮುಂದೆ ತಮ್ಮ 'ಮಾಧವ ಕರುಣಾವಿಲಾಸ'ದಲ್ಲಿಯೂ ತಂದಿರುವರು.

ಗಳಗನಾಥರ ಕಾಲ್ಪನಿಕ ಪಾತ್ರಗಳಲ್ಲಿ ಚಾಂದಖಾನನ ಪಾತ್ರವೂ ವಿಶಿಷ್ಟವಾಗಿದೆ. ಇಲ್ಲಿ ಆಪಟೆಯವರ ಮತ್ತು ಗಳಗನಾಥರ ದೃಷ್ಟಿಕೋನದ ವ್ಯತ್ಯಾಸ ಕಂಡು ಬರುತ್ತದೆ. ಗಳಗನಾಥರು ಮುಸಲ್ಮಾನ ದ್ವೇಷವನ್ನು ತಮ್ಮ ಸ್ವತಂತ್ರ ಕಾದಂಬರಿಗಳಲ್ಲಿ ಚಿತ್ರಿಸಿಲ್ಲ. ಹಿಂದೂ ಅರಸರಿಗೆ ಅನೇಕ ಮುಸಲ್ಮಾನರು ಸಹಾಯಕರೂ ಸ್ನೇಹಿತರೂ ಆಗಿರುವಂತೆ ಗಳಗನಾಥರು ಚಿತ್ರಿಸಿರುವರು. ಅಂಥವರಲ್ಲಿ ಚಾಂದಖಾನನೊಬ್ಬ. ವಿಜಾಪುರ ಬಾದಶಹನ ಸರದಾರನಾದ ಈತ ಎಚ್ಚಮನನ್ನು ಬಂಧಿಸಲಿಕ್ಕೆ ಬಂದು, ಅವನ ಶೌರ್ಯ ಔದಾರ್ಯಗಳನ್ನು ಮೆಚ್ಚಿ ಆತನ ಸ್ನೇಹಿತನಾದ. ಕುಮುದಿನಿಯನ್ನು ಪಾರುಮಾಡುವಲ್ಲಿ ಸಹಾಯ ಮಾಡಿದ್ದ ಚಾಂದಖಾನ, ತನ್ನ ಬಾದಶಹನನ್ನು ಬಿಟ್ಟು ಬಂದು ಎಚ್ಚಮನ ಸೇವೆಯಲ್ಲಿಯೇ ನಿಂತು ಜಗರಾಯನ ಪರಾಭವಕ್ಕೆ ಸಹಾಯ ಮಾಡುವನು. ಆದರೆ ಆತ "ಬಾದಶಹರ ಅನ್ನದಿಂದ ದೊಡ್ಡವನಾದ ನಾನು, ಎಂದೂ ಬಾದಶಹರ ಮೇಲೆ ಶಸ್ತ್ರವನ್ನು ಹಿಡಿಯಲಿಕ್ಕಿಲ್ಲ"[2] ಎನ್ನುವ ಕೃತಜ್ಞನೂ ಆಗಿರುವನು. ಎಚ್ಚಮನು ತನ್ನ ಎಲ್ಲ ಸರದಾರರಿಗಿಂತಲೂ ಇವನಿಗೇ ಹೆಚ್ಚಿನ ಮನ್ನಣೆ ಕೊಡುವದನ್ನು ನೋಡಿದರೆ ಮಾತ್ರ, ಈ ಪಾತ್ರಕ್ಕೆ ಅನಾವಶ್ಯಕವಾದ ಹೆಚ್ಚಿನ ಸ್ಥಾನವನ್ನು ಕೊಡಲಾಗಿದೆ ಎಂದು ತೋರುತ್ತದೆ. ಅದರಂತೆ ಎಚ್ಚಮನ ಒಬ್ಬ ಹಿಂದೂ ಸರದಾರನೂ ಕೂಡ ಈ ಬಗ್ಗೆ ದ್ವೇಷ–ಮತ್ಸರ ತಾಳಲಿಲ್ಲವೆಂದರೆ ಅಚ್ಚರಿಯೇ ಸರಿ. ಗಳಗನಾಥರು ಪಾತ್ರಗಳನ್ನು ತಮಗೆ ಹೇಗೆ ಬೇಕೋ ಹಾಗೆ ರೂಪಿ-

1. ಗುರುನಾಥ ಜೋಶಿ: ಕನ್ನಡ ಐತಿಹಾಸಿಕ ಕಾದಂಬರಿಗಳು, ಕನ್ನಡ ನುಡಿ, 22 (1959), ಪುಟ 41
2. ಗಳಗನಾಥ : ಕುಮುದಿನಿ, ಪುಟ 111

ಸುತ್ತಾರೆ ಎನ್ನುವುದಕ್ಕೆ ಈ ಚಾಂದಖಾನನ ಪಾತ್ರವೂ ನಿದರ್ಶನವಾಗಿದೆ. ಅದರಂತೆ ದುರಗಪ್ಪನ ಪಾತ್ರವೂ ಗಳಗನಾಥರ ಇದೇ ಧೋರಣೆಯನ್ನು ಸೂಚಿಸುತ್ತದೆ.

ಉಳಿದ ಐತಿಹಾಸಿಕ ವ್ಯಕ್ತಿಗಳಾದ ಜಗರಾಯ, ಚಿಕ್ಕರಾಯ, ಚಿನ್ನಓಬಲ ಮೊದಲಾದ ವರು ತಕ್ಕಮಟ್ಟಿಗೆ ಚಿತ್ರಿರಾಗಿದ್ದಾರೆ. ಚಿಕ್ಕರಾಯ (ಬರಾಡಾಸನ ಪ್ರಕಾರ ಕೂಡ) ಕಣ್ಣೀರು ಸುರಿಸುವ ವ್ಯಕ್ತಿಯೇ ಆಗಿದ್ದರೂ, ವಿಜಯನಗರದ ರಾಜಮನೆತನದಲ್ಲಿ ಜನಿಸಿದವನಂತೆ ತುಸುವಾದರೂ ಕ್ಷಾತ್ರವನ್ನು ಆತ ತೋರುವುದಿಲ್ಲ. ಗಳಗನಾಥರು ಈ ಪಾತ್ರಕ್ಕೆ ಇನ್ನೂ ತುಸು ಜೀವವನ್ನು ತುಂಬಬೇಕಾಗಿತ್ತೆಂದು ತೋರುತ್ತದೆ.

ಗಳಗನಾಥರು ಈ ಕಾದಂಬರಿಯಲ್ಲಿ ಪಡೆದ ಯಶಸ್ಸಿಗೆ ಪಾತ್ರಚಿತ್ರಣಕ್ಕಿಂತ ಕಥಾ ನಿರೂಪಣವೇ ಮುಖ್ಯ ಕಾರಣವೆನ್ನಬಹುದು. ಕೆಲವು ಸನ್ನಿವೇಶಗಳನ್ನು ಗಳಗನಾಥರು ಶ್ರೇಷ್ಠ ಕಾದಂಬರಿಕಾರರಂತೆ ಚಿತ್ರಿಸಿರುವರು. ಎಚ್ಚಮನಾಯಕನು ಮಂತ್ರಾಕ್ಷತೆಯ ಗಂಟನ್ನು ಕಳೆದುಕೊಂಡು ಅದನ್ನು ಹುಡುಕಲಿಕ್ಕೆ ಮಾಡಿದ ಯತ್ನ, ಆಗಿನ ಆತನ ಮನೋಭಾವ ಗಳನ್ನು ಗಳಗನಾಥರು ತುಂಬ ಚೆನ್ನಾಗಿ ಚಿತ್ರಿಸಿರುವರು.

ಬ್ರಾಹ್ಮಣನು ಕೊಟ್ಟಿದ್ದ ಫಲಮಂತ್ರಾಕ್ಷತೆಗಳನ್ನು ಹಾದಿಯಲ್ಲಿ ಯಾರೋ ಕಸಿದು ಕೊಂಡಂತೆ ಕನಸು ಕಂಡ ಎಚ್ಚಮ ಗಾಬರಿಗೊಂಡು ಎಚ್ಚರವಾದ. ಆಗ ಆತನಿಗೆ ತಾನು ನಿಜವಾಗಿಯೂ ಮಂತ್ರಾಕ್ಷತೆಯ ಗಂಟನ್ನು ಕಳೆದುಕೊಂಡದ್ದು ನೆನಪಾಗಿ ಭಾವಿಕನಾದ ಆತ ಬಹಳ ಅಸ್ವಸ್ಥನಾದ; ಕೂಡಲೇ ಸೇವಕನೊಡನೆ ಆದಿಪಂಪಾಕ್ಷೇತ್ರಕ್ಕೆ ಹೊರಟುಬಿಟ್ಟ. ಅಂದು ಸಾಯಂಕಾಲ ಕೈಕಾಲು ತೊಳೆದುಕೊಳ್ಳಲೆಂದು ಪಂಪಾಸರೋವರಕ್ಕೆ ಹೋದಾಗ, ಅಲ್ಲಿಯ ಗಿಡವೊಂದಕ್ಕೆ ಫಲಮಂತ್ರಾಕ್ಷತೆಯ ಅರಿವೆಯ ಗಂಟನ್ನು ಆತ ತೂಗುಹಾಕಿದ್ದ. ಕಾತರದಿಂದ ಧಾವಿಸಿಹೋಗಿ ನೋಡಿದರೆ ಅಲ್ಲಿ ಆ ಗಂಟು ಇರಲೇ ಇಲ್ಲ. "ನಾಯಕನ ಎದೆ ಧಸ್ಸೆಂದಿತು, ಮೋರೆಯು ಬಾಡಿತು, ಕಣ್ಣಿಗೆ ಕತ್ತಲೆಯು ಮುಸುಕಿದಂತಾಯಿತು. ನಾಯಕನು ಆ ಕೊಂಬೆ ಯನ್ನು ಈ ಕೊಂಬೆಯನ್ನು, ಆ ಗಿಡವನ್ನು ಈ ಗಿಡವನ್ನು ನೋಡಿ ನೋಡಿ ಬೇಸತ್ತು ಉಸುರ್ಗರೆದು ಸರೋವರದ ಪಾವಟಿಗೆಯ ಮೇಲೆ ಯೋಚಿಸುತ್ತ ಕುಳಿತುಕೊಂಡನು. ತಾನು ಗಂಟನ್ನು ಮರೆತು ಹೋದದ್ದು ನಿಶ್ಚಯವೆಂದು ಮನಸ್ಸಿಗೆ ಹೊಳೆಯುತ್ತಿದ್ದರೂ, ಅದನ್ನು ತನ್ನ ರಾಹುಟಿಗೆ ಒಯ್ದು ಇಟ್ಟಿರಬಹುದೋ ಎಂದು ಆತ ಶಂಕಿಸಹತ್ತಿದನು. ಬರಬರುತ್ತ ಅವನ ಸಂಶಯವು ಸಂಭವನೀಯವಾಗಿ ತೋರಹತ್ತಿತು. ಬರುವಾಗ ರಾಹುಟಿ ಯಲ್ಲಿ ಹುಡುಕದೆ ಬಂದದ್ದಕ್ಕಾಗಿ ಆತನು ತನ್ನನ್ನು ಹಳಿದುಕೊಂಡನು. ಗಂಟು ಸರೋವರದಲ್ಲಿ ಬಿದ್ದಿರಬಹುದೆಂದು ಭಾವಿಸಿ ಒಂದೆರಡು ಪಾವಟಿಗೆಗಳನ್ನು ನೀರಲ್ಲಿ ಇಳಿದು ಕೈಯಾಡಿಸಿ ನೋಡಿದನು. ಆದರೆ ಗಂಟು ಕೈಗೆ ಹತ್ತಲಿಲ್ಲ...."[1]

ಎಚ್ಚಮ ತನ್ನ ಸೇವಕನನ್ನು ರಾಹುಟಿಗೆ ಗಂಟು ಹುಡುಕುವದಕ್ಕಾಗಿ ಕಳಿಸಿದ. ಆದರೂ ಆತನಿಗೆ ಚಿಂತೆ ತಪ್ಪಲಿಲ್ಲ. "ದೇವರ ದರ್ಶನಕ್ಕೆ ಹೋಗುವಾಗ ಗಂಟನ್ನು ಸಂಗಡ ಒಯ್ದು ಅಲ್ಲಿಯೇ ಬಿಟ್ಟೆನೋ ನೋಡಬೇಕೆಂದು ಆತನು ಮೇಲಕ್ಕೆದ್ದನು."[2] ಗುಡಿಯಲ್ಲಿ

1. ಅದೇ, ಪುಟ 17
2. ಅದೇ, ಪುಟ 18

ಅರ್ಚಕನನ್ನೂ ಚಂಪೆಯನ್ನೂ ಕಂಡು ದಿಗ್ಭ್ರಮೆಗೊಂಡ ಎಚ್ಚಮ ಫಲಮಂತ್ರಾಕ್ಷತೆಯ ವಿಷಯವನ್ನೇ ಕ್ಷಣಕಾಲ ಮರೆತನು. ಆದರೆ,

"ಆಶ್ಚರ್ಯದ ಭರವು ಕುಗ್ಗಿದ ಮೇಲೆ ಮತ್ತೆ ಅದು ನೆನಪಾಗಲು, ನಾಯಕನು ಬಿಟ್ಟಿದ್ದು ಬಿಟ್ಟು ಗುಡಿಯ ತುಂಬ ಅದನ್ನು ಹುಡುಕಿ ನಿರಾಶೆ ಪಟ್ಟನು. ಇನ್ನೊಮ್ಮೆ ಸರೋವರದ ತೀರದಲ್ಲಿಯೇ ನೆಟ್ಟಗೆ ಹುಡುಕಬೇಕೆಂದು ಆತನು ಸರೋವರದ ಪಾವಟಿಗೆಗಳಲ್ಲೆಲ್ಲ ಸೂಕ್ಷ್ಮ ದೃಷ್ಟಿಯಿಂದ ಹುಡುಕುತ್ತ ಒಂದೊಂದೇ ಪಾವಟಿಗೆಯನ್ನು ಇಳಿಯಹತ್ತಿದನು........ ತಾನು ಶಿವಾಲಯದಲ್ಲಿ ಒಂದು ಮಾಡದಲ್ಲಿ ಗಂಟು ಇಟ್ಟು ದೇವರನ್ನು ನಮಸ್ಕರಿಸಿದಂತೆ ಅವನಿಗೆ ನೆನಪಾದದ್ದರಿಂದ ಅವನು ಸರಕ್ಕನೆ ಹಿಂದಿರುಗಿ ಮತ್ತೆ ಗುಡಿಯನ್ನು ಹೊಕ್ಕನು."[1]

ಕೊನೆಗೂ ಅವನ ಯತ್ನಕ್ಕೆ ಯಶ ದೊರೆಯಲಿಲ್ಲ. ಭಾವಿಕನಾದ ಎಚ್ಚಮನಿಗೆ ಫಲಮಂತ್ರಾಕ್ಷತೆಗಳು ಕೈಬಿಟ್ಟಿದ್ದರಿಂದ ಬಹಳೇ ಕೆಡಕೆನಿಸಿತು. ಆತ ಮರುದಿನ ಮುಂಜಾನೆ ಕೂಡ ಗಂಟನ್ನು ಹುಡುಕಿ ನಿರಾಶೆಪಟ್ಟನು. ಆದರೆ ಮರುದಿನ ರಾತ್ರಿ ತನ್ನ ಫಲಮಂತ್ರಾಕ್ಷತೆಯ ಗಂಟು ಚಂಪೆಯ ಕೈಗೆ ಸಿಕ್ಕ ಸಮಾಚಾರವನ್ನು ತಿಳಿದು ಅವನಿಗೆ ಒಂದು ರೀತಿಯ ಸಮಾಧಾನವೇ ಆಯಿತು.

ಹೀಗೆ ಈ ಒಂದು ಚಿಕ್ಕ ಸನ್ನಿವೇಶವನ್ನು ಗಳಗನಾಥರು ಅತ್ಯಂತ ಸಹಜಸುಂದರವಾಗಿ ಬಣ್ಣಿಸುವುದರ ಜೊತೆಗೇ ಎಚ್ಚಮನ ಮಾನಸಿಕ ತೊಳಲಾಟವನ್ನೂ ಚಿತ್ರಿಸಿರುವರು. ಅಲ್ಲದೆ ಈ ಮಂತ್ರಾಕ್ಷತೆಯ ಗಂಟು ಮೊದಲು ಕಳೆಯುವುದೂ, ಅದು ಚಂಪೆಯ ಕೈಸೇರುವುದೂ, ಋಷಿವರ್ಯನ ಮಾತಿನಿಂದ ಅದು ಎಚ್ಚಮನಿಗೆ ತಿಳಿಯುವುದೂ ಕಾದಂಬರಿಯಲ್ಲಿ ಸಾಂಕೇತಿಕ ಮಹತ್ತ್ವವನ್ನು ಪಡೆದಿದೆ. ಎಲ್ಲ ಪಾತ್ರಗಳನ್ನೂ ಹೀಗೆ ಸುಂದರ ಸನ್ನಿವೇಶಗಳ ಮುಖಾಂತರ ಪೋಷಿಸುತ್ತ ಹೋಗಿದ್ದರೆ ಗಳಗನಾಥರ 'ಕುಮುದಿನಿ' ನಿಜವಾಗಿಯೂ ಶ್ರೇಷ್ಠ ಕಾದಂಬರಿಯಾಗುತ್ತಿತ್ತು.

ಕಾದಂಬರಿಯ 'ಅಂತಕನ ಕೋಲಾಹಲ'ವೆಂಬ ಪ್ರಕರಣವೂ ಇದೇ ರೀತಿ ಸಹಜ ನಿರೂಪಣೆಯಿಂದ ಓದುಗರ ಹೃದಯವನ್ನು ಮಿಡಿಯುತ್ತದೆ. ಅಲ್ಲಿ ಚಿನ್ನಓಬಲನು ಜಗರಾಯನ ಅಪ್ಪಣೆಯ ಪ್ರಕಾರ ಚಿಕ್ಕರಾಯನ ಪರಿವಾರದ ಸಂಹಾರಕ್ಕೆ ಕಾರಣನಾಗುವನು. ಈ ಘಟನೆಯನ್ನು ಬರಾಡಾಸನೂ ವಿವರವಾಗಿಯೇ ಹೇಳಿರುವನು. ಆದರೆ ಅವನದು ವರದಿ ಎನಿಸಿದರೆ, ಗಳಗನಾಥರದು ರಸವತ್ತಾದ ಕರುಳು ಮಿಡಿಯುವ ಚಿತ್ರಣವಾಗಿದೆ.

ಅಂದು ಮುಂಜಾನೆ ರಂಗರಾಯ (ಚಿಕ್ಕರಾಯ) ತನ್ನ ದುರವಸ್ಥೆಯನ್ನು ಕುರಿತು ಚಿಂತಿಸುತ್ತ ಕುಳಿತಿದ್ದನು. ಹೆಂಡತಿ, ನಾಲ್ಕುಜನ ಮಕ್ಕಳು, ಹಿರಿಯ ಮಗನ ಹೆಂಡತಿ ಎಲ್ಲರೂ ಚಿಂತೆ–ನಿರುತ್ಸಾಹಗಳಿಂದಲೇ ಇದ್ದರು. ರಂಗರಾಯನ ಚಿಕ್ಕ ಮಗಳು, ಎರಡು ವರ್ಷದ ನಾಗಲಾಂಬಿಕೆ ಮಾತ್ರ ಏನೂ ಅರಿಯದೆ ಉಲ್ಲಾಸದಿಂದಲೇ ನಗುತ್ತ ಕೆಲೆಯುತ್ತ ಆಟವಾಡುತ್ತಿದ್ದಳು. "ನಮ್ಮ ನಾಗಲಾಂಬಿಕೆಯು ಅಲ್ಪಕಾಲವೇ ಆಗಲೊಲ್ಲದೇಕೆ. ಆ ರಾಜ ಕುಟುಂಬದ ಚಿಂತೆಯನ್ನು ದೂರ ಮಾಡಿ ಆನಂದವನ್ನುಂಟು ಮಾಡಿದಳು"[2] ಎಂದು ಹೇಳುತ್ತ

1. ಅದೇ, ಪುಟ 20
2. ಅದೇ, ಪುಟ 149

ಗಳಗನಾಥರು ಆ ಮಗುವಿನ ಬಾಲಲೀಲೆಗಳನ್ನು ತುಸು ವಿಸ್ತಾರವಾಗಿಯೇ ಬಣ್ಣಿಸಿರುವುದು ಉಚಿತವೇ ಆಗಿದೆ. ಈ ವರ್ಣನೆ ತುಂಬ ವಾಸ್ತವಪೂರ್ಣವಾಗಿರುವುದಲ್ಲದೆ,[1] ಮುಂದೆ ಬರಲಿರುವ ಕ್ರೂರ, ನಿರ್ದಯ ಘಟನೆಯ ತೀವ್ರತೆಯನ್ನು ಹೆಚ್ಚು ಮಾಡಲಿಕ್ಕೆ ವೈದೃಶ್ಯ-ದಿಂದ ಈ ವಿನೋದಪೂರ್ಣ, ವಾತ್ಸಲ್ಯಪೂರ್ಣ ರಸಚಿತ್ರವು ಕಾರಣವಾಗಿ ಇಡೀ ಸನ್ನಿವೇಶವೇ ತುಂಬ ಕಲಾತ್ಮಕವಾಗಿದೆ.

"ರಾಣಿಯು ಕೂಸಿನ ಈ ಮನೋಹರ ಕುಣಿತವನ್ನು ನೋಡುವಾಗ ಆಕೆಯ ಮನಸ್ಸಿನಲ್ಲಿ, ಕೂಸಿನ ಕಾಲೊಳಗೆ ಒಂದಾದರೂ ಒಡವೆಯಿಲ್ಲವೆಂಬ ಅಲ್ಪವಾದ ದುಃಖವು ಹುಟ್ಟಲು, ಆ ಅಲ್ಪ ದುಃಖವೇ ದುರ್ದೈವದಿಂದ ಪರ್ವತಾಕಾರವನ್ನು ಧರಿಸಿ ನಿಂತಂತೆ, ಖಡ್ಗಪಾಣಿಯಾದ ಚಿನ್ನಓಬಲನು ಅವರೆದುರು ನಿಂತುಕೊಂಡನು"[2]

ಚಿನ್ನಓಬಲನ ಆಜ್ಞೆಯನ್ನು ಕೇಳಿ ಎಲ್ಲರೂ ಆಘಾತಕೊಂಡರು. ಅವನ ಕ್ರೂರ ರೂಪವನ್ನು ಕಂಡು "ನಾಗಲಾಂಬಿಕೆ ಚಿಟ್ಟನೆ ಚೀರಿ" ತಾಯಿಯನ್ನು ಅಪ್ಪಿಕೊಂಡಳು. ತನ್ನ ಅಪರಾಧವೇನೂ ಇಲ್ಲ, ತನಗೆ ರಾಜ್ಯವೇ ಬೇಡ ಎಂದು ರಂಗರಾಯನು ಎಷ್ಟು ಪರಿಯಿಂದ ದೈನ್ಯವಾಗಿ ಹೇಳಿದರೂ ಚಿನ್ನಓಬಲ ಕೇಳಲಿಲ್ಲ. ಹೆಂಗಸಿನಂತೆ ಪ್ರಾಣಭಿಕ್ಷೆ ಬೇಡುವ ರಂಗರಾಯ ಅತೀ ದಯನೀಯವಾಗಿದ್ದಾನೆ. ಆತನ ಮಗ ವೀರನರಸಿಂಗ ಮಾತಿನಲ್ಲಾದರೂ ವೀರವನ್ನು ತೋರುವನು. ಚಿನ್ನಓಬಲನದು ಒಂದೇ ಮಾತು. "ಆತ್ಮಹತ್ಯ ಮಾಡಿಕೋ, ಇಲ್ಲವಾದರೆ ನಾನೇ ನಿಮ್ಮನ್ನು ಕೈಮುಟ್ಟಿ ಕೊಲ್ಲಬೇಕಾಗುವದು."

ಕೊನೆಗೆ ನಿರುಪಾಯನಾದ ರಂಗರಾಯ ಆತ್ಮಹತ್ಯೆಗೆ ಸಿದ್ಧನಾದ. ಆತನ ಪತಿವ್ರತೆ ರಾಣಿ ವೈಧವ್ಯದ ಕಲಂಕ ಹತ್ತದಂತೆ ಮೊದಲು ತನ್ನನ್ನೇ ಸಂಹರಿಸಬೇಕೆಂದಳು. ಚಿಕ್ಕ ನಾಗಲಾಂಬಿಕೆ ತಾಯಿಯನ್ನು ಗಟ್ಟಿಯಾಗಿ ಅಂಟಿಕೊಂಡಳು. ಅವಳಿಗಿಂತ ತುಸು ದೊಡ್ಡವಳಾದ "ಮುದ್ದು ರಂಗಮ್ಮನು ಗಾಬರಿಯಾಗಿ ಬೆದರಿದ ಚಿಗರೆಯ ಮರಿಯಂತೆ ತನ್ನ ದೊಡ್ಡ ಕಣ್ಣುಗಳನ್ನು ತಿರುಗಿಸುತ್ತ, ಅವ್ವನ ಹತ್ತರ ಹೋಗಲೋ, ಅಪ್ಪನ ಹತ್ತರ ಹೋಗಲೋ, ಅಣ್ಣನ ಹತ್ತರ ಹೋಗಲೋ, ಅತ್ತಿಗೆಯ ಹತ್ತರ ಹೋಗಲೋ ಎಂದು ಯೋಚಿಸುತ್ತಿದ್ದಳು."

ರಾಜನು ರಾಣಿಯನ್ನು ಖಡ್ಗದಿಂದ ಕೊಂದು ಹಾಕಿದ. ಮುದ್ದುರಂಗಮ್ಮ "ತಾಯಿಯ ಈ ಅವಸ್ಥೆಯನ್ನು ನೋಡಿ ಬಿರಿಬಿರಿ ಕಣ್ಣುಬಿಡುತ್ತ, ಅಂಜಿಕೆಯಿಂದ ಗದಗದ ನಡುಗುತ್ತ" ನಿಂತಿದ್ದಳು. "ರಂಗರಾಯನ ಕ್ರೂರವಾದ ಖಡ್ಗವು ಅಪ್ಪಾ ಬೇಡ ಬೇಡೆಂದು ಕೈಮರೆ ಮಾಡಿ ಕೂಗುವ ಕೂಸಿನ ರುಂಡವನ್ನು ನಿರಾಯಾಸದಿಂದ ನೆಲಕ್ಕೆ ಕೆಡವಿತು !!" ರಂಗರಾಯ ಕೊನೆಗೆ ಎಲ್ಲರನ್ನೂ ಕೈಯಾರೆ ಕೊಂದರೂ ಚಿಕ್ಕ ಮಗುವನ್ನು ಮಾತ್ರ ಕೊಲ್ಲಲಾರದೆ, "ಎಲಾ ದುಷ್ಟ ಓಬಲಾ, ನಿನ್ನ ಬಯಕೆಯು ಪೂರ್ಣವಾಯಿತೇ ? ಈ ಕೂಸಾದ ನಾಗಲಾಂಬಿಕೆಯನ್ನು ಕೊಲ್ಲುವದು ನನ್ನಿಂದಾಗದ್ದರಿಂದ, ಆಕೆಯನ್ನು ಕ್ರೂರನಾದ ನಿನ್ನ ಪಾಲಿಗೆ

1. ಇಲ್ಲಿಯ ಬಾಲಲೀಲೆಗಳ ವಾಸ್ತವಚಿತ್ರಣಕ್ಕೆ ಗಳಗನಾಥರ ಸ್ವಾನುಭವವೂ ಕಾರಣವಾಗಿರಬಹುದು. ಗಳಗನಾಥರು ಈ ಕಾದಂಬರಿಯನ್ನು ಬರೆಯುತ್ತಿರುವಾಗ ಅವರ ಮಗಳು ಕೂಡ 2-3 ವರ್ಷದವಳೇ ಆಗಿದ್ದಳು.

2. ಗಳಗನಾಥ : ಕುಮುದಿನಿ, ಪುಟ 150

ಬಿಟ್ಟಿದ್ದೇನೆ" ಎಂದು ತನ್ನನ್ನು ಇರಿದುಕೊಂಡು ಪ್ರಾಣಬಿಟ್ಟ. ಮಗ ವೀರನರಸಿಂಗ ತನ್ನ ಹೆಂಡತಿಯನ್ನು ಕೊಂದು, ತಾನೂ ಆತ್ಮಹತ್ಯ ಮಾಡಿಕೊಂಡ.

"ರಕ್ತ ಮುಣುಗಿದ ಒಂದು ಕೂಸು ಮಾತ್ರ ಅಂತಕಸ್ವರೂಪದ ಓಬಲಸ ಎದುರಿಗೆ ಕಣ್ಣುಬಿಡುತ್ತ ಕುಳಿತಿತ್ತು! ಅದನ್ನು ದಯಾಶೂನ್ಯನಾದ ಓಬಲನು ಎಗ್ಗಿಲ್ಲದೆ ತುಂಡರಿಸಿ, ಅರಸು ಮನೆತನದವರಾರೂ ಉಳಿಯದಂತೆ ಮಾಡಿ, ಸೆರೆಮನೆಯಿಂದ ಹೊರಟು ಹೋದನು"[1] (ಪುಟ 155)

ಅತ್ಯಂತ ಹೃದಯಸ್ಪರ್ಶಿಯಾದ ಈ ಸನ್ನಿವೇಶವನ್ನು ಗಳಗನಾಥರು ತುಂಬ ಸುಂದರ ವಾಗಿ ಚಿತ್ರಿಸಿರುವರು. ಈ ಕರುಣರಸಪೂರ್ಣವಾದ ಸನ್ನಿವೇಶವು ಅನೇಕ ವಾಚಕರ ಕಣ್ಣು ಗಳಲ್ಲಿ ನೀರನ್ನು ತಂದಿತು. ಸಾಮಾನ್ಯ ವಾಚಕರ ಮಾತಿರಲಿ, ಇಂಥ ಸನ್ನಿವೇಶಗಳನ್ನು ಓದಿದ ಟಿ. ಎಸ್. ವೆಂಕಣ್ಣಯ್ಯನವರು ಕೂಡ "ಕುಮುದಿನಿಯನ್ನು ಓದುವಾಗ ಎಷ್ಟೋ ಸಾರೆ ನನ್ನ ನೇತ್ರಗಳು ಅಶ್ರುಪೂರ್ಣವಾದವು" ಎಂದು (ದಿ. 21–6–1915 ರಂದು) ಗಳಗನಾಥರಿಗೆ ಬರೆದಿದ್ದರು. ದಕ್ಷಿಣ ಕನ್ನಡ ಜಿಲ್ಲೆಯ ಎಂ. ಗಣೇಶರಾವ ಎಂಬವರು, 'ಅಂತಕನ ಕೋಲಾಹಲ'ವನ್ನು ಓದಿ ತಮ್ಮ ಸ್ನೇಹಿತರೊಬ್ಬರು ಮೂರ್ಛಿತರಾದರೆಂದೂ ಗಳಗನಾಥರಿಗೆ ಬರೆದು ತಿಳಿಸಿದರು. ಅಲ್ಲದೆ "ಚಿನ್ನಓಬಲನೆಂಬ ವ್ಯಕ್ತಿಯ ಕ್ರೂರತನವು ನಿಜವಾಗಿ ಒದಗಿದ್ದೇ ಆಗಿದ್ದರೆ, ಆ ನೀಚನು ಈಗಲೂ ರೌರವ ನರಕದಲ್ಲಿರಬಹುದು. ಆದರೆ 'ಚಂದ್ರಿಕೆ'ಯು ಆ ಹೃದಯದ್ರಾವಕ ಪ್ರಸಂಗವನ್ನು ಕಲ್ಪಿಸಿದ್ದರೆ, ಆಕೆಯು ಪ್ರಾಯಶ್ಚಿತ್ತವನ್ನು ತಕ್ಕೊಳ್ಳಬೇಕಾದೀತು" ಎಂದೂ ಅಭಿಪ್ರಾಯಪಟ್ಟರು.[2]

ವಾಚಕರ ಇಂಥ ಪ್ರತಿಕ್ರಿಯೆಗಳು ಕಾದಂಬರಿಯ ಯಶಸ್ಸನ್ನೇ ಸೂಚಿಸುತ್ತವೆ. ಗಳಗನಾಥರು ಅದರಿಂದ ಆನಂದಿತರಾಗಿ. "ಮಹನೀಯರೇ, ಉತ್ಸಾಹ ಜನಕವಾದ ತಮ್ಮ ಪತ್ರವು ಲೇಖನ ಕಾರ್ಯದಲ್ಲಿ ನಮ್ಮನ್ನು ಪ್ರೋತ್ಸಾಹಗೊಳಿಸಿತು. ಕಾದಂಬರಿ ಓದಿ ಒಬ್ಬರು ಮೂರ್ಛಿತರಾದರೆಂಬುದನ್ನು ಓದಿ ಅದರ ಜನಕರಿಗೆ ಸಂತೋಷವಾದದ್ದು ಆಶ್ಚರ್ಯವಲ್ಲ.... ಕುಮುದಿನಿಯು ಐತಿಹಾಸಿಕ ಕಾದಂಬರಿಯು. ಕಾಲ್ಪನಿಕವಲ್ಲ. ನಮ್ಮ ಮತದಂತೆ ಚಿನ್ನಓಬಲನು ಈಗಲೂ ರೌರವ ನರಕದಲ್ಲಿರಬಹುದು" ಎಂದು ಅದೇ ಪತ್ರಿಕೆ ಯಲ್ಲಿ ಉತ್ತರವನ್ನೂ ಬರೆದರು. ಆದರೆ ಭಾವನಾಜೀವಿಗಳಾದ ಗಳಗನಾಥರು ಚಿನ್ನಓಬಲನ ಕ್ರೂರತನವನ್ನು ಚಿತ್ರಿಸುವಾಗ ಸ್ವತಃ ಕಣ್ಣೀರು ಸುರಿಸುತ್ತಲೇ ಬರೆದರೆಂಬುದೂ ಸುಳ್ಳಲ್ಲ.[3] ಅದರಂತೆ. ಹೀಗೆ ಭಾವಪೂರ್ಣವಾಗಿ ಬರೆದ ಸನ್ನಿವೇಶಗಳನ್ನು ಗಳಗನಾಥರ ವಾಚಕರು ತುಂಬ ಮೆಚ್ಚಿದರೆನ್ನುವಲ್ಲಿಯೂ ಸಂದೇಹವಿಲ್ಲ.

---

1. ಮಗುವನ್ನು ಕೂಡ ರಾಜನೇ ಕೊಂದನೆಂದು ಬರಾಡಾಸನ ವರದಿಯಲ್ಲಿದೆ. ಇಲ್ಲಿ ಗಳಗನಾಥರ ಈ ಮಾರ್ಪಾಡು ತುಂಬ ಉಚಿತವಾಗಿದೆ.

2. ಸದ್ಬೋಧ ಚಂದ್ರಿಕೆ, ಅಗಸ್ಟ–ಸಪ್ಟೆಂಬರ, 1914.

3. ಗಳಗನಾಥ : ಕುರುಕ್ಷೇತ್ರ (1919) ಪುಟ 125. "....ನಾವು ಕುಮುದಿನೀ ಕಾದಂಬರಿಯಲ್ಲಿ ಚಿನ್ನ ಓಬಲನ ಕ್ರೂರತನವನ್ನು ವರ್ಣಿಸುವಾಗ ನಮ್ಮ ಕಣ್ಣೀರುಗಳುದುರಿದವು. ಆದರೆ ಮಾಡುವ ದೇನು ? ನಡೆದದ್ದನ್ನು ನಡೆದ ಹಾಗೆ ವರ್ಣಿಸದಿದ್ದರೆ ನಿರ್ವಾಹವಿಲ್ಲ !...."

ಆದರೂ ಗಳಗನಾಥರಿಗೆ ತಮ್ಮ ಈ ಪ್ರಥಮ ಕಾದಂಬರಿಯನ್ನು ವಾಚಕರು ಸಂಪೂರ್ಣವಾಗಿ ಓದುವರೋ ಇಲ್ಲವೋ ಎಂಬ ಸಂದೇಹವಿತ್ತು. ಅದಕ್ಕೇ ಅವರು "ಈ ಕಾದಂಬರಿಯನ್ನು ಒಮ್ಮೆಯಾದರೂ ಪೂರ್ಣವಾಗಿ ಓದಬೇಕು. ಕಾದಂಬರಿಯು ಒಬ್ಬ ಸುಂದರ ಸ್ತ್ರೀಯಂತೆ ಇರುವದರಿಂದ, ಅದರೊಳಗಿನ ಅಲ್ಲಿಯದೊಂದು ಪಾನು ಇಲ್ಲಿಯದೊಂದು ಪಾನು ಓದಿನೋಡಿದರೆ, ಒಮ್ಮೆ ಸುಂದರಿಯ ಕಾಲ ಉಗುರನ್ನಷ್ಟು, ಮತ್ತೊಮ್ಮೆ ಸುಂದರಿಯ ಕೈಬೆರಳನ್ನಷ್ಟು, ಇನ್ನೊಮ್ಮೆ ಆಕೆಯ ಕಿವಿಯನ್ನಷ್ಟು ನೋಡಿದಂತಾಗಿ ನಿಜವಾದ ಸೌಂದರ್ಯ-ಸ್ವಾರಸ್ಯಗಳ ಅನುಭವವೇ ವಾಚಕರಿಗೆ ಬರಲಿಕ್ಕಿಲ್ಲ"[1] ಎಂದು ಹೇಳಿರುವಲ್ಲಿ, ಬಹುಶಃ ಗಳಗನಾಥರು ಖ್ಯಾತ ಕಾದಂಬರಿಕಾರ ಸ್ಕಾಟನಂತೆ ವಾಚಕರ ಮನೋಧರ್ಮವನ್ನೂ ಅರಿತಂತೆ ಕಾಣುತ್ತದೆ.[2] ಇಂಥವರಿಗಾಗಿ ಅವರು "ಪೂರ್ಣ ಕಾದಂಬರಿಯನ್ನು ಓದಲಿಕ್ಕೆ ಅನುಕೂಲವಿಲ್ಲದವರು, ಈ ಕಾದಂಬರಿಯ ಮುಖದಂತೆ ಇದ್ದ ಕಡೆಯ ಐದು ಪ್ರಕರಣಗಳನ್ನಾದರೂ ದಯವಿಟ್ಟು ಅವಲೋಕಿಸಬೇಕು" ಎಂದು ಮುನ್ನುಡಿಯಲ್ಲಿ ಸೂಚಿಸಿರುವರು.

ಕೊನೆಯ ಐದು ಪ್ರಕರಣಗಳಲ್ಲಿ (1) ಅಂತಕನ ಕೋಲಾಹಲ (2) ಸತ್ಸಮಾಗಮ (3) ಶೃಂಗಾರ ಸಾಗರ (4) ಸಂಶಯ ಪಿಶಾಚ ಮತ್ತು (5) ಬಾಲಕ್ಕೆ ಬಡಿದಾಟ—ಇವು ಸಮಾವೇಶವಾಗಿವೆ. ಇದರಲ್ಲಿ 'ಅಂತಕನ ಕೋಲಾಹಲ'ವು ಕರುಣರಸಪೂರ್ಣವಾಗಿದೆ. 'ಸತ್ಸಮಾಗಮ'ದಲ್ಲಿ ಋಷಿವರ್ಯನು ಬಂದು ಎಚ್ಚಮನನ್ನು ಪ್ರೋತ್ಸಾಹಿಸಿ, ಎಚ್ಚಮನ ಜಯಕ್ಕೆ ಕಾರಣನಾಗುವನು. ಅದರಂತೆ ಕೊನೆಯ ಎರಡು ಪ್ರಕರಣಗಳಲ್ಲಿ ಕೂಡ ಋಷಿವರ್ಯನ ಮಹತ್ತ್ವವನ್ನು ಗಳಗನಾಥರು ನಿರೂಪಿಸಿರುವರು. ಸತ್ಸಮಾಗಮದಲ್ಲಿ ಅಚಲವಾದ, ಆಳವಾದ ಶ್ರದ್ಧೆಯುಳ್ಳ ಗಳಗನಾಥರು ವಾಚಕರಿಗೆ ಈ ಪ್ರಕರಣಗಳನ್ನು ಅವಶ್ಯವಾಗಿ ಓದುವಂತೆ ಸೂಚಿಸುವುದು ಸಹಜವೇ ಆಗಿದೆ. ಆದರೆ 'ಶೃಂಗಾರ ಸಾಗರ'ವು ಮಾತ್ರ ಗಳಗನಾಥರಿಂದ ಪ್ರಯತ್ನಪೂರ್ವಕವಾಗಿ ಬರೆದ ಪ್ರಕರಣವೆಂಬಲ್ಲಿ ಸಂದೇಹವಿಲ್ಲ. ಅದರಲ್ಲಿ ಎಚ್ಚಮ ಮತ್ತು ಕುಮುದಿನಿಯ ವಿವಾಹ, ಅವರ ಪ್ರಥಮ ಸಮಾಗಮಗಳ ವರ್ಣನೆ ವಿಸ್ತಾರವಾಗಿ ಬಂದಿದೆ. ಈ ವರ್ಣನೆಯಲ್ಲಿ ಶೃಂಗಾರವಿದ್ದರೂ ಅಶ್ಲೀಲಕ್ಕೆ ಎಡೆಯಿಲ್ಲವೆಂಬುದು ನಿಜವಾದರೂ, ಕಾದಂಬರಿಯಲ್ಲಿ ಈ ವರ್ಣನೆಯ ಆವಶ್ಯಕತೆ ಇರಲಿಲ್ಲ. ನಾಯಕಿಯಾದ ಕುಮುದಿನಿಯು ಎಚ್ಚಮನನ್ನು ತನ್ನ ಪ್ರತಿಜ್ಞೆಯಂತೆ ಜಯದ ಅನಂತರವೇ ವರಿಸಿದಳೆಂದು ಹೇಳಿದ್ದರೆ ಸಾಕಾಗಿತ್ತು. ಆದರೂ ಗಳಗನಾಥರು ಈ ವಿವರಗಳನ್ನು ಏಕೆ ಕೊಟ್ಟರು, ಎಂಬ ಪ್ರಶ್ನೆಗೆ ಅವರ ಪ್ರಸ್ತಾವನೆಯಲ್ಲಿ ಸೂಚನೆಯಿದೆ.

"ಮನೋರಂಜನಕ್ಕೆ ವಿಶೇಷವಾಗಿ ಮೆಚ್ಚಿದ್ದ ಕನ್ನಡ ಸಮಾಜಕ್ಕೆ ಕಾಲ್ಪನಿಕ ಕಾದಂಬರಿಗಳಷ್ಟು ಐತಿಹಾಸಿಕ ಕಾದಂಬರಿಗಳು ಸೇರವು" ಎಂದು ಅವರು ಊಹಿಸಿದರು. ಅದಕ್ಕೆ ಎಚ್ಚಮನ ಐತಿಹಾಸಿಕ ಕಥೆಗೆ ಸುಂದರಿಯೂ ಸಾಹಸಿಯೂ ಆದ ಕುಮುದಿನಿಯ ಕಥೆ

---

1. ಗಳಗನಾಥ: ಕುಮುದಿನಿ, ಪ್ರಸ್ತಾವನೆ, ಪುಟ 3
2. ಕಾದಂಬರಿಯ ಕಥೆಯಲ್ಲಿ ಆಸಕ್ತಿಯುಳ್ಳ ವಾಚಕರು ತನ್ನ ಮುನ್ನುಡಿಗಳನ್ನು ಓದುವುದಿಲ್ಲವೆಂದು ಅರಿತು ಸ್ಕಾಟನು ಕಾದಂಬರಿಗೆ ಹಿನ್ನುಡಿಗಳನ್ನು ಬರೆಯುತ್ತಿದ್ದನು. ಹಾಗೆಯೇ ಗಳಗನಾಥರು ತಮ್ಮ ವಾಚಕರು ಕಾದಂಬರಿಯಲ್ಲಿ ಎಷ್ಟು ಓದುತ್ತಾರೆ. ಏನು ಓದುತ್ತಾರೆ ಎಂದು ಊಹಿಸಿದ್ದರು. ಆದ್ದರಿಂದಲೇ ಈ ರೀತಿ ಬರೆದರು.

ಯನ್ನು ಅವರು ಸೇರಿಸಬೇಕಾಯಿತು. ಅಷ್ಟೇ ಅಲ್ಲದೆ ಅವಳ ಸೌಂದರ್ಯ, ಲಜ್ಜೆ, ವಿನಯಗಳ ಜೊತೆಗೆ ಅವಳ ಆಭರಣಗಳು–ವಸ್ತ್ರಗಳು ಅವಳ ಸುಸಜ್ಜಿತವಾದ ಶಯ್ಯಾಗಾರವನ್ನೂ ಗಳಗನಾಥರು ವರ್ಣಿಸಿ ಅದನ್ನು 'ಶೃಂಗಾರಸಾಗರ' ಎಂದು ಕರೆದರು. ಈ 'ಶೃಂಗಾರ ಸಾಗರ'ದ ಪ್ರಕರಣವು ಕಲೆಗೆ ಕುಂದು ತಂದಿದ್ದರೂ, ಗಳಗನಾಥರಿಗೆ ಅದು ಅನಿವಾರ್ಯ ವಾಗಿ ಕಂಡಿತೆಂದೂ, ವಾಚಕರನ್ನು ರಂಜಿಸುವುದಕ್ಕಾಗಿ ಗಳಗನಾಥರು ಅದನ್ನು ಬರೆದರೆಂದೂ ಊಹಿಸಬಹುದು.

ಒಟ್ಟಿನಲ್ಲಿ 'ಕುಮುದಿನಿ'ಯು ಗಳಗನಾಥರ ಪ್ರಥಮ ಸ್ವತಂತ್ರ ಐತಿಹಾಸಿಕ ಕಾದಂಬರಿ ಎಂಬುದನ್ನು ನೆನೆದಾಗ, ಅವರು ಈ ಕಾದಂಬರಿಯಲ್ಲಿ ಪಡೆದ ಯಶಸ್ಸು ಹೆಚ್ಚಿನದೆಂದೇ ಹೇಳಬೇಕಾಗುತ್ತದೆ.

1915 ರಲ್ಲಿ ಪ್ರಕಟಿಸಿದ ಗಳಗನಾಥರ **'ಶೌರ್ಯ ಸಂಜೀವನ'** ಅಥವಾ **'ಸತ್ವ-ಸಾರ'**ವು 'ಕುಮುದಿನಿ'ಯಂತೆ ಸಂಪೂರ್ಣ ಸ್ವತಂತ್ರವಾದ ಕಾದಂಬರಿಯಲ್ಲ. "ಈ ಕಾದಂಬರಿಗೆ ಬೇಕಾಗುವ ಮೂಲ ಧನವನ್ನು ಕರ್ನಲ್ ಟಾಡ ಸಾಹೇಬರವರ 'ರಾಜಸ್ಥಾನದ ಇತಿಹಾಸ', 'ಜೀವನ ಸಂಧ್ಯಾ', 'ಹಳದೀ ಘಾಟದ ಯುದ್ಧ' ಎಂಬ ಮೂರು ಮಹಾರಾಷ್ಟ್ರ ಪುಸ್ತಕಗಳೊಳಗಿಂದ ಸಂಪಾದಿಸಿರುತ್ತದೆ"[1] ಎಂದು ಗಳಗನಾಥರು ತಿಳಿಸಿರುವರು. ಇವುಗಳಲ್ಲಿ ಟಾಡ ಸಾಹೇಬರು ಇಂಗ್ಲಿಷಿನಲ್ಲಿ ಬರೆದ 'Annals of Rajastan' ಎಂಬ ಗ್ರಂಥದ ಮರಾಠಿ ಭಾಷಾಂತರವನ್ನೇ ಗಳಗನಾಥರು ಓದಿದರು. ಉಳಿದವುಗಳು ಟಾಡರ ಗ್ರಂಥಗಳಲ್ಲ. 'ಹಳದೀ ಘಾಟನೂ ಯುದ್ಧ' ಎಂಬ ಮೂಲ ಗುಜರಾತೀ ಭಾಷೆಯ ಕಾದಂಬರಿಯನ್ನು ಸದಾಶಿವ ದಿನಕರ ವರ್ಝೇ ಎಂಬವರು ಮರಾಠಿಯಲ್ಲಿ ಭಾಷಾಂತರಿಸಿದ್ದರು. ಅದರಂತೆ 'ಜೀವನ ಸಂಧ್ಯಾ' ಎಂಬುದು ಕೂಡ ಪ್ರಭಾತಕುಮಾರ ಮುಖರ್ಜಿ ಅವರ ಮೂಲ ಬಂಗಾಲಿ ಕಾದಂಬರಿ. ಅದನ್ನು ವಿಠ್ಠಲ ಸೀತಾರಾಮ ಗುರ್ಜರ ಎಂಬವರು ಮರಾಠಿಗೆ ಭಾಷಾಂತರಿಸಿದ್ದರು. ಹೀಗೆ ಈ ಮೂರು ಗ್ರಂಥಗಳು ಮರಾಠಿಗೆ ಭಾಷಾಂತರಗೊಂಡವು ಗಳಾದ್ದರಿಂದಲೇ ಗಳಗನಾಥರಿಗೆ ಅವುಗಳ ಪ್ರಯೋಜನವನ್ನು ಪಡೆಯಲು ಸಾಧ್ಯ ವಾಯಿತು.

ಗಳಗನಾಥರ 'ಸತ್ವಸಾರ'ವನ್ನು ಬಹುಮಟ್ಟಿಗೆ ಸ್ವತಂತ್ರ ಕಾದಂಬರಿ ಎಂದು ಕರೆದರೆ ದೋಷವಾಗಲಾರದು. ಯಾಕೆಂದರೆ ಇದು ಮೇಲಿನ ಮೂರು ಗ್ರಂಥಗಳಲ್ಲಿ ಯಾವೊಂದರ ನೇರವಾದ ಭಾಷಾಂತರವಾಗಲಿ, ಅನುವಾದವಾಗಲಿ ಆಗಿಲ್ಲ. ಆ ಗ್ರಂಥಗಳಿಂದ ವಿಷಯವನ್ನು ಸಂಗ್ರಹಿಸಿ ಗಳಗನಾಥರು ಈ ಕಾದಂಬರಿಯನ್ನು ಬರೆದಿರುವರು. ಸ್ವತಃ ಗಳಗನಾಥರೂ ಇದನ್ನು ತಮ್ಮ ಸ್ವತಂತ್ರ ಕಾದಂಬರಿಯೆಂದು ಕರೆದಿರುವರು.[2]

'ಸತ್ವಸಾರ'ವು ರಾಜಸ್ಥಾನದ ಸುಪ್ರಸಿದ್ಧ ವೀರರಾಜ ರಾಣಾ ಪ್ರತಾಪಸಿಂಹನ ಕಥೆ. ಈ ಕಥೆ ಭಾರತೀಯರೆಲ್ಲರಿಗೂ ಸುಪರಿಚಿತವಾದುದೇ ಆಗಿದೆ. ಆತ ಮೊಗಲ ಬಾದಶಹ ನಾದ ಅಕಬರನನ್ನು ಅಖಂಡ ಇಪ್ಪತ್ತು ವರ್ಷಗಳವರೆಗೆ ಪ್ರತಿಭಟಿಸಿ, ಎಷ್ಟೇ ಸೋಲನ್ನು

1. ಗಳಗನಾಥ : ಸತ್ವಸಾರ, ಪ್ರಸ್ತಾವನೆ, ಪುಟ 2
2. ಗಳಗನಾಥ : ಸದ್ಗುರುಪ್ರಭಾವ, ಪುಟ 35.

ಅನುಭವಿಸಿದರೂ, ಎಷ್ಟೇ ಕಷ್ಟನಷ್ಟಗಳನ್ನು ಪಟ್ಟರೂ, ವೈರಿಗೆ ಶರಣು ಹೋಗದೆ ತನ್ನ ಸ್ವಾತಂತ್ರ್ಯವನ್ನು ಕಾಯ್ದುಕೊಂಡನು. ಅಷ್ಟೇ ಅಲ್ಲದೆ ಕೊನೆಕೊನೆಗೆ ತಾನು ಬಾದಶಹನಿಗೆ ಸೋತಿದ್ದ ಅನೇಕ ಕೋಟೆಗಳನ್ನು ತಿರುಗಿ ವಶಪಡಿಸಿಕೊಂಡನು. ಆದರೂ ಚಿತ್ತೂರು ಕೋಟೆ ಮಾತ್ರ ಆತನಿಗೆ ದೊರೆಯಲಿಲ್ಲ. ಸಾಯುವಾಗ ಕೂಡ ಆತನಿಗೆ ಆ ಕೊರಗು ಉಳಿದೇ ಇತ್ತು.

ಈ ಕಥೆಯನ್ನೇ ಗಳಗನಾಥರು ಕಾದಂಬರಿಯಾಗಿ ನಿರೂಪಿಸಿರುವರು. ತಮ್ಮ ವಾಡಿಕೆಯಂತೆ ಗಳಗನಾಥರು ಮೊದಲನೆಯ ಪ್ರಕರಣದಲ್ಲಿ 'ಪೂರ್ವವೃತ್ತ'ವನ್ನು ಹೇಳುತ್ತ, ಪ್ರತಾಪಸಿಂಹನು ತನ್ನ ಸಹೋದರನಿಂದ ಮೇವಾಡದ ರಾಜಪಟ್ಟವನ್ನು ಪಡೆದುದನ್ನೂ, ರಜಪೂತರಲ್ಲಿ ಅನೇಕರು ಆತನಿಗೆ ಸಹಾಯದ ಭರವಸೆಯಿತ್ತುದನ್ನೂ ತಿಳಿಸುವರು. ಆತನ ತಂದೆ ಚಿತ್ತೂರ ಕೋಟೆಯನ್ನು ಕಳೆದುಕೊಂಡಿದ್ದನು. ಆದರೆ ಪ್ರತಾಪಸಿಂಹನಿಗೆ, ಮೇವಾಡದ ಸಿಸೋದಿಯಾ ವಂಶದಲ್ಲಿ, ಬಾಪ್ಪಾ ರಾವಳನಂಥ ಶೂರರ ವಂಶದಲ್ಲಿ, ಕುಂಭೋ ರಾಣಾ ಮತ್ತು ಮೀರಾಬಾಯಿಯಂಥ ಭಕ್ತರ ವಂಶದಲ್ಲಿ ಜನಿಸಿದ ತಾನು ಅಕಬರ ಬಾದಶಹನಿಗೆ ಶರಣು ಹೋಗಿ ಆತನ ಜೊತೆಗೆ ಶರೀರ ಸಂಬಂಧ ಬೆಳೆಸಲಾರೆನೆಂಬ ಛಲ ಉಂಟಾಯಿತು.

ಆದರೆ ಆತನ ತಮ್ಮ ಶಕ್ತಿಸಿಂಹನು ಒಂದು ಹಂದಿಯ ಬೇಟೆಯ ಸಲುವಾಗಿ ಅಣ್ಣನ ಜೊತೆಗೆ ಹಟಕ್ಕೆ ಬೀಳುವನು. ಆಗ, ಅಣ್ಣತಮ್ಮಂದಿರ ಕಾದಾಟನ್ನು ತಪ್ಪಿಸಲು ಅವರ ರಾಜಪುರೋಹಿತನು ಪ್ರಯತ್ನಿಸಿ, ತಾನೇ ಆತ್ಮಬಲಿದಾನ ಮಾಡಿಕೊಂಡಾಗ ಇಬ್ಬರೂ ಪಶ್ಚಾತ್ತಾಪ ಪಡುವರು. ಶಕ್ತಿಸಿಂಹ ಅಣ್ಣನನ್ನು ತ್ಯಜಿಸಿ ಹೋಗಿ ಅಕಬರನನ್ನು ಕೂಡಿಕೊಳ್ಳುವನು. ಬ್ರಹ್ಮಹತ್ಯೆಯು ಅನಿಷ್ಟಸೂಚಕವೆಂದು ಪ್ರತಾಪಸಿಂಹನು ಮರುಗುವನು. ಅದು ನಿಜವೇ ಎಂಬಂತೆ ಪ್ರತಾಪನು ಮುಂದೆ ಒಂದರ ಅನಂತರ ಒಂದು ಕೋಟೆಯನ್ನು ಅಕಬರನಿಗೆ ಸೋಲಬೇಕಾಯಿತು. ಆಗ ಆತ ಒಮ್ಮೊಮ್ಮೆ ನಿರಾಶನಾಗಿ, ತನ್ನ ಜಾತಿಬಾಂಧವರ ಅಪಾರ ವಧೆಯನ್ನೂ, ನಷ್ಟವನ್ನೂ ತಪ್ಪಿಸಲು ಅಕಬರನಿಗೆ ಶರಣು ಹೋಗಬೇಕೆಂದೂ ಯೋಚಿಸುವನು. ಆದರೆ ಆಗ ಆತನ ಸಾತ್ವಿಕಬುದ್ಧಿ ಜಾಗೃತವಾಗಿ ಅವನನ್ನು ಸನ್ಮಾರ್ಗಕ್ಕೆ ಹಚ್ಚುವುದು. ಅದಕ್ಕೆ ಸತತ ಪ್ರಯತ್ನ, ಕಷ್ಟ ಸಹಿಷ್ಣುತೆ ಮೊದಲಾದ ಗುಣಗಳನ್ನು ಆತನು ತಪಸ್ಸಿನಂತೆ ಆಚರಿಸಿ ಪಡೆದುಕೊಳ್ಳುವನು.

ಈ ಎರಡೂ ಗುಣಗಳನ್ನೇ ಗಳಗನಾಥರು ಸಾತ್ವಿಕೆ ಮತ್ತು ತಪೋಧನ ಎಂಬ ಎರಡು ಪಾತ್ರಗಳನ್ನಾಗಿ ಸೃಷ್ಟಿಸಿರುವರು. ಇವರು ಕಾಲಕಾಲಕ್ಕೆ ಪ್ರತಾಪಸಿಂಹನಿಗೆ ಕಾಣಿಸಿಕೊಂಡು ಅವನಲ್ಲಿಯ ನಿರಾಸೆಯನ್ನು ಹೊಡೆದೋಡಿಸಿ, ಪ್ರೋತ್ಸಾಹಿಸುವರು. ಅವನ ಕನಸಿನಲ್ಲಿ, ರಾಜಸಭೆಯಲ್ಲಿ, ಉಪವನದಲ್ಲಿ, ಶಯ್ಯಾಗೃಹದಲ್ಲಿ, ಇಷ್ಟೇ ಏಕೆ, ಯುದ್ಧಭೂಮಿಯಲ್ಲಿ ಕೂಡ ಸಾತ್ವಿಕೆ ಕಾಣಿಸಿಕೊಂಡಿದ್ದಾಳೆ. ಕೆಲವು ಸಲ ಇವಳನ್ನು ಗಳಗನಾಥರು ಅಲೌಕಿಕ ವ್ಯಕ್ತಿಯಂತೆ ಚಿತ್ರಿಸಿದ್ದೂ ಇದೆ. ಒಮ್ಮೆಲೇ ಕಾಣಿಸಿಕೊಂಡು ಅವಳು ಅದೃಶ್ಯವಾಗುವುದೂ ಉಂಟು. ಅಲ್ಲದೆ ಷೋಡಶಪ್ರಾಯದ ಈ ಅನುಪಮ ಅಲೌಕಿಕ ಸುಂದರಿಯ ಸಮಾಗಮವು ತಪೋಧನನ ಜೊತೆಗೆ ರಾಜವನದ ಲತಾಮಂಟಪದಲ್ಲಿ ನಡೆದ ಸನ್ನಿವೇಶವನ್ನು ಗಳಗನಾಥರು ಬಣ್ಣಿಸಿರುವರು.

ಆದರೆ, ಈ ಬಣ್ಣನೆ ಐತಿಹಾಸಿಕ ಕಾದಂಬರಿಯಲ್ಲಿ ಹೊಂದಿಕೊಂಡಿಲ್ಲ; ಈ ವಿಚಾರವನ್ನು ಟಿ. ಎಸ್. ವೆಂಕಣ್ಣಯ್ಯನವರು ಆಗಲೇ ವ್ಯಕ್ತಪಡಿಸಿದ್ದರು.[1] ವೆಂಕಣ್ಣಯ್ಯನವರು 'ಸತ್ವಸಾರ'ವನ್ನು ಒಟ್ಟಿನಲ್ಲಿ ಮೆಚ್ಚಿದ್ದರೂ, ಅದರಲ್ಲಿ ಕೆಲವು ದೋಷಗಳನ್ನು ಕಂಡರು. ಅವುಗಳಲ್ಲಿ ಸಾತ್ವಿಕೆ–ತಪೋಧನರ ಪಾತ್ರಗಳ ಅನೌಚಿತ್ಯವೂ ಒಂದಾಗಿತ್ತು.

"'ಸತ್ವಸಾರ'ವನ್ನು ಈದಿನ ಆಮೂಲಾಗ್ರವಾಗಿ ಓದಿದೆನು. ಓದಲಿಕ್ಕೆ ಮೊದಲು ಮಾಡಿ ಮುಗಿಸುವವರೆಗೂ ಏಳಲು ಕೂಡ ಮನಸ್ಸಾಗಲಿಲ್ಲ. ಓದಿದ ಮೇಲೆ ಈ ಐತಿಹಾಸಿಕ ಕಾದಂಬರಿಯು ಬಹು ಮನೋಹರವಾದದ್ದೆಂದು ಬೇರೆ ಹೇಳಬೇಕಾಗಿಲ್ಲ........ ಆದರೂ 'ಕುಮುದಿನಿ'ಗಿಂತಲೂ 'ಸತ್ವಸಾರ'ವು ಒಂದು ಒರೆ ಕಮ್ಮಿಯಂತಾ ನನಗೆ ಬೋಧೆಯಾಯಿತು. 'ಸತ್ವಸಾರ'ದಲ್ಲಿ ಒಂದೆರಡು ದೋಷಗಳಿರುವಂತೆ ಕಾಣಬರುತ್ತದೆ" ಎಂದು ಹೇಳಿ,

"1. ಕಾಲ್ಪನಿಕ ಪಾತ್ರಗಳಾದ ಸಾತ್ವಿಕೆ–ತಪೋಧನರು ಈ ಕಾದಂಬರಿಯ ವಸ್ತು ರಚನೆಗೆ ಅನವಶ್ಯಕವೆಂತಾ ಕಾಣುತ್ತದೆ. ಇದಲ್ಲದೆ ಇವರಿಬ್ಬರೂ ನನಗೇಕೋ ವಿಚಿತ್ರ ವ್ಯಕ್ತಿಗಳಂತೆ ಕಾಣುತ್ತಾರೆ. ಸ್ವಾಭಾವಿಕ ಮನುಷ್ಯರಂತೆ ಕಾಣುವುದಿಲ್ಲ. ಹೀಗೆ ನನಗೆ ಬೋಧೆಯಾಗಲು ಸರಿಯಾದ ಕಾರಣವೇನೆಂಬುದನ್ನು ಹೇಳಲಾರದವನಾಗಿದ್ದೇನೆ.

2. ಮೂವತ್ತು ಮೂರನೇ ಪುಟದಲ್ಲಿರುವ ಸಾತ್ವಿಕೆಯ ವರ್ಣನೆಯು ನನಗೆ ಒಪ್ಪಿಗೆಯಾಗಲಿಲ್ಲ. ಈ ವರ್ಣನೆಯಿಲ್ಲದೆ ಹೋಗಿದ್ದರೆ ಕಾದಂಬರಿಗೇನು ನಷ್ಟವಾಗುತ್ತಿತ್ತು?[2]........

3. ಹಾಗೆಯೇ. ಸಾತ್ವಿಕೆ–ತಪೋಧನರು ವೈಶಾಖ ಶುದ್ಧ 14 ದಿವಸ ಪುಷ್ಪಕ್ರೀಡೆ, ಸರಸಸಲ್ಲಾಪಗಳನ್ನು ಬೆಳದಿಂಗಳಲ್ಲಿ ಮಾಡಿದುದು ನನ್ನ ಮನಸ್ಸಿಗೆ ಬರಲಿಲ್ಲ. ಇದರಲ್ಲಿ ಗುಪ್ತವಾದ ನೈತಿಕಾರ್ಥವಿಲ್ಲವೆಂತಾ ನಾನು ಹೇಳುವುದಿಲ್ಲ. ಈ ವರ್ಣನೆ ಇಲ್ಲದೆ ಹೋಗಿದ್ದರೆ ಕಥಾಸಂದರ್ಭಕ್ಕೆ ನಷ್ಟವೇನಾಗುತ್ತಿತ್ತು?" ಎಂಬ ಪ್ರಶ್ನೆಗಳನ್ನು ಕೇಳಿರುವರು.

ವೆಂಕಣ್ಣಯ್ಯನವರ ಈ ಪ್ರಶ್ನೆಗಳಿಗೆ ಗಳಗನಾಥರು ಕೊಟ್ಟ ಉತ್ತರವನ್ನು ನೋಡಿದರೆ, ಗಳಗನಾಥರು ಈ ಕಾಲ್ಪನಿಕ ಪಾತ್ರಸೃಷ್ಟಿಯ ಬಗ್ಗೆ ತೃಪ್ತರೂ ಅಭಿಮಾನಿಗಳೂ ಆದಂತೆ ಕಂಡುಬರುತ್ತದೆ. ಅವರ ಪತ್ರದೊಳಗಿನ ಕೆಲವು ಮಾತುಗಳಿವು:

"ಸಾತ್ವಿಕಾ–ತಪೋಧನರ ಪಾತ್ರಗಳು ಸ್ವಾಭಾವಿಕ ವ್ಯಕ್ತಿಗಳಂತೆ ತೋರಬಾರದೆಂತಲೇ ಲೇಖಕನ ಉದ್ದೇಶವಿತ್ತು. ಅದು ಸಫಲವಾದಂತೆ ನಮ್ಮ ಮಿತ್ರರ ಅಭಿಪ್ರಾಯದಿಂದ ವ್ಯಕ್ತವಾಗುತ್ತದೆ. ನಮ್ಮ ಮಿತ್ರರ ಮತದಂತೆ ಈ ಪಾತ್ರಗಳನ್ನು ಕಲ್ಪಿಸದಿದ್ದರೂ ಬರುತ್ತಿತ್ತು; ಆದರೆ ಕಾದಂಬರಿಗೆ ಈಗಿನ ಸವಿಯು ಮಾತ್ರ ಬರುತ್ತಿದ್ದಿಲ್ಲ. ಸಾತ್ವಿಕರ ಹಾಗು ತಪಸ್ವಿಗಳ ಧರ್ಮಗಳು ವ್ಯಕ್ತವಾಗಿ ಕಾಣಬೇಕೆಂತಲೂ, ಅವರ ಮಹಾನುಭಾವತೆಯು ಒಡೆದು ಕಾಣಬೇಕೆಂತಲೂ ಈ ವಿಲಕ್ಷಣ ಪಾತ್ರಗಳನ್ನು ಕಲ್ಪಿಸಬೇಕಾಯಿತು. ಪ್ರತಾಪಸಿಂಹನಲ್ಲಿದ್ದ ಸತ್ಯವೇ

---

1. ವೆಂಕಣ್ಣಯ್ಯನವರು 21–6–1915ರಂದು ಗಳಗನಾಥರಿಗೆ ಬರೆದ ಪತ್ರ, ಮತ್ತು ಅದಕ್ಕೆ ಗಳಗನಾಥರು ಬರೆದ ಉತ್ತರ–ಇವು 'ಕರ್ನಾಟಕ ವಿದ್ಯಾವರ್ಧಕ ಸಂಘ'ದವರು ಪ್ರಕಟಿಸಿದ 'ಗಳಗನಾಥ' ಗ್ರಂಥದ 3ನೆಯ ಪರಿಶಿಷ್ಟದಲ್ಲಿ ದೊರೆಯುತ್ತವೆ.
2. ಇಲ್ಲಿ ಗಳಗನಾಥರು ಸಾತ್ವಿಕೆಯ "ಕಠೋರ ಕುಚ ಮಂಡಲ, ಹಾರದಿಂದ ಯುಕ್ತವಾದ ಉರಪ್ರದೇಶ" ಮೊದಲಾದವುಗಳನ್ನು ಬಣ್ಣಿಸುವರು.

ಸಾತ್ವಿಕೆಯು; ಆತನಲ್ಲಿದ್ದ ತಪಸ್ವಿತೆಯೇ ತಪೋಧನನು. ಪ್ರತಾಪನಲ್ಲಿಯ ಇವೆರಡು ಗುಣಗಳನ್ನು ಪಾತ್ರಗಳಾಗಿ ಕಲ್ಪಿಸಿ ಅದಕ್ಕೆ ಲಾಲಿತ್ಯದ ಹೊದಿಕೆಯನ್ನು ಹೊದಿಸಿದ್ದರಿಂದ, ನಮ್ಮ ಮಿತ್ರರಿಗೆ ಆ ಪಾತ್ರಗಳು ವಿಲಕ್ಷಣವಾಗಿ ತೋರಿರುತ್ತವೆ. ಪ್ರತಾಪಸಿಂಹನ ಚಾರಿತ್ರ್ಯದ ಮನೋಹರತ್ವದ ಭರದಲ್ಲಿ ಆತನಲ್ಲಿಯ ಇವೆರಡು ಉಜ್ವಲ ಗುಣಗಳ ವಿಷಯವಾಗಿ ವಾಚಕರಲ್ಲಿ ದುರ್ಲಕ್ಷವುಂಟಾಗಬಾರದೆಂಬ ಉದ್ದೇಶದಿಂದ ಕಾದಂಬರಿಕಾರನು ತನ್ನ ಕಲ್ಪನಾ ಶಕ್ತಿಗೆ ಚಾಲನೆ ಕೊಟ್ಟು ಹೀಗೆ ಮಾಡಬೇಕಾಯಿತು."

ಗಳಗನಾಥರ ಉದ್ದೇಶವು ಸ್ಪಷ್ಟವಿದ್ದರೂ, ಅವರು ಅದರಲ್ಲಿ ಹೆಚ್ಚಿನ ಸಫಲತೆಯನ್ನು ಪಡೆದಿಲ್ಲವೆಂದು ಹೇಳಬಹುದು. ಈ ಪಾತ್ರಗಳನ್ನು ಅತಿಮಾನವ ಪಾತ್ರಗಳಂತೆಯೇ ಕಡೆತನಕ ಚಿತ್ರಿಸಿದ್ದರೆ ಒಳಿತಾಗಬಹುದಿತ್ತು. ಇನ್ನು ಸಾತ್ವಿಕೆಯ ಸೌಂದರ್ಯವರ್ಣನೆಯ ಬಗ್ಗೆ ವೆಂಕಣ್ಣಯ್ಯನವರ ಆಕ್ಷೇಪಕ್ಕೆ ಗಳಗನಾಥರು ಕೊಡುವ ಉತ್ತರ ರೋಚಕವಾಗಿದೆ.

"ಸೃಷ್ಟಿಯೊಳಗಿನ ಸೌಂದರ್ಯದ ಬಾಬನ್ನು ತೆಗೆದುಬಿಟ್ಟರೆ ಉಳಿಯುವ ಅಸಡ್ಡಾಳವಾದ ನೀರಸ ಸೃಷ್ಟಿಯನ್ನು ತಕ್ಕೊಂಡು ಮಾಡುವದೇನು? ನಮಗೆ ಸುಂದರವಾದ ಅಕ್ಷರಗಳು ಬೇಕು, ಸುಂದರ ಪುಷ್ಪಗಳು ಬೇಕು, ಸುಂದರ ವಿಚಾರಗಳು ಬೇಕು. ಅದರಂತೆ ನಮ್ಮ ರೂಪದಲ್ಲಿ ಸೌಂದರ್ಯವಿರಬೇಕು, ನಮ್ಮ ಮಕ್ಕಳು ಮರಿಗಳು ಸುಂದರವಾಗಿರಬೇಕು. ನಮ್ಮ ಉಪಭೋಗ್ಯ ವಸ್ತುಗಳು ಸುಂದರವಿರಬೇಕು. ಹಾಗೆಯೇ ಸುಂದರವಾದ ಕಲಾಕೌಶಲ್ಯಗಳನ್ನು, ಸುಂದರ ರಾಜ್ಯವ್ಯವಸ್ಥೆ ಮೊದಲಾದವನ್ನೂ, ಸುಂದರ ವನಪ್ರದೇಶಾದಿಗಳನ್ನೂ ನಾವು ಬುದ್ಧಿ ಪೂರ್ವಕವಾಗಿ ನೋಡಲಿಕ್ಕೆ ಹೋಗುತ್ತೇವೆ. ಅಂದಬಳಿಕ ಸರ್ವರಿಗೂ ಇಷ್ಟವಾದದ್ದೆಂದು ಹೇಳಬಹುದಾದ ಸೌಂದರ್ಯವನ್ನು ನಾವು ಸಾತ್ವಿಕೆಯಲ್ಲಿ ಕಲ್ಪಿಸಿದ್ದು ತಪ್ಪೇನು? ಹಾಗೆ ಕಲ್ಪಿಸದಿದ್ದರೆ ಕಾದಂಬರಿಯು ಸೌಂದರ್ಯಹೀನವಾಗುತ್ತಿದ್ದಿಲ್ಲವೇ?" ಎಂದು ಕೇಳಿ, ಗಳಗನಾಥರು ಸಾತ್ವಿಕೆಯ ಸೌಂದರ್ಯವರ್ಣನೆಯನ್ನು ಸಮರ್ಥಿಸಿಕೊಳ್ಳಲು ಇನ್ನೂ ಒಂದು ಕಾರಣವನ್ನು ಕೊಟ್ಟಿರುವರು.

"2ನೆಯ ಕಾರಣವು ಕಾದಂಬರಿಯನ್ನು ಅಲಂಕೃತ ಮಾಡುವದು. ಸ್ತ್ರೀಯರ ಸೌಂದರ್ಯಕ್ಕೆ ಮೋಹಿಸದ ಪುರುಷರು ವಿರಲ. ಇದಕ್ಕೆ ವಿಶ್ವಾಮಿತ್ರ ಪರಾಶರಾದಿ ಮುನಿಗಳ ಚರಿತ್ರಗಳೇ ಸಾಕ್ಷಿಯಾಗಿರುವವು. ಹೀಗಿದ್ದು, ಏಕಾಂತ ಸ್ಥಾನದೊಳಗೆ ಆಕಸ್ಮಿಕ ಕಣ್ಣಿಗೆ ಬಿದ್ದ 16ವರ್ಷದ ಲೋಕೋತ್ತರ ಸುಂದರಿಯ ಯೋಗದಿಂದ ತರುಣನಾದ ಪ್ರತಾಪಸಿಂಹನ ಮನಸ್ಸಿನಲ್ಲಿ ವಿಕಾರದ ಬದಲು ಪೂಜ್ಯ ಬುದ್ಧಿಯುತ್ಪನ್ನವಾದದ್ದೇನೂ ಸಾಮಾನ್ಯ ಮಾತಲ್ಲ...."

ವೆಂಕಣ್ಣಯ್ಯನವರ ಮೂರನೆಯ ಆಕ್ಷೇಪಕ್ಕೆ "ಸಾತ್ವಿಕಾ–ತಪೋಧನರಲ್ಲಿ ವಸ್ತುತಃ ಭೇದವಿಲ್ಲೆಂದು" ಸೂಚಿಸುವ ಉದ್ದೇಶವೇ ಅವರ ಸಮಾಗಮ ವರ್ಣನೆಯಲ್ಲಿದೆ ಎಂದು ಹೇಳಿ, ಗಳಗನಾಥರು ಕೊನೆಗೆ, ಈ ಸೌಂದರ್ಯ ವರ್ಣನೆ ಇಲ್ಲದಿದ್ದರೆ, ಕಾದಂಬರಿಯ ಸೌಂದರ್ಯ, ಗಾಂಭೀರ್ಯ, ಕಲ್ಪಕತೆ ಇವಕ್ಕೆ ಕೊರತೆಯುಂಟಾಗುತ್ತಿತ್ತೆಂಬಂತೆ ತೋರುತ್ತದೆ" ಎಂದಿರುವರು.

ಗಳಗನಾಥರ ಅಭಿಪ್ರಾಯ, ಉದ್ದೇಶಗಳು ಏನೇ ಇದ್ದರೂ, ಈ ಸಾತ್ವಿಕೆ ಮತ್ತು ತಪೋಧನರ ಪಾತ್ರಸೃಷ್ಟಿ ಅನಾವಶ್ಯಕವಾಗಿತ್ತೆಂದೂ, ಆ ಪಾತ್ರಗಳ ನಿರೂಪಣೆ ಅಷ್ಟೊಂದು

ಕಲಾತ್ಮಕವಾಗಿಲ್ಲವೆಂದೂ ಒಪ್ಪಿಕೊಳ್ಳಬೇಕಾಗುತ್ತದೆ. ಶೃಂಗಾರವನ್ನು ಕಾದಂಬರಿಯಲ್ಲಿ ಹೇಗಾದರೂ ಮಾಡಿ ತರಬೇಕೆಂಬ ಉದ್ದೇಶವೇ ಇಲ್ಲಿಯೂ ಇದ್ದಂತೆ ಕಾಣುತ್ತದೆ. ಇಲ್ಲವಾದರೆ ವಾಚಕರು ಕಾದಂಬರಿಯನ್ನು ಮೆಚ್ಚುವುದಿಲ್ಲವೆಂದೇ ಗಳಗನಾಥರು ಹೆದರಿದ್ದರು. ಅದರಂತೆ ಗಳಗನಾಥರ ಕಾದಂಬರಿಗಳಲ್ಲಿ ಬರುವ ಗುರು ಅಥವಾ ಋಷಿಯ ಪಾತ್ರವನ್ನು ಇಲ್ಲಿ ತಪೋಧನನು ನಿರ್ವಹಿಸಿರುವನು. ಅಂತೂ ಗಳಗನಾಥರ ಈ ಕಾಲ್ಪನಿಕ ಪಾತ್ರಗಳ ಸೃಷ್ಟಿ ಅಯಶಸ್ವಿಯಾಗಿದೆ.

ಆದರೆ ಉಳಿದ ಐತಿಹಾಸಿಕ ಪಾತ್ರಗಳ ಚಿತ್ರಣದಲ್ಲಿ ಗಳಗನಾಥರು ಹೆಚ್ಚಿನ ಯಶಸ್ಸನ್ನು ಪಡೆದಿರುವರು. ಪ್ರತಾಪಸಿಂಹ ಮತ್ತು ಮಾನಸಿಂಹರ ಭೆಟ್ಟಿಯ ಸನ್ನಿವೇಶದಲ್ಲಿ ಅವರಿಬ್ಬರ ಸೌಜನ್ಯ ಮತ್ತು ಛಲದ ಸ್ವಭಾವಗಳು ತುಂಬ ಸುಂದರವಾಗಿ ನಿರೂಪಿತವಾಗಿವೆ. ಪ್ರತಾಪಸಿಂಹ ಮತ್ತು ಆತನ ಸಹೋದರನಾದ ಶಕ್ತಿಸಿಂಹರು ಒಂದು ಸಣ್ಣ ಕಾರಣಕ್ಕಾಗಿ ಸೆಣಸಿದರೂ, ಅನಂತರ ಪಶ್ಚಾತ್ತಾಪದಗ್ಧ ಶಕ್ತಿಸಿಂಹನು ತನ್ನ ಅಣ್ಣನನ್ನು ಕಾಣುವ ಸನ್ನಿವೇಶವು ತುಂಬ ಹೃದಯಭೇದಕವಾಗಿದೆ. ಅದರಂತೆ ವೃದ್ಧ ದೇವೀಸಿಂಹನ ತ್ಯಾಗ, ನಿಷ್ಠೆ, ಸ್ವಾಮಿಭಕ್ತಿಗಳೂ, ಆತನ ಮಗನಾದ ಚಂದನಕುಮಾರನ ಶೌರ್ಯ–ಸಾಹಸಗಳೂ ಪ್ರಭಾವಿಯಾಗಿ ಚಿತ್ರಿತವಾಗಿವೆ. ಚಂದನಕುಮಾರನು ಮಹಾಭಾರತದ ಅಭಿಮನ್ಯುವನ್ನು ನೆನಪಿಗೆ ತರುತ್ತಾನೆ. ವೃದ್ಧಮಂತ್ರಿ ಭಾಮಾಶಹನ ಸ್ವಾಮಿನಿಷ್ಠೆ, ದೇಶಪ್ರೇಮ, ಮತ್ತು ದಾನ ಗುಣಗಳು ಅನುಪಮವಾಗಿವೆ. ಇವರೆಲ್ಲ ಐತಿಹಾಸಿಕ ವ್ಯಕ್ತಿಗಳೇ ಆಗಿದ್ದಾರೆ. ಆದರೂ ಗಳಗನಾಥರು ಇವರ ಚಿತ್ರಣದಲ್ಲಿ ಹೆಚ್ಚಿನ ಜೀವಕಳೆಯನ್ನು ತುಂಬಿದ್ದಾರೆ.

ಪ್ರತಾಪನ ಹೆಂಡತಿ–ಮಕ್ಕಳ ಬವಣೆಯ ಚಿತ್ರಣ ಮಾತ್ರ ಮನ ಮಿಡಿಯುವಂತೆ ಮೂಡಬೇಕಾಗಿತ್ತು. ಗಳಗನಾಥರು ಅವರ ಕಷ್ಟದ ಜೀವನವನ್ನು ಕೇವಲ ಒಂದೆರಡು ವಾಕ್ಯವೃಂದಗಳಲ್ಲಿ ವರ್ಣಿಸಿದ್ದು ಕಲಾತ್ಮಕವಾಗಿಲ್ಲ. ಕಾದಂಬರಿಯಲ್ಲಿ, ಪ್ರತಾಪಸಿಂಹನ ರಾಣಿಯು ಹುಲ್ಲಿನ ಬೀಜದಿಂದ ಮಾಡಿದ ರೊಟ್ಟಿಯ ಅರ್ಧಭಾಗವನ್ನು ಅಡವಿಯ ಬೆಕ್ಕು ತೆಗೆದುಕೊಂಡು ಓಡಿ ಹೋಗಿ ಚಿಕ್ಕಮಕ್ಕಳು ದುಃಖಿಸಿದ ಪ್ರಸಂಗವನ್ನು ಗಳಗನಾಥರು ಎರಡೆರಡು ಸಲ (ಪುಟ, 137 ಮತ್ತು 158) ಹೇಳಿರುವದೂ ಒಂದು ನ್ಯೂನತೆಯೇ ಸರಿ. ಇದು ಮರವಿನಿಂದ ಅಥವಾ ಅವಸರದಿಂದ ಬರೆದ ಕಾರಣ ಉಂಟಾದ ದೋಷ.

"ಇರುವೆಯ ಸಾಲಿನಂತೆ" ಅಸಂಖ್ಯವಾಗಿ ಬರುತ್ತಿದ್ದ ಮೊಗಲ ಸೈನ್ಯ, ರಜಪೂತರ ಎದೆಗಾರಿಕೆ, ಪ್ರತಾಪಸಿಂಹನ ಅಲೆದಾಟ, ಆತನ 'ಚಿತ್ತಕ'ವೆಂಬ ಕುದುರೆಯ ಸ್ವಾಮಿಭಕ್ತಿ ಮೊದಲಾದುವು ಚೆನ್ನಾಗಿ ಚಿತ್ರಿತವಾಗಿವೆ. ಅಕಬರನ ದರ್ಬಾರದ ಚಿತ್ರದೊಂದಿಗೆ ಆತನು ಏರ್ಪಡಿಸುತ್ತಿದ್ದ 'ನೌರೋಜ', 'ಖುಷರೋಜ'ಗಳ ವರ್ಣನೆ, ಅಕಬರನ ಕಪಟ–ಕಾಮುಕತೆಗಳು, ಜೋಧಬಾಯಿ ಆತನಿಗೆ ಕಲಿಸಿದ ಪಾಠ—ಇವು ಅಕಬರನ ವ್ಯಕ್ತಿತ್ವದ ಇನ್ನೊಂದು ಬದಿಯ ಮೇಲೆ ಬೆಳಕು ಬೀರಿವೆ. ಅಕಬರನ ಈ ಚಿತ್ರವನ್ನು ಓದಿ ವೆಂಕಣ್ಣಯ್ಯನವರು ಚಕಿತರಾದರು. ಅದಕ್ಕೆ ಗಳಗನಾಥರು "ಪರದಾರಾಗಮನ ದೋಷಮಾತ್ರದಿಂದ ಅಕಬರನು ಸಂಪೂರ್ಣ ತಿರಸ್ಕರಣೀಯನಾಗಲಾರನು. ದೇಹಧಾರಿಗಳು ನಿರ್ದೋಷರಾಗಿ ಕಾಣುವದು ದುರ್ಲಭವು" ಎಂದು ಬರೆದು ತಿಳಿಸಿದರು. ಅಕಬರನ ಈ ಚಿತ್ರವು ಟಾಡನ 'Annals of Rajastan' ದಲ್ಲಿಯೂ ಇದೆ.

ಒಟ್ಟಿನಲ್ಲಿ ಸಾತ್ವಿಕೆ-ತಪೋಧನರ ಕಾಲ್ಪನಿಕ ಪಾತ್ರಸೃಷ್ಟಿಯನ್ನು ಬಿಟ್ಟರೆ, ಗಳಗನಾಥರು ತಮ್ಮ 'ಸತ್ವಸಾರ'ದಲ್ಲಿ ಇತಿಹಾಸಕ್ಕೆ ವ್ಯತಿರಿಕ್ತವಾದುದೇನನ್ನೂ ಚಿತ್ರಿಸಿಲ್ಲ. ಆದರೂ ಈ ಕಾದಂಬರಿಯು ಅವರ 'ಕುಮುದಿನಿ'ಯಷ್ಟು ಕಲಾತ್ಮಕವಾಗಿ ಹೃದ್ಯವೆನಿಸುವುದಿಲ್ಲ. ಈ ಮಾತನ್ನು ವೆಂಕಣ್ಣಯ್ಯನವರು ಹೇಳಿದ್ದರೂ, "ಸತ್ವಸಾರದಲ್ಲಿ ಅನುಭವವಾಣಿ ಇರುವದು. ಸತ್ವಸಾರವುಳ್ಳವರು ಬರೆದ ಸತ್ವಸಾರವಿದಾದ್ದರಿಂದ ಮನೋರಂಜಕವಾಗದೆಂತಿರುವುದು?" ಎಂದು ಕೇಳಿ, ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ.

"ಕುಮುದಿನಿಯನ್ನು ಓದುವಾಗ ಎಷ್ಟೋ ಸಾರೆ ನನ್ನ ನೇತ್ರಗಳು ಅಶ್ರುಪೂರ್ಣವಾದುವು. ಸತ್ವಸಾರವನ್ನೋದುವಾಗ ಒಮ್ಮೆಯೂ ಹಾಗಾಗಲಿಲ್ಲ" ಎಂದೂ ವೆಂಕಣ್ಣಯ್ಯನವರು ಬರೆದಿದ್ದರು. ಆದರೆ ಒಂದು ಕಾದಂಬರಿಯನ್ನು ಓದುವಾಗ ಸುರಿಸುವ ಕಣ್ಣೀರಿನ ಪ್ರಮಾಣವೇ ಆ ಕಾದಂಬರಿಯ ಗುಣಮಟ್ಟವನ್ನು ಸೂಚಿಸಬೇಕಾಗಿಲ್ಲ. ಶೌರ್ಯ, ಧೈರ್ಯ, ಛಲದಂಥ ವೀರಗುಣದ ಪ್ರತಾಪಸಿಂಹನ ಕಾದಂಬರಿಯು ಓದುಗರ ಹೃದಯವನ್ನು ಮಿಡಿಯುವ, ಕಣ್ಣೀರು ತರಿಸುವ ಸಾಧ್ಯತೆ ಕಡಿಮೆ. ಅಲ್ಲದೆ ಅತಿಭಾವುಕತೆ ಕಾದಂಬರಿಯ ಒಳ್ಳೆಯ ಗುಣವೂ ಆಗಲಾರದು—ಎಂಬುದನ್ನು ಒಪ್ಪಿದರೂ ಕೂಡ 'ಸತ್ವಸಾರ'ದಲ್ಲಿ ಆ ಕಾಲದ ವಾಚಕರು ಅಪೇಕ್ಷಿಸುತ್ತಿದ್ದ ಭಾವುಕತೆಯೂ ಇಲ್ಲ. ಆದರಂತೆ ಶ್ರೇಷ್ಠ ಕಾದಂಬರಿಯ ಲಕ್ಷಣಗಳಾದ ಉನ್ನತ ಮಟ್ಟದ ಪಾತ್ರನಿರೂಪಣವಾಗಲಿ ಕಥಾನಿರೂಪಣೆಯ ಸೊಗಸಾಗಲಿ ಒಡೆದು ಕಾಣುವುದಿಲ್ಲ. ಅದಕ್ಕೆ ಮುಖ್ಯ ಕಾರಣವೆಂದರೆ ಗಳಗನಾಥರಿಗೆ ಐತಿಹಾಸಿಕ ಸಾಮಗ್ರಿ ಹೆಚ್ಚಿನ ಪ್ರಮಾಣದಲ್ಲಿ ದೊರೆತಿದೆ. ಅವರು ಅದನ್ನು ಹೊಂದಿಸಿ ಕಥೆ ಹೇಳುವಲ್ಲಿಯೇ ನಿರತರಾಗಿದ್ದಾರೆ. ನಿಜವಾದ ಕಲ್ಪಕತೆಗೆ ಅವರ ಕಾದಂಬರಿಯಲ್ಲಿ ಆಸ್ಪದವೇ ದೊರೆತಿಲ್ಲ. ಒಂದು ಒಳ್ಳೆಯ ಐತಿಹಾಸಿಕ ಕಾದಂಬರಿಯು ಇತಿಹಾಸಕ್ಕೆ ನಿಷ್ಠವಾಗಿರುವಂತೆ ಕಲಾತ್ಮಕವೂ ಆಗಿರಬೇಕು. ಇಲ್ಲಿ ಗಳಗನಾಥರು ಮೊದಲನೆಯ ನಿಯಮವನ್ನು ಪಾಲಿಸಿದ್ದಾರೆ. ಆದರೆ ಇತಿಹಾಸದ ಕಥೆಯನ್ನು ಕಾದಂಬರಿಯನ್ನಾಗಿ ಪರಿವರ್ತಿಸುವಲ್ಲಿ ಅವರು ಅಷ್ಟು ಸಫಲರಾಗಿಲ್ಲವೆಂದು ಹೇಳಬೇಕು.

ಗಳಗನಾಥರು ಸ್ವತಂತ್ರವಾದ, ಅದರಲ್ಲೂ ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದ ಸ್ವತಂತ್ರ ಕಾದಂಬರಿಗಳನ್ನು ಬರೆಯಬೇಕೆಂದು ಬಹುದಿನಗಳಿಂದಲೂ ಹಂಬಲಿಸಿದ್ದರು. 1913ರಲ್ಲಿ "ಕನ್ನಡದಲ್ಲಿ ಐತಿಹಾಸಿಕ ಸಾಧನಗಳು ಕಡಿಮೆ"[1] ಎಂದು ಮಿಡುಕುತ್ತಲೇ ಗಳಗನಾಥರು 'ಕುಮುದಿನಿ'ಯನ್ನು ಬರೆದರು. ಮುಂದೆ 1916ರಲ್ಲಿ 'ಕನ್ನಡಿಗರ ಕರ್ಮಕಥೆ'ಯನ್ನು ಪ್ರಕಟಿಸುವಾಗ "ಇದರಂತೆ ವಿಜಯನಗರದ ನಾಶ, ಅದರ ಅತ್ಯುತ್ಕರ್ಷ, ಅದರ ಸ್ಥಾಪನೆ ಇವುಗಳನ್ನು ಕುರಿತು ಇನ್ನು ಮೂರು ಕಾದಂಬರಿಗಳನ್ನು ಬರೆಯಬೇಕೆಂದು ಆಗ (1913ರಲ್ಲಿ) ನಾನು ನಿಶ್ಚಯಿಸಿದೆನು. ಅದರಂತೆ ಈ ವರ್ಷ ವಿಜಯನಗರದ ರಾಜ್ಯದ ನಾಶವನ್ನು ಕುರಿತು ಬರೆದ ಈ 'ಕನ್ನಡಿಗರ ಕರ್ಮಕಥೆ' ಎಂಬ ಕಾದಂಬರಿಯು ಮುಗಿದಿರುತ್ತದೆ"[2] ಎಂದರು. ಆದರೆ 'ಕನ್ನಡಿಗರ ಕರ್ಮಕಥೆ' ಸ್ವತಂತ್ರವಾಗಿರದೆ ಅನುವಾದವಾಗಿತ್ತು. ಅದಕ್ಕೆ ಅವರು "ಇಂಥ ಇನ್ನು ಎರಡು ಮನೋಹರ ಕಾದಂಬರಿಗಳು ಬಹುಶಃ

1. ಗಳಗನಾಥ : ಕುಮುದಿನಿ, ಪ್ರಸ್ತಾವನೆ.
2. ಗಳಗನಾಥ : ಕನ್ನಡಿಗರ ಕರ್ಮಕಥೆ, ಪ್ರಸ್ತಾವನೆ.

ಸ್ವತಂತ್ರ ಹೊಸ ರಚನೆಯಿಂದ ಅನುವುನೋಡಿ ಬರೆಯಲ್ಪಡಬಹುದು" ಎಂದೂ ವಾಚಕರಿಗೆ ಭರವಸೆಯನ್ನಿತ್ತರು.

ಅವರ ಭರವಸೆ ಬೇಗ ಈಡೇರಲಿಲ್ಲ. ಅವರು ಮತ್ತೆ ಮರಾಠಿಯ ಕಾದಂಬರಿಗಳನ್ನೇ ಅನುವಾದಿಸಬೇಕಾಯಿತು.[1] ಆದರೂ ಕನ್ನಡಿಗರ ಬಗ್ಗೆ ಬರೆಯಬೇಕೆಂಬ ಅವರ ಆಂತರಿಕ ಆಕಾಂಕ್ಷೆ ಬೆಳೆಯುತ್ತಲೇ ಇದ್ದಿತು.

"ಕನ್ನಡಿಗರ ಅಭಿಮಾನವನ್ನು ಹೆಚ್ಚಿಸುವಂಥ ಕನ್ನಡ ವೀರರ ಕಾದಂಬರಿಗಳು, ಕನ್ನಡ ಸತ್ಪುರುಷರ ಚರಿತ್ರೆಗಳು, ಕನ್ನಡ ತತ್ವಜ್ಞಾನಿಗಳ ವೃತ್ತಾಂತಗಳು, ಕನ್ನಡ ಶಾಸ್ತ್ರಜ್ಞರ ಸುದ್ದಿಗಳು ಮೊದಲಾದ ವಿಷಯಗಳನ್ನು ಕುರಿತು ಬರೆದ ಗ್ರಂಥಗಳ ಕೊರತೆಯು ವಿಶೇಷವಾಗಿರುವದೆಂಬುದನ್ನು ನಾವು ಬಲ್ಲೆವು. ಚಾಲುಕ್ಯರು, ಕದಂಬರು, ಹೊಯಸಾಲರು, ವಿಜಯನಗರದವರು ಮೊದಲಾದವರ ದಿವ್ಯ ಚಾರಿತ್ರ್ಯಗಳಾದರೂ ನಮ್ಮ ಕಣ್ಣಿಗೆ ಕಟ್ಟಿರುತ್ತವೆ; ಆದರೆ ಬಹುದಿವಸದ ಹಿಂದಿನ ಆ ನಮ್ಮ ಪೂರ್ವಜರ ದಿವ್ಯ ಚರಿತ್ರೆಗಳ ಮೇಲೆ ರಜಪೂತರ, ಮುಸಲ್ಮಾನರ, ಮರಾಟರ ಉಜ್ವಲ ಚಾರಿತ್ರ್ಯಗಳ ರಾಶಿಗೆ ರಾಶಿಯು ಬಿದ್ದು, ನಮ್ಮವರ ಆ ದಿವ್ಯ ಚಾರಿತ್ರ್ಯಗಳು ಮರೆಯಾಗಿವೆ. ಈ ಪರಕೀಯ ಚರಿತ್ರಗಳ ಅಬ್ಬರದಲ್ಲಿ ಕನ್ನಡಿಗರೆನಿಸಿಕೊಳ್ಳುವ ನಮ್ಮ ಸ್ವಾಭಿಮಾನವು ನಷ್ಟವಾಗಿ, ಕನ್ನಡ ಗ್ರಂಥಗಳನ್ನು, ಕನ್ನಡ ಗ್ರಂಥಕಾರರನ್ನು, ಕನ್ನಡ ನುಡಿಯನ್ನು, ಕನ್ನಡ ಬರೆಯುವದನ್ನು ಕೂಡ ನಾವು ಬಿಟ್ಟುಕೊಟ್ಟು, ಭ್ರಾಂತಿಯಿಂದ ಅನ್ಯಭಾಷೆಗಳ ಬೆನ್ನುಹತ್ತಿ, ಅದನ್ನೇ ಪ್ರತಿಷ್ಠೆಯ ಲಕ್ಷಣವೆಂದು ಭಾವಿಸುತ್ತಲಿದ್ದೆವು.

"ಇನ್ನು ಮೇಲೆ ಮೊದಲು ವಿಜಯನಗರದ ಪ್ರತಿಷ್ಠಾಪನೆಯ ಕಾದಂಬರಿಯನ್ನು ಬರೆದು, ಆ ರಾಜ್ಯಕ್ಕೆ ಸಂಬಂಧಿಸಿದ ಕೆಲವು ಸುರಸ ಕಾದಂಬರಿಗಳನ್ನು ಬರೆಯುವದಾದ ಮೇಲೆ ಚಾಲುಕ್ಯರೇ ಮೊದಲಾದ ಪ್ರಸಿದ್ಧ ಕನ್ನಡ ರಾಜರ ವಂಶಗಳಲ್ಲಿಯ ಉಜ್ವಲ ಪ್ರಸಂಗಗಳನ್ನು ಕುರಿತು ಕಾದಂಬರಿಗಳನ್ನು ಬರೆಯಬೇಕೆಂದು ಸಂಕಲ್ಪ ಮಾಡಿರುವೆವು. ಈ ಕೆಲಸಕ್ಕೆ ಸಾಧನ ಸಾಮಗ್ರಿಗಳು ಕಡಿಮೆಯಾಗಿರುವದರಿಂದ ಕನ್ನಡಿಗರು ಅವಸರ ಮಾಡಿದರೆ ಕೆಲಸವಾಗದು. ಸಂಬಾಳಿಸಿ ನಮ್ಮಿಂದ ಕೆಲಸ ಮಾಡಿಸಿಕೊಳ್ಳಬೇಕು"[2] ಎಂದು ಗಳಗನಾಥರು 1918ರಲ್ಲಿ ಪುನಃ ಪ್ರಾರ್ಥಿಸಿಕೊಂಡರು. ಅವರ ಈ ಪ್ರಾರ್ಥನೆಯಲ್ಲಿ ಕನ್ನಡಿಗರ ಬಗ್ಗೆ ಅವರ ಅಭಿಮಾನ, ಕನ್ನಡಿಗರನ್ನು ಕುರಿತು ಸ್ವತಂತ್ರವಾಗಿ ಬರೆಯಬೇಕೆಂಬ ಉತ್ಕಟವಾದ ಹಂಬಲದ ಜೊತೆಗೆ ಅವರ ಅಸಹಾಯಕತೆಯೂ ವ್ಯಕ್ತವಾಗಿದೆ.

"Low aim and not failure is crime" ಎಂದು ಹೇಳುವಂತೆ ಗಳಗನಾಥರು ಮಹತ್ವಾಕಾಂಕ್ಷೆಯುಳ್ಳವರಾಗಿದ್ದರು. ಅದೆಲ್ಲವನ್ನೂ ಸಾಧಿಸಲಿಕ್ಕೆ ಸಮರ್ಥರಾಗಲಿಲ್ಲವಾದರೂ ಅವರು ಅನಂತರ ಎರಡಾದರೂ ಕನ್ನಡಿಗರ ಸ್ವತಂತ್ರ ಕಾದಂಬರಿಗಳನ್ನು ಬರೆಯಲು ಸಮರ್ಥರಾದರು. 'ಮಾಧವ ಕರುಣಾವಿಲಾಸ' (1923) ಮತ್ತು 'ದುರ್ಗದ ಬಿಚ್ಚುಗತ್ತಿ' (1938) ಇವುಗಳೇ ಆ ಕಾದಂಬರಿಗಳು.

1. 'ತಿಲೋತ್ತಮೆ' 'ಮರಾಠರ ಅಭ್ಯುದಯ', 'ಶಿವಪ್ರಭುವಿನ ಪುಣ್ಯ', 'ಛತ್ರಪತಿ', 'ಕುರುಕ್ಷೇತ್ರ', ಮತ್ತು 'ಗೃಹಕಲಹ' ಈ ಅನುವಾದಿತ ಕಾದಂಬರಿಗಳು 1916 ಮತ್ತು 1923ರ ಮಧ್ಯದಲ್ಲಿ ಪ್ರಕಟವಾಗಿವೆ.

2. ಗಳಗನಾಥ : ಮರಾಟರ ಅಭ್ಯುದಯ, ಪ್ರಸ್ತಾವನೆ, ಪುಟ 6

**'ಮಾಧವ ಕರುಣಾವಿಲಾಸ'**ವು ಮೊದಲು ಗಳಗನಾಥರ 'ಸದ್ಗುರು' ಮಾಸಪತ್ರಿಕೆಯಲ್ಲಿ ಭಾಗಶಃ ಪ್ರಕಟವಾದರೂ, ಅದು ಸಂಪೂರ್ಣವಾಗಿ ಗ್ರಂಥರೂಪದಲ್ಲಿ ಪ್ರಕಟವಾದುದು 1923ರಲ್ಲಿ. ಗಳಗನಾಥರ ಸ್ವತಂತ್ರ ಅಥವಾ ಅನುವಾದಿತ ಕಾದಂಬರಿಗಳಲ್ಲಿ ಇದರಷ್ಟು ದೊಡ್ಡ ಗಾತ್ರದ ಬೇರೆ ಕಾದಂಬರಿಯಿಲ್ಲ. ಆದ್ದರಿಂದಲೇ ಗಳಗನಾಥರು ಈ ಕಾದಂಬರಿಯ ಬಗ್ಗೆ ಹೆಚ್ಚಿನ ಅಭಿಮಾನವನ್ನು ತಳೆದಿದ್ದರು. ಕಾದಂಬರಿಯ ಪ್ರಸ್ತಾವನೆಯಲ್ಲಿ ಅವರು ಹೇಳಿಕೊಂಡ ಕೆಲವು ಮಾತುಗಳನ್ನು ಗಮನಿಸಬಹುದಾಗಿದೆ.

"ಶ್ರೀ ಸದ್ಗುರು ಪ್ರೇರಣೆಯಿಂದ 'ಮಾಧವ ಕರುಣಾವಿಲಾಸ'ವೆಂಬ ಈ ಪ್ರಚಂಡವಾದ ಸುರಸ ತಾತ್ವಿಕ ಐತಿಹಾಸಿಕ ಕಾದಂಬರಿಯು ಮುಗಿದದ್ದರಿಂದ ನನ್ನ ತಲೆಯ ಮೇಲಿನದೊಂದು ದೊಡ್ಡ ಭಾರವು ಇಳಿದಂತಾಗಿ, ನನಗೆ ಹಿಡಿಸಲಾರದಷ್ಟು ಸಂತೋಷವಾಗಿರುವದು. ನನ್ನ ಲೇಖನ ವ್ಯವಸಾಯದ ಅಖಂಡವಾದ ಹದಿನೆಂಟು ವರ್ಷಗಳ ಅವಧಿಯಲ್ಲಿ ಇಷ್ಟು ಗೌರವದ ಹಾಗು ಇಷ್ಟು ದೊಡ್ಡವಾದ ಸ್ವತಂತ್ರವಿಚಾರದ ಪುಸ್ತಕವನ್ನು ನಾನು ಬರೆಯಲೇ ಇಲ್ಲ" ಎಂಬ ಆತ್ಮಾಭಿಮಾನವನ್ನು ತೋರಿರುವದಾದರೂ, "ಮಾಧವ ಕರುಣಾವಿಲಾಸವನ್ನು ಪ್ರೇರಿಸುವವರು ಮಹಾತ್ಮರಾದ ಮಾಧವಾಚಾರ್ಯರು; ಅವರು ಕರುಣಿಸಿ ಪ್ರೇರಿಸಿದ್ದನ್ನಷ್ಟು ಬರೆಯುವವನು ಪಾಮರನಾದ ಗಳಗನಾಥನು"[1] ಎಂದೂ ಹೇಳಿರುವಲ್ಲಿ ಅವರ ನಿರಹಂಕಾರವು ವ್ಯಕ್ತವಾಗಿದೆಯೆನ್ನಬಹುದು. ಮಾಧವಾಚಾರ್ಯರ ಪ್ರೇರಣೆಯಿಂದ ಬರೆದಿರುವುದರಿಂದಲೇ ತಮ್ಮ ಗ್ರಂಥವು ವಿಶೇಷ ಗುಣಗಳನ್ನು ಹೊಂದಿ ಗೌರವಾಸ್ಪದವಾಯಿತೆಂದೂ ಗಳಗನಾಥರು ತಿಳಿದರು.

"ಮೂರು ವರ್ಷಗಳಿಂದ ಬಹು ಶ್ರಮಬಟ್ಟು ಬರೆದಿರುವ ಈ ಘನತರವಾದ ಕಾದಂಬರಿಯನ್ನು ಪ್ರತ್ಯಕ್ಷ ಶ್ರೀ ಮಾಧವಾಚಾರ್ಯರೇ (ಶ್ರೀ ವಿದ್ಯಾರಣ್ಯರೇ) ಬರೆಸಿರುವದರಿಂದ, ಅದರ ಯೋಗ್ಯತೆಯನ್ನು ನಾನು ವರ್ಣಿಸಲಾರೆನು. ಇಡಿಯ ಕರ್ನಾಟಕದ ಚಿತ್ರವನ್ನು ಈ ಕಾದಂಬರಿಯು ಆಕರ್ಷಿಸಿರುವದು. ಈಗಿನ ಕಾಲದಲ್ಲಿ ಈ ಕಾದಂಬರಿಯನ್ನು ಓದದ ಕನ್ನಡಿಗರು ನಿಶ್ಚಯವಾಗಿ ಅಧನ್ಯರು. ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರ ಅಲೌಕಿಕ ಸಾಮರ್ಥ್ಯವು ಯಾವ ಕನ್ನಡಿಗನ ಸದೂರ್ಮಿಗಳನ್ನು ಸ್ಫೂರ್ತಿಗೊಳಿಸಲಿಕ್ಕಿಲ್ಲ? ಗಳಗನಾಥರ ವಿವಿಧ ಮನೋಹರ ಕಾದಂಬರಿಗಳಲ್ಲಿ ಇದು ಶ್ರೇಷ್ಠತರ ಕಾದಂಬರಿಯಾಗಿದ್ದು, ವಿದ್ಯಾರಣ್ಯರಂಥ ಮಹಾತ್ಮರ ಸತ್‌ಸ್ಫೂರ್ತಿಯಿಂದ ಆ ಗಳಗನಾಥರ ಹೃದಯವು ಇದರಲ್ಲಿ ಬಿಚ್ಚಿ ಇಡಲ್ಪಟ್ಟಿರುವದು."[2]

ಅಂತೂ, 'ಮಾಧವ ಕರುಣಾವಿಲಾಸ'ವನ್ನು ಬರೆದು ಗಳಗನಾಥರು ಕೃತಕೃತ್ಯತೆಯ ಭಾವವನ್ನು ತಳೆದರು. ಆತ್ಮತೃಪ್ತಿಯ ಜೊತೆಗೆ ಗಳಗನಾಥರು ಈ ಕಾದಂಬರಿಯಿಂದ ಹೆಚ್ಚಿನ ಖ್ಯಾತಿಯನ್ನೂ ಗೌರವವನ್ನೂ ಕೂಡ ಪಡೆದರು. "ಬೆಂಗಳೂರಿನ ಸಾಹಿತ್ಯ ಪರಿಷತ್ತಿನ ಅವಲೋಕನಕ್ಕಾಗಿ ಇದನ್ನು ಕಳಿಸಿದಾಗ, ಈ ವರೆಗೆ ಮಾಡಿದ ಕನ್ನಡಿಗರ ಗೌರವದ ಸೇವಾತಿಶಯಕ್ಕಾಗಿ ಆ ಪರಿಷತ್ತು ಗಳಗನಾಥರಿಗೆ 250ರೂಪಾಯಿ ಉಚಿತವಾಗಿ ಕೊಟ್ಟಿದೆ. ಮೈಸೂರ ಸರ್ಕಾರದ ದೇವರಾಜ ಚಾರಿಟಿ ಫಂಡಿನಿಂದ ಇದಕ್ಕೆ 200ರೂಪಾಯಿ-

1. ಗಳಗನಾಥ : ಮಾಧವ ಕರುಣಾವಿಲಾಸ, ಪ್ರಸ್ತಾವನೆ, ಪುಟ 1,2
2. ಗಳಗನಾಥ : ಸದ್ಗುರು ಪ್ರಭಾವ, ಪುಟ 116

ಗಳ ಉಚಿತವು ದೊರೆತಿರುವದು. ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘವೂ ಇದಕ್ಕೆ ಉಚಿತವನ್ನು ಕೊಟ್ಟಿರುವದು"[1] ಎಂದು ಗಳಗನಾಥರೇ ತಮ್ಮ 'ಮಾಧವ ಕರುಣಾವಿಲಾಸ'ಕ್ಕೆ ದೊರೆತ ಬಹುಮಾನಗಳ ವಿವರವನ್ನು ಕೊಟ್ಟಿರುವರು. ಅಚ್ಚಾಗಿ ಐದು ವರ್ಷಗಳಲ್ಲಿ ಈ ಬೃಹತ್ ಕಾದಂಬರಿಯ ಮೂರು ಸಾವಿರ ಪ್ರತಿಗಳ ಮಾರಾಟವಾಯಿತೆಂಬುದು ಇದರ ಜನಪ್ರಿಯತೆಯ ಸೂಚಕವೇ ಆಗಿದೆ.

ಇಂಥ ಈ ಮಹತ್ತ್ವದ ಕಾದಂಬರಿಯು ವಿಜಯನಗರ ರಾಜ್ಯದ ಸ್ಥಾಪನೆಯನ್ನು ಕುರಿತು ಬರೆದುದಾಗಿದೆ. ವಿಜಯನಗರ ರಾಜ್ಯಸ್ಥಾಪನೆಯ ವಿಷಯವು ಅತ್ಯಂತ ಸ್ಫೂರ್ತಿದಾಯಕವಾದುದೆಂಬುದರಲ್ಲಿ ಸಂದೇಹವಿಲ್ಲ. ಆದರೆ ಈ ಐತಿಹಾಸಿಕ ಸಂಗತಿಯ ಹಿನ್ನೆಲೆ ಅಸ್ಪಷ್ಟವೂ ಅನಿರ್ಣೀತವೂ ಆಗಿದೆ. ಇತಿಹಾಸಕಾರರಲ್ಲಿಯೇ ಈ ಬಗ್ಗೆ ಏಕಾಭಿಪ್ರಾಯವಿಲ್ಲ. ಹುಕ್ಕ–ಬುಕ್ಕರು ಮೊದಲು ಕಂಪಿಲರಾಯನ ಸೇವೆಯಲ್ಲಿದ್ದರೇ ? ಅಥವಾ ವರಂಗಲ್ಲಿನ ಪ್ರತಾಪರುದ್ರದೇವನಲ್ಲಿದ್ದರೆ ? ಅವರನ್ನು ದಿಲ್ಲಿಯ ಬಾದಶಹನಾದ ತಘಲಕ ಮಹಮ್ಮದನು ಸೆರೆಹಿಡಿದು ಮುಸಲ್ಮಾನರನ್ನಾಗಿ ಪರಿವರ್ತಿಸಿ, ಅನಂತರ ತನ್ನ ಪ್ರತಿನಿಧಿಗಳೆಂದು ದಕ್ಷಿಣಕ್ಕೆ ಕಳುಹಿಸಿದ್ದನೆ ? ಅವರು ಕನ್ನಡಿಗರೇ, ತೆಲುಗರೇ ? ಅವರಿಗೆ ಪ್ರೇರಣೆ ನೀಡಿದ ಗುರುಗಳು ಮಾಧವಾಚಾರ್ಯರೇ ? ವಿದ್ಯಾತೀರ್ಥರೆ ? ವಿದ್ಯಾರಣ್ಯರೆಂದು ಖ್ಯಾತರಾದ ಮಾಧವಾಚಾರ್ಯರೇ ? ಮಾಧವಾಚಾರ್ಯರು ಗೃಹಸ್ಥಾಶ್ರಮಿಗಳೇ, ಸಂನ್ಯಾಸಿಗಳೇ ? ಅವರಿಗೂ ರಾಜ್ಯಸ್ಥಾಪನೆಗೂ ಏನೂ ಸಂಬಂಧವೇ ಇಲ್ಲವೇ ? ಹೀಗೆ ಹಲವಾರು ಪ್ರಶ್ನೆಗಳೂ ಸಂದೇಹಗಳೂ ಇನ್ನೂ ಉಳಿದುಕೊಂಡಿವೆ. ಮಹಮ್ಮದೀಯ ಇತಿಹಾಸಕಾರರ ಕಥೆ ಒಂದು ರೀತಿಯಾದರೆ, ಹಿಂದೂ ಜನರಲ್ಲಿ ಪರಂಪರೆಯಿಂದ ರೂಢಿಯಲ್ಲಿರುವ ಕಥೆಯೇ ಬೇರೆಯಾಗಿದೆ. ಮೇಲೆ ಪರದೇಶದವರೂ ತಮ್ಮ ತಮ್ಮ ಕಥೆಗಳನ್ನು ಸೇರಿಸಿರುವರು. ಹೀಗಾಗಿ ರಾಜ್ಯಸ್ಥಾಪನೆಯ ಬಗ್ಗೆ ಖಚಿತವಾದ ವಿವರಗಳು ಇನ್ನೂ ಲಭ್ಯವಾಗದೆ, ಹಲವಾರು ಕಥೆಗಳು ಕೇಳಿಬರುತ್ತವೆ. ಈ ವಿಷಯದಲ್ಲಿ "Here we have a whole bundle of tales and traditions to account for the origin of the great kingdom, and can take our choice"[2] ಎಂದು ರಾಬರ್ಟ್ ಸಿವೆಲ್ ಅವರ ಅಭಿಪ್ರಾಯವನ್ನು ನೆನೆಯಬಹುದು.

ಗಳಗನಾಥರು ಮಾತ್ರ ವಿದ್ಯಾರಣ್ಯರೆಂದು ಖ್ಯಾತರಾದ ಮಾಧವಾಚಾರ್ಯರೇ ಹುಕ್ಕಬುಕ್ಕರಿಗೆ ಮಾರ್ಗದರ್ಶನ ಮಾಡಿ, ಅವರಿಂದ ಕನ್ನಡ ರಾಜ್ಯವನ್ನು ಸ್ಥಾಪಿಸಿದರೆಂದು ಪ್ರತಿಪಾದಿಸಿರುವರು. ಹುಕ್ಕಬುಕ್ಕರು ವರಂಗಲ್ಲಿನಿಂದ ಬಂದಿದ್ದರೆಂದೂ, ಅವರು ಕನ್ನಡಿಗರೇ ಆಗಿದ್ದರೆಂದೂ ಗಳಗನಾಥರು ಅಭಿಪ್ರಾಯಪಡುವರು.[3] ಅದರಂತೆ ಮಾಧವಾಚಾರ್ಯರು ಗೃಹಸ್ಥಾಶ್ರಮಿಗಳಾಗಿದ್ದರೆಂದೂ, ಅವರ ಹೆಂಡತಿ ವೈತಿಹೋತ್ರಿಯು ಅವರ ಸ್ವಧರ್ಮ

1. ಗಳಗನಾಥ : ಸದ್ಗುರು ಪ್ರಭಾವ, ಪುಟ, 117
2. Robert Sewell : A Forgotten Empire, page 22
3. "ಹುಕ್ಕ ದೊರೆಯು ಕುರುಬನಾಗಿರದೆ ಯಾದವಕುಲೋತ್ಪನ್ನ ಕ್ಷತ್ರಿಯನಾಗಿದ್ದು, ವರಂಗಳ ರಾಜಧಾನಿಯು ಹಾಳಾದಾಗ ಕುರುಬರ ವೇಷದಿಂದ ತನ್ನ ತಮ್ಮನಾದ ಬುಕ್ಕನೊಡನೆ ಆತನು ದಕ್ಷಿಣಕ್ಕೆ ಬಂದಿದ್ದನು" ಮಾಧವ ಕರುಣಾವಿಲಾಸ, ಪುಟ 764

ರಕ್ಷಣಾರ್ಥ ರಾಜ್ಯಸ್ಥಾಪನೆಯ ಕಾರ್ಯಕ್ಕೆ ಪ್ರೋತ್ಸಾಹಿಸಿದಳೆಂದೂ ಕಾದಂಬರಿಯಲ್ಲಿ ನಿರೂಪಿಸಿದ ಗಳಗನಾಥರು, ಪ್ರಸ್ತಾವನೆಯಲ್ಲಿ ಮಾಧವಾಚಾರ್ಯರು ಸಂನ್ಯಾಸಿಗಳಾಗಿರದೆ ಗೃಹಸ್ಥಾಶ್ರಮಿಗಳಾಗಿಯೇ ಇದ್ದು, ರಾಜ್ಯಸ್ಥಾಪನೆಯ ಕಾರ್ಯ ಪೂರೈಸಿದ ಅನಂತರ ಸಂನ್ಯಾಸವನ್ನು ಸ್ವೀಕರಿಸಿ ವಿದ್ಯಾರಣ್ಯರಾದರೆಂದು ಪ್ರತಿಪಾದಿಸಿರುವರು. ಅದರಂತೆ ಅವರು ಪ್ರಸ್ತಾವನೆಯಲ್ಲಿ, "ಈ ಕಾದಂಬರಿಯೊಳಗಿನ ಮುಖ್ಯ ಮುಖ್ಯ ಪಾತ್ರಗಳು ನಿಜವೆಂಬ ಬಗ್ಗೆ, ಹಾಗು ಮಾಧವಾಚಾರ್ಯರ ಸುವರ್ಣವೃಷ್ಟಿಯೇ ಮೊದಲಾದ ದೈವೀ ಸಹಾಯದಿಂದ ಹುಕ್ಕ-ಬುಕ್ಕರು ವಿಜಯನಗರದ ರಾಜ್ಯವನ್ನು ಸ್ಥಾಪಿಸಿದರೆಂಬ ಬಗ್ಗೆ ಇತಿಹಾಸವೂ ಆಖ್ಯಾಯಿಕೆಯೂ ದಂತಕಥೆಗಳೂ ತಾಮ್ರ ಪಟ–ಶಿಲಾಶಾಸನಗಳೂ ಸಾಕ್ಷಿಯಾಗಿರುವವು" ಎಂದು ಹೇಳಿರುವರು. ಆದರೆ ಅವರು ಖಚಿತವಾದ ಯಾವ ಆಕರಗಳನ್ನೂ ತಿಳಿಸಿಲ್ಲ.

ಐತಿಹಾಸಿಕ ಕಾದಂಬರಿಯಲ್ಲಿ ಎಷ್ಟು ಇತಿಹಾಸವಿರಬೇಕು, ಎಷ್ಟು ಕಲ್ಪನೆಯಿರಬೇಕು ಎಂಬ ಬಗ್ಗೆ ನಿರ್ದಿಷ್ಟ ನಿಯಮವೇನೂ ಇಲ್ಲ. ಅನೇಕ ಐತಿಹಾಸಿಕ ಕಾದಂಬರಿಕಾರರು ಇತಿಹಾಸಕ್ಕೆ ವಿರುದ್ಧವಾದ ಕೆಲವು ಘಟನೆಗಳನ್ನೂ ತಮ್ಮ ಕಾದಂಬರಿಯಲ್ಲಿ ನಿರೂಪಿಸಿರುವುದುಂಟು. ಐತಿಹಾಸಿಕ ಕಾದಂಬರಿ ಎಂದು ಕರೆದ ಬಂಕಿಮಚಂದ್ರರ ಹಲವು ಕಾದಂಬರಿಗಳಲ್ಲಿ ಇತಿಹಾಸದ ಅಂಶಗಳು ಯಾವುವು ಎಂಬುದನ್ನು ಸೂಕ್ಷ್ಮದರ್ಶಕ ಯಂತ್ರದಿಂದ ಹುಡುಕಬೇಕಾಗುತ್ತದೆ. ಐತಿಹಾಸಿಕ ಕಾದಂಬರಿಯೂ ಮುಖ್ಯವಾಗಿ ಕಾದಂಬರಿ; ಕಾದಂಬರಿ ಎಂದೇ ನಾವು ಅದರ ಮೌಲ್ಯಮಾಪನವನ್ನು ಮಾಡುತ್ತೇವೆ. ಬಹಳಷ್ಟು ಐತಿಹಾಸಿಕ ಕಾದಂಬರಿಗಳು 'ಐತಿಹಾಸಿಕ ರೋಮಾನ್ಸ್' ಎಂದೇ ಕರೆಯಿಸಿಕೊಳ್ಳಲು ಅರ್ಹವಾಗಿವೆ. ಗಳಗನಾಥರ 'ಮಾಧವ ಕರುಣಾವಿಲಾಸ'ವನ್ನು ಕೂಡ ಐತಿಹಾಸಿಕ ಕಾದಂಬರಿ ಎನ್ನುವುದಕ್ಕಿಂತ ಐತಿಹಾಸಿಕ ರೋಮಾನ್ಸ್ ಎಂದೇ ಕರೆಯಬಹುದಾಗಿದೆ. ಯಾಕೆಂದರೆ ಇದರಲ್ಲಿ ಇತಿಹಾಸಕ್ಕಿಂತ ಲೇಖಕರ ಕಲ್ಪನೆಯೇ ಪ್ರಧಾನವಾಗಿ ಕಾದಂಬರಿಯನ್ನು ರೂಪಿಸಿದೆ. ಅಲ್ಲದೆ ಇದರಲ್ಲಿ ನಿರೂಪಿತವಾದ ಅನೇಕ ಐತಿಹಾಸಿಕ ಘಟನೆಗಳೂ ಕೂಡ ಖಚಿತವಾಗಿ ನಿರ್ಣೀತವಾದ ಐತಿಹಾಸಿಕ ಸತ್ಯಘಟನೆಗಳಾಗಿಲ್ಲ.

ಕರ್ನಾಟಕದಲ್ಲಿ ಮಹಮ್ಮದೀಯ ದಾಳಿಗಳು, ಅವರ ದಬ್ಬಾಳಿಕೆ, ಅದರಿಂದ ಹಿಂದೂಧರ್ಮಕ್ಕೆ ಒದಗಿದ ಗಂಡಾಂತರ–ಈ ಹಿನ್ನೆಲೆಯಲ್ಲಿ ಮಾಧವಾಚಾರ್ಯರು ಹಿಂದೂಧರ್ಮದ ರಕ್ಷಣೆಗಾಗಿ ಹಿಂದೂ ರಾಜ್ಯಸ್ಥಾಪನೆಯ ಯೋಜನೆಯನ್ನು ಹಾಕಿ ಕಾರ್ಯಪ್ರವೃತ್ತರಾದರು. ಹುಕ್ಕ-ಬುಕ್ಕರು ಅವರಿಗೆ ಸಹಾಯಕರಾಗಿ ಕೆಲಸ ಮಾಡಿದರು. ಆದರಿಂದ ವಿಜಯನಗರ ರಾಜ್ಯಸ್ಥಾಪನೆಯಾಯಿತೆಂಬುದೇ ಈ ಬೃಹತ್ ಕಾದಂಬರಿಯ ವಸ್ತು.

ಗುರುಗಳಾದ ವಿಷ್ಣುಶರ್ಮರ ಅನುಜ್ಞೆಯನ್ನೂ ಆಶೀರ್ವಾದವನ್ನೂ ಪಡೆದು ಬಂದ ಮಾಧವನು ದೇಶಕಾರ್ಯಕ್ಕೆ ತೊಡಗಲೇಬೇಕಾದ ಅನಿವಾರ್ಯತೆಯನ್ನು ಮನಗಂಡನು. "ನೀನು ಒಂಟಿ ಹೊರೆಯ ಪುಸ್ತಕಗಳನ್ನು ಓದಿದ್ದು ವ್ಯರ್ಥವಲ್ಲವೇ ?.... ಈಗ ಪುಸ್ತಕಗಳನ್ನು ನೀನು ಕೈಮುಟ್ಟ ಕಟ್ಟಿ ಅತ್ತ ನಾಗವಂದಿಗೆಯ ಮೇಲೆ ಇಟ್ಟುಬಿಡು" ಎಂದು ತನಗೆ ತಾನೇ ಹೇಳಿಕೊಂಡ ಮಾಧವನು ಸಾಧ್ವಿಯಾದ ಹೆಂಡತಿಯ ಅನುಮತಿಯನ್ನು ಪಡೆದು ಪಂಪಾಕ್ಷೇತ್ರಕ್ಕೆ ಬಂದು, ಉಗ್ರ ತಪಸ್ಸುಗೈದು, ಭುವನೇಶ್ವರೀ ದೇವಿಯನ್ನು ಒಲಿಸಿಕೊಂಡು ಅವಳಿಂದ ಸುವರ್ಣವೃಷ್ಟಿಯ ವರವನ್ನು ಪಡೆದನು. ಇದು ಸ್ವಾರ್ಥಕ್ಕಾಗಿ ಪಡೆದ ವರವಲ್ಲ; ಹಿಂದೂಧರ್ಮ ರಕ್ಷಣೆಗಾಗಿ, ಹಿಂದೂ ರಾಜ್ಯಸ್ಥಾಪನೆಗಾಗಿ ಪಡೆದ ವರ.

ಮುಸಲ್ಮಾನರ ಕೊಲೆ–ಸುಲಿಗೆ–ಅತ್ಯಾಚಾರಗಳು ಲಂಗುಲಗಾಮು ಇಲ್ಲದೆ ನಡೆದೇ ಇದ್ದುವು. ಹಿಂದುಗಳನ್ನು ಪೀಡಿಸುವುದು, ಅವರ ಆಸ್ತಿಯನ್ನು ಅಪಹರಿಸುವುದು, ಹಿಂದೂ ತರುಣಿಯರನ್ನು ಅಪಹರಿಸುವುದು ಮೊದಲಾದವುಗಳು ಅವ್ಯಾಹತವಾಗಿ ಸಾಗಿದ್ದುವು. ವರಂಗಲ್ಲಿನ ಪ್ರತಾಪರುದ್ರದೇವನ ಆಶ್ರಯ ತಪ್ಪಿಹೋಗಿತ್ತಲ್ಲದೆ, ಆನೆಗೊಂದಿಯ ಅರಸನೂ ಮಹಮ್ಮದ ತಘಲಖನ ಕೋಪಕ್ಕೆ ಬಲಿಯಾದನು. ಅದರಿಂದ ಹಿಂದುಗಳನ್ನು ರಕ್ಷಿಸುವವರೇ ಇಲ್ಲದಂತಾಗಿದ್ದರು. ಮಹಮ್ಮದನಂತೂ ಯಮಸದೃಶನಾಗಿದ್ದನು. ಅವನ ಕ್ರೂರತನವನ್ನು ತಪ್ಪಿಸಿಕೊಳ್ಳಲು ಆತನ ಅಣ್ಣನ ಮಗನಾದ ಬಹಾವುದ್ದೀನನು ಆನೆಗೊಂದಿಯ ಜಂಬುಕೇಶ್ವರ ರಾಜನನ್ನು ಆಶ್ರಯಿಸಿದ್ದನು. ಅದುವೇ ಆ ರಾಜನ ನಾಶಕ್ಕೂ ಕಾರಣವಾಯಿತು.

ಇಂಥ ಕಾಲದಲ್ಲಿ ಕುರುಬರ ಹೆಗ್ಗನು (ಹುಕ್ಕನು) ಮುಸಲ್ಮಾನರ ಉಪಟಳದಿಂದ ಕಂಗೆಟ್ಟವರಿಗೆಲ್ಲ ಸಹಾಯ ಮಾಡುತ್ತಿದ್ದನು. ಕುರುಬರ ಮಲ್ಲನ ಹೆಂಡತಿ ಚೆನ್ನಮ್ಮ, ಆನೆಗೊಂದಿಯ ದೇವರಾಯನ ಮಗಳಾದ ಪದ್ಮಿನಿ ಮೊದಲಾದ ಹಿಂದೂ ಸ್ತ್ರೀಯರನ್ನು ಹೆಗ್ಗನೇ ಮುಸಲ್ಮಾನರ ದವಡೆಯೊಳಗಿಂಥ ಪಾರು ಮಾಡಿದ್ದನು. ಅದರಿಂದ ಹೆಗ್ಗನ ಗೌರವ ಹೆಚ್ಚಿ ಆತ ಹೆಗ್ಗಣ್ಣನಾದ; ಅನೇಕರು ಅವನ ಗುಂಪನ್ನು ಸೇರಿಕೊಂಡರು.

"ಬಿಸಿ ಹತ್ತದೆ ಬೆಣ್ಣೆ ಕರಗುವದಿಲ್ಲ"ವೆಂಬಂತೆ ಕನ್ನಡಿಗರೂ ಆಗ ಜಾಗೃತರಾದರು. ಹೆಗ್ಗನಂತೆ ಆತನ ತಮ್ಮನಾದ ಬುಕ್ಕನೂ "ದೇವಿಯ ಕೊಳ್ಳ"ದಲ್ಲಿ ತನ್ನದೊಂದು ಸುವ್ಯವಸ್ಥಿತವಾದ ಸೈನ್ಯವನ್ನೇ ಕಟ್ಟಿ ಮುಸಲ್ಮಾನರ ವಿರುದ್ಧ ಹೋರಾಡಲು ಸನ್ನದ್ಧನಾಗತೊಡಗಿದ್ದನು. ಪ್ರತಾಪರುದ್ರದೇವನ ಮಗನಾದ ಕೃಷ್ಣನಾಯಕನೂ ಬಂದು ಬುಕ್ಕನನ್ನು ಕೂಡಿಕೊಂಡನು. ಅಲ್ಲದೆ ರಹಮಾನಸಾಹೇಬ, ಅಬ್ದುಲ್‌ಸಾಹೇಬರಂಥ ನಿಷ್ಠ ಮುಸಲ್ಮಾನ ಸ್ನೇಹಿತರೂ ಆತನ ಸಹಾಯಕ್ಕಿದ್ದರು.

ಕಾಸೀಮನು ಮಹಮ್ಮದ ತಘಲಖಿನ ಅತ್ಯಂತ ಶೂರ ಮತ್ತು ಅಷ್ಟೇ ದುಷ್ಟ ಸೇನಾಪತಿಯಾಗಿದ್ದನು. ಆತನು ಹುಕ್ಕಬುಕ್ಕರ ತಂದೆಯಾದ ಸಂಗಮರಾಯನನ್ನು ಹಿಡಿದು ಸೆರೆಯಲ್ಲಿಟ್ಟಿದ್ದನು. ಅದರಂತೆ ಆನೆಗೊಂದಿಯ ದೇವರಾಯನ ಮಗಳು ಪದ್ಮಿನಿಯ ಮೇಲಿನ ಆಸೆಯಿಂದ ಅವಳನ್ನು ಕಪಟದಿಂದ ಅಪಹರಿಸಿ ತಂದು ಕಂಪಲಿಯ ಕೋಟೆಯಲ್ಲಿಟ್ಟು, ತನ್ನನ್ನು ನಿಕಾ ಮಾಡಿಕೊಳ್ಳುವಂತೆ ಒತ್ತಾಯಪಡಿಸುತ್ತಿದ್ದನು. ಆದರೆ ಮಾಧವಾಚಾರ್ಯರು ಇಂಥ ಕಾಸೀಮನ ಮನಃಪರಿವರ್ತನೆ ಮಾಡಲು ಸಮರ್ಥರಾದರು. ಆತ ಕನ್ನಡಿಗರ ಸ್ನೇಹಿತನಾದನು. ಮಾಧವಾಚಾರ್ಯರು ತಮ್ಮ ತಪಃಪ್ರಭಾವದಿಂದಲೂ, ಪ್ರವಚನ ಹಿತೋಪದೇಶಗಳಿಂದಲೂ ಕನ್ನಡಿಗರನ್ನೆಲ್ಲ ಒಂದುಗೂಡಿಸಿದರು. ವಿರೂಪಾಕ್ಷಾರ್ಯ ಎಂಬ ವೀರಶೈವ ಜಂಗಮರೂ ಈ ಕಾರ್ಯದಲ್ಲಿ ಸಹಾಯ ಮಾಡಿದರು. ಮಾಧವಾಚಾರ್ಯರ ಮಾರ್ಗದರ್ಶನದಲ್ಲಿ ಹುಕ್ಕಬುಕ್ಕರು ಮೊದಲು ಕಂಪಲಿಯ ಕೋಟೆಯನ್ನು, ಅನಂತರ ಮಲಿಕ ನಾಯಬನ ವಶದಲ್ಲಿದ್ದ ಕಾಂಚನ ಗಡವನ್ನೂ[1] ಗೆದ್ದುಕೊಂಡರು.

ಹೀಗೆ ದಕ್ಷಿಣದಲ್ಲಿ ಕಾಲೂರುತ್ತಿದ್ದ ಮುಸಲ್ಮಾನರನ್ನು ಹೊಡೆದೋಡಿಸಲು ಮಾಧವಾಚಾರ್ಯರು ಕಾರಣಕರ್ತರಾದರು. ಅವರ ಪ್ರಭಾವವನ್ನು ಅರಿತ ಜನರು ಅವರಿಗೆ ತಮ್ಮ ತನುಮನಧನಗಳನ್ನು ಅರ್ಪಿಸಲು ಸಿದ್ಧರಾದರು. ಮಾಧವಾಚಾರ್ಯರು ಸ್ವರಾಜ್ಯಸ್ಥಾಪನೆಯ

1. ಈ ಕೋಟೆ ಗಳಗನಾಥರ ಕಲ್ಪನೆ.

ಕಾರ್ಯಕ್ಕೆ ಸಕಲ ಸಂಪತ್ತಿನ ಸಹಾಯವನ್ನು ಯಾಚಿಸಿದ ಕೂಡಲೇ, ಬಡವ-ಬಲ್ಲಿದರೆನ್ನದೆ ಕನ್ನಡಿಗರ ಅಪಾರ ಜನಸಾಗರವು ಚಿತ್ರಾಪೂರ್ಣಿಮೆಯ ದಿವಸ ಹಂಪೆಯಲ್ಲಿ ನೆರೆಯಿತು. ಜನರು ತಮ್ಮಲ್ಲಿದ್ದ ಸಂಪತ್ತನ್ನು ಬಂಡಿ, ಆನೆ, ಒಂಟೆ, ಕುದುರೆ, ಹೇಸರಗತ್ತೆ, ಎತ್ತುಗಳ ಮೇಲೆ ಹೇರಿಕೊಂಡು ಬಂದು ಮಾಧವಾಚಾರ್ಯರಿಗೆ ಅರ್ಪಿಸಿದರು. ಅದನ್ನು ಎಲ್ಲರ ಕೈಗಳಿಂದ ಸ್ವತಃ ಸ್ವೀಕರಿಸಲು ಮಾಧವಾಚಾರ್ಯರಿಗೆ ಸಾಧ್ಯವೇ ಇರಲಿಲ್ಲ. ಅಂದು ಪಂಪಾಪತಿಯ ರಥೋತ್ಸವವು ಮುಗಿದ ಬಳಿಕ ಅವರು ನೆರೆದ ಜನರನ್ನು ಕುರಿತು ''ನೀವು ಇದ್ದ ಸ್ಥಳದಲ್ಲಿಯೇ ಕೃಷ್ಣಾರ್ಪಣ ಬುದ್ಧಿಯಿಂದ ಸ್ವರಾಜ್ಯಕ್ಕಾಗಿ ತಂದ ಧನವನ್ನು ನೆಲಕ್ಕೆ ಸುರುವಿ ಬಿಡಿರಿ'' ಎಂದು ಹೇಳಿದರು. ಜನ ಅದರಂತೆಯೇ ಮಾಡಿತು. ಅದುವೇ ದೇವಿಯಿತ್ತ ವರದಾನದ ಸುವರ್ಣ ವೃಷ್ಟಿಯೆಂದು ಗಳಗನಾಥರು ಹೇಳುವರು.

ಅನಂತರ ''ಸಡಗರದ ಸಮಾರಂಭಗಳು'' ನಡೆದುವು. ಸಂಗಮರಾಜನು ಪಟ್ಟಾಭಿಷಿಕ್ತನಾದನು. ಹುಕ್ಕನು ಯುವರಾಜನಾದನು. ಪದ್ಮಿನಿಯೊಂದಿಗೆ ಹುಕ್ಕರಾಜನ ವಿವಾಹವೂ ನೆರವೇರಿತು. ಸಮಾರಂಭದ ಕೊನೆಯಲ್ಲಿ ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರಾದ ಮಾಧವಾಚಾರ್ಯರು ನೆರೆದವರಿಗೆಲ್ಲ ಉಪದೇಶಪರ ಭವಿಷ್ಯಕಥನವನ್ನೂ ಮಾಡಿದರು.

'ಮಾಧವ ಕರುಣಾವಿಲಾಸ'ದಲ್ಲಿ ಬರುವ ಹುಕ್ಕ, ಬುಕ್ಕ, ಮಹಮ್ಮದ ತಘಲಖಿ, ಬಹಾವುದ್ದೀನ, ನಾಯಬ ಮತ್ತು ಆನೆಗೊಂದಿಯ ದೇವರಾಯ ಇವರು ಐತಿಹಾಸಿಕ ವ್ಯಕ್ತಿಗಳೇ ಆಗಿರುವರು. ಆದರೂ ಇಲ್ಲಿ ಮೂಡಿಬಂದ ಅವರ ಚಿತ್ರಣದಲ್ಲಿ ಗಳಗನಾಥರ ಕೈವಾಡ ಹೆಚ್ಚಾಗಿದೆ. ಇನ್ನು ಕಾಸೀಮ, ರಹಮಾನ, ಅಬ್ದುಲ್, ಮಲಿಕ, ಮಲ್ಲಸರ್ಜ, ಆತನ ಹೆಂಡತಿ ಚಿನ್ನಮ್ಮ, ಮಾದರ ದುರಗಪ್ಪ, ತಿರುವೆಂಕಟ, ವಿರೂಪಾಕ್ಷಾರ್ಯ, ಪದ್ಮಿನಿ, ವೈತಿಹೋತ್ರಿ ಮೊದಲಾದವರೆಲ್ಲ ಲೇಖಕರ ಮಾನಸ ಸಂತಾನ. ಕಾದಂಬರಿಯಲ್ಲಿ ಚಿತ್ರಿತವಾದ ಬಹುಪಾಲು ಘಟನೆಗಳು ಮತ್ತು ಸನ್ನಿವೇಶಗಳು ಗಳಗನಾಥರ ಕಲ್ಪಕತೆಯಿಂದಲೇ ಮೂಡಿಬಂದವುಗಳು. ಇಷ್ಟು ಹಿನ್ನೆಲೆಯಲ್ಲಿ, ಕಥಾನಿರೂಪಣೆ, ಪಾತ್ರಚಿತ್ರಣ ಮೊದಲಾದವುಗಳ ದೃಷ್ಟಿಯಿಂದ 'ಮಾಧವ ಕರುಣಾವಿಲಾಸ'ದ ರಚನೆಯಲ್ಲಿ ಗಳಗನಾಥರು ತೋರಿದ ಗುಣದೋಷಗಳೇನು, ಕನ್ನಡ ಕಾದಂಬರೀ ಸಾಹಿತ್ಯಚರಿತ್ರೆಯಲ್ಲಿ 'ಮಾಧವ ಕರುಣಾವಿಲಾಸ'ದ ಸ್ಥಾನವೇನು ಎಂಬುದನ್ನು ವಿಚಾರಿಸಬಹುದು. ಆದರೆ ಅದಕ್ಕಿಂತ ಮೊದಲು, ಈಗಾಗಲೇ ಕೆಲವು ವಿಮರ್ಶಕರು ಈ ಕಾದಂಬರಿಯನ್ನು ಕುರಿತು ಬರೆದ ಕೆಲವು ಮಾತುಗಳನ್ನು ಅವಲೋಕಿಸುವುದು ಅಪ್ರಸ್ತುತವಾಗಲಾರದು.

ಗಳಗನಾಥರ ಬಗ್ಗೆ ಹೆಚ್ಚಿನ ವಿಮರ್ಶಾಸಾಹಿತ್ಯವಿಲ್ಲವಾದರೂ ಕೆಲವರು ಅಲ್ಲಲ್ಲಿ ಬರೆದಿರುವುದುಂಟು. ಅದರಲ್ಲಿ 'ಮಾಧವ ಕರುಣಾವಿಲಾಸ'ಕ್ಕೆ ಸಂಬಂಧಪಟ್ಟಂತೆ ಹಳೆಯ ತಲೆಮಾರಿನ ಸಾಲಿ ರಾಮಚಂದ್ರರಾಯರು, ಅನಂತರದ ಎನ್. ಕೆ. ಕುಲಕರ್ಣಿ, ಇತ್ತೀಚಿನವರಾದ ಕೀರ್ತಿನಾಥ ಕುರ್ತಕೋಟಿ ಮತ್ತು ಜಿ. ಎಚ್. ನಾಯಕ ಅವರ ವಿಚಾರಗಳು ಗಮನಾರ್ಹವಾಗಿವೆ.

ಈ ತಲೆಮಾರಿನವರಿಗಿಂತ ಅಂದಿನ ಸಾಲಿಯವರಿಗೆ ಗಳಗನಾಥರ ಈ 'ಮಾಧವ ಕರುಣಾವಿಲಾಸ'ವು ಹೆಚ್ಚು ಸ್ಫೂರ್ತಿದಾಯಕವಾಗಿ, ಅರ್ಥಪೂರ್ಣವಾಗಿ ಕಂಡಿರುವುದು ಸಹಜವೇ ಸರಿ. ಅವರು ಈ ಕಾದಂಬರಿಯನ್ನು ಕುರಿತು:

"'ಮಾಧವ ಕರುಣಾವಿಲಾಸ'ವು (ಡೆಮಿ ಆಕಾರದ) ಆರುನೂರು ಪುಟದ ಐತಿಹಾಸಿಕ ಕಾದಂಬರಿ. ಕನ್ನಡಿಗರು ತಮ್ಮನ್ನೇ ಮರೆಶಿದ್ದ ಕಾಲದಲ್ಲಿ ಅವರನ್ನು ಎಚ್ಚರಿಸುವ ಉದ್ದೇಶದಿಂದ ಶ್ರೀ ಗಳಗನಾಥರು ಈ ಪುಸ್ತಕವನ್ನು ಬರೆದರು. ಇದರಲ್ಲಿ ಕನ್ನಡಿಗರ ವಿಲಕ್ಷಣ ಜಾಗೃತಿಯನ್ನು ಬಣ್ಣಿಸಿದ್ದಾರೆ.... 'ಮಾಧವ ಕರುಣಾವಿಲಾಸ'ದಲ್ಲಿ ವಿಜಯನಗರದ ಸಾಮ್ರಾಜ್ಯ ಸ್ಥಾಪನೆ ಆಗಲಿಕ್ಕೆ ಒದಗಿ ಬಂದ ಸಾಹಸದ ಸನ್ನಿವೇಶಗಳ ಸಂಪೂರ್ಣ ವರ್ಣನೆ ಇದೆ. ಪುಸ್ತಕವನ್ನು ಓದಲು ಹಿಡಿದರೆ ಬಿಡಬೇಕೆಂದು ಅನ್ನಿಸುವುದಿಲ್ಲ"[1] ಎಂದು ಕಾದಂಬರಿಯ ಗುಣಪ್ರಶಂಸೆ ಮಾಡಿರುವರು. 'ಮಾಧವ ಕರುಣಾವಿಲಾಸ'ವನ್ನು ಅಭ್ಯಾಸದ ದೃಷ್ಟಿಯಿಂದ ನಾಲ್ಕು ಘಟ್ಟಗಳಲ್ಲಿ ವಿಂಗಡಿಸಬಹುದೆಂದು ಸೂಚಿಸಿರುವುದು ಸಾಲಿಯವರ ಈ ಲೇಖನದಲ್ಲಿ ಗಮನಿಸಬಹುದಾದ ಅಂಶವಾಗಿದೆ. ಸಾಲಿಯವರ ವಿಂಗಡಣೆ ಈ ರೀತಿ ಇದೆ :

| | | | |
|---|---|---|---|
| 1ನೆಯ | ಭಾಗ | — | 1 ರಿಂದ 13 ಪ್ರಕರಣಗಳು. |
| 2ನೆಯ | ಭಾಗ | — | 14 ರಿಂದ 28 ಪ್ರಕರಣಗಳು. |
| 3ನೆಯ | ಭಾಗ | — | 29 ರಿಂದ 43 ಪ್ರಕರಣಗಳು. |
| 4ನೆಯ | ಭಾಗ | — | 44 ರಿಂದ 60 ಪ್ರಕರಣಗಳು. |

ಈ ವಿಂಗಡಣೆ ಸಮಂಜಸವೂ ಆಗಿದೆ ಎನ್ನಬಹುದು. ಮೊದಲ ಭಾಗದಲ್ಲಿ ವಿಷ್ಣುಶರ್ಮರ ಶಿಷ್ಯರಾದ ಮಾಧವಾಚಾರ್ಯರ ಪೂರ್ವೇತಿಹಾಸ, ಅವರ ಸಂಕಲ್ಪ, ತಪಸ್ಸುಗಳೂ, ಮಹಮ್ಮದೀಯರ ನಿಂದನೀಯವಾದ ಉಪಟಳಗಳೂ, ಹೆಗ್ಗನ ಸಾಹಸ–ಪ್ರಯತ್ನಗಳೂ, ಮಹಮ್ಮದ ತಘಲಖನ ಕ್ರೂರತೆ–ವಿಕ್ಷಿಪ್ತತೆಗಳೂ ಚಿತ್ರಿತವಾಗಿ ರಾಜ್ಯಸ್ಥಾಪನೆಯ ಹಿನ್ನೆಲೆಯನ್ನು ಚಿತ್ರಿಸುತ್ತವೆ. ಎರಡನೆಯ ಭಾಗದಲ್ಲಿ ಹುಕ್ಕನ ತಮ್ಮನಾದ ಬುಕ್ಕನ ಸೈನ್ಯಸಿದ್ಧತೆ, ಮಲ್ಲಸರ್ಜ ಕೃಷ್ಣನಾಯಕರು ಆತನನ್ನು ಕೂಡಿಕೊಳ್ಳುವುದು, ಕಾಸೀಮನಿಂದ ಪದ್ಮಿನಿಯ ಅಪಹರಣ, ಹುಕ್ಕ–ಬುಕ್ಕರು ಕಾಸೀಮನ ಕೈಸೇರುವುದು, ಮಾಧವಾಚಾರ್ಯರ ಉಪದೇಶದಿಂದ ಕಾಸೀಮನ ಮನವನ್ನು ಒಲಿಸಿಕೊಳ್ಳುವುದು, ಕಾಸೀಮನ ಪಶ್ಚಾತ್ತಾಪ ಇವುಗಳು ನಿರೂಪಿತವಾಗಿವೆ. ಮೂರನೆಯ ಭಾಗವೆಲ್ಲ ಕೇವಲ ತತ್ತ್ವಪ್ರತಿಪಾದನೆ, ಚರ್ಚೆಗಳಿಂದ ತುಂಬಿ ಹೋಗಿದೆ. ಇಲ್ಲಿ 'ಮಾಧವ ಕರುಣಾವಿಲಾಸ'ದ ಕಥೆ ಕುಂಟುತ್ತದೆ. ಆದರೆ ಸಾಲಿ ರಾಮಚಂದ್ರರಾಯರಿಗೆ ಈ ಭಾಗವೂ ನಿರರ್ಥಕವೆಂದು ಕಂಡಿಲ್ಲ.

"ಮೂರನೆಯ ಭಾಗದಲ್ಲಿ ಗ್ರಂಥಕರ್ತರು ತಾತ್ತ್ವಿಕ ಚರ್ಚೆಯನ್ನು ಮಾಡಿದ್ದಾರೆ. ಈ ಕಾದಂಬರಿಯನ್ನು ಅವರು 1921–23ರ ಸುಮಾರು ಬರೆದರು. ಆಗ ನಮ್ಮ ದೇಶದಲ್ಲಿ ಮಹಾತ್ಮಾ ಗಾಂಧಿಯವರು ಹೂಡಿದ ಅಸಹಕಾರ ಆಂದೋಲನವು ರಭಸದಲ್ಲಿ ಇದ್ದಿತು. ಅದರ ಪರಿಣಾಮವಾಗಿ ಗಳಗನಾಥರು ಕೆಲವು ತಾತ್ತ್ವಿಕ ವಿಷಯಗಳನ್ನು ಚರ್ಚಿಸಿರುವರು. ವೈದಿಕ ಧರ್ಮಗಳೂ ಅವುಗಳ ಸ್ಥಾನಮಾನಗಳೂ, ಜಾತಿಯ ಸಮಸ್ಯೆಯೂ, ಧರ್ಮಗಳೂ, ಅಸ್ಪೃಶ್ಯತೆಯೂ, ಧಾರ್ಮಿಕ ವ್ಯವಹಾರಗಳೂ ಇವೆಲ್ಲವುಗಳ ಮತ್ತು ಅಹಿಂಸಾ ತತ್ತ್ವದ ವಿವೇಚನೆ ಇಲ್ಲಿ ಕಾಣಬರುತ್ತದೆ. ತತ್ತ್ವದ ಚರ್ಚೆಯ ಸಲುವಾಗಿಯೆ ಅವರು ಈ ಕಾದಂಬರಿಯನ್ನು 'ಐತಿಹಾಸಿಕ ಸುರಸ ತಾತ್ತ್ವಿಕ ಕಾದಂಬರಿ' ಎಂದು ಕರೆಯುತ್ತಾರೆ. ಈ ತತ್ತ್ವಗಳು ಯಾವ ಕಾಲದಲ್ಲಿಯೂ ಇರುವಂಥವುಗಳು. ಅವುಗಳನ್ನು ಆ ಕಾಲದ

1. ಸಂಯುಕ್ತ ಕರ್ನಾಟಕ, ದಿನಾಂಕ 27-11-1940.

ಸನ್ನಿವೇಶಗಳಿಗೆ ಅನುವಾಗುವಂತೆ, ಪ್ರಸಕ್ತಿಗೆ ಅವಿರೋಧಿಯಾಗುವಂತೆ ಬೆಳೆಸಿಕೊಂಡಿದ್ದಾರೆ. ಈ ತತ್ತ್ವಬೋಧದಿಂದ ಶತ್ರುಗಳನ್ನು ಮಿತ್ರರಾಗಿ ಮಾಡಿಕೊಳ್ಳಲು ಅನುಕೂಲವಾಯಿತು"[1] ಎಂಬ ಸಾಲಿಯವರ ಅಭಿಪ್ರಾಯವನ್ನು ಒಪ್ಪುವುದು ತುಸು ಕಠಿಣವೇ ಆಗಿದೆ.

ಕೊನೆಯ ಭಾಗದಲ್ಲಿ ಕಾದಂಬರಿಯ ಕಥೆ ಮತ್ತೆ ಮುಂದುವರೆಯುತ್ತದೆ. ತಘಲಖನ ಸುಬೇದಾರನಾದ ಮಲಿಕ ನಾಯಬನು ಮಾಧವಾಚಾರ್ಯ, ಹುಕ್ಕ, ಬುಕ್ಕ, ಮುದ್ದ, ಮಾರ ರನ್ನು ಸೆರೆಯಲ್ಲಿ ಇರಿಸುವನು. ಅದರಿಂದ ಕನ್ನಡಿಗರು ರೊಚ್ಚಿಗೆದ್ದು ಶೌರ್ಯದಿಂದಲೂ ಯುಕ್ತಿ–ಕುಯುಕ್ತಿಗಳಿಂದಲೂ ಕಾದಿ ಕೋಟೆಯನ್ನು ವಶಪಡಿಸಿಕೊಂಡು, ತಮ್ಮ ನಾಯಕ ರನ್ನು ಬಂಧಮುಕ್ತಗೊಳಿಸಿದರು.

ಒಟ್ಟಿನಲ್ಲಿ ಸಾಲಿ ರಾಮಚಂದ್ರರಾಯರ ಈ ಲೇಖನವು ಕಾದಂಬರಿಯ ಕಥೆಯನ್ನು ಸ್ಥೂಲವಾಗಿ ವಿಶ್ಲೇಷಿಸುತ್ತದೆ.[2] ಅದರಲ್ಲಿ ವಿಮರ್ಶೆಯ ದೃಷ್ಟಿಕೋನವು ಹೆಚ್ಚಾಗಿ ಕಂಡು ಬರುವುದಿಲ್ಲ. ಆದರೂ ಗಳಗನಾಥರ ಸಮಕಾಲೀನರು ಈ ಕಾದಂಬರಿಯನ್ನು ಹೇಗೆ ಕಂಡ ರೆಂಬುದನ್ನು ಸಾಲಿಯವರ ಮಾತುಗಳು ಸೂಚಿಸುತ್ತವೆ.

'ಗಳಗನಾಥರ ಕರ್ನಾಟಕ ಇತಿಹಾಸದ ಮೂರು ಕಾದಂಬರಿಗಳ'ನ್ನು ಕುರಿತು ಬರೆದ ಎನ್. ಕೆ. ಕುಲಕರ್ಣಿ ಅವರು " 'ಮಾಧವ ಕರುಣಾವಿಲಾಸ'ವಂತೂ ಗಳಗನಾಥರ ತಪಶ್ಚರ್ಯೆಯ ಒಂದು ಫಲ ಎಂದೇ ಹೇಳಬೇಕು....'ಮಾಧವ ಕರುಣಾವಿಲಾಸ'ವು ಗಳಗನಾಥರ ಮೇರುಕೃತಿ ಎಂದರೆ ತಪ್ಪಾಗಲಾರದು....ಇಲ್ಲಿ ಕೂಡ ವಾಚಕರನ್ನು ಉದ್ದೇಶಿಸಿ ಆಗಾಗ ನಡೆಸುವ ಅತಿ ಪ್ರಸಂಗದ ಭಾಗಗಳನ್ನು ಬಿಟ್ಟರೆ, ಕಥೆಯ ಕುತೂಹಲಿಕೆ, ಪಾತ್ರಪರಿಪೋಷಣೆ, ರಸಾವಿಷ್ಕಾರ ಶೈಲಿ ವರ್ಣನೆಗಳಿಂದಾಗಿ 'ಮಾಧವ ಕರುಣಾವಿಲಾಸ'ವು ಮಹತ್ವಪೂರ್ಣವಾದ ಗ್ರಂಥವೆನಿಸು ತ್ತದೆ. ಕನ್ನಡ ಕಾದಂಬರೀ ಪ್ರಪಂಚದಲ್ಲಿ ಇದೊಂದು ದೊಡ್ಡ ಮೈಲುಗಲ್ಲು. ಪ್ರಕರಣದಿಂದ ಪ್ರಕರಣಕ್ಕೆ ಮುಂದೇನಾಯಿತು? ಮುಂದೇನಾಯಿತು? ಎಂದು ವಾಚಕನು ಕಥೆಯ ಜಾಡನ್ನು ಹಿಡಿದು ಓಡುವಂತಾಗಿದೆ. 'ಪ್ರಬುದ್ಧ ಪದ್ಮನಯನೆ' ಗಳಗನಾಥರ ಪ್ರಥಮ ಅನುವಾದಿತ[3] ಕಾದಂಬರಿಯಾದರೆ, ಅವರ ಕಾದಂಬರೀ ಸಾಮ್ರಾಜ್ಯದ ಕಿರೀಟಪ್ರಾಯವಾಗಿದೆ, 'ಮಾಧವ ಕರುಣಾವಿಲಾಸ'ವು. ಇದೊಂದು ಕನ್ನಡಿಗರ ದೊಡ್ಡ ಹೆಮ್ಮೆ"[4] ಎಂದು ಹೊಗಳಿ ಬರೆದಿರು ವರು. ಎನ್ಕೆ ಅವರು, ಹೆಚ್ಚಾಗಿ ಕಾದಂಬರಿಯನ್ನು ವಿಶ್ಲೇಷಿಸುವ ಗೋಜಿಗೆ ಹೋಗದೆ, ಪ್ರಸ್ತಾವನೆಯಲ್ಲಿಯ ಗಳಗನಾಥರ ಮಾತುಗಳನ್ನು ವಿಪುಲವಾಗಿ ಬಳಸಿಕೊಂಡು, ಅಲ್ಲಲ್ಲಿ ಇಂಥ ಪ್ರಶಂಸೆಯ ಮಾತುಗಳಿಂದ ಲೇಖನವನ್ನು ಮುಗಿಸಿರುವರು.

ಆ ದೃಷ್ಟಿಯಿಂದ ಕೆ. ಡಿ. ಕುರ್ತಕೋಟಿ ಅವರ ಮಾತುಗಳು ತುಂಬ ವಿಚಾರ ಪೂರ್ಣವಾಗಿವೆ. "ಗಳಗನಾಥರು ಒಂದಾದರೂ ಸ್ವತಂತ್ರ ಕಾದಂಬರಿಯನ್ನು ಬರೆದರು.[5]

---

1. ಅದೇ.
2. ಸಾಲಿಯುವರ ಈ ಲೇಖನವು 'ಸಂಯುಕ್ತ ಕರ್ನಾಟಕ'ದ 27-11-40 ಮತ್ತು 29-11-40ರ ಪತ್ರಿಕೆ ಗಳಲ್ಲಿ ಪ್ರಕಟವಾಗಿದೆ.
3. ಈ ಅಭಿಪ್ರಾಯ ಸರಿಯಲ್ಲ, 'ಪದ್ಮನಯನೆ' ಗಳಗನಾಥರ ಪ್ರಥಮ ಸ್ವತಂತ್ರ ಕಾದಂಬರಿ.
4. ಕರ್ಮವೀರ, ದಿನಾಂಕ 5-1-1969.
5. ಈ ಅಭಿಪ್ರಾಯ ಸರಿಯುಲ್ಲ, ಗಳಗನಾಥರು ಅನೇಕ ಸ್ವತಂತ್ರ ಕಾದಂಬರಿಗಳನ್ನು ಬರೆದಿರುವರು.

ಆದರೆ ಅವರ ಉಳಿದ ಕಾದಂಬರಿಗಳ ಮಟ್ಟಕ್ಕೆ 'ಮಾಧವ ಕರುಣಾವಿಲಾಸ' ಬರಲಿಲ್ಲ. ಇದಕ್ಕೆ ಕಾರಣಗಳಿಲ್ಲದಿಲ್ಲ. ವಿಜಯನಗರ ಸಾಮ್ರಾಜ್ಯದ ಸಂಸ್ಥಾಪನೆಯಂಥ ವಸ್ತು ಸಹಜವಾಗಿಯೇ ಆಕರ್ಷಕವಾಗಬಹುದಿತ್ತು. ಆದರೆ ಕಥಾವಸ್ತು ಗಳಗನಾಥರ ಶಕ್ತಿಯನ್ನು ಮೀರಿ ದೊಡ್ಡದಾಯಿತೋ, ಅಥವಾ ತತ್ವ ಧರ್ಮಗಳ ಮೇಲಿನ ದೀರ್ಘ ಚರ್ಚೆಗಳಿಂದ ಅವರೇ ಅದನ್ನು ದೊಡ್ಡದಾಗಿಸಿದರೋ ಹೇಳುವದು ಬಿಗಿಯಾಗಿದೆ. .... ಗಳಗನಾಥರು ಸನ್ನಿವೇಶಗಳನ್ನು ಇತಿಹಾಸಕ್ಕೆ ಒಪ್ಪುವಂತೆ ನಿರ್ಮಿಸಲು ಸಮರ್ಥರಾಗಲಿಲ್ಲ. 'ಮಾಧವ ಕರುಣಾವಿಲಾಸ'ದಲ್ಲಿ ಹೆಗ್ಗನ ಸಾಹಸ ಕೃತಿಗಳಾಗಲಿ, ಚಿನ್ನಮ್ಮನಂಥ ಕಲ್ಪಿತ ಪಾತ್ರಗಳ ವ್ಯವಹರಣೆಗಳಾಗಲಿ ರೋಮಾಂಚಕಾರಿಯಾಗಲಿಲ್ಲ. ಅಪ್ಪೆಶೈಲಿ ಈ ಕಾದಂಬರಿಗೆ ಹೊಂದಿಕೆಯಾಗದಿರುವದೇ ದೋಷವಾಗಿದೆ. ಇದರ ಜೊತೆಗೆ ನಡುನಡುವೆ ಬರುವ ತತ್ವಮಥನ ಹಾಗು ಧರ್ಮದ ದೀರ್ಘ ಚರ್ಚೆಗಳು ತಲೆಹಿಡಿಸುತ್ತವೆ. ಆ ಚರ್ಚೆ-ವಾದಗಳಲ್ಲಿ ವಿದ್ಯಾರಣ್ಯರ ವ್ಯಕ್ತಿತ್ವದ ಓಜಸ್ಸು ಕಂಡುಬರುವುದಿಲ್ಲ. ಜಾತೀಯತೆ ಅಸ್ಪೃಶ್ಯತೆ ಮೊದಲಾದ ಸಮಕಾಲೀನ ಜೀವನದ ಸಮಸ್ಯೆಗಳು ಬರುವದರಿಂದ ಒಮ್ಮೊಮ್ಮೆ ಈ ಪಾತ್ರಗಳ ಗುರುತು ಕೂಡ ತಪ್ಪಿ ಹೋಗುವಂತಾಗುತ್ತದೆ. ಮೊದಲಿದ್ದ ಅನುಭವವನ್ನೆಲ್ಲ ಉಪಯೋಗಿಸಿಕೊಂಡು ಇತಿಹಾಸದ ಪುನಃಸೃಷ್ಟಿಯೊಂದನ್ನೆ ಲಕ್ಷ್ಯದಲ್ಲಿಟ್ಟು ಈ ಕಾದಂಬರಿಯನ್ನು ಬರೆದಿದ್ದರೆ ಕನ್ನಡದಲ್ಲಿ ಇದೊಂದು ಯುಗವನ್ನೇ ನಿರ್ಮಿಸಬಹುದಾಗಿತ್ತು."[1]

ಶ್ರೀ ಕುರ್ತಕೋಟಿಯವರ ಈ ಮಾತುಗಳಲ್ಲಿ ಅರ್ಥವಿಲ್ಲದಿಲ್ಲ. ಆದರೆ ಅವರು ಕಾದಂಬರಿಯ ದೋಷಗಳನ್ನು ಮಾತ್ರ ಎತ್ತಿ ತೋರಿಸಿದ್ದಾರೆ. ಇದರಿಂದ ಕಾದಂಬರಿಯ ನ್ಯಾಯವಾದ ಮೌಲ್ಯಮಾಪನ ಆಗುವುದಿಲ್ಲ. ಅಲ್ಲದೆ ಕುರ್ತಕೋಟಿಯವರು 'ಮಾಧವ ಕರುಣಾವಿಲಾಸ'ದ ಮಹತ್ವವನ್ನೂ ಅರಿಯಲು ವಿಫಲರಾಗಿರುವರು. 'ಮಾಧವ ಕರುಣಾವಿಲಾಸ'ದಲ್ಲಿ ಎಷ್ಟೇ ದೋಷಗಳಿದ್ದರೂ ಅದರಲ್ಲಿ ಕೆಲವು ಗುಣಗಳೂ ಇವೆ; ಅದಕ್ಕಿಂತ ಹೆಚ್ಚಾಗಿ ಆ ಕಾದಂಬರಿಗೆ ಒಂದು ಐತಿಹಾಸಿಕ ಮಹತ್ತ್ವವೂ ಇದೆಯೆಂಬುದನ್ನು ಕಡೆಗಣಿಸಲಿಕ್ಕೆ ಬರುವುದಿಲ್ಲ.

ಈ ಎಲ್ಲ ದೃಷ್ಟಿಯಿಂದ ವಿಚಾರಮಾಡಿ, ಕಾದಂಬರಿಯ ಸುದೀರ್ಘ ವಿಶ್ಲೇಷಣೆಯನ್ನು ಮಾಡಿದವರು ಶ್ರೀ ಜಿ. ಎಚ್. ನಾಯಕ ಅವರು. "ವಿಮರ್ಶಕ ಇಂದಿನ ವಿಮರ್ಶಾ ಮೌಲ್ಯಗಳನ್ನಷ್ಟನ್ನೇ ಮನಸ್ಸಿನಲ್ಲಿಟ್ಟುಕೊಂಡು ಅವಕ್ಕೆ ಒರೆಹಚ್ಚಿ ನೋಡುವ ನಿಷ್ಠುರವಾದಿ ಮಾತ್ರವೇ ಆದಲ್ಲಿ 'ಮಾಧವ ಕರುಣಾವಿಲಾಸ' ತನಗೆ ನ್ಯಾಯವಾಗಿ ಸಲ್ಲಬೇಕಾಗಿದ್ದ ಸ್ಥಾನದಿಂದ ವಂಚಿತವಾಗುವುದು ಸಾಧ್ಯ. ಏಕೆಂದರೆ, ಮುಖ್ಯವಾಗಿ ಅದಕ್ಕೆ ಸ್ಥಾನಸಲ್ಲುವುದು ಅದರ ಕಲಾ ಮಹತ್ವಕ್ಕಿಂತ ಹೆಚ್ಚಾಗಿ ಐತಿಹಾಸಿಕ ಮಹತ್ವದಿಂದ"[2] ಎಂದು ಹೇಳಿರುವುದು ಸರಿಯಾದ ವಿಚಾರ.

'ಮಾಧವ ಕರುಣಾವಿಲಾಸ'ದಲ್ಲಿಯ ಚರ್ಚೆ, ಉಪದೇಶ ಮೊದಲಾದವುಗಳನ್ನು ಶ್ರೀ ನಾಯಕರೂ ಖಂಡಿಸಿರುವರು. "ನಡುನಡುವೆ ಬರುವ ತತ್ವಮಥನ ಹಾಗು ಧರ್ಮದ ದೀರ್ಘ ಚರ್ಚೆಗಳು ನೇರವಾಗಿ ಎದ್ದು ಕಾಣುವ ಉಪದೇಶಗಳಾಗಿ ಬೇಸರವನ್ನುಂಟು ಮಾಡುತ್ತವೆ.............. ಇವು ಕಾದಂಬರಿಗೆ ಯಾವ ವಿಧದಲ್ಲಿಯೂ ಪೋಷಕವಾಗಿಲ್ಲ"[3]

1. ಕೆ. ಡಿ. ಕುರ್ತಕೋಟಿ : ಯುಗಧರ್ಮ ಹಾಗೂ ಸಾಹಿತ್ಯದರ್ಶನ, ಪುಟ 185-186.
2. ಪ್ರಬುದ್ಧ ಕರ್ನಾಟಕ, 46.3, ಪುಟ 43
3. ಅದೇ, ಪುಟ 47

ಎಂಬುದು ಒಪ್ಪಬೇಕಾದ ಮಾತು.[1]

ಕಾದಂಬರಿಯಲ್ಲಿ ಆ ಕಾಲದ ಮಣ್ಣಿನ ವಾಸನೆ ಹೊಡೆಯುವದಿಲ್ಲ; ಕಾದಂಬರಿಕಾರರ ದೃಷ್ಟಿ ಕೇವಲ ಕಲಾತ್ಮಕವಾಗಿರದೆ, ಲೋಕಜಾಗೃತಿಯ ಉದ್ದೇಶವನ್ನು ಕಾದಂಬರಿಕಾರರು ಇಟ್ಟುಕೊಂಡಿದ್ದಾರೆ. ಅದರಿಂದ ಅನೇಕ ದೋಷಗಳಾಗಿವೆ; ಘಟನೆಗಳು, ಪಾತ್ರಗಳು ಕಾದಂಬರಿಯ ವಾತಾವರಣಕ್ಕೆ ಸಹಜವೆಂದು ತೋರುವುದಿಲ್ಲ; ಕಾದಂಬರಿಯಲ್ಲಿ ಅನೇಕ ಆಕಸ್ಮಿಕ ಯೋಗಗಳು ಬಂದಿವೆ; ಕಾದಂಬರಿಯ ಭಾಷೆ ಸರಳವಾಗಿದೆಯಾದರೂ ಶೈಲಿ ಕೃತಕವಾಗಿದೆ– ಇವೇ ಕೆಲವು ಇತರ ದೋಷಗಳನ್ನು ನಾಯಕರು ಕಾದಂಬರಿಯಲ್ಲಿ ಕಂಡಿರುವರು.[2]

ನಾಯಕರ ಆಕ್ಷೇಪಣೆಗಳು ಹೆಚ್ಚಾಗಿ ಕಾದಂಬರಿಯ ಕಲಾದೋಷಗಳನ್ನು ಕುರಿತಾಗಿವೆ. ಆದರೂ ಅವರು ಕೊನೆಯಲ್ಲಿ "ವೆಂಕಟಾಚಾರ್ಯ ಹಾಗು ಗಳಗನಾಥರ ಕಾದಂಬರಿಗಳಲ್ಲಿ ಎಷ್ಟೇ ದೋಷಗಳನ್ನು ಹೇಳಿದರೂ ಅವರ ಕಾದಂಬರಿಗಳಿಂದ ಕನ್ನಡ ನಾಡಿನಲ್ಲಿ ಆದ ಜಾಗೃತಿಯನ್ನು ಮರೆಯುವಂತಿಲ್ಲ. 'ಆನಂದಮಠ', 'ಮಾಧವ ಕರುಣಾವಿಲಾಸ' ಮೊದಲಾದ ಕಾದಂಬರಿಗಳು ಹುಟ್ಟದಿದ್ದರೆ ಕನ್ನಡದ ಸಾಮಾನ್ಯ ಜನರು ಸಾಹಿತ್ಯದ ಬಗ್ಗೆ ಆಸ್ಥೆಯನ್ನು ತಳೆಯಲು ಮತ್ತೆ ಕೆಲವು ವರ್ಷಗಳು ಬೇಕಾಗುತ್ತಿದ್ದವು"[3] ಎಂದು ಹೇಳಿರುವುದು ಸರಿಯಾಗಿದೆ. ಆದರೆ ಅವರು ಇಲ್ಲಿ ಗಳಗನಾಥರ ಒಟ್ಟು ಮಹತ್ತ್ವವನ್ನು ಹೇಳಿದರಲ್ಲದೆ, 'ಮಾಧವ ಕರುಣಾವಿಲಾಸ'ದ ವಿಶೇಷವೇನೆಂಬುದನ್ನು ನಿರ್ದೇಶಿಸಿಲ್ಲ.

ಒಟ್ಟಿನಲ್ಲಿ, ಸಾಲಿಯವರು ಮತ್ತು ಎನ್. ಕೆ. ಕುಲಕರ್ಣಿ ಅವರು 'ಮಾಧವ ಕರುಣಾವಿಲಾಸ'ದ ಗುಣಗಳನ್ನೂ. ಕುರ್ತಕೋಟಿ ಮತ್ತು ನಾಯಕರು ದೋಷಗಳನ್ನೂ ಹೆಚ್ಚಾಗಿ ಎತ್ತಿ ತೋರಿಸಿರುವರು. ಈ ಎಲ್ಲರ ಲೇಖನಗಳಲ್ಲಿ ನಾಯಕರ ಲೇಖನವೇ ಹೆಚ್ಚು ದೀರ್ಘವೂ ವಿಶ್ಲೇಷಣಾತ್ಮಕವೂ ಆಗಿದೆ. ಆದರಲ್ಲಿ ಅವರು ಗುಣದೋಷ ಗಳೆರಡನ್ನೂ ನೋಡಬೇಕೆಂದು ಹೊರಟರೂ. ಅವರಿಗೆ ದೋಷಗಳೇ ಹೆಚ್ಚಾಗಿ ಕಂಡಿವೆ.

ಇಂದಿನ ವಿಮರ್ಶೆಯ ದೃಷ್ಟಿಯಿಂದ ಪರೀಕ್ಷಿಸಿದರೆ 'ಮಾಧವ ಕರುಣಾವಿಲಾಸ'ದಲ್ಲಿ ನ್ಯೂನತೆಗಳೇ ಹೆಚ್ಚಾಗಿ ಕಾಣುವುದು ಸಹಜ. ಕಾದಂಬರಿಯ ಈ ದೋಷಗಳಿಗೆ ಅನೇಕ ಕಾರಣಗಳೂ ಇವೆ. ವಿಜಯನಗರ ರಾಜ್ಯಸ್ಥಾಪನೆಯ ಐತಿಹಾಸಿಕ ಘಟನೆಯ ವಿವರಗಳನ್ನೂ, ಆ ಕಾಲದ ಜೀವನ ಪದ್ಧತಿ, ಯುದ್ಧ ಪದ್ಧತಿ, ಒಟ್ಟಂದದ ಆ ಕಾಲದ ವಾತಾವರಣ ಮೊದಲಾದವುಗಳನ್ನು ಅರಿಯಲು ಬೇಕಾದ ಸಾಹಿತ್ಯಸಾಧನಗಳ ಕೊರತೆ ಗಳಗನಾಥರಿಗೆ ವಿಶೇಷವಾಗಿತ್ತು. ಅದರಿಂದ ಕಾದಂಬರಿಯ ಒಟ್ಟು ಚೌಕಟ್ಟು ಶಿಥಿಲವಾಯಿತು, ಅಸಹಜ ವಾಯಿತು. ಅದರಂತೆ ಗಳಗನಾಥರು ಅನೇಕ ಉತ್ತಮವಾದ ಕಾದಂಬರಿಗಳನ್ನು ಅನುವಾದಿಸಿ ಕಾದಂಬರೀ ಕಲೆಯನ್ನು ಅರಿತಿದ್ದರೂ 'ಮಾಧವ ಕರುಣಾವಿಲಾಸ'ವನ್ನು ಬರೆಯುವಾಗ

---

1. ಆದರೆ "ಇಲ್ಲಿ ವರ್ಣಿತವಾಗಿರುವ ಧರ್ಮ-ತತ್ವಗಳ ಪ್ರತಿಪಾದನೆಯು ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡುತ್ತದೆ" ಎಂದು ಹೇಳುವವರೂ ಇದ್ದಾರೆ. (ಗುರುನಾಥ ಜೋಶಿ: ಕನ್ನಡ ಐತಿಹಾಸಿಕ ಕಾದಂಬರಿಗಳು, 'ಕನ್ನಡ ನುಡಿ' 22; ಪುಟ 17)
2. ಈ ದೋಷಗಳು (ಅಥವಾ ಲಕ್ಷಣಗಳು) 'ಮಾಧವ ಕರುಣಾವಿಲಾಸ'ವಲ್ಲದೆ ಗಳಗನಾಥರ ಇತರ ಕಾದಂಬರಿಗಳಲ್ಲಿಯೂ ಕಂಡುಬರುತ್ತವೆ.
3. ಪ್ರಬುದ್ಧ ಕರ್ಣಾಟಕ, 46–3, ಪುಟ 54.

ಅವರ ದೃಷ್ಟಿ ಕೇವಲ ಕಲೆಯ ಕಡೆಗಿರಲಿಲ್ಲ. ಧರ್ಮ, ತತ್ತ್ವ, ನೀತಿಗಳನ್ನು ಬೋಧಿಸಿ ಈ ಮಹಾಕಾದಂಬರಿಯ ಮೂಲಕ ಜನಜಾಗೃತಿಯನ್ನು ಮಾಡಬೇಕೆಂದು ಅವರು ಬಯಸಿದರು. ಅಂದರೆ ಶುದ್ಧವಾದ ಸಾಹಿತ್ಯ ದೃಷ್ಟಿಯಿಂದ ಅವರು ಕಾದಂಬರಿಯನ್ನು ಬರೆಯಲಿಲ್ಲ.

''ಈ ಕಾದಂಬರಿಯನ್ನು ಬರಿಯ ಕಾದಂಬರಿ ಎಂಬ ದೃಷ್ಟಿಯಿಂದ ಬಡಬಡ ಓದಿ ಬಿಡುವದಕ್ಕಿಂತ ಇದೊಂದು ಅಭ್ಯಾಸ ಮಾಡತಕ್ಕ ಪುಸ್ತಕವೆಂದು ವಿಚಾರಪೂರ್ವಕವಾಗಿ ಓದುವದು ಲಾಭಕರವಾಗಿರುವದು''[1] ಎಂದು ಗಳಗನಾಥರು ವಾಚಕರಿಗೆ ತಿಳಿಸಿರುವರು. ಜನರಿಗೆ ಬೋಧಿಸಬೇಕೆಂಬ ದೃಷ್ಟಿ ಅವರ ಉಳಿದೆಲ್ಲ ಸ್ವತಂತ್ರ ಹಾಗು ಅನುವಾದಿತ ಕಾದಂಬರಿಗಳಲ್ಲಿಯೂ ಇದೆಯಾದರೂ, ಆ ಭಾವನೆ 'ಮಾಧವ ಕರುಣಾವಿಲಾಸ'ದಲ್ಲಿ ಹೆಚ್ಚು ತೀವ್ರವಾಗಿದೆ. ಅದರಿಂದಲೇ ಕಾದಂಬರಿಯ ಗಾತ್ರ ಬೆಳೆಯಿತು; ಸತ್ತ್ವ ಕಡಿಮೆಯಾಯಿತು. ಈ ಕಾದಂಬರಿಯಲ್ಲಿ ಅಲ್ಲಲ್ಲಿ ಬಂದಿರುವ ನೀತಿಬೋಧೆಯನ್ನು ಕಡೆಗಣಿಸಿದರೂ, ಕಾದಂಬರಿಯ 58 ಪ್ರಕರಣಗಳಲ್ಲಿ 17 ಪ್ರಕರಣಗಳು (28ರಿಂದ 42,46 ಮತ್ತು 47) ಸಂಪೂರ್ಣ ಧರ್ಮ, ತತ್ತ್ವಗಳ ಚರ್ಚೆಗೇ ಮೀಸಲಾಗಿದೆ. ಅಂದರೆ ಕಾದಂಬರಿಯ ಸುಮಾರು ಮೂರನೆಯ ಒಂದು ಭಾಗವು (175 ಪುಟಗಳು) ಕಾದಂಬರಿಗೆ ತೀರ ಅನಾವಶ್ಯಕವಾಗಿ, ಕಾದಂಬರಿಯ ಕಥೆಗೆ ಅಡ್ಡಗಾಲು ಹಾಕಿ, ಪ್ರಗತಿಯನ್ನು ತಡೆದು, ಕಾದಂಬರಿಯ ವಿಫಲತೆಗೆ ಪ್ರಮುಖ ಕಾರಣವಾಯಿತು. ಇಲ್ಲಿ ಬಂದಿರುವ ಚರ್ಚೆ ಪಾತ್ರಪೋಷಣೆಗೆ ಕೂಡ ಸಹಾಯಕವಾಗಿಲ್ಲ. ಮಾಧವಾಚಾರ್ಯರ ಪಾತ್ರವು ಕಾದಂಬರಿಯ ಈ ಪುಟಗಳಿಂದ ಪುಟಗೊಳ್ಳುತ್ತದೆಂದು ಗಳಗನಾಥರು ಭಾವಿಸಿದರು. ಆದರೆ ಅವರ ಭಾವನೆ ಸಂಪೂರ್ಣ ತಪ್ಪಾಯಿತು.

ಗಳಗನಾಥರಿಗೆ ಈ ಕಾದಂಬರಿಯಲ್ಲಿ ವಿಜಯನಗರ ಸಾಮ್ರಾಜ್ಯದ ನಿರೂಪಣೆಗಿಂತ ಮಾಧವಾಚಾರ್ಯರ ಅತ್ಯುನ್ನತ ವ್ಯಕ್ತಿತ್ವನಿರೂಪಣೆಯೇ ಮುಖ್ಯವಾಗಿ ಕಂಡಿದೆ. ಆ ಕಾರಣದಿಂದಲೇ ಅವರು ಮಾಧವಾಚಾರ್ಯರ ಮೇಲೆಯೇ ತಮ್ಮ ಗಮನವನ್ನು ಕೇಂದ್ರೀಕರಿಸಿರುವರು. ಈ ಅತಿಪ್ರೀತಿಯೇ ಬಹುಶಃ ಪಾತ್ರಚಿತ್ರಣಕ್ಕೆ ತೊಡಕಾಯಿತು. ಗಳಗನಾಥರು ಇಲ್ಲಿ ಪಾತ್ರಚಿತ್ರಣದಲ್ಲಿರಬೇಕಾದ ವಸ್ತುನಿಷ್ಠ ದೃಷ್ಟಿಯನ್ನು ಕಳೆದುಕೊಂಡು ಬಿಟ್ಟರು.

ಕಾದಂಬರಿಯ ಪೂರ್ವಭಾಗದಲ್ಲಿಯ ಮಾಧವಾಚಾರ್ಯರ ಚಿತ್ರಣವು ಅನಂತರದ ಚಿತ್ರಣಕ್ಕಿಂತ ಹೆಚ್ಚು ಸಮಂಜಸವಾಗಿದೆ. ಆಶ್ರಮವಾಸಿ, ವಿದ್ಯಾರ್ಥಿ, ಗೃಹಸ್ಥಾಶ್ರಮಿ ಮಾಧವಾಚಾರ್ಯ ನಮಗೆ ಹೆಚ್ಚು ಸಹಜವಾಗಿ ಕಾಣುತ್ತಾನೆ. ತರುಣ ಮಾಧವ ವಿದ್ಯಾರ್ಥಿಯಾಗಿರುವಾಗಲೇ "ದುಷ್ಟಯವನರ ದವಡೆಯೊಳಗಿಂದ" ಬ್ರಾಹ್ಮಣ ಕುಟುಂಬಗಳನ್ನು ಬಿಡಿಸುತ್ತಾನೆ. "ಮಾಧವನು ದ್ರೋಣಾಚಾರ್ಯರಂತೆ ಚತುರ್ವೇದಜ್ಞನಂತೂ ಇದ್ದೇ ಇರುವನು. ಆದರೆ ಆತನು ಭಾರತೀಯ ಆ ಶ್ರೇಷ್ಠ ಆಚಾರ್ಯನಂತೆ ಅಪ್ರತಿಮ ಧನುರ್ಧಾರಿಯಾಗಿರದಿದ್ದರೂ ರಾಜಕಾರಣ ಪಟುವಾಗಿರುವನು. ತರುಣರ ಮನಸ್ಸನ್ನು ಎಳಕೊಳ್ಳುವಲ್ಲಿ ಮಾಧವನು ಬಲು ಬಲ್ಲಿದನು. ಆತನ ಯುಕ್ತಿಗಂತೂ ಎಣೆಯಿಲ್ಲ" (ಪುಟ-4) ಎಂದು ಸೋಮೇಶ್ವರ ಅವಧಾನಿಗಳು ಆಗಲೇ ಗುರುಗಳಾದ ಸರ್ವಜ್ಞ ವಿಷ್ಣುಶರ್ಮರ ಎದುರಿಗೆ ಹೇಳುವರು. ಅದರಂತೆ ಸರ್ವಜ್ಞರು "ಶ್ರೀವಿರೂಪಾಕ್ಷನ ಮನಸ್ಸಿಗೆ ಬಂದರೆ, ನಮ್ಮ ಮಾಧವನು ಕರ್ನಾಟಕದ ಸಿಂಹಾಸನ ಸ್ಥಾಪನಾಚಾರ್ಯನೆನಿಸಿಕೊಳ್ಳಬಹುದು !

1. ಗಳಗನಾಥ . ಮಾಧವ ಕರುಣಾವಿಲಾಸ, ಪ್ರಸ್ತಾವನೆ.

ಆದರೆ ಇದಕ್ಕಾಗಿ ಮಾಧವನು ಘೋರ ತಪಸ್ಸನ್ನೇ ಆಚರಿಸಬೇಕು"! ಎಂದು ಭವಿಷ್ಯ ನುಡಿದು, "ಏಳು, ಧರ್ಮರಕ್ಷಣದ ಕಾರ್ಯಕ್ಕೆ ಉದ್ಯುಕ್ತನಾಗು, ಆ ಉದ್ಯೋಗಕ್ಕೆ ತಕ್ಕ ಅಧಿಕಾರವನ್ನು ತಪಸ್ಸಿನಿಂದ ಪಡೆ" ಎಂದು ಆಶೀರ್ವದಿಸಿ ಮಾಧವನನ್ನು ಬೀಳ್ಕೊಡುವರು. ಮನೆಗೆ ಬಂದು ಮಾಧವ ಸಾಧ್ವಿಯಾದ ವೈತಿಹೋತ್ರಿಯ ಅನುಮತಿಯನ್ನು ಪಡೆದು, "ಈಗ ಹೊರಗೆ ಒಂದೇ ಸವನೆ ಮಳೆಯು ಸುರಿಯುತ್ತಿರುವಂತೆ, ಸ್ವದೇಶ ಕಾರ್ಯಕ್ಕಾಗಿ ಬಂಗಾರದ ಮಳೆ ಸುರಿಸದಿದ್ದರೆ ನಾನು ಮಾಧವನೇ ಅಲ್ಲ" (ಪುಟ-22) ಎಂದು ಪ್ರತಿಜ್ಞೆಯನ್ನೇ ಮಾಡಿ ತಪಸ್ಸಿಗೆ ತೆರಳುವನು.

ಮಾಧವನ ತಪಸ್ಸಿಗೆ ಮೆಚ್ಚಿದ ಭುವನೇಶ್ವರಿ ಆತನಿಗೆ ಸುವರ್ಣವೃಷ್ಟಿಯ ವರವನ್ನು ಕೊಡುವಳಲ್ಲದೆ "ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರೆಂದು ಅಪೂರ್ವ ಬಿರುದನ್ನು ಅಲಂಕರಿಸುವೆ" ಎಂದೂ ಹರಸುವಳು. ಮುಂದಿನ ಘಟನೆಗಳೆಲ್ಲ ಅದರಂತೆಯೇ ನಡೆಯುವುವು. ಹುಕ್ಕ, ಬುಕ್ಕ, ಕೃಷ್ಣನಾಯಕನಲ್ಲದೆ ಬಖಿತ್ಯಾರಖಾನ. ಕಾಸೀಮ ಕೊನೆಗೆ ಮಲಿಕ ನಾಯಬ ಕೂಡ ಮಾಧವಾಚಾರ್ಯರ ಪ್ರಭಾವದಲ್ಲಿ ಕೆಲಸ ಮಾಡುವರು. ಕಾದಂಬರಿಯ ಪ್ರತಿಯೊಂದು ಘಟನೆಗೂ ಅವರೇ ಸೂತ್ರಧಾರರೆನ್ನುವಂತೆ ಲೇಖಕರು ಮಾಧವಾಚಾರ್ಯರನ್ನು 'ಕರ್ತುಂ ಅಕರ್ತುಂ ಸಮರ್ಥರೆ'ಂಬಂತೆ ಚಿತ್ರಿಸಿರುವರು.

"ಮಹಾತ್ಮರಿಗೆ ಗೊತ್ತಿಲ್ಲದ ಸಂಗತಿಯು ಯಾವದಿರುವದು?" (274). "ಕಾಸೀಮ ಖಾನನು ಏನೋ ಹೇಳಬೇಕೆಂದು ಮೇಲಕ್ಕೇಳುತ್ತಿರಲು, ಮಹಾತ್ಮರಾದ ಆಚಾರ್ಯರು ಅಂತರ್ಜ್ಞಾನದಿಂದ ಆತನ ಮನೋಭಾವವನ್ನು ತಿಳಿದು...." (352), "ಹುಕ್ಕರಾಯಾ, ಕುಳಿತುಕೊಳ್ಳಯ್ಯ, ನಿನ್ನ ಮನಸ್ಸಿನಲ್ಲಿದ್ದದ್ದು ಗೊತ್ತಾಯಿತು" (455). "ತನಗೆ ಬಿದ್ದ ಸ್ವಪ್ನದ ವೃತ್ತಾಂತವು ಇವರಿಗೆ ಗೊತ್ತಾದದ್ದರಿಂದ ಈ ಮಹಾತ್ಮರ ಯೋಗ್ಯತೆಯು ಅಲೌಕಿಕ ವಾದದ್ದೆಂದು ಕಾಸೀಮನಿಗೆ ಮನವರಿಕೆಯಾಯಿತು" (359). "ಮನಸ್ಸು ಮಾಡಿದರೆ ನನ್ನ ಸದ್ಗುರುವು ತನ್ನ ಯೌಗಿಕ ಸಾಮರ್ಥ್ಯದಿಂದ ಮಲಿಕ ನಾಯಬನನ್ನು ತಾನಿದ್ದಲ್ಲಿಗೆ ಎಳೆದು ತರಿಸಬಹುದು; ಅದರಂತೆ ತಘಲಕ ಮಹಮ್ಮದನ ಕಿವಿಹಿಂಡಿ ಅವನಿಗೆ ಬುದ್ಧಿ ಕಲಿಸಬಹುದು; ಇಂಥ ಮಹಾ ಮಹಿಮನು." (587). "ಅವರು ಮುಸಲ್ಮಾನರ ಅವಸಾನವನ್ನು ಹೆಜ್ಜೆ ಹೆಜ್ಜೆಗೆ ಮಾಡಿ, ತಮ್ಮ ಗೂಢಶಕ್ತಿಯ ದರ್ಪದಿಂದ ಅವರಲ್ಲಿ ದಿಗ್ಭ್ರಮೆಯನ್ನುಂಟು ಮಾಡಬೇಕೆಂದು ಮಾಡಿದ್ದರು. ಈಶ್ವರೀ ಸಂಕೇತದಂತೆ ಅವರ ಮನೋದಯಗಳು ನೆರವೇರಲು ತಕ್ಕ ಅನುಕೂಲತೆಗಳೂ ಉಂಟಾಗುತ್ತ ಬಂದವು. ಇದಕ್ಕೆ ಆಚಾರ್ಯರ ನಿರ್ಮಲ ತಪಸ್ಸಿನ ಪ್ರಭಾವವೇ ಕಾರಣವೆಂದು ಹೇಳಬಹುದು." (614) "ಮಹಾತ್ಮರಾದ ಮಾಧವಾಚಾರ್ಯರಿಗೆ ಅಣಿಮಾದಿ ಅಷ್ಟ ಮಹಾಸಿದ್ಧಿಗಳೂ, ಪರಕಾಯಪ್ರವೇಶಾದಿ ಕ್ಷುದ್ರ ಸಿದ್ಧಿಗಳೂ ಸಾಧ್ಯವಾಗಿದ್ದವು. ತಮ್ಮ ಮಟ್ಟಿಗೆ ಅವರು ಅಜಿಂಕ್ಯರೇ ಆಗಿದ್ದರು" (716).

—ಈ ಮೊದಲಾದ ಹಲವು ಮಾತುಗಳನ್ನು ಮಾಧವಾಚಾರ್ಯರ ಬಗ್ಗೆ ಲೇಖಕರೂ ಹೇಳಿದ್ದಾರೆ, ಉಳಿದ ಪಾತ್ರಗಳ ಬಾಯಿಯಿಂದಲೂ ಹೇಳಿಸಿದ್ದಾರೆ. ಕೊನೆಯ ಪ್ರಕರಣ ವಂತೂ 'ಮಹಾತ್ಮರ ಭವಿಷ್ಯಕಥನ'ವೇ ಆಗಿದೆ. ಹೀಗೆ ಗಳಗನಾಥರು ಮಾಧವಾಚಾರ್ಯರನ್ನು ಅಲೌಕಿಕ, ಅತಿಮಾನವ ವ್ಯಕ್ತಿಯಂತೆ ಚಿತ್ರಿಸಿರುವರು. ನಿಜವಾದ ಮಾಧವಾಚಾರ್ಯರಲ್ಲಿ ಇಂಥ ಶಕ್ತಿ–ಸಾಮರ್ಥ್ಯಗಳು ಇದ್ದುವೊ ಇಲ್ಲವೋ ಎನ್ನುವ ಪ್ರಶ್ನೆ ಇಲ್ಲಿ ಅಪ್ರಸ್ತುತ. ಆದರೆ

ಗಳಗನಾಥರ ಇಂಥ ಬಣ್ಣನೆಯಿಂದ ಕಾದಂಬರಿಯ ಮಾಧವಾಚಾರ್ಯರು ಮಾತ್ರ ಸಹಜತೆಗೆ ಎರವಾಗಿದ್ದಾರೆ. ಈಗ ಚಿತ್ರಿತವಾದ ಹಿನ್ನೆಲೆಯಲ್ಲಿ ಇಂಥ ಅಲೌಕಿಕ ವ್ಯಕ್ತಿಯ ಚಿತ್ರವು ಎಷ್ಟೂ ಹೊಂದಿಕೊಂಡಿಲ್ಲ.

ಅಲ್ಲದೆ ಈ ಪಾತ್ರಚಿತ್ರಣದಲ್ಲಿ ಬೇರೆ ಕೆಲವು ವಿಲಕ್ಷಣ ಸಂಗತಿಗಳೂ ನುಸುಳಿ ಕೊಂಡಿವೆ. ಮಾಧವಾಚಾರ್ಯರ ಉಪದೇಶದಿಂದ ಹಿಂದುಗಳು ಪ್ರಭಾವಿತರಾಗುವುದಲ್ಲದೆ, ನಾಸ್ತಿಕರಾದ ಅನೇಕ ಮಹಮ್ಮದೀಯ ವೀರರೂ ತಮ್ಮ ಕ್ರೂರತನವನ್ನು, ನೀಚತನವನ್ನು ಬಿಡುವರು. ಈ ದೇಶವನ್ನು ಸುಲಿಯಬೇಕೆಂದೇ ಬಂದಿದ್ದ ಯವನರು ಮಾಧವಾಚಾರ್ಯರ ಧರ್ಮಯುದ್ಧದ ಪ್ರವಚನವನ್ನು ಕೇಳಿ, ಅದಕ್ಕೆ ಒಡಂಬಟ್ಟರೆಂಬುದು ಅತಿಶಯೋಕ್ತಿಯಾಗಿ ಕಾಣುತ್ತದೆ. ಯುದ್ಧಭೂಮಿಯಲ್ಲಿ ಅವರು 'ಧರ್ಮಸಮ್ಮತವಾದ ಉಪಾಯವನ್ನು' ಯವನರಿಗೆ ಹೇಳುವರು. ಮಾಧವಾಚಾರ್ಯರ ಅಭಿಪ್ರಾಯದ ಪ್ರಕಾರ ಕಾಸೀಮನೂ ಕೃಷ್ಣನಾಯಕನೂ ಧರ್ಮದಿಂದ ದ್ವಂದ್ವಯುದ್ಧ ಮಾಡುವರು.

ಮಾಧವಾಚಾರ್ಯರು ಜ್ಞಾನಿಗಳೂ, ರಾಜಕಾರಣಪಟುಗಳೂ ಆಗಿದ್ದಂತೆ, ಅವರು ಯುದ್ಧತಂತ್ರವಿಶಾರದರೂ ಆಗಿದ್ದರೆಂದು ಗಳಗನಾಥರು ಬಣ್ಣಿಸಿರುವರು. ಆದರೆ ನಿಜವಾಗಿ ಹೇಳಬೇಕೆಂದರೆ ಗಳಗನಾಥರಿಗೆ ಮಧ್ಯಯುಗದ ಯುದ್ಧತಂತ್ರದ ಅರಿವು ಹೆಚ್ಚಾಗಿ ಇದ್ದಂತೆ ಕಾಣುವುದಿಲ್ಲ. ಇಲ್ಲಿಯ ವೀರರು ಬಹಳ ಸಲ ಮಹಾಭಾರತದ ವೀರರಂತೆ ಧರ್ಮ-ಯುದ್ಧವನ್ನೇ ಮಾಡುವರು. ಮಲಿಕ ನಾಯಬನು ಪದ್ಮಿನಿ ಬೈರಾಗಿಣಿಯನ್ನು ಕಂಡು ತನ್ನ ಖಡ್ಗವನ್ನು ಒರೆಗಾಣಿಸಿ ಯುದ್ಧವನ್ನು ನಿಲ್ಲಿಸಿದನೆಂದರೆ, ಅರ್ಥಹೀನವಾಗಿ ಕಾಣುತ್ತದೆ. ಆದರೆ ಕೆಲವು ಸಲ ಮಾಧವಾಚಾರ್ಯರ ಈ ಕನ್ನಡ ವೀರರೇ ಮರಾಠಾ ಮಾವಳರಂತೆ ಉಡದ ಸಹಾಯದಿಂದ ರಾತ್ರಿ ಸಮಯದಲ್ಲಿ ವೈರಿಗಳ ಕೋಟೆಯನ್ನೇರಿ, ಕಪಟದಿಂದ ಕಾದಿ ಅವರನ್ನು ಸೋಲಿಸುವರು. ಇಂಥ ವರ್ಣನೆಗಳಲ್ಲಿ ಹೊಂದಾಣಿಕೆಯಾಗುವುದಿಲ್ಲ. ಅದರಿಂದ ಈ ಸನ್ನಿವೇಶಗಳು ವೀರ ಅಥವಾ ಅದ್ಭುತ ಭಾವವನ್ನು ಉಂಟುಮಾಡದೆ, ನಿಷ್ಫಲ ವಾಗುತ್ತವೆ.

ಮಾಧವಾಚಾಯರ ಚಿತ್ರದಲ್ಲಿ ಗಳಗನಾಥರು ರಾಮದಾಸ, ಚಾಣಕ್ಯ, ಧರ್ಮರಾಯ ಮತ್ತು ದ್ರೋಣಾಚಾರ್ಯ—ಹೀಗೆ ಹಲವರ ಮುಖಗಳನ್ನು ಕಾಣಲು ಯತ್ನಿಸಿದ್ದೇ ಮುಖ್ಯ ದೋಷವಾಗಿದೆ. ಅವರ ಈ ಆಶಯವು ಕೆಲವೆಡೆ ವ್ಯಕ್ತವೂ ಆಗಿದೆ. "ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ಶಿಷ್ಯತ್ವದಿಂದ ಶಿವಾಜಿಯು ಧನ್ಯನಾಗಿ ಮಹಾರಾಷ್ಟ್ರ ರಾಜ್ಯವನ್ನು ಸ್ಥಾಪಿಸಿ ಧರ್ಮ ರಕ್ಷಣ ಮಾಡಿದಂತೆ, ಮಾಧವಾಚಾರ್ಯರ ಸೇವೆಯಿಂದ ಹುಕ್ಕ ದೊರೆಯು ಧನ್ಯನಾಗಿ ಕರ್ನಾಟಕದ ಸಿಂಹಾಸನವನ್ನು ಸ್ಥಾಪಿಸಿ ಧರ್ಮರಕ್ಷಣೆ ಮಾಡಿದನು" (ಪುಟ 454). ಆಪಟೆಯವರು ಚಿತ್ರಿಸಿರುವ ರಾಮದಾಸ-ಶಿವಾಜಿ ಅವರ ಗುರು-ಶಿಷ್ಯ ಸಂಬಂಧದ ಉದಾತ್ತ ಚಿತ್ರವು ಗಳಗನಾಥರನ್ನು ಆಕರ್ಷಿಸಿತ್ತು. ಗಳಗನಾಥರು ಅದರ ಪ್ರಯೋಗವನ್ನು ಇಲ್ಲಿ ಮಾಡಹೊರಟರೂ, ಆ ಸಫಲತೆ ಕಂಡಿಲ್ಲ. ಅದರಂತೆ ಬಂಕಿಮಚಂದ್ರರ 'ಮೃಣಾಲಿನಿ'ಯಲ್ಲಿ ಚಿತ್ರಿಸಿದ್ದ ಮಾಧವಾಚಾರ್ಯರ ಚಿತ್ರವನ್ನೂ ಗಳಗನಾಥರು ಬಹುಶಃ ಇನ್ನೂ ಮರೆತಿದ್ದಿಲ್ಲ. ಅಲ್ಲಿಯ ಮಾಧವಾಚಾರ್ಯನೂ ಭವಿಷ್ಯವನ್ನು ನುಡಿದು, ತನ್ನ ಶಿಷ್ಯನಾದ ಹೇಮಚಂದ್ರನನ್ನು ಅನೇಕ ರೀತಿಯಿಂದ ಪ್ರೋತ್ಸಾಹಿಸಿ, ಸ್ವತಃ ಸೈನ್ಯ ಸಿದ್ಧತೆಯನ್ನು ಮಾಡಿ

ಯವನರನ್ನು ಸೋಲಿಸಿ ಹಿಂದೂರಾಜ್ಯ ಸ್ಥಾಪನೆಗೆ ಕಾರಣನಾಗುವನು. ಬಂಕಿಮಚಂದ್ರರು ವಿಜಯನಗರದ ಸಂಸ್ಥಾಪನೆಗೆ ಮೂಲಕಾರಣನಾದ, ಸ್ಫೂರ್ತಿದಾಯಕನಾದ ಮಾಧವಾಚಾರ್ಯನನ್ನೇ ಮನಸ್ಸಿನಲ್ಲಿ ಇಟ್ಟುಕೊಂಡು ತಮ್ಮ ಪಾತ್ರವನ್ನು ಚಿತ್ರಿಸಿದರೆಂದು ಎ. ಆರ್. ಕೃಷ್ಣಶಾಸ್ತ್ರಿಗಳು ಹೇಳುವರು.[1] ಅದೇನೇ ಇದ್ದರೂ, ಅಲ್ಲಿಯ ಮಾಧವಾಚಾರ್ಯನ ಚಿತ್ರವೂ ಅಷ್ಟು ಯಶಸ್ವಿಯಾಗಿಲ್ಲ. ಗಳಗನಾಥರು ಆ ಚಿತ್ರವನ್ನೇ ಇನ್ನೂ ಭವ್ಯಗೊಳಿಸಲು ಯತ್ನಿಸಿ ಇನ್ನೂ ಅಯಶಸ್ವಿಯಾಗಿರುವರು.

ಉಳಿದ ಪಾತ್ರಗಳನ್ನು ಲಕ್ಷಿಸಿದಾಗ ಅವು ಎಷ್ಟೋ ಮಟ್ಟಿಗೆ ಸಹ್ಯವಾಗಿ ಕಾಣುತ್ತವೆ. ಆದರೆ ಯಾವೊಂದು ಪಾತ್ರವೂ ಸಂಪೂರ್ಣವಾಗಿ ವಿಕಸಿತವಾಗಿ, ಜೀವಂತವಾಗಿ ಓದುಗರ ಮನವನ್ನು ಆಕ್ರಮಿಸುವುದಿಲ್ಲ. ಉಳಿದ ಪಾತ್ರಗಳಲ್ಲಿ ಹುಕ್ಕ, ಬುಕ್ಕ, ಕೃಷ್ಣನಾಯಕ, ಮಲ್ಲ, ಮುಹಮ್ಮದ, ಕಾಸೀಮ, ಮಲಿಕ ನಾಯಬ, ಪದ್ಮಿನಿ, ಚಿನ್ನಮ್ಮ ಮೊದಲಾದವರು ಗಮನಾರ್ಹರಾಗಿರುವರು.

ಕುರುಬರ ಹೆಗ್ಗನು ಹೆಗ್ಗಪ್ಪನಾಗಿ ಹುಕ್ಕರಾಯನಾಗುವ ವರೆಗಿನ ಚಿತ್ರವು ಎಷ್ಟೋ ಚೆನ್ನಾಗಿ ಬಂದಿದೆ. ಆತ ಕುರುಬರನ್ನು ಸಂಘಟಿಸಿ, ಆನೆಗೊಂದಿಯ ದೇವರಾಯನ ಮಗಳು ಪದ್ಮಿನಿಯನ್ನು ರಕ್ಷಿಸುವುದು ಸಹಜವೆನಿಸುತ್ತದೆ. ಪಂಪಾಸರೋವರದಲ್ಲಿ ಪ್ರಾಣಕೊಡಲಿಕ್ಕೆ ಸಿದ್ಧಳಾದ ಚಿನ್ನವ್ವನನ್ನು ರಕ್ಷಿಸುವಲ್ಲಿಯೂ ಆತನಲ್ಲಿ ಅತಿರೇಕ ಕಾಣುವುದಿಲ್ಲ. "ಸಣ್ಣಪುಟ್ಟ ಕೆಲಸಗಳಿಗೆ ನಮ್ಮನ್ನು ಅಟ್ಟು. ದೊಡ್ಡ ಕೆಲಸಗಳಿಗೆ ನಮ್ಮನ್ನು ಮುಂದೆ ಹಾಕಿ ನೀನು ಮಾರ್ಗ ತೋರಿಸುತ್ತಿರು. ನೀನು ನಮ್ಮ ಪ್ರಾಣವಿದ್ದ ಹಾಗೆ, ನಿನ್ನ ಆಶ್ರಯ ತಪ್ಪಿದರೆ ನಮ್ಮಿಂದೇನು ಕೆಲಸವಾದೀತು?" (ಪುಟ 51) ಎಂದು ಮಲ್ಲನು ಹೆಗ್ಗ (ಹುಕ್ಕ)ನನ್ನು ಕುರಿತು ನುಡಿಯುವುದನ್ನು ನೋಡಿದರೆ, ಶಿವಾಜಿಯನ್ನು ಕುರಿತು ತಾನಾಜಿ ಮೊದಲಾದ ಮರಾಠಾ ಮಾವಳ ವೀರರು ನುಡಿದುದು ನೆನಪಿಗೆ ಬರುತ್ತದೆ. ಅಲ್ಲದೆ, "ಹೆಗ್ಗನು ತನ್ನ ಸದ್ಗುಣಗಳಿಂದಲೂ ಶೌರ್ಯಮೂಲವಾದ ವಿಲಕ್ಷಣ ವರ್ಚಸ್ಸಿನಿಂದಲೂ ತನ್ನ ಅನುಯಾಯಿಗಳ ಅತೀವ ಆದರಕ್ಕೆ ಪಾತ್ರನಾಗಿದ್ದನು. ಅವರು ಆತನನ್ನು ದೇವರ ಅವತಾರವೆಂದು ಭಾವಿಸಹತ್ತಿದರು" (ಪುಟ 52) ಎಂದು ಗಳಗನಾಥರು ಹೆಗ್ಗನನ್ನು ವರ್ಣಿಸುವಲ್ಲಿ ಮತ್ತೆ ಶಿವಾಜಿಯ ಮಾವಳ ಜನರ ನೆನಪೇ ಬರುತ್ತದೆ. ಅಲ್ಲದೆ ಈತನೂ ಮಾಧವಾಚಾರ್ಯರಂತೆ ತಪಸ್ಸು ಮಾಡಿದನೆಂದೂ ಗಳಗನಾಥರು ಬಣ್ಣಿಸಿದ್ದಾರೆ.

ಬುಕ್ಕನ ದೇವೀಕೊಳ್ಳದ ಗುಹೆ, ಸಿಳ್ಳು ಹಾಕುವದು, ಬಸವಣ್ಣನ ಮೂರ್ತಿಯನ್ನು ಬಲಸುತ್ತಿನಿಂದ ತಿರುಗಿಸುವುದು, ಶಿವಲಿಂಗವನ್ನು ಎಡಸುತ್ತಿನಿಂದ ತಿರುಗಿಸುವುದು, ಶಿವಲಿಂಗದ ಮುಂದಿನ ಕಲ್ಲನ್ನು ತೆಗೆದು ಕೆಳಗೆ ಪ್ರವೇಶ ಮಾಡುವುದು, ಅಲ್ಲಿಯ ಸಂಜೀವ ಮೂರ್ತಿ, ಅದು ಆಗಾಗ ಅಲುಗಾಡುವುದು, ಗುಹೆಯ ಒಳಗಿದ್ದ ವಿಶಾಲವಾದ ಪ್ರದೇಶ, ಅಲ್ಲಿ ನೂರಾರು ಜನರು ಮಾಡುವ ಗರಡಿಯ ಸಾಧನೆ—ಇವು 'ಉಷಃಕಾಲ' (ಈಶ್ವರೀಸೂತ್ರ) ಮೊದಲಾದ ಮರಾಠಾ ಕಾದಂಬರಿಗಳ ನೆನಪು ತಂದುಕೊಡುತ್ತವೆ. ಮುಂದೆ ಕೂಡ ಈ ಹುಕ್ಕ-ಬುಕ್ಕರು ಕಪಟ ವೇಷದಿಂದ ಶತ್ರುಸೈನ್ಯವನ್ನು ಪ್ರವೇಶಿಸಿ, ಅವರನ್ನು ಅಡ್ಡ ಹಾದಿಗೆ ಹಚ್ಚುವ ತಂತ್ರಗಳೆಲ್ಲ ಕನ್ನಡಿಗರಿಗೆ ಪರಕೀಯವೇನೋ ಎನ್ನಿಸುತ್ತದೆ. ಆಪಟೆ ಕಾದಂಬರಿಯ

1. ಎ. ಆರ್. ಕೃಷ್ಣಶಾಸ್ತ್ರೀ : ಬಂಕಿಮಚಂದ್ರ, ಪುಟ 185

ತಂತ್ರವನ್ನು ಬಳಸಬಾರದು ಎಂದಲ್ಲ, ಆದರೆ ಅದು ಇಲ್ಲಿ ಸರಿಯಾಗಿ ಹೊಂದಿಕೊಂಡಿಲ್ಲ ಎಂಬುದೇ ಕೊರತೆ.

ಕೃಷ್ಣನಾಯಕ ಒರಂಗಲ್ಲಿನ ರಾಜಕುಮಾರ. ಈಗ ಮುಸಲ್ಮಾನರ ಮೇಲಿನ ಸಿಟ್ಟಿನಿಂದ, ಹಿಂದೂರಾಜ್ಯ ಕಟ್ಟುತ್ತಿರುವ ಹುಕ್ಕ-ಬುಕ್ಕರಿಗೆ ಸಹಾಯ ಮಾಡಬೇಕೆಂದು, ದಾಸಯ್ಯನ ವೇಷದಿಂದ ದೇವಿಕೊಳ್ಳಕ್ಕೆ ಬರುವನು. ಮಲಿಕಕಾಫರ ತನ್ನ ಕೋಟೆಯನ್ನು ಹಾಳುಗೆಡವಿದಾಗ ಆತನ ಸೈನ್ಯದಲ್ಲಿದ್ದ ರಹಿಮಾನನ ಜೊತೆ ವೀರತನದಿಂದ ಕಾದಿದ್ದ. ಈಗ ರಹಿಮಾನನೇ ಬುಕ್ಕನ ಸಹಾಯಕನಾಗಿರುವುದರಿಂದ, ಅವನನ್ನು ಸ್ನೇಹಿತನಂತೆ ಕಾಣುವನು. ಮಾಧವಾಚಾರ್ಯರ ನಿರ್ದೇಶನದಲ್ಲಿ ಕಾಸೀಮನನ್ನು ದ್ವಂದ್ವದಲ್ಲಿ ಸೋಲಿಸಿ ಕಂಪಲಿಯ ಕೋಟೆಯನ್ನು ವಶಪಡಿಸಿಕೊಳ್ಳಲು ಕಾರಣನಾದ. ಇವನಿಗಿಂತ ಮಲ್ಲನ ಚಿತ್ರ ಚೆನ್ನಾಗಿದೆ. ಕುರುಬರ ಮಲ್ಲ ತನ್ನ ಹೆಂಡತಿಯನ್ನು ಮುಸಲ್ಮಾನರು ಅಪಹರಿಸಿದ್ದರಿಂದ ಅವರ ವಿರುದ್ದ ಹಲ್ಲು ಕಡಿಯತೊಡಗಿದ. ಹೆಗ್ಗನ ಸಂಗಡಿಗರಲ್ಲಿ ಒಬ್ಬನಾಗಿ ತನ್ನ ವೀರವೃತ್ತಿಯನ್ನು ಮೆರೆದು ಮಲ್ಲಸರ್ಜನಾದ. ಬಹಾವುದ್ದೀನನ ಮರಣದ ಸೇಡನ್ನು ತೀರಿಸಲು ತಘಲಖನ ಜಟ್ಟಿಯೊಡನೆ ಮಲ್ಲಯುದ್ಧಕ್ಕೆ ಸಿದ್ಧನಾದನು. ಧರ್ಮದಿಂದಲೇ ಪ್ರತಿಸ್ಪರ್ಧಿಯನ್ನು ಜಯಿಸಿದರೂ, ಆತನನ್ನು ಕೊಲ್ಲದೆ ಬಿಟ್ಟು ತನ್ನ ಔದಾರ್ಯವನ್ನು ತೋರಿದನು. ಇವನ ದಿಟ್ಟತನವನ್ನೂ ಶೌರ್ಯವನ್ನೂ ಕಂಡು ಬಾದಶಹನೂ ಬೆರಗಾದನು. ಗಳಗನಾಥರು ಇಂಥ ಎಲ್ಲ ಶೂರರನ್ನು ಅತಿ ಧರ್ಮಮಾರ್ಗಿಗಳಾಗಿಯೇ ಚಿತ್ರಿಸಿರುವರು. ಆಗಲೇ ನೋಡಿದಂತೆ ಇವರೆಲ್ಲ ಮಧ್ಯಯುಗದ ವೀರರಾಗಿ ತೋರದೆ ಮಹಾಭಾರತ ಕಾಲದ ವೀರರೇ ಈ ವೇಷತೊಟ್ಟು ಬಂದಂತೆ ವಿಚಿತ್ರವಾಗಿ ಕಾಣುತ್ತಾರೆ.

"ಕಾಸೀಮ, ಪದ್ಮಿನಿ ಮತ್ತು ಚಿನ್ನಮ್ಮ ಈ ಪಾತ್ರ ಚಿತ್ರಣದಲ್ಲಿ ಅತಿರೇಕವಿದೆ"[1] ಎಂದು ಶ್ರೀ ನಾಯಕರು ಹೇಳಿರುವುದು ಸರಿಯೇ ಆಗಿದೆ. ಮಹಾಶೂರ, ಮುತ್ಸದ್ದಿ, ದುಷ್ಟ, ಕಾಮುಕನೆಂದು ವರ್ಣಿಸಲ್ಪಟ್ಟ ಕಾಸೀಮ ಪದ್ಮಿನಿಯ ಮೋಹದಿಂದ ಹುಚ್ಚನಾಗಿ ಬಿಡುತ್ತಾನೆ. ಬೈರಾಗಿಣಿಯಂತೂ ಇವನನ್ನು ಕೋತಿಯಂತೆ ಕುಣಿಸಿ ಮೂರ್ಖನನ್ನಾಗಿ ಮಾಡುವಳು. ಹಿಂದುಮುಂದಿನ ವಿಚಾರವಿಲ್ಲದೆ ಈತ ಅವಳಿಗೆ ತನ್ನ ಗುರುತಿನ ವಜ್ರದ ಉಂಗುರವನ್ನೇ ಕೊಟ್ಟುಬಿಡುವನು. ಅಲ್ಲದೆ ಈತ ಮಾಧವಾಚಾರ್ಯರ ಉಪದೇಶದಿಂದ ಮೆತ್ತಗಾಗಿ ಬಿಡುವನು. ಪದ್ಮಿನಿ ದೇವರಾಯನ ಮಗಳು. ಕಾಸೀಮನನ್ನು ಬಣ್ಣದ ಮಾತುಗಳಿಂದ ಮರುಳು ಮಾಡಿ, ಸೆರೆಮನೆಯಲ್ಲಿದ್ದರೂ ತನ್ನ ಮಾನರಕ್ಷಣೆಯನ್ನು ಮಾಡಿಕೊಳ್ಳಬಲ್ಲಳು. ಮಾಧವಾಚಾರ್ಯರ ಬಿಡುಗಡೆಯಾಗುವ ವರೆಗೆ ಉಪವಾಸ ವ್ರತವನ್ನು ಆಚರಿಸಿದಳು. ಪ್ರಸಂಗ ಬಂದಾಗ ಕತ್ತಿಯನ್ನು ಹಿಡಿಯಬಲ್ಲಳು. ಕಾಂಚನಗಡದಲ್ಲಿ ರಾತ್ರಿ ಶಸ್ತ್ರರಹಿತನಾದ ಮಲಿಕ ನಾಯಬ ಎದುರಿಗೆ ಬಂದರೂ ಇವಳು ಆತನನ್ನು ಕೊಲ್ಲಲಿಲ್ಲ. "ಆತನನ್ನು ಯಮಸದನಕ್ಕಟ್ಟುವದು ತನಗೆ ಸುಲಭವಾಗಿತ್ತು. ಆದರೆ ಕ್ಷಾತ್ರಧರ್ಮಕ್ಕೆ ಉಚಿತವಲ್ಲದ ಆ ಕರ್ಮವನ್ನು ಮಾಡಲಿಕ್ಕೆ" ಹೇಸಿದಳು (ಪುಟ 735). ಆದರೆ ಇದೇ ಪದ್ಮಿನಿಯು ಮೋಸದಿಂದ ರಹಿಮಾನನನ್ನು ಇರಿದು ಕೊಲ್ಲುವಳು.

ಚಿನ್ನಮ್ಮ ಇನ್ನೂ ಅದ್ಭುತವಾಗಿರುವಳು. ಮುಸಲ್ಮಾನರ ಕೈಯಿಂದ ಸುರಕ್ಷಿತವಾಗಿ ಪಾರಾಗಿದ್ದರೂ, ತನ್ನ ಪತಿ–ಮಲ್ಲ ತನ್ನನ್ನು ನಂಬಬಹುದೇ ಎಂದು ಹೆದರಿ, ಪಂಪಾಸರೋವರದಲ್ಲಿ ಹಾರಿಕೊಳ್ಳುವ ಕೆಚ್ಚನ್ನು ತೋರಿದಳು. ಮಾಧವಾಚಾರ್ಯರ ಶಿಷ್ಯರಿಂದ ಜೀವದಾನ

1. ಪ್ರಬುದ್ಧ ಕರ್ಣಾಟಕ, 4–63, ಪುಟ 52

ಪಡೆದ ಅವಳು ಸೇವಾಧರ್ಮವನ್ನು ಸ್ವೀಕರಿಸಿ ಸಾಧ್ವಿಯಾದಳು. ಯುದ್ಧ ಪ್ರಸಂಗದಲ್ಲಿ ಬೈರಾಗಿಣಿಯಾಗಿ ಅನೇಕರಿಗೆ ಮಂಕು ಬೂದಿ ಹಚ್ಚಿದಳು. ಮಹಮ್ಮದ ತಘಲಖನೂ ಇವಳ ಗಾಯನಕ್ಕೆ ಮರುಳಾಗಿ ಬಿಟ್ಟಿದ್ದ. ಕಾಸೀಮನಂತೂ ಇವಳ ಕಡೆಗಣ್ಣಿನ ಸೂಚನೆಯಂತೆ ಕುಣಿದ. ಕೊನೆಯಲ್ಲಿ ಪದ್ಮಿನಿಯಂತೆ ಇವಳೂ ಶಸ್ತ್ರಪಾಣಿಯಾಗಿ ಮಲ್ಲಸರ್ಜನಿಗೆ ಸಹಾಯ ಮಾಡಿದಳು. ಆತ ಕೃತಜ್ಞತೆಯಿಂದ ಕೊಟ್ಟ ಉಂಗುರವನ್ನು ಭಕ್ತಿಯಿಂದ ಸ್ವೀಕರಿಸಿದಳು. ಪದ್ಮಿನಿ ಬುಕ್ಕನನ್ನು ವರಿಸಿದಂತೆ, ಇವಳೂ ಕೊನೆಗೆ ತನ್ನ ಪತಿಯನ್ನು ಸೇರಿ ಸುಖಿಯಾದಳು.

ಪದ್ಮಿನಿ ಮತ್ತು ಚಿನ್ನಮ್ಮ ಇವರ ಪಾತ್ರಗಳನ್ನು ಗಳಗನಾಥರು ತಮ್ಮ ಕಾದಂಬರಿಗೆ ರೋಮ್ಯಾಂಟಿಕ್ ಬಣ್ಣವನ್ನು ಬಳಿಯುವ ಸಲುವಾಗಿಯೇ ಸೃಷ್ಟಿಸಿರುವರು. ಆದ್ದರಿಂದ ಈ ಪಾತ್ರಗಳಲ್ಲಿ ವಿಸಂಗತ, ಅತ್ಯದ್ಭುತ, ಅತಿರೇಕಗಳಿರುವುದು ಸಹಜ. 'ರಾಣಿ ಮೃಣಾಲಿನಿ'ಯ ಮನೋರಮೆಯನ್ನು ಈ ಬೈರಾಗಿಣಿಯಾದ ಚಿನ್ನಮ್ಮ ನೆನಪಿಗೆ ತರುತ್ತಾಳೆ. ಅಲ್ಲಿ ಮನೋರಮೆಯ ಪತಿಯಾದ ಪಶುಪತಿಯು ಅವಳ ಗುರುತು ಹಿಡಿಯದಂತೆ, ಇಲ್ಲಿ ಮಲ್ಲನಿಗೂ ಚಿನ್ನಮ್ಮನ ಗುರುತು ಸಿಗುವುದಿಲ್ಲ. ಬಹುಶಃ ಬಂಕಿಮರ ವಾಚಕರಂತೆ, ಗಳಗನಾಥರ ವಾಚಕರೂ ಇಂಥ ರಮ್ಯ ಪಾತ್ರಗಳನ್ನು ಮೆಚ್ಚಿದರು. ಈ ಕಾದಂಬರಿಯಲ್ಲಿ ದಾಸಿ ಹೊನ್ನಮ್ಮನನ್ನು ಬಿಟ್ಟು, ಇನ್ನೊಂದು ಸ್ತ್ರೀಪಾತ್ರವೆಂದರೆ, ಕಾದಂಬರಿಯ ಆದಿಯಲ್ಲೊಮ್ಮೆ ಕೊನೆಕೊನೆಗೊಮ್ಮೆ ಸುಳಿದು ಹೋಗುವ ವೈತಿಹೋತ್ರಿ.

ವಿಕ್ಷಿಪ್ತನೆಂದು ಇತಿಹಾಸದಲ್ಲಿ ಖ್ಯಾತನಾದ ತಘಲಖ ಮಹಮ್ಮದನು ಈ ಕಾದಂಬರಿಯ 6ನೆಯ ಮತ್ತು 10ನೆಯ ಪ್ರಕರಣಗಳಲ್ಲಿ ನಿಜವಾಗಿಯೂ ಚೆನ್ನಾಗಿ ಚಿತ್ರಿತನಾಗಿರುವನು. ಗಳಗನಾಥರು ಈ ಹುಚ್ಚ ಮಹಮ್ಮದನ ಕ್ರೂರತನವನ್ನೂ, ವಿಕ್ಷಿಪ್ತತೆಯನ್ನೂ ಕಲಾತ್ಮಕವಾಗಿ ಮೂಡಿಸಿರುವರು. ಯಮಸದೃಶನಾದ ಮಹಮ್ಮದನು ಕ್ರೂರನಾಗಿದ್ದರೂ ಕಲಾಪ್ರಿಯನಾಗಿದ್ದನು. ಬೈರಾಗಿಣಿಯ ಗಾಯನವನ್ನು ಮೆಚ್ಚಿ, ಅವಳ ಕೋರಿಕೆಯಂತೆ ಮಲ್ಲಸರ್ಜನನ್ನು ಬಂಧಮುಕ್ತಗೊಳಿಸಿದನು. ತನ್ನ ವಿರುದ್ಧ ಬಂಡೆದ್ದು ಕರ್ನಾಟಕಕ್ಕೆ ಓಡಿಬಂದಿದ್ದ ತನ್ನ ಅಣ್ಣನ ಮಗ ಬಹಾವುದ್ದೀನನ್ನು ಶಿಕ್ಷಿಸಲೆಂದೇ ಆತ ಈ ಕಡೆಗೆ ಬಂದಿದ್ದು, ಬಹಾವುದ್ದೀನನಿಗೆ ಆಶ್ರಯವಿತ್ತ ಆನೆಗೊಂದಿಯ ಜಂಬುಕೇಶ್ವರನನ್ನು ನಿರ್ನಾಮ ಮಾಡಿದ. ಬಹಾವುದ್ದೀನನನ್ನು ಸೆರೆಹಿಡಿದು ತರಿಸಿ ಆತನ ಚರ್ಮ ಸುಲಿಯುವಂತೆ ಆಜ್ಞಾಪಿಸಿದ. ಆದರೆ ಬಹಾವುದ್ದೀನನ ಮಾತುಗಳನ್ನು ಕೇಳಿ, ಉಳಿದವರಂತೆ ಮಹಮ್ಮದನ ಕಣ್ಣೀರುಗಳೂ ಉದುರಿದುವು. ಆದರೆ ಮರುಕ್ಷಣವೇ ಆತ ಕಠೋರನಾಗಿ "ಸುಲಿಯಿರಿ ಈ ನೀಚ ಬಂಡುಗಾರನ ಚರ್ಮವನ್ನು" ಎಂದು ಗರ್ಜಿಸಿದ.

ಮಲಿಕ ನಾಯಬ, ವಿರೂಪಾಕ್ಷಾರ್ಯ, ಚನ್ನಬಸವಾರ್ಯ, ತಿರುವೆಂಕಟ, ಶ್ರೀಕಂಠ ಶಾಸ್ತ್ರಿ, ಮಾದರ ದುರಗಪ್ಪ, ರಹಿಮಾನ, ಅಬ್ದುಲ್ ಬಖತ್ಯಾರಖಾನ ಮೊದಲಾದ ಗಳಗನಾಥರ ಮಾನಸಪುತ್ರರಲ್ಲಿ ವಿಶೇಷವಾದ ಆಕರ್ಷಣೆಯೇನೂ ಕಂಡುಬರುವುದಿಲ್ಲ. ಪಾತ್ರಚಿತ್ರಣದಲ್ಲಿ ಉಂಟಾಗಿರುವ ದೋಷಕ್ಕೆ ಮುಖ್ಯ ಕಾರಣವೆಂದರೆ ಬಹುಶಃ ಗಳಗನಾಥರಿಗೇ ಈ ಪಾತ್ರಗಳ ಸ್ಪಷ್ಟವಾದ ಕಲ್ಪನೆಯಿಲ್ಲದಿರುವುದು.

'ಸದ್ಗುರು' ಮಾಸಪತ್ರಿಕೆಯಲ್ಲಿ 'ಮಾಧವ ಕರುಣಾವಿಲಾಸ'ದ ಕೆಲವು ಭಾಗ ಮೊದಲೇ ಪ್ರಕಟವಾಗಿತ್ತು. ಆಗ ಕೆಲವು ವಾಚಕರು ಗಳಗನಾಥರಿಗೆ ಪತ್ರ ಬರೆದು, "ಮಾಧವಾಚಾರ್ಯರು ಹೀಗೆಯೇ ಇದ್ದರೆ ? ವಿರೂಪಾಕ್ಷಾರ್ಯ ಮೊದಲಾದ ಪಾತ್ರಗಳೆಲ್ಲ ನಿಜವಾಗಿಯೇ ಆಗಿನ

ಕಾಲದಲ್ಲಿ ಇದ್ದವೆ? ಇದಕ್ಕೆ ಆಧಾರವೇನು?" ಎಂದು ಕೇಳಿದ್ದರು. ವಾಚಕರು ಇಂಥ ಪ್ರಶ್ನೆಗಳನ್ನು "ಕೌತುಕದಿಂದ ಕೇಳುವಾಗ ನನ್ನ ಹೃದಯವು ಆನಂದದಿಂದ ಉಕ್ಕುತ್ತಿತ್ತು. ಆಗ ನಾನು ಮಹಾತ್ಮರಾದ ಆಚಾರ್ಯರನ್ನು ಭಕ್ತಿಯಿಂದ ಮನಸಾ ವಂದಿಸಿ, ಹೀಗೆ ಕೇಳುವವರನ್ನು ಕುರಿತು—ಪುಣ್ಯವಂತರೇ, ನಾನೂ ನಿಮ್ಮ ಕಾಲದವನೇ; ಅಂದ ಬಳಿಕ ಈಗ 600 ವರ್ಷಗಳ ಹಿಂದೆ ಆಗಿ ಹೋಗಿರುವ ಮಾಧವಾಚಾರ್ಯರನ್ನು ನಿಮ್ಮಂತೆ ನಾನೂ ಕಂಡವನಲ್ಲ. ಹೀಗಿರುವಾಗ, ಅವರನ್ನು ಕಂಡವರಾಗಲಿ, ಸ್ವತಃ ಅವರೇ ಆಗಲಿ ಆಗಿನ ಪ್ರಸಂಗವನ್ನು ಕುರಿತು ನನ್ನನ್ನು ಪ್ರೇರಿಸದಿದ್ದರೆ ನಾನಾದರೂ ಏನು ಬರೆಯಬೇಕು? ಆದ್ದರಿಂದ ಪ್ರತ್ಯಕ್ಷ ಮಾಧವಾಚಾರ್ಯರೇ ಕರುಣಿಸಿ ಪ್ರೇರಕರಾಗಿ ನನ್ನ ಕೈಯಿಂದ ಈ ಕಾದಂಬರಿಯನ್ನು ಬರೆಸಿರುವದರಿಂದ, ಇದರ ವಿಷಯವಾಗಿ ಕನ್ನಡಿಗರು ನೀವು ಸರ್ವಥಾ ಅವಿಶ್ವಾಸ ಪಡತಕ್ಕದ್ದಲ್ಲ"[1] ಎಂದು ಬರೆದರು.

ಗಳಗನಾಥರ ಈ ಉತ್ತರದಲ್ಲಿ 'ಲಿಪಿಕಾರ ಕುಮಾರವ್ಯಾಸ'ನ ಭಾವವು ಅಡಕವಾಗಿದೆ ಎಂಬುದು ಸ್ಪಷ್ಟವಾಗಿದೆ. ಆದರೆ ವಾಚಕರ ಪ್ರಶ್ನೆಯಲ್ಲಿ ಕೇವಲ ಕೌತುಕವಿದ್ದಿತೆಂಬುದಕ್ಕಿಂತ ಆಶ್ಚರ್ಯ ಮತ್ತು ಕೆಲಮಟ್ಟಿಗೆ ಅವಿಶ್ವಾಸದ ಅಂಶಗಳೂ ಕೂಡ ಇದ್ದಿರಬಹುದು.

ಮಾಧವಾಚಾರ್ಯರ ಪಾತ್ರವು ಕಾದಂಬರಿಯ ಉದ್ದಕ್ಕೂ ವ್ಯಾಪಿಸಿಬಿಟ್ಟಿದ್ದರಿಂದ ಉಳಿದ ಪಾತ್ರಗಳಿಗೆ ಮೈತುಂಬಿ ಬೆಳೆಯಲು ಅವಕಾಶವಿಲ್ಲದಾಯಿತು. ಹುಕ್ಕ, ಬುಕ್ಕ, ಕೃಷ್ಣನಾಯಕ, ಮಲ್ಲಸರ್ಜ, ಮಲಿಕ ನಾಯಬ, ಕಾಸೀಮಖಾನ ಮೊದಲಾದವರು ವಿಶಾಲವಾಗಿ ಬೆಳೆದ ಆಲದ ಮರದ ಕೆಳಗೆ ಹುಟ್ಟಿ, ಮುರುಟಿಕೊಂಡ ಚಿಕ್ಕ ಕಂಟಿಗಳಂತೆ ಕಾಣುತ್ತಾರೆ. ವಿರೂಪಾಕ್ಷಾರ್ಯನಂಥ ಕೆಲವರು ಕೇವಲ ಆಲದ ಬಿಳಲಿನಂತಿದ್ದರಲ್ಲದೆ, ಅವರಿಗೆ ಸ್ವತಂತ್ರವಾದ ಜೀವಕಳೆಯೇ ಇಲ್ಲವೆನಿಸುತ್ತದೆ.

ಹೀಗೆ 'ಮಾಧವ ಕರುಣಾವಿಲಾಸ'ದ ಪಾತ್ರಸೃಷ್ಟಿ ನಮಗೆ ಇಂದು ಅವಾಸ್ತವವಾಗಿ ಕಾಣಬಹುದು. ಆದರೆ ಈ ಕಾದಂಬರಿ ರಚಿತವಾದ ಆ ರೋಮ್ಯಾಂಟಿಕ್ ಕಾದಂಬರಿಗಳ ಯುಗದಲ್ಲಿ ವಾಸ್ತವ ಪಾತ್ರಸೃಷ್ಟಿಯ ಅಭಾವ ಒಂದು ದೋಷವೆಂದು ಕಂಡಿದ್ದಿಲ್ಲ. ಆಂಗ್ಲ ಕಾದಂಬರೀ ಪ್ರಪಂಚದ ಪ್ರಥಮ ದೊರೆಯೆನಿಸಿಕೊಂಡ ಸರ್ ವಾಲಟರ್ ಸ್ಕಾಟ್‌ನನ್ನು ಅನುಸರಿಸಿ ಬರೆದ ಬಂಕಿಮಚಂದ್ರ ಮತ್ತು ಆಪಟೆಯವರಲ್ಲಿಯೂ ಇಂಥ ಅವಾಸ್ತವ ಸನ್ನಿವೇಶಗಳು, ಪಾತ್ರಗಳು ಕಂಡೇ ಕಾಣುತ್ತವೆ. ಇವರಿಬ್ಬರನ್ನೂ ಅನುಕರಿಸಿದ ಗಳಗನಾಥರಲ್ಲಿ ಅವು ಸ್ವಲ್ಪ ಹೆಚ್ಚಾಗಿವೆಯೆನ್ನಬಹುದು.[2]

ಕಾದಂಬರಿಯ ನಿರೂಪಣೆಯಲ್ಲಿ ಬೇರೆ ಕೆಲವು ದೋಷಗಳೂ ಕಾಣಿಸಿಕೊಂಡಿವೆ. "ಸದ್ಗುರು ವಿಷ್ಣುಶರ್ಮರ ಸನ್ನಿಧಿಯಲ್ಲಿ ಪರಮಶಿಷ್ಯನಾಗಿ ವರ್ತಿಸುತ್ತಿದ್ದ ಮಾಧವನು, ಈಗ ತನ್ನ ತಪಸ್ಸಾಮರ್ಥ್ಯದಿಂದ ಶಾಪಾನುಗ್ರಹಶಕ್ತನೂ ತ್ರಿಕಾಲಜ್ಞನೂ ಆಗಿರುವದರಿಂದ ಅಂಥ

1. ಗಳಗನಾಥ: ಮಾಧವ ಕರುಣಾವಿಲಾಸ, ಪ್ರಸ್ತಾವನೆ.
2. ಆದರೂ "ಈ ಕೃತಿಯಲ್ಲಿ ಗಳಗನಾಥರ ಪಾತ್ರಸೃಷ್ಟಿ ಎಂದಿನಂತೆ ಉಜ್ವಲವಾಗಿದೆ. ಮಲ್ಲಗಾಳಗ, ಮತ್ತು ಯುದ್ಧಕಾರ್ಯದ ಯುಕ್ತಿ, ಪ್ರಯುಕ್ತಿಗಳು ಓದುಗರನ್ನು ಸೆರೆ ಹಿಡಿಯುತ್ತವೆ" ಎಂಬ ಅಭಿಪ್ರಾಯವೂ ಇಲ್ಲದಿಲ್ಲ. [ನೋಡಿರಿ–ಶ್ರೀನಿವಾಸ ಹಾವನೂರ: ಗಳಗನಾಥ ಮಾಸ್ತರರು, ಪುಟ 64]

ಮಹಾತೇಜಸ್ವಿಯನ್ನು ಮಾಧವ ಎಂಬ ಒಂಟಿ ಹೆಸರಿನಿಂದ ಕರೆಯಲಿಕ್ಕೆ ನಮಗೆ ಸಂಕೋಚ ವಾಗುವದು" (ಪುಟ 26) ಎಂದು ಗಳಗನಾಥರು ಅವರನ್ನು ಮಾಧವಾಚಾರ್ಯ ಎಂದು ಕರೆದರು. ಮತ್ತು ಅಲ್ಲಿ ಆಚಾರ್ಯ ಶಬ್ದದ ಅರ್ಥವನ್ನು ಸಂಸ್ಕೃತ ಶ್ಲೋಕದ ಸಹಾಯ ದಿಂದ ವಿವರಿಸಿರುವರು. ಆದರೆ ಇದೇ ಶ್ಲೋಕವನ್ನೂ ಅರ್ಥವಿವರಣೆಯನ್ನೂ ಅವರು 344 ನೆಯ ಪುಟದಲ್ಲಿ ಮತ್ತೊಮ್ಮೆ ಕೊಟ್ಟಿರುವರು. ಈ ಪುನರುಕ್ತಿ ಅನಾವಶ್ಯಕ.

ಶ್ರೀಕಂಠಶಾಸ್ತ್ರಿ ಎಂಬ ಪಾತ್ರದ ಮುಖದಿಂದ 'ಮಾಧವಾಚಾರ್ಯರ ಯೋಗ್ಯತೆಯೇ ಅಂತಹದು! ಅವರು ಸ್ವಾರ್ಥರಹಿತರು....' (ಪುಟ 596) ಎಂದು ಮೊದಲಾದ ಗೌರವಯುತ ಪ್ರಶಂಸೆಯ ಮಾತುಗಳು ಬಂದ ಉಸಿರಿನಲ್ಲಿಯೇ "ಏನೇ ಆಗಲಿ, ಆ ಉದ್ಧಟ ಮಾಧವನ ಪಾರುಪತ್ಯ...." ಎಂಬ ಅಗೌರವವಾಚಕ ಮಾತುಗಳೂ ಬಂದಿವೆ (ಪುಟ 597). ಶ್ರೀಕಂಠಶಾಸ್ತ್ರಿ ಗೂಢಚಾರನಾದರೂ, ಆತನ ಮಾತುಗಳಲ್ಲಿ ಅಸಂಬದ್ಧತೆ ಇರಬೇಕಾಗಿಲ್ಲ.

ಉಳಿದೆಲ್ಲ ಕಾದಂಬರಿಗಳಂತೆ ಗಳಗನಾಥರು ಇಲ್ಲಿಯೂ ಹಲವು ಸಂಸ್ಕೃತ ವಾಕ್ಯ ಗಳನ್ನು ಸುಭಾಷಿತಗಳನ್ನು ಉದ್ಧರಿಸುತ್ತಾರೆ. ಆದರೆ ಅವು ಇಲ್ಲಿ ಹೆಚ್ಚಾಗಿವೆ; ಅಷ್ಟೇ ಅಲ್ಲದೆ ಕೆಲವು ಸಲ ಸಂಸ್ಕೃತವರಿಯದ ಪಾತ್ರಗಳ ಮುಖದಿಂದಲೂ ಇಂಥ ಮಾತುಗಳು ಬಂದಾಗ ಆಭಾಸವಾಗುತ್ತದೆ.

ಪದ್ಮಿನಿಯ ಪಾಣಿಗ್ರಹಣ ಮಾಡಲು ಆತುರನಾದ ಕಾಸೀಮ "ಸುಮ್ಮನೆ ಆಯಾಸ ಪಡಬೇಡ. ಕಾಮಾತುರಾಣಾಂ ನ ಭಯಂ ನ ಲಜ್ಜಾ—ಎಂಬಂತೆ ನನಗೆ ಯಾರ ಭಯವೂ ಇಲ್ಲ" (268) ಎನ್ನುವನು. 'ದೇಶವಿಘಾತಕ ಭೇದ ಭಾವ ನಿರಸನ'ದ ಬಗ್ಗೆ ಬೋಧ ಮಾಡುತ್ತ ತಿರುವೇಂಕಟನಿಗೆ ವಿರೂಪಾಕ್ಷಾರ್ಯನೆಂಬ ವೀರಶೈವನು ಭಾಗವತದಲ್ಲಿಯ ಉದಾ ಹರಣೆಗಳನ್ನು ಕೊಡುತ್ತ ಅಲ್ಲಿಯ ಸ್ಕಂಧ ಮತ್ತು ಪದ್ಯಗಳ ಸಂಖ್ಯೆಯನ್ನೂ ಹೇಳುವನು. ಶಿಕ್ಷೆಗೆ ಸಿದ್ಧನಾಗಿ ನಿಂತ ಬಹಾವುದ್ದೀನನು ಕನ್ನಡಿಗರನ್ನು ಕುರಿತು ಭಾಷಣ ಮಾಡುತ್ತ "ಸಮಾನಶೀಲ ವ್ಯಸನೇಷು ಸಖ್ಯಂ" ಎಂದು ಮುಂತಾಗಿ ನಿರರ್ಗಳವಾಗಿ ಹೇಳುವನು. ಪಂಡಿತರಾದ ಮಾಧವಾಚಾರ್ಯರು ಮಲಿಕ ನಾಯಬನ ಜೊತೆಗೆ 'ಯಾವನೀ ಭಾಷೆ ಯಲ್ಲಿ'ಯೇ ಮಾತನಾಡಿದರು—ಎಂದು ಗಳಗನಾಥರು ತಿಳಿಸುವರು. ಅದನ್ನು ಒಂದು ವೇಳೆ ಒಪ್ಪಬಹುದು. ಆದರೆ ಸಾಮಾನ್ಯ ಸಿಪಾಯಿಗಳಾದ ಮುಸಲ್ಮಾನರು ಸಂಸ್ಕೃತ ವಾಕ್ಯಗಳನ್ನೇ ಉದ್ಧರಿಸಿ ಭಾಷಣ ಮಾಡುವರಲ್ಲದೆ, "ತುಕಡಿ ಮುರಕ ಹಾರುವ" ಮೊದಲಾದ ಕೇವಲ ಬ್ರಾಹ್ಮಣ ಸಮಾಜದಲ್ಲಿ ಮಾತ್ರ ರೂಢವಾಗಿರುವ ಬೈಗಳನ್ನೂ ಪ್ರಯೋಗಿಸುವರು. ಗಳಗ ನಾಥರಿಗೆ ಮುಸಲ್ಮಾನರ ಬೈಗಳಗಳ ಪರಿಚಯವಿಲ್ಲದೆ, ಅವರು ತಮಗೆ ಗೊತ್ತಿದ್ದವುಗಳನ್ನೇ ಅವರ ಬಾಯಿಯಿಂದಲೂ ಹೇಳಿಸಿಬಿಟ್ಟಿದ್ದಾರೆ.

ಜೀವನದಲ್ಲಿ ಅನೇಕ ಆಕಸ್ಮಿಕಗಳು ಘಟಿಸುತ್ತವೆ. ಆದರೆ ಕಲೆಯಲ್ಲಿ ಅವುಗಳಿಗೆ ಸ್ಥಾನವಿಲ್ಲ. 'ಮಾಧವ ಕರುಣಾವಿಲಾಸ'ದಲ್ಲಿ ಇಂಥ ಹಲವಾರು ಆಕಸ್ಮಿಕ ಘಟನೆಗಳು ನಡೆಯುತ್ತವೆ. ಚೆನ್ನಮ್ಮ ಸರೋವರದಲ್ಲಿ ಪ್ರಾಣಕಳೆದುಕೊಳ್ಳಲು ಸಿದ್ಧಳಾದಾಗ ಹೆಗ್ಗನು ಆಕಸ್ಮಿಕವಾಗಿ ಅವಳನ್ನು ತಡೆಯುವನು. ಅವನನ್ನು ಮುಸಲ್ಮಾನರು ಹಿಡಿದು ಅವನ ಕಣ್ಣುಗುಡ್ಡೆಗಳನ್ನು ಒಡೆಯಲು ಕಠಾರಿಯನ್ನು ತೆಗೆದಾಗ ಅಕಸ್ಮಾತ್ ಮಲ್ಲನು ಏರಿಬಂದು ಆ ಕೈಯನ್ನೇ ಕತ್ತರಿಸುವನು. ಸರೋವರದಲ್ಲಿ ಮುಳುಗಿದ ಚೆನ್ನಮ್ಮನನ್ನು ಅಕಸ್ಮಾತ್

ಒಬ್ಬ ದಿವ್ಯಪುರುಷನು ಬದುಕಿಸುವನು. ಕಾಸೀಮನು ಪದ್ಮಿನಿಯನ್ನು ಬಲಾತ್ಕರಿಸಬೇಕೆನ್ನುವಷ್ಟ ರಲ್ಲಿಯೇ ಅಕಸ್ಮಾತ್ತಾಗಿ ಒಬ್ಬ ಬೈರಾಗಿಣಿಯು ಅಲ್ಲಿಗೆ ಬರುವಳು. ಈ ಬೈರಾಗಿಣಿಯಂತೂ ಯಾವ ಕಾಲಕ್ಕಾದರೂ ಯಾವ ಸ್ಥಳದಲ್ಲಾದರೂ ಅಕಸ್ಮಾತ್ ಹಾಜರಾಗಿ ಬಿಡುತ್ತಾಳೆ. ಕಾಸೀಮನ ಮೇಲೆ ಹುಲಿ ಹಾರಬೇಕೆನ್ನುವಷ್ಟರಲ್ಲಿ ಹುಕ್ಕ-ಬುಕ್ಕರು ಅಲ್ಲಿ ಆಕಸ್ಮಿಕವಾಗಿ ಬಂದು ಹುಲಿಯನ್ನು ಕೊಂದು ಆವನನ್ನು ರಕ್ಷಿಸುವರು. ಅಬುದುಲ್ ರಹಮಾನ ಮತ್ತು ತಿರುವೇಂಕಟರು ತಮ್ಮ ಖಡ್ಗಗಳನ್ನು ಎತ್ತುವುದೇ ತಡ, ಅಕಸ್ಮಾತ್ ಯಾವನೋ ಒಬ್ಬ ಫಕೀರನು ನಡುವೆ ಬಂದು ಅವರನ್ನು ತಡೆಯುವನು. ಖಾನನ ಸೈನ್ಯಠಾಣೆಯಲ್ಲಿ ಇಬ್ಬರು ತರುಣ ಫಕೀರರು ಒಮ್ಮೆಲೇ ಹೇಗೆ ಬಂದರೆಂದು ಯಾರಿಗೂ ತಿಳಿಯುವುದಿಲ್ಲ. ಯಾರೂ ಅದನ್ನು ವಿಚಾರಿಸುವುದೂ ಇಲ್ಲ. ಯುದ್ಧದ ವರ್ಣನೆಯಲ್ಲಂತೂ ಇಂಥ ಆಕಸ್ಮಿಕಗಳು ಹಲವು. ಕಾದಂಬರಿಯಲ್ಲಿಯ ಇಂಥ ವಿಪುಲ ಆಕಸ್ಮಿಕ ಅಸಂಗತಿಗಳು ಕಾದಂಬರಿಯನ್ನು ಇನ್ನೂ ದುರ್ಬಲಗೊಳಿಸಿವೆ.

ಕುತೂಹಲಕರ ಸನ್ನಿವೇಶಗಳನ್ನು ಸೃಷ್ಟಿಸಿ ವಾಚಕರ ಕುತೂಹಲವನ್ನು ಕೆರಳಿಸಲು ಇಂಥ ಆಕಸ್ಮಿಕಗಳನ್ನು ಲೇಖಕರು ಸೃಷ್ಟಿಸುವುದು ರೂಢಿ. ವಾಸ್ತವತೆಯೇ ಪ್ರಧಾನವಾದ ಇಂದಿನ ಕಾದಂಬರಿಗಳಲ್ಲಿ ಇದೊಂದು ದೊಡ್ಡ ದೋಷವೆಂದು ಗಣಿಸಲಾಗಿದೆ. ಆದರೆ ರೋಮ್ಯಾಂಟಿಕ್ ಕಾದಂಬರಿಗಳಲ್ಲಿ ಇಂಥ ಆಕಸ್ಮಿಕ ಯೋಗಗಳಿಗೆ ಅವಕಾಶವಿದ್ದೇ ಇತ್ತು. "ಮಾಧವ ಕರುಣಾವಿಲಾಸದ ಮಟ್ಟಿಗೆ ಹೇಳುವುದಾದರೆ ಈ ಆಕಸ್ಮಿಕ ಯೋಗಗಳ ಚಪಲ ಕಾದಂಬರಿಕಾರನಿಗೆ ಇರಬೇಕಾದ ಆವಶ್ಯಕತೆಯೇ ಇರಲಿಲ್ಲ".[1] ಗಳಗನಾಥರು ಇವುಗಳನ್ನು ಕಡಿಮೆ ಮಾಡಬಹುದಿತ್ತೆಂಬುದಂತೂ ನಿಜವೇ ಆಗಿದೆ.

ನಿಷ್ಠುರವಾದ ಆಧುನಿಕ ವಿಮರ್ಶೆಗೆ ಒಳಪಡಿಸಿ ನೋಡಿದಾಗ 'ಮಾಧವ ಕರುಣಾ ವಿಲಾಸ'ದಲ್ಲಿ ಹೀಗೆ ಕೆಲವು ದೋಷಗಳು ಕಂಡರೂ, ಅದರಲ್ಲಿ ಮೆಚ್ಚಬಹುದಾದ ಕೆಲವು ಗುಣಗಳೂ ಇವೆಯೆಂಬುದನ್ನು ನೆನೆಯಬೇಕು. ಮುಖ್ಯವಾಗಿ ಈ ಕಾದಂಬರಿಯ ಹರವು (772 ಪುಟಗಳು) ತುಂಬ ದೊಡ್ಡದಾದುದು. ಆ ಕಾಲಕ್ಕೆ(1923) ಇಷ್ಟು ದೊಡ್ಡ ಗಾತ್ರದ ಸ್ವತಂತ್ರ ಕನ್ನಡ ಕಾದಂಬರಿಯನ್ನು ಬರೆದು ಪ್ರಕಟಿಸಿದುದೇ ಒಂದು ದೊಡ್ಡ ಪ್ರಶಂಸನೀಯ ಪ್ರಯತ್ನ. "ದೊಡ್ಡವರದೆಲ್ಲವೂ ದೊಡ್ಡದು" ಎಂದು ಡಾ. ಬೇಂದ್ರೆಯವರು ಹಾಡಿದಂತೆ, ಈ ದೊಡ್ಡ ಕಾದಂಬರಿಯ ದೋಷಗಳೂ ದೊಡ್ಡವಾಗಿ ಕಂಡಿವೆ.

ಆದರೆ, ಗಳಗನಾಥರು ಚಿತ್ರಿಸಿದ ಕೆಲವು ಸನ್ನಿವೇಶಗಳು ನಿಜವಾಗಿಯೂ ಸುಂದರ ವಾಗಿವೆ. ಇದೊಂದು ರೋಮ್ಯಾಂಟಿಕ್ ಯುಗದಲ್ಲಿ ನಿರ್ಮಿತವಾದ ಕಾದಂಬರಿ ಎಂಬುದನ್ನು ನೆನೆದು ನಾವು 'ಹಾ ತಡೆ'. 'ಹುಚ್ಚ ಮುಹಮ್ಮದನು'. 'ದೇವರಾಯನ ದರ್ಬಾರ', 'ಮಲ್ಲಯುದ್ಧ'. 'ಎಲಾ ಇದೇನು?', 'ದೇವಿಯ ಕೊಳ್ಳವು'. 'ಸೌಜನ್ಯದ ಸುಲಿಗೆ', 'ಸೇರಿಗೆ ಸವ್ವಾಸೇರು'. 'ಸತ್ವಪ್ರಭಾವ', 'ಕನ್ನಡಿಗರ ರಣರಕ್ಕಸತನ' ಮೊದಲಾದ ಪ್ರಕರಣಗಳನ್ನು ಓದಬೇಕು. ಗಳಗನಾಥರ ವಾಚಕರಿಗೆ ಯಾವುದು ಗುಣವಾಗಿ ಕಂಡಿತ್ತೋ ಅದೇ ಇಂದಿನ ವಿಮರ್ಶಕನಿಗೆ ದೋಷವಾಗಿ ಕಾಣುತ್ತದೆ. ನಮ್ಮಲ್ಲಿ ಅಭಿರುಚಿ ಬದಲಾಗಿರುವುದೇ ಅದಕ್ಕೆ ಮುಖ್ಯ ಕಾರಣ.

---

1. ಪ್ರಬುದ್ಧ ಕರ್ಣಾಟಕ, 46-3, ಪುಟ 51

ಅದರಂತೆ ತಪೋವನದ ಪುಣ್ಯಾಶ್ರಮ, ಅರುಣೋದಯದ ಸಮಯ, ಕೃಷ್ಣಪಕ್ಷದ ರಾತ್ರಿಯಂದು ಹೊಡೆದ ಆ ರಭಸದ ಮಳೆ, ಹೆಗ್ಗನು ಪದ್ಮಿನಿಯನ್ನು ಮುಸಲ್ಮಾನರಿಂದ ಬಿಡಿಸಿದ ಸನ್ನಿವೇಶ, ರಾತ್ರಿಯಲ್ಲಿ ಚಿನ್ನಮ್ಮನನ್ನು ಕಂಡು ಹೆದರಿದ ಹೆಗ್ಗನ ಮನೋಭಾವ, ಜಟ್ಟಿಗಳ ಯುದ್ಧ ಮೊದಲಾದ ಕೆಲವು ಚಿತ್ರಗಳನ್ನು ಗಳಗನಾಥರು ರಸವತ್ತಾಗಿ ನಿರೂಪಿಸಿರುವರು. ಇವು ಕಾದಂಬರಿಯಲ್ಲಿ ಮನೋಜ್ಞವಾಗಿ ಕುತೂಹಲಕರವಾಗಿ ಓದಿಸಿಕೊಂಡು ಹೋಗುವ ಭಾಗಗಳು. ಈ ಚಿತ್ರಣಗಳಲ್ಲಿ ಗಳಗನಾಥರ ಸ್ವೋಪಜ್ಞತೆಯನ್ನು ಸಹಜವಾಗಿ ಗುರುತಿಸಬಹುದು. ಇಂಥ ಭಾಗಗಳು ಕಾದಂಬರಿಯ ಪೂರ್ವಾರ್ಧದಲ್ಲಿಯೇ ಹೆಚ್ಚಾಗಿವೆ. ಈ ಭಾಗಗಳನ್ನೇ ಅಂದಿನ ವಾಚಕರು 'ಸದ್ಗುರು'ವಿನಲ್ಲಿ ಧಾರಾವಾಹಿಯಾಗಿ ಬಂದಾಗ ಓದಿ, ಮೆಚ್ಚಿ,[1] ಕುತೂಹಲದಿಂದ ಸಂಪೂರ್ಣ ಕಾದಂಬರಿಯನ್ನು ನಿರೀಕ್ಷಿಸಿದರು.

"ಈ ಅವಧಿಯಲ್ಲಿ ನಮ್ಮ ಪ್ರಿಯ ಚಂದಾದಾರರು 'ಮಾಧವ ಕರುಣಾವಿಲಾಸ' 'ಮಾಧವ ಕರುಣಾವಿಲಾಸ' ಎಂದು ಕನಕರಿಸುತ್ತಾ, ಅದು ಬೇಗನೇ ಯಾಕೆ ಬರಲೊಲ್ಲದೆಂದು ಚಡಪಡಿಸಿ ಓದುವ ತಮ್ಮ ಆತುರತೆಯನ್ನು ತಡೆಯಲಾರದೆ, ಹಲವರು ಹಲವು ತರದ ಮಾತುಗಳನ್ನು ನನಗೆ ಆಡಿದರು. ಆದರೆ ಅದೆಲ್ಲ ನನ್ನ ಹಾಗು ನನ್ನ ಕಾದಂಬರಿಯ ವಿಷಯದ ನಮ್ಮ ಚಂದಾದಾರರ ಉತ್ಕಟ ಪ್ರೇಮದ ಲಕ್ಷಣವೆಂದು ತಿಳಿದು ನಾನು ಸಮಾಧಾನವನ್ನೇ ತಾಳಿದೆನು"[2] ಎಂದು ಗಳಗನಾಥರು ಸ್ಮರಿಸಿದರು. ಈ ಬೃಹತ್ ಕಾದಂಬರಿಯ ಐದು ಸಾವಿರ ಪ್ರತಿಗಳನ್ನು ವಾಚಕರ ಸಂಖ್ಯೆ ತೀರ ಕಡಿಮೆಯಾಗಿದ್ದ ಆ ಕಾಲದಲ್ಲಿ, ಗಳಗನಾಥರು ಅಚ್ಚು ಹಾಕಿಸಿದರೆಂಬುದು ಅವಶ್ಯವಾಗಿ ಗಮನಿಸಬೇಕಾದ ಅಂಶವಾಗಿದೆ.

ಆದರೆ, ಕೇವಲ ಜನಪ್ರಿಯತೆಯಿಂದ ಅಥವಾ ಹೆಚ್ಚು ಪ್ರತಿಗಳ ಮಾರಾಟದಿಂದ ಒಂದು ಕೃತಿಯ ಗುಣಮಟ್ಟವನ್ನು ನಿರ್ಧರಿಸಲಾಗದೆಂಬುದು ನಿಜವೇ ಆಗಿದೆ. ಆದರೂ ಈ ಕೃತಿಯನ್ನು ಆಗಿನ ವಿದ್ವಾಂಸರೂ ಸ್ವಾಗತಿಸಿದರು, ಶ್ಲಾಘಿಸಿದರು ಎಂಬುದನ್ನೂ ನಾವು ನೆನೆಯಬೇಕು. ಕನ್ನಡ ಸಾಹಿತ್ಯ ಪರಿಷತ್ತು, ದೇವರಾಜ ಬಹಾದ್ದೂರ ಬಹುಮಾನ ಸಂಸ್ಥೆ, ಮತ್ತು ಕರ್ನಾಟಕ ವಿದ್ಯಾವರ್ಧಕ ಸಂಘ ಇವುಗಳಿಂದ ಪುರಸ್ಕಾರಗಳನ್ನು ಪಡೆದ ಈ ಕೃತಿಯ ಮಹತ್ತ್ವವನ್ನು ಕಡೆಗಣಿಸುವಂತಿಲ್ಲ.

"ಈ ಪ್ರಚಂಡವಾದ ಸುರಸ ತಾತ್ವಿಕ ಐತಿಹಾಸಿಕ ಕಾದಂಬರಿಯು ಮುಗಿದದ್ದರಿಂದ ನನ್ನ ತಲೆಯ ಮೇಲಿನದೊಂದು ದೊಡ್ಡ ಭಾರವು ಇಳಿದಂತಾಗಿ ನನಗೆ ಹಿಡಿಸಲಾರದಷ್ಟು ಸಂತೋಷವಾಗಿರುವದು" ಎಂದೇ ಗಳಗನಾಥರು 'ಮಾಧವ ಕರುಣಾವಿಲಾಸ'ದ ಪ್ರಸ್ತಾವನೆಯನ್ನು ಆರಂಭಿಸಿರುವರು. ಅದಕ್ಕೆ ಡಾ. ಹಾವನೂರ ಅವರು,

"....ಕನ್ನಡಿಗರ ಇತಿಹಾಸವನ್ನು ಕಥನಿಸುವ ಅವರ ಬಹುದಿನದ ಹಂಬಲ ಕೈಗೂಡಿದ್ದರಿಂದ ಅದರಲ್ಲಿ ಕೃತಾರ್ಥತೆಯ ಭಾವನೆ ಮೂಡಿದ್ದು ಸಹಜವೇ. ಜೊತೆಗೆ ತಮ್ಮ ಧಾರ್ಮಿಕ ವಿಚಾರಗಳನ್ನು ವ್ಯಕ್ತಪಡಿಸಲು ಇದೊಂದು ಅನುಕೂಲವೊದಗಿ ಬಂತು. ಇಂದಿನ ವಿಮರ್ಶೆಯ ಮಾನದಿಂದ ಧರ್ಮದ ವಿಷಯ ಇದರಲ್ಲಿ ಹೆಚ್ಚಾಗಿ ಬಂದು ಕಾದಂಬರಿಯ

1. "ಕಾದಂಬರಿಯು ಬಲು ಸವಿ" ಎಂದು ಅನೇಕರು ಮೆಚ್ಚಿದರು. (ಪ್ರಸ್ತಾವನೆ)
2. ಗಳಗನಾಥ : ಮಾಧವ ಕರುಣಾವಿಲಾಸ, ಪ್ರಸ್ತಾವನೆ.

ಕಲೆಗಾರಿಕೆಗೆ ಪೆಟ್ಟು ಬಿದ್ದಿದೆಯೆಂದು ಅನಿಸಬಹುದು. ಇನ್ನೊಂದು ಅರ್ಥದಲ್ಲಿ ಅದು ಮಹಾಭಾರತವೇ ಸೈ. ಆ ಮಹಾಕಾವ್ಯದಲ್ಲಿ ಕೂಡ ಧರ್ಮದೃಷ್ಟಿ ಮೇಲ್ವಾಯ್ದು ಬಂದಿದ್ದರೂ ಕಥನದ ಮೂಲಕ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯಲಾಗಿದೆ. ಅದು ಕೌರವ-ಪಾಂಡವರ ಮಹಾಭಾರತವಾದರೆ ಇದು ಕನ್ನಡಿಗರ ಮಹಾಭಾರತ"[1] ಎಂದಿದ್ದಾರೆ.

ಹಾವನೂರರು ಹೇಳಿದಂತೆ 'ಮಾಧವ ಕರುಣಾವಿಲಾಸ'ವು ಕನ್ನಡಿಗರ ಮಹಾಭಾರತ ವಾಗಬಹುದಿತ್ತು. ಆದರೆ ಗಳಗನಾಥರಲ್ಲಿದ್ದ ಕಲಾಪ್ರಜ್ಞೆಗಿಂತ ಅತಿ ಹೆಚ್ಚಾಗಿದ್ದ ಧರ್ಮ ಬೋಧಕ ಪ್ರಜ್ಞೆಯಿಂದಾಗಿ ಅದು ಅಂಥ ಶ್ರೇಯಸ್ಸಿನಿಂದ ವಂಚಿತವಾಯಿತು. ಕುರ್ತಕೋಟಿ ಯವರು ಹೇಳಿದಂತೆ ಅದು ಒಂದು ಯುಗವನ್ನೇ ನಿರ್ಮಿಸಲು ವಿಫಲವಾಯಿತು. ಮತ್ತು ನಾಯಕರು ಹೇಳಿದಂತೆ ಅದು 'ಅಮರ ಕುತೂಹಲಕಾರಿಯಾದ ದಾರ್ಶನಿಕ ಮಹಾ ಕಾದಂಬರಿ'ಯೂ ಆಗಲಿಲ್ಲ.[2] ಆದರೂ 'ಮಾಧವ ಕರುಣಾವಿಲಾಸ'ವು ಇನ್ನೂ ಪೂರ್ತಿಯಾಗಿ ಹಳೆಯದಾಗಿಲ್ಲ. ಮತ್ತು ಕನ್ನಡ ಕಾದಂಬರಿಯ ಇತಿಹಾಸದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದೆ ಎಂಬುದನ್ನು ಅಲ್ಲಗಳೆಯುವಂತಿಲ್ಲ.

'ಮಾಧವ ಕರುಣಾವಿಲಾಸ'ವನ್ನು ಬರೆದು 15 ವರ್ಷಗಳ ಅನಂತರ 1938ರಲ್ಲಿ ಗಳಗನಾಥರು ಮತ್ತೆ ಎರಡು ಸ್ವತಂತ್ರ ಕಾದಂಬರಿಗಳನ್ನು ಪ್ರಕಟಿಸಿದರು. 1928ರಲ್ಲಿ ಅವರು 'ರಾಣಾ ರಾಜಸಿಂಹ' ಮತ್ತು 'ಧಾರ್ಮಿಕ ತೇಜ'ಗಳನ್ನು ಅನುವಾದಿಸಿದ ತರುವಾಯ ಹತ್ತು ವರ್ಷಗಳ ವರೆಗೆ ಅವರು ಕಾದಂಬರಿಯನ್ನೇ ಬರೆದಿರಲಿಲ್ಲ. ಮಹಾಭಾರತದ ಹದಿ ನೆಂಟು ಪರ್ವಗಳನ್ನು ಅನುವಾದಿಸುವಲ್ಲಿ ನಿರತರಾದ ಗಳಗನಾಥರು ಕಾದಂಬರಿಗಳನ್ನು ಅನು ವಾದಿಸುವ ಅಥವಾ ಸ್ವತಂತ್ರವಾಗಿ ಬರೆಯುವ ಕಡೆಗೆ ಮನಸ್ಸು ಮಾಡಿರಲಿಲ್ಲ. ಆದರೆ ಮಹಾಭಾರತದ ಎರಡು ಭಾಗಗಳನ್ನು ಅಚ್ಚು ಹಾಕಿಸಿ ಸಾಲದ ಭಾರವನ್ನು ಹೆಚ್ಚಿಸಿಕೊಂಡ ಅವರು ಮತ್ತೆ ಕಾದಂಬರಿಗಳನ್ನು ಬರೆದು 'ಸಾಲ ತೀರಿಸುವ ಗ್ರಂಥಮಾಲೆ'ಯನ್ನೇ ಆರಂ ಭಿಸಬೇಕಾಯಿತು. ಆ ಮಾಲಿಕೆಯಲ್ಲಿ ಅವರ 'ಸ್ವರಾಜ್ಯ ಸುಗಂಧ' ಮತ್ತು 'ಮರ್ಗದ ಬಿಚ್ಚು ಗತ್ತಿ'ಗಳೆರಡೂ 1938ರಲ್ಲಿ ಪ್ರಕಟವಾದುವು.

**'ಸ್ವರಾಜ್ಯ ಸುಗಂಧ'**ದ ಪ್ರಸ್ತಾವನೆಯಲ್ಲಿ "ನಮ್ಮ ಪ್ರಿಯ ಕನ್ನಡಿಗರು ಈಗ ಎಂಟು-ಹತ್ತು ವರ್ಷಗಳಿಂದ ನಮ್ಮ ಹೊಸ ಕಾದಂಬರಿಗಳ ಹಾದಿಯನ್ನು ನೋಡುತ್ತಿರು ವರು.....ಶ್ರೀಶೇಷ ಸದ್ಗುರುನಾಥ ಕೃಪೆಯಿಂದ ಈ 'ಸ್ವರಾಜ್ಯ ಸುಗಂಧ'ವೆಂಬ ಸ್ವತಂತ್ರವಾದ ಐತಿಹಾಸಿಕ ರಹಸ್ಯಪೂರ್ಣ ಬೋಧಪ್ರದ ಕಾದಂಬರಿಯು ಎರಡು ತಿಂಗಳಲ್ಲಿ ಬರೆದು ನಿರ್ವಿಘ್ನವಾಗಿ ಮುದ್ರಿಸಿ ಪ್ರಸಿದ್ಧವಾದದ್ದಕ್ಕಾಗಿ ನಮಗೆ ಬಹಳ ಸಂತೋಷವಾಗುತ್ತದೆ" ಎಂದು ಗಳಗನಾಥರು ತಿಳಿಸಿದರು. ಈ ಕಾದಂಬರಿಯು ಅವರ ಸ್ವತಂತ್ರ ಕೃತಿಯೆಂದು ಅವರೇ ತಿಳಿಸಿದ್ದರೂ ಕಾದಂಬರಿಯ 'ಪಡಿಕಟ್ಟನ್ನು' ನೋಡಿದರೆ ಇದು ಗಳಗನಾಥರ ಸಂಪೂರ್ಣ ಸ್ವತಂತ್ರ ಕೃತಿಯಾಗಿರದೆ, ಕಥಾವಸ್ತುವನ್ನು ಅವರು ಮರಾಠಿ ಕಾದಂಬರಿ

1. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 63
2. ಜಿ. ಎಚ್. ನಾಯಕ : 'ಗಳಗನಾಥರ ಮಾಧವ ಕರುಣಾವಿಲಾಸ', ಪ್ರಬುದ್ಧ ಕರ್ಣಾಟಕ, 46-3 ಪುಟ 56

ಯೊಂದರಿಂದ ತೆಗೆದುಕೊಂಡಿರಬೇಕೆಂದು ಊಹಿಸಬಹುದು. ಆದರೆ ಮೂಲ ಆಕರವು ಸ್ಪಷ್ಟವಾಗಿ ಗೊತ್ತಾಗುವ ವರೆಗೆ ಇದನ್ನು ಗಳಗನಾಥರ ಸ್ವತಂತ್ರ ಕೃತಿಯೆಂದು ಗ್ರಹಿಸಬಹುದಾಗಿದೆ.

'ಸ್ವರಾಜ್ಯ ಸುಗಂಧ'ವು ಮರಾಠಾ ಇತಿಹಾಸಕ್ಕೆ ಸಂಬಂಧಿಸಿದ, ಅದರಲ್ಲೂ ಶಿವಾಜಿಗೇ ಸಂಬಂಧಿಸಿದ ಕಥಾನಕವನ್ನು ಒಳಗೊಂಡಿದೆ. ಶಿವಾಜಿಯು ಆಗಲೇ ರಾಯಗಡದಲ್ಲಿ ಛತ್ರಪತಿಯಾಗಿ ಪಟ್ಟಾಭಿಷಿಕ್ತನಾಗಿದ್ದ. ದಿಲ್ಲಿಯ ಮತ್ತು ವಿಜಾಪುರ ಬಾದಶಹರ ವಶದಲ್ಲಿದ್ದ ಅನೇಕ ಕೋಟೆಗಳನ್ನು ಗೆದ್ದುಕೊಂಡು ತನ್ನ ರಾಜ್ಯವನ್ನು ವಿಸ್ತರಿಸಿದ್ದ. ಆದರೆ ಈಗ ಆತನ ದೃಷ್ಟಿಯು 'ಕಲ್ಯಾಣ' ಮತ್ತು 'ರಾಜಮಾಚಿ' ಎಂಬ ಎರಡು ಕೋಟೆಗಳ ಕಡೆಗೆ ಕೇಂದ್ರೀಕೃತವಾಗಿತ್ತು. ಕಾದಂಬರಿಯ ಕೊನೆಯಲ್ಲಿ ಈ ಎರಡೂ ಕೋಟೆಗಳನ್ನು ಆತನ ಸರದಾರರು ವಶಪಡಿಸಿಕೊಂಡ ವಿಷಯವೂ ನಿರೂಪಿತವಾಗಿದೆ. ಆತನ ಸರದಾರರಲ್ಲಿ ಮುಖ್ಯವಾಗಿ ನೇತಾಜಿ ಪಾಲಕರ, ವೆಂಕಾಜಿ ವಾಘ ಮತ್ತು ಆಬಾಜಿ ಸೋನದೇವ ಈ ಮೂವರ ಸಾಹಸಗಳು ಈ ಕಾದಂಬರಿಯಲ್ಲಿ ನಿರೂಪಿತವಾಗಿವೆ.

ವೆಂಕಾಜಿ ವಾಘ ಶೂರನಾದರೂ ದುಷ್ಕೃತ್ಯಗಳಲ್ಲಿ ತೊಡಗಿದ್ದ. ದಾರಿಕಾರರನ್ನೂ ಸಿರಿವಂತರನ್ನೂ ಕೊಳ್ಳೆ ಹೊಡೆದು ಹಣ ಸಂಗ್ರಹಿಸುತ್ತಿದ್ದ. ಆತ ಒಮ್ಮೆ ಚಿಂಚವಡದ ಮೋರಯಾ ಗೋಸಾವಿಗಳ ಆರಾಧ್ಯ ದೈವತವಾದ ಬಂಗಾರದ ಗಣಪತಿಯ ವಿಗ್ರಹವನ್ನೇ ಕೊಳ್ಳೆ ಹೊಡೆದಿದ್ದನು. ಅಲ್ಲದೆ ನೇತಾಜಿ ಪಾಲಕರನ ಸೋದರಮಾವನಾದ ದತ್ತಾಜಿ ಪಾಟೀಲನನ್ನೂ ಆತನ ಮಗಳಾದ ಕಾಶಿಯನ್ನೂ ಬಂಧಿಸಿ ತನ್ನ ಗುಹೆಯಲ್ಲಿ ಇರಿಸಿದ್ದನು; ಕಾಶಿಯನ್ನು ಲಗ್ನವಾಗಬೇಕೆಂದೂ ಪ್ರಯತ್ನಿಸುತ್ತಿದ್ದನು. ಈ ಸಮಾಚಾರವನ್ನು ತಿಳಿದ ನೇತಾಜಿಯು ವೆಂಕಾಜಿಯನ್ನು ಬಂಧಿಸಿ ಕಾಶಿಯನ್ನು ಬಿಡಿಸಿದನು. ಮುಂದೆ ಗಣೇಶ ಗೋಸಾವಿಗಳ ಉಪದೇಶದಿಂದ ಪ್ರಭಾವಿತನಾಗಿ ವೆಂಕಾಜಿ ವಾಘನು ಪಶ್ಚಾತ್ತಾಪಪಟ್ಟು ತನ್ನ ದುಷ್ಟ ನಡತೆಯನ್ನು ತ್ಯಜಿಸಿದನಲ್ಲದೆ, ಮರಾಠಾ ಸ್ವರಾಜ್ಯವನ್ನು ಸ್ಥಾಪಿಸುತ್ತಿದ್ದ ಶಿವಾಜಿಯ ನೆರವಿಗೂ ನಿಲ್ಲುವನು. ಆತನನ್ನೂ ನೇತಾಜಿಯನ್ನೂ ಗೋಸಾವಿಗಳು ಕರೆತಂದು ಶಿವಾಜಿಗೆ ಒಪ್ಪಿಸುವರು. ಶಿವಾಜಿ ಅವರಿಬ್ಬರನ್ನೂ ಸಂತೋಷದಿಂದ ಸ್ವೀಕರಿಸಿ, ಅವರಿಗೆ ಕಲ್ಯಾಣ ಕೋಟೆಯನ್ನು ವಶಪಡಿಸಿಕೊಳ್ಳುವ ಕಾರ್ಯವನ್ನು ಒಪ್ಪಿಸುವನು. ಅವರು ಶೂರತನದಿಂದಲೂ ಯುಕ್ತಿ-ಪ್ರಯುಕ್ತಿಗಳಿಂದಲೂ ಮುಸಲ್ಮಾನರ ಕೈಯಲ್ಲಿದ್ದ ಕಲ್ಯಾಣ ಕೋಟೆಯನ್ನು ವಶಪಡಿಸಿಕೊಳ್ಳುವರು. ಅದಕ್ಕಾಗಿ ವೆಂಕಾಜಿಯು ಮುಸಲ್ಮಾನರ ವೇಷ ಧರಿಸುವುದಲ್ಲದೆ, ಅನಿವಾರ್ಯವಾಗಿ ಮುಸಲ್ಮಾನರ ಜೊತೆಗೆ ಭೋಜನವನ್ನೂ ಮಾಡಬೇಕಾಯಿತು. ಆ ಸ್ವಾಮಿನಿಷ್ಠನು ಅದಕ್ಕೂ ಹೇಸಲಿಲ್ಲ. ಕೊನೆಗೆ ಸಮರ್ಥ ರಾಮದಾಸ ಸ್ವಾಮಿಗಳ ಮುಂದೆ ತನ್ನ ಮನದ ಅಳಲನ್ನು ತೋಡಿಕೊಂಡು, ಅವರ ಉಪದೇಶದ ಮೇರೆಗೆ ಒಂದು ವರ್ಷದ ವರೆಗೆ ವ್ರತಸ್ಥನಾಗಿ ಪ್ರಾಯಶ್ಚಿತ್ತವನ್ನು ತೆಗೆದುಕೊಂಡು ಪುನಃ ಮರಾಠಾ ಧರ್ಮವನ್ನು ಸ್ವೀಕರಿಸಿ ಹಿಂದುವಾದನು.

ಸುಲಿಗೆಗಾರನೂ ದುಷ್ಟಕಾಮುಕನೂ ಆದ ವೆಂಕಾಜಿಯಲ್ಲಿ ಕೂಡ ಮಾನವ ಹೃದಯದ ಕೋಮಲತೆಯನ್ನು ಗಳಗನಾಥರು ಕಂಡಿರುವರು. ತನ್ನ ಕೈಯಲ್ಲಿಯೇ ಸಿಕ್ಕಿದ್ದ ಕಾಶಿಯ ಮೇಲೆ ಆತ ಬಲಾತ್ಕಾರವನ್ನು ಮಾಡದೆ ಅವಳನ್ನು ಒಲಿಸಬೇಕೆಂದೇ ಮೊದಲು ಪ್ರಯತ್ನಿಸುವನು. ಗೋಸಾವಿಗಳ ಸತ್ಸಂಗದಿಂದ ಅವನ ಸ್ವಭಾವವೇ ಪರಿವರ್ತನವಾಯಿತು. ಮುಂದೆ

ಆತನ ಸಂಪತ್ತೆಲ್ಲವೂ ಸ್ವರಾಜ್ಯದ ಸುಗಂಧವನ್ನು ಹರಡುತ್ತಿದ್ದ ಶಿವಾಜಿಯ ಕಾರ್ಯದಲ್ಲಿ ವಿನಿಯೋಗಿಸಲ್ಪಟ್ಟಿತು.

ನೇತಾಜಿ ಪಾಲಕರನ ಶೂರತನವು ಕಾದಂಬರಿಯ ಮೊದಲ ಪ್ರಕರಣ–'ಬೀಜದಕಾಯಿ ಹೀಚಿನಲ್ಲಿ'–ದಲ್ಲಿಯೇ ಚಿತ್ರಿತವಾಗಿದೆ. ಆಗ ಮಹಾರಾಷ್ಟ್ರದಲ್ಲಿ ಮುಸಲ್ಮಾನರ ಉಪಟಳ ಹೆಚ್ಚಾಗಿತ್ತು. ಹಳ್ಳಿಗಳನ್ನು ಲೂಟಿ ಮಾಡುವದು, ತರುಣಿಯರನ್ನು ಅಪಹರಿಸುವುದು ಇವೇ ಮೊದಲಾದುವು ಅವರ ನಿತ್ಯದ ಕಾಯಕಗಳಾಗಿದ್ದುವು. ಬಾಲಕ ನೇತಾಜಿಯು ಇಂಥ ಮುಸಲ್ಮಾನ ದುಷ್ಟರನ್ನು ಹೊಡೆದೋಡಿಸುವ ಆಟಗಳನ್ನಾಡುತ್ತಲೇ ಬೆಳೆದು ದೊಡ್ಡವನಾದನು; ತರುಣನಾದ ಮೇಲೆ ತನ್ನ ಬಾಲ್ಯದ ಕನಸುಗಳನ್ನು ಕಾರ್ಯಗತಗೊಳಿಸಿದನು. ಶಿವಾಜಿಗೆ ಸಹಾಯಕನಾಗಿ ನಿಂತು, ಆತನ ಸಲುವಾಗಿ ಕಾದಿ ಅವನ ಮೆಚ್ಚುಗೆಯನ್ನು ಪಡೆದು, ಕಲ್ಯಾಣ ಕೋಟೆಯನ್ನು ವಶಪಡಿಸಿಕೊಳ್ಳುವ ಕಾರ್ಯದಲ್ಲಿ ಸೇನಾಪತಿಯಾದ ಆಬಾಜಿ ಸೋನದೇವನಿಗೆ ಬಲಗೈಯಾಗಿ ನಿಂತನಲ್ಲದೆ, ಅನಂತರ ಶಿವಾಜಿಯ ಆಜ್ಞೆಯ ಮೇರೆಗೆ ರಾಜಮಾಚಿಯ ಕೋಟೆಯನ್ನೂ ವಶಪಡಿಸಿಕೊಂಡನು. ಕೊನೆಗೆ ಶಿವಾಜಿಯು ನೇತಾಜಿಯನ್ನೇ ರಾಜಮಾಚಿ ಕೋಟೆಯ ಸುಬೇದಾರನನ್ನಾಗಿ ನಿಯಮಿಸಿ ಗೌರವಿಸಿದನು.

ನೇತಾಜಿಯು ಕೈಹಿಡಿದ ಆತನ ಸೋದರಮಾವನ ಮಗಳಾದ ಕಾಶಿ ಸುಂದರಿಯಾದಂತೆ ಪ್ರಸಂಗ ಬಿದ್ದರೆ ಕೈಯಲ್ಲಿ ಸುರಗಿಯನ್ನೂ ಹಿಡಿಯಬಲ್ಲ ತರುಣಿಯು. ವಾಘನ ಬಂಧನದಲ್ಲಿದ್ದರೂ ಅವಳು ಕೈಕಾಲು ಕಳೆದುಕೊಳ್ಳಲಿಲ್ಲ. ಒಳ್ಳೇ ಪಂಡಿತೆಯಂತೆ ಅವಳು ವಾಘನ ಮುಂದೆ ದೊಡ್ಡ ವ್ಯಾಖ್ಯಾನವನ್ನೆ ಮಾಡಿದಳು. "ಅಪ್ಪಯ್ಯ, ವಾಘನ ಪಿಶಾಚ ಬಂದಿದೆ" ಎಂದು ನುಡಿಯುತ್ತ ಮುಗ್ಧತೆಯ ನಾಟಕವನ್ನೂ ಮಾಡಿ ನೋಡಿದಳು. ಕೊನೆಗೆ ಕೈಯಲ್ಲಿ ಕಠಾರಿಯನ್ನು ಹಿಡಿದು ವಾಘನ ಕೈಯನ್ನೇ ಇರಿದಳು (ಪುಟ 67). ಇನ್ನೊಮ್ಮೆ ವೆಂಕಾಜಿಯ ಖಡ್ಗವನ್ನೇ ಕಸಿದುಕೊಂಡು ತನ್ನನ್ನೇ ಇರಿದುಕೊಂಡು ಆತ್ಮಾರ್ಪಣೆಗೂ ಸಿದ್ಧಳಾದಳು (ಪುಟ 93). ಕಾಶಿಯ ಪಾತ್ರಚಿತ್ರಣದಲ್ಲಿ ಗಳಗನಾಥರು ಸುಂದರ ವೀರರಮಣಿಯ ರೋಮ್ಯಾಂಟಿಕ್ ಕಥೆಯನ್ನು ನಿರೂಪಿಸಿ ಕಾದಂಬರಿಯ ವಾಚನೀಯತೆಯನ್ನು ಹೆಚ್ಚಿಸಲು ಪ್ರಯತ್ನಿಸಿರುವರು.

ಕಾದಂಬರಿಯಲ್ಲಿ ಆಬಾಜಿ ಸೋನದೇವನ ಚಿತ್ರ ಹೆಚ್ಚಾಗಿ ಬರುವುದಿಲ್ಲ. ಅವನ ಶೌರ್ಯವನ್ನೂ ನಿಷ್ಠೆಯನ್ನೂ ಲೇಖಕರೇ ಬಾಯಿಬಿಟ್ಟು ಹೊಗಳಿರುವರು. ಆದರೆ ಕೊನೆಗೆ ಶಿವಾಜಿಯ ಉದಾತ್ತ ಗುಣವನ್ನು ಚಿತ್ರಿಸಹೊರಟು, ವಿನಾಕಾರಣ ಈ ವೀರ ಬ್ರಾಹ್ಮಣನ ಪಾತ್ರಕ್ಕೆ ತುಸು ಕಲಂಕವನ್ನು ಹಚ್ಚಿದಂತಾಗಿದೆ. ಅಷ್ಟು ದೀರ್ಘಕಾಲದಿಂದ ಶಿವಾಜಿಯ ಬಲಗೈಯಂತೆ ಇದ್ದ ಆಬಾಜಿಗೆ ಪರದಾರಾ ಸೋದರನೆಂದು ಖ್ಯಾತನಾದ ಶಿವಾಜಿಯ ಶೀಲವು ಮರೆತು ಹೋಗಿ, ಆತ ಕೈಸೆರೆಸಿಕ್ಕ ಮುಲಾಣಾ ಹಯಾತಿಯ ಸುಂದರ ಸೊಸೆಯನ್ನು ತಂದು ಶಿವಾಜಿಗೆ ಕಾಣಿಕೆಯಾಗಿ ಒಪ್ಪಿಸಿದನೆಂದರೆ ನಂಬುವದೇ ಕಠಿಣವಾಗುತ್ತದೆ.

ಈ ಕಾದಂಬರಿಯಲ್ಲಿ ಶಿವಾಜಿಯ ಕಥೆ ಹೆಚ್ಚಾಗಿಲ್ಲವಾದರೂ, ಆತನ ಧರ್ಮಭೀರು ದಯಾಶೀಲ, ಕ್ಷಮಾಶೀಲ ಗುಣವು ಅಲ್ಲಲ್ಲಿ ಪ್ರಕಟವಾಗಿದೆ. ಮುಸಲ್ಮಾನ ಸ್ತ್ರೀರತ್ನವನ್ನು ಕಾಣಿಕೆ ಸಹಿತವಾಗಿ ವಿಜಾಪುರಕ್ಕೆ ಕಳಿಸುವ ಶಿವಾಜಿ, ಅಕ್ಷಮ್ಯ ಅಪರಾಧವನ್ನು ಗೈದ ಆಬಾಜಿಯನ್ನು ಕ್ಷಮಿಸುವ ಶಿವಾಜಿ, ಮತ್ತು ಗಣೇಶ ಗೋಸಾವಿ, ಮೋರಯಾ ಗೋಸಾವಿ, ರಾಮ

ದಾಸ ಸ್ವಾಮಿಗಳ ಭಕ್ತನಾದ ಶಿವಾಜಿಯ ವ್ಯಕ್ತಿತ್ವವು ಈ ಕಾದಂಬರಿಯಲ್ಲಿ ಚಿತ್ರಿತವಾಗಿರುವದು. ಇಂಥ ಶಿವಾಜಿ ಅಹಂಕಾರದ ಸುಳಿಯಲ್ಲಿಯೂ ಒಮ್ಮೆ ಸಿಕ್ಕಿಕೊಂಡನು. ತಾನೊಬ್ಬನೇ ಸಮರ್ಥರ ಶಿಷ್ಯನೆಂದು ತಿಳಿದುಕೊಂಡಿದ್ದ ಮತ್ತು ರಾಜ್ಯದ ಜನರನ್ನೆಲ್ಲ ತಾನೇ ಪಾಲಿಸುವವನೆಂಬ ಅಹಂಭಾವವಿದ್ದ ಆತನಿಗೆ ಶ್ರೀಸಮರ್ಥರಿಂದ ಭ್ರಮನಿರಸನವಾಯಿತು. ಒಟ್ಟಿನಲ್ಲಿ ಬಹುಮುಖವಾಗಿ ಓಡುವ ಈ ಕಥಾನಕಕ್ಕೆ ಶಿವಾಜಿಯು ಏಕಸೂತ್ರನಾಗಿರುವನೆಂದು ಹೇಳಬಹುದು.

ಗಳಗನಾಥರ ಎಲ್ಲ ಕಾದಂಬರಿಗಳಂತೆ ಇಲ್ಲಿಯೂ ಸತ್ಸಂಗದ ಪ್ರಭಾವದ ವರ್ಣನೆಯಿದೆ. ಇಲ್ಲಿ ಒಬ್ಬರಲ್ಲದಂತೆ ಮೂವರು ಸ್ವಾಮಿಗಳು ಬಂದಿರುವರು. 'ಮಾಧವ ಕರುಣಾವಿಲಾಸ'ದಂತೆ ಇಲ್ಲಿ ತಾತ್ತ್ವಿಕ ಚರ್ಚೆಗಾಗಿ ಕೆಲವೊಂದು ಪ್ರಕರಣಗಳೇ ಮೀಸಲಾಗಿಲ್ಲವಾದರೂ, 50, 62, 75, 83–84, 96, 102, 124, 128, 144, 175–76, 180 ಮತ್ತು 199 ಈ ಮೊದಲಾದ ಪುಟಗಳಲ್ಲಿ ಉಪದೇಶ, ತಾತ್ತ್ವಿಕ ಬೋಧಗಳಿಗೆ ಅವಕಾಶ ಸಿಕ್ಕಿದೆ. ಸ್ವಾಮಿಗಳ ಮುಖದಿಂದಲ್ಲದೆ ದತ್ತಾಜಿ ಪಾಟೀಲ, ಕಾಶಿ ಮೊದಲಾದವರು ಕೂಡ ಇಂಥ ತಾತ್ತ್ವಿಕ ಮಾತುಗಳನ್ನು ಧಾರಾಳವಾಗಿ ನುಡಿದಿರುವರು. ಈ ಎಲ್ಲ ಪುಟಗಳಲ್ಲಿ 'ಮಾಧವ ಕರುಣಾವಿಲಾಸ'ದ ಕರ್ತೃಗಳಾದ ಗಳಗನಾಥರ ಧ್ವನಿಯೇ ಕೇಳಿಬರುತ್ತದೆ. ಆದ್ದರಿಂದಲೇ ಗಳಗನಾಥರು ಈ ಕಾದಂಬರಿಯನ್ನೂ ಕೂಡ 'ರಹಸ್ಯಪೂರ್ಣ ಬೋಧಪ್ರದ ಕಾದಂಬರಿ' ಎಂದು ಕರೆದಿರುವರು. ಈ ಬೋಧದ ಹವ್ಯಾಸವು ಗಳಗನಾಥರಲ್ಲಿ ಅನಿವಾರ್ಯವಾದ ಅಂಶವಾಗಿದೆ.

ಕಾದಂಬರಿಯ ಕಥಾನಕ ಮತ್ತು ಒಟ್ಟಿನಲ್ಲಿಯ ನಿರೂಪಣೆಯ ರೀತಿ, ಭಾಷೆಯ ಬಳಕೆ ಇವುಗಳನ್ನು ನೋಡಿದರೆ 'ಸ್ವರಾಜ್ಯ ಸುಗಂಧ'ವು ಸಂಪೂರ್ಣವಾಗಿ ಸ್ವತಂತ್ರ ಕಾದಂಬರಿಯಾಗಿರಲಿಕ್ಕಿಲ್ಲವೆಂದು ಸಂದೇಹ ಪಡುವಂತಿದೆ. ಆದರೆ ಗಳಗನಾಥರೇ ಸ್ವತಃ ಇದು ತಮ್ಮ ಸ್ವತಂತ್ರ ಕಾದಂಬರಿಯೆಂದು ಹೇಳಿರುವುದಲ್ಲದೆ, ಇದರಲ್ಲಿಯ 14ನೆಯ ಪ್ರಕರಣವನ್ನು ಜೋಗ ಎಂಬ ಸ್ನೇಹಿತರ ಮನೆಗೆ ಹೋದಾಗ, ಅಲ್ಲಿಯೇ ಸ್ಫೂರ್ತಿಯುಂಟಾಗಿ ಬರೆದಿರುವುದಾಗಿಯೂ ತಿಳಿಸಿರುವರು. ಅಲ್ಲದೆ ಕಾದಂಬರಿಯಲ್ಲಿಯ ಅನೇಕ ವಿಚಾರಗಳು ಗಳಗನಾಥರವೇ ಆಗಿವೆ. ಈ ಮೊದಲೇ ಸೂಚಿಸಿದ ತಾತ್ತ್ವಿಕ ಬೋಧಪ್ರದ ಮಾತುಗಳೆಲ್ಲ ಗಳಗನಾಥರವೇ ಎನ್ನುವಲ್ಲಿ ಸಂದೇಹವಿಲ್ಲ. ಅದರಂತೆ,

"ಶಿವನೇರಿ ಕೋಟೆಯೆಂಬ ಶಬ್ದದ ಶಿವನ ಏರಿ ಎಂಬ ಎರಡು ಅವಯವಗಳನ್ನು ಬಿಡಿಸಿದರೆ, ಆ ಶುದ್ಧವಾದ ಅಚ್ಚಗನ್ನಡ ಶಬ್ದದ ಮೇಲಿಂದ ಶಿವಾಜಿಯ ಆ ಜನ್ಮಸ್ಥಳವು ಹಿಂದಕ್ಕೆ ಕರ್ನಾಟಕವಿದ್ದದ್ದರಿಂದ ಶಿವಾಜಿಯು ಕನ್ನಡಿಗನೆಂತಲೇ ಅಭಿಮಾನದಿಂದ ಆರೋಪಿಸಬೇಕಾಗುತ್ತದೆ; ಇರಲಿ ಅಂತಹ ಆ ಕನ್ನಡನಾಡಿನ ಶಿವನೇರಿ ಕೋಟೆಯಲ್ಲಿ ನಮ್ಮ ಶಿವರಾಯನ ದರ್ಬಾರದ ಸಿದ್ಧತೆಯು ನಡೆದಿತ್ತು"[1] ಎಂಬಂಥ ಮಾತುಗಳಲ್ಲಿಯೂ ಗಳಗನಾಥರ ಸ್ವೋಪಜ್ಞತೆಯನ್ನು ಗುರುತಿಸಬಹುದಾಗಿದೆ.

ಅಲ್ಲದೆ ಗಳಗನಾಥರ ಸ್ವತಂತ್ರ 'ಮಾಧವ ಕರುಣಾವಿಲಾಸ'ದಲ್ಲಿಯಂತೆ ಈ 'ಸ್ವರಾಜ್ಯ ಸುಗಂಧ'ದ ಕೊನೆಯಲ್ಲಿಯೂ ಭವಿಷ್ಯಕಥನವಿದೆ. ಈ ಭವಿಷ್ಯಕಥನವು ಇಲ್ಲಿ ಸಮರ್ಥರಾಮ

1. ಗಳಗನಾಥ : ಸ್ವರಾಜ್ಯ ಸುಗಂಧ, ಪುಟ 213

ದಾಸರಿಂದ ನಡೆಯುತ್ತದೆ. ಕಾದಂಬರಿಯ ಕೊನೆಯ ಮೂರು ಪುಟಗಳನ್ನು ವ್ಯಾಪಿಸಿದ ಸಮರ್ಥರ ಮಾತುಗಳಲ್ಲಿ ಭಾರತದಲ್ಲಿ ಮುಂದೆ ನಡೆಯಲಿರುವ ವರ್ಣಸಂಕರ, ಜಾತಿಸಂಕರ, ಶ್ರದ್ಧಾಭಕ್ತಿಗಳ ಲೋಪ, ಅಧಾರ್ಮಿಕತೆ, ನಾಸ್ತಿಕತೆಗಳ ಪ್ರಸಾರ ಮೊದಲಾದವುಗಳ ಪ್ರಸ್ತಾಪವಿದೆ. "ಮುಂದಿನ ಭವಿಷ್ಯವನ್ನು ಕುರಿತು, ಶ್ರೀರಾಮನು ನುಡಿಸುವ ನುಡಿಗಳನ್ನು ನೀನು ಕೇಳು"[1] ಎಂದು ರಾಮದಾಸ ಸ್ವಾಮಿಗಳು ಶಿವಾಜಿಯನ್ನು ಕುರಿತು ಈ ಮಾತುಗಳನ್ನು ನುಡಿಯುವರು. ಈ ಮಾತುಗಳಲ್ಲಿ ಕೂಡ ಗಳಗನಾಥರ ಧ್ವನಿಯೇ ಕೇಳಿಬರುವಂತಿದೆ. ಒಂದೆಡೆಯಂತೂ ಗಳಗನಾಥರ ಸ್ವಾನುಭವವೇ ಸೂಚಿತವಾದಂತೆ ಕಂಡುಬರುತ್ತದೆ.

"ಶ್ರೇಯಸ್ಕರವಾದ ಮಹಾಕಾರ್ಯ ಮಾಡುವವರಿಗೆ ಸರ್ವಥಾ ಸುಖವಿಲ್ಲವೆಂಬ ಮಾತು ನಿಶ್ಚಯವಾದದ್ದೇ. ಆ ಮಾತು ಶಿವರಾಯನಿಗೂ ಹತ್ತುವದು".[2] ಸ್ವರಾಜ್ಯ ಸ್ಥಾಪನೆಯ ಮಹಾಕಾರ್ಯಕ್ಕೆ ಶಿವರಾಯನಿಗೆ ದ್ರವ್ಯದ ಅಭಾವವು ವಿಶೇಷವಾಗಿ ಕಂಡುಬಂದಾಗ ಆತ. "ನನಗೆ ದುಡ್ಡಿನ ಹಗೇವು ಸಿಕ್ಕರೂ ಸಾಲುವ ಹಾಗಿಲ್ಲ. ಕೂಲಿಕಾರರ ಕೂಲಿಕುಂಬಳಿ, ದಂಡಾಳುಗಳ ಸಂಬಳಸಾರಿಗೆ, ಅಂಗಡಿಕಾರರ ಉದ್ದರಿ ಉಚಾಪತಿ. ಪತ್ತಿನವರು ಕೊಟ್ಟಿರುವ ಕೈಗಡ ಕಟ್ಟುಗಡ ಇವು ನಿಂತುಹೋಗಿವೆ;....ಇವಲ್ಲದೆ ಸಾವುಕಾರರಿಂದ ಸಾಲವಾಗಿ ತಂದಿದ್ದ ದೊಡ್ಡ ದೊಡ್ಡ ರಕಮುಗಳೂ ಇರುವವು. ಆ ಸಾವುಕಾರರಿಗೆ ಎರಡು ವರ್ಷಗಳಿಂದ ಒಂದು ಕಾಸು ಬಡ್ಡಿಯನ್ನು ಕೂಡ ನಾನು ಕೊಡದಿರುವದು ಅನ್ಯಾಯವಲ್ಲವೇ? ನಾನು ಮಹಾಕಾರ್ಯಕ್ಕೆ ಕೈಹಾಕಿರುವೆನೆಂದು ತಿಳಿದು, ಯಾರೂ ನನಗೆ ತಗಾದೆ ಮಾಡಿರುವದಿಲ್ಲ. ಸರಿ! ಆದರೆ ಇದು ಅವರೆಲ್ಲರ ದೊಡ್ಡಸ್ತನದ ಪರಿಣಾಮವಾಯಿತು. ಆದರೆ ನಾನು ಅವರ ದೊಡ್ಡಸ್ತನದ ಉಪಯೋಗ ಮಾಡಿಕೊಂಡು ಆ ಬಡವರ ಸತ್ವಪರೀಕ್ಷೆ ಮಾಡುವದು ನ್ಯಾಯವೇ? ಆದರೆ ಅವರೆಲ್ಲರೂ ನನ್ನ ಬಾಗಿಲು ಕಟ್ಟಿ ಕುಳಿತುಕೊಂಡರೆ ನನ್ನ ಗತಿಯೇನಾದೀತು? ಅವರಿಗೇನು ನನ್ನ ಹಲ್ಲು ಉಚ್ಚಿ ಕೊಡಲಾ? ದುಡ್ಡಿಗಾಗಿ ನಾನು ಯಾರಿಗೆ ಶರಣು ಹೋಗಲಿ?.... ನನ್ನ ಯೋಗ್ಯತೆ ಅರಿಯದೆ ಅಹಂಕಾರದಿಂದ ನಾನು ಸ್ವರಾಜ್ಯ ಸ್ಥಾಪನದ ಕಾರ್ಯಕ್ಕೆ ಕೈಹಾಕಿದ್ದರಿಂದ, ಇಂಥ ಕಷ್ಟದೆಶೆಯು ನನಗೆ ಬಂದಿರಬಹುದೇ?"[3] ಎಂದು ಚಿಂತಿಸುವನು.

ಈ ಮಾತುಗಳಲ್ಲಂತೂ ಗಳಗನಾಥರ ಕೊರಗಿನ ಸ್ವರವೇ ಮಿಡಿಯುತ್ತಿದೆ. ಇಲ್ಲಿಯ 'ಸ್ವರಾಜ್ಯಸ್ಥಾಪನೆ' ಎಂಬ ಪದಕ್ಕೆ ಬದಲಾಗಿ 'ಗ್ರಂಥಲೇಖನ-ಪ್ರಕಾಶನ ಮತ್ತು ಪಾಠಶಾಲೆ' ಎಂಬ ಪದಗಳನ್ನು ಸೇರಿಸಿದರೆ ಮೇಲಿನ ಮಾತುಗಳೆಲ್ಲ ಗಳಗನಾಥರಿಗೇ ಅನ್ವಯಿಸುತ್ತವೆ. ಈಗಂತೂ (1938ರಲ್ಲಿ) ಅವರು ಸಾಲವನ್ನು ತಿರುಗಿ ಕೊಡಲಾರದ ಸ್ಥಿತಿಯನ್ನು ತಲುಪಿದ್ದರು. ಅಷ್ಟೇ ಏಕೆ. ಪ್ರತಿವರ್ಷವೂ ಕೊಡಬೇಕಾಗಿದ್ದ ಬಡ್ಡಿಯ ಹಣವನ್ನು ಕೂಡ ತುಂಬಲಾರದೆ ಗೋಳಾಡುತ್ತಿರುವ ಗಳಗನಾಥರನ್ನು ನೆನೆದು, ಮೇಲಿನ ವಾಕ್ಯವೃಂದವನ್ನು ಓದಿದರೆ, ಈ ಮಾತುಗಳಲ್ಲಿ ಗಳಗನಾಥರ ಸ್ವಾನುಭವವು ನಿಸ್ಸಂದೇಹವಾಗಿ ಧ್ವನಿಸುತ್ತದೆ.

ಈ ಎಲ್ಲ ಆಧಾರಗಳ ಮೇಲಿಂದ 'ಸ್ವರಾಜ್ಯ ಸುಗಂಧ'ವು ಗಳಗನಾಥರ ಸ್ವತಂತ್ರ ಕೃತಿಯಾಗಿರಬಹುದೆಂದೂ ಹೇಳಬಹುದಾಗಿದೆ. ಆದರೆ ಕಥಾನಿರೂಪಣೆ ಮಾತ್ರ ಗಳಗನಾಥರ

1. ಅದೇ, ಪುಟ 222
2. ಅದೇ, ಪುಟ 106
3. ಅದೇ, ಪುಟ 107

ಅನುವಾದಿತ ಕಾದಂಬರಿಗಳಂತೆಯೇ ಇದೆ. ಕಾದಂಬರಿಯು ಘಟನೆಗಳನ್ನು ಹೆಣೆಯುವಿಕೆ ಮತ್ತು ಸನ್ನಿವೇಶ ಚಿತ್ರಣವನ್ನು ನೆನೆದರೆ 'ಸ್ವರಾಜ್ಯ ಸುಗಂಧ'ವು ಗಳಗನಾಥರ ಅನುವಾದಿತ ಕಾದಂಬರಿಗಳಾದ 'ಛತ್ರಪತಿ' ಮತ್ತು 'ಕುರುಕ್ಷೇತ್ರ'ಗಳನ್ನು ಹೋಲುತ್ತದೆಯಲ್ಲದೆ, ಅವರ 'ಕುಮುದಿನಿ', 'ಮಾಧವ ಕರುಣಾವಿಲಾಸ'ಗಳನ್ನು ಹೋಲುವುದಿಲ್ಲ. 'ಸ್ವರಾಜ್ಯ ಸುಗಂಧ'ವು ಸಂಪೂರ್ಣವಾಗಿ ಸ್ವತಂತ್ರ ಕೃತಿಯಾಗಿರದಿದ್ದರೂ ಇದು ಯಾವುದೇ ಒಂದು ಕಾದಂಬರಿಯ ನೇರವಾದ ಭಾಷಾಂತರವಾಗಲಿ, ಅನುವಾದವಾಗಲಿ ಆಗಿರಲಿಕ್ಕಿಲ್ಲ. ಮೂಲಕಥೆಯನ್ನು ಮರಾಠಿಯ ಯಾವುದೋ ಒಂದು ಕಾದಂಬರಿಯಿಂದ ತೆಗೆದುಕೊಂಡು, ಗಳಗನಾಥರು ಅದನ್ನು ತಮ್ಮ ಅನುಭವದ ಎರಕದಲ್ಲಿ ಪುನಃಸೃಷ್ಟಿಮಾಡಿದಂತೆ ಕಂಡುಬರುತ್ತದೆ. ಆ ದೃಷ್ಟಿಯಿಂದ 'ಸತ್ವಸಾರ' ಮತ್ತು 'ಸ್ವರಾಜ್ಯ ಸುಗಂಧ' ಈ ಎರಡೂ ಕಾದಂಬರಿಗಳನ್ನು ಒಂದೇ ಪ್ರಕಾರದ ಕಾದಂಬರಿಗಳೆಂದು ಕರೆಯಬಹುದು.

ಅದೇನೇ ಇದ್ದರೂ 'ಸ್ವರಾಜ್ಯ ಸುಗಂಧ'ವು ಒಳ್ಳೆ ಬಿಗಿಕಟ್ಟಿನ ಕಾದಂಬರಿಯಾಗಿದೆ. ಕಥಾರಚನೆಯಲ್ಲಿ ಅಲ್ಲಲ್ಲಿ ಶೈಥಿಲ್ಯವಿದ್ದರೂ ಒಟ್ಟಿನಲ್ಲಿ ವ್ಯವಸ್ಥಿತವಾದ ಅಚ್ಚುಕಟ್ಟಿನ ನಿರೂಪಣೆಯಿದೆ. ನೇತಾಜಿಯು ಒಮ್ಮೆಲೇ ಬಂದು ವಾಘನನ್ನು ಅವನ ಗುಹೆಯಲ್ಲಿಯೇ ಬಂಧಿಸುವಂತಹ ಆಕಸ್ಮಿಕ ಘಟನೆಗಳು ಕೆಲವು ಇದ್ದರೂ, 'ಮಾಧವ ಕರುಣಾವಿಲಾಸ'ದಂತೆ ಆಕಸ್ಮಿಕ ಯೋಗಗಳು ವಿಪುಲವಾಗಿಲ್ಲ. ನೇತಾಜಿ, ವೆಂಕಾಜಿ, ಆಬಾಜಿ ಮೊದಲಾದ ವೀರರನ್ನು ಲೇಖಕರು ಸಹೃದಯತೆಯಿಂದಲೇ ಚಿತ್ರಿಸಿರುವರು. ಆದರೆ ಮುಲಾಣಾ ಹಯಾತಿ, ರುಸ್ತುಂ ಜಮಾಲ ಮೊದಲಾದ ಮುಹಮ್ಮದೀಯ ಸರದಾರರನ್ನು ಮಾತ್ರ ಅದೇ ರೀತಿ ಚಿತ್ರಿಸಲು ವಿಫಲರಾಗಿರುವುದು ಅವರ ಪಕ್ಷಪಾತ ದೃಷ್ಟಿಯ ದೋಷವಾಗಿದೆ ಆ ಪಾತ್ರಗಳು ಶುದ್ಧ ಮೂರ್ಖರಂತೆ ಕಾಣುವವು.

'ರೂ ಹಾಕು', 'ಗುಡಗೀ ಚಣ್ಣ', 'ಗೋಲಂದಾಜ', 'ರಾಮರಾಮ ಮಾಡಿ', 'ಜಿವೂ ಮಾವುಲೀ', 'ಆಯೀ ಅಂಬಾಭವಾನೀ', 'ಮುಚ್ಚಿದ ಮುಷ್ಟಿ ಲಕ್ಷ ರೂಪಾಯಿಗಳದು' ಎಂಬಂಥ ಕೆಲವು ಪದಪ್ರಯೋಗಗಳಲ್ಲಿ ಮರಾಠಿಯ ಛಾಯೆ ಸ್ಪಷ್ಟವಾಗಿ ಕಂಡುಬರುತ್ತದೆಯಾದರೂ, ಕಾದಂಬರಿಯ ಒಟ್ಟಿನ ಶೈಲಿಯಲ್ಲಿ ಗಳಗನಾಥರ ಸಹಜ ಕನ್ನಡವೇ ಪ್ರಧಾನವಾಗಿದೆ.

ಹತ್ತು ವರ್ಷಗಳಿಂದ (1928-1938) ಕಾದಂಬರಿಯನ್ನು ಬರೆಯದೆ ಇದ್ದ ಗಳಗನಾಥರಿಗೆ 'ಸ್ವರಾಜ್ಯ ಸುಗಂಧ'ವು ತುಸು ಕಷ್ಟಪ್ರಸವದಂತೆಯೇ ಕಂಡಿರಬಹುದು. ಯಾಕೆಂದರೆ ಅವರು ಈ ಕಾದಂಬರಿಯನ್ನು ಬರೆಯುತ್ತಿರುವಾಗ ಇದರ ಬಗ್ಗೆ ಸದಾಕಾಲ ಧ್ಯಾನಿಸುತ್ತಲೇ ಇದ್ದರಂತೆ. "ನಾನು ಹೋಗುವಾಗ, ಬರುವಾಗ, ಸುಮ್ಮನೆ ಕುಳಿತಾಗ, ದೇವರ ಪೂಜೆ ಮಾಡುವಾಗ, ಊಟ ಮಾಡುತ್ತಿರುವಾಗ, ಗೋಸೇವೆ ಮಾಡುತ್ತಿರುವಾಗ, ಬಹಿರ್ದೆಸೆಗೆ ಹೋಗಿರುವಾಗ ಈ 'ಸ್ವರಾಜ್ಯ ಸುಗಂಧ' ಎಂಬ ಕಾದಂಬರಿಯ ವಿಷಯವೇ ನನ್ನ ಚಿಂತನದ ವಿಷಯವಾಗಿರಲು, ಅಂತರಾತ್ಮನ ಪ್ರೇರಣೆಯಿಂದ ಸ್ಥಳ, ಕಾಲ, ಕಾರ್ಯಗಳ ಗೌರವದರ್ಶಿಗಳಾಗಿ ಆಗಾಗ್ಗೆ ಉಂಟಾಗಿರುವ ಸ್ಫೂರ್ತಿಗಳ ಪೋಣಿಕೆಯಿಂದ ಈ 'ಸ್ವರಾಜ್ಯ ಸುಗಂಧ' ವೆಂಬ ಕಾದಂಬರಿಯು ಆಗಿರುವದೆಂದು ವಾಚಕರು ತಿಳಿಯಬೇಕು. ಒಟ್ಟಿಗೆ, ಈ ಕಾದಂಬರಿಯು ನಮ್ಮ ಆಶ್ರಯದಾತೃಗಳ ಪುಣ್ಯದ ಫಲವೆಂದು ನಾವು ಭಾವಿಸುತ್ತೇವೆ. ಯಾಕೆಂದರೆ

ಉತ್ತಮ ಅಡಿಗೆಯಾಗಲಿಕ್ಕೆ ಉಣ್ಣುವವರ ಪುಣ್ಯವು ಕಾರಣವಾಗಿರುವಂತೆ, ಉತ್ತಮ ಕಾದಂಬರಿಯಾಗಲಿಕ್ಕೆ ನಮ್ಮ ಕನ್ನಡ ವಾಚಕರ ಪುಣ್ಯವೇ ಕಾರಣವಾಗಿರುವಲ್ಲಿ ಸಂಶಯವಿಲ್ಲ"[1] ಎಂದು ಗಳಗನಾಥರು ಭಾವಿಸಿದರು.

ಗಳಗನಾಥರ ಸಿದ್ಧಾಂತದಂತೆ ವಾಚಕರ ಪುಣ್ಯಕ್ಕೂ ಕಾದಂಬರಿಯ ಉತ್ತಮಿಕೆಗೂ ಸಂಬಂಧವಿರುವುದಾದರೆ, ಕನ್ನಡ ವಾಚಕರು ಮಹಾಪುಣ್ಯಶಾಲಿಗಳಾಗಿರದಿದ್ದರೂ ಪಾಪಿಷ್ಠರೂ ಆಗಿರಲಿಲ್ಲವೆಂದು ಧಾರಾಳವಾಗಿ ಹೇಳಬಹುದು. ಆದಕ್ಕೇ ಅವರು 'ಸ್ವರಾಜ್ಯ ಸುಗಂಧ'ದಂಥ ಒಂದು ಮಧ್ಯಮ ತರಗತಿಯ ವಾಚನೀಯ ಕಾದಂಬರಿಯನ್ನು ಪಡೆದರು.

ಆದರೆ 'ಸ್ವರಾಜ್ಯ ಸುಗಂಧ'ಕ್ಕೂ, ಮುಂದೆ ಸುಮಾರು ನಾಲ್ಕು ತಿಂಗಳ ಅನಂತರ 5-12-1938ರಂದು ಪ್ರಕಟವಾದ ಗಳಗನಾಥರ ಸಂಪೂರ್ಣ ಸ್ವತಂತ್ರ ಕಾದಂಬರಿ 'ದುರ್ಗದ ಬಿಚ್ಚುಗತ್ತಿ'ಗೂ ಬಹಳಷ್ಟು ವ್ಯತ್ಯಾಸವಿದೆ. ವಸ್ತು ಮತ್ತು ನಿರೂಪಣೆ ಈ ಎರಡರಲ್ಲಿಯೂ 'ದುರ್ಗದ ಬಿಚ್ಚುಗತ್ತಿ'ಯು 'ಸ್ವರಾಜ್ಯ ಸುಗಂಧ'ದಿಂದ ಭಿನ್ನವಾಗಿದೆ.

**'ದುರ್ಗದ ಬಿಚ್ಚುಗತ್ತಿ'** ಕರ್ನಾಟಕ ಇತಿಹಾಸದ ಚಿತ್ರದುರ್ಗಕೋಟೆಯ ನಾಯಕರ ಮನೆತನಕ್ಕೆ ಸಂಬಂಧಿಸಿದ ಕಾದಂಬರಿಯಾಗಿದೆ. 1938ರಲ್ಲಿ ಈ ಕಾದಂಬರಿಯ ಮೊದಲ ಭಾಗವಾದ 'ದೈವೀಗೂಢ ತಂತ್ರ'ವು ಮಾತ್ರ ಪ್ರಕಟವಾಗಿದ್ದು, ಎರಡನೆಯ 'ಸತ್ಸಮಾಗಮ ಪ್ರಭಾವ'ವು ಅನಂತರ ಗಳಗನಾಥರಿಂದ ಬರೆಯಲ್ಪಟ್ಟಿದ್ದರೂ, ಇನ್ನೂ ಅಚ್ಚಾಗಿಲ್ಲ.[2] ಈಗ ಪ್ರಕಟವಾದ ಕಾದಂಬರಿಗೆ ಗಳಗನಾಥರು 'ಶ್ರೀಮುರಗೀಶ ಗುರುಮಹಿಮೆ' ಎಂಬ ಪರ್ಯಾಯ ನಾಮವನ್ನೂ, ತಮ್ಮ ಪದ್ಧತಿಯ ಪ್ರಕಾರ ಇಟ್ಟಿರುವರು. ಒಂದನೆಯ ಪ್ರಕರಣದಲ್ಲಿ ಈ ಪರ್ಯಾಯನಾಮದ ಕಾರಣವನ್ನು ಗಳಗನಾಥರು ತಿಳಿಸಿರುವರು. "ಈ ಕಾದಂಬರಿಯ ಪ್ರಧಾನ ಪಾತ್ರವಾದ ಬಿಚ್ಚುಗತ್ತಿಯ ಭರಮನಾಯಕನಂತು, ಶ್ರೀಮುರಗೀಶ ಗುರುವರನ ಕೇವಲ ಅನುಗ್ರಹಕ್ಕೆ ಪಾತ್ರನೂ, ಶಿಷ್ಯನೂ ಆದದ್ದರಿಂದಲೇ ಈ ಕಾದಂಬರಿಗೆ 'ಶ್ರೀಮುರಗೀಶ ಗುರುಮಹಿಮೆ' ಎಂಬ ಎರಡನೆಯ ಹೆಸರು ಇಡಲಾಗಿದೆ."[3]

ಕಾದಂಬರಿಯ ಮೊದಲಿನ 'ನಾಯಕರ ಮೂಲಪೀಠಿಕೆ' ಮತ್ತು 'ನಾಯಕರ ಉತ್ಕರ್ಷ' ಎಂಬ ಪ್ರಕರಣಗಳಲ್ಲಿ ಗಳಗನಾಥರು ಚಿತ್ರದುರ್ಗ ನಾಯಕರ ಮನೆತನದ ಇತಿಹಾಸವನ್ನೂ, ಹಿಂದಿನ ನಾಯಕರ ಶೂರತನವನ್ನೂ ನಿರೂಪಿಸಿರುವರು. ಇವರಲ್ಲಿ ಮೊದಲನೆಯ ದೊರೆ ಮತ್ತಿ ತಿಮ್ಮನಾಯಕನಿಂದ, ಭರಮನಾಯಕನ ವರೆಗಿನ ಎಲ್ಲ ನಾಯಕರ ಜೀವನದ ಮಹತ್ತ್ವದ ವಿವರಗಳನ್ನು ಕೊಡಲಾಗಿದೆ. ಮೊದಲು ಕ್ಷತ್ರಿಯರಾಗಿದ್ದ ನಾಯಕರು 6ನೆಯ ದೊರೆಯಾದ ಚಿಕ್ಕಣ್ಣನಾಯಕನ ಕಾಲಕ್ಕೆ ಲಿಂಗಧಾರಿಗಳಾಗಿ ವೀರಶೈವ ಮತವನ್ನು ಸ್ವೀಕರಿಸಿದುದನ್ನೂ, ಓಬಣ್ಣನಾಯಕನ ಪಟ್ಟದ ಕಾಲಕ್ಕೆ ಉಂಟಾದ ದಳಪತಿಗಳ ಹಾವಳಿಯನ್ನೂ, ದಳವಾಯಿ ಪಂಚಮ ಮುದ್ದನ ಕ್ರೂರ ಕಾರಸ್ಥಾನಗಳನ್ನೂ ಸಂಕ್ಷಿಪ್ತವಾಗಿ ಹೇಳಲಾಗಿದೆ. ಇಲ್ಲಿಯ ಇತಿ

1. ಗಳಗನಾಥ : ಸ್ವರಾಜ್ಯ ಸುಗಂಧ, ಪ್ರಸ್ತಾವನೆ, ಪುಟ 6, 7.
2. ಅದು ಅಚ್ಚಾಗುವ ಸಂಭವವೂ ಇಲ್ಲ. ಯಾಕೆಂದರೆ ಗಳಗನಾಥರು ಬರೆದ ಈ ಕಾದಂಬರಿಯ ಉತ್ತರಾರ್ಧದ ಹಸ್ತಪ್ರತಿಯು ಕಳೆದುಹೋಗಿದೆಯೆಂದು ಅವರ ಮೊಮ್ಮಕ್ಕಳೂ ಮತ್ತು ದತ್ತಕ ಮಕ್ಕಳೂ ಆದ ಶ್ರೀ ಬಿಷ್ಟಪ್ಪನವರು ಈ ಲೇಖಕನಿಗೆ ತಿಳಿಸಿರುವರು.
3. ಗಳಗನಾಥ : ದುರ್ಗದ ಬಿಚ್ಚುಗತ್ತಿ, ಪುಟ 5.

ಹಾಸವು ಸಿ. ಹಯವದನರಾಯರು ಸಂಪಾದಿಸಿದ 'Mysore Gazetteer'ದ 5ನೆಯ ಸಂಪುಟದಲ್ಲಿಯ ಚಿತ್ರದುರ್ಗ ಜಿಲ್ಲೆಯ ಚರಿತ್ರೆಯ ವಿವರಗಳಿಗೆ ಹೆಚ್ಚಾಗಿ ಸರಿ ಹೋಗುತ್ತದೆ.

ಕಾದಂಬರಿಯ ಪ್ರಸ್ತಾವನೆಯಲ್ಲಿ ಗಳಗನಾಥರು "ಈ ಕಾದಂಬರಿಯ ಮುಖ್ಯ ಮೂಲ ಧನವೆಂದರೆ, ಶ್ರೀಮುರಗೀಶ ಗುರುವರನು ಕರುಣಿಸಿ ನನ್ನ ಅಂತರಾತ್ಮನಲ್ಲಿ ಸ್ಫುರಿಸಿದ ಸದೂರ್ಮಿಗಳು! ಅವುಗಳಲ್ಲದೆ, ನಮ್ಮ ಚಿತ್ರದುರ್ಗದ ಧರ್ಮಿಷ್ಠ ನಾಯಕರ ಮುಖ್ಯ ವಂಶದವರಾದ ಶ್ರೀಯುತ ಮದಕರಿನಾಯಕ ಭರಮಸಾಗರರವರು ನನ್ನ ಕಡೆಗೆ ಕೊಟ್ಟಿದ್ದ ಕೈಬರಹದ ಪುಸ್ತಕಗಳು, ಹಾಗು ಪಾಳಯಗಾರರ ಚರಿತ್ರದ ಪ್ರಿಂಟಾದ ಪುಸ್ತಕಗಳು[1] ಇವು ನನಗೆ ಸಹಾಯಕಾರಕಗಳಾಗಿರುವವು. ಅವೆರಡು ಬಗೆಯ ಪುಸ್ತಕಗಳ ಸಂಗತಿಗಳಲ್ಲಿ ಹೇಳಿಕೊಳ್ಳುವಂಥ ಹೆಚ್ಚುಕಡಿಮೆಗಳಿರುವದಿಲ್ಲ. ಆ ಪುಸ್ತಕಗಳಲ್ಲಿಯ ಸಂಗತಿಗಳು ಈ ಕಾದಂಬರಿಯ ಮೊದಲನೆಯ ಎರಡು ಪ್ರಕರಣಗಳ ಐತಿಹಾಸಿಕ ಸಂಬಂಧಗಳನ್ನು ಬರೆಯುವಾಗ ಮಾತ್ರ ಉಪಯೋಗವಾಗಿರುವವು"[2] ಎಂದು ತಿಳಿಸಿರುವರು.

"ಕಾದಂಬರಿಯ ಉಳಿದ ಪ್ರಕರಣಗಳೆಲ್ಲ, ಅವೆರಡು ಬಗೆಯ ಪುಸ್ತಕಗಳನ್ನು ಓದುವದರಿಂದಾದ ನನ್ನ ಮನಸ್ಸಿನ ಮೇಲಿನ ಸಂಸ್ಕಾರದ ಬೀಜವು, ಶ್ರೀಮುರಗೀಶ ಗುರುವರನ ಕರುಣಾಜಲದಿಂದ ಮೊಳೆತು, ಫಲಭರಿತ ವೃಕ್ಷರೂಪವಾಗಿ ಬೆಳೆದಿರುವದರಲ್ಲಿ ಪರಿಣಮಿಸಿರುವವು!"[3] ಎಂದೂ ಗಳಗನಾಥರು ಹೇಳಿರುವರು.

ಐತಿಹಾಸಿಕ ಬೀಜವನ್ನು ಫಲಭರಿತ ವೃಕ್ಷವಾಗಿ ಬೆಳೆಸುವ ಗಳಗನಾಥರ ಪ್ರತಿಭೆಯನ್ನು ಮತ್ತು ಅದರ ಇತಿಮಿತಿಗಳನ್ನು ಗುರುತಿಸುವುದವಶ್ಯ. ಗಳಗನಾಥರ 'ಮೇರುಕೃತಿ'ಯೆಂದು ಕರೆಯಿಸಿಕೊಂಡ 'ಮಾಧವ ಕರುಣಾವಿಲಾಸ'ವನ್ನು ಬರೆದು 15 ವರ್ಷಗಳ ಅನಂತರ ಗಳಗನಾಥರು ಈ 'ದುರ್ಗದ ಬಿಚ್ಚುಗತ್ತಿ'ಯನ್ನು ಬರೆದಿರುವರು. ಆದರೂ ಅವರ ಕಾದಂಬರಿಯ ನಿರೂಪಣಾ ತಂತ್ರದಲ್ಲಿ ಹೆಚ್ಚಿನ ಬದಲಾವಣೆ ಕಾಣುವುದಿಲ್ಲ. ಕಾದಂಬರಿಯ ಕಥಾನಕವನ್ನು ಹೆಸರಿಗೆ ಮಾತ್ರ ಇಟ್ಟುಕೊಂಡು, ದೈವಿಕ ಶಕ್ತಿಯ ಮತ್ತು ಗುರುಶಕ್ತಿಯ ಅದ್ಭುತಗಳನ್ನು ಬಿತ್ತರಿಸುವಲ್ಲಿಯೆ ಗಳಗನಾಥರು ಆಸಕ್ತರಾಗಿರುವರು. ಅದರಂತೆ ಕಾದಂಬರಿಯ ನೆವದಿಂದ ವಾಚಕರನ್ನು ಕುರಿತು ಬೋಧಿಸಬೇಕೆಂಬ ಗಳಗನಾಥರ ಅದಮ್ಯವಾದ ಹಂಬಲವು ಈ ಕಾದಂಬರಿಯಲ್ಲಿಯೂ ಪ್ರಕಟವಾಗಿದೆ.

ಮದಕರಿ ನಾಯಕರ ಮಗ ಓಬಣ್ಣ ನಾಯಕನು ಚಿತ್ರದುರ್ಗದ ಪಟ್ಟಕ್ಕೆ ಬಂದಾಗ, ಪದ್ಧತಿಯಂತೆ ದಂಡಿನವರಿಗೆ ಕೊಡಬೇಕಾಗಿದ್ದ ಒಂದು ತಿಂಗಳದ ಸಂಬಳವನ್ನು ಉಚಿತವೆಂದು ಕೊಡಲಿಲ್ಲ. ಅದರಿಂದ ಕೋಪಗೊಂಡ ದಳವಾಯಿಗಳು ಪಂಚಮ ಮುದ್ದನ ನಾಯಕತ್ವದಲ್ಲಿ ದೊರೆಯನ್ನೇ ಕೊಂದು ಹಾಕಿ, ಅವನ ಮಗನಾದ ಚಿಕ್ಕಣ್ಣನಾಯಕನನ್ನು ಪಟ್ಟಕ್ಕೆ ಕೂಡ್ರಿಸಿದರು. ಆತನ ಮರಣದ ಅನಂತರ ದಳವಾಯಿಗಳಲ್ಲಿಯೇ ಎರಡು ಪಂಗಡ

1. ಈ ಪ್ರಿಂಟಾದ ಪುಸ್ತಕಗಳು ಯಾವುವೆಂಬುದು ತಿಳಿದುಬರುವುದಿಲ್ಲ. ಹಯವದನರಾಯರು ಕೂಡ ಬಹುಶಃ ಇವುಗಳನ್ನೇ ತಮ್ಮ ಗೆಝೆಟಿಯರದ ವಿಷಯ ಸಂಗ್ರಹಕ್ಕೆ ಬಳಸಿರಬಹುದು.
2. ಗಳಗನಾಥ: ದುರ್ಗದ ಬಿಚ್ಚುಗತ್ತಿ, ಪ್ರಸ್ತಾವನೆ, ಪುಟ 2
3. ಅದೇ, ಪುಟ 2.

ಗಳಾದುವು. ಪಂಚಮ ಮುದ್ದನು ದೊಣ್ಣೆ ರಂಗಪ್ಪನಾಯಕ ಎಂಬವನನ್ನು ಪಟ್ಟಕ್ಕೆ ಕೂಡ್ರಿಸಿ, ರಾಜ್ಯದ ಸೂತ್ರಗಳನ್ನೆಲ್ಲ ತನ್ನ ಕೈಯಲ್ಲಿ ತೆಗೆದುಕೊಂಡನು. ಭರಮಪ್ಪ ದಳವಾಯಿ ಎಂಬವನು ಚಿತ್ರದುರ್ಗದ ಅತ್ಯಂತ ನಿಷ್ಠನಾದ ದಳವಾಯಿಯು. ಆತನು ನಿಜವಾದ ಹಕ್ಕುದಾರನಾಗಿದ್ದ ಬಿಚ್ಚುಗತ್ತಿ ಭರಮನಾಯಕನ ಪಕ್ಷವನ್ನು ವಹಿಸಿದನು. "ಹೀಗೆ ಯೋಗ್ಯ ಹಕ್ಕುದಾರನಾಗಿದ್ದ ಬಿಚ್ಚುಗತ್ತಿ ಭರಮನಾಯಕನಿಗೆ ಪಟ್ಟವು ಹೇಗೆ ದೊರೆಯಿತೆಂಬ ವಿಷಯ ವನ್ನೇ ಪ್ರಾಮುಖ್ಯವಾಗಿ ಪ್ರಕೃತದ ಕಾದಂಬರಿಯಲ್ಲಿ ವಿವರಿಸಿರುತ್ತದೆ."[1]

ರಾಜಪದವಿಯಿಂದ ವಂಚಿತನಾದ ಭರಮನಾಯಕನು ದಳವಾಯಿ ಮುದ್ದನನ್ನು ತನ್ನ ಬಿಚ್ಚುಗತ್ತಿಯಿಂದ ಕೊಲ್ಲುವುದಾಗಿ ಪ್ರತಿಜ್ಞೆಮಾಡಿ, ದುರ್ಗದ ಕಡೆಗೆ ನಡೆದಿದ್ದನು. ಆದರೆ ಮುದ್ದ ದಳವಾಯಿಯು 20–25 ಜನ ಸಹಾಯಕರೊಂದಿಗೆ ಬಂದು ನಾಯಕನನ್ನು ಮುತ್ತಿ ದನು. ಶೂರನಾದ ನಾಯಕನು ಅವರಲ್ಲಿ 10 ಜನರನ್ನು ಕೊಂದುಹಾಕಿದನು. ಅಷ್ಟರಲ್ಲಿ 8–10 ಜನ ರಾವುತರು ಅವನ ಸಹಾಯಕ್ಕೆ ಬಂದರು. ಅದನ್ನು ಕಂಡು ವೈರಿಗಳು ಓಡಿಹೋದರು. ಆತನ ಸಹಾಯಕ್ಕೆ ಬಂದವರ ನಾಯಕತ್ವವನ್ನು ಒಬ್ಬ ತರುಣಿಯು ವಹಿಸಿದ್ದಳು. ಅವಳೇ ರಣಹುಚ್ಚಿ. ಅವಳ ತಂದೆ ಚಿನ್ನ ಓಬಲನೂ ದುರ್ಗದ ಒಬ್ಬ ನಿಷ್ಠ ದಳವಾಯಿಯಾಗಿದ್ದ. ಆತನನ್ನು ಪಂಚಮ ಮುದ್ದನು ಕಪಟದಿಂದ ಕೊಲ್ಲಿಸಿದ್ದ. ಆ ಕಾರಣಕ್ಕಾಗಿ ರಣಹುಚ್ಚಿಯು ಮುದ್ದನನ್ನು ಕೊಲ್ಲುವ ಪ್ರತಿಜ್ಞೆಯನ್ನೇ ಮಾಡಿದ್ದಳು. ಅವಳು ಭರಮನಾಯಕನನ್ನು ವಿಪತ್ತಿ ನಿಂದ ಪಾರುಮಾಡಿದಳಲ್ಲದೆ, ಅವನಿಗೆ ಅನೇಕ ಸಲಹೆ-ಸೂಚನೆಗಳನ್ನಿತ್ತು ಸಹಾಯ ಮಾಡಿ ದಳು. ಆದರೆ ಮುಂದೆ ಕೆಲವು ದಿನಗಳಲ್ಲಿಯೇ ಅವಳು ಗುಹೆಯೊಂದರಲ್ಲಿ ಭರಮಪ್ಪ ದಳ ವಾಯಿ ಮತ್ತು ಅವನ ಸಹಾಯಕರೊಂದಿಗೆ ಆಪ್ತಾಲೋಚನೆಯಲ್ಲಿರುವಾಗ, ಮುದ್ದನ ತಮ್ಮಂ ದಿರು ಅವಳನ್ನೂ ಭರಮಪ್ಪ ದಳವಾಯಿಯನ್ನೂ ಸೆರೆಹಿಡಿದು ತಂದರು. ಅವರಿಬ್ಬರನ್ನೂ ಹೇಗೆ ಕೊಂದು ತಾನು ನಿಷ್ಕಂಟಕನಾಗಬೇಕೆಂದು ಮುದ್ದ ದಳವಾಯಿಯು ಯೋಚನೆಯಲ್ಲಿ ರುವಾಗ, ಆತನ ಹೆಂಡತಿ ಸಾಧ್ವೀ ಶ್ರೀಮತಿಯ ತಂದೆಯಾದ ಗುರುಶಾಂತಪ್ಪನು ದಿವ್ಯ ವಿರಕ್ತ ಮೂರ್ತಿಯೊಬ್ಬನನ್ನು ತನ್ನ ಜೊತೆಗೆ ಕರೆದುಕೊಂಡು ಅಂತರ್ಗೃಹದಲ್ಲಿ ಅಕಸ್ಮಾತ್ ಬಂದು ಬಿಟ್ಟನು. ಆ ವಿರಕ್ತ ಮೂರ್ತಿಗಳೇ ಮುರಗೀಶ ಗುರುಗಳು.

ಮುರಗೀಶ ಗುರುಗಳು ಶ್ರೀಮತಿಯನ್ನು ಬಾಲಕಿಯಾಗಿರುವಾಗಲೇ ಆಶೀರ್ವದಿಸಿದ್ದರು. ಅವರ ದರ್ಶನ ಮತ್ತು ಉಪದೇಶದಿಂದ ಅವರೆಲ್ಲರೂ ಪುನೀತರಾದರು. ದಳವಾಯಿ ಮುದ್ದನ ಅಂತಃಕರಣವು ಕೂಡ ಎಷ್ಟೋ ಮಟ್ಟಿಗೆ ಪರಿಶುದ್ಧವಾಯಿತು. ರಣಹುಚ್ಚಿ ಕೂಡ ಅವರ ಭಕ್ತಳೇ ಆಗಿದ್ದಳು. ಅವಳನ್ನೂ ಅವರು ಹರಸಿದರು. ತಮ್ಮ ಸುದೀರ್ಘವಾದ ಉಪದೇಶಪರ ವಾದ ಪ್ರವಚನದ ಅನಂತರ ಅವರು ಬಂದಂತೆಯೇ ಮರಳಿಬಿಟ್ಟರು. "ಸಾಧ್ವೀ ನಾನು ಮತ್ತೆ ಬರುವೆನು, ಎಂದು ನುಡಿದ ಆ ಮಹಾತ್ಮನು ಆ ಅಂತರ್ಗೃಹದಿಂದ ಹೊರಟಾತನು ಹೊರಟೇ ಹೋಗಿಬಿಟ್ಟನು. ತಿರುಗಿ ಯಾರು ಎಷ್ಟು ಹುಡುಕಿದರೂ ಆತನ ಗೊತ್ತೇ ಹತ್ತಲಿಲ್ಲ".[2]

1. ಗಳಗನಾಥ: ದುರ್ಗದ ಬಿಚ್ಚುಗತ್ತಿ, ಪುಟ 23

2. ಗಳಗನಾಥರು: ದುರ್ಗದ ಬಿಚ್ಚುಗತ್ತಿ, ಪುಟ 187

ದಳವಾಯಿ ಮುದ್ದನು ರಣಹುಚ್ಚಿಯನ್ನು ತನ್ನ ಹೆಂಡತಿಯ ದಾಸಿಯನ್ನಾಗಿ ಮಾಡ ಬೇಕೆಂದು ಯೋಚಿಸಿದ್ದನು. ಅದರಂತೆ ಬಂಡುಗಾರನಾದ ದಳವಾಯಿ ಭರಮಪ್ಪನನ್ನು ಹುಲಿಯ ಜೊತೆಗೆ ಬರಿಗೈಯಿಂದ ಕಾದಾಟಲಿಕ್ಕೆ ಹಚ್ಚಿ, ಕೊಲ್ಲಬೇಕೆಂದು ನಿರ್ಣಯಿಸಿ, ಅದರಂತೆ ಡಂಗುರವನ್ನೂ ಹೊಯ್ಸಿದನು. ಮರುದಿನ ಅಸಂಖ್ಯಾತ ಜನರು ಈ ಕಾದಾಟವನ್ನು ನೋಡಲು ನೆರೆದರು. ಅವರಲ್ಲಿ ಕೆಲವರು ಭರಮಪ್ಪನ ಪಕ್ಷದವರೂ ಇದ್ದರು. ಭರಮಪ್ಪನ ಬದಲು ಬೇರೊಬ್ಬರು ಹುಲಿಯ ಜೊತೆಗೆ ಕಾದಾಡಲು ಸಿದ್ಧರಾದರೆ ಮಾತ್ರ ಭರಮಪ್ಪನನ್ನು ಬಿಡ ಲಾಗುವುದೆಂದೂ ದಳವಾಯಿ ತಿಳಿಸಿದ್ದನು. ಆ ಡಂಗುರವನ್ನು ಕೇಳುತ್ತಲೇ ಒಬ್ಬ ತಪಸ್ವಿ ನಿಯು ಅಕಸ್ಮಾತ್ ಅಲ್ಲಿಗೆ ಬಂದು, ಭರಮಪ್ಪನನ್ನು ಮುಕ್ತಗೊಳಿಸಿ, ಹುಲಿಯಿದ್ದ ಕಟಾಂ ಜನದಲ್ಲಿ ನಡೆದಳು. ಆ ತಪಸ್ವಿನಿಯು ರಣಹುಚ್ಚಿಯೇ ಆಗಿದ್ದಳು. ಅವಳು ತಿಮ್ಮರಸನೆಂಬ ಹೆಸರಿನ ಆ 'ಹದಿನಾರು ಮೆಟ್ಟಿನ ಹುಲಿ'ಯ ಹತ್ತಿರ ಹೋಗಿ, ಮುರಗೀಶ ಗುರುವರನು ತನಗೆ ಕನಸಿನಲ್ಲಿ ಕೊಟ್ಟಿದ್ದ ವಿಭೂತಿಯನ್ನು ಅದರ ಹಣೆಗೆ ಹಚ್ಚಿದಳು. ಆಗ ಅದು "ಸಾಕಿದ ನಾಯಿಯಂತೆ ಬಾಲ ಗುಂಡಾಡಿಸುತ್ತ" ಅವಳ ಮುಂದೆ ನಿಂತುಕೊಂಡಿತು! ಅಷ್ಟರಲ್ಲಿ ಒಬ್ಬ ಬ್ರಾಹ್ಮಣ ತಪಸ್ವಿಯು ಅಲ್ಲಿಗೆ ಬಂದು,

"ಹೀನರಾದ ಜನರುಗಳಿರಾ, ನಿಮ್ಮ ಈ ಅಂತಃಕಲಹವನ್ನು ಇಲ್ಲಿಗೆ ನಿಲ್ಲಿಸಿರಿ.... ಶ್ರೀ ಮುರಗೀಶ ಗುರುವರನು ನಮ್ಮ ಬಿಚ್ಚುಗತ್ತಿಯ ಭರಮನಾಯಕನನ್ನು ಕರೆತರುವ ವರೆಗೆ ನೀವೂ ಶಾಂತರಾಗಿ ದೊಣ್ಣೆ ರಂಗಪ್ಪನಾಯಕನ ಆಳಿಕೆಗೆ ಒಳಗಾಗಿ ಸ್ತಬ್ಧರಾಗಿರಿ".[1]

ಎಂದು ನುಡಿದು 'ಸಕಲಭೂತಶಾಂತಿಗಾಗಿ' ತನ್ನ ಖಡ್ಗದಿಂದ ಇರಿದುಕೊಂಡು ಆ ಕ್ಷಣದಲ್ಲಿಯೇ ಗತಪ್ರಾಣನಾದನು. ಜನರು ಬ್ರಹ್ಮಹತ್ಯೆಯ ಉಗ್ರತೆಗೆ ಬೆದರಿ ಹೋದರು. ರಣಹುಚ್ಚಿಯು ಕಟಾಂಜನದಿಂದ ಹೊರಬಿದ್ದು ಕೊಳ್ಳದತ್ತ ನಡೆದಳು. ಹುಲಿಯೂ ಅವಳನ್ನು ಹಿಂಬಾಲಿಸಿತು.

"ಆದರೆ ಮುಂದೇನಾಯಿತೆಂಬುದನ್ನು ಇಲ್ಲಿ ಹೇಳಲಾಗುವದಿಲ್ಲ. ಈ ಕಾದಂಬರಿಯ ಎರಡನೆಯ ಭಾಗವಾದ 'ಸತ್ಸಮಾಗಮ ಪ್ರಭಾವ' ಎಂಬದರಲ್ಲಿ ಅದನ್ನು ಬರೆಸುವದು ಶ್ರೀ ಮುರಗೀಶ ಗುರುವರನನ್ನೇ ಕೂಡಿರುವದರಿಂದ, ಈಗ ಸದ್ಯಕ್ಕೆ ನಾವು ಲೇಖನಿಯನ್ನು ಕೆಳಗಿಟ್ಟು ಬಿಡುವೆವು"[2] ಎಂದು ಗಳಗನಾಥರು ಕಾದಂಬರಿಯನ್ನು ಒಮ್ಮೆಲೇ ಮುಗಿಸಿ ಬಿಟ್ಟಿ ರುವರು.

ಚಿತ್ರದುರ್ಗದ ಪಟ್ಟಕ್ಕೆ ಬಾಧ್ಯಸ್ತನಾಗಿದ್ದ ಭರಮನಾಯಕನು ಮುರಗೀಶ ಗುರುಗಳ ಅನುಗ್ರಹದಿಂದಲೂ, ನಿಷ್ಠರಾದವರ ಸಹಾಯದಿಂದಲೂ ಹೇಗೆ ಅಧಿಕಾರಕ್ಕೆ ಬಂದನೆಂಬು ದನ್ನು ನಿರೂಪಿಸುವುದೇ ಗಳಗನಾಥರ ಈ ಕಾದಂಬರಿಯ ಉದ್ದೇಶವಾಗಿತ್ತು. ಈ ಕಾದಂಬರಿ ಯನ್ನು ಬರೆಯಲು ತೊಡಗಿದಾಗ ಅವರು ಬಹುಶಃ ಇದು ಇಷ್ಟು ದೀರ್ಘವಾಗಿ ಬೆಳೆಯ ಬಹುದೆಂದು ತಿಳಿದಿರಲಾರರು. ಆದರೆ ಕಾದಂಬರಿಯ ಮಧ್ಯದಲ್ಲಿ ಐದು ಪ್ರಕರಣಗಳಲ್ಲಿ, 80 ಪುಟಗಳನ್ನು ವ್ಯಾಪಿಸಿದ ಸ್ತ್ರೀಯರ ಪ್ರಕಾರಗಳು, ಸ್ತ್ರೀಸ್ವಾತಂತ್ರ್ಯ, ಸ್ತ್ರೀಯರ ವಿವಾಹ ಪದ್ಧತಿಗಳು–ಈ ವಿಚಾರಗಳನ್ನು ವಿವರವಾಗಿ ಬರೆದುದರಿಂದ ಕಥಾನಕವು ಅರ್ಧಕ್ಕೆ ನಿಲ್ಲ

1. ಅದೇ, ಪುಟ 206
2. ಅದೇ, ಪುಟ 207

ಬೇಕಾಯಿತು. 'ಮಾಧವ ಕರುಣಾವಿಲಾಸ'ದಲ್ಲಿಯಂತೆ ಗಳಗನಾಥರು ಇಲ್ಲಿ ಕೂಡ ಗುರುಗಳೊಬ್ಬರಿಂದ ಈ ಎಲ್ಲ ಅನಾವಶ್ಯಕ ವಿಚಾರಗಳನ್ನು ನುಡಿಸಿರುವರು. ಇದಲ್ಲದೆ "ವಾಚಕರ ಕಲ್ಯಾಣಕ್ಕಾಗಿ ವಿವೇಕಾವಿವೇಕ ಶಕ್ತಿಗಳ ಸ್ವರೂಪಗಳನ್ನು ಸ್ವಲ್ಪದರಲ್ಲಿ ಯಥಾಶಕ್ತಿ ಇಲ್ಲಿ ವರ್ಣಿಸುವೆವು"[1] ಎಂದು ಲೇಖಕರೇ ಕಾದಂಬರಿಯ 58-59, 62-63, 93-94, 97-98 ಈ ಮೊದಲಾದ ಪುಟಗಳಲ್ಲಿ ಜೀವನವಿಮರ್ಶೆಯ ಅನೇಕ ಮಾತುಗಳನ್ನು ಬರೆದಿರುವರು.

ಇದು ಗಳಗನಾಥರ ಕಾದಂಬರಿಗಳಲ್ಲಿ ಕಾಣಬರುವ ಸಾಮಾನ್ಯ ಲಕ್ಷಣವೇ ಆಗಿದೆ. ಅದರಂತೆ ಕಾದಂಬರಿಯ ಪಾತ್ರ ಮತ್ತು ಸನ್ನಿವೇಶಗಳನ್ನು ಚಿತ್ರಿಸುವಲ್ಲಿ ಗಳಗನಾಥರು ಒಂದು ರೀತಿಯ ಅದ್ಭುತವನ್ನು ತಂದಿರುವರು. ಈ ಕಾದಂಬರಿಯಲ್ಲಿ ಒಡೆದು ಕಾಣುವಂತೆ ಚಿತ್ರಿತವಾದ ಪಾತ್ರಗಳೆಂದರೆ ಮುದ್ದ ದಳವಾಯಿ, ಭರಮನಾಯಕ, ರಣಹುಚ್ಚಿ ಮತ್ತು ಸಾಧ್ವೀ ಶ್ರೀಮತಿ.

ದಳವಾಯಿ ಮುದ್ದನು ಈ ಕಾದಂಬರಿಯ ಖಲನಾಯಕ. ಆದರೂ ಆತನ ಚಿತ್ರವು ಈ ಭಾಗದಲ್ಲಿ ಪ್ರಮುಖವಾಗಿ ಮೂಡಿವೆ. ದಳವಾಯಿಗಳಲ್ಲಿ ಪ್ರಬಲನಾದ ಆತನು ತನಗೆ ಅನುಕೂಲವಾಗಿರುವ ದೊಣ್ಣೆ ರಂಗಪ್ಪನಾಯಕನನ್ನು ಪಟ್ಟಕ್ಕೆ ಕುಳ್ಳಿರಿಸಿದ್ದರೂ ಆತನ ಹೆಸರಿನಿಂದ ಎಲ್ಲ ರಾಜ್ಯದಾಡಳಿತವನ್ನು ತಾನೇ ನಡೆಸುತ್ತಿದ್ದನು. ಮಹತ್ವಾಕಾಂಕ್ಷಿಯಾದ ಆತನು ನಡೆಸಿದ ಕಾರಸ್ಥಾನಗಳು ಆತನ ಸ್ವಭಾವಕ್ಕೆ ತಕ್ಕಂತೆಯೇ ಇವೆ. ತನಗೆ ಬಾಧಕರಾದವರಲ್ಲಿ ಕೆಲವರನ್ನು ಸಂಹರಿಸಿ, ಈಗ ಭರಮನಾಯಕ ಮತ್ತು ಭರಮಪ್ಪ ದಳವಾಯಿಗಳ ಮೇಲೆ ಕಣ್ಣು ಇಟ್ಟಿದ್ದ. ನಾಯಕನನ್ನು ಸೆರೆಹಿಡಿಯ ಹೋಗಿ ಕೈಸಾಗದೆ ಓಡಿಯೂ ಬಂದ. ಆದರೆ ಅನಂತರ ಒಬ್ಬ ತರುಣಿಗೆ ಬೆನ್ನು ತೋರಿಸಿ ಬಂದುದಕ್ಕಾಗಿ ಅವಮಾನವನ್ನು ಪಶ್ಚಾತ್ತಾಪವನ್ನೂ ಸೇಡಿನ ಮನೋಭಾವವನ್ನೂ ಅನುಭವಿಸಿದ. ಆತನ ಈ ಮನೋಭಾವವು 'ಅಶಾಂತನಿಗೆ ಸುಖವೆಲ್ಲಿ' ಎಂಬ ಪ್ರಕರಣದಲ್ಲಿ ಚೆನ್ನಾಗಿ ಚಿತ್ರಿತವಾಗಿದೆ.

ಆತನ ಹೆಂಡತಿ ಸಾಧ್ವೀ ಶ್ರೀಮತಿ ಪತಿಪರಾಯಣಳು. ಅವಳ ಲಿಂಗಾರ್ಚನೆಯ ಪುಣ್ಯದಿಂದಲೇ ತನ್ನ ತಮ್ಮಂದಿರು ಭರಮಪ್ಪ ದಳವಾಯಿಯನ್ನು ರಣಹುಚ್ಚಿಯನ್ನೂ ಸೆರೆ ಹಿಡಿಯಲು ಸಮರ್ಥರಾದರೆಂದು ತಿಳಿಯುವಷ್ಟು ದೈವಭಕ್ತಿ ದಳವಾಯಿ ಪಂಚಮು ಮುದ್ದನಲ್ಲಿಯೂ ಇತ್ತು. ಅದರಂತೆ ಮುರಗೀಶ ಗುರುವರರ ಉಪದೇಶವನ್ನು ಕೇಳಿ ಅವನಲ್ಲಿಯೂ ತುಸು ವಿವೇಕೋದಯವಾಯಿತು. ಗಳಗನಾಥರೇ ಹೇಳುವಂತೆ "ಸತ್ಸಮಾಗಮವಾಗುವ ಮೊದಲು ಮುದ್ದನು ಮಾಡಬಾರದ್ದನ್ನಾದರೂ ಮಾಡಿ ತನ್ನ ಕಾರ್ಯವನ್ನು ಸಾಧಿಸಿ ಕೊಳ್ಳುತ್ತ ಬಂದಿದ್ದನು. ಆದರೆ ಈಗ ಆತನಲ್ಲಾಗಿದ್ದ ವಿವೇಕೋದಯವು ಆತನನ್ನು ಅಡ್ಡ ಹಾದಿಯನ್ನು ಹಿಡಿಯಗೊಡದಾಯಿತು. ಈಗ ಮುದ್ದನು ವಿವೇಕದ ಮಾತು ಕೇಳದಷ್ಟು ದುರ್ಜನನೂ ಆಗಿದ್ದಿಲ್ಲ. ವಿವೇಕದ ಹಾದಿಯನ್ನು ತಟ್ಟನೆ ಹಿಡಿದು ಸಾಗುವಷ್ಟು ಸಜ್ಜನನೂ ಆಗಿದ್ದಿಲ್ಲ"[2] ಒಟ್ಟಿನಲ್ಲಿ ಗಳಗನಾಥರು ಈ ಖಲನಾಯಕನಲ್ಲಿಯೂ ಸಜ್ಜನಿಕೆಯ ಅಂಶ

1. ಅದೇ, ಪುಟ 62

2. ಅದೇ, ಪುಟ 188

ಗಳನ್ನು ಗುರುತಿಸಿರುವುದು ಸ್ವಾಗತಾರ್ಹವೇ ಆಗಿದೆ. ಆದರೆ ಇದರ ಹಿಂದೆ ಅವರಿಗೆ ಸತ್ಸಮಾಗಮದ ಮಹಿಮೆಯನ್ನೇ ಹೊಗಳಬೇಕಾಗಿದೆಯೆಂಬುದನ್ನು ಮರೆಯುವಂತಿಲ್ಲ.

ಶ್ರೀಮತಿಯ ಪಾತ್ರಚಿತ್ರಣದಲ್ಲಿ ಕೂಡ ಗಳಗನಾಥರು ಈ ಸತ್ಸಮಾಗಮದ ಹೆಗ್ಗಳಿಕೆಯನ್ನೇ ಹೊಗಳಿರುವರು. ಎಂಟು ವರ್ಷದ ಮಲ್ಲಮ್ಮ ಸಾಧ್ವೀ ಶ್ರೀಮತಿಯಾದುದು ಮುರಗೀಶ ಗುರುಗಳ ಕೃಪಾಶೀರ್ವಾದಗಳಿಂದಲೇ. ಈಗ ಮತ್ತೆ ಗುರುಗಳು ಬಂದಿರುವದು ಅವಳ ಮಾರ್ಗದರ್ಶನಕ್ಕಾಗಿಯೇ. ಮಹಾ ಪತಿಭಕ್ತಳೂ, ಶಿವಭಕ್ತಳೂ, ಗುರುಭಕ್ತಳೂ ಆದ ಅವಳಿಗೆ ಎರಡು ಬಗೆಯುವುದು ಮಹಾಕಪಟಿ ಮುದ್ದನಿಗೂ ಸಾಧ್ಯವಿರಲಿಲ್ಲ. "ಕಾರ್ಯೇಷು ದಾಸೀ" ಎಂದು ಮೊದಲಾಗಿ ಸುಭಾಷಿತಕಾರರು ವರ್ಣಿಸಿದಂತೆ ಶ್ರೀಮತಿಯು ಸದ್ಗುಣಸಂಪನ್ನೆಯಾಗಿದ್ದಳು.[1] "ಈ ಹೇಸಿ ರಾಜಕಾರಣದ ರಾಡಿ ಸಾಕು, ನಡೆ. ಎತ್ತಾದರೂ ನಾವಿಬ್ಬರೂ ಹೋಗಿ ಶಿವಪೂಜೆಯಲ್ಲಿ ಕಾಲಹರಣ ಮಾಡುತ್ತ ಇದ್ದು ಬಿಡೋಣ"[2] ಎಂದು ಬೇಸತ್ತು ನುಡಿದ ಗಂಡನಿಗೆ, ಶಿವಪೂಜೆ ಸುಲಭವಲ್ಲ, ರಾಜಕಾರಣದ ರಾಡಿಯಲ್ಲಿಯೇ ಸಜ್ಜನ ಸಮ್ಮತವಾಗುವಂತೆ ಇರಬೇಕೆಂದು ಅವಳು ಮಂತ್ರಿಯಂತೆ ಸುವಿಚಾರವನ್ನು ಬೋಧಿಸಿದ್ದಾಳೆ. ಒಟ್ಟಿನಲ್ಲಿ ಪಾತ್ರಚಿತ್ರಣದಲ್ಲಿ ಗಳಗನಾಥರು ಒಬ್ಬ ಆದರ್ಶ ಸ್ತ್ರೀಯನ್ನು ಸೃಷ್ಟಿಸಿರುವರು. ಆದರೂ ಹೆಚ್ಚಿನ ಅತಿಶಯೋಕ್ತಿಯಿಲ್ಲದೆ ಸಹಜವೆಂಬಂತೆ ಚಿತ್ರಿತವಾದ ಈ ಪಾತ್ರಚಿತ್ರಣಕ್ಕಾಗಿ ಗಳಗನಾಥರು ಅಭಿನಂದನಾರ್ಹರೇ ಸರಿ.

ಆದರೆ ಇದೇ ಸಹಜತೆ ರಣಹುಚ್ಚಿಯ ಪಾತ್ರದಲ್ಲಿ ಕಂಡುಬರುವುದಿಲ್ಲ. ಕಾದಂಬರಿಯಲ್ಲಿ ನಾಲ್ಕನೆಯ ಪ್ರಕರಣದ ಆದಿಯಲ್ಲಿ ಅವಳು ವಾಚಕರ ಕಣ್ಣಿಗೆ ಬೀಳುವಳು. ಅವಳ ಅಂಗಾಂಗಗಳ ಸೌಂದರ್ಯವನ್ನು ಸಾಂಪ್ರದಾಯಿಕವಾದ ರೀತಿಯಲ್ಲಿ ವರ್ಣಿಸಿದ ಗಳಗನಾಥರು "ಆ ಸುಂದರಿಯು ದುಷ್ಟರ ಸಂಹಾರಕ್ಕಾಗಿ ಅವತರಿಸಿದ ಸಾಕ್ಷಾತ್ ಆದಿಶಕ್ತಿಯಂತೆ ತೋರುತ್ತಿದ್ದಳು"[3] ಎನ್ನುವರು. ಅವಳು ಚಿತ್ರದುರ್ಗದ ಸರದಾರನೊಬ್ಬನ ಮಗಳು; ಅವಳ ತಂದೆಯನ್ನು ಪಂಚಮ ಮುದ್ದನು ಕೊಲ್ಲಿಸಿದ್ದಕ್ಕಾಗಿ ಈಗ ಅವನ ಮೇಲೆ ಸೇಡು ತೀರಿಸುವ ಪ್ರತಿಜ್ಞೆಯನ್ನು ಮಾಡಿದ್ದಳು. ಅವಳು ಅತ್ಯಂತ ಸಮರ್ಥಳೆಂಬಂತೆಯೇ ಕಾದಂಬರಿಯಲ್ಲಿ ಚಿತ್ರಿತಳಾಗಿರುವಳು. ಸಂಕಟದಲ್ಲಿ ಸಿಲುಕಿದ ಭರಮನಾಯಕನಿಗೆ ಅವಳು ಸಕಾಲಕ್ಕೆ ಸಹಾಯ ಸಲ್ಲಿಸುವಳು. ಆತನಿಗೆ ಮುಂದೆ ಬರಲಿರುವ ಸಂಕಟಗಳ ಸೂಚನೆಯನ್ನೂ, ಪರಿಹಾರವನ್ನೂ ಅವಳು ಸೂಚಿಸುತ್ತಾಳೆ. ಆತನಿಗೆ ತನ್ನ ಶ್ರೇಷ್ಠ ಕುದುರೆಯನ್ನು ಕೊಟ್ಟು ಅಲ್ಲಿಂದ ಮಾಯವಾಗುವ ಅವಳು, ಮತ್ತೆ ಸಕಾಲಕ್ಕೆ ಎಲ್ಲಿಂದಲೋ ಬಂದು ಒದಗುತ್ತಾಳೆ. "ಮುದ್ದನ ಚಂಡು ತುಂಡರಿಸುವ ವರೆಗೆ ಈ ರಣಹುಚ್ಚಿಯು ಹೊಟ್ಟೆ ತುಂಬ ಉಣ್ಣುವ ಹಾಗಿಲ್ಲ, ಕಣ್ಣುತುಂಬ ನಿದ್ದೆ ಮಾಡುವ ಹಾಗಿಲ್ಲ" ಎಂದು ತನ್ನ ಪ್ರತಿಜ್ಞೆಯನ್ನು ಭರಮನಾಯಕನ ಮುಂದೆ ಹೇಳುವಾಗ ಅವಳ "ಮೈ ಚಿಲಿಚಿಲಿ ಉಕ್ಕುತ್ತದೆ".[4]

---

1. ಅದೇ, ಪುಟ 69, 70
2. ಅದೇ, ಪುಟ 189
3. ಅದೇ, ಪುಟ 36
4. ಅದೇ, ಪುಟ 39

ಚಿನ್ನ ಓಬಲನಂತೆ ಆತನ ಮಗಳು ರಣಹುಚ್ಚಿಯು ಮುರಗೀಶ ಗುರುವರರ ಭಕ್ತಳೇ. ಅವಳ ಬಾಲ್ಯದಲ್ಲಿಯೇ ಗುರುಗಳು ರಣಹುಚ್ಚಿಯ ಬಗ್ಗೆ "ಆಕೆಯು ಚಿತ್ರದುರ್ಗದ ನಾಯಕನ ಹೆಂಡತಿಯಾಗುವಳು" ಎಂಬ ಉಜ್ವಲ ಭವಿಷ್ಯವನ್ನು ನುಡಿದಿದ್ದರು. ಗಳಗನಾಥರು ಅದಕ್ಕೆ ತಕ್ಕಂತೆಯೇ ಮುಂದೆ ಪಟ್ಟಾಭಿಷಿಕ್ತನಾಗಲಿರುವ ಭರಮನಾಯಕನು ಅವಳನ್ನು ಕಂಡಕೂಡಲೇ ಪ್ರಥಮ ದರ್ಶನದಲ್ಲಿಯೇ ಅನುರಕ್ತನಾದುದನ್ನು ಸೂಚ್ಯವಾಗಿ ಬಣ್ಣಿಸಿರುವರು.[1] ಆದರೂ ಗಳಗನಾಥರು ತಮ್ಮ ಕಾದಂಬರಿಯ ನಾಯಕ–ನಾಯಿಕೆಯರಲ್ಲಿ ಅತ್ಯಂತ ಆತ್ಮಸಂಯಮ ವನ್ನು ಚಿತ್ರಿಸಿರುವರು. ರಣಹುಚ್ಚಿಯಂತೂ "ಮುದ್ದನನ್ನು ಕೊಲ್ಲದೆ ಯಾರನ್ನೂ ಮದುವೆ ಯಾಗಲಿಕ್ಕಿಲ್ಲ" ಎಂದು ಪ್ರತಿಜ್ಞೆಯನ್ನೇ ಮಾಡಿದ್ದಳು.[2]

ಗುರುವರನ ಉಪದೇಶವನ್ನು ಕೇಳಿ "ಗುರುದೇವಾ, ಕಲ್ಯಾಣಕಾರಕಗಳಾದ ನಿನ್ನ ಉಪ ದೇಶ ವಚನಗಳನ್ನು ಕೇಳಿ, ನನ್ನ ದೋಷಗಳು ನನ್ನ ಕಣ್ಣಿಗೆ ಕಟ್ಟಿದವು. ಆದರೆ, ಅಂಕೆ ಯಿಲ್ಲದ ಕಪಿಯು ಲಂಕೆ ಸುಟ್ಟಿತೆಂಬಂತೆ ಯಾರ ಅಥವಾ ಯಾತರ ಅಳಕೂ ಇಲ್ಲದ ಸ್ವೇಚ್ಛಾ ಚಾರಿಯಾದ ನಾನು ಮನಬಂದಂತೆ ಪ್ರತಿಜ್ಞೆಮಾಡಿ, ಮನಬಂದಂತೆ ಕುಣಿದು, ಪರಮ ದುಷ್ಟಳೂ ಪರಮ ಸಾಹಸಿಯೂ ಆತ್ಮಘಾತಕಿಯೂ ಗಾವಿಲಳೂ ಆದೆನು"[3] ಎಂದು ಪಶ್ಚಾತ್ತಾಪವನ್ನೂ ಪಡುವಳು.

ಹುಲಿಯ ಕಟಾಂಜನದಲ್ಲಿ ಧೈರ್ಯದಿಂದ ಪ್ರವೇಶಮಾಡುವ ಅವಳ ಆತ್ಮಬಲ ಹೆಚ್ಚಿ ನದು. ತನ್ನ ಮೇಲೆ ಜಿಗಿದು ಬಂದ ಹುಲಿಯನ್ನು ಮೈದಡವಿ, ಅದಕ್ಕೆ ಭಸ್ಮವನ್ನು ಲೇಪಿಸುವಳು. ಆಗ ಅದು ಸಾಕಿದ ನಾಯಿಯಂತೆ ಬಾಲ ಗುಂಡಾಡಿಸಿತು. ಈ ಚಿತ್ರಣದಲ್ಲಿ ಗಳಗನಾಥರು ತಪಸ್ವಿನಿಯಾದ ರಣಹುಚ್ಚಿಯ, ಅದಕ್ಕೂ ಹೆಚ್ಚಾಗಿ ಅವಳಿಗೆ ಕನಸಿನಲ್ಲಿಯೇ ಭಸ್ಮವನ್ನು ದಯಪಾಲಿಸಿದ ಮುರಗೀಶ ಗುರುಗಳ ಮಹಿಮೆಯನ್ನು ಸೂಚ್ಯವಾಗಿ ಕೊಂಡಾ ಡಿರುವರು.

ರಣಹುಚ್ಚಿಯಲ್ಲಿ ಗಳಗನಾಥರು ಅದ್ಭುತ–ರಮ್ಯ ಪಾತ್ರವನ್ನು ಸೃಷ್ಟಿಸಿರುವರು. ಅವಳು ಸುಂದರಳು, ಶೂರಳು, ರಾಜತಂತ್ರ ನಿಪುಣಳು, ಮಹಾಭಕ್ತಳು, ತಪಸ್ವಿನಿಯು— ಎಲ್ಲವೂ ಆಗಿರುವಳು. ಇಂಥ ಪಾತ್ರಗಳ ಚಿತ್ರಣ ರಮ್ಯಕಾದಂಬರಿಗಳ ಒಂದು ಪರಿಪಾಠವೇ ಆಗಿತ್ತು. ಬಂಕಿಮಚಂದ್ರರಲ್ಲಿ ಈ ರೀತಿಯ ಪಾತ್ರಗಳು ಬರುತ್ತವೆ. ಆದರೆ ಗಳಗನಾಥರು ಅವುಗಳಲ್ಲಿ ಹೆಚ್ಚಿನ ಅದ್ಭುತ ಅಂಶವನ್ನು ಸೇರಿಸುವರು. 'ಕುಮುದಿನಿ', 'ಮಾಧವ ಕರುಣಾವಿಲಾಸ', 'ಪದ್ಮನಯನಾ', 'ರಾಣಿ ಮೃಣಾಲಿನಿ'ಗಳಲ್ಲಿ ಇಂಥ ವೀರಸ್ತ್ರೀಯರ ಚಿತ್ರಗಳಿವೆ. ಆದರೆ ಇಲ್ಲಿಯ ರಣಹುಚ್ಚಿಯು ಈ ಮೊದಲಿನ ಕಾದಂಬರಿಗಳಲ್ಲಿಯ ಕುಮುದಿನಿ, ಬೈರಾಗಿಣಿ, ಪದ್ಮಿನಿ, ಮನೋರಮೆಯರಿಗಿಂತ ಅದ್ಭುತಾಂಶದಲ್ಲಿ ಒಂದು ತೂಕ ಹೆಚ್ಚಿನವಳು. ಆದರೂ ಅವಳು ಉಳಿದವರಿಗಿಂತ ಹೆಚ್ಚು ಜೀವಂತಳಾಗಿ ಆತ್ಮೀಯಳಾಗಿ ಕಾಣುತ್ತಾಳೆಂಬುದನ್ನು ಒಪ್ಪಬೇಕು.

---

1. ಅದೇ, ಪುಟ 35
2. ಅದೇ, ಪುಟ 101
3. ಅದೇ, ಪುಟ 186

ಭರಮನಾಯಕನ ಪಾತ್ರದಲ್ಲಿ ಅಸಹಜವಾದ ಅದ್ಭುತ ನಿರೂಪಣೆಯಿಲ್ಲವಾದರೂ, ಕಾದಂಬರಿಯ ಈ ಭಾಗದಲ್ಲಂತೂ ಅವನ ಪಾತ್ರವು ಮೈತುಂಬಿಕೊಂಡಿಲ್ಲ. ಕಾದಂಬರಿಯ ಮೂರನೆಯ ಮತ್ತು ನಾಲ್ಕನೆಯ ಪ್ರಕರಣಗಳಲ್ಲಿ ಮಾತ್ರ ಅವನ ಚಿತ್ರವಿದೆ. ಒಂದು ರಾತ್ರಿ, ಗವಿಯಲ್ಲಿ ಕಂಬಳಿ ಚೆಲ್ಲಿಕೊಂಡು ಚಿಂತಾಕ್ರಾಂತನಾದ ಭರಮನಾಯಕ ತಮ್ಮ ಕುಲ ದೈವತವಾದ ಉತ್ಸವಾಂಬೆಯನ್ನು ಪ್ರಾರ್ಥಿಸುತ್ತ, ತಮ್ಮ ಕುಲದ ಮಾನ ಕಾಯುವುದ ಕ್ಕಾಗಿ ದುಷ್ಟ ಮುದ್ದ ದಳವಾಯಿಯನ್ನು ಕೊಂದು ಸೇಡು ತೀರಿಸಿಕೊಳ್ಳುವೆನೆಂದು ಪ್ರತಿಜ್ಞೆ ಮಾಡುವನು. "ಈ ಬಿಚ್ಚುಗತ್ತಿಯಿಂದ ಅವನ ರುಂಡವನ್ನು ಈಗಲೇ ತುಂಡರಿಸಲಾ?" ಎನ್ನುವನಾದರೂ ಅವನಿಗೆ "ಹೊಟ್ಟೆಯಲ್ಲಿಯ ಸಿಟ್ಟು ರಟ್ಟೆಯಲ್ಲಿ ಇಲ್ಲದಾಗಿತ್ತು". ಒಮ್ಮೆ ವಿಷಾದದಿಂದ ಖಡ್ಗವನ್ನು ಬಿಸುಡುವನು. ಆದರೆ ಪಶ್ಚಾತ್ತಾಪದಿಂದ ಅದನ್ನು ಪುನಃ ಕೈಯಲ್ಲಿ ಧರಿಸಿ ಕೋಟೆಯತ್ತ ಆವೇಶದಿಂದಲೇ ಹೊರಟು, ದಾರಿಯಲ್ಲಿ ತನ್ನನ್ನು ಅಡ್ಡಗಟ್ಟಿದವರ ಲ್ಲಿಯ ಹತ್ತು ಜನರನ್ನು ಕೊಂದು ತನ್ನ ವೀರಶ್ರೀಯನ್ನು ಮೆರೆದನು.

ಭರಮನಾಯಕ ಶೂರನಿದ್ದಂತೆ, ತರುಣನಾದರೂ ಆತ್ಮಾಸಂಯಮಿಯಾಗಿದ್ದನೆಂದು ಗಳಗನಾಥರು ಹೇಳುವರು. ಆ ರಾತ್ರಿಯಲ್ಲಿ ತನಗೆ ಸಹಾಯ ಮಾಡಿದವಳು ಒಬ್ಬ ಸ್ತ್ರೀ ಯೆಂದು ಅರಿತು "ಎಲ ಇದೇನು?" ಎಂದು ಅಚ್ಚರಿಗೊಂಡು ಅವಳತ್ತ ನೋಡುವನು. ಆಗ "ಆ ತೇಜಸ್ವಿನಿ ಸುಂದರಿಯ ಮುಖದ ವರ್ಚಸ್ಸು ನಾಯಕನ ಕಣ್ಣುಗಳನ್ನು ಕುಕ್ಕ ತೊಡಗಿತು. ಮೊದಲೇ ಏಕಾಂತದ ಮಧ್ಯರಾತ್ರಿಯ ಸ್ತಬ್ಧತೆ, ಮೇಲೆ ಬೆಳದಿಂಗಳ ಸೊಬಗಿನಲ್ಲಿ ಆ ಸುಂದರಿಯ ಸೌಂದರ್ಯದ ಆಕಸ್ಮಿಕ ಪ್ರದರ್ಶನ! ಅಂದಬಳಿಕ ಕೇಳುವದೇನು! ನಾಯಕನ ಚಿತ್ತವು ಆ ತರುಣೀಮಯವಾಗಿ ಹೋಯಿತು".[1] ಆದರೂ ಗಳಗನಾಥರು ಆತನನ್ನು ಪ್ರೇಮಾಲಾಪದಲ್ಲಿ ತೊಡಗಿಸುವುದಿಲ್ಲ. "ಪರಸ್ಪರ ಸನ್ಮುಖರಾಗಿ ನಿಂತಿರುವ ಆ ವೀರಕ್ಷತ್ರಿಯ ತರುಣ-ತರುಣಿಯರು, ಅಚ್ಚವೀರರಸದ ಎರಕಹೊಯ್ದು ಮಾಡಿದ್ದ ಸುಂದರ ಪುತ್ತಳಿಗಳಂತೆ ತೋರುತ್ತಿದ್ದರು. ಶುದ್ಧಭಾವದ ಅವರು ಬೇರೆ ಯಾವ ಕಾಮುಕ-ಕುಹಕ ವಿಕಾರಗಳಿಗೂ ಆಸ್ಪದ ಕೊಡುವವರಾಗಿದ್ದಿಲ್ಲ".[2]

ಭರಮನಾಯಕನು ರಣಹುಚ್ಚಿಯ ಸೌಂದರ್ಯಕ್ಕಿಂತ ಅವಳ ಶೌರ್ಯ-ಸಾಹಸಗಳಿಗೇ ಹೆಚ್ಚು ಮಾರುಹೋಗಿದ್ದ. ಅವಳ ಚಾಣಾಕ್ಷ ವಿಚಾರಗಳಿಂದ, ಸಲಹೆಗಳಿಂದ ಆತ ಮುಗ್ಧ ನಾಗಿಬಿಟ್ಟ. ಅವಳು ಆತನಿಗಾಗಿ ಒದಗಿಸಿದ ಕುದುರೆ ಕೂಡ ಅವನ ಮನವನ್ನು ಗೆದ್ದು ಕೊಂಡು ಬಿಟ್ಟಿತು. ಆತ ಎಲ್ಲವನ್ನೂ ಮರೆತು ಆದರ ಸೇವೆಯಲ್ಲಿಯೇ ತೊಡಗಿಬಿಡುವನು. ಬಹುಶಃ ಅವನ ಸುಪ್ತಪ್ರಜ್ಞೆಯು ಕುದುರೆಯಲ್ಲಿ ರಣಹುಚ್ಚಿಯನ್ನೇ ಕಂಡಿರಬಹುದು. ಗಳಗ ನಾಥರು ಹಾಗೆಂದು ತಿಳಿದಿಲ್ಲ. ಆದರೂ ಅವನು ಮಾಡಿದ ಕುದುರೆಯ ಚಾಕರಿಯನ್ನು ಅವರು ಇನ್ನಿಲ್ಲದ ಸಹಜತೆಯಿಂದ ಸುಂದರವಾಗಿ ಬಣ್ಣಿಸಿರುವರು.[3]

ಆ ಕುದುರೆಯನ್ನು ಕಂಡು ಭರಮನಾಯಕನಿಗೆ ಶಿವಾಜಿಯ ಕುದುರೆಯ ನೆನಪಾ ಯಿತು. "ಶಿವರಾಯನ ಭವಾನೀ ಖಡ್ಗಕ್ಕೆ, ನಮ್ಮ ವೀರ ತಿಮ್ಮನಾಯಕನ ಈ ವಿಜಯ

1. ಅದೇ, ಪುಟ 35
2. ಅದೇ, ಪುಟ 36
3. ಅದೇ, ಪುಟ 44-53

ಶಾಲಿ ಖಡ್ಗವು ಹಿಂದಾಯಿತೇನು? ಅದರಂತೆ, ನಮ್ಮ ರಣಹುಚ್ಚಿಯು ನನಗೆ ಕೊಟ್ಟಿರುವ ಈ ದಿವ್ಯಾಶ್ವವು, ಶಿವಾಜಿಯ ಭವಾನೀ ಅಶ್ವವನ್ನು ನಿಶ್ಚಯವಾಗಿ ಮೀರುವ ಹಾಗಿರುವದು"[1] ಎಂದುಕೊಂಡ ನಾಯಕನನ್ನು ಬಣ್ಣಿಸುವಲ್ಲಿ, ಗಳಗನಾಥರು ತಾವು ಬರೆದ ಶಿವಾಜಿಯ ಕಥೆಗಳನ್ನು ಜ್ಞಾಪಿಸಿಕೊಂಡಂತೆ ಕಾಣುತ್ತದೆ. ಆದರೆ ಭರಮನಾಯಕನು ಶಿವಾಜಿಯ ಮಟ್ಟವನ್ನು ಮುಟ್ಟುವುದೇ ಇಲ್ಲ. ಕಾದಂಬರಿಯಲ್ಲಿ ಅವನ ಪಾತ್ರ ತೀರ ಅರಕಳಿಯಾಗಿ ಬಿಟ್ಟಿದೆ.

ಕಾದಂಬರಿಯ ಉಳಿದ ಪಾತ್ರಗಳು ಸಾಮಾನ್ಯವಾಗಿವೆ. ದೊಣ್ಣೆ ರಂಗಪ್ಪನಾಯಕ, ಭರಮ ದಳವಾಯಿ ಮೊದಲಾದವರು ಕೇವಲ ಹೆಸರುಗಳು. ಗಳಗನಾಥರ ದೃಷ್ಟಿಯಲ್ಲಿ ಮುರಗೀಶ ಗುರುಗಳು ಕಾದಂಬರಿಯ ಪ್ರಮುಖ ಪಾತ್ರವೇ ಸರಿ. ಅದಕ್ಕೇ ಅವರ ಆಗಮನದ ಸನ್ನಿವೇಶದಲ್ಲಿ ಅವರು "ಆ ಮಹಾ ಸಿದ್ಧಪುರುಷನು ಊರ್ಧ್ವಕೇಶನಾದ ಶ್ರೀ ವಿರೂಪಾಕ್ಷನಂತೆ ತೋರುತ್ತಿದ್ದನು. ಆ ಲೀಲಾಮೂರ್ತಿಯ ಬಲಗೈಯಲ್ಲೊಂದು ಮುರಿಮುರಿಗೆಯ ದೊಣ್ಣೆ, ಎಡಗೈಯಲ್ಲೊಂದು ಮುರಿಮುರಿಗೆಯ ಕಿನ್ನರಿ, ತಲೆಯ ಮೇಲೊಂದು ಮುರಿಮುರಿಗೆಯ ಪಂಚವರ್ಣದ ಮುಂಡಾಸ...."[2] ಎಂದು ಅವರನ್ನು ವಿವರವಾಗಿ ಬಣ್ಣಿಸಿರುವರು. ಅವರ ಆಗಮನ, ದರ್ಶನ, ಉಪದೇಶಗಳಿಂದ ಮುದ್ದ ದಳವಾಯಿಯಾದಿಯಾಗಿ ಎಲ್ಲರೂ ಪ್ರಭಾವಿತರಾದರೆಂದು ಹೇಳುವಲ್ಲಿ ಗಳಗನಾಥರ ಭಾವಿಕತನ ಒಡೆದು ಕಾಣುತ್ತದೆ. ಈ ಮುರಗೀಶ ಗುರುಗಳಿಗಿಂತ ಅದ್ಭುತವಾದ ವ್ಯಕ್ತಿಯೆಂದರೆ ಕಾದಂಬರಿಯ ಕೊನೆಯ ಭಾಗದಲ್ಲಿ ಬರುವ ಒಬ್ಬ ಬ್ರಾಹ್ಮಣ ತಪಸ್ವಿ. ಆತ ಅಕಸ್ಮಾತ್ತಾಗಿ ಬಂದು, ಅಲ್ಲಿ ನೆರೆದ ಜನರನ್ನೆಲ್ಲ ಕುರಿತು ಮನೆಮುರುಕತನದ ಬಗ್ಗೆ ಎಚ್ಚರಿಕೆಯಿತ್ತು, ಅಂತಃಕಲಹವನ್ನು ನಿಲ್ಲಿಸುವಂತೆ ಬಿನ್ನವಿಸಿ, ದುರ್ಗದ ಕುಲದೇವತೆಯ ಶಾಂತಿಗಾಗಿ ಆತ್ಮಬಲಿದಾನವನ್ನೇ ಕೊಡುವನು. ಆತ ಆಕಸ್ಮಿಕವಾಗಿ ಬಂದಂತೆಯೇ ಆಕಸ್ಮಿಕವಾಗಿ ತನ್ನ ಶಿರಸ್ಸನ್ನು ಕೊಯ್ದುಕೊಳ್ಳುವನು! ಆಗ ಜನರೆಲ್ಲರೂ ಚಿತ್ರದ ಗೊಂಬೆಗಳಂತೆ ಸುಮ್ಮನೆ ಕುಳಿತು ಬಿಟ್ಟಿದ್ದರು![3]

ಈ ಬ್ರಾಹ್ಮಣನ ಬಲಿದಾನವು 'ಸತ್ವಸಾರ'ದಲ್ಲಿ ಪ್ರತಾಪಸಿಂಹ ಮತ್ತು ಆತನ ಸಹೋದರ ಶಕ್ತಿಸಿಂಹರ ಮಧ್ಯೆ ತಲೆದೋರಿದ ವೈರವನ್ನು ಉಪಶಮನಗೊಳಿಸಲು ತನ್ನನ್ನೇ ಬಲಿಗೊಟ್ಟ ಪುರೋಹಿತನ ಚಿತ್ರವನ್ನು ನೆನಪಿಗೆ ತರುತ್ತದೆ. ರಾಜಸ್ಥಾನದ ಇತಿಹಾಸದಲ್ಲಿ ಇಂಥ ಘಟನೆ ನಡೆದಿರುವ ಸಂಭವ ಇದೆಯಾದರೂ, 'ದುರ್ಗದ ಬಿಚ್ಚುಗತ್ತಿ'ಯಲ್ಲಿ ಗಳಗನಾಥರ ಈ ಕಾಲ್ಪನಿಕ ಬಲಿದಾನವು ಅನಾವಶ್ಯಕ ಅದ್ಭುತವೆಂದು ಹೇಳಬೇಕಾಗುತ್ತದೆ. ಅಂತೂ ಮುರಗೀಶ ಗುರುವರ, ರಣಹುಚ್ಚಿ ಮತ್ತು ಬ್ರಾಹ್ಮಣ ತಪಸ್ವಿ ಇವರ ಚಿತ್ರಣದಲ್ಲಿ ಆಕಸ್ಮಿಕ ಅದ್ಭುತಗಳೇ ಹೆಚ್ಚಾಗಿವೆ.

ಇಂಥ ಕೆಲವು ನ್ಯೂನತೆಗಳಿದ್ದರೂ 'ದುರ್ಗದ ಬಿಚ್ಚುಗತ್ತಿ'ಯನ್ನು ಬರೆಯುವಾಗ ಗಳಗನಾಥರ ಲೇಖನಿ ಸಾಕಷ್ಟು ಪಳಗಿತ್ತು ಎನ್ನುವ ಸೂಚನೆಗಳು ಕಾದಂಬರಿಯಲ್ಲಿ ಅಲ್ಲಲ್ಲಿ ಕಂಡಿವೆ. ಇವುಗಳಲ್ಲಿ 'ಜಯಲಕ್ಷ್ಮಿ' ಎಂಬ ಹೆಸರಿನ ಕುದುರೆಯ ಚಿತ್ರವನ್ನು ನೋಡಬಹುದು.

---

1. ಅದೇ, ಪುಟ 53
2. ಅದೇ, ಪುಟ 96
3. ಅದೇ, ಪುಟ 206

"ಆಗ ಕುದುರೆಯ ಬೆನ್ನ ಮೇಲಿನ ಜೀನು ಬೆನ್ನ ಮೇಲೆಯೇ ಇತ್ತು. ಆಗ ಅದರ ಬೆವತಿದ್ದ ಮೈಯು ದೂಳಡರಿ ಮಲಿನವಾಗಿ ತೋರುತ್ತಿತ್ತು. ಆ ಜಾತಿವಂತ ಚಪಲ ಕುದುರೆಯು, ತನ್ನ ಒಡೆಯನು ತನ್ನ ಬಳಿಗೆ ಬಂದದ್ದನ್ನು ನೋಡಿ, ಬಾಯಲ್ಲಿಯ ಹುಲ್ಲನ್ನು ನುರಿಸಿ ನುಂಗುತ್ತ, ನಾಗಾಲುಗಳನ್ನು ಎತ್ತಿ ಎತ್ತಿ ಇಡುತ್ತ, ಪ್ರೇಮಾತಿಶಯದಿಂದ ಬಾಲ ಕೊಡವುತ್ತ, ಗೋಣನ್ನು ಕೆಳಗೆ ಮೇಲೆ ಮಾಡುತ್ತ ನಾಯಕನನ್ನು ಮೂಸಿನೋಡತೊಡ ಗಿತು....ತನ್ನ ಒಡೆಯನು ತನ್ನನ್ನು ರಮಿಸಿದ್ದಕ್ಕಾಗಿ ಆತನನ್ನು ಕೃತಜ್ಞತೆಯಿಂದ ಅಭಿನಂದಿ ಸುತ್ತಿರುವಂತೆ, ಆ ಕುದುರೆಯು ತನ್ನ ಬಾಯೊಳಗಿನ ಲಗಾಮುವನ್ನು ಕಟಕಟ ಕಡಿಯಹತ್ತಿ, ಗೋಣು ಅಲ್ಲಾಡಿಸಹತ್ತಿತು. ಅದನ್ನು ನೋಡಿ ನಾಯಕನು ಪ್ರೇಮಭರದಿಂದ ಪರವಶ ನಾದನು....ಇತ್ತ ಕುದುರೆಯು ಯಥೇಚ್ಛ ನೆಲದ ಮೇಲೆ ಹೊರಳಾಡಿ ಶ್ರಮ ಪರಿಹರಿಸಿ ಕೊಂಡು ಎದ್ದು ಮೈಕೊಡವುತ್ತ ಭುರಗುಟ್ಟಹತ್ತಿತು. ಅಷ್ಟರಲ್ಲಿ ನಾಯಕನು ತನ್ನ ಗುಡ ಗಿಯ ಚಣ್ಣವನ್ನು ಬಿಗಿದುಕೊಂಡು, ಬರಿಯ ಮೈಯಿಂದ ಕುದುರೆಯ ಬಳಿಗೆ ಬರಲು, ಮಣ್ಣಿನಲ್ಲಿ ಆಡಿದ ಮಗುವು ತನ್ನ ತಂದೆಯನ್ನು ಅಪ್ಪಿಕೊಂಡು ಆತನ ಮೈಯನ್ನೂ ಮಣ್ಣು ಮಾಡುವಂತೆ, ನೆಲದ ಮೇಲೆ ಹೊರಳಾಡಿದ್ದರಿಂದ ಮಣ್ಣು ಮೆತ್ತಿದ್ದ ಆ ಕುದುರೆಯು, ಪ್ರೇಮಭರದಲ್ಲಿ ತನ್ನ ಕತ್ತಿನಿಂದ ನಾಯಕನ ಮೈಯನ್ನು ತಿಕ್ಕಿ ತಿಕ್ಕಿ ಆತನ ಮೈಯನ್ನೂ ಮಣ್ಣು ಮಾಡಿತು".[1]

"ಅತ್ತ, ಆತನ ಹಸಿದಿದ್ದ ಕುದುರೆಯು, ಅಲ್ಲಿ ಹಳ್ಳದ ದಂಡೆಯಲ್ಲಿ ಯಥೇಚ್ಛ ವಾಗಿದ್ದ ಎಳೆ ಕರಿಕೆಯನ್ನು ಪರಪರ ಹರಿದು ಮೇಯತೊಡಗಿತು." (ಪುಟ 46) "ಝಳ ಝಳ ಮೈತೊಳೆದಿದ್ದ ಸಲಕ್ಷಣವಾದ ನಾಯಕನ ಆ ಹೆಣ್ಣು ಕುದುರೆಯು, ಮೈ ಆರಿ ಮಿರಿ ಮಿರಿ ಮಿಂಚಹತ್ತಿದ್ದರಿಂದ ಅದು ನಾಯಕನ ಕಣ್ಣಿಗೆ ಬಹು ಮನೋಹರವಾಗಿ ತೋರ ಹತ್ತಿತು." (ಪುಟ 51).

—ಇಂಥ ವರ್ಣನೆಗಳಲ್ಲಿ ರೋಮ್ಯಾಂಟಿಕ್ ಯುಗದ ಭಾವರಮ್ಯತೆಯನ್ನು ಕಾಣಬಹು ದಾದರೂ, ಗಳಗನಾಥರ ಸೂಕ್ಷ್ಮ ನಿರೀಕ್ಷಣ ಶಕ್ತಿಯನ್ನೂ. ವರ್ಣನೆಯಲ್ಲಿಯ ಸಂಯಮ ವನ್ನೂ ಗುರುತಿಸಬೇಕು. ಈ ವರ್ಣನೆಯನ್ನು ಓದುತ್ತಿರುವಂತೆ ಸಹೃದಯನಾದ ವಾಚಕನ ಮುಂದೆ 'ಜಯಲಕ್ಷ್ಮಿ'ಯ ಚಿತ್ರ ಮೂಡುತ್ತದೆಯಲ್ಲದೆ. ಅದು ಎಳೆ ಕರಿಕೆಯನ್ನು "ಪರ ಪರ ಹರಿದು ತಿನ್ನುವ" ಸಪ್ಪಳವೂ ಕೇಳಿಸಿದಂತಾಗುತ್ತದೆಯೆಂದರೆ ತಪ್ಪಾಗಲಾರದು.

ತನ್ನ 'ರೂಪಾಚ್ಛಾದನ' ಸಮಸ್ಯೆಯನ್ನು ಕುರಿತು ಚಿಂತಿಸುತ್ತಿದ್ದ ಭರಮನಾಯಕ ಒಮ್ಮೆ ದನಕಾಯುವವರ ವೇಷ ಧರಿಸಬೇಕೆಂದೂ ಯೋಚಿಸಿದ. ಆಗ "ಆ ಹೀನ ಕೆಲಸ ಮಾಡು ವವರಿಗೆ ಎರಡನೆಯವರ ಗುರುತು ಪರಿಚಯವಾಗುವ ಸಂಭವ ಕಡಿಮೆ; ಮತ್ತು ಗೋಸೇವೆ ಯಿಂದ ದೇಹವು ಪವಿತ್ರವಾಗುವದಲ್ಲದೆ, ಮೇಲೆ ಪುಣ್ಯಪ್ರಾಪ್ತಿಯೂ ಆಗುವದು"[2]. ಎಂದು ಚಿಂತಿಸಿದನು (ಪುಟ 45). ಅಲ್ಲದೇ ಹೇಗೆ ತಲೆ ಮರೆಯಿಸಿಕೊಳ್ಳಬೇಕೆಂಬ ಸಮಸ್ಯೆಯ ಜೊತೆಗೆ ನಾಯಕನಿಗೆ, ಕುದುರೆಯನ್ನು ಏನು ಮಾಡಬೇಕು ಎಂಬ ಸಮಸ್ಯೆಯೂ ಕಾಡಿತು.

1. ಅದೇ, ಪುಟ 49–50

2. ನಾಯಕನ ಈ ಚಿಂತನೆ ಗೋಸೇವಾತತ್ಪರರಾದ ಗಳಗನಾಥರ ಹೃದಯವನ್ನು ಪ್ರತಿಬಿಂಬಿಸು ವಂತಿದೆ.

ಅದನ್ನು ಎಲ್ಲಿ ಬಚ್ಚಿಡಬೇಕು? ಯಾರಿಗಾದರೂ ಮಾರಿ ಬಿಡಬೇಕೇ? ಎಲ್ಲಾದರೂ ಹೋಗಲಿ ಎಂದು ಬಿಟ್ಟುಬಿಡಬೇಕೇ? ಈ ಶ್ರೇಷ್ಠ ಕುದುರೆ ದೊರೆತುದಕ್ಕಿಂತ ನಾಯಕನಿಗೆ ಅದನ್ನು ಕಾಯುವುದೇ ಸಮಸ್ಯೆಯಾಯಿತು. (ಪುಟ 47-48) ಹೀಗೆ ವಿಚಾರಮಗ್ನನಾದ ಭರಮ ನಾಯಕನು 'ಕುಮುದಿನಿ'ಯಲ್ಲಿ ಮಂತ್ರಾಕ್ಷತೆಯ ಗಂಟನ್ನು ಕಳೆದುಕೊಂಡು ಚಡಪಡಿಸುವ ಎಚ್ಚಮನ ಚಿತ್ರವನ್ನು ಜ್ಞಾಪಕಕ್ಕೆ ತರುವನು. ಅದರಂತೆ "ಒಳಗಿನಿಂದ ಹೊರಗೂ ಹೊರಗಿನಿಂದ ಒಳಗೂ ಎಡತಾಕಿದರೂ ಸಮಾಧಾನದ ಲವಲೇಶವನ್ನೂ" ಕಾಣದ ದಳವಾಯಿ ಮುದ್ದನ ವಿವರವಾದ ಚಿತ್ರಣದಲ್ಲಿಯೂ ಗಳಗನಾಥರು ಪಾತ್ರಗಳ ಆಂತರಿಕ ತುಮುಲವನ್ನು ಬಣ್ಣಿಸುವಲ್ಲಿ ಸಫಲತೆಯನ್ನು ಪಡೆದಿದ್ದಾರೆ.

ಇಷ್ಟೆಲ್ಲ ಗುಣಗಳು ಕಾದಂಬರಿಯಲ್ಲಿ ಅಲ್ಲಲ್ಲಿ ಕಂಡಿದ್ದರೂ, 'ದುರ್ಗದ ಬಿಚ್ಚುಗತ್ತಿ'ಯು ಒಟ್ಟಿನಲ್ಲಿ ನಿರಾಸೆಯನ್ನು ಉಂಟುಮಾಡುತ್ತದೆ. ಐತಿಹಾಸಿಕ ಕಾದಂಬರಿಗಳಲ್ಲಿ ವೀರ–ಧೀರ–ಸಾಹಸಗಳಂತೆ ಅದ್ಭುತವೂ ಧರ್ಮೋಪದೇಶವೂ ಅನಿವಾರ್ಯವಾದ ಅಂಶಗಳೆಂದು ಗಳಗನಾಥರು ತಿಳಿದುದೇ ಈ ವಿಫಲತೆಗೆ ಕಾರಣವಾಯಿತೆಂದು ತೋರುತ್ತದೆ. ಅಲ್ಲದೆ 'ದುರ್ಗದ ಬಿಚ್ಚುಗತ್ತಿ' ಅಪೂರ್ಣವಾಗಿರುವುದರಿಂದ ಆ ಕಾದಂಬರಿಯ ವಿವೇಚನೆ ಪರಿಪೂರ್ಣವೂ ಆಗಲಾರದು. ಭರಮನಾಯಕನಿಗೆ ಪಟ್ಟ ದೊರೆಯಬೇಕು; ಮುರಗೀಶ ಗುರುಗಳು ಆಶೀರ್ವದಿಸಿದಂತೆ ರಣಹುಚ್ಚಿಯು ಪಟ್ಟದ ರಾಣಿಯಾಗಬೇಕು. ಅವಳಾದರೋ, ದಳವಾಯಿ ಮುದ್ದನನ್ನು ಕೊಲ್ಲುವ ವರೆಗೆ ಯಾರನ್ನೂ ಲಗ್ನವಾಗುವುದಿಲ್ಲವೆಂದು ಪ್ರತಿಜ್ಞೆ ಮಾಡಿರುವಳು. ದಳವಾಯಿ ಮುದ್ದನ ಹೆಂಡತಿ ಸಾಧ್ವೀ ಶ್ರೀಮತಿಯೂ ಮುರಗೀಶ ಗುರುಗಳ ಶಿಷ್ಯಳೇ; ಅವರಿಂದ ಆಶೀರ್ವದಿಸಲ್ಪಟ್ಟವಳೇ. ಹೀಗಿರುವಾಗ ಈ ಜಟಿಲತೆಯನ್ನು ಗಳಗನಾಥರು ಬಿಡಿಸಿ, ಕಥೆಯನ್ನು ಹೇಗೆ ಬೆಳೆಸಿದರೆಂಬುದು ಕೇವಲ ಕುತೂಹಲದ ವಿಷಯವಾಗಿ ಉಳಿದಿದೆ. ಕಾದಂಬರಿಯ ಎರಡನೆಯ ಭಾಗ 'ಸತ್ಸಮಾಗಮ ಪ್ರಭಾವ'ವೇ ನಿಜವಾಗಿ ಲೇಖಕರ ಕಥನಕಲೆಯ ನಿಕಷವಾಗಬೇಕಾಗಿದ್ದಿತು. ದುರ್ದೈವದಿಂದ ಆ ಭಾಗವೇ ಅಲಭ್ಯವಾಗಿದೆ. ಹೀಗಾಗಿ 'ದುರ್ಗದ ಬಿಚ್ಚುಗತ್ತಿ'ಯ ಲೇಖಕ ಗಳಗನಾಥರ ಸಫಲತೆ–ವಿಫಲತೆಯ ಬಗ್ಗೆ ನಿರ್ಧಾರವಾಗಿ ಏನೂ ಹೇಳುವಂತಿಲ್ಲ.

ಅಂತೂ ಭಾಷಾಂತರಕಾರರು, ಅನುವಾದಕರು ಎಂದು ಖ್ಯಾತರಾದ ಗಳಗನಾಥರು ಆರು ಸ್ವತಂತ್ರ ಕಾದಂಬರಿಗಳನ್ನು ಬರೆದರು. ಇವುಗಳಲ್ಲಿ 'ಸತ್ವಸಾರ' ಮತ್ತು 'ಸ್ವರಾಜ್ಯ ಸುಗಂಧ'ಗಳಿಗೆ ಮೂಲಧನವನ್ನು ಬೇರೆಡೆಯಿಂದ ಪಡೆದಿರಬಹುದಾದರೂ, ಅವರ 'ಪದ್ಮನಯನಾ', 'ಕುಮುದಿನಿ', 'ಮಾಧವ ಕರುಣಾವಿಲಾಸ' ಮತ್ತು 'ದುರ್ಗದ ಬಿಚ್ಚುಗತ್ತಿ'ಗಳು ಸಂಪೂರ್ಣ ಸ್ವತಂತ್ರವಾದವುಗಳು ಎನ್ನುವಲ್ಲಿ ಸಂದೇಹವೇ ಇಲ್ಲ. ಡಾ. ಬೆಟಗೇರಿ ಕೃಷ್ಣಶರ್ಮಾ ಅವರ ಅಭಿಪ್ರಾಯದಂತೆ 'ಭಗವತೀ ಕಾತ್ಯಾಯನೀ'ಯನ್ನೂ ಕಾದಂಬರಿಯೆಂದು ಕರೆಯುವುದಾದರೆ, ಕನ್ನಡದಲ್ಲಿಯೇ ಪ್ರಥಮ ಪೌರಾಣಿಕ ಕಾದಂಬರಿಯನ್ನು ಬರೆದ ಶ್ರೇಯಸ್ಸು ಗಳಗನಾಥರದಾಗುತ್ತದೆ.[1]

1. ಆದರೆ 'ಭಗವತೀ ಕಾತ್ಯಾಯನೀ' ಕಾದಂಬರಿಯಾಗಿರದೆ, ಪೌರಾಣಿಕ ಕಥೆಯಾಗಿದೆ ಎಂಬ ಅಭಿಪ್ರಾಯದಿಂದ ಅದನ್ನು ಇಲ್ಲಿ ವಿಮರ್ಶಿಸಿಲ್ಲ. 'ಗಳಗನಾಥರ ಇತರ ಗ್ರಂಥಗಳು' ಎಂಬ ಪ್ರಕರಣದಲ್ಲಿ ಅದನ್ನು ಪ್ರಸ್ತಾಪಿಸಲಾಗಿದೆ.

ಗಳಗನಾಥರು ಭಾಷಾಂತರ ಮತ್ತು ಅನುವಾದ ಮಾಡಿದ ಕಾದಂಬರಿಗಳ ಸಂಖ್ಯೆಯನ್ನು ಗಮನಿಸಿದರೆ, ಅವರ ಸ್ವತಂತ್ರ ಕಾದಂಬರಿಗಳ ಸಂಖ್ಯೆ ಕಡಿಮೆಯೆಂಬುದು ಸ್ಪಷ್ಟವಿದೆ. ಭಾಷಾಂತರ ಮತ್ತು ಸ್ವತಂತ್ರ ಕಾದಂಬರಿಗಳನ್ನು ಬರೆಯುವುದಕ್ಕಿಂತ ಅವರಿಗೆ ಅನುವಾದಗಳೇ ಸುಲಭವಾಗಿವೆ. ಭಾಷಾಂತರ ಮಾಡುವಾಗ ಇರುವ ಬಂಧನಗಳೂ, ಸ್ವತಂತ್ರವಾಗಿಯೇ ಎಲ್ಲವನ್ನೂ ಬರೆಯುವಾಗಿನ ಕಷ್ಟಗಳೂ ಅನುವಾದಗಳಿಗಿಲ್ಲ. ಅದಕ್ಕೇ ಅವರು ಅನುವಾದಗಳನ್ನೇ ಹೆಚ್ಚಾಗಿ ಮಾಡಿದರು. ಆದರೂ ಅವರು ಅನುವಾದದಲ್ಲಿ ತಮಗೆ ಬೇಡವಾದುದನ್ನು ತೆಗೆದುಹಾಕಿ, ಬೇಕಾದುದನ್ನು ಬೇಕಾದಂತೆ ಸೇರಿಸಿ. ಅವುಗಳ ಮೇಲೆ ತಮ್ಮದೇ ಮುದ್ರೆಯನ್ನು ಒತ್ತಿ ಅವು ಗಳಗನಾಥರ ಕಾದಂಬರಿಗಳೇ ಎನ್ನುವಂತೆ ಮಾಡಿದರೆಂಬುದನ್ನು ನೋಡಲಾಗಿದೆ.

ಆದರೆ ಸ್ವತಂತ್ರ ಕಾದಂಬರಿ ಅಷ್ಟು ಸುಲಭವಾಗಲಿಲ್ಲ. ಕಥಾವಸ್ತುವಿನ ಆಯ್ಕೆಯಿಂದ ಮೊದಲುಗೊಂಡು ಪಾತ್ರ, ಸನ್ನಿವೇಶ, ಘಟನೆಗಳು ಎಲ್ಲವನ್ನೂ ಅವರೇ ಸೃಷ್ಟಿಸಬೇಕಾಯಿತು. ಸ್ವತಂತ್ರವಾದ ಕಾದಂಬರಿಯ ವಿಚಾರವಿರಲಿ, ಸ್ವತಂತ್ರವಾದ ಒಂದು ಸಣ್ಣ ಪ್ರಬಂಧ ಗ್ರಂಥವನ್ನು ಬರೆಯುವಾಗಲೂ ಅವರು ಈ ಅಡಚಣೆಯನ್ನು ಅನುಭವಿಸಿದ್ದಾರೆ.

"ಇದು ಸ್ವತಂತ್ರ ಲೇಖವು, ಎರಡನೆಯ ಲೇಖದ ಭಾಷಾಂತರವಾಗಲಿ–ರೂಪಾಂತರವಾಗಲಿ–ಸಾರಶೋಷಣವಾಗಲಿ ಇರುವದಿಲ್ಲ. 'ಚಂದ್ರಿಕೆ'ಯ ಪ್ರತಿತಿಂಗಳ ವಿಷಯಗಳಲ್ಲಿ ಈ ಪ್ರಬಂಧ ಪ್ರಕರಣಗಳನ್ನು ಬರೆಯುವಾಗ ಲೇಖಕನಿಗೆ ಆದಷ್ಟು ಶ್ರಮವೂ ವಿಲಂಬವೂ ಬೇರೆ ಯಾವ ವಿಷಯ ಬರೆಯಬೇಕಾದರೂ ಆಗಿರುವದಿಲ್ಲ. ಈ ಪ್ರಬಂಧವು ಹ್ಯಾಗೆ ಪೂರ್ಣವಾದೀತೆಂಬ ಚಿಂತೆಯು ಇಡಿಯ ವರ್ಷ ಲೇಖಕನ ಮನಸ್ಸಿನಲ್ಲಿ ಕಟಿಯುತ್ತಿತ್ತು."[1] "ಭಾಷಾಂತರ–ರೂಪಾಂತರಗಳ ಮಾತು ಬೇರೆ, ಸ್ವತಂತ್ರ ಲೇಖಗಳ ಮಾತು ಬೇರೆ"[2]

—ಎಂದು ಲೇಖಕರು ಹೇಳಿದ್ದರೂ ಅವರು ಭಾಷಾಂತರ, ಅನುವಾದಗಳ ಕಾರ್ಯಕ್ಕೆ ತೊಡಗುವ ಮೊದಲೇ ಸ್ವತಂತ್ರವಾಗಿ ಬರೆಯುವುದಕ್ಕೆ ತೊಡಗಿದ್ದರು.[3] ಮುಂದೆ ಅನುವಾದಗಳಿಂದ ಅವರಿಗೆ ಕಾದಂಬರೀ ಲೇಖನದ ತಂತ್ರ ಕರಗತವಾಯಿತು. 'ಪದ್ಮನಯನೆ'ಯನ್ನು 1898ರಲ್ಲಿಯೇ ಪ್ರಕಟಿಸಿದ್ದರೂ, 1913ರಲ್ಲಿ 'ಕುಮುದಿನಿ'ಯನ್ನು ಬರೆಯುವಾಗ, "ಇಂಥ ಹೊಸ ಕಾದಂಬರಿಗಳನ್ನು ಬರೆದು ಅನುಭವವಿಲ್ಲ"[4] ಎಂದು ಅವರು ಪ್ರಾಂಜಲವಾಗಿಯೇ ನುಡಿದಿರುವರು.

ಆದರೂ ಅವರ ಸ್ವತಂತ್ರ ಕಾದಂಬರಿಗಳು ತೀರ ಕಳಪೆಯಾಗಲಿಲ್ಲ. ಅವರ ಸಂಪೂರ್ಣ ಸ್ವತಂತ್ರವಾದ ಕಾದಂಬರಿಗಳಲ್ಲಿ ಮೂರು ಐತಿಹಾಸಿಕ ಕಾದಂಬರಿಗಳಿದ್ದು, ಅವು ಮೂರು ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿದವುಗಳು: ಅವುಗಳಲ್ಲಿ ಎರಡು ವಿಜಯನಗರ ಇತಿಹಾಸವನ್ನೂ, ಒಂದು ಚಿತ್ರದುರ್ಗದ ಇತಿಹಾಸವನ್ನೂ ಒಳಗೊಂಡಿವೆ. ಅವರ ಕಾಲಕ್ಕೆ ಐತಿಹಾಸಿಕ

1. ಗಳಗನಾಥ: ಕುಟುಂಬ, ಪ್ರಸ್ತಾವನೆ.
2. ಗಳಗನಾಥ: ಸುಂದರ ಲೇಖ ಸಮುಚ್ಚಯ.
3. "ಸ್ವತಂತ್ರ ಲೇಖನಗಳನ್ನು ಬರೆಯುವ ಸ್ಫೂರ್ತಿಯು ನಾನು ಕಾಲೇಜದ ಉಪಶಿಕ್ಷಕನಾದಾಗಿನಿಂದ ಉತ್ಪನ್ನವಾಯಿತು". ಗಳಗನಾಥ: ದಾಂಪತ್ಯ, ಪ್ರಸ್ತಾವನೆ.
4, ಗಳಗನಾಥ: ಕುಮುದಿನಿ, ಪ್ರಸಾವನೆ.

ಕಾದಂಬರಿಗಳನ್ನು ಬರೆಯುವವನಿಗೆ ಕನ್ನಡದಲ್ಲಿಯೇ ಸಾಮಗ್ರಿಯನ್ನು ಒದಗಿಸುವಂಥ ಗ್ರಂಥಗಳ ಕೊರತೆ ಹೆಚ್ಚಾಗಿತ್ತು. ಗಳಗನಾಥರು ತಮಗೆ ದೊರೆತುದನ್ನೇ, ತಮ್ಮ ಪರಿಮಿತ ಶಕ್ತಿಯಲ್ಲಿ ಉಪಯೋಗಿಸಿಕೊಂಡರೆಂಬುದನ್ನು ನೆನೆಯಬೇಕು.

ಗಳಗನಾಥರು ಕಾದಂಬರಿಗಳನ್ನು ಹಳೆಯ ತಂತ್ರದಿಂದಲೇ ಬರೆದರು. ಅವರದು ನೇರವಾದ ನಿರೂಪಣೆ. ಅದರಲ್ಲಿ ನಾಟಕೀಯತೆ ಅತಿ ಕಡಿಮೆಯಾಗಿದೆ. ವಾಚಕರನ್ನು ಎದುರಿಗೆ ಕೂಡ್ರಿಸಿಕೊಂಡು ಕಥೆ ಹೇಳುವಂತೆ ಅವರು ಬರೆಯುತ್ತಾರೆ. ಆದ್ದರಿಂದಲೇ ಕುಮಾರವ್ಯಾಸನು ಆಗಾಗ "ಕೇಳು ಜನಮೇಜಯ" ಎನ್ನುವಂತೆ ಗಳಗನಾಥರು ಪ್ರಿಯ ವಾಚಕರನ್ನು ಆಗಾಗ ಸಂಬೋಧಿಸುತ್ತಾರೆ. ಆದರೆ ಇದನ್ನೇ ಒಂದು ದೊಡ್ಡ ದೋಷವೆಂದು ಗಣಿಸಬೇಕಾಗಿಲ್ಲ. ಸ್ಕಾಟನಂಥ ಪ್ರಖ್ಯಾತರೂ ಈ ತಂತ್ರವನ್ನು ಬಳಸಿರುವರು. ಅವರನ್ನು ಅನುಸರಿಸಿದ ಆಪಟೆಯವರನ್ನೇ ಗಳಗನಾಥರು ಅನುಕರಿಸಿದರು. ಪ್ರಿಯ ವಾಚಕರನ್ನು ಸಂಬೋಧಿಸುವ ರೀತಿ ಇಂದಿನ ವಾಚಕರಿಗೆ ಕೃತಕವಾಗಿ ಕಾಣಬಹುದಾದರೂ, ಆ ಕಾಲಕ್ಕೆ ಅದೇ ಹೊಸತನವೆನಿಸಿತ್ತು. ಅದನ್ನು ಕನ್ನಡದಲ್ಲಿ ರೂಢಿಗೆ ತಂದ ಶ್ರೇಯಸ್ಸು ಗಳಗನಾಥರದಾಯಿತು. ಗಳಗನಾಥರು ಇದನ್ನು ಕೆಲವು ಸಲ ಅರ್ಥಪೂರ್ಣವಾಗಿ ಬಳಸಿಕೊಂಡುದನ್ನೂ ನಾವು ನೋಡಬಹುದಾಗಿದೆ.

"ಸದ್ಯಕ್ಕೆ ಹೆಗ್ಗನ ವಾಸಸ್ಥಳದ ಪರಿಚಯವನ್ನು ನಾವು ಮಾಡಿಕೊಡುವೆವು. ಅದಕ್ಕಾಗಿ ವಾಚಕರು ನಮ್ಮೊಡನೆ ಹೆಗ್ಗನ ಬೆನ್ನು ಹತ್ತಿ ಬರಬೇಕು" ('ಮಾಧವ ಕರುಣಾವಿಲಾಸ', ಪುಟ 54) ಎಂದು ಗಳಗನಾಥರು ವಾಚಕರ ಜೊತೆಗೆ ಆತ್ಮೀಯತೆಯನ್ನು ತೋರಿ ಅವರಲ್ಲಿ ಕುತೂಹಲವನ್ನು ಕೆರಳಿಸುವುದರ ಜೊತೆಗೆ ಅವರನ್ನು ಕಾದಂಬರಿಯ ಸುಳಿಯಲ್ಲಿ ಸಿಕ್ಕಿಸಿಬಿಡುತ್ತಾರೆ.

'ಕುಮುದಿನಿ'ಯಲ್ಲಿ 'ಅಂತಕನ ಕೋಲಾಹಲ' ಎಂಬ ಪ್ರಕರಣದ ಕ್ರೂರ, ರೌದ್ರ ಸನ್ನಿವೇಶವನ್ನು ಹೃದಯವೇಧಕವಾಗುವಂತೆ ಬಣ್ಣಿಸಿದ ಗಳಗನಾಥರು ಕೊನೆಗೆ "ಪ್ರಿಯ ವಾಚಕರೇ, ಹ್ಯಾಗಿದೆ ಅರಸುತನದ ಸುಖ!"[1] ಎಂದು ಉದ್ಗಾರತೆಗೆಯುವರು. ಈ ಉದ್ಗಾರವು ವಾಚಕರನ್ನು ಕರುಣದ ಸುಳಿಯಿಂದ ತಪ್ಪಿಸಿ ವಿಚಾರದ ಸುಳಿಯಲ್ಲಿ ಸಿಕ್ಕಿಸುತ್ತದೆ.

"ಪ್ರೀಯ ವಾಚಕರೇ, ಈಗ ಚಂದ್ರಗಿರಿಯ ದಿವಾಣ ಖಾನೆಯಲ್ಲಿ ಕ್ರಮಿಸಿ ಹೋಗುತ್ತಿರುವ ಸುಮೂಹೂರ್ತದಲ್ಲಿ ಎಷ್ಟು ಜನರ ಇಷ್ಟಾರ್ಥಗಳು ಪೂರ್ಣವಾದವೆಂಬುದನ್ನು ಮನಸ್ಸಿನಲ್ಲಿ ತಂದಿರೇನು?"[2] ಎಂದು ಕೇಳಿ, ವಾಚಕರನ್ನು ಪುನರವಲೋಕನಕ್ಕೆ ತೊಡಗಿಸುವರು.

"ಪ್ರೀಯ ವಾಚಕರೇ, ಸದ್ಗುರುವಿನ ದರ್ಶನಕ್ಕಿಂತ ಹೆಚ್ಚಿನದು ಭಾವಿಕರಿಗೆ ಈ ಲೋಕದಲ್ಲಿ ಮತ್ತೊಂದಾವದಿರುವದು?"[3] ಎಂದು ಕೇಳಿ ವಾಚಕರನ್ನು ತಮ್ಮ ಮನೋಗತದ ಕಡೆಗೆ ಎಳೆದುಕೊಳ್ಳುವರು.

1. ಗಳಗನಾಥ: ಕುಮುದಿನಿ, ಪುಟ 155
2. ಅದೇ, ಪುಟ 170
3. ಗಳಗನಾಥ: ಮಾಧವ ಕರುಣಾವಿಲಾಸ, ಪುಟ 81

ಆದರೆ ಇಂಥ ಸಂಬೋಧನೆಗಳನ್ನು ಗಳಗನಾಥರು ಕಂಡಕಂಡಲ್ಲಿ ತರುವುದಿಲ್ಲ. ಇವು ಬಹುಶಃ ಒಂದು ಪ್ರಕರಣದ ಆದಿ ಅಥವಾ ಅಂತ್ಯದಲ್ಲಿ ಬಂದಿರುತ್ತವೆ. ಆದರೆ ಎಲ್ಲ ಪ್ರಕರಣಗಳಲ್ಲೂ ಇವು ಇರುವುದಿಲ್ಲ. ಯಾವುದಾದರೂ ಒಂದು ಮಾತಿನ ಮಹತ್ತ್ವವನ್ನು ವಾಚಕರಿಗೆ ಎತ್ತಿ ತೋರಿಸಬೇಕಾಗಿದ್ದರೆ, ಅಥವಾ ಲೇಖಕರೇ ಭಾವನಾಪ್ರವಾಹದಲ್ಲಿ ಕೊಚ್ಚಿ ಕೊಂಡು ಹೋದಾಗ ಇಂಥ ಸಂಬೋಧನೆಗಳು ಕಾಣಿಸಿಕೊಂಡಿವೆ.

ಇದರಿಂದ ಗಳಗನಾಥರು ತಮ್ಮ ವಾಚಕರ ಜೊತೆಗೆ ಸಮರಸಗೊಂಡು, ಪರಸ್ಪರ ಸಂಬಂಧವನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಯಿತು. ಅವರು ಯಾವಾಗಲೂ ತಮ್ಮ ವಾಚಕರನು ದೃಷ್ಟಿಯಲ್ಲಿ ಇಟ್ಟುಕೊಂಡೇ ಕಾದಂಬರಿಗಳನ್ನು ಬರೆದರು.

"ಬರೆಯುವಾಗ ನಾನು ವಾಚಕನಾಗಿರುವೆನು, ಓದುವಾಗ ವಾಚಕರು ಗಳಗನಾಥ ರಾಗುವರು. ಇದರಿಂದ ಗಳಗನಾಥನ ಮೆಚ್ಚಿಗೆಯೇ ವಾಚಕರ ಮೆಚ್ಚಿಕೆಯಾಗಿರುವದು"[1] ಎಂದು ಅವರು ತಿಳಿದರು.

ವಿದ್ಯಾರ್ಥಿಗಳ ಬುದ್ಧಿಯ ಮಟ್ಟವನ್ನೂ ಅವರ ಭಾವನಾಪ್ರಪಂಚವನ್ನೂ ಅರಿತ ನುರಿತ ಶಿಕ್ಷಕನು ಮೊದಲು ಅವರ ಮಟ್ಟಕ್ಕೆ ಇಳಿದು, ಅವರನ್ನು ಮೇಲಕ್ಕೆತ್ತುವಂತೆ, ಗಳಗನಾಥರು ತಮ್ಮ ವಾಚಕರನ್ನು ತಮ್ಮ ಕಾದಂಬರಿಗಳಿಂದ ಸುಶಿಕ್ಷಿತರನ್ನಾಗಿ ಮಾಡಿದರು.

ಕುತೂಹಲವನ್ನು ಕೆರಳಿಸುತ್ತ ಕಥೆ ಹೇಳುವ ಕಲೆ ಗಳಗನಾಥರಿಗೆ ಚೆನ್ನಾಗಿ ಸಾಧಿಸಿತ್ತು. "ಗಳಗನಾಥರಲ್ಲಿ ಕತೆಯನ್ನು ಕಟ್ಟುವ ಮತ್ತು ಬೆಳೆಯಿಸುವ ಕಲೆಗಾರಿಕೆ ಹುಟ್ಟಿನಿಂದಲೇ ಬಂದಿತ್ತು ಎಂದು ಹೇಳಬಹುದು"[2] ಎಂಬ ಶ್ರೀ. ಶ್ರೀರಂಗರ ಅಭಿಪ್ರಾಯದಲ್ಲಿ ಅತಿಶಯೋಕ್ತಿ ಯಿಲ್ಲ. ಈ ಕುತೂಹಲಜನಕ ಅಂಶವು ಕಾದಂಬರಿಯ ಪ್ರತಿಯೊಂದು ಭಾಗದಲ್ಲಿಯೂ ನಮಗೆ ಕಾಣುತ್ತದೆ.

ಗಳಗನಾಥರು ಆಗಿನ ಪದ್ಧತಿಯಂತೆ ಕಾದಂಬರಿಯ ಪ್ರತಿಯೊಂದು ಪ್ರಕರಣಕ್ಕೂ ಕೊಡುತ್ತಿದ್ದ ಹೆಸರುಗಳೇ ಎಷ್ಟೊಂದು ಕುತೂಹಲಕರವಾಗಿರುತ್ತಿದ್ದವು! "ವಿನಾಶಾಂಕುರ, ಎಲ ಇದೇನು, ಸ್ತ್ರೀ ಸಹವಾಸ, ಒಳಸಂಚುಗಳು, ಶಾಪ ಪ್ರದಾನ, ಶೃಂಗಾರ ಸಾಗರ, ಮುಳ್ಳಿನ ಹಾಸಿಗೆ, ಅಂತಕನ ಕೋಲಾಹಲ, ಮುಯ್ಯಕ್ಕೆ ಮುಯ್ಯ, ಸತ್ಸಮಾಗಮ" ಹೀಗೆ ಪ್ರಕರಣಗಳ ಹೆಸರುಗಳೇ ವಾಚಕರ ಕುತೂಹಲಕ್ಕೆ ಕಾರಣವಾಗುತ್ತಿದ್ದುವು. ಅದರಿಂದ ಕಾದಂಬರಿ ಸಂಪೂರ್ಣ ಓದಿಸಿಕೊಂಡು ಹೋಗುತ್ತಿತ್ತು. ಸಾಮಾನ್ಯ ವಾಚಕರ ಮಾತಿರಲಿ, ಟಿ. ಎಸ್. ವೆಂಕಣ್ಣಯ್ಯ ನವರಂಥ ಪ್ರಾಜ್ಞರೂ ಕೂಡ ಗಳಗನಾಥರ ಕಾದಂಬರಿಗಳನ್ನು ಒಮ್ಮೆ ಕೈಗೆ ಎತ್ತಿಕೊಂಡರೆ ಓದದೆ ಕೆಳಗೆ ಇಡುತ್ತಿರಲಿಲ್ಲವೆಂದು ತಿಳಿಸಿರುವರು.

ತಮ್ಮ ಕಾದಂಬರಿಗಳಿಗೆ ಗಳಗನಾಥರು ಹಲವು ಸಲ ಎರಡೆರಡು ಹೆಸರುಗಳನ್ನು ಕೊಡುತ್ತಿದ್ದರು. ಆಪಟೆಯವರೂ ಕೆಲವು ಸಲ ಹಾಗೆ ಮಾಡಿದ್ದಾರೆ. ಗಳಗನಾಥರ ಈ ಕೆಲವು ಹೆಸರುಗಳೇ ಅರ್ಥಪೂರ್ಣ ಹಾಗು ಕುತೂಹಲಜನಕವಾಗಿವೆ. 'ಕುಮುದಿನಿ ಅಥವಾ ಬಾಲಕ್ಕೆ ಬಡಿದಾಟ', 'ದುರ್ಗದ ಬಿಚ್ಚುಗತ್ತಿ ಅಥವಾ ಶ್ರೀ ಮುರಗೀಶ ಗುರುಮಹಿಮೆ',

1. ಗಳಗನಾಥ: ಸದ್ಗುರು ಪ್ರಭಾವ, ಪುಟ 39
2. ಹಾ. ಮಾ. ನಾಯಕ (ಸಂ): 'ಗಳಗನಾಥ'ರಲ್ಲಿ ಶ್ರೀರಂಗರ 'ಅಧ್ಯಕ್ಷ ಭಾಷಣ', ಪುಟ 83

ಇತ್ಯಾದಿ. ಇನ್ನು ಅನುವಾದಗಳಲ್ಲಿ ಕಾದಂಬರಿಯ ಮೂಲ ಹೆಸರನ್ನು ಬದಲಿಸುವಲ್ಲಿ ಕೂಡ ಅವರ ಕೌಶಲ್ಯ ಕಂಡಿದೆ. 'ಗಡ ಆಲಾ ಪಣ ಸಿಂಹ ಗೇಲಾ' ಇದು 'ಕಮಲಕುಮಾರಿ' ಆಗಿದೆ. 'ವಜ್ರಾಘಾತ'ವು 'ಕನ್ನಡಿಗರ ಕರ್ಮಕಥೆ'ಯಾಯಿತು. 'ಸಾಮ್ರಾಟ ಅಶೋಕ'ವು 'ಧರ್ಮರಹಸ್ಯ ಅಥವಾ ಸತ್ಸಮಾಗಮ ಪ್ರಭಾವ'ವಾಯಿತು.– ಹೀಗೆ ಈ ಬದಲಾವಣೆಗಳು ಹಲವೆಡೆ ಮಾರ್ಮಿಕವೂ ಔಚಿತ್ಯಪೂರ್ಣವೂ ಆಗಿವೆ.

ಗಳಗನಾಥರ ಕಾದಂಬರಿಗಳು ಮೊದಲು ಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಬರುತ್ತಿದ್ದುವಷ್ಟೇ ? ವಾಚಕರ ಕುತೂಹಲ ಕೆರಳಿಸುವ ಇನ್ನೊಂದು ಉಪಾಯವನ್ನು ಗಳಗನಾಥರು ಕಂಡುಕೊಂಡಿದ್ದರು. "ಕತೆಗಾರಿಕೆಯ ಜೊತೆ ಇನ್ನೊಂದು ಕೌಶಲ ಶ್ರೀಯುತರದಾಗಿತ್ತು, ಅದೆಂದರೆ ಪ್ರಕರಣವನ್ನು ಮುಗಿಸುವ ಚಮತ್ಕೃತಿ. ವಾಚಕರಲ್ಲಿ ಅತ್ಯಂತ ಕುತೂಹಲವನ್ನುಂಟು ಮಾಡುವಂತಹ ಸನ್ನಿವೇಶದಿಂದ ಇಲ್ಲವೆ ವಾಕ್ಯದಿಂದ ಇವರು ಪ್ರಕರಣವನ್ನು ಮುಗಿಸುತ್ತಿದ್ದರು. ಹೊಸ ಪ್ರಕರಣ ಪ್ರಾರಂಭವಾಗುವುದು ಮುಂದಿನ ಸಂಚಿಕೆಯಲ್ಲಿ. ಅಲ್ಲಿಯವರೆಗೂ ಅತ್ಯಂತ ಕುತೂಹಲದಲ್ಲಿ ಸಿಕ್ಕು ನಿರ್ವಿಣ್ಣರಾಗಿ ನಾವು ದಿನದಿನಕ್ಕೆ ಹೆಚ್ಚುವ ಆಸಕ್ತಿಯಿಂದ ಮುಂದಿನ ಪ್ರಕರಣವನ್ನು ನಿರೀಕ್ಷಿಸುತ್ತಿದ್ದೆವು"[1] ಎಂದು ತಮ್ಮ ಬಾಲ್ಯದ ದಿನಗಳನ್ನು ನೆನೆಸಿಕೊಂಡ ಶ್ರೀ. ಶ್ರೀರಂಗರು ಹೇಳಿರುವುದು— ಎಲ್ಲ ವಾಚಕರಿಗೂ ಅನ್ವಯಿಸುವ ಮಾತು.

ಗಳಗನಾಥರು ಭಾವಪೂರ್ಣವಾಗಿ ಕಥೆ ಬರೆಯುತ್ತಿದ್ದರು; ಅಷ್ಟೇ ಅಲ್ಲದೆ ಕಥೆ ಬರೆಯುವಾಗ ಅವರೂ ಅದೆ ಭಾವಾವೇಶವನ್ನು ಅನುಭವಿಸುತ್ತಿದ್ದರು. ಕಥೆ ಬರೆಯುವಾಗ ತಾವೂ ಭಾವಪರವಶರಾಗಿ, ವಾಚಕರ ಹೃದಯಗಳನ್ನೂ ಅವರು ಗೆದ್ದುಕೊಂಡರು. ಇಂಥ ಹೃದಯವೇಧಕ ಸನ್ನಿವೇಶಗಳು ಅವರ ಕಾದಂಬರಿಗಳಲ್ಲಿ ಅಲ್ಲಲ್ಲಿ ಕಂಡು ಬರುತ್ತವೆ.

"ನನ್ನ ಕಣ್ಣುಗಳಲ್ಲಿ ನೀರುಗಳನ್ನು ಉದುರಿಸಿದ ಕಾದಂಬರಿಗಳು ನಮ್ಮ ವಾಚಕರ ಕಣ್ಣುಗಳಲ್ಲಿ ನೀರು ಉದುರಿಸದೆ ಬಿಟ್ಟಿರುವದೇ ಇಲ್ಲ ! ಇದೇ ಮಾತು ನನ್ನ ಹಾಗು ನನ್ನ ವಾಚಕರ ಎಲ್ಲ ವಿಚಾರ-ವಿಕಾರಗಳಿಗೂ ಹತ್ತುವದು"[2] ಎಂದು ಅವರು ಆತ್ಮವಿಶ್ವಾಸದಿಂದ ಹೇಳಿರುವರು.

12380

ವಾಚಕರ ಕರುಳು ಮಿಡಿಯಿಸುತ್ತ, ಅವರ ಕುತೂಹಲ ಕೆರಳಿಸುತ್ತ ಗಳಗನಾಥರು ಅವರಿಗೆ ನೀತಿಬೋಧೆಯನ್ನು ಮಾಡಿದರು. ಈ ನೀತಿಬೋಧೆಯ ಅವರ ಉಪಕ್ರಮವು ಕಲೆಗೆ ಬಾಧಕವೆಂದು ಅನೇಕರು ಖಂಡಿಸಿರುವರಾದರೂ, ಗಳಗನಾಥರಿಗೆ ಅದು ಅನಿವಾರ್ಯವಾದ, ಅದಮ್ಯವಾದ ವಿಷಯವಾಗಿತ್ತು. "ಮನೋರಂಜನವಾಗಿ ನೀತಿಬೋಧವಾಗುವದಕ್ಕೂ ಉತ್ತಮ ಕಾದಂಬರಿಗಳು ಬೇಕೇ ಬೇಕು"[3] ಎಂಬುದು ಅವರ ಖಚಿತವಾದ ಅಭಿಪ್ರಾಯವಾಗಿತ್ತು. ಅದರಂತೆ ಅವರು ತಮ್ಮ ಎಲ್ಲ ಭಾಷಾಂತರಿತ, ಅನುವಾದಿತ ಮತ್ತು ಸ್ವತಂತ್ರ ಕಾದಂಬರಿಗಳಲ್ಲಿಯೂ ಈ ನೀತಿಬೋಧೆಯನ್ನು ತಂದೇ ತಂದಿರುವರು.

"ಕಲೆಗಾಗಿ ಕಲೆ" ಎಂಬುದು ಗಳಗನಾಥರ ತತ್ತ್ವವಲ್ಲ. "ಜೀವನಕ್ಕಾಗಿ ಕಲೆ" ಎಂದೇ ಅವರು ನಂಬಿದ್ದರು. ಆದ್ದರಿಂದ ಅವರು ಕಾದಂಬರಿಗಳಲ್ಲಿ ನೀತಿಬೋಧೆ ಅವಶ್ಯ

1. ಹಾ. ಮಾ. ನಾಯಕ (ಸಂ) 'ಗಳಗನಾಥ'ದಲ್ಲಿ ಶ್ರೀರಂಗರ 'ಅಧ್ಯಕ್ಷ ಭಾಷಣ', ಪುಟ 83
2. ಗಳಗನಾಥ : ಸದ್ಗುರು ಪ್ರಭಾವ, ಪುಟ 39
3. ಗಳಗನಾಥ : ಪ್ರಬುದ್ಧ ಪದ್ಮನಯನಾ, ಪ್ರಸ್ತಾವನೆ

ವೆಂದೇ ಭಾವಿಸಿದರು. ಅವರ ವಾಚಕರೂ ಕೂಡ ಈ ಬಗ್ಗೆ ಯಾವ ಆಕ್ಷೇಪಣೆಯನ್ನೂ ಮಾಡಲಿಲ್ಲ. ಆ ಕಾಲದ ಜನರ ದೃಷ್ಟಿಯೇ ಆ ರೀತಿಯದಾಗಿತ್ತು. ಅಷ್ಟೇ ಏಕೆ, ಆಂಗ್ಲ ಸಾಹಿತ್ಯದಲ್ಲಿ ಕೂಡ "ಕಲೆಗಾಗಿ ಕಲೆ" ಎಂಬ ವಾದವು ಆಸ್ಕರ್ ವಾಯಿಲ್ಡ್ ಮೊದಲಾದ ಇತ್ತೀಚಿನವರಿಂದಲೇ ವಿಶೇಷವಾಗಿ ಪ್ರತಿಪಾದಿಸಲ್ಪಟ್ಟಿತು. ಸಾಹಿತ್ಯದಲ್ಲಿ ನೀತಿಬೋಧೆಯನ್ನು ಖಂಡಿಸುವುದಾದರೆ ಮಧ್ಯಯುಗೀನ ಸಾಹಿತ್ಯವೆಲ್ಲವನ್ನೂ ನಾವು ಪರಿತ್ಯಜಿಸಬೇಕಾಗುತ್ತದೆ.

"ಅವರ (ಗಳಗನಾಥರ) ಗ್ರಂಥಗಳಲ್ಲಿ ತಮ್ಮ ಜೀವನವಿಮರ್ಶೆಯನ್ನು ಮೇಲಿಂದ ಮೇಲೆ ಒತ್ತಿ ಹೇಳುವದು ಒಂದು ದೋಷವಾಗಿ ಕಾಣುತ್ತದೆ. ಆದರೆ ಅದು ಕಾವ್ಯ ದೃಷ್ಟಿಯಿಂದ ದೋಷವೇ ಹೊರತು ಅದು ಸಂಸಾರಿಕರಿಗೆ ಅನುಪಯುಕ್ತವೆಂದು ಅರ್ಥ ವಲ್ಲ"[1] ಎಂಬ ಡಾ. ಎ. ಆರ್. ಕೃಷ್ಣಶಾಸ್ತ್ರಿಗಳ ಮಾತು ಅರ್ಥಪೂರ್ಣವಾಗಿದೆಯೆಂದು ಆಗಲೇ ನೋಡಲಾಗಿದೆ.

ಆದ್ದರಿಂದ ಗಳಗನಾಥರ ಕಾದಂಬರಿಗಳಲ್ಲಿ ಬಂದಿರುವ ನೀತಿಬೋಧೆಯ ಅಂಶವನ್ನೇ ದೋಷವೆಂದು ಪುನಃ ಪುನಃ ಹೇಳುವುದರಲ್ಲಿ ಹೆಚ್ಚಿನ ಅರ್ಥವಿಲ್ಲ. ಇಷ್ಟೇ, ಅವರು ಈ ನೀತಿಬೋಧೆಯನ್ನು ಅತಿ ಬಿಚ್ಚುಮಾತುಗಳಲ್ಲಿ ಹೇಳದೆ, ಸೂಚ್ಯವಾಗಿ ಹೇಳಬಹುದಿತ್ತು. ಆದರೆ ಅವರಿಗೆ ತಮ್ಮ ವಾಚಕರ ಅರ್ಥಗ್ರಹಣ ಶಕ್ತಿಯ ಬಗ್ಗೆ ಬಹುಶಃ ಅಪನಂಬಿಕೆ ಇದ್ದಿತು. ಅಲ್ಲದೆ, ಮನದಟ್ಟಾಗಬೇಕಾದರೆ ಅದನ್ನೇ ಪುನಃ ಪುನಃ ಹೇಳಿ ಬಿಂಬಿಸಬೇಕೆಂಬ ತತ್ತ್ವವನ್ನು ಶಿಕ್ಷಕರಾದ ಗಳಗನಾಥರು ಮರೆಯಲಿಲ್ಲ. ಅಶಿಕ್ಷಿತರೂ, ಅರ್ಧಮರ್ಧ ಶಿಕ್ಷಿತರೂ ಆದ ಸಾಮಾನ್ಯ ಜನರೇ ಗಳಗನಾಥರ ವಾಚಕರಾಗಿದ್ದರು. ಅವರೂ ಕೂಡ ಗಳಗನಾಥರಂತೆ ಧರ್ಮ–ನೀತಿಗಳಲ್ಲಿ ಆಸಕ್ತಿಯುಳ್ಳವರೇ ಆಗಿದ್ದರು. ಅಂಥ ಅವರಿಗೆ ಗಳಗನಾಥರು ಕಾದಂ ಬರಿಗಳಲ್ಲಿ ಅಲ್ಲಲ್ಲಿ ಮಾಡಿರುವ ನೀತಿಬೋಧೆಯು ಕಾದಂಬರಿಗೆ ಸಾಧಕವಾಗಿಯೇ ಕಂಡಿತಲ್ಲದೆ, ಬಾಧಕವಾಗಿ ಕಾಣಲಿಲ್ಲ. 'ದುರ್ಗದ ಬಿಚ್ಚುಗತ್ತಿ' ಮತ್ತು 'ಮಾಧವ ಕರುಣಾವಿಲಾಸ'ಗಳಲ್ಲಿ ಮಾತ್ರ ಈ ನೀತಿಬೋಧೆ ಕೆಲವು ಪ್ರಕರಣಗಳಿಗೇ ಮೀಸಲಾಗಿ, ಕಾದಂಬರಿಯ ಕಥಾಪ್ರವಾಹ ವನ್ನೇ ಹರಿಗಡಿಸಿ ಬಿಡುತ್ತದೆ. ಇಂಥಲ್ಲಿ ಮಾತ್ರ ದೋಷವು ನೇರವಾಗಿ ಒಡೆದು ಕಾಣುತ್ತದೆ. ಆದರೆ 'ಪದ್ಮನಯನಾ', 'ಕುಮುದಿನಿ' ಮೊದಲಾದವುಗಳಲ್ಲಿಯೂ, ಅನೇಕ ಅನುವಾದಗಳಲ್ಲಿಯೂ ಬಂದಿರುವ ಅಲ್ಲಲ್ಲಿಯ ನೀತಿಬೋಧೆ ಅಷ್ಟು ಮಾರಕವಾಗಿಲ್ಲವೆಂದು ಹೇಳಬಹುದು. ಅಲ್ಲಿಯ ಚುಟುಕು ನೀತಿಬೋಧೆ ವಾಚಕರನ್ನು ಎಚ್ಚರಿಸಲಿಕ್ಕೆ ಸಹಾಯಕವಾಗಿದೆ.

ಐತಿಹಾಸಿಕ ಕಾದಂಬರಿಗಳನ್ನು ಮಾತ್ರ ಬರೆದ ಗಳಗನಾಥರು ಅಸ್ಪೃಶ್ಯತೆ, ಅಸಹ ಕಾರಯೋಗ, ಅಹಿಂಸೆ, ಪ್ರೌಢವಿವಾಹ ಮೊದಲಾದ ಪ್ರಚಲಿತ ವಿಚಾರಗಳ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಬೇರೆ ಮಾಧ್ಯಮವನ್ನು ಕಾಣದೆ, ಅವೆಲ್ಲವುಗಳನ್ನೂ ಈ ಎರಡೂ ಸ್ವತಂತ್ರ ಕಾದಂಬರಿಗಳಲ್ಲಿ[2] ತಂದು ಸೇರಿಸಿರುವರು. ಆದ್ದರಿಂದಲೇ ಅವರು 'ಮಾಧವ ಕರುಣಾವಿಲಾಸ'ವನ್ನು "ಬರಿಯ ಕಾದಂಬರಿ ಎಂಬ ದೃಷ್ಟಿಯಿಂದ ಬಡಬಡ ಓದಿಬಿಡುವದ ಕ್ಕಿಂತ ಇದೊಂದು ಅಭ್ಯಾಸ ಮಾಡತಕ್ಕ ಪುಸ್ತಕವೆಂದು ವಿಚಾರಪೂರ್ಣವಾಗಿ ಓದುವದು

1. ಡಾ. ಎ. ಆರ್. ಕೃಷ್ಣಶಾಸ್ತ್ರೀ : ಭಾಷಣಗಳು ಮತ್ತು ಲೇಖನಗಳು, ಪುಟ 237

2. 'ಮಾಧವ ಕರುಣಾವಿಲಾಸ' ಮತ್ತು 'ದುರ್ಗದ ಬಿಚ್ಚುಗತ್ತಿ',

ಲಾಭಕರವಾಗಿರುವದು"[1] ಎಂದು ತಿಳಿಸಿರುವರು. ಈ ಮಾತು ಹೆಚ್ಚುಕಡಿಮೆಯಾಗಿ ಅವರ ಎಲ್ಲ ಕಾದಂಬರಿಗಳಿಗೂ ಅನ್ವಯಿಸುತ್ತದೆ. ಆದ್ದರಿಂದಲೇ ಹೆಚ್ಚು ಮಟ್ಟಿನ ಕಲಾಪ್ರಜ್ಞೆಯುಳ್ಳ ಇಂದಿನ ವಿಮರ್ಶಕರಿಗೂ, ಸುಶಿಕ್ಷಿತ ವಾಚಕರಿಗೂ ಗಳಗನಾಥರ ಕಾದಂಬರಿಗಳು ರುಚಿಸದೆ ಹೋಗುತ್ತವೆ. ಆದರೆ ಸಾಮಾನ್ಯ ವಾಚಕರು ಇಂದಿಗೂ ಅವರ ಕಾದಂಬರಿಗಳನ್ನು ಓದಿ ಮೆಚ್ಚಬಲ್ಲರು. ಗಳಗನಾಥರ ಅನೇಕ ಕಾದಂಬರಿಗಳು ಇಂದಿಗೂ ಪುನರ್ಮುದ್ರಣಗೊಳ್ಳುತ್ತಿರುವುದೇ ಈ ಮಾತಿಗೆ ಸಾಕ್ಷಿಯಾಗಿದೆ.[2]

ಗಳಗನಾಥರ ಅನುವಾದಿತ ಕಾದಂಬರಿಗಳಲ್ಲಿ ಅವರು ಚಿತ್ರಿಸಿದ ಅನೇಕ ಮರಾಠಾ ಮತ್ತು ರಜಪೂತ ವೀರರ ಮತ್ತು ವೀರ ರಮಣಿಯರ ಪಾತ್ರಗಳನ್ನು ನೋಡಲಾಯಿತು. ಈಗ ಅವರ ಸ್ವತಂತ್ರ ಕಾದಂಬರಿಗಳಲ್ಲಿ ಇಂಥ ಅಮರವಾದ ಪಾತ್ರಗಳನ್ನೇನಾದರೂ ಕನ್ನಡಿಗರಿಗೆ ಕೊಟ್ಟಿರುವರೇ ಎಂದು ನೋಡಬಹುದು.

ಗಳಗನಾಥರ ಕಾಲಕ್ಕೆ ಕಾದಂಬರಿಗಳಲ್ಲಿ ಪಾತ್ರಚಿತ್ರಣವೇ ಪ್ರಧಾನವೆಂಬ ಕಲ್ಪನೆಯಿರಲಿಲ್ಲ. ಕಥೆಯನ್ನು ಸುಂದರವಾಗಿ ಬೆಳೆಯಿಸಿಕೊಂಡು ಹೋಗುವುದೇ ಕಾದಂಬರಿಯ ಮುಖ್ಯ ಯಶಸ್ಸೆಂದು ಗಣಿಸಲ್ಪಡುವ ಕಾಲವದು. ಗಳಗನಾಥರ ಕಾದಂಬರಿಗಳೆಲ್ಲ ಘಟನಾಪ್ರಧಾನವಾದ ಸರಳ ಕಾದಂಬರಿಗಳು. ವಾಚಕರ ಕುತೂಹಲ ಕೆರಳುವಂತೆ ಘಟನೆಗಳನ್ನು, ಸನ್ನಿವೇಶಗಳನ್ನು ಬಣ್ಣಿಸುತ್ತ ಕಥೆಯನ್ನು ಹೇಳುವುದೇ ಅಲ್ಲಿ ಮುಖ್ಯ. ಆದ್ದರಿಂದಲೇ ಪಾತ್ರಗಳ ಸರ್ವಾಂಗೀಣ ಚಿತ್ರಣದ ಕಡೆಗೆ ಅವರು ಹೆಚ್ಚಿನ ಗಮನವನ್ನು ಕೊಡಲಿಲ್ಲವೆಂದು ಹೇಳಬಹುದು. ಪಾತ್ರಗಳ ಜಟಿಲವಾದ ವ್ಯಕ್ತಿತ್ವ ನಿರೂಪಣೆಗೆ ಗಳಗನಾಥರ ಕಾದಂಬರಿಗಳಲ್ಲಿ ಹೆಚ್ಚಿನ ಆಸ್ಪದವೇ ಸಿಕ್ಕಿಲ್ಲವೆಂದರೂ ತಪ್ಪಾಗಲಾರದು. ಫೋರ್‌ಸ್ಟರ್‌ನ ಭಾಷೆಯಲ್ಲಿ ಹೇಳಬೇಕಾದರೆ ಗಳಗನಾಥರ ಪಾತ್ರಗಳು ಹೆಚ್ಚಾಗಿ ಚಪ್ಪಟೆ (Flat) ಆಗಿವೆಯಲ್ಲದೆ ಮೈತುಂಬಿ(Round) ಕೊಂಡು ಬೆಳೆದಿಲ್ಲ.

ಅಂದರೆ, ಪಾತ್ರಚಿತ್ರಣದಲ್ಲಿ ಗಳಗನಾಥರು ಸಂಪೂರ್ಣವಾಗಿ ಸೋತಿದ್ದಾರೆ—ಎಂದು ತಿಳಿಯಬೇಕಾಗಿಲ್ಲ. ಒಂದು ಪಾತ್ರದ ಬಗ್ಗೆ ಅವರು ಕಾದಂಬರಿಯ ಆದಿಯಲ್ಲಿ ತಳೆದ ಧೋರಣೆ, ಮೊದಲು ತೋರಿದ ಒಂದು ಪಾತ್ರದ ಮುಖ ಇವುಗಳಲ್ಲಿ ಕಾದಂಬರಿ ಬೆಳೆದಂತೆ ಹೆಚ್ಚಿನ ಬದಲಾವಣೆ ಕಾಣುವುದಿಲ್ಲ. ವ್ಯಕ್ತಿಗಳಿಗೆ ಹಲವು ಮುಖಗಳಿರುತ್ತವೆ, ಅವು ಅಷ್ಟು ಸರಳವಾಗಿರುವುದಿಲ್ಲ— ಎನ್ನುವುದು ಇತ್ತೀಚಿನ ಕಾದಂಬರಿಕಾರರು ಕಂಡುಕೊಂಡ ತತ್ತ್ವವಾಗಿದೆ. ಆ ದೃಷ್ಟಿಯಿಂದ ಗಳಗನಾಥರ ಪಾತ್ರಗಳೆಲ್ಲ ಹೆಚ್ಚಾಗಿ ಸರಳವಾದ ಪಾತ್ರಗಳು. ಅವುಗಳಲ್ಲಿ ಜಟಿಲತೆಯಿಲ್ಲ. ಅವುಗಳ ಮನಸ್ಸನ್ನು, ಕ್ರಿಯೆಯನ್ನು ಅರ್ಥಮಾಡಿಕೊಳ್ಳುವಲ್ಲಿ ವಾಚಕರಿಗೆ ಯಾವ ಸಮಸ್ಯೆಗಳೂ ಉದ್ಭವಿಸುವುದಿಲ್ಲ. ಅಲ್ಲದೆ ಅನೇಕ ಸಲ ಲೇಖಕರೇ ತಮ್ಮ ಪಾತ್ರಗಳ ಗುಣಸ್ವಭಾವವನ್ನು ನೇರವಾಗಿ ಬಣ್ಣಿಸಿ ಬಿಡುವರು. ಹೀಗೆ ಸರಳೀಕೃತ ಪಾತ್ರಗಳು ಕಾದಂಬರಿಯಲ್ಲಿ ತಮ್ಮತನವನ್ನು ತೋರುವಲ್ಲಿ ವಿಫಲವಾಗುತ್ತವೆ.

ಆದರೆ ಗಳಗನಾಥರ ಪಾತ್ರಗಳೆಲ್ಲ ತೀರ ಸಪ್ಪೆ ಎಂದು ತಿಳಿಯಬೇಕಾಗಿಲ್ಲ, 'ಪ್ರಬುದ್ಧ ಪದ್ಮನಯನೆ' ಅದ್ಭುತರಮ್ಯ ಕಾಂದಬರಿಯಾಗಿರುವುದರಿಂದ ಅಲ್ಲಿ ಪಾತ್ರಚಿತ್ರಣಕ್ಕೆ ಹೆಚ್ಚಿನ

1. ಗಳಗನಾಥ : ಮಾಧವ ಕರುಣಾವಿಲಾಸ, ಪ್ರಸ್ತಾವನೆ
2. ಗಳಗನಾಥರ 'ಮಾಧವ ಕರುಣಾವಿಲಾಸ'ದ ನಾಲ್ಕನೆಯ ಆವೃತ್ತಿಯು 1975ರಲ್ಲಿ ಪ್ರಕಟವಾಗಿದೆ.

ಆಸ್ಪದ ದೊರೆತಿಲ್ಲವೆನ್ನಬಹುದು. ಆದರೆ ಅವರ 'ಕುಮುದಿನಿ' ಆ ದೃಷ್ಟಿಯಿಂದ ಹೆಚ್ಚು ಸ್ವಾಗತಾರ್ಹವಾಗಿದೆ. ಜಗರಾಯ, ರಂಗರಾಯ, ಚಾಂದಖಾನರಂಥ ಸರಳೀಕೃತ ಪಾತ್ರಗಳಿದ್ದರೂ ಎಚ್ಚಮನಾಯಕನ ಪಾತ್ರವು ಕಾದಂಬರಿಯಲ್ಲಿ ಚೆನ್ನಾಗಿ ಮೈತುಂಬಿಕೊಂಡಿದೆ. ಅವನ ಆವೇಶ, ದೈವಭಕ್ತಿ, ಚಂಚಲ ಸ್ವಭಾವ, ಸ್ವಾಮಿನಿಷ್ಠೆ, ಪಶ್ಚಾತ್ತಾಪ ಈ ಮೊದಲಾದ ಭಾವಗಳು ಕಾಲಕಾಲಕ್ಕೆ ಕಾದಂಬರಿಯಲ್ಲಿ ಮೂಡಿ ಅವನ ವ್ಯಕ್ತಿತ್ವವನ್ನು ಬಹುಮುಖವಾಗಿ ಪ್ರದರ್ಶಿಸುತ್ತವೆ. ಆದ್ದರಿಂದ ಅವನನ್ನು ಚಪ್ಪಟೆ ಪಾತ್ರವೆನ್ನಲಾಗದು. ಮಂತ್ರಾಕ್ಷತೆಯ ಗಂಟನ್ನು ಕಳೆದುಕೊಂಡಾಗಿನ ಅವನ ಮನೋಭಾವ, ಜಗರಾಯನು ರಾಜವಂಶವನ್ನೆಲ್ಲ ಬಲಿ ತಗೆದುಕೊಂಡಾಗ ಆತ ಪಟ್ಟ ಮನದ ವ್ಯಾಕುಲತೆ, ಕುಮುದಿನಿಯ ಪಾತಿವ್ರತ್ಯದ ಬಗ್ಗೆ ಆತ ತಳೆದ ಸಂಶಯ— ಈ ಮೊದಲಾದವುಗಳನ್ನು ಗಳಗನಾಥರು ಚೆನ್ನಾಗಿಯೇ ಚಿತ್ರಿಸಿರುವರು. ಕಥಾನಾಯಕಿಯೂ, ಕಾದಂಬರಿಗೆ ತನ್ನ ಹೆಸರನ್ನೇ ಕೊಟ್ಟವಳೂ ಆದ ಕುಮುದಿನಿ ಮಾತ್ರ ಅಷ್ಟು ಪುಷ್ಟವಾಗಿ ಬೆಳೆದಿಲ್ಲ. ಅವಳ ಪಾತ್ರಚಿತ್ರಣದಲ್ಲಿ ಸರಳೀಕರಣ ತುಸು ಹೆಚ್ಚಾಗಿದೆ.

'ಮಾಧವ ಕರುಣಾವಿಲಾಸ'ವು ಮಾಧವಾಚಾರ್ಯರನ್ನೇ ಕೇಂದ್ರ ವ್ಯಕ್ತಿಯಾಗಿಟ್ಟುಕೊಂಡಿದ್ದರೂ, ಗಳಗನಾಥರು ಆ ಪಾತ್ರದ ಬಗ್ಗೆ ಹೊಂದಿದ ಅತಿ ಆದರ, ಭಕ್ತಿ, ಆತ್ಮೀಯತೆಗಳಿಂದ ಪಾತ್ರಚಿತ್ರಣ ಅಷ್ಟು ಯಶಸ್ವಿಯಾಗಲಿಲ್ಲ. ಕಾದಂಬರಿಯ ಆದಿಭಾಗದಲ್ಲಿಯ ಮಾಧವಾಚಾರ್ಯರ ಚಿತ್ರ ನಿಜವಾಗಿಯೂ ಭರವಸೆಯನ್ನು ಹುಟ್ಟಿಸಿದರೂ, ಕೊನೆಗೆ ನಿರಾಸೆಗೊಳಿಸುತ್ತದೆ. ಅದರಂತೆ ಆರಂಭದಲ್ಲಿಯ ಹೆಗ್ಗ, ಮಲ್ಲಸರ್ಜ ಮೊದಲಾದವರು ಕಾದಂಬರಿ ಬೆಳೆದಂತೆ ಬೆಳೆದು ಪುಷ್ಟರಾಗುವದಿಲ್ಲ. ಪದ್ಮಿನಿ, ಚಿನ್ನಮ್ಮ ಮೊದಲಾದವರ ಕ್ರಿಯೆಗಳು ಅವಾಸ್ತವವೆನಿಸಿ ಆ ಪಾತ್ರಗಳೂ ಸಜೀವವಾಗಿಲ್ಲ. ಉಳಿದ ಕನ್ನಡ ವೀರರ ಮತ್ತು ಮಹಮ್ಮದೀಯರ ಪಾತ್ರಗಳೂ ಅಷ್ಟೇ. ಪಾತ್ರಪೋಷಣೆಯ ದೃಷ್ಟಿಯಿಂದ 'ಮಾಧವ ಕರುಣಾವಿಲಾಸ'ವು ಅಂಥ ಸಫಲ ಕೃತಿಯಾಗಿಲ್ಲ.

'ದುರ್ಗದ ಬಿಚ್ಚುಗತ್ತಿ'ಯಲ್ಲಿ ಕೂಡ ಅದ್ಭುತಗಳಿದ್ದರೂ ಸಾಧ್ವಿಶ್ರೀಮತಿ, ರಣಹುಚ್ಚಿ, ಪಂಚಮ ಮುದ್ದ ದಳವಾಯಿ ಈ ಪಾತ್ರಗಳು ಎಷ್ಟೋ ಚೆನ್ನಾಗಿ ಚಿತ್ರಿತವಾಗಿವೆ. ಆದರೂ ಆಪಟೆಯವರ ತಾನಾಜಿ, ಶಿವಾಜಿ, ರಾಮದಾಸ, ಸೇಲಾರಮಾಮಾ, ಸಂಭಾಜಿ ಮೊದಲಾದ ಪಾತ್ರಗಳಂತೆ, ವಾಚಕರ ಮನೆಮಾತಾಗಿ ಬಿಡುವಂಥ ಪಾತ್ರಸೃಷ್ಟಿ ಗಳಗನಾಥರಿಂದ ನಡೆಯಲಿಲ್ಲ. ಆದರೂ ಎಚ್ಚಮನಾಯಕ, ಕುಮುದಿನಿ, ಮಾಧವಾಚಾರ್ಯ, ಹೆಗ್ಗ, ಚಿನ್ನಮ್ಮ, ತಘಲಕ ಮಹಮ್ಮದ, ರಣಹುಚ್ಚಿ ಮೊದಲಾದವರು ನಮ್ಮ ಗಮನ ಸೆಳೆಯುವಷ್ಟು ಶಕ್ತರಾಗಿರುವರು.

ಗಳಗನಾಥರ ನಿರೂಪಣೆಯಲ್ಲಿ ಆಕಸ್ಮಿಕತೆ ಮತ್ತು ಅದ್ಭುತಗಳು ಹೆಚ್ಚಾಗಿ ಬಂದಿದ್ದರೂ, ಅವರ ಕೆಲವೊಂದು ಸನ್ನಿವೇಶಗಳು ಸಹಜ ಸುಂದರವಾಗಿ ಚಿತ್ರಿತವಾಗಿವೆ. 'ಕುಮುದಿನಿ'ಯ 'ಅಂತಕನ ಕೋಲಾಹಲ' ಇಂಥವುಗಳಲ್ಲಿ ಅತ್ಯಂತ ಒಡೆದು ಕಾಣುವಂಥದು. ಅದರಂತೆ 'ಮಾಧವ ಕರುಣಾವಿಲಾಸ'ದ ಮಲಿಕ ಮತ್ತು ಮಲ್ಲಸರ್ಜನ ಮಲ್ಲಯುದ್ಧ, ಬಹಾವುದ್ದೀನನ ಶಿಕ್ಷೆಯ ಸನ್ನಿವೇಸ ಮೊದಲಾದುವು ತುಂಬ ಭಾವಪೂರ್ಣವಾಗಿ ಚಿತ್ರಿತವಾಗಿವೆ. ಇವುಗಳನ್ನು ಓದುತ್ತಿರುವಂತೆ ವಾಚಕನ ನರಗಳೆಲ್ಲವೂ ಬಿಗಿದುಕೊಳ್ಳುವಂತಾಗುತ್ತದೆ. "'ಮಾಧವ ಕರುಣಾವಿಲಾಸ'ದಲ್ಲಿ ಹೆಗ್ಗನ ಸಾಹಸಕೃತಿಗಳಾಗಲಿ, ಚಿನ್ನಮ್ಮನಂಥ ಕಲ್ಪಿತ

ಪಾತ್ರಗಳ ವ್ಯವಹರಣೆಗಳಾಗಲಿ ರೋಮಾಂಚಕಾರಿಯಾಗಿಲ್ಲ"[1] ಎಂದು ಶ್ರೀ ಕುರ್ತಕೋಟಿಯವರು ಹೇಳಿದ್ದರೂ, 'ಮಾಧವ ಕರುಣಾವಿಲಾಸ'ದಲ್ಲಿ ಅನೇಕ ರೋಮಾಂಚಕಾರಿ ಸನ್ನಿವೇಶಗಳಿವೆಯೆಂಬುದನ್ನು ಒಪ್ಪಬೇಕಾಗುತ್ತದೆ. ಕಾದಂಬರಿಯಲ್ಲಿ ಆಕಸ್ಮಿಕ ಘಟನೆಗಳು ಹೆಚ್ಚಾಗಿ ಬರುವದರಿಂದ ಇಂದಿನ ವಾಚಕರಿಗೆ ಅವು ಅಷ್ಟೊಂದು ರೋಮಾಂಚಕಾರಿಯಾಗಿ ತೋರದೆ ಹೋಗಬಹುದಾದರೂ, ಗಳಗನಾಥರ ವಾಚಕರು ಅವರ ಕಾದಂಬರಿಗಳನ್ನು ಓದಿ, ರೋಮಾಂಚಗೊಂಡರೆಂಬುವಲ್ಲಿ ಸಂದೇಹವಿಲ್ಲ. ಅರ್ಧ ಕಾದಂಬರಿಯನ್ನು ಓದಿದ ವಾಚಕರು 'ಮಾಧವ ಕರುಣಾವಿಲಾಸ' ಎಂದು ಪೂರ್ಣವಾಗುವುದೆಂದು ತವಕದಿಂದ ಎದುರುನೋಡುತ್ತಿದ್ದರು[2]— ಎಂಬುದನ್ನು ನೆನೆಯಬೇಕು.

ಗಳಗನಾಥರು ಅನೇಕ ಕಡೆಗೆ ಅನಾವಶ್ಯಕ ನಿಸರ್ಗವರ್ಣನೆಯನ್ನು ತಂದಿರುವುದು ನಿಜವಾದರೂ, ಕೆಲವೆಡೆ ಈ ವರ್ಣನೆಗಳು ಅರ್ಥಪೂರ್ಣವಾಗಿವೆ ಎಂಬುದನ್ನೂ ಕಡೆಗಣಿಸಲಾಗುವುದಿಲ್ಲ. 'ಕುಮುದಿನಿ'ಯ ಆರಂಭದಲ್ಲಿ ಬಂದಿರುವ ಹಾಳು ಹಂಪೆಯ ವರ್ಣನೆ, ಎಚ್ಚಮನಾಯಕನ ಮನಃಸ್ಥಿತಿಯ ಚಿತ್ರಣ, 'ಮಾವಿನಕಾಯಿ ಹೋಳಿನಂಥ ದೊಡ್ಡ ಕಣ್ಣುಗಳ' ಚಂಪೆಯ ವರ್ಣನೆ ಮೊದಲಾದುವು ಹಿತಮಿತವಾಗಿವೆಯಲ್ಲದೆ ಉಚಿತವೂ ಆಗಿವೆ. ಆದರೆ ಅದೇ ಕಾದಂಬರಿಯ ಮೂರನೆಯ ಪ್ರಕರಣದ ಆರಂಭದಲ್ಲಿರುವ ಅರುಣೋದಯದ ವರ್ಣನೆ ಅನಾವಶ್ಯಕವೆನಿಸುತ್ತದೆ. ಅದು ಕಾದಂಬರಿಯ ಕ್ರಿಯೆಯೊಂದಿಗೆ ಹೊಂದಿಕೆಯಾಗದೆ ನಿರರ್ಥಕವೆನಿಸಿದೆ. 10ನೆಯ ಪ್ರಕರಣದ ಆರಂಭದಲ್ಲಿಯ ಉಪವನದ ವರ್ಣನೆಯೂ ಅಷ್ಟೇ. ಅಲ್ಲಿ ಪಾರಿಜಾತ, ನಿಶಾಗಂಧಿ, ಮಾವು, ಜಂಬು ಮೊದಲಾದ ಗಿಡಮರಗಳೆಲ್ಲ ಏಕಕಾಲಕ್ಕೆ ಫಲ–ಪುಷ್ಪಗಳಿಂದ ಅಲಂಕೃತವಾಗಿದ್ದುವೆನ್ನುವುದು ಆಭಾಸಪ್ರಾಯವಾಗಿದೆ.

'ಮಾಧವ ಕರುಣಾವಿಲಾಸ'ದ ಯುದ್ಧ ವರ್ಣನೆಗಳು ಹೀಗೆಯೇ ಆಭಾಸಪ್ರಾಯವಾಗಿವೆಯೆಂದು ನೋಡಲಾಯಿತು. ಇಂಥವು ಪಲವು ಇದ್ದರೂ, ಕಾದಂಬರಿಯ ಆರಂಭದಲ್ಲಿ ಬಂದಿರುವ ಮಳೆಯ ವರ್ಣನೆ ಮಾತ್ರ ಅತಿ ಸಮಂಜಸ, ಸಮಯೋಚಿತ. ಆದರೆ ಉಳಿದ ಪ್ರಕರಣಗಳ ಆದಿಯಲ್ಲಿ ಬರುವ ಅನೇಕ ವರ್ಣನೆಗಳ ಬಗ್ಗೆ ಇದೇ ಮಾತುಗಳನ್ನು ಹೇಳಲು ಬರುವಂತಿಲ್ಲ.

ಆ ದೃಷ್ಟಿಯಿಂದ 'ದುರ್ಗದ ಬಿಚ್ಚುಗತ್ತಿ'ಯಲ್ಲಿ ಕಡಿಮೆ ವರ್ಣನೆಗಳಿದ್ದರೂ ಅವು ಬಹುಮಟ್ಟಿಗೆ ಸಮಂಜಸವಾಗಿವೆ. ಭರಮನಾಯಕನು ಕತ್ತಲೆಯ ರಾತ್ರಿಯಲ್ಲಿ ಕುಳಿತ ಗವಿ, ಆತ ಮಾಡಿದ ಕುದುರೆಯ ಚಾಕರಿ, ಮುರಗೀಶ ಗುರುಗಳು, ಹುಲಿಯ ಕಾಳಗವನ್ನು ನೋಡಲು ನೆರೆದ ಜನರು– ಇವರೆಲ್ಲರ ವರ್ಣನೆಗಳು ಚೆನ್ನಾಗಿವೆ. 'ಮಾಧವ ಕರುಣಾವಿಲಾಸ'ದ ಮಲ್ಲಯುದ್ಧದ ಕಾಲಕ್ಕೆ ನೆರೆದ ಜನಜಂಗುಳಿಯ ಮನೋವ್ಯಾಪಾರವನ್ನು ಬಣ್ಣಿಸಿದಂತೆಯೇ ಇಲ್ಲಿಯ ಹುಲಿಯ ಕಾಳಗ ನೋಡುವ ಜನರನ್ನೂ ಗಳಗನಾಥರು ಸಮರ್ಥವಾಗಿ ಚಿತ್ರಿಸಿರುವರು. ಇಂಥ ವರ್ಣನೆಗಳಲ್ಲಿ ಗಳಗನಾಥರ ಪ್ರತಿಭಾಸಂಪನ್ನತೆ ವ್ಯಕ್ತವಾಗುತ್ತದೆ.

---

1. ಕೆ. ಡಿ. ಕುರ್ತಕೋಟಿ: ಯುಗಧರ್ಮ ಹಾಗೂ ಸಾಹಿತ್ಯದರ್ಶನ, ಪುಟ 185

2. ಗಳಗನಾಥ: ಮಾಧವ ಕರುಣಾವಿಲಾಸ, ಪ್ರಸ್ತಾವನೆ.

ಗಳಗನಾಥರು ತಮ್ಮ ಕಾದಂಬರಿಗಳಲ್ಲಿ ಐತಿಹಾಸಿಕ ವಾತಾವರಣವನ್ನು ನಿರ್ಮಿಸುವಲ್ಲಿ ವಿಫಲರಾಗಿರುವರೆಂದೂ ಕೆಲವರು ಅಭಿಪ್ರಾಯ ಪಟ್ಟಿದ್ದಾರೆ. ಅವರ 'ಮಾಧವ ಕರುಣಾ ವಿಲಾಸ'ವನ್ನು ಅನುಲಕ್ಷಿಸಿ ಬರೆದ ಕೆಳಗಿನ ಮಾತುಗಳನ್ನು ನೋಡಬಹುದು.

"ಮೊದಲಿನ ಅನುಭವವನ್ನೆಲ್ಲ ಉಪಯೋಗಿಸಿಕೊಂಡು, ಇತಿಹಾಸದ ಪುನಃ ಸೃಷ್ಟಿ ಯೊಂದನ್ನೇ ಲಕ್ಷ್ಯದಲ್ಲಿಟ್ಟು ಈ ಕಾದಂಬರಿಯನ್ನು ಬರೆದಿದ್ದರೆ, ಕನ್ನಡದಲ್ಲಿ ಇದೊಂದು ಯುಗವನ್ನೇ ನಿರ್ಮಿಸಬಹುದಾಗಿತ್ತು".[1]

"ಚಾರಿತ್ರಿಕ ಕಾದಂಬರಿಕಾರ ತಾನು ಆಯ್ದುಕೊಂಡ ವಸ್ತುವಿನ ಸನ್ನಿವೇಶಗಳನ್ನು ಇತಿಹಾಸಕ್ಕೆ ಒಪ್ಪುವಂತೆ ನಿರ್ಮಿಸಿಕೊಳ್ಳಬೇಕಾಗುತ್ತದೆ. ಹಾಗೆ ನಿರ್ಮಿಸಬೇಕಾದರೆ ಕಾದಂ ಬರಿಕಾರ ತನ್ನ ಇಲ್ಲವೆ ತನ್ನ ಕಾಲದ ಶ್ರದ್ಧೆ, ನಂಬಿಕೆ, ಸಮಸ್ಯೆಗಳನ್ನು ಬಿಟ್ಟು ಆ ಕಾಲದ ಶ್ರದ್ಧೆ, ನಂಬಿಕೆ, ಸಮಸ್ಯೆ ಇತ್ಯಾದಿಗಳನ್ನು ಸೂಕ್ಷ್ಮವಾಗಿ ಅರ್ಥಮಾಡಿಕೊಂಡು, ಅದನ್ನು ತನ್ನ ಕಲ್ಪನೆಯ ಕಣ್ಣಿನಲ್ಲಿ ಕಂಡು, ತನ್ನ ಕಾದಂಬರಿಯಲ್ಲಿ ಆ ಕಾಲದ ಮಣ್ಣಿನ ವಾಸನೆ ಹೊಡೆಯುವಂತೆ ಮಾಡಬೇಕು".[2] ಆದರೆ ಗಳಗನಾಥರ ಕಾದಂಬರಿಗಳಲ್ಲಿ ಈ ಮಣ್ಣಿನ ವಾಸನೆ ಹೊಡೆಯುವುದಿಲ್ಲ—ಎಂದು ವಿಮರ್ಶಕರು ಅಭಿಪ್ರಾಯ ಪಟ್ಟಿರುವರು.

ಐತಿಹಾಸಿಕ ಕಾದಂಬರಿಯಲ್ಲಿ ಐತಿಹಾಸಿಕ ಕಥೆಯನ್ನೇ ಮಾತ್ರ ಹೇಳುವುದಕ್ಕಿಂತ ಆ ಕಾಲದ ಜೀವನವನ್ನು ಪುನರ್ನಿರ್ಮಿಸುವುದು ಆವಶ್ಯಕ. ಆ ಇತಿಹಾಸ ಕಾಲದ ಜನತೆಯ ಆಸೆ-ಆಕಾಂಕ್ಷೆಗಳು, ದುಃಖ-ದುಮ್ಮಾನಗಳು, ಅವರು ಎದುರಿಸಿದ ಸಮಸ್ಯೆಗಳು, ಕಂಡುಕೊಂಡ ಪರಿಹಾರಗಳು – ಇವೇ ಮೊದಲಾದವುಗಳ ಕಲಾತ್ಮಕ ಚಿತ್ರಣದಿಂದ ಐತಿಹಾಸಿಕ ವಾತಾ ವರಣವನ್ನು ನಿರ್ಮಿಸುವುದು ಸಾಧ್ಯ.

"The being of the age can only appear as a broad and many sided picture if the everyday life of the people, the joys and sorrows, crisis and confusions of average human beings are portrayed"[3] ಎಂದು ಹೇಳುವುದಾಗಲಿ,

"What matters therefore in the historical novel is not the re-telling of great historical events, but the poetic awakening of the people who figured in those events. What matters is that we should re-experience the social and human motives which led men to think, feel and act just as they did in historical reality"[4] ಎಂದು ಹೇಳುವುದಾಗಲಿ ನಿಜವೇ ಆಗಿದೆ.

---

1. ಕೆ. ಡಿ. ಕುರ್ತಕೋಟಿ : ಯುಗಧರ್ಮ ಹಾಗು ಸಾಹಿತ್ಯದರ್ಶನ, ಪುಟ 186
2. ಜಿ. ಎಚ್. ನಾಯಕ : 'ಗಳಗನಾಥರ ಮಾಧವ ಕರುಣಾವಿಲಾಸ', ಪ್ರಬುದ್ಧ ಕರ್ಣಾಟಕ, 46–3, ಪುಟ 47
3. George Lukacs: The Historical Novel, page 39.
4. ಅದೇ, ಪುಟ 42

ಆದರೆ ಇಂಥ ಒಂದು ಐತಿಹಾಸಿಕ ವಾತಾವರಣದ ಪುನರ್ನಿರ್ಮಾಣವು ಗಳಗನಾಥರಿಗೆ ಸಾಧ್ಯವಾಗುವುದು ಅಸಂಭವವೇ ಆಗಿತ್ತು. ಅದಕ್ಕೆ ಅನೇಕ ಕಾರಣಗಳಿದ್ದುವು. ಐತಿಹಾಸಿಕ ಘಟನೆಗಳ ಸತ್ಯವೇ ಇನ್ನೂ ಅನಿರ್ಧಾರಿತವಾಗಿದ್ದ ಕಾಲವದು. ಕನ್ನಡದಲ್ಲಿ ಓದಿ ತಿಳಿಯ ಬೇಕೆಂದರೆ ಅಂಥ ಗ್ರಂಥಗಳ ಅಭಾವವಿತ್ತು. ಇಂಗ್ಲಿಷಿನಲ್ಲಿ ಕೆಲವು ಗ್ರಂಥಗಳಿರಬಹುದಾದರೂ ಗಳಗನಾಥರ ಶಕ್ತಿಗೆ ಅದು ಮೀರಿದ ಮಾತು. ಅವರ ಈ ಅಡಚಣೆಗಳನ್ನು ಶ್ರೀ ಕುರ್ತಕೋಟಿ ಯವರೂ ತಿಳಿದಿಲ್ಲವೆಂದಲ್ಲ.

"'ಮಾಧವ ಕರುಣಾವಿಲಾಸ'ದ ಕಾಲ ಬಹಳ ಹಿಂದಿನದು. ಅಲ್ಲದೆ ಕನ್ನಡದಲ್ಲಿ ಇನ್ನೂ ಇತಿಹಾಸದ ಸಂಶೋಧನೆಯಾಗಿರಲಿಲ್ಲ. ಆ ಕಾಲದ ಜೀವನಕ್ರಮವನ್ನು ಹಿಡಿಯುವದು ಹೋಗಲಿ, ಊಹಿಸುವದೂ ಕಠಿಣವಾಗಿತ್ತು"[1] ಎಂದು ಅವರೇ ಒಪ್ಪಿಕೊಂಡಿರುವರು. "ಇದರಿಂದ ಗಳಗನಾಥರು ಸನ್ನಿವೇಶಗಳನ್ನು ಇತಿಹಾಸಕ್ಕೆ ಒಪ್ಪುವಂತೆ ನಿರ್ಮಿಸಲು ಸಮರ್ಥ ರಾಗಲಿಲ್ಲ".[2]

ಆದರೂ, ಮಹಮ್ಮದೀಯರ ಧಾಳಿ, ಅದರಿಂದ ಹಿಂದುಗಳಿಗುಂಟಾದ ವಿಪತ್ತುಗಳು, ಹಿಂದೂ ವೀರರ ಸಂಘಟನೆಯ ಪ್ರಯತ್ನ, ತಘಲಕ ಮಹಮ್ಮದನ ಕ್ರೂರತೆ, ರಾಜ್ಯಸ್ಥಾಪನೆ ಗಾಗಿ ಸಾಮಾನ್ಯ ಜನರು ಸುವರ್ಣವೃಷ್ಟಿ ಕರೆಯಲು ಸಿದ್ಧರಾದುದು ಇವೇ ಮೊದಲಾದವು ಗಳೂ, ವಿಜಯನಗರದ ಪತನದಿಂದ ಹಾಳಾದ ಹಂಪೆಯ ಸ್ಥಿತಿ, ಅದನ್ನು ಕಂಡು ವೀರರು ಸಂತಾಪಗೊಳ್ಳುವ ಸ್ಥಿತಿ, ಹಿಂದೂ ನಾಯಕರಲ್ಲಿಯ ಆಂತರಿಕ ಅಂತಃಕಲಹ ಮೊದಲಾದವು ಗಳೂ, 'ಮಾಧವ ಕರುಣಾವಿಲಾಸ' ಮತ್ತು 'ಕುಮುದಿನಿ'ಗಳಲ್ಲಿ ಚಿತ್ರಿತವಾಗಿವೆ. ಆದರೆ ಲೂಕ್ಯಾಕ್ಸ್ ಅವರು ಅಪೇಕ್ಷಿಸುವಂಥ ಜನಸಾಮಾನ್ಯರ ಜೀವನಚಿತ್ರ ಮಾತ್ರ ಗಳಗನಾಥರಿಂದ ಮೂಡಿ ಬರಲಿಲ್ಲ.

ಗಳಗನಾಥರಿಂದ ಇದು ಸಾಧ್ಯವಾಗಲಿಲ್ಲವಷ್ಟೇ ಅಲ್ಲ, ಆ ಕಾಲದಲ್ಲಿ ಭಾರತದ ಸ್ಕಾಟ ನೆಂದು ಖ್ಯಾತರಾದ ಬಂಗಾಲದ ಬಂಕಿಮಚಂದ್ರರಿಂದಲೂ ಕೂಡ ಇದು ಸಾಧ್ಯವಾಗಿಲ್ಲ. ಅವರ ಐತಿಹಾಸಿಕ ಕಾದಂಬರಿಗಳೆಂದು ಖ್ಯಾತವಾದ ಅನೇಕ ಕೃತಿಗಳನ್ನು ಅವರೇ ಮುಂದೆ ಐತಿಹಾಸಿಕವೆಂದು ಕರೆಯಲಿಲ್ಲ. ಅವರ 'ದುರ್ಗೇಶ ನಂದಿನೀ', 'ಮೃಣಾಲಿನೀ', 'ಚಂದ್ರ ಶೇಖರ', 'ರಾಜಸಿಂಹ', 'ಆನಂದ ಮಠ', 'ದೇವೀ ಚೌಧುರಾಣಿ', 'ಸೀತಾರಾಮ'—ಇವುಗಳು ಐತಿಹಾಸಿಕ ಹಿನ್ನೆಲೆಯಲ್ಲಿ ಬರೆದವುಗಳಾದರೂ, ಅವರ ಅಭಿಪ್ರಾಯದಲ್ಲಿ 'ರಾಜಸಿಂಹ' ಮಾತ್ರ ನಿಜವಾದ ಐತಿಹಾಸಿಕ ಕಾದಂಬರಿ.[3] ಈ ಎಲ್ಲ ಕಾದಂಬರಿಗಳಲ್ಲಿ ತುಸು ಮಟ್ಟಿಗೆ ಐತಿಹಾಸಿಕ ಘಟನೆಗಳು ಆಧಾರವಾಗಬಹುದು. ಆದರೆ ಅಲ್ಲಿ ಚಿತ್ರಿತವಾದ ಜೀವನವೆಲ್ಲ ಐತಿಹಾಸಿಕ ವೆನ್ನಬಹುದೇ ?

ಈ ಮಾತು ಮರಾಠಿಯ ಖ್ಯಾತ ಐತಿಹಾಸಿಕ ಕಾದಂಬರಿಕಾರರಾದ ಆಪಟೆಯವರಿಗೂ ಅನ್ವಯಿಸುತ್ತದೆ. "ಇತಿಹಾಸವನ್ನು ಆ ಕಾಲದ ಪಾತ್ರಗಳ ಮೂಲಕ ಜೀವಂತವಾಗಿಸುವ

1. ಕೆ. ಡಿ. ಕುರ್ತಕೋಟಿ : ಯುಗಧರ್ಮ ಹಾಗೂ ಸಾಹಿತ್ಯದರ್ಶನ, ಪುಟ 185
2. ಜಿ. ಎಚ್. ನಾಯಕ : 'ಗಳಗನಾಥರ ಮಾಧವ ಕರುಣಾವಿಲಾಸ', ಪ್ರಬುದ್ಧ ಕರ್ಣಾಟಕ 46–3, ಪುಟ 48
3. ಎ. ಆರ್. ಕೃಷ್ಣಶಾಸ್ತ್ರೀ : ಬಂಕಿಮಚಂದ್ರ, ಪುಟ 141

ಮಹತ್ತರವಾದ ಕಲೆ ಆಪಟೆಯವರ ವಿಶೇಷ ಗುಣಗಳಲ್ಲೊಂದಾಗಿದೆ"[1] ಎಂದು ಶ್ರೀ ಕುರ್ತ ಕೋಟಿಯವರು ಹೇಳಿರುವರಾದರೂ, ಅವರು ಭಾವಿಸಿದಷ್ಟು ಶಕ್ತಿಯನ್ನು ಆಪಟೆಯವರು ಪಡೆದಿರಲಿಲ್ಲ. ಆಪಟೆಯವರ ಸಾಮಾಜಿಕ ಕಾದಂಬರಿಗಳಲ್ಲಿದ್ದ ಮೂಗಿಗೆ ಹೊಡೆಯುವ ಮಣ್ಣಿನ ವಾಸನೆ ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಅನುಭವಕ್ಕೆ ಬರುವುದಿಲ್ಲ. ಅವರ ಐತಿಹಾಸಿಕ ಕಾದಂಬರಿಯ ಪಾತ್ರಗಳು ಕೂಡ ಪುಣೆಯ ಸದಾಶಿವ ಪೇಟೆಯ ನಾಗರಿಕ ಮರಾಠಿ ಯನ್ನೇ ಮಾತನಾಡುತ್ತವೆಯೆಂಬ ಆರೋಪಕ್ಕೂ ಆಪಟೆಯವರು ಗುರಿಯಾಗಿರುವರು.

ಗಳಗನಾಥರ ಅಡಚಣೆಗಳನ್ನು ಲಕ್ಷಿಸಿದಾಗ ಆಪಟೆಯವರು ಸುದೈವಿಗಳೇ ಸರಿ. ಅವರಿಗೆ ಮಹಾರಾಷ್ಟ್ರದ ಇತಿಹಾಸದ ಸಾಮಗ್ರಿ ಬೇಕಾದಷ್ಟು ಲಭ್ಯವಿತ್ತು. ಶಿವಾಜಿಯ ಕಾಲವೂ ವಿಜಯನಗರದ ಕಾಲಕ್ಕಿಂತ ಅರ್ವಾಚೀನವಾದುದಲ್ಲದೆ, ಮರಾಠಿಯಲ್ಲಿ ಅನೇಕ 'ಬಖರ' ಗಳೆಂಬ ಐತಿಹಾಸಿಕ ದಾಖಲೆಗಳೂ, 'ಪೋವಾಡೆ' ಎಂಬ ವೀರ ಗೀತೆಗಳೂ ರಚನೆಯಾಗಿದ್ದವು. ಬಖರಗಳಂತೂ ಇತಿಹಾಸಕಾಲದ ಘಟನೆಗಳನ್ನೂ, ಜೀವನವನ್ನೂ ಆದೇ ಕಾಲಕ್ಕೆ ಕಂಡು ಬರೆದಂಥ ದಾಖಲೆಗಳು. ಅಲ್ಲದೆ ಆಪಟೆಯವರು ಕಾಲೇಜಿನ ಮೆಟ್ಟಿಲನ್ನೂ ತುಳಿದವರು. ಸ್ಕಾಟ, ಡೂಮಾ ಅಂಥವರನ್ನು ಇಂಗ್ಲೀಷನಲ್ಲಿ ಓದಿ, ಐತಿಹಾಸಿಕ ಕಾದಂಬರಿಯ ಹಿಡಿತವನ್ನು ಕೈವಶಮಾಡಿಕೊಂಡವರು. ಆದರೂ ಆಪಟೆಯವರು "ಐತಿಹಾಸಿಕ ಕಾಲದ ಸಾಮಾಜಿಕ ಪರಿ ಸ್ಥಿತಿಯ ಕಡೆಗೆ ಏನೂ ಲಕ್ಷಕೊಡಲಿಲ್ಲ"[2] ಎಂದು ಅವರನ್ನು ಟೀಕಿಸಲಾಗಿದೆ. ನಿಜವಾಗಿ ನೋಡಿದರೆ, ಸ್ಕಾಟ, ಥ್ಯಾಕರೇ ಅವರ ಕಾದಂಬರಿಗಳನ್ನು ಕಣ್ಣೆದುರಿಗೆ ಇಟ್ಟುಕೊಂಡು ನಾವು ಆಪಟೆಯವರನ್ನು ವಿಮರ್ಶಿಸುವುದು ಸರಿಯಲ್ಲ. ಸ್ಕಾಟನಂಥ ಆಂಗ್ಲ ಲೇಖಕರಿಗಿರುವ ಐತಿ ಹಾಸಿಕ ವಿವರವಾದ ಸಾಮಗ್ರಿಯ ವಿಪುಲತೆಯನ್ನು ಗಣಿಸಿದರೆ ಅವರಿಗಿದ್ದ ಅನುಕೂಲತೆಯ ಕಲ್ಪನೆ ಬರುತ್ತದೆ. ಹಾಗಿರುವಾಗ ಗಳಗನಾಥರ ಐತಿಹಾಸಿಕ ಕಾದಂಬರಿಗಳಲ್ಲಿ 'ಮಣ್ಣಿನ ವಾಸನೆ ಹೊಡೆಯುವುದಿಲ್ಲ' ಎಂದು ಟೀಕಿಸುವುದು ನ್ಯಾಯಸಮ್ಮತವಾಗಲಾರದು.[3]

ಆದರೂ ಗಳಗನಾಥರು ಆ ಕಾಲದ ಐತಿಹಾಸಿಕ ವಾತಾವರಣವನ್ನು ನಿರ್ಮಿಸಲು ಪ್ರಯತ್ನಿಸಿದ್ದಾರೆ. ಗುರುಕುಲದಲ್ಲಿಯ ಶಿಕ್ಷಣ, ಪಲ್ಲಕ್ಕಿಯ ಮತ್ತು ಒಂಟಿ ಕತ್ತೆ ಎತ್ತುಗಳ ಮೇಲೆ ಪ್ರಯಾಣ, ಸಾಮಾನ್ಯ ಜನರ ಮೇಲೆ ಧರ್ಮದ ಮತ್ತು ಧರ್ಮಗುರುಗಳ ಪ್ರಭಾವ, ಅವರ ಪಾಪಭೀರು ಸ್ವಭಾವ, ಎಲ್ಲ ಧರ್ಮಗುರುಗಳನ್ನೂ ಆದರದಿಂದ ಕಾಣುವ ಕನ್ನಡಿಗರ ವಿಶಾಲ ಮನೋಭಾವ, ಆ ಕಾಲಕ್ಕೆ ಪ್ರಚಲಿತವಿದ್ದ ಉಗ್ರಶಿಕ್ಷೆಯ ವರ್ಣನೆಗಳು, ಆ ಕಾಲಕ್ಕೆ ನಡೆಯುತ್ತಿದ್ದ ಮಲ್ಲಯುದ್ಧ, ಅವುಗಳನ್ನು ನೋಡಲು ನೆರೆಯುತ್ತಿದ್ದ ಜನರ ಮನೋಭಾವ, ಹುಲಿಯ ಕಾಳಗ, ತಮ್ಮ ಕುದುರೆಯನ್ನು ಆತ್ಮೀಯತೆಯಿಂದ ಕಾಣುವ ವೀರರು, ಸರದಾರ ರಲ್ಲಿಯ ಸ್ವಾಮಿನಿಷ್ಠೆ, ವೀರರ ಗುಪ್ತ ಸಿದ್ಧತೆಗಳು, ವೇಷ ಬದಲಿಸಿಕೊಂಡು ತಿರುಗುವುದು, ದಾಸ–ದಾಸಿಯರ ಧನಲೋಭ–ಕಪಟತನ–ಕೃತಘ್ನತೆಗಳು, ವಿಜಯನಗರ ಸ್ಥಾಪನೆಗಿಂತ

1. ಕೆ. ಡಿ. ಕುರ್ತಕೋಟಿ : ಯುಗಧರ್ಮ ಹಾಗು ಸಾಹಿತ್ಯದರ್ಶನ, ಪುಟ 185
2. ಪ್ರಾ. ಕುಸುಮಾವತಿ ದೇಶಪಾಂಡೆ : ಮರಾಠೀ ಕಾದಂಬರಿ (ಪಹಿಲೇ ಶತಕ), ಪುಟ 120
3. ಕನ್ನಡದಲ್ಲಿ ಆರಂಭಕಾಲದಲ್ಲಿ ಬಂದ ಎಲ್ಲ ಐತಿಹಾಸಿಕ ಕಾದಂಬರಿಗಳೂ ಈ ವಾತಾವರಣ ಚಿತ್ರಣ ದಿಂದ ವಂಚಿತವಾಗಿದ್ದುವು. "ಆಯಾ ಕಾಲದ ಸಾಮಾಜಿಕ ಧರ್ಮಗಳು, ನಡೆನುಡಿಗಳು ಯೋಗ್ಯವಾಗಿ ಚಿತ್ರಿತವಾಗುತ್ತಿರಲಿಲ್ಲ" ಎಂದು ಕನ್ನಡ ಐತಿಹಾಸಿಕ ಕಾದಂಬರಿಗಳ ಸಮೀಕ್ಷೆ ಮಾಡುತ್ತ ಶ್ರೀ ಗುರುನಾಥ ಜೋಶಿ ಅವರು ಹೇಳಿರುವುದು ಸರಿಯೇ ಆಗಿದೆ. (ಕನ್ನಡ ನುಡಿ, 1959, ಪುಟ 41)

ಮೊದಲು ಮುಹಮ್ಮದೀಯರು ಎಸಗುತ್ತಿದ್ದ ಅಪರಾಧಗಳು, ಸ್ತ್ರೀಯರ ಅಪಹರಣ, ಮುಹಮ್ಮದೀಯರ ಉನ್ಮತ್ತ ವರ್ತನೆ-ಮಾತುಗಳು, ಹಿಂದೂ ವೀರರ ಅಂಜುಬುರುಕತನ, ಕೆಲವು ವೀರರ ಪ್ರತಿಭಟನೆ, ಮಹಿಳೆಯರ ವೀರಾವೇಶ, ರಾಜಗೃಹಗಳಲ್ಲಿ ನಡೆಯುತ್ತಿದ್ದ ಕ್ರೂರತನದ ಕೃತ್ಯಗಳು–ಇವೇ ಮೊದಲಾದವುಗಳ ಚಿತ್ರಗಳು ಐತಿಹಾಸಿಕ ವಾತಾವರಣವನ್ನು ನಿರ್ಮಿಸಲು ಸಹಾಯಕವಾಗಿವೆ. ಗಳಗನಾಥರ ಭಾಷೆ ಹೆಚ್ಚಾಗಿ ಆ ಕಾಲವನ್ನು ಚಿತ್ರಿಸಲು ಸಹಾಯಕವಾಗಿಲ್ಲವಾದರೂ 'ದೋಸ್ತ ಸಾಹೇಬ' 'ಸಲಾಮು ಮಾಡಿ' 'ಸಾಲದಾವಣಿ' 'ಸಿಕ್ಕಾಮೋರ್ತಬು' 'ಬಾಜಾರ ಬುಣುಗಿನವರು' 'ತೋಬಾ ತೋಬಾ' 'ರಾಮ ಟೆಂಕಿಯ ವರಗಳು' 'ಪಟ್ಟಾಕತ್ತಿ' ಮೊದಲಾದ ಪದಪ್ರಯೋಗಗಳು ಕೂಡ ಐತಿಹಾಸಿಕ ಕಥೆಯನ್ನು ಸಹಜಗೊಳಿಸಲು ಸಹಾಯಕವಾಗಿದೆ.

"ಚರಿತ್ರೆಯೆಂದರೆ ಕೇವಲ ರಾಜಕೀಯ ಚರಿತ್ರೆಯಾಗಬೇಕಾಗಿಲ್ಲ. ರಾಜರ ಯುದ್ಧ, ತಂತ್ರ, ಕೌಲು, ಕರಾರು ಇವಿಷ್ಟೇ ದೇಶದ ಚರಿತ್ರೆಯಲ್ಲ. ರಾಜನೊಬ್ಬನಿಂದ ದೇಶವಾಗುವುದಿಲ್ಲ; ದೇಶವೆಂದರೆ ಅದರ ಪ್ರಜೆಗಳು, ಅವರ ಆಗುಹೋಗುಗಳು, ದೇಶದ ಚರಿತ್ರೆಯ ಹಾಸು ಹೊಕ್ಕುಗಳು; ಆದ್ದರಿಂದ ಜನರ ಆರ್ಥಿಕ ಸ್ಥಿತಿ, ಸುಖಸಂಪತ್ತುಗಳು, ಕ್ಷಾಮಡಾಮರಗಳು, ಧರ್ಮ, ಕರ್ಮ, ಶಾಂತಿ ಸಂತೃಪ್ತಿ, ಕಲೆ, ಶಾಸ್ತ್ರ ಇವೆಲ್ಲವೂ ದೇಶದ ಚರಿತ್ರೆಯಲ್ಲಿ ಬರತಕ್ಕವುಗಳೇ, ಬರಬೇಕಾದವುಗಳೇ"[1] "ಕಾದಂಬರಿಕಾರನು ಒಳಸಂಗತಿಗಳನ್ನು ಚಿತ್ರಿಸುವುದಕ್ಕೆ ಯತ್ನಿಸಬೇಕು– ಚರಿತ್ರೆಯ ಸಂಗತಿಗಳಿಗೆ ಅಂಟಿಕೊಂಡು ಹೋಗುವುದು ನಿಷ್ಪ್ರಯೋಜಕ. ಅದು ಚರಿತ್ರಲೇಖಕನ ಕೆಲಸ. ಚರಿತ್ರೆಯ ಭಿತ್ತಿಯಲ್ಲಿ ಒಂದು ಸ್ಥೂಲವಾದ ರೂಪರೇಖೆ ಸಿಕ್ಕಿದರೆ ಅದನ್ನು ಚಿತ್ರಮಯವಾಗಿ ಮಾಡುವುದು, ಜೀವ ತುಂಬುವುದೂ ಸುಲಭ; ಅದೇ ಕಲೆಗಾರನ ಕೆಲಸ"[2] "it (historical novel) should represent faithfully the manners, tone, and temper of the age with which it deals"[3]—ಎಂಬಂಥ ಮಾತುಗಳೆಲ್ಲ ಐತಿಹಾಸಿಕ ಕಾದಂಬರಿಯೆಂದರೆ ಕೇವಲ ಇತಿಹಾಸದ ನಿರೂಪಣೆಯಲ್ಲ, ಆ ಕಾಲದ ವಾತಾವರಣ ಚಿತ್ರಣವೂ ಮುಖ್ಯವೆಂಬುದನ್ನೇ ಹೇಳುತ್ತವೆ. ಗಳಗನಾಥರೂ ಕೂಡ ತಮ್ಮ ಪರಿಮಿತ ಅವಕಾಶದಲ್ಲಿ ಇದನ್ನು ಸಾಧಿಸಲಿಕ್ಕೆ ಯತ್ನಿಸಿದ್ದಾರೆ ಎಂದು ಹೇಳಿದರೆ ತಪ್ಪಾಗಲಾರದು. ಆದರೂ ಗಳಗನಾಥರು ತಮ್ಮ ಕಾದಂಬರಿಗಳಲ್ಲಿ ಐತಿಹಾಸಿಕ ವಾತಾವರಣವನ್ನು ನಿರ್ಮಿಸುವಲ್ಲಿ ಸಂಪೂರ್ಣ ಯಶಸ್ಸನ್ನು ಗಳಿಸಲಿಲ್ಲ ಎಂಬುದನ್ನು ಒಪ್ಪಿಕೊಳ್ಳಬೇಕು.

ಬಂಕಿಮಚಂದ್ರರು ಇತಿಹಾಸಕ್ಕೆ ಬಾಧೆ ತಂದರೂ, ಸ್ಕಾಟ್‌ನಂತೆ ಪಾತ್ರಗಳನ್ನು ರಮ್ಯವಾಗಿ ಚಿತ್ರಿಸಿ ಕಾದಂಬರಿಯನ್ನು ಸಜೀವಗೊಳಿಸಿದರು. ಗಳಗನಾಥರು ಇತಿಹಾಸಕ್ಕೂ ಬಾಧೆಯನ್ನು ತರದೆ, ಕಲೆಗೂ ಹೆಚ್ಚಿನ ಅನ್ಯಾಯವನ್ನು ಮಾಡದೆ ತಮ್ಮ ಸ್ವತಂತ್ರ ಐತಿಹಾಸಿಕ ಕಾದಂಬರಿಗಳನ್ನು ಬರೆಯಲು ಪ್ರಯತ್ನಿಸಿದರು. "He has thus to satisfy at

1. ಎ. ಆರ್. ಕೃಷ್ಣಶಾಸ್ತ್ರೀ: ಬಂಕಿಮಚಂದ್ರ, ಪುಟ 142
2. ಅದೇ, ಪುಟ 143
3. W. H. Hudson: An Introduction to the Study of Literature, page 213

once the claims of history and the claims of art"[1] ಎಂದು ಹಡ್‌ಸನ್ ಹೇಳಿರುವಂತೆ ಎರಡನ್ನೂ ಸಾಧಿಸಿದ ಐತಿಹಾಸಿಕ ಕಾದಂಬರಿಕಾರರು ಬಹು ವಿರಳ. ಗಳಗನಾಥರ ಸ್ವತಂತ್ರ ಐತಿಹಾಸಿಕ ಕಾದಂಬರಿಗಳನ್ನು ಈ ದೃಷ್ಟಿಯಿಂದ ನೋಡಿದಾಗ, ಅವರು ಕಲೆಗೆ ಇನ್ನೂ ಹೆಚ್ಚಿನ ನ್ಯಾಯವನ್ನು ಒದಗಿಸಬೇಕಾಗಿತ್ತೆಂದು ತೋರುತ್ತದೆ. 'ದುರ್ಗದ ಬಿಚ್ಚುಗತ್ತಿ'ಯ ಆರಂಭದ ಎರಡು ಪ್ರಕರಣಗಳಲ್ಲಿ ಅವರು ಚಿತ್ರದುರ್ಗದ ಇತಿಹಾಸವನ್ನು ಕೇವಲ ಇತಿಹಾಸದ ಶಿಕ್ಷಕರಂತೆ ಹೇಳಿರುವರೆಂಬುದನ್ನು ಕಡೆಗಣಿಸುವಂತಿಲ್ಲ. ಆದರೆ 'ಕುಮುದಿನಿ' ಮಾತ್ರ ಐತಿಹಾಸಿಕ ಸತ್ಯವನ್ನು ಕಾಯ್ದುಕೊಂಡು ಕಾದಂಬರಿಯಾಗಿಯೇ ಉಳಿದಿದೆ. ಆ ದೃಷ್ಟಿಯಿಂದ ಅವರ ಮೂರು ಸಂಪೂರ್ಣ ಸ್ವತಂತ್ರ ಐತಿಹಾಸಿಕ ಕಾದಂಬರಿಗಳಲ್ಲಿ ಗಾತ್ರದಿಂದ 'ಮಾಧವ ಕರುಣಾವಿಲಾಸ'ದಷ್ಟು ದೊಡ್ಡದಾಗದಿದ್ದರೂ, ಸತ್ತ್ವದಲ್ಲಿ 'ಕುಮುದಿನಿ'ಯೇ ಹೆಚ್ಚು ಯಶಸ್ಸನ್ನು ಪಡೆದಿದೆಯೆನ್ನಬೇಕು. ಆದರೂ ವಿಶಾಲವಾದ ಭಿತ್ತಿಯಲ್ಲಿ ಮೂಡಿಬಂದ 'ಮಾಧವ ಕರುಣಾವಿಲಾಸ'ದ ಮಹತ್ತ್ವ ಅದಕ್ಕಿದ್ದೇ ಇದೆ.

ಮುಖ್ಯವಾಗಿ ಗಳಗನಾಥರು ಕಾದಂಬರಿಯನ್ನು ಒಂದು ಕಲೆಯ ರೂಪವೆಂದು ಪರಿಗಣಿಸಲೇ ಇಲ್ಲ. ಈ ಮಾತು ಗಳಗನಾಥರಿಗೆ ಮಾತ್ರ ಪರಿಮಿತವಾಗುವುದಿಲ್ಲ. ಆ ಕಾಲದ ಎಲ್ಲ ಭಾರತೀಯ ಲೇಖಕರಿಗೂ ಅನ್ವಯಿಸುತ್ತದೆ. ಅಲ್ಲದೆ ಆಗ ಆಪಟೆ ಮತ್ತು ಬಂಕಿಮಚಂದ್ರರೇ ಗಳಗನಾಥರ ಎದುರಿಗೆ ಕಾಣುತ್ತಿದ್ದರು. ಆಯ್ದುಕೊಳ್ಳಲಿಕ್ಕೆ ಅವರಿಗೆ ಬೇರೆ ಪರಂಪರೆಯೇ ಇರಲಿಲ್ಲ. ಭಾರತೀಯ ಕಾದಂಬರಿಯ ಉದಯಕಾಲದ ಸ್ಥಿತಿಯನ್ನು ಕುರಿತು ಬರೆಯುತ್ತ, ಶ್ರೀ ಎಂ. ಜಿ. ಕೃಷ್ಣಮೂರ್ತಿ ಅವರು, "ಚಾರಿತ್ರಿಕ ಕಾದಂಬರಿಕಾರರು ಭಾರತದ ಗತ ವೈಭವವನ್ನು ಚಿತ್ರಿಸಲು ತಮ್ಮ ಕಾದಂಬರಿಗಳನ್ನು ಉದ್ದೇಶಪೂರ್ವಕವಾಗಿ ಉಪಯೋಗಿಸಿದರು. ಸ್ಥಳೀಯ ಚರಿತ್ರೆಯ ಘಟನಾವಳಿಗಳನ್ನು ಕಾದಂಬರೀಕರಿಸಲಾಯಿತು..... ಚರಿತ್ರೆ ಸಾಹಸ-ಕಾದಂಬರಿ(ರೋಮಾನ್ಸ್)ಯಾಗಿ ಬಿಟ್ಟು ಜೀವನದ ಸಂಕೀರ್ಣತೆಯನ್ನು ತಿಳಿಸುವುದೇ ಇಲ್ಲ....ಈ ಕಾದಂಬರಿಗಳು ಒಂದು ನಿರ್ದಿಷ್ಟ ರೀತಿಯ ಓದುಗನಲ್ಲಿ ಮಾತ್ರ ಅಸ್ಪಷ್ಟ, ಉನ್ನತ ಭಾವನೆಗಳನ್ನು ಉದ್ರೇಕಿಸುತ್ತಿದ್ದುವು....ಇವರಿಗೆ ತಾವು ಉಪಯೋಗಿಸುತ್ತಿದ್ದ ಪ್ರಕಾರದ ಸಾಧ್ಯತೆಗಳ ಅರಿವಿಲ್ಲದುದಕ್ಕೂ, ಮತ್ತು ಅವರ ವಿಫಲತೆಗೂ ಪರಸ್ಪರ ಸಂಬಂಧವಿದೆ ಎಂದು ಅಂತಿಮ ವಿಶ್ಲೇಷಣೆಯಿಂದ ವ್ಯಕ್ತವಾಗುತ್ತದೆ".[2] ಎಂದು ಹೇಳಿರುವುದನ್ನು ಗಮನಿಸಬಹುದು. ಅದರಂತೆ,

"ಕಾದಂಬರಿಯು ಒಂದು ಕಲಾತ್ಮಕ ಕೃತಿಯೆಂಬುದಾಗಲಿ ಅದರ ಸ್ವರೂಪವಾಗಲಿ ಆಗ ತಿಳಿದಿರಲಿಲ್ಲ"[3] ಎಂದು 1920ರ ಪೂರ್ವದ ಕನ್ನಡ ಕಾದಂಬರಿಗಳ ಬಗ್ಗೆ ಶ್ರೀ ಎಸ್. ಅನಂತನಾರಾಯಣ ಅವರು ಹೇಳಿರುವುದನ್ನೂ ಗಮನಿಸಬಹುದು.

---

1. W. H. Hudson : An Introduction to the study of Literature, page 214
2. ಎಂ. ಜಿ. ಕೃಷ್ಣಮೂರ್ತಿ: ಆಧುನಿಕ ಭಾರತೀಯ ಸಾಹಿತ್ಯ ಮತ್ತು ಇತರ ಲೇಖನಗಳು, ಪುಟ 19, 20.
3. ಜಿ. ಎಸ್. ಶಿವರುದ್ರಪ್ಪ : ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ (ಬೆಂಗಳೂರು ವಿಶ್ವವಿದ್ಯಾಲಯ) ದಲ್ಲಿ, ಎಸ್. ಅನಂತನಾರಾಯಣ ಅವರ ಲೇಖನ, 'ಕಾದಂಬರಿ 1920-47', ಪುಟ 103.

ಈ ಇಬ್ಬರೂ ಹೇಳಿರುವುದನ್ನು ನೋಡಿದರೆ ಈ ಶತಮಾನದ ಆದಿಭಾಗದಲ್ಲಿ ನಮ್ಮ ದೇಶದಲ್ಲಿ, ನಮ್ಮ ನಾಡಿನಲ್ಲಿ ಕಾದಂಬರಿ ಎಂಥ ಅಪರಿಪೂರ್ಣ ಮತ್ತು ಪ್ರಾಕೃತ ಸ್ವರೂಪದಲ್ಲಿ ಇದ್ದಿತೆಂಬ ಕಲ್ಪನೆ ಬರುತ್ತದೆ.[1]

ಇಂಥ ಪರಿಸರದಲ್ಲಿ, ಪರಿಮಿತ ಶಕ್ತಿಯ ಗಳಗನಾಥರು ಹಲವಾರು ಕಾದಂಬರಿಗಳನ್ನು ಸ್ವಾತಂತ್ರ್ಯವಹಿಸಿ ಅನುವಾದಿಸಿದರಲ್ಲದೆ, ಕೆಲವಾದರೂ ಸ್ವತಂತ್ರ ಕಾದಂಬರಿಗಳನ್ನು ಬರೆದರೆಂಬುದೇ ದೊಡ್ಡ ಮಾತು. ಕಾದಂಬರಿ ಎಂಬುದು ಒಂದು ಕಲಾತ್ಮಕ ರೂಪವುಳ್ಳ ಸಾಹಿತ್ಯ ಪ್ರಕಾರವೆಂದು ಅರಿತ ಇಂದಿನ ವಿಮರ್ಶಕನಿಗೆ ಗಳಗನಾಥರ 'ಮಾಧವ ಕರುಣಾವಿಲಾಸ'ದಂಥ ಕೃತಿಗಳು ಆಭಾಸವಾಗಿ ಕಾಣಬಹುದು. ಆದರೆ ಒಂದು ಮಾಂತ್ರಿಕ ಶೈಲಿಯಲ್ಲಿ ಕಥೆಯನ್ನು ಹೇಳುವುದೇ ಕಲೆಯೆಂದು ಗ್ರಹಿಸಿದ ಕಾಲದಲ್ಲಿ; ಅಥವಾ ಇತಿಹಾಸ, ರಮ್ಯಕಲ್ಪನೆ, ಆದರ್ಶ ಮತ್ತು ಉಪದೇಶದ ಅಂಶಗಳಿಂದ ಕೂಡಿದ ರೋಮ್ಯಾಂಟಿಕ್ ದೀರ್ಘಕಥೆಗಳನ್ನೇ ಕಾದಂಬರಿ—ಎಂದು ತಿಳಿದ ಕಾಲದಲ್ಲಿ ಜನಿಸಿದ ಗಳಗನಾಥರು 'ಪದ್ಮನಯನೆ', 'ಕುಮುದಿನಿ', 'ಮಾಧವ ಕರುಣಾವಿಲಾಸ', 'ದುರ್ಗದ ಬಿಚ್ಚುಗತ್ತಿ'ಗಳನ್ನಲ್ಲದೆ ಇನ್ನೇನನ್ನು ಬರೆಯಬೇಕಾಗಿತ್ತು? ಅವರ ಧಾರ್ಮಿಕ ಮತ್ತು ನೈತಿಕ ಬೋಧನೆಯ ಫಲದಿಂದ ಅವರ ಕಾದಂಬರಿಗಳು ಇನ್ನೂ ವಿಶಿಷ್ಟವಾದುವು.

ಈ ಹಿನ್ನೆಲೆಯಲ್ಲಿ ನೋಡಿದಾಗ ಮಾತ್ರ ಗಳಗನಾಥರ ಸ್ವತಂತ್ರ ಕಾದಂಬರಿಗಳ ಮಹತ್ತ್ವ ಅರ್ಥವಾಗುತ್ತದೆ.

1. ಇಂಗ್ಲಿಷದಲ್ಲಿ ಕೂಡ ಇಂಥ ಸ್ಥಿತಿ ಬಹುಕಾಲ ಇದ್ದಿತು. ಇತ್ತೀಚೆಗೆ ಮಾತ್ರ ಕಾದಂಬರಿಯನ್ನು ಒಂದು ಪ್ರಮುಖ ಸಾಹಿತ್ಯಪ್ರಕಾರವೆಂದು ತಿಳಿದು ಗಂಭೀರವಾಗಿ ವಿಮರ್ಶಿಸಲಾಗುತ್ತಿದೆ.

# ಇತರ ಕೃತಿಗಳು

ಗಳಗನಾಥರ ಒಟ್ಟು 50 ಕೃತಿಗಳಲ್ಲಿ 22 ಮಾತ್ರ ಕಾದಂಬರಿಗಳು.[1] ಉಳಿದ 28 ಕೃತಿಗಳ ಬಗ್ಗೆ ಈಗ ಸ್ಥೂಲವಾಗಿ ಪರಿಶೀಲಿಸಬಹುದು.

ಈ ಕೃತಿಗಳನ್ನು,

1) ಪೌರಾಣಿಕ ಗ್ರಂಥಗಳು

2) ಸತ್ಪುರುಷರ ಚರಿತ್ರೆಗಳು

3) ನಿಬಂಧ–ಪ್ರಬಂಧಗಳು

ಮತ್ತು 4) ಇತರ ಲೇಖನಗಳು.

ಎಂದು ಅಭ್ಯಾಸ ದೃಷ್ಟಿಯಿಂದ ವಿಭಜಿಸಬಹುದು.

ಪೌರಾಣಿಕ ಗ್ರಂಥಗಳಲ್ಲಿ (1) 'ಗಿರಿಜಾಕಲ್ಯಾಣ ಸಾರ', (2) 'ಉತ್ತರ ರಾಮಚರಿತ್ರ ಸಾರ', (3) 'ಭಗವತೀ ಕಾತ್ಯಾಯನೀ', (4) 'ಭಾಗವತಾಮೃತ', (5) 'ಶೈವಸುಧಾರ್ಣವ', (6) 'ತುಲಸೀ ರಾಮಾಯಣ ಅಥವಾ ರಾಮಾಯಣಾಮೃತ', (7) 'ಮಹಾಭಾರತಾಮೃತ— ಆದಿಪರ್ವ', (8) 'ಮಹಾಭಾರತಾಮೃತ ಸಭಾಪರ್ವ' ಮತ್ತು (9) 'ನಳ ಚರಿತ್ರೆ'—ಇವು ಸಮಾವೇಶವಾಗುತ್ತವೆ.

'ಶ್ರೀ ಶೇಷಾಚಲ ಸದ್ಬೋಧ ಚಂದ್ರಿಕೆಯು ಗ್ರಂಥಮಾಲೆ'ಯಲ್ಲಿ ಪ್ರಕಟವಾದ **'ಅನುಕರಣೀಯು ದಾಂಪತ್ಯ**– ಅಥವಾ **ಗಿರಿಜಾಕಲ್ಯಾಣ ಸಾರ'**ವೆಂಬ ಚಿಕ್ಕ ಗ್ರಂಥವು (52 ಪುಟಗಳು) 1911ರಲ್ಲಿ ಪ್ರಕಟವಾಯಿತು. ನಾಲ್ಕಾಣೆಯ ಬೆಲೆಯ ಈ ಗ್ರಂಥದ ಮೊದಲ ಮುದ್ರಣದಲ್ಲಿ 2500 ಪ್ರತಿಗಳನ್ನು ಪ್ರಕಟಿಸಲಾಯಿತು. ಪ್ರಸ್ತಾವನೆಯಲ್ಲಿ ಗಳಗನಾಥರು "ಶ್ರೀ ಪಾರ್ವತೀ–ಪರಮೇಶ್ವರರ ಕಲ್ಯಾಣವರ್ಣನದ ಈ ಚಿಕ್ಕ ಪುಸ್ತಕವನ್ನು, ಈಗ ಸುಮಾರು 10–12 ವರ್ಷಗಳ ಹಿಂದೆ ನಾನು ಮುಂಡರಗಿಯಲ್ಲಿ ಶಾಲಾಧ್ಯಾಪಕನಾಗಿದ್ದಾಗ ಬರೆದು ಇಟ್ಟಿದ್ದೆನು. 'ಶ್ರೀ ಹರಿಹರ ಕವಿ ವಿರಚಿತ ಗಿರಿಜಾಕಲ್ಯಾಣ'ವೆಂಬ ಪ್ರಸಿದ್ಧ ಕಾವ್ಯವೇ ಇದರ ಮೂಲವು. ಆ ಸುಂದರ ಕಾವ್ಯದ ಸ್ವಾರಸ್ಯವನ್ನು ರಾಜಶೇಖರ ಕವಿಯೂ ಹೊಗಳಿ, ಅದರ ಅನುಕರಣ ಮಾಡಿರುವನೆಂದ ಬಳಿಕ ನಾನು ಹೆಚ್ಚಿಗೆ ಬರೆಯುವದೇನು? ಮೂಲ ಗ್ರಂಥದ

1. ಡಾ.ಬೆಟಗೇರಿಯವರು ಗಳಗನಾಥರ ಕೃತಿಸಂಖ್ಯಾನಿರ್ಣಯದ ಬಗ್ಗೆ ಬರೆದ ತಮ್ಮ ಲೇಖನದಲ್ಲಿ (ಕರ್ನಾಟಕ ಭಾರತಿ, 1–2) ಗಳಗನಾಥರ ಕಾದಂಬರಿಗಳು 24 ಎಂದು ಅಭಿಪ್ರಾಯ ಪಟ್ಟಿರುವರು. ಅವುಗಳಲ್ಲಿ 'ಸತ್ವಾದರ್ಶ'ವನ್ನು ಬಿಟ್ಟಮೇಲೆ 23 ಕಾದಂಬರಿಗಳಾಗಬೇಕು. ಆದರೆ 'ಭಗವತೀ ಕಾತ್ಯಾಯನೀ' ಯನ್ನು ಕಾದಂಬರಿ ಎಂದು ಗಣಿಸಲಾಗದು. ಅದು ಪೌರಾಣಿಕ ಗ್ರಂಥ. ಆದ್ದರಿಂದ ಗಳಗನಾಥರ ಕಾದಂಬರಿಗಳು–22.

ಸಂಪೂರ್ಣ ಸ್ವಾರಸ್ಯದ ಅನುಭವವು ಈ ಚಿಕ್ಕ ಪುಸ್ತಕದಿಂದ ವಾಚಕರಿಗೆ ಬಾರದಿದ್ದರೂ ಅದರ ಪಡಿಕಟ್ಟು ಗೊತ್ತಾಗುವದರಲ್ಲಿ ಸಂಶಯವಿಲ್ಲ; ಯಾಕೆಂದರೆ ಮಾವಿನ ಹಣ್ಣಿನ ಅಡಿಯ ಪಡಿಕಟ್ಟು ಒಂದು ಹಣ್ಣಿನಿಂದ ಗೊತ್ತಾಗುತ್ತದೆ...." ಎಂದಿರುವರು.

ಈ ಗ್ರಂಥವು ಮೊದಲು 'ಸದ್ಬೋಧ ಚಂದ್ರಿಕೆ'ಯಲ್ಲಿ ಬಂದು, ಅನಂತರ ಪುಸ್ತಕ ರೂಪದಲ್ಲಿ ಪ್ರಕಟವಾಯಿತು. ಗಳಗನಾಥರು ಅದಕ್ಕಾಗಿ 'ಚಂದ್ರಿಕೆ'ಗೆ ತಮ್ಮ ಕೃತಜ್ಞತೆಯನ್ನು ಅರ್ಪಿಸಿ, "ಈ ಪುಸ್ತಕವನ್ನು ಓದಿದವರ ಮನಸ್ಸಿನಲ್ಲಿ ದೈವಿಕ ಭಾವನೆಯ ಹೊಳವೂ, ದಂಪತಿಗಳ ಪವಿತ್ರ ಪ್ರೇಮದ ಮಿನುಗೂ ಕ್ಷಣಿಕವಾಗಿ ಹುಟ್ಟಿದರೂ ನನ್ನ ಶ್ರಮವು ಸಫಲವಾಯಿತೆಂದು ಭಾವಿಸುವೆನು" ಎಂದು ಹೇಳಿದರು.

ಈ ಗ್ರಂಥದಲ್ಲಿ 'ಮೇನಾದೇವಿಯ ತಪಸ್ಸಿದ್ಧಿ'ಯಿಂದ ಆರಂಭವಾಗಿ 'ವಿವಾಹ ಮಹೋತ್ಸವ'ದ ವರೆಗೆ ಒಟ್ಟು ಏಳು ಪ್ರಕರಣಗಳಿವೆ. "ಒಳ್ಳೆ ಶುಭ್ರಕಾಂತಿಯಿಂದ ಮನೋಹರವಾದ ಹಿಮಾಲಯ ಪರ್ವತದ ಎತ್ತರದಲ್ಲಿ ತೋಟಗಳ ಸಮೂಹದಿಂದಲೂ, ಕೆರೆ ಹೊಳೆಗಳ ಸಂಕುಲದಿಂದಲೂ, ಬೆಳೆಯುಳ್ಳ ಭೂಪ್ರದೇಶಗಳಿಂದಲೂ, ಉತ್ಸಾಹವುಳ್ಳ ಜನರಿಂದಲೂ ಗಿರಿರಾಜನ ರಾಜ್ಯವು ಒಪ್ಪುತ್ತಿರುವದು....." ಎಂದು ಆರಂಭವಾಗುವ ಈ ಗ್ರಂಥದಲ್ಲಿ ಎತ್ತಿ ಹೇಳುವಂಥ ವಿಶೇಷ ಗುಣಗಳಿಲ್ಲ.

ಗಳಗನಾಥರ **'ಉತ್ತರ ರಾಮಚರಿತ್ರಸಾರ'**ವೂ ಇದೇ ಕಾಲಕ್ಕೆ ಪ್ರಸಿದ್ಧವಾಗಿರಬಹುದು. ಗ್ರಂಥವು ಲಭ್ಯವಿಲ್ಲದ್ದರಿಂದ ಹೆಚ್ಚಿಗೆ ಹೇಳಲು ಸಾಧ್ಯವಿಲ್ಲ. ಆದರೂ "ಈ ಕೃತಿಗೆ, 1892ರಲ್ಲಿ ಪ್ರಕಟವಾದ, ಮುಳಬಾಗಲರ 'ಉತ್ತರ ರಾಮಚರಿತ್ರ'ದ ಕನ್ನಡ ನಾಟಕಾನುವಾದವು ಮೂಲ ಸಾಮಗ್ರಿಯನ್ನು ಒದಗಿಸಿರಲೂಬಹುದು."[1] ಎಂದು ಊಹಿಸಬಹುದಾದರೂ, ಸ್ವತಃ ಮೂಲ ನಾಟಕವನ್ನೇ ಓದಿ ಅದರ ಸಾರವನ್ನು ಸಂಗ್ರಹಿಸುವಷ್ಟು ಸಂಸ್ಕೃತ ಭಾಷೆಯ ಅಭ್ಯಾಸವು ಗಳಗನಾಥರಿಗೆ ಇದ್ದಿತೆಂಬುದನ್ನೂ ನೆನೆಯಬೇಕು. ಈ ಅವಧಿಯಲ್ಲಿ ಗಳಗನಾಥರು ಟ್ರೇನಿಂಗ ಕಾಲೇಜಿನಲ್ಲಿ ಉಪಶಿಕ್ಷಕರಾಗಿ ಕನ್ನಡ ಮತ್ತು ಸಂಸ್ಕೃತ ವಿಷಯಗಳನ್ನು ಬೋಧಿಸುತ್ತಿದ್ದರು; ಜನರಿಂದ ಒಳ್ಳೆಯ ಲೇಖಕರೆಂಬ ಪ್ರಶಂಸೆಗೂ ಪಾತ್ರರಾಗತೊಡಗಿದ್ದರು. "ಈ ಅವಧಿಯಲ್ಲಿ ನನ್ನಿಂದ 'ಪದ್ಮನಯನೆ' ಎಂಬ ಕಾದಂಬರಿಯು, 'ಲಘುನಿಬಂಧ ಸಂಗ್ರಹ' ಎಂಬ ಪ್ರಬಂಧ ಶಿಕ್ಷಣ ಪುಸ್ತಕವು, 'ಉತ್ತರ ರಾಮಚರಿತ್ರಸಾರ', 'ಶ್ರೀ ಗಿರಿಜಾಕಲ್ಯಾಣ' ಎಂಬೆರಡು ಪೌರಾಣಿಕ ಸಣ್ಣ ಪುಸ್ತಕಗಳು ಬೈಲಿಗೆ ಬೀಳಲು, ಗಳಗನಾಥನು ನೆಟ್ಟಗೆ ಬರೆಯುವನೆಂದು ಜನರು ಅನ್ನಹತ್ತಿದರು", ಎಂದು ತಮ್ಮ 'ಸದ್ಗುರು ಪ್ರಭಾವ'ದಲ್ಲಿ (ಪುಟ–7) ಅವರು ನೆನೆದಿರುವರು.

1919ರಲ್ಲಿ ಪ್ರಕಟವಾದ ಗಳಗನಾಥರ **'ಭಗವತೀ ಕಾತ್ಯಾಯನೀ'** ಎಂಬ 56 ಪುಟಗಳ ಚಿಕ್ಕ ಗ್ರಂಥಕ್ಕೆ ಸಾಂಬಶಿವ ದೀಕ್ಷಿತ ಕಾಶೀಕರ ಎಂಬವರ 'ಶ್ರೀಯಾಜ್ಞವಲ್ಕ್ಯ ಚರಿತ್ರ' ಮತ್ತು ಮರಾಠಿಯ 'ಮೈತ್ರೇಯಿ' ಎಂಬ ಗ್ರಂಥಗಳು ಮೂಲಧನವನ್ನು ಒದಗಿಸಿವೆಯೆಂದು ಅವರೇ ಹೇಳಿರುವರು. ಆದರೂ 'ವರಪ್ರದಾನ' ಎಂಬ ಪ್ರಕರಣ ಮಾತ್ರ ಗಳಗನಾಥರ ಸ್ವಂತ ರಚನೆ. ಈ ಭಾಗದಲ್ಲಿ ಕಾತ್ಯಾಯನಿಯು ತನ್ನ ಪತಿಯಾದ ಯಾಜ್ಞವಲ್ಕ್ಯರು ಮೈತ್ರೇಯಿಯನ್ನು ವರಿಸಬೇಕೆಂದು ಬಿನ್ನವಿಸುವ ಸನ್ನಿವೇಶವಿದೆ. ಅವರು ತಮ್ಮ ಪತ್ನಿಗೆ "ಜಾಲಿಯ ಬಿತ್ತಿ ಕಾಲಿಗೆ

1. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 6

ಮೂಲ ಮಾಡಿಕೊಳ್ಳುತ್ತಿರುವಿ" ಎಂದು ಎಚ್ಚರಿಸಿದರೂ, ಮೈತ್ರೇಯಿಯ ಸದ್ಗುಣಗಳಿಗೆ ಮಾರುಹೋದ ಕಾತ್ಯಾಯನಿಯು ತನ್ನ ಆಸೆಯನ್ನು ತ್ಯಜಿಸುವುದಿಲ್ಲ. ಆದರಂತೆ ಯಾಜ್ಞವಲ್ಕ್ಯರು ಮೈತ್ರೇಯಿಯನ್ನು ವರಿಸಿ, ಸುಖಸಂಸಾರವನ್ನು ನಡೆಸಿ, ಕಡೆಗೆ ಪತ್ನಿಯರಿಗೆ ಆತ್ಮೋಪದೇಶಗೈದು ಸಂನ್ಯಾಸ ಸ್ವೀಕಾರ ಮಾಡುವರು. ಅವರು ಸೂರ್ಯನಾರಾಯಣನಿಂದ ಶುಕ್ಲ ಯಜುರ್ವೇದವನ್ನು ಪಡೆದುದನ್ನೂ, ಜನಕನ ಸಭೆಯಲ್ಲಿ ತಮ್ಮ ಬ್ರಹ್ಮಜ್ಞಾನವನ್ನು ಪ್ರದರ್ಶಿಸಿದುದನ್ನೂ, ಮೊದಲು ವೈಶಂಪಾಯನರ ಶಿಷ್ಯರಾಗಿದ್ದ ಅವರ ಆತ್ಮಾಭಿಮಾನವನ್ನೂ ಗಳಗನಾಥರು ಗ್ರಂಥದ ಆದಿಭಾಗದಲ್ಲಿ ಸಂಕ್ಷಿಪ್ತವಾಗಿ ಹೇಳಿರುವರು.

ಮೈತ್ರೇಯಿಯ ಬ್ರಹ್ಮಜ್ಞಾನದ ಹಂಬಲವನ್ನರಿತು ಅವಳ ಸಲುವಾಗಿ ತ್ಯಾಗಮಾಡಿದ ಸದ್ಗುಣಿ ಕಾತ್ಯಾಯನಿಯ ಚಿತ್ರಣಕ್ಕೆ ಪ್ರಾಮುಖ್ಯವಿತ್ತು ಗಳಗನಾಥರು ಈ ತಮ್ಮ ಗ್ರಂಥಕ್ಕೆ 'ಭಗವತೀ ಕಾತ್ಯಾಯನೀ' ಎಂದು ಕರೆದರು. ಇದುವೇ ಮುಂದೆ 'ಸದ್ಗುಣ ಸಂಭ್ರಮ' ಎಂಬ ಹೆಸರಿನಿಂದ ನಾಲ್ಕು ಸಲ ಮುದ್ರಣಗೊಂಡಿತು.

ಡಾ. ಬೆಟಗೇರಿ ಕೃಷ್ಣಶರ್ಮಾ ಅವರು 'ಭಗವತೀ ಕಾತ್ಯಾಯನಿ'ಯನ್ನು ಸ್ವತಂತ್ರ ಪೌರಾಣಿಕ ಕಾದಂಬರಿ ಎಂದು ಕರೆದಿರುವರು.[1] ಆದರೆ ಈ ಚಿಕ್ಕ ಪೌರಾಣಿಕ ಕಥೆಯು ಕಾದಂಬರಿ ಎಂಬ ಅಭಿದಾನಕ್ಕೆ ಯೋಗ್ಯವಾಗಿದೆಯೆಂದು ತೋರುವುದಿಲ್ಲ. ಕಾದಂಬರಿಗೆ ಇರಬೇಕಾದ ವಸ್ತು ವಿಸ್ತರದ ಮತ್ತು ಪಾತ್ರ–ಘಟನೆ–ಸನ್ನಿವೇಶಗಳ ಚಿತ್ರಣದ ಕೊರತೆ ಇಲ್ಲಿ ಒಡೆದು ಕಾಣುತ್ತದೆ. ಇದನ್ನು ಕಾದಂಬರಿ ಎಂದು ಕರೆದರೆ ಗಳಗನಾಥರ 'ನಳಚರಿತ್ರೆ'ಯನ್ನೂ ಕಾದಂಬರಿಯೆಂದು ಕರೆಯಬಹುದು. ಆದರೆ ನಿಜವಾಗಿ ಇವೆರಡೂ ಪೌರಾಣಿಕ ಕಥೆಗಳೇ ಆಗಿವೆ.

ಆದರೆ ಯಾಜ್ಞವಲ್ಕ್ಯ ಕಾತ್ಯಾಯನಿಯರ ಚರಿತ್ರೆಯಲ್ಲಿ ಕಾದಂಬರಿಗೆ ಬೇಕಾದ ವಸ್ತುವಿಲ್ಲ ಎಂದು ತಿಳಿಯಬೇಕಾಗಿಲ್ಲ. ಇದೇ ವಸ್ತುವನ್ನು ತೆಗೆದುಕೊಂಡು ಶ್ರೀ ದೇವುಡು ನರಸಿಂಹ ಶಾಸ್ತ್ರಿಗಳು 'ಯಾಜ್ಞವಲ್ಕ್ಯ' ಎಂಬ ನಾಟಕವನ್ನೂ 'ಮಹಾದರ್ಶನ' ಎಂಬ ಒಂದು ಕಾದಂಬರಿಯನ್ನೂ ಬರೆದಿದ್ದಾರೆ. ಆದರೆ ಹೀಗೆ ಪೌರಾಣಿಕ ಕಥಾವಸ್ತುವನ್ನು ತೆಗೆದುಕೊಂಡು ಕಾದಂಬರಿಯನ್ನೂ ಬರೆಯಬೇಕೆಂಬ ಅಥವಾ ಬರೆಯಬಹುದೆಂಬ ಕಲ್ಪನೆ ಗಳಗನಾಥರಿಗೆ ಇದ್ದ ಬಗ್ಗೆ ಯಾವ ಸೂಚನೆಗಳೂ ದೊರೆಯುವುದಿಲ್ಲ. ಸ್ವತಃ ಗಳಗನಾಥರೂ ಇದನ್ನು ಪೌರಾಣಿಕ ಗ್ರಂಥವೆಂದೇ ಕರೆದಿರುವರು (ಸದ್ಗುರು–ಪ್ರಭಾವ, ಪುಟ 125).

ಅದೇನೇ ಇದ್ದರೂ, ಗಳಗನಾಥರು ಈ ಚಿಕ್ಕ ಗ್ರಂಥದಲ್ಲಿ ಬ್ರಹ್ಮಜ್ಞಾನಿಯಾದ ಯಾಜ್ಞವಲ್ಕ್ಯರ ಮತ್ತು ಬ್ರಹ್ಮಜ್ಞಾನಾಭಿಲಾಷಿಯಾದ ಮೈತ್ರೇಯಿಯ ಪಾತ್ರಗಳಿಗಿಂತ ಸುಶೀಲ ಪತ್ನಿಯಾದ ಕಾತ್ಯಾಯನಿಯ ಚಾರಿತ್ರ್ಯಕ್ಕೇ ಹೆಚ್ಚು ಮಹತ್ತ್ವಕೊಟ್ಟು, ಅವಳ ಉನ್ನತ ಶೀಲವು ಪ್ರಕಟವಾಗುವಂತೆ ಬರೆದಿರುವರು.

1922ರಲ್ಲಿ ಅವರು ಬರೆದು ಪ್ರಕಟಿಸಿದ **'ಭಾಗವತಾಮೃತ'**ವು ಗಳಗನಾಥರ ಧಾರ್ಮಿಕ ಗ್ರಂಥಗಳಲ್ಲಿ ಮಹತ್ತ್ವಪೂರ್ಣವಾಗಿದೆ. ಮರಾಠಿಯಲ್ಲಿ ಚಿಪಳೂಣಕರ ಮಂಡಳಿಯವರು ಭಾಷಾಂತರಿಸಿದ ಭಾಗವತವನ್ನು "ಮುಂದಿಟ್ಟುಕೊಂಡು" ಗಳಗನಾಥರು 'ಭಾಗವತಾಮೃತ'ವನ್ನು ಸಂಗ್ರಹಿಸಿರುವರು. ಡೆಮಿ ಆಕಾರದ 512 ಪುಟಗಳ ಈ ಬೃಹದ್ಗ್ರಂಥವನ್ನು ಅವರು ಕೇವಲ

1. ಕರ್ನಾಟಕ ಭಾರತಿ, 1-2 ಪುಟ 111.

ನಾಲ್ಕೇ ತಿಂಗಳಲ್ಲಿ ಬರೆದು, ತಮ್ಮ ಸ್ವಂತ ವೆಂಕಟೇಶ ಮುದ್ರಣಾಲಯದಲ್ಲಿ ಮುದ್ರಿಸಿದರು.[1]

ಈ ಗ್ರಂಥದ ಪ್ರಸ್ತಾವನೆಯಲ್ಲಿ ಗಳಗನಾಥರು ಹೇಳಿದ ಕೆಲವು ಮಾತುಗಳು ಗಮನಾರ್ಹವಾಗಿವೆ. "ಭಗವತ್ಕೃಪೆಯಿಂದ 'ಭಾಗವತಾಮೃತ' ಲೇಖನರೂಪವಾದ ಈ ಭಗವತ್ಸೇವೆಯು ಘಟಿಸಿ ಜನ್ಮವು ಸಫಲವಾದದ್ದಕ್ಕಾಗಿ ನನಗೆ ಪರಮಾನಂದವಾಗಿದೆ. ಕನ್ನಡಿಗರ ವಾಚನಾಭಿರುಚಿಯನ್ನು ಹೆಚ್ಚಿಸಿ, ಅವರ ಮನಸ್ಸಿನ ಉದಾತ್ತ ಭಾವನೆಗಳ ಅಂಕುರೋತ್ಪಾದನ ಮಾಡುವ ಅವಸರದಲ್ಲಿ ಹದಿನೈದು ವರ್ಷಗಳಿಂದ ಪ್ರಾಮುಖ್ಯವಾಗಿ ಕಾದಂಬರಿಗಳನ್ನು ಬರೆಯುವದರಲ್ಲಿಯೇ ಆಯುಷ್ಯವನ್ನು ಕಳೆದ ನನ್ನ ಕೈಯಿಂದ, ಈ ಭಗವತ್ಸೇವೆಯು ಥಕ್ಕನೆ ಘಟಿಸಿದ್ದು ನಿಜವಾಗಿಯೇ ಕೌತುಕದ ಸಂಗತಿಯಾಗಿರುವದು! .... ಕಾದಂಬರಿ ರೂಪವಾದ ರುಚಿಕರ ದ್ರಾಕ್ಷಾಸವವನ್ನು ಕುಡಿದು ಬಾಯಿ ಚಪ್ಪರಿಸಿದ ಮಾತ್ರದಿಂದ ಶರೀರದ ಸಾಂಗೋಪಾಂಗ ಸಂಗೋಪನವಾಗಬಹುದೋ?...."[2] ಎಂದು ಕೇಳಿ, ಮಾನವರಿಗೆ ಧಾರ್ಮಿಕ, ಶಾಸ್ತ್ರೀಯ, ನೈತಿಕ, ಮತ್ತು ಸಾಮಾಜಿಕ ಗ್ರಂಥಗಳೆಲ್ಲವೂ ಅವಶ್ಯವೆಂದು ಹೇಳುತ್ತ "ಆಧ್ಯಾತ್ಮಿಕ ಗ್ರಂಥಗಳನ್ನೂ ಸೇವಿಸದಿದ್ದರೆ, ಪರಜನ್ಮದ ಸಾಫಲ್ಯವು ಸರ್ವಥಾ ಆಗಲಾರದು. ಅದರಲ್ಲಿಯೂ ಪ್ರಕೃತದ ವಿಕಾರವಶತೆಯ ಪ್ರಾಬಲ್ಯದ ಕಾಲದಲ್ಲಿ ಧಾರ್ಮಿಕ ಗ್ರಂಥಗಳ ಪರಿಶೀಲನವು ಅತ್ಯವಶ್ಯವಾಗಿರುವದು"[3] ಎಂದು ತಿಳಿಸಿರುವಲ್ಲಿ ಗಳಗನಾಥರ ಧಾರ್ಮಿಕ ಶ್ರದ್ಧೆಯ ಆಳವು ವ್ಯಕ್ತವಾಗಿದೆ.

ಭಾಗವತ ಗ್ರಂಥದ ಮಹತ್ತ್ವವನ್ನು ತಿಳಿಸಿ ಗಳಗನಾಥರು ತಮ್ಮ ಸಂಗ್ರಹಾನುವಾದದ ಬಗ್ಗೆ ಅಭಿಮಾನವನ್ನು ವ್ಯಕ್ತಪಡಿಸುತ್ತ, "ಭಾಗವತದ ಸಾರಶೋಧನರೂಪವಾದ ಈ 'ಭಾಗವತಾಮೃತ'ದಿಂದ ಮೂಲಭಾಗವತದ ಗೌರವವು ಮತ್ತಿಷ್ಟು ಹೆಚ್ಚುವದೆಂಬುದನ್ನು ನನ್ನಂತೆ ಕನ್ನಡಿಗರೂ ನಿಶ್ಚಯವಾಗಿ ಮನಗಾಣಬಹುದು....ಭಾವಿಕತನದ ಸುಲಕ್ಷಣಗಳಿಂದ ಲಕ್ಷಿತವಾದ ನಮ್ಮ 'ಭಾಗವತಾಮೃತ'ವು ಲೋಕಕಲ್ಯಾಣಕಾರಕವಾಗಿರುವದೆಂಬದರಲ್ಲಿ ಸಂಶಯವಿಲ್ಲ. ಇದರಲ್ಲಿಯ ಧಾರ್ಮಿಕ ಸನಾತನ ತತ್ವಗಳು ಸರ್ವವೈದಿಕರಿಗಂತು ಇರಲಿ, ಅನ್ಯಧರ್ಮದವರಿಗೂ ತೃಪ್ತಿಕರವಾಗುವ ಹಾಗಿರುವವು. ಸಂದಿಗೊಂದಿಗಳಲ್ಲಿದ್ದ ಉತ್ತಮೋತ್ತಮ ವಿಚಾರಗಳನ್ನು ಹುಡುಕಿ ಅತ್ಯಂತ ಕಾರ್ಪಣ್ಯದಿಂದ ಸಂಗ್ರಹಿಸಿರುವದರಿಂದ ಈ ಭಾಗವತಾಮೃತವು ಸಕ್ಕರೆಯೊಳಗಿನ ಸೀಯಂತೆ, ದ್ರಾಕ್ಷಿಯೊಳಗಿನ ರುಚಿಯಂತೆ, ಭೋಜನದೊಳಗಿನ ಸ್ವಾರಸ್ಯದಂತೆ ನಿತ್ಯಸೇವ್ಯವೂ ತೃಪ್ತಿಕರವೂ ಆಗಿರುವದು!"[4] ಎಂದಿರುವರು. ಈ ಭಾಗವತಾಮೃತವನ್ನು ಬರೆಯುತ್ತಿರುವಾಗಲೇ ಭಾವಿಕರಾದ ಗಳಗನಾಥರು ಎರಡು ದೈವಿಕ ನಿದರ್ಶನಗಳನ್ನು ಕಂಡರು. ಶ್ರೀರಾಘವೇಂದ್ರ ಸ್ವಾಮಿಗಳ ಮಠದ ಸ್ವಾಮಿಗಳಾದ ಶ್ರೀ ಸುಶೀಲೇಂದ್ರ ಸ್ವಾಮಿಗಳವರು ಅವರಿಗೆ 300 ರೂ. ಗಳ ಸಹಾಯ ಧನವನ್ನು ಅಯಾಚಿತವಾಗಿ ಕಳಿಸಿದರು. ಎರಡನೆಯದಾಗಿ, ಆಗ ಅಸ್ವಸ್ಥರಾಗಿ ಗಳಗನಾಥರ ಜೊತೆಗೇ ಇದ್ದ ಅವರ ಮಿತ್ರರೂ ಲೇಖಕರೂ ಆದ ಶ್ರೀ.ತಟ್ಟಿಯವರಿಗೆ ಗಳಗನಾಥರು ದಿನಾಲು ತಾವು ಬರೆದ ಭಾಗವತಾಮೃತದ ಭಾಗವನ್ನು ಓದಿ ತೋರಿಸುತ್ತಿದ್ದರು. ಭಾಗವತ ಮಂಗಳದ ದಿನ ಬೆಳಗಿನ ಜಾವದಲ್ಲಿ ಶ್ರೀ. ತಟ್ಟಿ

1. ಗ್ರಂಥದ ಕೊನೆಗೆ ಕೊಟ್ಟಿರುವ ಶುದ್ಧಿಪತ್ರಿಕೆಯು "ನಾಲ್ಕು ತಿಂಗಳಲ್ಲಿಯೇ ಸಂಪೂರ್ಣ ಭಾಗವತಾಮೃತವನ್ನು ಬರೆಯುವ ಹಾಗು ಮುದ್ರಿಸುವ ಕೆಲಸ ಮಾಡಬೇಕಾಗಿದ್ದರಿಂದ...."ಎಂದು ಆರಂಭವಾಗುತ್ತದೆ.

2, 3. ಗಳಗನಾಥ: ಭಾಗವತಾಮೃತ, ಪ್ರಸ್ತಾವನೆ.

4. ಅದೇ, ಪ್ರಸ್ತಾವನೆ.

ಯುವರಿಗೆ "ಓಂ ನಮೋ ಭಗವತೇ ವಾಸುದೇವಾಯ" ಎಂಬ ದ್ವಾದಶಾಕ್ಷರೀ ಮಂತ್ರದರ್ಶನ ವಾಯಿತಂತೆ! ಇದರಿಂದ ಗಳಗನಾಥರ ಭಾವಿಕತನವು ಇನ್ನೂ ಹೆಚ್ಚಾಯಿತು. ದ್ವಾದಶ ಸ್ಕಂಧಗಳ ಈ ಭಾಗವತಾಮೃತವನ್ನು ಗಳಗನಾಥರು "ಶ್ರೀಮತ್ ಸುಶೀಲೇಂದ್ರತೀರ್ಥರ ಚರಣಸನ್ನಿಧಿಯಲ್ಲಿ ಭಕ್ತಿಪುರಸ್ಸರವಾಗಿ" ಅರ್ಪಿಸಿರುವಲ್ಲಿ ಆಶ್ಚರ್ಯವಿಲ್ಲ.

'ಭಾಗವತಾಮೃತ'ದಿಂದ ಆರಂಭವಾದ ಗಳಗನಾಥರ ಧಾರ್ಮಿಕ ಗ್ರಂಥಲೇಖನವು ಅವರ ಜೀವನದುದ್ದಕ್ಕೂ ಮುಂದುವರೆಯಿತು. ಇಂಥ ಧಾರ್ಮಿಕ ಗ್ರಂಥ ಲೇಖನವೂ ಭಗವಂತನ ಸೇವೆಯೆಂದೇ ಗಳಗನಾಥರು ಬಗೆದಿದ್ದರು. 'ಭಾಗವತಾಮೃತ'ವನ್ನು ಪ್ರಕಟಿಸಿ ಏಳು ತಿಂಗಳಾ ಗುವಷ್ಟರಲ್ಲಿಯೇ ಅವರು ತಮ್ಮ **'ಶೈವಸುಧಾರ್ಣವ'**ವನ್ನು ಬರೆದು ಪ್ರಸಿದ್ಧಿಸಿದರು. ಇದೂ ಕೂಡ ಡೆಮಿ ಆಕಾರದ 448 ಪುಟಗಳ ಬೃಹತ್‌ಗ್ರಂಥವೇ ಆಗಿದೆ. ಇದನ್ನು ಅವರು ತಮ್ಮ ಹಿರಿಯ ಅಳಿಯಂದಿರಾದ ಶ್ರೀ. ಮಲ್ಲಾರಿದೀಕ್ಷಿತ ಕಕ್ಕನವರ ಅವರ ಸಹಾಯದಿಂದ ರಚಿಸಿದರು. ಮೊದಲ ಮುದ್ರಣದಲ್ಲಿಯೇ (1923ನೆಯ ವರ್ಷ) ಈ ಗ್ರಂಥದ 2000 ಪ್ರತಿಗಳನ್ನು ಅಚ್ಚುಮಾಡಿದರು.

"ಸಾಮಾನ್ಯ ಜನರಲ್ಲಿ ಧಾರ್ಮಿಕ ವೃತ್ತಿಯನ್ನು ಜಾಗೃತಗೊಳಿಸಲಿಕ್ಕೆ ಪುರಾಣಗಳು ಸಮರ್ಥವಾದವುಗಳು" ಎಂಬ ಅಭಿಪ್ರಾಯದ ಗಳಗನಾಥರು ಪ್ರಸ್ತಾವನೆಯಲ್ಲಿ "ಪುರಾಣ ಗಳನ್ನು ಮೂಲತಃ ನೋಡದಿರುವದೂ, ನೋಡಿದರೂ ವಿವೇಕವಿಲ್ಲದೆ ನೋಡುವದೂ ಹಾನಿಕರವೆಂದು ಖಂಡಿತವಾಗಿ ಹೇಳಬಹುದು" ಎಂದಿರುವುದು ಅವರ ವೈಚಾರಿಕತೆಗೆ ಸಾಕ್ಷಿಯಾಗಿದೆ. ಪುರಾಣಗಳನ್ನು ಓದಿ ಅವುಗಳೊಳಗಿನ ಧಾರ್ಮಿಕ. ನೈತಿಕ. ಆಧ್ಯಾತ್ಮಿಕ ಮತ್ತು ವ್ಯಾವಹಾರಿಕ ತತ್ತ್ವಗಳನ್ನು ತಿಳಿದುಕೊಳ್ಳಬೇಕೆಂದು ಅವರ ಅಭಿಪ್ರಾಯ. ಈ ಉದ್ದೇಶದಿಂದಲೇ ಅವರು ಪುರಾಣ ಗ್ರಂಥಗಳನ್ನು ಕೇವಲ ಭಾಷಾಂತರಿಸದೆ. ಅವುಗಳಲ್ಲಿಯ ರಹಸ್ಯಗಳನ್ನು ಕೂಡ ಅಲ್ಲಲ್ಲಿ ಚರ್ಚಿಸುತ್ತ ಅನುವಾದಿಸಿರುವರು. "ಶೈವಸುಧಾರ್ಣವವೆಂಬ ಪುಸ್ತಕವನ್ನು ಬಹು ಶ್ರಮಪಟ್ಟು ಸತ್ಪರಿಣಾಮವಾಗುವಂತೆ ಬರೆದು ಮುದ್ರಿಸಿ ಸಿದ್ಧಪಡಿಸಿ ರುತ್ತೇನೆ. ಈ ಗ್ರಂಥಕ್ಕೆ ಲಿಂಗಪುರಾಣ, ಶಿವಪುರಾಣ, ಸ್ಕಂದಪುರಾಣ, ಮಹಾಭಾರತ. ಭಾಗವತ, ವೀರಶೈವ ಗ್ರಂಥಗಳು ಮೂಲಾಧಾರವಾಗಿರುವವು. ಸಮಾಜದ ತಪ್ಪು ತಿಳಿವಳಿಕೆಗೆ ಕಾರಣ ವಾದ 'ವ್ಯಾಸನತೋಳು', 'ಶರಭಾವತಾರ'ಗಳಂಥ ಹಲವು ಸಂಗತಿಗಳ ರಹಸ್ಯ ಸ್ಫೋಟವನ್ನು ಮಾಡಿ, ಸಮಾಜದಲ್ಲಿ ವಿತುಷ್ಟತೆಯು ಇಲ್ಲದಂತಾಗಬೇಕೆಂದು ಯಥಾಮತಿ ಮನಃಪೂರ್ವ ಕವಾಗಿ ಯತ್ನಿಸಿರುತ್ತೇನೆ" (ಪ್ರಸ್ತಾವನೆ, ಪುಟ 5) ಎಂದು ಗಳಗನಾಥರು ವಿನಮ್ರವಾಗಿ ನುಡಿದಿರುವರು.

'ಶೈವಸುಧಾರ್ಣವ'ದಲ್ಲಿ ಮೂರು ಭಾಗಗಳಿವೆ. ಮೊದಲಿನ ಎರಡು ಪ್ರಕರಣಗಳಲ್ಲಿ ಶಿವಚರಿತ್ರಕಥನವೂ, ಜ್ಞಾನದೀಪವಿಚಾರಗಳೂ ವಿವರವಾಗಿ ಬಂದಿವೆ. ಮೂರನೆಯ ಭಾಗದಲ್ಲಿ ಶಿವಸ್ತುತಿಗಳನ್ನು ಸಂಗ್ರಹಿಸಲಾಗಿದೆ. ಇವೆಲ್ಲ ಸಂಸ್ಕೃತದಲ್ಲಿಯೇ ಇವೆ.

'ವ್ಯಾಸಬುಜಸ್ತಂಭನ' ವಿಚಾರವು 291–302 ಪುಟಗಳಲ್ಲಿ ಬಂದಿದೆ. ಸ್ಕಂದ ಪುರಾಣ ದಲ್ಲಿ ಬಂದಂತೆ ಮೊದಲು ಈ ವಿಷಯವನ್ನು ನಿರೂಪಿಸಿ, ಗಳಗನಾಥರು ವ್ಯಾಸನ ತೋಳಿನ ಮೆರವಣಿಗೆ ಅವಮಾನವೆಂದು ತಿಳಿಯಬಾರದು, ಅದನ್ನು ವ್ಯಾಸರ ಬುದ್ಧಿಶಕ್ತಿಯ ಮೆರವಣಿಗೆ ಯೆಂದು ತಿಳಿಯಬೇಕು. ವ್ಯಾಸರಿಲ್ಲದೆ 18 ಪುರಾಣ ರಚನೆ ಅಸಾಧ್ಯ ಎಂದು ಅಭಿಪ್ರಾ

ಯಪಟ್ಟು, "ಜಗತ್ತೇ ವ್ಯಾಸರ ಯೋಗ್ಯತೆಗೆ ತಲೆದೂಗುತ್ತಿರುವಾಗ ಈರ್ಷೆಯಿಂದ ತೋಳು ಮೆರಿಸುವವರಿಗೂ, ಆ ಯೋಗ್ಯ ಕೃತಿಯನ್ನು ವಿವೇಕದಿಂದ ಉದಾಸೀನ ಮಾಡದೆ, ಈರ್ಷೆಯಿಂದ ಆ ಮೆರವಣಿಗೆ ನಿಲ್ಲಿಸಹೋಗುವವರಿಗೂ ಮೂರ್ಖತನದ ಆರೋಪವು ತಟ್ಟದೆ ಇರಲಿಕ್ಕಿಲ್ಲ; ಅಂಥವರು ನಿಶ್ಚಯವಾಗಿ ಇಹಪರ ಸುಖಕ್ಕೆ ಎರವಾಗುವರು"[1] ಎಂದಿರುವರು. ಇಂಥ ವಿವರಣಾತ್ಮಕ ಮಾತುಗಳಲ್ಲಿ ಗಳಗನಾಥರ ವೈಚಾರಿಕತೆಯನ್ನೂ ಸಮನ್ವಯ ಬುದ್ಧಿಯನ್ನೂ ಕಾಣಬಹುದಾಗಿದೆ. ಗಳಗನಾಥರ ಪುರಾಣಗಳ ಅನುವಾದಗಳಲ್ಲಿ ಇಂಥ ವಿಚಾರಗಳು ಹಲವು ಸಲ ಬಂದಿವೆ. ಅವುಗಳನ್ನೇ ಅವರು "ರಹಸ್ಯ"ಗಳೆಂದು ಕರೆದಿರುವರು.

"ವಿಷ್ಣು ಸರ್ವೋತ್ತಮತ್ವವನ್ನು ಹೇಳುವ ಭಾಗವತವನ್ನು ಅನುವಾದಿಸಿದ ಗಳಗನಾಥರು ಮರುವರ್ಷ ಶೈವಸುಧಾರ್ಣವವನ್ನು ಬರೆದದ್ದು ಸೋಜಿಗವೆಂದು ತೋರಬಹುದು"[2] ಎಂದು ಡಾ. ಹಾವನೂರ ಅವರು ಹೇಳಿರುವರು. ಆದರೆ ಅದರಲ್ಲಿ ಏನೂ ಸೋಜಿಗವಿಲ್ಲ. ಗಳಗನಾಥರು ವಿವಿಧ ದೇವತೆಗಳಲ್ಲಾಗಲಿ, ವಿವಿಧ ಮತಪಂಗಡಗಳಲ್ಲಾಗಲಿ ಎಂದೂ ಭೇದಭಾವವನ್ನು ಮಾಡಲಿಲ್ಲ. ಪುರಾಣದ ಕಥೆಗಳಿಗೆ ಮಹತ್ವ ಕೊಡದೆ. ಪುರಾಣಗಳ "ಫಲಿತಕ್ಕೂ ಆ ಪುರಾಣ ರಚನೆಯ ಉದ್ದೇಶಕ್ಕೂ" ಲಕ್ಷ್ಯವಿತ್ತರೆ, ಎಲ್ಲ ಪುರಾಣಗಳ ಉದ್ದೇಶ ಎಲ್ಲರಿಗೂ ಮಾನ್ಯವಾಗುವುದೆಂದು ಅವರು ನಂಬಿದ್ದರು. ಅದರಂತೆ "ಪತಿವ್ರತಾ ಸ್ತ್ರೀಗೆ ತನ್ನ ಪತಿಯೇ ಅಧಿದೈವತವಾಗಿ ತೋರುವಂತೆ ಶೈವರಿಗೆ ಶಿವನೂ, ವೈಷ್ಣವರಿಗೆ ವಿಷ್ಣುವೂ ಅಧಿದೈವತಗಳಾಗಿ ತೋರುವದು ಸ್ವಾಭಾವಿಕವು : ಆದರೆ ಅದಕ್ಕಾಗಿ ಜಗಳವೇಕೆ ?"[3] ಎಂದೂ ಅವರು ಕೇಳಿರುವರು.

12386

ಈ ಮಾಲಿಕೆಯಲ್ಲಿ ಗಳಗನಾಥರ ಮುಂದಿನ ಗ್ರಂಥವೆಂದರೆ **'ರಾಮಚರಿತ ಮಾನಸ'** ಅಥವಾ **'ತುಲಸೀ ರಾಮಾಯಣ'.** ಗಳಗನಾಥರು ಇದನ್ನು **'ರಾಮಾಯಣಾಮೃತ'**ವೆಂದೂ ಕರೆದಿರುವರು. 1926ರಲ್ಲಿ ಈ ಗ್ರಂಥದ 2000 ಪ್ರತಿಗಳನ್ನು ಅಚ್ಚು ಹಾಕಿಸಿದರು. ಇದು ವಾಲ್ಮೀಕಿ ರಾಮಾಯಣದ ಅನುವಾದವಲ್ಲ. ಹಿಂದೀಭಾಷೆಯ ಶ್ರೇಷ್ಠ ಸಂತಕವಿಯಾದ ತುಲಸೀದಾಸರ 'ರಾಮಚರಿತ ಮಾನಸ' ಅಥವಾ 'ತುಲಸೀರಾಮಾಯಣ'ದ ಅನುವಾದ.

ಹಿಂದೀ ಭಾಷೆಯಲ್ಲಿ ತುಲಸೀ ರಾಮಾಯಣದಷ್ಟು ಪೂಜ್ಯವೂ ಜನಪ್ರಿಯವೂ ಆದ ಗ್ರಂಥವು ಬೇರೊಂದಿಲ್ಲ– ಎಂದರೆ ಅತಿಶಯೋಕ್ತಿಯಾಗಲಾರದು. "ಉತ್ತರ ಹಿಂದುಸ್ಥಾನದಲ್ಲಿ ವೇದದ ತರುವಾಯದಲ್ಲಿ ಈ ಗ್ರಂಥದ ಮಹತ್ವವು ಎಣಿಸಲ್ಪಡುತ್ತಿರುವದು, ಅದರ ಶ್ರೇಷ್ಠತೆಯ ದರ್ಶಕವಾಗಿರುತ್ತದೆ. ಹಿಂದೀ ಭಾಷೆಯಲ್ಲಿ ಈ ಗ್ರಂಥದಷ್ಟು ಲೋಕಪ್ರಿಯವಾದ ಶ್ರೇಷ್ಠ ಗ್ರಂಥವು ಮತ್ತೊಂದಿಲ್ಲ"[4] ಎಂದು ಗಳಗನಾಥರು ಹೇಳಿರುವದು ಸರಿಯೇ ಆಗಿದೆ. ಈ ಗ್ರಂಥ ರಚನೆಯಾಗಿ ಈಗ 400 ವರ್ಷಗಳು ಗತಿಸಿದ್ದರೂ ಇನ್ನೂ ಇದು ತನ್ನ ಮಹತಿಯನ್ನು ಕಳೆದುಕೊಂಡಿಲ್ಲ. ಆದರೆ ಗಳಗನಾಥರು ಅದನ್ನು ನೇರವಾಗಿ ಹಿಂದಿಯಿಂದ ಭಾಷಾಂತರಿಸಲಿಲ್ಲ. ಅವರು ಅದರ ಮರಾಠಿ ಅನುವಾದಕ್ಕೆ ಶರಣು ಹೋಗ

1. ಗಳಗನಾಥ : ಶೈವಸುಧಾರ್ಣವ, ಪುಟ 302.
2. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 67
3. ಗಳಗನಾಥ : ಶೈವಸುಧಾರ್ಣವ, ಪುಟ 3
4. ಗಳಗನಾಥ : ರಾಮಾಯಣಾಮೃತ, ಪುಟ 3.

ಬೇಕಾಯಿತು. ಅದಕ್ಕಾಗಿ ಅವರು ಮರಾಠಿ ಅನುವಾದಕರಾದ ಶ್ರೀಮಂತ ಯಾದವ ಶಂಕರ ಜಾಮದಾರ ಮುನಸಿಫ್ ಅವರಿಗೆ ಕೃತಜ್ಞರಾಗಿರುವರು. ಗಳಗನಾಥರು ಪ್ರಸ್ತಾವನೆಯಲ್ಲಿ ಪೌರಾಣಿಕ ಗ್ರಂಥಗಳ ಅಭ್ಯಾಸದ, ಅದರಲ್ಲೂ ರಾಮಾಯಣದ ಅಭ್ಯಾಸದ ಮಹತ್ತ್ವವನ್ನು ಎತ್ತಿ ತೋರಿಸಿರುವರು. ಡೆಮಿ ಆಕಾರದ 400 ಪುಟಗಳ ಈ ಗ್ರಂಥವನ್ನು ಅವರು ಸುಮಾರು ಮೂರು ತಿಂಗಳಲ್ಲಿ ಭಾಷಾಂತರಿಸಿ ಅಚ್ಚು ಕೂಡ ಹಾಕಿಸಿದರು. ಮುಖಪುಟದ ಮೇಲೆ "ಶ್ರೀ ಸಚಿತ್ರ ತುಲಸೀ ರಾಮಾಯಣಾಮೃತ"ವೆಂದು ಕರೆಯಲಾಗಿದ್ದರೂ, ಇದು ಸಚಿತ್ರವಾಗಿಲ್ಲ. 'ಶ್ರೀರಾಮ ಪಂಚಾಯತನ'ದ ಒಂದೇ ಒಂದು ಚಿತ್ರವು ಗ್ರಂಥದಲ್ಲಿದೆ.

ಮಹಾಭಾರತದ ಹದಿನೆಂಟೂ ಪರ್ವಗಳನ್ನು ಭಾಷಾಂತರಿಸಬೇಕೆಂಬ ಅಪೇಕ್ಷೆಯಿಂದ ಕಾರ್ಯಪ್ರವೃತ್ತರಾದ ಗಳಗನಾಥರಿಗೆ ಅನೇಕ ವಿಘ್ನಗಳು ಒದಗಿದುವು. ಹಣದ ಅಡಚಣೆ ಯಂತೂ ಇದ್ದೇ ಇದ್ದಿತು. ಅದರಲ್ಲಿ ಅವರ ಇಬ್ಬರು ಮೊಮ್ಮಕ್ಕಳು ನಾಲ್ಕೇ ತಿಂಗಳ ಅಂತರದಲ್ಲಿ ಆಕಸ್ಮಿಕ ಮರಣಕ್ಕೆ ಈಡಾದರು. ಇದರಿಂದ ಭಾವಿಕ ಸ್ವಭಾವದ ಗಳಗನಾಥರು "....ಭಾರತಕ್ಕೆ ನಾನು ಬಲಿಯಾಗಬಹುದಾಗಿರುವಾಗ, ಹೀಗೆ ನನ್ನ ಇಬ್ಬರು ಮೊಮ್ಮಕ್ಕಳು ಬಲಿಯಾದದ್ದು ಯಾವ ನ್ಯಾಯವು ?" ಎಂದು ಮಿಡುಕಿದರೂ, "ಸರ್ವೇಶ್ವರನ ಇಚ್ಛೆ ! ಆತನ ತಂತ್ರವು ಯಾರಿಗೆ ತಿಳಿಯಬೇಕು ?"[1] ಎಂದು ಸಮಾಧಾನ ತಂದುಕೊಂಡರು.

ಪ್ರಸ್ತಾವನೆಯಲ್ಲಿ ತಮ್ಮ ಹಲವು ವೈಯಕ್ತಿಕ ವಿಚಾರಗಳನ್ನು ತಿಳಿಸಿದಂತೆ ಗಳಗನಾಥರು ಧರ್ಮವೆಂದರೇನು ? ಪಂಚಮಹಾಭೂತಗಳ ಧರ್ಮಪಾಲನ, ಮನುಷ್ಯೇತರ ಪ್ರಾಣಿಕೋಟಿಯ ಧರ್ಮಪಾಲನ, ದೇವರ ನಾಲ್ವರು ಮಕ್ಕಳು. ಮಹಾಭಾರತದ ಮಹತ್ತ್ವ ಮೊದಲಾದ ಮೌಲಿಕ ವಿಚಾರಗಳನ್ನು ಕುರಿತು 42 ಪುಟಗಳಷ್ಟು ಸುದೀರ್ಘವಾಗಿ ಬರೆದಿರುವರು.

ಗಳಗನಾಥರ ಅಪೇಕ್ಷೆಯಂತೆ ಹದಿನೆಂಟು ಪರ್ವಗಳ ಅನುವಾದ ಕಾರ್ಯವು ಎರಡು ವರ್ಷಗಳಲ್ಲಿ ಮುಗಿದು, **'ರಹಸ್ಯ ಪ್ರಕಾಶಕನಾದ ಸಚಿತ್ರ ಮಹಾಭಾರತಾಮೃತ, ಆದಿ ಪರ್ವ'**ವು 1931ರಲ್ಲಿ ಪ್ರಕಟವಾಯಿತು. ಒಂದನೆಯ ಆವೃತ್ತಿಯಲ್ಲಿಯೇ ಐದು ಸಾವಿರ ಪ್ರತಿಗಳನ್ನು ಅಚ್ಚು ಹಾಕಿಸಿದ ಗಳಗನಾಥರ ಆತ್ಮವಿಶ್ವಾಸವು ಹೆಚ್ಚಿನದೇ ಸರಿ. ಕ್ರೌನ ಆಕಾರದ 532 ಪುಟಗಳ ಈ ಸಂಪುಟದಲ್ಲಿ 'ಅನುಕ್ರಮಣಿಕಾಪರ್ವ'ದಿಂದ 'ಮಯ ದರ್ಶನಪರ್ವ'ದ ವರೆಗೆ ಒಟ್ಟು 238 ಅಧ್ಯಾಯಗಳಿವೆ. ಅದರಂತೆ ಪ್ರತಿಪರ್ವದ ಕೊನೆಗೆ 'ಶ್ರೀಶೇಷಸದ್ಗುರು ಸೂಕ್ತಿರೂಪದ ರಹಸ್ಯ'ಗಳೂ ಇವೆ. ಈ ರಹಸ್ಯಗಳನ್ನು ಗಳಗನಾಥರು 'ರಾಜಕೀಯ ರಹಸ್ಯ'ಗಳು ಮತ್ತು 'ಇತರ ರಹಸ್ಯ'ಗಳೆಂದು ಎರಡು ಪ್ರಕಾರವಾಗಿ ವಿಂಗಡಿ ಸಿರುವರು. ಭಾರತದ ಅನುವಾದದಲ್ಲಿ ತಮ್ಮ ವಿಚಾರಗಳನ್ನು, ಅಭಿಪ್ರಾಯಗಳನ್ನು ತಿಳಿಸ ಲಿಕ್ಕೆ ಅವಕಾಶವಿಲ್ಲದ್ದರಿಂದ ಗಳಗನಾಥರು 'ರಹಸ್ಯ'ಗಳ ಈ ಉಪಕ್ರಮವನ್ನು ಆರಂಭಿಸಿ ದರು. ಕೆಲವೊಂದು ಘಟನೆಗಳಿಗೆ, ತತ್ತ್ವಗಳಿಗೆ, ಉಕ್ತಿಗಳಿಗೆ ಗಳಗನಾಥರು ತಮ್ಮವೇ ಆದ ವಿಚಾರವನ್ನು, ವಿವರಣೆಯನ್ನು ಕೊಟ್ಟಿರುವರು. ಅದನ್ನೇ ಅವರು ರಹಸ್ಯಗಳು ಎಂದು ಕರೆದಿರುವರು. 'ರಾಜಕೀಯ ರಹಸ್ಯ'ಗಳಲ್ಲಿ ಜೀವರು ತಂತ್ರಚತುಷ್ಟಯ ಬದ್ಧರು, ರಾಜ್ಯಾಧಿಪತ್ಯವು ಪ್ರಗಮನಶೀಲವು, ಪ್ರಜೆಗಳ ಧರ್ಮರಕ್ಷಣವು ರಾಜರ ತಾರಕ ಕರ್ತವ್ಯವು ಆರ್ಯಸ್ತ್ರೀಯರು ಧರ್ಮಮಯರು, ನಸ್ತ್ರೀಸ್ವಾತಂತ್ರ್ಯಮರ್ಹತಿ, ಅಹಂಕಾರವು ನಾಶಕರವು–

1. ಗಳಗನಾಥ : ಮಹಾಭಾರತಾಮೃತ, ಪ್ರಸ್ತಾವನೆ, ಪುಟ 25.

ಇವೇ ಮೊದಲಾದ 14 ರಹಸ್ಯಗಳೂ; 'ಇತರ ರಹಸ್ಯ'ಗಳಲ್ಲಿ ಮಂಗಲಾಚರಣದ ಆವಶ್ಯಕತೆ, ಭಾರತದ ವಿಷಯದ ಕಾಲ್ಪನಿಕ ದೋಷಗಳು, ಭಾರತದ ಪ್ರಧಾನಾಂಗವು ಕಥಾಭಾಗವಲ್ಲ, ತಾತ್ತ್ವಿಕ ವಿಷಯ ಭಾಗವು, ಗುರುದಕ್ಷಿಣೆಯು ಪೌರುಷ ಪ್ರದರ್ಶನವು, ಶಾಪಾನುಗ್ರಹ ರಹಸ್ಯ, ಅವತಾರ ರಹಸ್ಯ, ಗಾಂಧರ್ವ ವಿವಾಹದ ದೋಷಗಳು, ಪರಿವಾರಕ್ಕಾಗಿ ತಾನಲ್ಲ ತನಗಾಗಿ ಪರಿವಾರವು– ಇವೇ ಮೊದಲಾದ 53 ರಹಸ್ಯಗಳೂ ಇವೆ.

**ಮಹಾಭಾರತಾಮೃತ**ದ **'ಸಭಾಪರ್ವ'** ಮತ್ತು **'ವನಪರ್ವ'**ದ ಕೆಲವು ಭಾಗಗಳು ಸೇರಿ 1933ರಲ್ಲಿ ಒಂದು ಸಂಪುಟವಾಗಿ ಪ್ರಕಟವಾದವು. ಸಭಾಪರ್ವದಲ್ಲಿ ಸಭಾಕ್ರಿಯಾ ಪರ್ವದಿಂದ ಅನುದ್ಯೂತ ಪರ್ವದ ವರೆಗಿನ ಹತ್ತು ಉಪಪರ್ವಗಳ ಕಥೆಯನ್ನು ಗಳಗನಾಥರು 132 ಪುಟಗಳಲ್ಲಿ ಸಂಗ್ರಹಿಸಿರುವರು. ಆದಿಪರ್ವದಲ್ಲಿಯಂತೆ ಇಲ್ಲಿ ಪ್ರತಿಪರ್ವದ ಕೊನೆಯಲ್ಲಿಯೇ ರಹಸ್ಯಗಳನ್ನು ವಿವರಿಸದೆ, ಕಥಾಭಾಗ ಮುಗಿದ ಅನಂತರ 'ಶ್ರೀ ಶೇಷಸದ್ಗುರು ಸೂಕ್ತಿಮಾಲೆ 'ಎಂದು ಸಭಾಪರ್ವದಲ್ಲಿಯ ಎಲ್ಲ ರಹಸ್ಯಗಳನ್ನು ನಿರೂಪಿಸಿರುವರು. ಧರ್ಮವೂ, ಧರ್ಮಶಾಸ್ತ್ರವೂ, ಧರ್ಮದ ಎರಡು ಅಂಗಗಳು, ಧರ್ಮಗ್ಲಾನಿ, ಶ್ರೀಕೃಷ್ಣನ ಧಾರ್ಮಿಕ ಸೌಜನ್ಯವು, ಈಗಿನವರ ಸೌಜನ್ಯದ ಪಡಿಕಟ್ಟು, ಕಾಮುಕತೆ, ರಾಷ್ಟ್ರೀಯರು, ರಾಷ್ಟ್ರೀಯರ ಕರ್ತವ್ಯ, ಪ್ರಜೆಗಳ ಅಸಂತೋಷ, ಒಕ್ಕಲಿಗರ ಉತ್ಸಾಹಭಂಗಗಳಿಂದ ರಾಷ್ಟ್ರನಾಶ, ನಮ್ಮ ಪ್ರಾಚೀನ ಕಾಲದ ಹಳ್ಳಿಗಳು, ಕೆಟ್ಟು ಪಟ್ಟಣಸೇರು, ಈಗಿನ ಮತದಾರರ ವಿಲಕ್ಷಣತೆಯು, ರಾಜನ ವರ್ಣಾನುರಾಗವು.... ಹೀಗೆ ಹಲವಾರು ವಿಷಯಗಳನ್ನು ಮಹಾಭಾರತದ ಹಿನ್ನೆಲೆಯಲ್ಲಿ ವಿವರಿಸಿರುವರು.

ಗಳಗನಾಥರ ಈ ರಹಸ್ಯಗಳ ವಿವರಣೆ ಎಲ್ಲ ಕಡೆಗೂ ಸರ್ವಗ್ರಾಹ್ಯವಾಗಿದೆ ಎಂದು ಹೇಳಲಾಗದು. ಆದರೂ ಅವರು ಈ ರಹಸ್ಯಲೇಖನವನ್ನು ಉಪಕ್ರಮಿಸಿರುವ ನವೀನ ಪದ್ಧತಿ ವೈಶಿಷ್ಟ್ಯಪೂರ್ಣವಾಗಿದೆ. "ಭಾರತದ ರಹಸ್ಯ ಬರೆಯುವ ಕಠಿಣ ಕೆಲಸವು ಒಬ್ಬ ಸಾಮಾನ್ಯ ಕನ್ನಡಿಗನಾದ ನನಗೆ ಬಲು ಭಾರವಾಗಿರುವದು"[1] ಎಂದು ಅವರು ಪ್ರಾಂಜಲವಾಗಿ ಒಪ್ಪಿಕೊಂಡಿರುವರು. "ಈಗ ಬರೆದಿರುವಂತೆ ಆ ಎಲ್ಲ ಪರ್ವಗಳ ರಹಸ್ಯ ಬರೆಯುವ ಕೆಲಸವು ನನ್ನಿಂದ ನೀಗುಬಹುದೋ ಎಂಬ ಸಂಶಯವು ಆಗಾಗ್ಗೆ ನನಗೆ ಉತ್ಪನ್ನವಾಗುತ್ತಿರುವದು.... ಒಮ್ಮೊಮ್ಮೆ ರಹಸ್ಯಲೇಖನದಲ್ಲಿ ಹತಾಶನೂ ಆಗುವೆನು;"[2] ಆದರೆ ಸಮರ್ಥನಾದ ಶ್ರೀಸದ್ಗುರುನಾಥನು ಈಗಿನಂತೆ ಮುಂದಾದರೂ ತಮ್ಮ ಕೈಯಿಂದ ಬರೆಯಿಸುವನೆಂಬ ಆತ್ಮವಿಶ್ವಾಸ ಅವರದಾಗಿತ್ತು.

ಗಳಗನಾಥರ ಈ ರಹಸ್ಯಲೇಖನಗಳನ್ನು ಅನೇಕರು ಮೆಚ್ಚಿ ಅವರನ್ನು ಪ್ರೋತ್ಸಾಹಿಸಿದರು. ಅಂಥವರಲ್ಲಿ ಮಹಾಮಹೋಪಾಧ್ಯಾಯ, ವಿದ್ಯಾನಿಧಿ ಶಿವಶಂಕರಶಾಸ್ತ್ರೀ ಸಿದ್ಧಾಂತಿ[3] ಅವರು ಪ್ರಮುಖರು. ಅವರು ಗಳಗನಾಥರನ್ನು ಕುರಿತು, "ಗಳಗನಾಥರೇ, ಈ ರಹಸ್ಯಲೇಖನವು ಕೇವಲ ಪಾಂಡಿತ್ಯಕ್ಕೆ ಸಾಧ್ಯವಲ್ಲವು; ನಿಮ್ಮ ರಹಸ್ಯಗಳನ್ನು ಓದಿ ನನಗೂ ರಹಸ್ಯ ಸ್ಫೂರ್ತಿಯಾಗತೊಡಗಿದೆ. ನಿಮ್ಮ ರಹಸ್ಯಗಳ ಗೌರವವು ವಿಶೇಷವಾಗಿರುವದರಿಂದ ನಿಮ್ಮ 'ರಹಸ್ಯಪ್ರಕಾಶ ಮಹಾಭಾರತಾಮೃತ'ವನ್ನು 'ಮಹಾಭಾರತ ರಹಸ್ಯಾಮೃತ' ಎಂದು

---

1, 2. ಮಹಾಭಾರತಾಮೃತ, ಸಭಾಪರ್ವ ; ಪ್ರಸ್ತಾವನೆ, ಪುಟ 3.

3. ಬೆಂಗಳೂರಿನ ಈ ಪಂಡಿತರು ಮದ್ರಾಸ್ ಕ್ರಿಶ್ಚನ್ ಕಾಲೇಜಿನಲ್ಲಿಯೂ, ಅನಂತರ ಪ್ರೆಸಿಡೆನ್ಸಿ ಕಾಲೇಜಿನಲ್ಲಿಯೂ ಕನ್ನಡ ಪ್ರಾಧ್ಯಾಪಕರಾಗಿದ್ದರು.

ಕರೆಯುವದು ನನಗೆ ಸಮ್ಮತವಾಗಿರವದು"[1] ಎಂದು ನುಡಿದರಲ್ಲದೆ ಆ ಬಗ್ಗೆ ಒಂದು ಪದ್ಯವನ್ನೇ ಬರೆದರು :

ಈ ಮಹಾಭಾರತರಹಸ್ಯಾಮೃತಂ ಸವಿದ
ಪಾಮರಂ ಜಗತಿಯೊಳ್ ಪಂಡಿತನುಮಾದಪಂ
ತಾಮಸಂ ಗುಣಿಯಪ್ಪನಿನ್ ಪಂಡಿತಂ ಸವಿಯೆ ಸದ್ವಿವೇಕಿಯುಮಾದಪಂ ।
ಪ್ರೇಮದಿಂ ಶೀಲವಂತರ್ಸವಿಯೆ ಧರ್ಮಾತ್ಮ
ರೀಮಹಿಮೆ ಪಾತಕರ್ಗೆಂಬುದಂ ತ್ರಿಕರಣದ
ಸಾಮರಸ್ಯಂಗೊಂಡು ಪೇಳದಾತಂ ಸರಸ ವಿದ್ವಾಂಸನಲ್ಲವೆಂಬೆಂ ॥[2]

ಇಂಥ ಸ್ತುತಿಪಾತ್ರವಾದ 'ಮಹಾಭಾರತಾಮೃತ–ಸಭಾಪರ್ವ'ವನ್ನು ಗಳಗನಾಥರು ಅತ್ಯಂತ ಪ್ರೇಮಾದರಗಳಿಂದ ಶ್ರೀ ಬಿ. ಎಂ. ಶ್ರೀಕಂಠಯ್ಯನವರಿಗೆ ಸಮರ್ಪಿಸಿರುವರು.

ಈ ಸಂಪುಟದಲ್ಲಿ ವನಪರ್ವದ ಕೆಲವು ಭಾಗ–ಅಂದರೆ ತೀರ್ಥಯಾತ್ರಾ ಉಪಪರ್ವದಲ್ಲಿ ಪಾಂಡವರು ಸೌಗಂಧಿಕ ವನದಲ್ಲಿ ಭೀಮನನ್ನು ಕಾಣುವ ಪ್ರಸಂಗದ ವರೆಗಿನ ಕಥೆ ಮಾತ್ರ ಬಂದಿದೆ. ಇದುವೇ 216 ಪುಟಗಳಷ್ಟು ವ್ಯಾಪ್ತಿಯನ್ನು ಪಡೆದಿದೆ. ವನಪರ್ವದ ಉಳಿದ ಕಥಾಭಾಗವನ್ನೂ, ವಿರಾಟ ಪರ್ವವನ್ನೂ, ಅವುಗಳ ಮೇಲಿನ ರಹಸ್ಯಗಳನ್ನೂ ಸೇರಿಸಿ ಮೂರನೆಯ ಸಂಪುಟದಲ್ಲಿ ಪ್ರಕಟಿಸುವುದಾಗಿ ಗಳಗನಾಥರು ತಿಳಿಸಿದ್ದರು. ಆದರೆ ಮುಂದಿನ ಸಂಪುಟಗಳು ಪ್ರಕಟವಾಗಲೇ ಇಲ್ಲ. ಅದಕ್ಕೆ ಹಣದ ಅಭಾವವೇ ಕಾರಣ. ಪ್ರಸ್ತುತ ಸಂಪುಟಗಳು ಕೂಡ ಅನೇಕ ಮಹನೀಯರ ಸಹಾಯದಿಂದಲೇ ಪ್ರಕಟವಾದುವು. ಆ ಜನರನ್ನೆಲ್ಲ ಗಳಗನಾಥರು ಅತ್ಯಂತ ಕೃತಜ್ಞತೆಯಿಂದ ಸ್ಮರಿಸಿರುವರು. ಅವರಲ್ಲಿ ಬೆಳ್ಳಾವೆ ವೆಂಕಟನಾರಾಯಣಪ್ಪನವರೂ ಒಬ್ಬರೆಂಬುದನ್ನು ಇಲ್ಲಿ ನೆನೆಯಬಹುದಾಗಿದೆ:

ಗಳಗನಾಥರ **'ಕಲಿಬಾಧಾ ನಿವಾರಕವಾದ ಸರಹಸ್ಯ ನಳಚರಿತ್ರ'**ವು 1938ರಲ್ಲಿ ಪ್ರಕಟವಾಗಿ, ಮತ್ತೆ 1953 ಮತ್ತು 1967ರಲ್ಲಿ ಪುನರ್ಮುದ್ರಣಗೊಂಡಿತು. 100 ಪುಟಗಳ ಈ ಗ್ರಂಥದಲ್ಲಿ ನಿಜವಾಗಿ ನಳಚರಿತ್ರೆಯು ಕೇವಲ 46 ಪುಟಗಳು ಮಾತ್ರ; ಉಳಿದುದೆಲ್ಲ ರಹಸ್ಯಗಳು. ಈ ನಳಚರಿತ್ರೆಯನ್ನು ಗಳಗನಾಥರು ತಮ್ಮದೇ ಆದ 'ಮಹಾಭಾರತಾಮೃತ'ದ ವನಪರ್ವದಿಂದ ಆಯ್ದುಕೊಂಡಿರುವರು. ಅಲ್ಲಲ್ಲಿ ಒಂದೆರಡು ಮಾತುಗಳನ್ನು, ಕೆಲವು ವಾಕ್ಯಗಳನ್ನು ಬಿಟ್ಟರೆ ಹೆಚ್ಚಿನ ವ್ಯತ್ಯಾಸವೇನೂ ಇಲ್ಲ. ಅಲ್ಲಿ ನಳಚರಿತ್ರೆಯು ಧರ್ಮರಾಯನಿಗೆ ಹೇಳಿದ ರೀತಿಯಲ್ಲಿ ನಿರೂಪಿತವಾಗಿದೆ; ಇಲ್ಲಿ ಸ್ವತಂತ್ರ ಕಥೆಯೆಂಬಂತೆ ಬಂದಿದೆ. ಅದೇ ಕಥೆಯನ್ನು ಬೇರೆಯಾಗಿ ಪ್ರಕಟಿಸುವಲ್ಲಿ ಗಳಗನಾಥರ ಉದ್ದೇಶವೇನು, ಎಂಬ ಪ್ರಶ್ನೆಗೆ ಅವರೇ ಉತ್ತರಿಸಿರುವರು. "ಪ್ರೌಢವಿವಾಹದಲ್ಲಿ ಎಂತಹ ನಿಯತಾಚರಣೆಯೂ, ಎಂತಹ ಶೀಲವೂ, ಎಂತಹ ತೇಜಸ್ವಿತೆಯೂ ಇರುವವೆಂಬುದನ್ನು ನಳದಮಯಂತಿಯರ ಚರಿತ್ರದಿಂದ ನೋಡಿಕೊಳ್ಳಬೇಕೆಂದು ಬುದ್ಧಿಪೂರ್ವಕವಾಗಿ ಇದನ್ನು ಸರಹಸ್ಯ ಮುದ್ರಿಸಿರುತ್ತದೆ".[3] ಇಲ್ಲಿ ಬಂದಿರುವ 'ರಹಸ್ಯ'ಗಳಾದರೂ ಹೊಸದಾಗಿ ಬಂದವುಗಳಲ್ಲ. ಇಲ್ಲಿ

1. ಮಹಾಭಾರತಾಮೃತ ಸಭಾಪರ್ವ, ಪ್ರಸ್ತಾವನೆ, ಪುಟ 4
2. ಅದೇ —
3. ಗಳಗನಾಥ : ನಳಚರಿತ್ರೆ, ಪ್ರಸ್ತಾವನೆ, ಪುಟ 1.

ಬಂದಿರುವ (1) ಸ್ತ್ರೀಯರಿಗೆ ಸ್ವಾತಂತ್ರ್ಯ ಕೊಡಬಹುದೊ ? (2) ಸ್ತ್ರೀಯರಲ್ಲಿ ವರ್ಗಗಳೆಷ್ಟು ? (3) ಸ್ತ್ರೀಯರ ಬಾಲ–ಪ್ರೌಢ ವಿವಾಹಗಳು ಎಂಬ ಮೂರು ರಹಸ್ಯಗಳಲ್ಲಿ ಮೊದಲನೆಯದು ಅವರದೇ ಆದ 'ಮಹಾಭಾರತಾಮೃತದ ಆದಿಪರ್ವ'ದಲ್ಲಿಯೂ, ಎರಡನೆಯ ಮತ್ತು ಮೂರನೆಯ ಪ್ರಬಂಧಗಳು ಅವರ 'ದುರ್ಗದ ಬಿಚ್ಚುಗತ್ತಿ' ಎಂಬ ಕಾದಂಬರಿಯಲ್ಲಿಯೂ ಬಂದವುಗಳೇ ಆಗಿವೆ.

"ಎಲ್ಲರೂ ನಮ್ಮ ಎಲ್ಲ ಪುಸ್ತಕ ಓದುವ ಸಂಭವ ಕಡಿಮೆಯಾದದ್ದರಿಂದ, ಹೆಣ್ಣು ಮಕ್ಕಳು ಅವಶ್ಯವಾಗಿ ಓದತಕ್ಕ ವಿಷಯಗಳೆಂದು ಭಾವಿಸಿರುವ ನಾವು ಒಂದಿಲ್ಲೊಂದು ಕಡೆಗೆ ಅವನ್ನು ಓದಲೆಂದು ಬೇರೆ ಒತ್ತಟ್ಟಿಗೆ ಬಂದಿರುವ ಆ ಪ್ರಬಂಧಗಳನ್ನು ಈ ಪುಸ್ತಕದಲ್ಲಿಯೂ ಕೊಟ್ಟಿರುತ್ತೇವೆ"[1] ಎಂದಿರುವ ಗಳಗನಾಥರು ತಮ್ಮ ಈ ಪದ್ಧತಿಗೆ ವೇದವ್ಯಾಸರ ನಿದರ್ಶನವನ್ನು ಕೊಟ್ಟಿರುವರು. ಅವರ ಹದಿನೆಂಟು ಪುರಾಣಗಳಲ್ಲಿ ಕೆಲವು ವಿಚಾರಗಳು ಅನೇಕ ಕಡೆಗೆ ಬಂದಿಲ್ಲವೇ ? ತಮ್ಮ ಎಲ್ಲ ಪುಸ್ತಕಗಳನ್ನು ಎಲ್ಲರೂ ಓದುವ ಸಂಭವ ಕಡಿಮೆ ಎಂಬ ಗಳಗನಾಥರ ವಾಸ್ತವದೃಷ್ಟಿ ಇಲ್ಲಿ ಪ್ರಕಟವಾಗಿದೆ.

ಗಳಗನಾಥರ 'ಮಹಾಭಾರತಾಮೃತ'ದ ಎರಡೂ ಪರ್ವಗಳು ಪ್ರಕಟವಾದರೂ ಹೆಚ್ಚಿನ ಪ್ರತಿಗಳು ಮಾರಾಟವಾಗದೆ ಹಾಗೇ ಉಳಿದುವು. ಆದರೆ ಅವರ 'ನಳಚರಿತ್ರೆ' ಮಾತ್ರ ಮೂರು ಮುದ್ರಣಗಳನ್ನು ಪಡೆಯಿತು. ಅಷ್ಟೇ ಅಲ್ಲ, ಗಳಗನಾಥರ ಪೌರಾಣಿಕ ಕೃತಿಗಳಲ್ಲಿಯೇ ಇದು ಹೆಚ್ಚು ಜನಪ್ರಿಯವಾಯಿತು. ಅದಕ್ಕೆ ನಳ–ದಮಯಂತಿಯರ ಜನಪ್ರಿಯ ಕಥೆ ಕಾರಣವಾಗಿರಬಹುದಾದರೂ ಗ್ರಂಥವು ಚಿಕ್ಕದಾಗಿರುವುದೂ ಒಂದು ಮುಖ್ಯ ಕಾರಣವೇನೋ! ಅವರ 'ಭಾಗವತಾಮೃತ', 'ಶೈವಸುಧಾರ್ಣವ' ಮತ್ತು 'ಮಹಾಭಾರತಾಮೃತ'ಗಳು ದೊಡ್ಡ ಗಾತ್ರದ ಗ್ರಂಥಗಳಾಗಿದ್ದು ಬೆಲೆಯೂ ಹೆಚ್ಚಿರುವುದರಿಂದ ಬಹು ಜನರ ಕೈಗೆ ಎಟುಕದಂತಾದುವು. ಅದರಂತೆ ಚಿಕ್ಕ ಗ್ರಂಥಗಳಾಗಿದ್ದರೂ 'ಗಿರಿಜಾಕಲ್ಯಾಣ ಸಾರ' ಮತ್ತು 'ಉತ್ತರ ರಾಮಚರಿತ್ರಸಾರ'ಗಳು ಕೂಡ ಅದೇಕೋ ಪುನರ್ಮುದ್ರಣಗೊಳ್ಳಲೇ ಇಲ್ಲ.

ಗಳಗನಾಥರ ಧಾರ್ಮಿಕ ವಿಚಾರಗಳು ಅವರ ಪೌರಾಣಿಕ ಕೃತಿಗಳಲ್ಲಿಯಂತೆ, ಅವರ ಸತ್ಪುರುಷರ ಚರಿತ್ರೆಗಳಲ್ಲಿಯೂ ವ್ಯಕ್ತವಾಗಿರುವುದನ್ನು ಗುರುತಿಸಬಹುದಾಗಿದೆ.

1) ಶ್ರೀ ಚಿದಂಬರ ಚರಿತ್ರೆ 2) ನಿರ್ಯಾಣ ಮಹೋತ್ಸವ 3) ಸಾಧುಸದಾಶಿವಲೀಲೆ 4) ಕಲಿಕುಠಾರ 2ನೆಯ ಭಾಗ ಮತ್ತು 5) ಕಲಿಕುಠಾರ (ಜ್ಞಾನಪ್ರಧಾನ ಖಂಡ)– ಇವು ಗಳಗನಾಥರು ಬರೆದ ಸತ್ಪುರುಷರ ಚರಿತ್ರೆಗಳು.

**'ಶ್ರೀ ಚಿದಂಬರ ಚರಿತ್ರೆ'**[2] ಯು ಮೊದಲು 'ಸದ್ಬೋಧ ಚಂದ್ರಿಕೆ'ಯಲ್ಲಿ ಕ್ರಮವಾಗಿ ಅಚ್ಚಾಗಿ, ಅನಂತರ ಪುಸ್ತಕ ರೂಪದಲ್ಲಿ 1909ರಲ್ಲಿ ಪ್ರಕಾಶಿತವಾಯಿತು. ಮರಾಠಿಯಲ್ಲಿಯ ಓವೀ ಛಂದಸ್ಸಿನಲ್ಲಿ ಬರೆದ ಚಿದಂಬರ ಚರಿತ್ರೆಯು ಈ ಗ್ರಂಥಕ್ಕೆ ಮೂಲ ಆಕರ

1. ಗಳಗನಾಥ : ನಳಚರಿತ್ರೆ, ಪ್ರಸ್ತಾವನೆ, ಪುಟ 2.
2. ಈ 'ಚಿದಂಬರ ಚರಿತ್ರೆ'ಯನ್ನು ಬೆಟಗೇರಿ ಕೃಷ್ಣಶರ್ಮಾ ಅವರು ಪೌರಾಣಿಕ ಗ್ರಂಥಗಳ ಮಾಲಿಕೆಯಲ್ಲಿ ಸೇರಿಸಿರುವರು (ಕರ್ನಾಟಕ ಭಾರತಿ 1–2, ಪುಟ 112). ಆದರೆ ಅದು ಸತ್ಪುರುಷರ ಚರಿತ್ರೆಗಳ ಸಾಲಿಗೆ ಸೇರಬೇಕಾದ ಗ್ರಂಥ.

ವಾಗಿದೆ. ಅದರ ಆಧಾರದ ಮೇಲೆ ಗುರುನಾಥ ವೆಂಕಟೇಶ ಕಿತ್ತೂರ, ಬಿ. ಎ. ಅವರು ಕನ್ನಡದಲ್ಲಿ ಬರೆದದ್ದನ್ನೇ ಗಳಗನಾಥರು ಪರಿಷ್ಕರಿಸಿದರು. ಅದ್ದರಿಂದಲೇ ಗ್ರಂಥದ ಮುಖ ಪುಟದ ಮೇಲೆ ಗಳಗನಾಥರ ಜೊತೆಗೆ ಕಿತ್ತೂರ ಅವರ ಹೆಸರನ್ನೂ ಗಳಗನಾಥರು ಕಾಣಿಸಿ ರುವರು.

150 ಪುಟಗಳ ಈ ಚರಿತ್ರ ಗ್ರಂಥದಲ್ಲಿ 33 ಪ್ರಕರಣಗಳಿವೆ. ಅದರಲ್ಲಿ ಚಿದಂಬರ ದೀಕ್ಷಿತರ ಜನನ, ಬೆಳವಣಿಗೆ, ಅವರ ಕಾರ್ಯಗಳು, ಅವರು ತೋರಿದ ಮಹಿಮೆಗಳು ಮತ್ತು ಪವಾಡ ಗಳು ವರ್ಣಿಸಲ್ಪಟ್ಟಿವೆ. ಈ ಚರಿತ್ರೆಯನ್ನು ಬರೆಯುವಲ್ಲಿ ಗಳಗನಾಥರ ಭಕ್ತಿ–ವಿಶ್ವಾಸಗಳ ಜೊತೆಗೆ, ಧಾರ್ಮಿಕ ಶ್ರದ್ಧೆ ಕೂಡ ವ್ಯಕ್ತವಾಗುತ್ತದೆ. "ಅಸಾಧ್ಯ ರೋಗಪೀಡಿತನಾದವನು ಉತ್ತಮ ವೈದ್ಯನ ಔಷಧವನ್ನು ಕಣ್ಣುಮುಚ್ಚಿಕೊಂಡು ಕುಡಿದು ರೋಗನಿವಾರಣ ಮಾಡಿ ಕೊಳ್ಳುವಂತೆ ಭವರೋಗ ವೈದ್ಯನಾದ ಭಗವಂತನ ವಿಭೂತಿಗಳ ಚರಿತ್ರೆಗಳನ್ನು ಪತಿತರಾದ ನಾವು ಗಟ್ಟಿ ಮನಸ್ಸು ಮಾಡಿ ಓದಿ ಓದಿ ಅವುಗಳ ಗುಟ್ಟು ತಿಳಿದುಕೊಂಡು ಆತ್ಮೋನ್ನತಿ ಯನ್ನು ಪಡೆಯುಬಹುದು"[1] ಎನ್ನುವಲ್ಲಿ ಮಹಾಪುರುಷರ ಚರಿತ್ರೆಗಳ ಪಠಣದ ಪರಿಣಾಮ ವನ್ನು ಗಳಗನಾಥರು ತಿಳಿಸಿರುವರು. ಗಳಗನಾಥರು ಸ್ವತಃ ಭಾವಿಕರಾದರೂ ಭಾವಿಕರಲ್ಲದ ವರ ಮನಃಸ್ಥಿತಿಯನ್ನೂ ಅವರು ಅರಿತಿರುವರು. "ಮಹಾಸ್ವಾಮಿಯ ಈ ಚರಿತ್ರವು ಭಾವಿಕ ರನ್ನಂತೂ ಉದ್ಧರಿಸುವುದು ನಿಜವು. ಭಾವರಹಿತರೂ ಕೂಡ ದುರ್ಲಕ್ಷ ಮಾಡದೆ ಇದನ್ನು ಸಾದ್ಯಂತವಾಗಿ ಓದಿದರೆ ಹಲವು ಲಾಭಗಳಾಗುವದರಲ್ಲಿ ಸಂಶಯವಿಲ್ಲ. ಮಹಾಸ್ವಾಮಿಯ ಹಲವು ವೃತ್ತಾಂತಗಳು ಭಾವರಹಿತರಿಗೆ ಅಸಂಭವವಾಗಿ ತೋರಬಹುದು. ತೋರಿದರೆ ತಪ್ಪೂ ಅಲ್ಲ"[2] ಎನ್ನುವ ಗಳಗನಾಥರು "ಶ್ರೀ ಚಿದಂಬರ ದೀಕ್ಷಿತರ ಚರಿತ್ರದೊಳಗಿನ ಅಮಾನುಷ ಕೃತ್ಯಗಳಲ್ಲಿ ಇಲ್ಲದ ಕುಕಲ್ಪನೆಗಳನ್ನು ಕಲ್ಪಿಸಿ, ದಂಡೆಯಲ್ಲಿ ನಿಂತು ಸಮುದ್ರಕ್ಕೆ ಹೆಸರಿಡುವ ವನಂತೆ ಅವರ ಅಲೌಕಿಕವಾದ ಗಂಭೀರ ಗುಣಗಳನ್ನು ದುರ್ಲಕ್ಷಿಸುವದು ಹಿತಕರವಲ್ಲ"[3] ಎಂದೂ ನುಡಿದಿರುವರು.

"ಶ್ರೀ ಚಿದಂಬರ ಚರಿತ್ರದಲ್ಲಿ ನಾವು ಪಿತೃಭಕ್ತಿ, ಈಶ್ವರಭಕ್ತಿ, ರಾಜನಿಷ್ಠೆ, ಪರಧರ್ಮ ಸಹಿಷ್ಣುತೆ, ಭೂತದಯೆ, ಸಮತ್ವ, ನಿರಭಿಮಾನ, ಪೌರುಷಪ್ರಿಯತೆ, ಪ್ರಪಂಚದ ಪದಾರ್ಥ ಗಳನ್ನು ಸಾಧಿಸುವದು–ಹೀಗೆ ಒಂದಲ್ಲ, ಎರಡಲ್ಲ ಹಲವು ಗುಣಗಳನ್ನು ಸ್ಪಷ್ಟವಾಗಿ ಕಂಡು ಕೊಳ್ಳಬಹುದು. ಹಲವು ಅಮಾನುಷ ಕೃತ್ಯಗಳನ್ನು ಮಾಡಿದಾಗ್ಯೂ ತಾನು ದರಿದ್ರ ಬ್ರಾಹ್ಮಣ ನೆಂದು ದೀನತೆಯನ್ನು ತೋರಿಸುತ್ತ ಬಂದದ್ದು ನಿರಭಿಮಾನದ ಉದಾಹರಣೆಯಾಗಿದೆ"[4] ಎಂಬ ಗಳಗನಾಥರ ಮಾತುಗಳಲ್ಲಿ ವಸ್ತುನಿಷ್ಠ ವಿಮರ್ಶೆಯ ಸೂಚನೆಗಳು ಕಂಡುಬರುತ್ತವೆ.

ಈ ಗ್ರಂಥವನ್ನು ಬರೆದ ಶ್ರೇಯಸ್ಸಿನಲ್ಲಿ ಗಳಗನಾಥರು ತಮ್ಮ ಪಾಲು ಏನೂ ಇಲ್ಲ ಎನ್ನುವರು. "ಇಂಥ ಸಾತ್ವಿಕ ವೃತ್ತಿಯ ವಿಭೂತಿಯ ಚರಿತ್ರವು ಕನ್ನಡಿಗರಿಗೆ ಲಭಿಸಿದ್ದರ ಶ್ರೇಯಸ್ಸೆಲ್ಲ ಅನ್ಯರನ್ನು ಕೂಡಿಕೊಳ್ಳುವದರಿಂದ, ಭಾಷಾಂತರ ಕರ್ತೃವು ಬರಿಗೈ ಬಂಟನಾಗಿ

1. ಗಳಗನಾಥ : ಚಿದಂಬರ ಚರಿತ್ರೆ, ಪ್ರಸ್ತಾವನೆ, ಪುಟ 4.
2. ಅದೇ, ಪುಟ 3.
3. ಅದೇ, ಪುಟ 4.
4. ಅದೇ, ಪುಟ 5.

ಒಂದೂ ಚಿಂತೆಯಿಲ್ಲವೆ ಸ್ವಸ್ಥವಾಗಿರುವನು. ಈ ಚರಿತ್ರವನ್ನು ಮಹಾಸ್ವಾಮಿಯ ದೌಹಿತ್ರ ಸಂತತಿಗೆ ಸಾಗಿಬಂದಿದ್ದ ಕೈ. ವಾ. ಪೂಜ್ಯ ಸಾಂಬದೀಕ್ಷಿತರ ಮಹಾರಾಷ್ಟ್ರ ಓವೀಬದ್ಧವಾದ ಪ್ರಾಸಾದಿಕ ಚರಿತ್ರದಿಂದ ಆರಿಸಿ ಭಾಷಾಂತರಿಸಿ ಸಿದ್ಧಪಡಿಸಿರುವದರಿಂದ ಮೂಲದ್ರವ್ಯದ ಶ್ರೇಯಸ್ಸು ಅವರನ್ನು ಕೂಡಿಕೊಳ್ಳುತ್ತದೆ. ಸ್ವಸ್ಥಮನಸ್ಸಿನಿಂದ ಮಡಿಯಿಂದ ಕುಳಿತು ಭಾಷಾಂತರಿಸುವ ಅನುಕೂಲ್ಯವೂ, ವಿಷಯವನ್ನು ಆರಿಸುವ ಗುಟ್ಟೂ ಗುರುವರ್ಯ ರಾ. ಬ. ರಾವಜೀ ರಾವ ಕರಂದೀಕರ ಬಿ.ಎ. ಎಜ್ಯುಕೇಶನಲ್ ಇನ್‌ಸ್ಪೆಕ್ಟರರವರಿಂದ ದೊರೆತದ್ದರಿಂದ ಬಂಡವಲದ ಶ್ರೇಯಸ್ಸು ಅವರನ್ನು ಕೂಡಿಕೊಳ್ಳುವದು. ಸಮರ್ಥನಾದ ಶ್ರೀ ಶೇಷಾಚಲ ಸದ್ಗುರುವು ನಿಂತು ಕೆಲಸ ಮಾಡಿದ್ದರಿಂದ ಶ್ರಮದ ಶ್ರೇಯಸ್ಸೆಲ್ಲ ಆತನನ್ನು ಕೂಡಿಕೊಳ್ಳುವದು. ಇನ್ನೇನಾದರೂ ಅಲ್ಪಸ್ವಲ್ಪ ಶ್ರೇಯೋಭಾಗವಿದ್ದರೆ ಅದು ಮ. ರಾ. ರಾ. ಗುರುನಾಥ ವೆಂಕಟೇಶ ಕಿತ್ತೂರ ಬಿ. ಎ. ಇವರನ್ನು ಕೂಡಿಕೊಳ್ಳುವದು; ಯಾಕಂದರೆ ಈ ಚರಿತ್ರವು ಬರೆಯಲ್ಪಡುವ ಮೊದಲೇ ಅವರು ಬರೆದ ಚರಿತ್ರವು ದೊರೆತು ಅದರ ಬೆಂಬಲದಿಂದ ಈ ಚರಿತ್ರಲೇಖನ ಪೂರ್ಣವಾಗಿದೆ''[1] ಎಂದು ಅತ್ಯಂತ ವಿನಯ ಭಾವದಿಂದ ಹೇಳಿರುವರು. ಗಳಗನಾಥರಿಂದ ಪರಿಷ್ಕಾರಗೊಂಡ ಶೈಲಿ, ಮತ್ತು ಭಾವಿಕ ಜನರನ್ನು ತಣಿಸುವ ಉದಾತ್ತ ಪುರುಷರ ಕಥೆ– ಇವುಗಳಿಂದ ಈ ಚರಿತ್ರೆಯು ಬಹು ಜನಪ್ರಿಯಯವಾಗಿ ಅನೇಕ ಮುದ್ರಣಗಳನ್ನು ಕಂಡಿದೆ.

'ಚಿದಂಬರ ಚರಿತ್ರೆ'ಯು ಭಾಷಾಂತರ ಕೃತಿಯಾದರೆ, **'ನಿರ್ಯಾಣ ಮಹೋತ್ಸವ'**ವು ಗಳಗನಾಥರ ಸ್ವತಂತ್ರ ರಚನೆಯಾಗಿದೆ. ಗಳಗನಾಥರ ಗುರುಗಳಾದ ಅಗಡಿಯ ಶೇಷಾಚಲ ಸ್ವಾಮಿಗಳು 1915ರಲ್ಲಿ ಕೈಲಾಸವಾಸಿಗಳಾದರು. ಅವರ ನಿರ್ಯಾಣ ಮಹೋತ್ಸವದ ವಿವರಗಳನ್ನು 24 ಪುಟಗಳಲ್ಲಿ 'ಸದ್ಬೋಧ ಚಂದ್ರಿಕೆ'ಯಲ್ಲಿ ಕೊಡಬೇಕೆಂದು ಮಾಡಿದ ಗಳಗನಾಥರು 160 ಪುಟಗಳಷ್ಟು ವಿಷಯವನ್ನು ಬರೆದರು. ಅದು ಮುಂದೆ ಆ ವರ್ಷದ ಆಶ್ವೀನ, ಕಾರ್ತಿಕ, ಮಾರ್ಗಶೀರ್ಷ ಮತ್ತು ಪುಷ್ಯಮಾಸಗಳ ಸಂಯುಕ್ತ ಸಂಚಿಕೆಯಾಗಿ ಬಂದು, ಅದುವೇ ಮುಂದೆ ಗ್ರಂಥರೂಪವಾಗಿ ಪ್ರಕಟವಾಯಿತು. ಇದರಲ್ಲಿ ಶ್ರೀ ಸದ್ಗುರುವಿನ ಶ್ರೇಷ್ಠವಾದ ಸಂತಧರ್ಮ, ಗುರುವು ಲೋಕದ ಪಾಪವನ್ನು ಶೋಷಿಸಿದ್ದು, ಲೋಕದ ಪಾಪವನ್ನು ತಾನು ಭೋಗಿಸಿದ್ದು. ಸದ್ಗುರುವಿನ ಲೋಕಾನುಭವ, ಗುರುವಿನ ನಿರ್ಯಾಣ, ಔರ್ಧ್ವದೈಹಿಕ ಕರ್ಮಗಳು, ಪುನರ್ಘಟನೆ ಮೊದಲಾದ 10 ಪ್ರಕರಣಗಳಿವೆ. ಅವುಗಳಲ್ಲಿ 'ಸದ್ಗುರುವಿನ್ನ ನಿರ್ಯಾಣೋನ್ಮುಖತೆ' ಎಂಬ ಪ್ರಕರಣವನ್ನು ಅನುಕ್ರಮಣಿಕೆಯಲ್ಲಿ ಕಾಣಿಸಿದ್ದರೂ ಅದನು ಪ್ರಕಟಿಸಿಲ್ಲ. ಅದನ್ನು "ಹಲವು ಕಾರಣಗಳಿಂದ ತೆಗೆದು ಬಿಡಬೇಕಾಯಿತೆಂದು ವಿಷಾದಿಂದ ತಿಳಿಸುವದರ ಹೊರತು ಹೆಚ್ಚಿಗೆ ಏನೂ ಬರೆಯುವದಿಲ್ಲ"[2] ಎಂದು ಗಳಗನಾಥರು ಪ್ರಸ್ತಾವನೆಯಲ್ಲಿ ವಾಚಕರ ಕ್ಷಮೆಯನ್ನು ಕೇಳಿರುವರು.

ಶೇಷಾಚಲ ಸ್ವಾಮಿಗಳ ಬಗ್ಗೆ ಗಳಗನಾಥರಲ್ಲಿ ಆಳವಾಗಿ ಬೇರೂರಿದ್ದ ಭಕ್ತಿಭಾವವು ಈ ಗ್ರಂಥದಲ್ಲಿ ಪ್ರಕಟವಾಗಿದೆ. ಅಂಥ ಗುರುವಿನ ಮಹಾತ್ಮ್ಯವನ್ನು ಗಳಗನಾಥರು ಇಲ್ಲಿ ಅತ್ಯಂತ ಗೌರವಾದರಗಳಿಂದ ನಿರೂಪಿಸಿರುವುದರಲ್ಲಿ ಅಚ್ಚರಿಯಿಲ್ಲ. "ಆ ಯೋಗ್ಯತೆಯು

1. ಗಳಗನಾಥ : ಚಿದಂಬರ ಚರಿತ್ರೆ, ಪ್ರಸ್ತಾವನೆ. ಪುಟ 6, 7
2. ಗಳಗನಾಥ : ನಿರ್ಯಾಣ ಮಹೋತ್ಸವ, ಪ್ರಸ್ತಾವನೆ.

ಶೇಷಭಟ್ಟರನ್ನು ಮೊದಲು ಸಾಧುಗಳೆಂದು ಕರೆಸಿತು, ಆ ಮೇಲೆ ಗುರುಗಳೆಂದು ಕರೆಸಿತು, ಆ ಮೇಲೆ ಸದ್ಗುರುಗಳೆಂದು ಕರೆಸಿತು, ಆ ಮೇಲೆ ಸದ್ಗುರೂತ್ತಮರೆಂದು ಕರೆಸಿತು !!"[1] ಅವರು ಯಾಚನಾವೃತ್ತಿಯಿಂದ ಅತಿಥಿಸೇವೆ ಮಾಡಿ, ವೈದಿಕ ವಿದ್ಯಾದಾನಕ್ಕೆ ಆಸ್ಪದ ಮಾಡಿಕೊಟ್ಟು, ತಮ್ಮ ಆನಂದವನವನ್ನು ಬ್ರಾಹ್ಮಣ್ಯ ಪ್ರಾಪ್ತಿಯ ಕ್ಷೇತ್ರವಾಗಿ ಮಾಡಿದರು. ಅವರ ಮರಣದ ವಿವರಗಳನ್ನು ಕೊಟ್ಟು ಗಳಗನಾಥರು, "ಶರಣರ ಪರೀಕ್ಷೆಯನ್ನು ಮರಣದಲ್ಲಿ ಮಾಡೆನ್ನು ವಂತೆ (ಗುರುವಿನ ಆತ್ಮವು) ದೇಹವಿಟ್ಟು ಬ್ರಹ್ಮತ್ವವನ್ನು ಹೊಂದಿತು. ಸಾರಾಂಶ, ಲೋಕದ ಪಾಪವನ್ನು ಅನುಭವಿಸುವದಕ್ಕಾಗಿಯೇ ಶ್ರೀಗುರುವು ರೋಗವನ್ನು ಭೋಗಿಸಿ ದೇಹವನ್ನು ಬಿಟ್ಟನು"[2] ಎನ್ನುವರು. ಈ ವಿವರಗಳನ್ನು ಓದುತ್ತಿರುವಂತೆ ರಾಮಕೃಷ್ಣ ಪರಮ ಹಂಸರ ರೋಗಯಾತನೆ ನೆನಪಾಗುತ್ತದೆ. ಗುರುವಿನ ಮರಣದ ಅನಂತರ ನಡೆದ ಅಪರ ಕ್ರಿಯೆಗಳಲ್ಲಿ 'ಕಾಕಪಿಂಡ'ವಾಗಲಿಲ್ಲವೆಂದೂ, ತಾವೂ ಸಹ "ಸ್ಥಾನಬಿಟ್ಟು ಹೋಗುವದಿಲ್ಲ" ಎಂದು ನೀರುಬಿಟ್ಟ ವಿಷಯವನ್ನೂ ಕೂಡ ಗಳಗನಾಥರು ತಿಳಿಸಿರುವರು.

ಶೇಷಾಚಲ ಸ್ವಾಮಿಗಳು ಜೀವದಿಂದಿರುವಾಗಲೇ ಆನಂದವನದಲ್ಲಿ ಉಂಟಾಗಿದ್ದ "ಅತಿಥಿ ಸೇವೆ ಹಾಗು ಪ್ರಸ್ತಪ್ರಯೋಜನಗಳ ವ್ಯಾಪ್ತಿಯ ಹೆಚ್ಚಳದ ಸಂಗಡ ಬಹುಜನರಲ್ಲಿ ಆಲಸ್ಯ, ನಿರುದ್ಯೋಗ, ಅನೀತಿ, ಕೃತಘ್ನತೆ, ಔದ್ಧತ್ಯಗಳು ಮೊಳೆದೋರಲಿಕ್ಕೂ, ಇಮಾರತುಗಳ ಹೆಚ್ಚಳದ ಸಂಗಡ ಸಿಕ್ಕವರು ಅಗ್ರಹಾರದಲ್ಲಿ ಬಂದು ನಿಂತುಕೊಳ್ಳಲಿಕ್ಕೂ, ಪಾಠಶಾಲೆ, ಭಾಷಾ ಸೇವೆಗಳ ನೆವದಿಂದ ಅಗ್ರಹಾರದಲ್ಲಿ ಇಲ್ಲದ ಗೊಂದಲ-ಉಸಾಬರಿಗಳು ಉತ್ಪನ್ನವಾಗಲಿಕ್ಕೂ ಯಾರು ಕಾರಣರಾದರೆಂಬುದನ್ನು ಶಿಷ್ಯರಾದ ನಾವು ಆಲೋಚಿಸತಕ್ಕದ್ದು"[3] ಎಂದು ಗಳಗನಾಥರು ಆತ್ಮವಿಮರ್ಶೆಗೂ ಕರೆಕೊಟ್ಟಿರುವರು.

ಈ ಗ್ರಂಥದಿಂದ ಗಳಗನಾಥರಿಗೂ ಅಲ್ಲಿಯ ಉಳಿದ ಕೆಲವು ಶಿಷ್ಯವರ್ಗಕ್ಕೂ ಉಂಟಾದ ಮತಭೇದದ ಕಲ್ಪನೆ ಬರುತ್ತದೆ. ಗಳಗನಾಥರು ಹೆಚ್ಚಾಗಿ ಉಳಿದವರ ಮೇಲೆಯೇ ತಪ್ಪಿನ ಆರೋಪವನ್ನು ಹೊರಿಸಿದ್ದರೂ, ತಮ್ಮ ದೋಷಗಳನ್ನೂ ಮರೆತಿಲ್ಲ. ಮುಖ್ಯವಾಗಿ ಕೊನೆಗೆ ಇಬ್ಬರೂ ಹೊಂದಿಕೊಂಡು ಹೋದರೆ ಮಾತ್ರ ಒಳಿತೆಂಬ ಮನೋಭಾವನೆಯನ್ನು ವ್ಯಕ್ತ ಮಾಡಿರುವುದು ಗಮನಾರ್ಹವಾಗಿದೆ.

ಈ ಗ್ರಂಥದಲ್ಲಿ ಗಳಗನಾಥರು ಬರೆದ ಕೆಲವು ವಿವರಗಳು ತುಂಬ ವಾಚನೀಯವಾಗಿವೆ. ಮರಣೋನ್ಮುಖರಾದ ಗುರುಗಳ ಬಾಯಿಯಿಂದ "ಪಂಪಾ ವಿರೂಪಾಕ್ಷಾ, ಕಾಶೀವಿಶ್ವನಾಥ" ಎಂಬ ಮಾತು ಬರುತ್ತಿರುವಾಗಲೇ, ಕಾಶಿಯಿಂದ ಭಾಗೀರಥಿಯನ್ನು ತೆಗೆದುಕೊಂಡು ಬಂದ ಒಬ್ಬ ಗಂಡಸು ಹಾಗು ಒಬ್ಬ ವಿಧವೆಯರ ವರ್ಣನೆ, ಗುರುಪತ್ನಿಯ ಬಗ್ಗೆ ಗಳಗನಾಥರು ಹೇಳುವ ಮಾತುಗಳು, ಗುರುವು ಪಟ್ಟ ಬಾಧೆಯ ವರ್ಣನೆ, ಗಳಗನಾಥರು ಮಾಡಿದ ಗೋದಾನದ ವಿವರ, ಶ್ರಾವಣ ಸೋಮವಾರದಂದು ನಡೆದ ಪ್ರಸ್ತದ ವಿವರ-ಇಂಥವುಗಳು ಈ ಗ್ರಂಥದಲ್ಲಿಯ ಅವಿಸ್ಮರಣೀಯ ಪುಟಗಳು.

1. ಗಳಗನಾಥ : ನಿರ್ಯಾಣ ಮಹೋತ್ಸವ. ಪ್ರಸ್ತಾವನೆ, ಪುಟ 11.
2. ಅದೇ, ಪುಟ 25.
3. ಅದೇ, ಪುಟ 32

ಈ 'ನಿರ್ಯಾಣ ಮಹೋತ್ಸವ'ವು ಅವರ ಜೀವನದ ವಿವರಗಳನ್ನು ತಿಳಿದುಕೊಳ್ಳಲು ಕೂಡ ಮುಖ್ಯ ಆಕರವಾಗಿದೆ. ಶೇಷಾಚಲ ಸ್ವಾಮಿಗಳ ಮೇಲೆ ಅಷ್ಟು ಆಳವಾದ ಭಕ್ತಿ ವಿಶ್ವಾಸಗಳಿದ್ದ ಗಳಗನಾಥರು, "ಸ್ಥಾನಬಿಟ್ಟು ಹೋಗುವದಿಲ್ಲ" ಎಂದು ನೀರುಬಿಟ್ಟು ಪ್ರತಿಜ್ಞೆ ಮಾಡಿದ್ದರೂ, ಅಗಡಿಯನ್ನು ತ್ಯಜಿಸಿ ಹಾವೇರಿಗೆ ಬರುವಂತಾಗಲು ಕಾರಣಗಳೇನು ಎಂಬುದನ್ನು ಈ ಗ್ರಂಥವು ಸೂಚಿಸುತ್ತದೆ. ಅಂತೂ ಗಳಗನಾಥರ 'ಸದ್ಗುರು ಪ್ರಭಾವ'ದಂತೆ ಈ ಗ್ರಂಥವೂ ಅವರ ಜೀವನ ಚರಿತ್ರೆಯನ್ನು ಗುರುತಿಸಲು ಸಹಕಾರಿಯಾಗಿರುವುದರಿಂದ ಮಹತ್ತ್ವದ ಗ್ರಂಥವಾಗಿದೆ.

ಈ ಗ್ರಂಥವನ್ನು ಕುರಿತು ಗಳಗನಾಥರೇ "ಇದೇನು ಕಥೆಯಲ್ಲ ಕಾದಂಬರಿಯಲ್ಲ, ಎಂದು ವಾಚಕರು ತಿರಸ್ಕರಿಸಬಾರದು. ಎಷ್ಟು ಕಥೆ–ಕಾದಂಬರಿಗಳನ್ನು ಓದಿದರೂ ಆಗದಷ್ಟು ಹಿತವು ತಾತ್ವಿಕ ಸತ್ಪುರುಷರ ನಿರ್ಯಾಣ ಮಹೋತ್ಸವವನ್ನು ಓದಿದ್ದರಿಂದ ಆಗುಹುದು"[1] ಎಂದು ಗ್ರಂಥದ ಮಹತ್ತ್ವವನ್ನು ತಿಳಿಸಿರುವರು.

**'ಸಾಧು ಸದಾಶಿವ ಲೀಲೆ'**ಯನ್ನು ಶ್ರೀ ಬಸವಣ್ಣಸ್ವಾಮಿ ಗುರುಬಸವಣ್ಣಸ್ವಾಮಿ ವಿರಕ್ತಮಠ ಹಾಗು ವೇ. ತಿ. ಗಳಗನಾಥ ಅವರಿಬ್ಬರೂ ಕೂಡಿ ಬರೆದಿರುವರು. ಈ ಗ್ರಂಥವು ಈಗ ಉಪಲಬ್ಧವಿಲ್ಲವಾದರೂ ಅದು 'ಸದ್ಬೋಧ ಚಂದ್ರಿಕೆ'ಯಲ್ಲಿ 1914 ನೆಯ ಇಸ್ವಿಯಲ್ಲಿ ಕ್ರಮಶಃ ಪ್ರಕಟವಾಗುತ್ತಿತ್ತು. ಮುಂದೆ ಅದು ಗ್ರಂಥರೂಪದಲ್ಲಿಯೂ ಬಂದಿತು. 1923ರಲ್ಲಿ ಪ್ರಕಟವಾದ ಗಳಗನಾಥರ 'ಶೈವಸುಧಾರ್ಣವ ಲೀಲೆ'ಯ ಕೊನೆಯ ಪುಟದಲ್ಲಿ ಕೊಟ್ಟ 'ನಮ್ಮಲ್ಲಿ ದೊರೆಯುವ ಪುಸ್ತಕಗಳು' ಎಂಬ ಪಟ್ಟಿಯಲ್ಲಿ ಈ ಗ್ರಂಥದ ಹೆಸರು ಇದೆ. ಅದರ ಬೆಲೆ ಆಗ ಕೇವಲ ಮೂರು ಆಣೆ. ಅಂದರೆ ಅದೊಂದು ಚಿಕ್ಕ ಪುಸ್ತಕವಾಗಿರಬೇಕೆಂದು ಊಹಿಸಬಹುದಾಗಿದೆ. ಗ್ರಂಥವು ಲಭ್ಯವಿಲ್ಲದ ಮೂಲಕ ಅದರ ಬಗ್ಗೆ ಹೆಚ್ಚಿಗೆ ಹೇಳಲು ಸಾಧ್ಯವಿಲ್ಲವಾಗಿದೆ. ಈ ಗ್ರಂಥವನ್ನೂ ಕೂಡ 'ಚಿದಂಬರ ಚರಿತ್ರೆ', 'ಶೈವಸುಧಾರ್ಣವ'ಗಳಂತೆ ಗಳಗನಾಥರ ಗ್ರಂಥವೆಂದೇ ಗ್ರಹಿಸಬೇಕಾಗುತ್ತದೆ.

**'ಕಲಿ ಕುಠಾರ'** ಅಥವಾ **'ಲೋಕಾಪುರ ಪೀಠ ಪ್ರಭಾವ'** ಎಂಬ ಹೆಸರಿನ ಎರಡು ಗ್ರಂಥಗಳನ್ನು ಗಳಗನಾಥರು ಬರೆದಿರುವರು. ಇದರಲ್ಲಿ 2ನೆಯ ಭಾಗವು ಮೊದಲು, ಗಳಗನಾಥರಿಂದಲೇ 1938ರಲ್ಲಿ ಪ್ರಕಟವಾಯಿತು. ಅದರ ಪ್ರಸ್ತಾವನೆಯಲ್ಲಿ ಗಳಗನಾಥರು ಮೊದಲನೆಯ ಭಾಗವನ್ನು ಬೇಗನೇ ಪ್ರಕಟಿಸುವುದಾಗಿ ತಿಳಿಸಿದ್ದರೂ, ಅದು ಅವರ ಮರಣಾನಂತರ 1959ರಲ್ಲಿ ಅವರ ದತ್ತಕಮಗ ಬಿ. ವೇಂ. ಗಳಗನಾಥ ಅವರಿಂದ ಪ್ರಕಾಶಿತವಾಯಿತು. ಮೊದಲು ಪ್ರಕಟವಾದ ಗ್ರಂಥದ ಪ್ರಸ್ತಾವನೆಯಲ್ಲಿ ಗಳಗನಾಥರು, "ಚರಿತ್ರದ ಒಂದನೆಯ ಭಾಗವನ್ನು ಮೊದಲು ಮುದ್ರಿಸದೆ, ಒಮ್ಮೆಲೆ ಈಗ ಈ ಎರಡನೆಯ ಭಾಗವನ್ನು ಮುದ್ರಿಸಿದ್ದು ವಾಚಕರಿಗೆ ಅಸಮಂಜಸವಾಗಿ ತೋರಿದರೆ ಆಶ್ಚರ್ಯವಿಲ್ಲ; ಆದರೆ ನನ್ನ ಹಾಗು ಲೋಕಾಪುರಪೀಠದ ಋಣಭಾರದ ದುಸ್ಸಹತೆ, ಸಂಪೂರ್ಣ ಗ್ರಂಥದ ಮುದ್ರಣಕಾರ್ಯಕ್ಕೆ ಬೇಕಾಗುವಷ್ಟು ದ್ರವ್ಯದ ಅನುಕೂಲತೆಯು ಆಗದೆಯಿದ್ದದ್ದು, ಚರಿತ್ರದ ಒಂದನೆಯ ಭಾಗದಲ್ಲಿರುವ ವಿವಿಧ ವಿಷಯಗಳ ಗಹನತೆ, ಸಾಲತೀರಿಸುವ ಐದು ಹೊಸ ಪುಸ್ತಕಗಳನ್ನು ಮುದ್ರಿಸಿಕೊಂಡೇ ಗ್ರಂಥಪ್ರಸಾರ ಮಾಡಲಿಕ್ಕೆ ಹೊರಡಬೇಕೆಂಬ ನನ್ನ ದೃಢ ನಿಶ್ಚಯದ ಅವಸರ.

1. ಗಳಗನಾಥ ನಿರ್ಯಾಣ ಮಹೋತ್ಸವ ಪ್ರಸ್ತಾವನೆ.

ಎಂಬ ಈ ನಾಲ್ಕು ಕಾರಣಗಳ ಮೂಲಕ ಚರಿತ್ರದ ಈ ಎರಡನೆಯ ಭಾಗವನ್ನು ಮೊದಲು ಮುದ್ರಿಸಬೇಕಾಯಿತು"[1] ಎಂದು ವಿವರಿಸಿರುವರು. ಅದರಂತೆ ತಮ್ಮ ಈ ಸ್ವತಂತ್ರ ಕೃತಿಯ ಬಗ್ಗೆ ಅವರಿಗೆ ಅಭಿಮಾನವೂ ಇದೆ. "ಈ ಕಲಿಕುಠಾರವೆಂಬ ಚರಿತ್ರಗ್ರಂಥದ ಪದ್ಧತಿಯಂತೆ, ಸಾಂಗೋಪಾಂಗವಾಗಿದ್ದ ಚರಿತ್ರ ಗ್ರಂಥವನ್ನು ನಾನು ಈ ಮೊದಲು ಬರೆದಿರುವದಿಲ್ಲ. ಮತ್ತು ಅನ್ಯರು ಬರೆದಿರುವ ಅಂತಹ ಚರಿತ್ರಗ್ರಂಥಗಳನ್ನು ನಾನು ಓದಿರುವದೂ ಇಲ್ಲ"[2] ಎಂದು ಹೇಳುವಲ್ಲಿ ಅವರು ತಮ್ಮ ಸ್ವೋಪಜ್ಞತೆಯ ಬಗ್ಗೆ ಓದುಗರ ಗಮನವನ್ನೂ ಸೆಳೆದಿರುವರು. ಈ ಗ್ರಂಥದಲ್ಲಿ ಗಳಗನಾಥರು ಲೋಕಾಪುರ ಗುರುಗಳ ಜೀವನ ಚರಿತ್ರೆಯನ್ನೇ ಭಕ್ತಿಭಾವದಿಂದ ಬರೆದಿರುವರು.

1959ರಲ್ಲಿ ಪ್ರಕಟವಾದ **'ಕಲಿಕುಠಾರ'** (ಜ್ಞಾನಯೋಗ ಪ್ರಧಾನಖಂಡ)ದ ಪ್ರಸ್ತಾವನೆಯಲ್ಲಿ ಬಿ. ವೇಂ. ಗಳಗನಾಥರು ಪ್ರಕಟನೆಯ ತೊಂದರೆಗಳನ್ನೆಲ್ಲ ವಿವರಿಸಿ, ಈ ಗ್ರಂಥವನ್ನು ಕೇವಲ ಭಕ್ತಿಭಾವದಿಂದಲೂ, ತಮ್ಮ ಪೂಜ್ಯ ತಂದೆಯವರಾದ ಗಳಗನಾಥರ ಆತ್ಮತೃಪ್ತಿಗಾಗಿಯೂ ಪ್ರಕಟಿಸುತ್ತಿರುವುದಾಗಿ ತಿಳಿಸಿರುವರು. ದಿವಂಗತ ಗಳಗನಾಥರು ಬಿಷ್ಟಪ್ಪನವರ ಪತ್ನಿಯ ಕನಸಿನಲ್ಲಿ ಕಾಣಿಸಿಕೊಂಡು, "ಕಲಿಕುಠಾರ ಗ್ರಂಥವನ್ನು ಮುದ್ರಿಸಲು ಪ್ರಾರಂಭಿಸಿದ ಸಮಾಚಾರವನ್ನು ಕೇಳಿ ಮನಸ್ಸಿಗೆ ಬಹಳೇ ಸಮಾಧಾನವಾಯಿತು. ನಾನೇ ಈ ಕೆಲಸವನ್ನು ಪೂರ್ಣಮಾಡಬೇಕೆಂದಿದ್ದೆನು; ಆದರೆ ಸಾಧ್ಯವಾಗಲಿಲ್ಲ. ನೀವು ಈ ಕೆಲಸವನ್ನು ಎಷ್ಟೇ ವಿಘ್ನಗಳೊದಗಿದರೂ ಧೃತಿಗೆಡದೆ ಕಾರ್ಯವನ್ನು ಮುಂದುವರಿಸಿ ಪೂರ್ಣಗೊಳಿಸಿರಿ. ಇದರಿಂದ ನಿಮ್ಮ ಎಲ್ಲ ತಾಪತ್ರಯಗಳು ಹಿಂಗಿ ಉತ್ತರೋತ್ತರ ಅಭಿವೃದ್ಧಿಯಾಗುವದಲ್ಲದೆ, ನನ್ನ ಅಪೇಕ್ಷೆಯೂ ಪೂರ್ಣವಾಗುವದು" ಎಂದು ತಿಳಿಸಿದರಂತೆ.

ಈ ಒಂದನೆಯ ಭಾಗದಲ್ಲಿ ಜ್ಞಾನಯೋಗ ಪ್ರಧಾನಖಂಡ, ಭಕ್ತಿಯೋಗ ಪ್ರಧಾನ ಖಂಡ ಮತ್ತು ಕರ್ಮಯೋಗ ಪ್ರಧಾನಖಂಡ ಎಂಬ ಮೂರು ಉಪವಿಭಾಗಗಳಿದ್ದು, 1959 ರಲ್ಲಿ ಜ್ಞಾನಯೋಗ ಪ್ರಧಾನ ಖಂಡವೆಂಬ 130 ಪುಟಗಳು ಮಾತ್ರ ಗ್ರಂಥರೂಪದಲ್ಲಿ ಪ್ರಕಟವಾದುವು. ಉಳಿದವುಗಳಲ್ಲಿ 'ಭಕ್ತಿಯೋಗ ಪ್ರಧಾನಖಂಡ'ವನ್ನು "ಅತಿ ಶೀಘ್ರದಲ್ಲಿಯೇ ನಿರೀಕ್ಷಿಸಿರಿ" ಎಂದು ಪ್ರಕಾಶಕರು ತಿಳಿಸಿದ್ದರೂ ಮುಂದೆ ಯಾವ ಗ್ರಂಥವೂ ಪ್ರಕಟವಾಗಲಿಲ್ಲ. ಪ್ರಸ್ತುತ 'ಕಲಿಕುಠಾರ' ಗ್ರಂಥದ ಸಂಪೂರ್ಣ ಹಸ್ತಪ್ರತಿಯು ಗಳಗನಾಥರಿಂದ 10-9-1936 ರಂದೇ ಬರೆದು ಮುಗಿದಿತ್ತು.[3] ಅದನ್ನು ಪ್ರಕಟಿಸುವ ಯೋಗವು ಮಾತ್ರ ಅವರಿಗೆ ಒದಗಿ ಬರಲಿಲ್ಲ. ಕಾದಂಬರಿಕಾರರಾದ ಗಳಗನಾಥರು ಕೊನೆಕೊನೆಗೆ ಹೇಗೆ ಹೆಚ್ಚು ಹೆಚ್ಚು ಧಾರ್ಮಿಕರಾದರೆಂಬುದನ್ನು ಈ ಗ್ರಂಥದ ಬರವಣಿಗೆ ಸೂಚಿಸುತ್ತದೆ.

ಒಟ್ಟಿನಲ್ಲಿ ಗಳಗನಾಥರು ಬರೆದ ಪೌರಾಣಿಕ, ಮತ್ತು ಸತ್ಪುರುಷರ ಚಾರಿತ್ರಿಕ 14 ಗ್ರಂಥಗಳಲ್ಲಿ 7 ಅನುವಾದಗಳೂ 7 ಸ್ವತಂತ್ರ ಗಂಥಗಳೂ ಇವೆ. 'ಶೈವಸುಧಾರ್ಣವ', 'ಚಿದಂಬರ ಚರಿತ್ರೆ' ಮತ್ತು 'ಸಾಧುಸದಾಶಿವಲೀಲೆ'– ಇವುಗಳನ್ನು ಅವರು ಬೇರೆಯವರ ಜೊತೆ ಬರೆದಿರುವರು. ಸ್ವತಂತ್ರ ಗ್ರಂಥಗಳಲ್ಲಿ 'ಗಿರಿಜಾಕಲ್ಯಾಣ ಸಾರ'ಕ್ಕೆ ಹರಿಹರನ 'ಗಿರಿಜಾ

1. ಗಳಗನಾಥ : ಕಲಿಕುಠಾರ ಭಾಗ 2, ಪ್ರಸ್ತಾವನೆ, ಪುಟ 2
2. ಅದೇ, ಪುಟ 2
3. ಗಳಗನಾಥ : ಕಲಿಕುಠಾರ–ಜ್ಞಾನಯೋಗ ಪ್ರಧಾನಖಂಡ, ಪ್ರಸ್ತಾವನೆ, ಪುಟ 4

ಕಲ್ಯಾಣ'ವು ಆಕರವಾಗಿದೆ. ಅದರಂತೆ 'ಉತ್ತರ ರಾಮಚರಿತ್ರ ಸಾರ'ಕ್ಕೆ ಮುಳಬಾಗಲರ ಅನುವಾದವೂ ಆಕರವಾಗಿರುವ ಸಂಭವವಿದೆ. ಅದರೆ 'ನಿರ್ಯಾಣ ಮಹೋತ್ಸವ' ಮತ್ತು 'ಕಲಿಕುಠಾರ' (ಭಾಗ 1 ಮತ್ತು 2) ಮಾತ್ರ ಸಂಪೂರ್ಣವಾಗಿ ಗಳಗನಾಥರ ಸ್ವತಂತ್ರ ಕೃತಿಗಳು. ಈ ಸ್ವತಂತ್ರ ಕೃತಿಗಳಿಗಾಗಿ ಅವರು ಧನ್ಯತೆಯ ಭಾವವನ್ನೂ ಹೊಂದಿದ್ದರು. ಅದು ಸಹಜವೂ ಆಗಿದೆ.

ಗಳಗನಾಥರ ನಿಬಂಧ-ಪ್ರಬಂಧಗಳಲ್ಲಿ (1) ಪದ್ಯಾರ್ಥಸಾರ (2) ಲಘು ನಿಬಂಧ ಸಂಗ್ರಹ (3) ನಿಬಂಧ ಶಿಕ್ಷಣ (4) ರಾಜನಿಷ್ಠೆ (5) ದಾಂಪತ್ಯ (6) ಕುಟುಂಬ (7) ಸುಂದರ ಲೇಖ ಸಮುಚ್ಚಯ (8) ಸದ್ಗುರು-ಪ್ರಭಾವ (9) ಗೀತೆಯ ಶ್ರವಣಾಧಿಕಾರ (10) ವಿವೇಕಾನಂದರು ವೈದಿಕರಿಗೆ ಯಾರು? (11) ರಹಸ್ಯಗಳು (12) ಬ್ರಾಹ್ಮಣ್ಯಪ್ರಾಪ್ತಿ ಸಾಧನೆ, ಮತ್ತು (13) ಕನ್ಯಾ ಶಿಕ್ಷಕ- ಈ ಗ್ರಂಥಗಳು ಸಮಾವೇಶವಾಗುತ್ತವೆ.

ಈ ನಿಬಂಧ-ಪ್ರಬಂಧಗಳಲ್ಲಿ ಮೂರು ಶಾಲೋಪಯೋಗಿ ಪುಸ್ತಕಗಳಿವೆ. (1) ಪದ್ಯಾರ್ಥ ಸಾರ (2) ಲಘುನಿಬಂಧ ಸಂಗ್ರಹ ಮತ್ತು (3) ನಿಬಂಧ ಶಿಕ್ಷಣ-ಇವು ಮೂರು ಗ್ರಂಥ ಗಳನ್ನು ಗಳಗನಾಥರು ಮುಖ್ಯವಾಗಿ ವಿದ್ಯಾರ್ಥಿಗಳ ಪ್ರಯೋಜನಕ್ಕಾಗಿ ಬರೆದರು. ಇವು ಆ ಕಾಲದ ಹಲವು ಶಿಕ್ಷಕರಿಗೂ ಅವಶ್ಯವಾಗಿದ್ದವೆಂಬುದೂ ಸತ್ಯ ಸಂಗತಿ.

ಗಳಗನಾಥ ಮಾಸ್ತರರು **'ಲಘುಟಿಪ್ಪಣದಸ್ಸಾರದಿಂದ ಸಹಿತವಾದ ಪದ್ಯಾರ್ಥಸಾರ'** ವನ್ನು ಪ್ರಕಟಿಸಿ ಲೇಖಕರೆಂದು ಹೆಸರು ಪಡೆದರು. ಆಗ ಅವರು ನರೇಂದ್ರ ಗ್ರಾಮದಲ್ಲಿ ಶಾಲಾಶಿಕ್ಷಕರಾಗಿದ್ದರು. "6ನೆಯ ಇಯತ್ತೆಯ ಮತ್ತು ಮುಲಕೀ ಪ್ರವೇಶ ಪರೀಕ್ಷೆಗಳ ವಿದ್ಯಾರ್ಥಿಗಳಿಗಾಗಿ" ಅವರು ಇದನ್ನು ಬರೆದರು. 1897ನೆಯ ಜೂನ ತಿಂಗಳ 'ಶಾಲಾ ಪತ್ರಕ'ದಲ್ಲಿ ಗಳಗನಾಥರು ಈ ಗ್ರಂಥದ ಜಾಹೀರಾತನ್ನೂ ಕೊಟ್ಟಿರುವರು. ತಾವು ಬಹು ಶ್ರಮದಿಂದ ರಚಿಸಿದ ಮತ್ತು ವಿದ್ಯಾರ್ಥಿಗಳಿಗೂ ಶಿಕ್ಷಕರಿಗೂ ಕೂಡಿಯೇ ಉಪಯುಕ್ತವಾದ ಈ ಗ್ರಂಥದ ಪ್ರತಿಗಳು "ಧಾರವಾಡದಲ್ಲಿ ಎಲ್ಲ ಬುಕ್ಕಸೇಲರರ ಕಡೆಗೂ, ನರೇಂದ್ರದಲ್ಲಿ ಮ. ರಾ. ಹಣಮಂತರಾವ ಗೋಪಾಳ ದೇಶಪಾಂಡೆ ಇವರ ಕಡೆಗೂ ದೊರೆಯುವವು. ಬೆಲೆ ಕೇವಲ 6 ಆಣೆ"[1] ಎಂದು ತಿಳಿಸಿರುವರು.

ಧಾರವಾಡದ 'ಕರ್ನಾಟಕ ವಿದ್ಯಾವರ್ಧಕ ಸಂಘ'ದಲ್ಲಿ ಇಂದಿಗೂ ಸುದೈವದಿಂದ ಲಭ್ಯ ವಾದ ಈ 'ಪದ್ಯಾರ್ಥಸಾರ'ದ ಪ್ರತಿಯ ಮುಖಪುಟದಲ್ಲಿ "1ನೆಯ ಆವೃತ್ತಿ-1000 ಪ್ರತಿ ಗಳು" ಎಂದಿದ್ದು, ಲೇಖಕರ ಪ್ರಸ್ತಾವನೆಯ ಕೆಳಗೆ ಕಾಣಿಸಿದ ದಿನಾಂಕವು ಮಾತ್ರ 1-1-1904 ಎಂದಿದೆ. ಇದು ಬಹುಶಃ ಪುನರ್ಮುದ್ರಣಗೊಂಡ ಪ್ರತಿಯಿರಬೇಕು. ಪ್ರಥಮ ಮುದ್ರಣವು 1896ರಲ್ಲಿ ಆಗಿದೆಯೆಂದು ಡಾ. ಹಾವನೂರರ ಹೇಳಿಕೆಯಿದ್ದರೂ,[2] ಇದು 1897ರಲ್ಲಿ ಪ್ರಕಟವಾಗಿರುವ ಸಾಧ್ಯತೆ ಹೆಚ್ಚಿಗೆ ಇದೆ. ಯಾಕೆಂದರೆ 1897ರಲ್ಲಿಯೇ ಈ ಗ್ರಂಥದ ಜಾಹೀರಾತು ಬಂದಿದೆ. ಅಲ್ಲದೆ ಎಪ್ರಿಲ 1898ರ 'ಶಾಲಾಪತ್ರಕ'ದಲ್ಲಿ ಗಳಗನಾಥರು ಈ ಗ್ರಂಥದ ಔಚಿತ್ಯದ ಬಗ್ಗೆ ತಕರಾರು ಮಾಡಿದ ಶ್ರೀ ಬಾಳೇಕುಂದ್ರಿ ಎಂಬವರಿಗೆ ಉತ್ತರವನ್ನು ಕೊಟ್ಟಿರುವರು. ಆದರೆ ಈ ಗ್ರಂಥದ ಪ್ರಥಮ ಆವೃತ್ತಿಯ ಪ್ರತಿ ಮಾತ್ರ ಈಗ ಲಭ್ಯ

1. ಜೂನ 1897ರ 'ಶಾಲಾಪತ್ರಕ'ದ ಕೊನೆಯ ಪುಟ
2. ಶ್ರೀನಿವಾಸ ಹಾವನೂರ: ಗಳಗನಾಥ ಮಾಸ್ತರರು, ಪುಟ 6

ವಾಗಿಲ್ಲ. 1904ರ ಮುದ್ರಣದ ಕಾಲಕ್ಕೆ ಗಳಗನಾಥರು ಧಾರವಾಡ ಕನ್ನಡ ಟ್ರೇನಿಂಗ ಕಾಲೇಜಿನ ಅಂಗವಾದ ಪ್ರ್ಯಾಕ್ಟೀಸಿಂಗ ಸ್ಕೂಲಿನಲ್ಲಿ 1ನೆಯ ಅಸಿಸ್ಟಂಟ ಮಾಸ್ತರರಾಗಿ ಬಂದಿದ್ದರು. 144 ಪುಟಗಳ ಈ ಪುಸ್ತಕವು ಧಾರವಾಡದ 'ಕರ್ನಾಟಕ ಬುಕ್ ಡಿಪೋ ಮುದ್ರಾಲಯ'ದಲ್ಲಿ ಅಚ್ಚಾಗಿತ್ತು.

ಈ ಗ್ರಂಥದ ಬಗ್ಗೆ 'ಸೂಚನೆ'ಯಲ್ಲಿ ಗಳಗನಾಥರು, "ಸರಕಾರೀ ಕನ್ನಡ ಶಾಲೆಗಳಲ್ಲಿ 5ನೇ 6ನೇ ಇಯತ್ತೆಗಳಿಗೆ ಕಲಿಸಲ್ಪಡುವ ಕವಿತೆಗಳ ಕಠಿಣತ್ವವನ್ನೂ, ಅಧ್ಯಾಪಕರ ತೊಂದರೆಗಳನ್ನೂ, ಇವುಗಳಿಂದ ವಿದ್ಯಾರ್ಥಿಗಳಿಗೊದಗುವ ದುಷ್ಪರಿಣಾಮವನ್ನೂ ಅರಿತು ಹಿತಬುದ್ಧಿಯಿಂದ ನಮ್ಮ ಗುರುಗಳಾದ ವೈ. ವಾ. ಧೋಂಡೋಪಂತ ಮುಳಬಾಗಲರವರು 5ನೆಯ ಇಯತ್ತೆಯ ಕವಿತೆಗಳಿಗಾಗಿ 'ಪದ್ಯಾರ್ಥಸಾರ'ವೆಂಬ ಹೆಸರಿನ ಟೀಕಾಪುಸ್ತಕವನ್ನು ಬರೆದಿರುವರು. ವಿದ್ಯಾರ್ಥಿಗಳ ಅಭ್ಯಾಸಕ್ರಮದಲ್ಲಿ ವ್ಯತ್ಯಾಸವಾಗದಂತೆ ನಮ್ಮ ಗುರುಗಳ ಪದ್ಧತಿಯನ್ನನುಸರಿಸಿ 6ನೆಯ ಇಯತ್ತೆಗಾಗಿ ಈ ಪದ್ಯಾರ್ಥಸಾರದ 2ನೆಯ ಭಾಗವು ಬರೆಯಲ್ಪಟ್ಟಿದೆ" ಎಂದು ತಿಳಿಸಿ, "ಇದರಲ್ಲಿ ಹೆಚ್ಚಿನ ಅನುಕೂಲತೆಯೇನಿರುವದೆಂಬದು ಅನುಭವದ ಹೊರತು ತಿಳಿಯದು. ಹೊರತು ಹೊಸ ಇಯತ್ತೆಯ ಪ್ರಕಾರ 6ನೆಯ ಇಯತ್ತೆಯಿಂದ ಪ್ರವೇಶ ಪರೀಕ್ಷೆಯ ವರೆಗೆ ಉಪಯೋಗ ಬೀಳುವಷ್ಟು ಛಂದಸ್ಸಾರದ ವಿಷಯವನ್ನು 'ಲಘುಛಂದಸ್ಸಾರ'ವೆಂಬ ಹೆಸರಿನಿಂದ ಈ ಪುಸ್ತಕದ ಕಡೆಯಲ್ಲಿ ಕೊಟ್ಟಿರುತ್ತದೆ. ಆದರೂ ಮರ್ಮಜ್ಞರು ಹೆಚ್ಚಿನ ಸುಧಾರಣೆಗಳನ್ನು ಸೂಚಿಸಿ ಈ ಪುಸ್ತಕವನ್ನು ಹೆಚ್ಚು ಉಪಯುಕ್ತವಾಗಿ ಮಾಡುವದು ಲಾಭಕರವು"[1] ಎಂದೂ ವಿನಂತಿಸಿರುವರು. ತಮ್ಮ ಪುಸ್ತಕವನ್ನು ತಮ್ಮ ಗುರುಗಳ ಮಾರ್ಗದಲ್ಲಿಯೇ ಬರೆಯಲಾಗಿದೆಯೆಂದು ಕೃತಜ್ಞತೆಯಿಂದ ಸ್ಮರಿಸಿದರೂ, ತಮ್ಮ ಗ್ರಂಥವು ಹೆಚ್ಚು ಚೆನ್ನಾಗಿದೆಯೆಂಬ ಅರಿವೂ ಗಳಗನಾಥರಿಗಿದೆ. ಆದರೂ ಹೆಚ್ಚು ಉಪಯುಕ್ತವಾಗುವ ಸೂಚನೆಗಳನ್ನೂ ಅವರು ವಾಚಕರಿಂದ ಅಪೇಕ್ಷಿಸುವ ಸೌಜನ್ಯವನ್ನೂ ತೋರಿರುವರು. ಅವರಲ್ಲಿ ಆತ್ಮಾಭಿಮಾನವಿದೆ, ಆದರೆ ಅದು ಅಹಂಕಾರವಾಗಿಲ್ಲ.

ಗ್ರಂಥದಲ್ಲಿ ಗಳಗನಾಥರು ಪದ್ಯಗಳ ಪೂರ್ವಾಪರ ಸಂಬಂಧ, ಸಂದರ್ಭಗಳನ್ನೂ, ಪದಚ್ಛೇದ-ನಾಮ ವಿಭಕ್ತಿ-ಅವ್ಯಯ-ಕ್ರಿಯಾಪದಗಳನ್ನು ಹೇಗೆ ಬಿಡಿಸಬೇಕೆಂಬುದನ್ನೂ, ಪದ್ಯಗಳ ಅನ್ವಯವನ್ನೂ, ಅರ್ಥವನ್ನೂ, ವಿಗ್ರಹ-ಸಮಾಸಗಳನ್ನೂ ಕೊಟ್ಟಿರುವರು. ಪ್ರತಿಯೊಂದು ಪದ್ಯದೊಳಗಿನ ವ್ಯಾಕರಣ ಸಂಬಂಧದ ನಿಯಮಗಳನ್ನು ಅಲ್ಲಲ್ಲೇ ಬರೆಯದೆ, ಪುಸ್ತಕದ ಕಡೆಯಲ್ಲಿ ಸಂಧಿ, ನಾಮವಿಭಕ್ತಿ, ಕ್ರಿಯಾವಿಭಕ್ತಿ ಮೊದಲಾದವುಗಳ ನಿಯಮಗಳನ್ನು ಕೊಟ್ಟಿರುವರು. ಕೊನೆಯಲ್ಲಿ ಛಂದಸ್ಸಿನ ಬಗ್ಗೆಯೂ ಬರೆದಿರುವರು. ಒಟ್ಟಿನಲ್ಲಿ ಈ ಗ್ರಂಥವು ಆ ಕಾಲದ ವಿದ್ಯಾರ್ಥಿಗಳಿಗೂ, ಶಿಕ್ಷಕರಿಗೂ ಕೂಡಿಯೇ ಕೈಗನ್ನಡಿಯಾಗಿತ್ತೆಂದರೆ ಅತಿಶಯೋಕ್ತಿಯಲ್ಲ.

ಆದರೂ ಗಳಗನಾಥ ಮಾಸ್ತರರು ಈ ಗ್ರಂಥವನ್ನು ಬರೆದುದು ಆಗ ಅನೇಕ ಶಿಕ್ಷಕರಿಗೆ ಮೆಚ್ಚುಗೆಯಾಗಲಿಲ್ಲವೆಂದು ತೋರುತ್ತದೆ. ಕೆಲವರು ಆ ಬಗ್ಗೆ ತಕರಾರು ಮಾಡಿ 'ಶಾಲಾಪತ್ರಿಕ'ದ 'ಪತ್ರವ್ಯವಹಾರ'ದಲ್ಲಿ ಓದುಗರ ಓಲೆಗಳನ್ನೂ ಬರೆದರು. ಅಂಥವರಲ್ಲಿ ಶ್ರೀ ಬಾಳೇಕುಂದ್ರಿ ಎಂಬ ಶಿಕ್ಷಕರ ಪತ್ರಕ್ಕೆ ಉತ್ತರವಾಗಿ, ಗಳಗನಾಥರು ತಾವಲ್ಲದೆ ಈ ರೀತಿ ಅನೇಕರು

1. ಗಳಗನಾಥ: ಲಘು ಛಂದಸ್ಸಾರದಿಂದ ಸಹಿತವಾದ ಪದ್ಯಾರ್ಥಸಾರ, ಪ್ರಸ್ತಾವನೆ.

ಇಂಥ ಗ್ರಂಥಗಳನ್ನು ಬರೆದಿರುವ ಉದಾಹರಣೆಗಳನ್ನು ಕೊಟ್ಟು, "ಶಾಲಾಮಾಸ್ತರರು ಕವಿತೆಯ ಅರ್ಥ, ಸಂಕ್ಷಿಪ್ತ ಭೂಗೋಲ, ಸಂಕ್ಷಿಪ್ತ ಇತಿಹಾಸ....ಮುಂತಾದವುಗಳನ್ನು ಬರೆದದ್ದರಿಂದ ಅವರು ಬಾಳೇಕುಂದ್ರಿಯವರಿಗೆ ಕ್ಷುಲ್ಲಕರಾಗಿ ಕಂಡದ್ದು ಕ್ಷುಲ್ಲಕತನವಲ್ಲವೇ!" ಎಂದು ಕೇಳಿದರು.[1] ಬಾಳೇಕುಂದ್ರಿ ಎಂಬವರಂಥ ಕೆಲವು ನುರಿತ ಶಿಕ್ಷಕರಿಗೆ ಗಳಗನಾಥರ 'ಪದ್ಯಾರ್ಥಸಾರ'ವು ನಿರುಪಯುಕ್ತವಾಗಿ ಕಂಡಿರಬಹುದು. ಆದರೆ ಈ ಗ್ರಂಥದ ಅಥವಾ ಇಂಥ ಗ್ರಂಥಗಳ ಆವಶ್ಯಕತೆ ಆಗ ಇದ್ದೇ ಇದ್ದಿತು. ಇಲ್ಲವಾದರೆ ಅದು ಪುನರ್ಮುದ್ರಣಗೊಳ್ಳಲು ಅವಕಾಶವೇ ಇರುತ್ತಿರಲಿಲ್ಲ.

ಅಂತೂ ಗಳಗನಾಥರ 'ಪದ್ಯಾರ್ಥಸಾರ'ವು ಒಂದು ರೀತಿ ವಿದ್ಯಾರ್ಥಿಗಳ ಮಾರ್ಗದರ್ಶಿಕೆ (Guide) ಎನ್ನಬಹುದು. ಆದರೆ ಮುಂದೆ 1899ರಲ್ಲಿ ಪ್ರಕಟವಾದ ಅವರ **'ಲಘು ನಿಬಂಧ ಸಂಗ್ರಹ ಮತ್ತು ಪತ್ರವ್ಯವಹಾರ'**ವನ್ನು ಮಾತ್ರ ಕೇವಲ ಮಾರ್ಗದರ್ಶಿಕೆ ಎನ್ನಲಾಗದು. ಅದು ಒಂದು ರೀತಿಯ ಪೂರಕ ಪಠ್ಯಪುಸ್ತಕದಂತಿದೆ. ಇದನ್ನು ಬರೆದಾಗ ಗಳಗನಾಥರು ಮುಂಡರಗಿಯಲ್ಲಿ ಶಾಲಾಧ್ಯಾಪಕರಾಗಿದ್ದರು. ಇದನ್ನು ಕೂಡ 'ಕರ್ನಾಟಕ ಬುಕ್ ಡಿಪೋ ಪ್ರೆಸ್ಸಿ'ನವರು ಪ್ರಕಟಿಸಿರುವರು. 227 ಪುಟಗಳ ಈ ಗ್ರಂಥದ ಬೆಲೆ 10 ಆಣೆ ಮಾತ್ರ.

ಗಳಗನಾಥರೇ "5-6-7 ಇಯತ್ತೆಯ ವಿದ್ಯಾರ್ಥಿಗಳಿಗಾಗಿ ಬರೆದುದು" ಎಂದು ಮುಖಪುಟದಲ್ಲಿಯೇ ತಿಳಿಸಿರುವರು. ಇದರಲ್ಲಿ (1) ನಿಬಂಧ ಲೇಖಕರು ಸ್ಮರಣದಲ್ಲಿಡತಕ್ಕ ಸಂಗತಿಗಳು (2) ನಿಬಂಧಗಳು ಮತ್ತು (3) ಖಾಸಗೀ ಪತ್ರವ್ಯವಹಾರ, ರಿಪೋರ್ಟ ಇತ್ಯಾದಿ ಎಂದು ಮೂರು ಭಾಗಗಳಿರುವವು. ಪ್ರಸ್ತಾವನೆಯಲ್ಲಿ ಗಳಗನಾಥರು "ಇಂಗ್ಲೀಷ ಪುಸ್ತಕಗಳ ಸಹಾಯದಿಂದ ಮರಾಠಿಯಲ್ಲಿ ಬರೆಯಲ್ಪಟ್ಟ ಉತ್ತಮ ನಿಬಂಧಗಳ ಆಧಾರದಿಂದ ಸಣ್ಣ ಸಣ್ಣ ನಿಬಂಧಗಳನ್ನು ಬರೆದು ಇದರಲ್ಲಿ ಸಂಗ್ರಹಿಸಿರುವೆನು. ಆದರೂ ಪ್ರತಿಯೊಂದು ನಿಬಂಧದಲ್ಲಿ ಭಾಗಗಳನ್ನು ಮಾಡಿ ಆಯಾ ಭಾಗಗಳ ವಿಷಯವಾಗಿ ಟಿಪ್ಪಣಿಗಳನ್ನು ಕೊಟ್ಟು, ಆಯಾ ಟಿಪ್ಪಣಿಗಳಿಗನುಸರಿಸಿ, ಆಯಾ ಭಾಗಗಳಲ್ಲಿ ಆಯಾ ವಿಷಯಗಳನ್ನು ಸಂಗ್ರಹಿಸಿ ನಿಬಂಧಗಳನ್ನು ರಚಿಸಿದ್ದು ನನ್ನ ಸ್ವಂತ ಕಲ್ಪನೆಯು. ಹೊರತು ಇದರಲ್ಲಿ ನನ್ನ ಕಲ್ಪನೆಯಿಂದ ಬರೆಯಲ್ಪಟ್ಟ ವಿಷಯವೂ ಕೆಲವು ಇರುವದು. ಬರೆಯತಕ್ಕ ತಾತ್ಪರ್ಯವಿಷ್ಟೇ. ನಮ್ಮೊಳಗಿನವನೊಬ್ಬನು ಬರೆದ ನಿಬಂಧಗಳೆಂದು ನಮ್ಮ ವ್ಯವಸಾಯ ಬಂಧುಗಳು ಈ ಪುಸ್ತಕದ ವಿಷಯವಾಗಿ ಉದಾಶೀನರಾಗಬಾರದು.[2] ಮತ್ತು ಕೇವಲ ಭಾಷಾಂತರವೆಂದು ತಿಳಿದು ನಿರಭಿಮಾನಿಗಳೂ ಆಗಬಾರದು".

'ಹುಲಿ', 'ನದಿ' ಇತ್ಯಾದಿ ವರ್ಣನಪರ ನಿಬಂಧಗಳು 2, 'ಅರ್ಕಾಟ ಯುದ್ಧ'ದಂಥ ಕಥನಪರ ನಿಬಂಧಗಳು 2, ಮತ್ತು 'ಜ್ಞಾನವೇ ಬಲ', 'ಗ್ರಂಥಾವಲೋಕನ', 'ಸ್ವದೇಶಾಭಿಮಾನ', 'ಶಾಂತಿ' ಮೊದಲಾದ ಚಿಂತನಪರ ನಿಬಂಧಗಳು 36- ಹೀಗೆ ಒಟ್ಟು ಈ ಗ್ರಂಥದಲ್ಲಿ

---

1. 'ಶಾಲಾಪತ್ರಕ', ಏಪ್ರಿಲ 1898
2. ತಮ್ಮ 'ಪದ್ಯಾರ್ಥಸಾರ'ವನ್ನು ಟೀಕಿಸಿ ಬರೆದ ಶ್ರೀ ಬಾಳೇಕುಂದ್ರಿ ಶಿಕ್ಷಕರಂಥವರನ್ನು ಬಹುಶಃ ನೆನೆದು, ಗಳಗನಾಥರು ಹೀಗೆ ಕೋರಿರಬಹುದು.

45 ನಿಬಂಧಗಳಿವೆ. ಕೊನೆಯಲ್ಲಿ ಪತ್ರವ್ಯವಹಾರದ ಬಗ್ಗೆ ವಿವರಿಸಲಾಗಿದೆ. ಆರಂಭದಲ್ಲಿ ನಿಬಂಧ ರಚನೆಯನ್ನು ಹುಡುಗರಿಗೆ ಹೇಳಿಕೊಡುವ ಪದ್ಧತಿಯನ್ನೂ ವಿವರಿಸಿರುವರು.

ಕನ್ನಡ ಭಾಷೆಯಲ್ಲಿ ಸಂಸ್ಕೃತ ಪದಗಳ ಬಳಕೆಯ ಬಗ್ಗೆ ಗಳಗನಾಥರು ವ್ಯಕ್ತಪಡಿಸಿದ ಮಾತುಗಳು ವಿಚಾರಣೀಯವಾಗಿವೆ. "ಈಗ್ಗೆ ಕನ್ನಡ ಭಾಷೆಯು ತೀರ ನಿಕೃಷ್ಟ ಸ್ಥಿತಿಯಲ್ಲಿ ರುತ್ತದೆಂಬ ಮಾತು ನಿಜವು. ಅದರೊಳಗಿನ ನ್ಯೂನತೆಗಳನ್ನು ತೆಗೆದುಹಾಕಲಿಕ್ಕೆ ಹಲವು ಕನ್ನಡ ಪಂಡಿತರ ಯತ್ನವು ನಡೆದಿದೆ. ವಿದ್ವಾಂಸರು ತಮ್ಮ ತಮ್ಮ ತಿಳುವಳಿಕೆಯ ಪ್ರಕಾರ ಅದರಲ್ಲಿ ಸುಧಾರಣೆಯನ್ನು ಮಾಡುತ್ತಿರುವರು. ಶರೀರ, ವನಸ್ಪತಿ, ಭೂಗರ್ಭ, ರಸಾಯನ, ಜ್ಯೋತಿಷ ಮೊದಲಾದ ಶಾಸ್ತ್ರಗಳೊಳಗಿನ ಪಾರಿಭಾಷಿಕ ಶಬ್ದಗಳು ಸಂಸ್ಕೃತ ಶಬ್ದಗಳ ರೂಪದಿಂದ ಕನ್ನಡದಲ್ಲಿ ಬೆದರುತ್ತ ಬೆದರುತ್ತ ಮೆಲ್ಲನೆ ಹಣಿಕಿ ಹಾಕಹತ್ತಿರುತ್ತವೆ....ಈಗ ಕನ್ನಡದಲ್ಲಿ ಪ್ರಕಟವಾಗುತ್ತಿರುವ ವರ್ತಮಾನಪತ್ರ, ಮಾಸಿಕ ಪುಸ್ತಕ, ಇತರ ಗ್ರಂಥಗಳನ್ನು ನೋಡಿದರೆ, ಈ ಸ್ಥಿತಿಯು ಅಂದರೆ ಸಂಸ್ಕೃತ ಕನ್ನಡ ಭಾಷೆಯು ಪ್ರಚಾರದಲ್ಲಿ ಬರುತ್ತ ನಡೆದದ್ದು ಗೊತ್ತಾಗುವದು. ಸುಲಭ ಭಾಷೆಯಿಂದ ಗ್ರಂಥಗಳನ್ನು ಬರೆಯುವದು ವಿದ್ವಾಂಸರ ಕೆಲಸ ವಲ್ಲೆಂದು ಬಹುತರ ಎಲ್ಲರ ತಿಳುವಳಿಕೆಯಾಗಿರುವದರಿಂದಲೂ, ಗ್ರಂಥ ಬರೆಯುವವರೆಲ್ಲರೂ ತಾವು ವಿದ್ವಾಂಸರೆಂದು ತಿಳಿಯುತ್ತಿರುವದರಿಂದಲೂ ಈ ಸಂಸ್ಕೃತ ಕನ್ನಡ ಭಾಷೆಯು ಪ್ರಚಾರ ದಲ್ಲಿ ಬರುತ್ತ ನಡೆದದ್ದು ಗೊತ್ತಾಗುವದು.

ವಿದ್ಯಾರ್ಥಿಗಳು ಮಾತ್ರ ಅರ್ಥವು ಚೆನ್ನಾಗಿ ತಿಳಿಯುವಂಥ ಹಾಗು ವ್ಯಾಕರಣ ಶುದ್ಧ ವಾದ ಅಚ್ಚಗನ್ನಡ ಭಾಷೆಯನ್ನು ಬರೆಯಬೇಕು. ಮತ್ತು ಸಂಸ್ಕೃತ ಇಲ್ಲವೆ ಅನ್ಯದೇಶೀಯ ಶಬ್ದಗಳನ್ನು ತಕ್ಕಪ್ಪಕ್ಕಿಂತ ಹೆಚ್ಚು ಬೆರಿಸುವದರಿಂದ ಭಾಷೆಯು ಹೆಚ್ಚು ಚಂದವಾಗುತ್ತದೆಂಬ ತಿಳಿವಳಿಕೆಯನ್ನು ಬಿಡಬೇಕು. ಕನ್ನಡ ಭಾಷೆಯು ಪ್ರೌಢವಾಗುವದಕ್ಕಾಗಿ ಅಥವಾ ತನಗೆ ಕೆಲವು ಸಂಸ್ಕೃತ ಶಬ್ದಗಳು ಬರುತ್ತವೆಂಬ ಹೆಮ್ಮೆಯನ್ನು ತೋರಿಸುವದಕ್ಕಾಗಿ ವಿದ್ಯಾರ್ಥಿಯು ಸಂಸ್ಕೃತ ಕನ್ನಡ ಭಾಷೆಯನ್ನು ಬರೆಯಬಾರದು....ಭಾಷಾಶೈಲಿಯು ಆವೇಶಯುಕ್ತವಾಗಿರಬೇಕು. ಅಳು ಬುರುಕ ಭಾಷೆಯನ್ನು ಓದುವದಕ್ಕೆ ಮನಸ್ಸಿಗೆ ಉತ್ಸಾಹವಾಗುವದಿಲ್ಲ" ಎಂದು ಮುಂತಾಗಿ ಬರೆದಿರುವರು.

ಇಲ್ಲಿಯ ಪ್ರಬಂಧಗಳಲ್ಲಿ ಕೆಲವು ವಿಚಾರಗಳು ತುಂಬ ಮನನೀಯವಾಗಿವೆ. ಉದಾ ಹರಣೆಗಾಗಿ 'ಸ್ತ್ರೀಶಿಕ್ಷಣ'ದ ಬಗ್ಗೆ ಬರೆಯುತ್ತ ಗಳಗನಾಥರು, "ಸ್ತ್ರೀ ಚಿಕ್ಕಮಕ್ಕಳ ಆರಂಭದ ಗುರು. ತಾಯಿಯ ಮೇಲಿದ್ದಷ್ಟು ಅವರ ಪ್ರೀತಿ ವಿಶ್ವಾಸಗಳು ಮತ್ತಾರ ಮೇಲೆಯೂ ಇರುವ ದಿಲ್ಲ. ಒಬ್ಬ ತಾಯಿಯ ಹಿತೋಪದೇಶದಿಂದ ಚಿಕ್ಕಮಕ್ಕಳ ಕಲ್ಯಾಣವಾಗುವಷ್ಟು ನೂರಾರು ಸತ್‌ಶಿಕ್ಷಕರಿಂದಾಗುವದು ಸಂಶಯ. ಗಂಜಿಯ ವಸ್ತ್ರದಂತೆ ನಿರ್ಮಲವಾಗಿದ್ದ ಚಿಕ್ಕಮಕ್ಕಳ ಮನಸ್ಸಿನ ಮೇಲೆ ತಾಯಿಯ ಸಹವಾಸದಿಂದಾದ ಒಳ್ಳೆಯ ಅಥವಾ ಕೆಟ್ಟ ಕಲೆಗಳ ಪರಿಣಾಮ ಗಳು ಕಡೆತನಕ ನಿಲ್ಲುವವು". ಅದರಂತೆ 'ದೇಶಾಭಿಮಾನ'ದ ಬಗ್ಗೆ ಅವರ ವಿಚಾರಗಳೂ ಮೌಲಿಕವಾಗಿವೆ. "ಒಬ್ಬ ಬಡವನು ತನ್ನ ಕೆಲಸವು ತೀರ ಕ್ಷುಲ್ಲಕವಿದ್ದರೂ ಅದನ್ನು ಮನ ಮುಟ್ಟಿ ಮಾಡಿ, ಅದರಲ್ಲಿ ತಕ್ಕ ಸುಧಾರಣೆಗಳನ್ನು ಮಾಡಿದರೆ ಅವನು ದೇಶಾಭಿಮಾನಿಯೇ.... ದೇಶೀ ಅರಿವೆಗಳನ್ನು ಕೊಳ್ಳುವದು ದೇಶಾಭಿಮಾನಿಗಳಿಗೆ ಭೂಷಣ. ಆದರೆ ಕೊಳ್ಳುವವರ

ಮನಸ್ಸಿಗೆ ಬಾರದಂಥ ಮತ್ತು ತುಟ್ಟಿಯಾದಂಥ[1] ಅರಿವೆಗಳನ್ನೂ ಉತ್ಪನ್ನಮಾಡುವದು ಮಾತ್ರ ದೇಶಾಭಿಮಾನಿಗಳ ಕೆಲಸವಲ್ಲ. ತಮ್ಮ ದೇಶದ ಅರಿವೆಗಳು ಉಳಿದ ದೇಶಗಳ ಅರಿವೆಗಳಿಗಿಂತ ಮೇಲಾಗಬೇಕೆಂಬ ಹವ್ಯಾಸ ಹಿಡಿದು ಉತ್ತಮ ಅರಿವೆಗಳನ್ನು ಮಾಡುತ್ತ ಹೋಗುವದೂ ದೇಶಾಭಿಮಾನವೇ". ಇಂಥ ವಿಚಾರಗಳಲ್ಲಿ ಗಳಗನಾಥರ ಸ್ವಂತಿಕೆ ಅಲ್ಲಲ್ಲಿ ಮಿಂಚಿದೆ.

ಪ್ರಿನ್ಸಿಪಾಲ ಕರಂದೀಕರರಿಗೆ ಅರ್ಪಿಸಿದ ಈ ಪುಸ್ತಕದಲ್ಲಿ ಗಳಗನಾಥರು ಬೇರೆಯವರಿಂದಲೂ ಆರ್ಥಿಕ ನೆರವು ದೊರೆತುದನ್ನು ಸ್ಮರಿಸಿರುವರು. ಆ ಕಾಲಕ್ಕೆ "ಈ ಪದ್ಧತಿಯ ಪುಸ್ತಕವು ಕನ್ನಡದಲ್ಲಿ ಇದೇ ಮೊದಲಿನ"ದೆಂದು ಅವರು ಹೇಳಿರುವುದು ಗಮನಾರ್ಹವಾಗಿದೆ. ಈ ಗ್ರಂಥದ ಬಗ್ಗೆ ಬರೆಯುತ್ತ ಡಾ. ಹಾವನೂರ ಅವರು "....ಅವರ ಪ್ರಗತಿಪರ ವಿಚಾರಗಳನ್ನು ಕಾಣುತ್ತೇವೆ. ಅಲ್ಲದೆ ಅನೇಕ ಕಡೆಗಳಲ್ಲಿ ಅವರ ಸ್ವಂತದ ವ್ಯಕ್ತಿತ್ವ, ಒಲವು, ನಿಲುವು ಹಾಗು ಜೀವನ ಧ್ಯೇಯಗಳನ್ನು ಬಿಂಬಿಸುವಂತಹವಾಗಿವೆ"[2] ಎಂದು ಹೇಳಿರುವಲ್ಲಿ ಅತಿಶಯೋಕ್ತಿಯಿಲ್ಲ.

'ಲಘುನಿಂಬಧ ಸಂಗ್ರಹ'ವು ಆ ರೀತಿಯ ಗ್ರಂಥಗಳಲ್ಲಿ ಗಳಗನಾಥರ ಪ್ರಥಮ ಪ್ರಯತ್ನವಾಗಿದೆ. ಅದಕ್ಕೆ ಅವರು ಮರಾಠಿಯ ನಿಬಂಧಗಳ ಸಹಾಯವನ್ನೂ ತುಸು ಮಟ್ಟಿಗೆ ಪಡೆದಿರುವರು. ಆದರೆ ಅದೇ ರೀತಿಯ ಗ್ರಂಥವಾದರೂ ಅವರ **'ನಿಬಂಧ ಶಿಕ್ಷಣ'**ವು ಮಾತ್ರ ತುಂಬ ಪ್ರೌಢವಾದ, ಪಕ್ವವಾದ ಕೃತಿ. ಇದು ಗಳಗನಾಥರ ಸ್ವತಂತ್ರ ರಚನಾಶಕ್ತಿಗೆ ನಿದರ್ಶನವಾಗಿದೆ. ಈ 'ನಿಬಂಧ ಶಿಕ್ಷಣ'ವನ್ನು ಬರೆಯುವ ಕಾಲಕ್ಕೆ ಗಳಗನಾಥರು ಧಾರವಾಡದ ಕನ್ನಡ ಶಿಕ್ಷಕರ ಟ್ರೇನಿಂಗ ಕಾಲೇಜಿನಲ್ಲಿ ಅಧ್ಯಾಪಕರಾಗಿ ಬಡತಿ ಹೊಂದಿದ್ದರು. ಈ 'ನಿಬಂಧ ಶಿಕ್ಷಣ'ವು ಡಿಸೆಂಬರ 1909ರಿಂದ 'ಶಾಲಾಪತ್ರಕ'ದಲ್ಲಿ ಭಾಗಶಃ ಪ್ರಕಟವಾಗತೊಡಗಿತು. ಮುಂದೆ 1910ರಲ್ಲಿ ಇದನ್ನು ಧಾರವಾಡದ ತೊನಸಿ ಬುಕ್ ಡಿಪೋದವರು ಪುಸ್ತಕರೂಪದಲ್ಲಿ ಪ್ರಕಟಿಸಿರಬೇಕೆಂದು ತೋರುತ್ತದೆ. ಅವರು 1910ನೆಯ ಇಸ್ವಿಯ ಅಗಸ್ಟ ತಿಂಗಳ 'ಶಾಲಾ ಪತ್ರಕ'ದಲ್ಲಿ ಈ ಗ್ರಂಥದ ಜಾಹೀರಾತನ್ನೂ ಕೊಟ್ಟಿರುವರು.

"....ಲಘು ನಿಬಂಧಸಂಗ್ರಹ, ನಿಬಂಧ ರತ್ನಾಕರಗಳು ತೀರಿದ್ದರಿಂದ, ನಿಬಂಧ ಶಿಕ್ಷಣವೆಂಬ ಪುಸ್ತಕವನ್ನು ಸಂಗ್ರಹಿಸಿರುತ್ತೇವೆ. ಅದರ ಬೆಲೆ 12ಆಣೆ ಇದ್ದು, 8ಆಣೆಗೆ ಕೊಡುವೆವು. ಪತ್ತೆ :- ಭೀಮಾಚಾರ್ಯ ಹೊಸೂರ, ತೊನಸಿ ಬುಕ್ ಡಿಪೋ ಧಾರವಾಡ".[3]

ಗಳಗನಾಥರ 'ನಿಬಂಧ ಶಿಕ್ಷಣ' ಹೆಚ್ಚು ಶಾಸ್ತ್ರೀಯವಾಗಿ ಬರೆದ ಗ್ರಂಥ. 'ಆರಂಭದ ಸೂಚನೆ'ಗಳಲ್ಲಿ ಗಳಗನಾಥರು "ಎಲ್ಲ ವಿಷಯಗಳ ಶಿಕ್ಷಣಕ್ಕಿಂತ ನಿಬಂಧ ಶಿಕ್ಷಣವು ಜಿಗಿಯಾದದ್ದೆಂದು ಹೇಳಲವಶ್ಯವಿಲ್ಲ. ಸದ್ಯಕ್ಕೆ ಎಷ್ಟೋ ಶಿಕ್ಷಕರು ಈ ವಿಷಯವನ್ನು ಕಲಿಸುವಾಗ ತೊಂದರೆಗೊಳಗಾಗುವದೇ ಇದಕ್ಕೆ ಸಾಕ್ಷಿಯಾಗಿದೆ. ಈ ತೊಂದರೆಯು ದೂರವಾಗಿ ಕಲಿಸುವವರಿಗೂ ಕಲಿಯುವವರಿಗೂ ಕೆಲಮಟ್ಟಿಗೆ ಸಹಾಯವಾಗಬೇಕೆಂಬ ಉದ್ದೇಶದಿಂದ ನಿಬಂಧ

---

1. ಆಗ ಖಾದಿ ಬಟ್ಟೆಗಳು ತುಂಬ ಹೆಚ್ಚಿನ ಬೆಲೆಗೆ ಸಿಗುತ್ತಿದ್ದುವೆಂಬುದನ್ನು ನೆನೆಯಬೇಕು.
2. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 6
3. ಶಾಲಾಪತ್ರಕ, ಅಗಸ್ಟ 1909, ಕವರ 3ನೆಯ ಪುಟ. ಆದರೆ 'ನಿಂಬಧ ಶಿಕ್ಷಣ' ಗ್ರಂಥವು ಮಾತ್ರ ಈಗ ಉಪಲಬ್ಧವಾಗಿಲ್ಲ.

ಶಿಕ್ಷಣಕ್ರಮವನ್ನು ಕೊಡುವ ಮೊದಲು ಅದಕ್ಕೆ ಸಂಬಂಧಿಸಿದ ಕೆಲವು ಉಪಯುಕ್ತ ಸೂಚನೆಗಳನ್ನು" ಕೊಟ್ಟಿರುವರು.

ಪರೀಕ್ಷೆ ಸಮೀಪ ಬಂದಾಗ ಮಾತ್ರ ನಿಬಂಧ ಬರೆಸಬಾರದು; ವಿದ್ಯಾರ್ಥಿಗಳಿಗೆ ಮೀರಿದ ವಿಷಯಗಳ ಬಗ್ಗೆ ಬರೆಸಬಾರದು. ನಿಬಂಧಗಳನ್ನು ತಿದ್ದುವಾಗ ವಿದ್ಯಾರ್ಥಿಗಳ ಬರಹವನ್ನು ಸಂಪೂರ್ಣವಾಗಿ ಅಲ್ಲಗಳೆಯುವದು ಲಾಭಕರವಲ್ಲ. ಹಾಗೆ ಮಾಡಿದರೆ ಅವರ ಉತ್ಸಾಹವು ಕುಗ್ಗುವದು. ಮೊದಮೊದಲು ದೊಡ್ಡ ತಪ್ಪುಗಳನ್ನು ಮಾತ್ರ ತಿದ್ದಬೇಕು; ವಿದ್ಯಾರ್ಥಿಗಳ ಬರವಣಿಗೆಗೆ ಅವಶ್ಯವಾದ ಜ್ಞಾನವು ದೊರೆಯುವಂತೆ ಅವರಿಗೆ ಸರಳ, ಸುಲಭ, ಜ್ಞಾನ-ನೀತಿ ಬೆಳೆಯುವಂಥ ಪುಸ್ತಕಗಳನ್ನು ಓದಿಸಬೇಕು; ಸಂಸ್ಕೃತ, ಕನ್ನಡ ಶ್ಲೋಕಗಳನ್ನೂ ಕೆಲವು ಮನೋಹರ ಸಂಭಾಷಣೆಗಳನ್ನೂ ಅಮರಕೋಶ ಪದ್ಯರೂಪವಾದ ಕನ್ನಡಕೋಶ ಮೊದಲಾದವುಗಳನ್ನು ಪಾಠ ಮಾಡಿಸಬೇಕು; ಬರಹದಲ್ಲಿ ಕಠಿಣ ಶಬ್ದಗಳನ್ನೂ ಅಶುದ್ಧ ಶಬ್ದಗಳನ್ನೂ ಗ್ರಾಮ್ಯ ಶಬ್ದಗಳನ್ನೂ ಕಾರಣವಿಲ್ಲದೆ ಅನ್ಯದೇಶೀಯ ಶಬ್ದಗಳನ್ನೂ ಉಪಯೋಗಿಸಗೊಡಬಾರದು; ಯಾವನಾದರೂ ವ್ಯಕ್ತಿಗೆ, ಸಮಾಜಕ್ಕೆ ಅಥವಾ ಸರಕಾರಕ್ಕೆ ವಿರುದ್ಧವಾದ ಸಂಗತಿಗಳನ್ನೂ ಬರೆಯಗೊಡಬಾರದು: ವ್ಯಾಕರಣಶುದ್ಧತೆ ವಿರಾಮ ಚಿಹ್ನಗಳು ಮೊದಲಾದವುಗಳ ಕಡೆಗೆ ಗಮನವೀಯಬೇಕು– ಇವೇ ಮೊದಲಾದ, ಇಷ್ಟೇ ಏಕೆ, ಪ್ರತಿಯೊಬ್ಬ ವಿದ್ಯಾರ್ಥಿಯು ಅಚ್ಚುಕಟ್ಟಾದ ಎರಡು ಪುಸ್ತಕಗಳನ್ನು ಕಟ್ಟಬೇಕು ಎಂಬ ಮೊದಲಾದ ಸೂಚನೆಗಳನ್ನೂ ಸಹ ಆರಂಭದಲ್ಲಿಯೇ ಕೊಟ್ಟಿರುವರು.

ಮುಂದೆ (1) ಸಹಜಾನುಭೂತಿಯ ವಿಷಯಗಳು, (2) ಕಲ್ಪನಾಶಕ್ತಿಯ ಕೃತ್ರಿಮಾನುಭವದ ವಿಷಯಗಳು (3) ಕಥೆಗಳು (4) ಪತ್ರವ್ಯವಹಾರ ಹೀಗೆ ವಿಷಯಗಳನ್ನು ವಿಭಜಿಸಿ. ಪ್ರತಿಯೊಂದರ ವಿಷಯ ವಿವೇಚನೆಯ ಕ್ರಮುಗಳನ್ನು ವಿವರವಾಗಿ ತಿಳಿಸಿ, ಉದಾಹರಣೆಗಾಗಿ ಕೆಲವು ನಿಬಂಧಗಳನ್ನು ತಾವೇ ಬರೆದು ತೋರಿಸಿರುವರು. ಅಂಥವುಗಳಲ್ಲಿ 'ಹುಡುಗರ ಪಂತಿ', 'ಬ್ರಾಹ್ಮಣ ಹುಡುಗರ ದಿಸದ ಬಟ್ಟೆಗಳು', 'ಗಣೇಶನ ಆಟ', '4ನೆಯ ಇಯತ್ತೆಯವರು ಆಡಿದ ಗಣೇಶನ ಆಟ', 'ಧಾರವಾಡದ ಪ್ರವಾಸ', 'ದೆವ್ವನ ಸುದ್ದಿ', 'ಒಂದು ಪೌರಾಣಿಕ ಪ್ರಸಂಗ', 'ಸುಭದ್ರೆಯೂ ಶ್ರೀಕೃಷ್ಣನೂ' ಇಂಥ ಮೊದಲಾದವುಗಳನ್ನು ಮೆಚ್ಚಬಹುದಾಗಿದೆ. ಈ ನಿಬಂಧಗಳು ಬಾಲಕರನ್ನೇ ಗಮನದಲ್ಲಿರಿಸಿಕೊಂಡು, ಬಾಲಕರ ಮಾನಸಿಕ ಸ್ಥಿತಿ, ಅವರ ಕಲ್ಪನಾಶಕ್ತಿ, ಅವರ ಜ್ಞಾನದ ಮಟ್ಟ, ಬರವಣಿಗೆಯ ಸಿದ್ಧತೆ– ಮೊದಲಾದವುಗಳಿಗೆ ಅನುಗುಣವಾಗಿಯೇ ಬರೆಯಲ್ಪಟ್ಟಿವೆ. ಈ ನಿಬಂಧಗಳು ನುರಿತ ಗಳಗನಾಥ ಮಾಸ್ತರರ ವ್ಯಕ್ತಿತ್ವದ ಮೇಲೆ ಕೂಡ ತುಂಬ ಬೆಳಕು ಬೀರುವಂತಿವೆ. ಈ ನಿಬಂಧಗಳು ಇಂದಿನ ಬಾಲಕರಿಗೂ ಉಪಯುಕ್ತವಾಗಿವೆಯೆಂದರೆ ಅತಿಶಯೋಕ್ತಿಯಾಗಲಾರದು.

ಅಂತೂ 'ಪದ್ಯಾರ್ಥಸಾರ', 'ಲಘು ನಿಬಂಧ ಸಂಗ್ರಹ' ಮತ್ತು 'ನಿಬಂಧ ಶಿಕ್ಷಣ'ಗಳಂಥ ಪುಸ್ತಕಗಳಿಂದ ಸುಪ್ರೀತರಾದ ಶಿಕ್ಷಣತಜ್ಞ ರಾವಜಿ ಕರಂದೀಕರರು "ಗಳಗನಾಥನು ಸಮರ್ಥ ಶಿಕ್ಷಕನು, ಗೊತ್ತಿದ್ದ ವಿಷಯವನ್ನು ಸವಿಯಾಗಿ ಬರೆಯುವನು"[1] ಎಂದು ತಮ್ಮ ಪ್ರಿಯ ಶಿಷ್ಯನನ್ನು ಹೊಗಳಿದರು.

1. ಗಳಗನಾಥ: ಸದ್ಗುರು ಪ್ರಭಾವ, ಪುಟ 7

1911ರಲ್ಲಿ ಗಳಗನಾಥರು **'ರಾಜನಿಷ್ಠೆಯೂ ನಮ್ಮ ಪುಣ್ಯಶಾಲಿಗಳಾದ ಸಾರ್ವಭೌಮನರೂ'**ಎಂಬ ಚಿಕ್ಕ ಪ್ರಬಂಧದ ಪುಸ್ತಕವನ್ನು ಕೃಷ್ಣಾಜಿ ಶಂಕರ ಇಂಗಳೆಕರ ಎಂಬವರೊಡನೆ ಕೂಡಿಕೊಂಡು ಬರೆದರು. ಈಗ ಈ ಗ್ರಂಥ ಲಭ್ಯವಾಗಿಲ್ಲ. ಇದು ತೀರ ಚಿಕ್ಕದಾಗಿರಬೇಕು. ಯಾಕೆಂದರೆ 1914ರ ಅಗಸ್ಟ–ಸಪ್ಟೆಂಬರ ತಿಂಗಳುಗಳ 'ಸದ್ಬೋಧ ಚಂದ್ರಿಕೆ'ಯ ಸಂಯುಕ್ತ ಸಂಚಿಕೆಯ 3ನೆಯ ಪುಟದಲ್ಲಿ "ನಮ್ಮಲ್ಲಿ ದೊರೆಯತಕ್ಕ ಮುಖ್ಯವಾದ ಪುಸ್ತಕಗಳು" ಎಂಬ ಪಟ್ಟಿಯಲ್ಲಿ 'ರಾಜನಿಷ್ಠೆ'ಯ ಹೆಸರೂ ಇದೆ. ಆಗ ಅದರ ಬೆಲೆ ಕೇವಲ ಒಂದು ಆಣೆ. ಗಳಗನಾಥರು ಯಾವಾಗಲೂ ರಾಜನಿಷ್ಠೆಯುಳ್ಳವರಾಗಿದ್ದರೆಂಬಲ್ಲಿ ಸಂದೇಹವಿಲ್ಲ. ಆಗ 'ಸದ್ಬೋಧ ಚಂದ್ರಿಕೆ'ಯನ್ನು "ಧರ್ಮ-ನೀತಿ-ರಾಜಭಕ್ತಿ ಮೊದಲಾದವುಗಳನ್ನು ಬೋಧಿಸಿ, ಮನೋರಂಜನವನ್ನುಂಟು ಮಾಡುವ ಮಾಸಪತ್ರಿಕೆ" ಎಂದು ಗಳಗನಾಥರೇ ಕರೆದಿರುವರು.

"ಭಾರತದಲ್ಲಿ ಬ್ರಿಟಿಷರ ಸಾರ್ವಭೌಮತ್ವವು ಗಳಗನಾಥರಿಗೆ ಇಷ್ಟವಾದ ವಿಷಯ! ....ಇದೊಂದು ನಮಗೆ ಒಪ್ಪಲಾಗದ ವಿಷಯವಾದರೂ ಸನಾತನ ಧರ್ಮಾಭಿಮಾನಿಗಳಾಗಿದ್ದ ಅವರಿಗೆ ಬ್ರಿಟಿಷರು ಬಹಿರಂಗವಾಗಿಯಾದರೂ ತೋರುತ್ತಿದ್ದ ಧರ್ಮಸಹಿಷ್ಣುತೆ, ಪ್ರಜಾಹಿತದ ಕೆಲವು ಆಡಳಿತಕಾರ್ಯ–ಇವು ಗಳಗನಾಥರ ಈ ವಿಶಿಷ್ಟ ನಿಲುಮೆಗೆ ಕಾರಣವಾಗಿದ್ದವು"[1] ಎಂದು ಡಾ. ಹಾವನೂರರು ಅಭಿಪ್ರಾಯಪಡುವರು. ಡಾ. ಹಾವನೂರರು ಕೊಟ್ಟ ಕಾರಣಗಳನ್ನು ಕೆಲವರು ಒಪ್ಪದಿರಬಹುದು. ಆದರೆ ಗಳಗನಾಥರು ಬ್ರಿಟಿಶರಿಗೆ ನಿಷ್ಠರಾಗಿದ್ದರೆಂಬುದು ಮಾತ್ರ ನಿಜವಾದ ಮಾತು. ಅದಕ್ಕೆ ಬೇರೆ ನಿದರ್ಶನಗಳೂ ಸಿಗುತ್ತವೆ.

ಗಳಗನಾಥರು 1912ರಲ್ಲಿ **'ದಾಂಪತ್ಯ'**ವನ್ನೂ, 1913ರಲ್ಲಿ **'ಕುಟುಂಬ'**ವನ್ನೂ ಬರೆದರು. ಇವೆರಡೂ ಪುಸ್ತಕಗಳು ಚಿಕ್ಕವಾಗಿದ್ದರೂ ಅವು ಗಳಗನಾಥರ ಸಂಪೂರ್ಣ ಸ್ವತಂತ್ರ ಕೃತಿಗಳಾಗಿವೆ. ಇವೆರಡೂ ಕೃತಿಗಳು ಮೊದಲು 'ಸದ್ಬೋಧ ಚಂದ್ರಿಕೆ'ಯಲ್ಲಿ ಕ್ರಮಶಃ ಅಚ್ಚಾಗಿ ಅನಂತರ ಪುಸ್ತಕರೂಪದಲ್ಲಿ ಪ್ರಕಟವಾದುವು.

'ದಾಂಪತ್ಯ'ದ ಪ್ರಸ್ತಾವನೆಯಲ್ಲಿ ಗಳಗನಾಥರು, "ಇದು ಸಾಧಾರಣವಾಗಿ ನನ್ನ ಸ್ವತಂತ್ರ ಲೇಖವೆಂದು ಹೇಳಬಹುದು. ಸ್ವತಂತ್ರ ಲೇಖಗಳನ್ನು ಬರೆಯುವ ಸ್ಫೂರ್ತಿಯು ನಾನು ಕಾಲೇಜದ ಉಪಶಿಕ್ಷಕನಾದಾಗಿನಿಂದ ಉತ್ಪನ್ನವಾಯಿತು. 'ಶಾಲಾಪತ್ರಿಕೆ'ಯಲ್ಲಿ ಬಂದಿರುವ ಬರವಣಿಗೆಯ ಸಂಬಂಧದ ನನ್ನ ಹಲವು ಲೇಖನಗಳೇ ಈ ಸ್ಫೂರ್ತಿಯನ್ನು ಉತ್ಪನ್ನ ಮಾಡಿದವು....ಸ್ಥಾನಮಹಾತ್ಮ್ಯ, ವಿದ್ವತ್ಸಮಾಗಮ ಇವುಗಳ ಪುಣ್ಯದಿಂದಲೇ ಅಂಕುರಿಸಿದ ಸ್ಫೂರ್ತಿಯಿಂದ ಈ ಚಿಕ್ಕ ಲೇಖವು ಸದ್ಯಕ್ಕೆ ಪೂರ್ಣವಾಗಿರುವದು........ಈ ಲೇಖದಲ್ಲಿ ಏನಾದರೂ ಅರ್ಥವಿರುವದೋ ಇಲ್ಲವೋ ಎಂಬುದರ ನಿರ್ಣಯವನ್ನು ನಮ್ಮ ವಾಚಕರು ಮಾಡೇಮಾಡುವರು".[2]

ವಾಚಕರು 'ದಾಂಪತ್ಯ'ವನ್ನೂ, ಅದರಂತೆ ಮುಂದೆ ಬಂದ 'ಕುಟುಂಬ'ವನ್ನೂ ತುಂಬ ಮೆಚ್ಚಿದರು. ಅನೇಕರು ತಮಗೆ ಅಭಿನಂದನ ಪತ್ರಗಳನ್ನು ಬರೆದರೆಂದು 'ಕುಟುಂಬ'ದ ಪ್ರಸ್ತಾ

1. ಶ್ರೀನಿವಾಸ ಹಾವನೂರ: ಗಳಗನಾಥ ಮಾಸ್ತರರು, ಪುಟ 30
2. ಗಳಗನಾಥ: ದಾಂಪತ್ಯ, ಪ್ರಸ್ತಾವನೆ.

ವನೆಯಲ್ಲಿ ಲೇಖಕರು ತಿಳಿಸಿರುವರು. 'ದಾಂಪತ್ಯ'ದ ಮೊದಲನೆಯ ಪ್ರಕರಣ 'ದಾಂಪತ್ಯದ ಮಹತ್ವ'ವು,

ಹೆಣ್ಣನ್ನು ಹೊನ್ನನ್ನು ಹಣ್ಣಾದ ಫಲಗಳನು
ಕಣ್ಣಾರೆ ಕಂಡು ಬಯಸದ
ಅಣ್ಣಗಳಾರು, ಸರ್ವಜ್ಞ

ಎಂಬ ತ್ರಿಪದಿಯಿಂದ ಆರಂಭವಾಗುತ್ತದೆ. ಮುಂದೆ 'ವಿವಾಹ', 'ಸ್ತ್ರೀ ಪುರುಷರ ಯೋಗ್ಯತೆಯ ತೋಲನವು', 'ಸ್ತ್ರೀಯ ಸ್ವಾತಂತ್ರ್ಯವೊ ಸ್ವಚ್ಛಂದ ವೃತ್ತಿಯೊ ? ', 'ಸಂತತಿ', 'ಸಂತತಿಯ ರಕ್ಷಣ' ಮತ್ತು 'ಇಹಪರ ಸುಖಸಾಧನ' ಎಂಬ ಪ್ರಕರಣಗಳಿವೆ. ಅಲ್ಲಲ್ಲಿ ರಾಮಾಯಣ, ಮಹಾಭಾರತ ಮೊದಲಾದವುಗಳಲ್ಲಿಯ ನಿದರ್ಶನಗಳಿವೆ.

"ದೇವಪಿತೃ ಸಂತರ್ಪಣ, ಅತಿಥಿಸತ್ಕಾರ, ಭೃತ್ಯಸಂರಕ್ಷಣ" ಸ್ವದಾರಾ ನಿರತತ್ವ, ಪರೋಪಕಾರ ಇವು ಗೃಹಸ್ಥಾಶ್ರಮಿಗಳ ಪವಿತ್ರವಾದ ಮುಖ್ಯ ಧರ್ಮಗಳಾಗಿರುವವು"[1] "ವಿವಾಹವು ಬ್ರಾಹ್ಮಣ, ಗಾಂಧರ್ವ, ರಾಕ್ಷಸ, ಅಸುರ, ಪೈಶಾಚ ಎಂದು ಐದು ವಿಧವಾಗಿರುತ್ತದೆ...."[2] "ದಂಪತಿಗಳು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವು ಲಭಿಸುವಂತೆ ನಡಕೊಳ್ಳುವದು ಅತ್ಯವಶ್ಯವು."[3] ಎಂಬಂಥ ಹಲವು ಮಾತುಗಳಲ್ಲಿ ಗಳಗನಾಥರ ಸನಾತನ ವಿಚಾರಶ್ರದ್ಧೆ ಕಂಡುಬರುತ್ತದೆ. ಆದರೆ "ಬಾಲ್ಯಾವಸ್ಥೆಯಲ್ಲಿ ಮಕ್ಕಳ ಲಗ್ನ ಮಾಡುವದೂ ಹಾನಿಕರವಾಗಿರುತ್ತದೆ"[4]. "ಇತ್ತಿತ್ತ ವರದಕ್ಷಿಣೆಯ ನೆವದಿಂದ ವರವಿಕ್ರಯವು ಭರದಿಂದ ರೂಢವಾಗಹತ್ತಿದೆ. ವಧುವಿನ ಗುಣ-ರೂಪಗಳಿಗಿಂತ ವರದಕ್ಷಿಣೆಯ ಮಹತ್ವವು ಹೆಚ್ಚುತ್ತಲಿದೆ".[5] "ಸ್ತ್ರೀಯರಿಗೆ ವಿದ್ಯೆ ಕಲಿಸಿದರೆ ಅವರು ಪುರುಷರ ಮಾನ ಕಾಯುವದಿಲ್ಲೆಂದು ಕೆಲವರು ತಿಳಿಯುತ್ತಾರೆ. ಆದರೆ ಈ ತಿಳವಳಿಕೆಯು ಕೇವಲ ಕ್ಷುಲ್ಲಕವಾದದ್ದು"[6] ಎಂಬಂಥ ಮಾತುಗಳು ಗಳಗನಾಥರ ನವೀನ ವಿಚಾರ ಪ್ರಣಾಲಿಗೆ ಸಾಕ್ಷಿಯಾಗಿವೆ. ಈ ಗ್ರಂಥದ ಪ್ರತಿಯೊಂದು ಪ್ರಕರಣದಲ್ಲೂ–ಅದರಲ್ಲೂ 'ಸಂತತಿಯ ರಕ್ಷಣ'ಎಂಬ ಪ್ರಕರಣದಲ್ಲಿ ಹೆಚ್ಚಾಗಿ–ಗಳಗನಾಥರ ಸ್ವವಿಚಾರಗಳು ನಿರೂಪಿತವಾಗಿವೆ.

'ದಾಂಪತ್ಯ'ವನ್ನು ಬರೆದ ಮರುವರ್ಷವೇ ಅಂದರೆ 1913ರಲ್ಲಿಯೇ ಗಳಗನಾಥರು 'ಕುಟುಂಬ'ಎಂಬ 88 ಪುಟಗಳ ಒಂದು ಪ್ರಬಂಧ ಗ್ರಂಥವನ್ನು ಬರೆದರು. "ಇದು ಸ್ವತಂತ್ರ ಲೇಖವು, ಎರಡನೆಯ ಲೇಖದ ಭಾಷಾಂತರವಾಗಲಿ–ರೂಪಾಂತರವಾಗಲಿ–ಸಾರಶೋಷಣವಾಗಲಿ ಇರುವದಿಲ್ಲ. 'ಚಂದ್ರಿಕೆ'ಯ ಪ್ರತಿತಿಂಗಳ ವಿಷಯದಲ್ಲಿ, ಈ ಪ್ರಬಂಧದ ಪ್ರಕರಣಗಳನ್ನು ಬರೆಯುವಾಗ ಲೇಖಕನಿಗೆ ಆದಷ್ಟು ಶ್ರಮವೂ, ವಿಲಂಬವೂ ಬೇರೆ ಯಾವ ವಿಷಯ ಬರೆಯಬೇಕಾದರೂ ಆಗಿರುವದಿಲ್ಲ. ಈ ಪ್ರಬಂಧವು ಹ್ಯಾಗೆ ಪೂರ್ಣವಾದೀತೆಂಬ ಚಿಂತೆಯು ಇಡಿಯ ವರ್ಷ ಲೇಖಕನ ಮನಸ್ಸಿನಲ್ಲಿ ಕಟ್ಟಿಯುತ್ತಿತ್ತು"[7] ಎಂದು ಹೇಳುವಲ್ಲಿ ತಮಗೆ

1. ಗಳಗನಾಥ : ದಾಂಪತ್ಯ, ಪ್ರಸ್ತಾವನೆ (2ನೆಯ ಮುದ್ರಣ), ಪುಟ 9
2. ಅದೇ, ಪುಟ 13
3. ಅದೇ, ಪುಟ 69 (4) ಅದೇ, ಪುಟ 15
5. ಅದೇ, ಪುಟ 19 (6) ಅದೇ, ಪುಟ 77
7. ಗಳಗನಾಥ : ಕುಟುಂಬ (1ನೆಯ ಆವೃತ್ತಿ) ಪ್ರಸ್ತಾವನೆ.

ಸ್ವತಂತ್ರ ಲೇಖನ ಎಷ್ಟು ಕಷ್ಟದಾಯಕವಾಯಿತೆಂದು ನಿವೇದಿಸಿರುವರು. ಸ್ವತಂತ್ರವಾಗಿರುವು ದಲ್ಲದೆ, ಇದು ವಿಚಾರ ಪ್ರಚೋದಕ ಪ್ರಬಂಧ. ಕಥೆ ಕಾದಂಬರಿಯಾಗಿದ್ದರೆ, ಆ ಮಾತು ಬೇರೆಯಾಗುತ್ತಿತ್ತೇನೋ!

22ವರ್ಷ ಸಂಸಾರ ಮಾಡುವಾಗ ಲೇಖಕನಿಗೆ ತನ್ನ ಹಾಗೂ ತನ್ನವರ ಕುಟುಂಬಗಳಲ್ಲಿ ಅನುಭವಕ್ಕೆ ಬಂದ, ಮತ್ತು ಬೇರೆ ಕುಟುಂಬಗಳಲ್ಲಿ ಕಣ್ಣಿಗೆ ಬಿದ್ದ ಸಂಗತಿಗಳನ್ನೂ, ಹೊರಟ ಸಿದ್ಧಾಂತಗಳನ್ನೂ, ಅನುಮಾನಗಳನ್ನೂ ಈ ಪ್ರಬಂಧದಲ್ಲಿ ಸೇರಿಸಿ, ಅವುಗಳನ್ನು ವಿಸ್ತರಿಸಿ ಬರೆಯಲಾಗಿದೆ. ಒಂದೊಂದು ಪ್ರಕರಣವು ಒಂದೊದು ಸ್ವತಂತ್ರ ಪ್ರಬಂಧವೆಂಬಂತೆ ಬರೆಯ ಲಾಗಿದೆ. ಗ್ರಂಥದಲ್ಲಿ ಕುಟುಂಬದ ಘಟನೆ, ಸಂಬಂಧಗಳ ತಾರತಮ್ಯ, ಸುಖದುಃಖಗಳ ಮೂಲ, ಯಜಮಾನನು, ಅರ್ಧಾಂಗವು, ಉಪಾಂಗಗಳು, ಕುಟುಂಬದ ಪ್ರಕಾರಗಳು ಮತ್ತು ಕುಟುಂಬದವರ ನಡತೆ– ಎಂಬ ಎಂಟು ಪ್ರಬಂಧಗಳಿವೆ. ಪ್ರತಿಯೊಂದು ಲೇಖನದಲ್ಲಿಯೂ ಗಳಗನಾಥರ ಸ್ವಂತ ವಿಚಾರಸರಣಿ ವ್ಯಕ್ತವಾಗಿದೆ.

"ಈ ಪ್ರಬಂಧದ ವಿಷಯವು ಮನೋರಂಜಕ ಕಾದಂಬರಿಯಂತೆ ಪಳಕ್ಕನೆ ಮನಸ್ಸಿನಲ್ಲಿ ಹೊಳೆದು ವಾಚಕರ ಮನಸ್ಸನ್ನು ರಂಜಿಸಲು ತಕ್ಕದ್ದಲ್ಲದಿದ್ದರೂ, ವಾಚಕರು ನಿರ್ಧಾರದಿಂದ ಅದಕ್ಕೆ ತಮ್ಮ ಮನಸ್ಸನ್ನು ಒಪ್ಪಿಸಿದರೆ, ಅದು ಮನಸ್ಸಿನ ದೋಷಗಳನ್ನು ಕೆಲಮಟ್ಟಿಗಾ ದರೂ ದೂರಮಾಡದೆ ಇರಲಾರದೆಂದು ಲೇಖಕನು ನಂಬಿರುತ್ತಾನೆ....ಔಷಧಪ್ರಾಯದ ಈ ಪ್ರಬಂಧವನ್ನು ಉದಾಸೀನ ಮಾಡಿ ಚಲ್ಲಿಕೊಡದೆ, ಒಂದೆರಡು ಸಾರೆಯಾದರೂ ಮನಸ್ಸು ಗೊಟ್ಟು ಓದಬೇಕೆಂದು ಲೇಖಕನು ವಿನಯದಿಂದ ಪ್ರಾರ್ಥಿಸುವನು"[1] ಎಂದು ಹೇಳುವಲ್ಲಿ ಗಳಗನಾಥರು ತಮ್ಮ ಗ್ರಂಥದ ಬಗ್ಗೆ ಹೊಂದಿದ ಆತ್ಮವಿಶ್ವಾಸವು ವ್ಯಕ್ತವಾಗಿದೆ.

'ದಾಂಪತ್ಯ' ಮತ್ತು 'ಕುಟುಂಬ' ಗ್ರಂಥಗಳ ಬಗ್ಗೆ ಡಾ. ಹಾವನೂರ ಅವರು ತುಂಬ ಪ್ರಶಂಸೆಯ ಮಾತುಗಳನ್ನು ಆಡಿರುವರು. "ಒಟ್ಟಿನಲ್ಲಿ ಇದು ಗಳಗನಾಥರ ಸ್ವತಂತ್ರ ವಿಚಾರ ಸರಣಿಗೆ ಸುಸ್ಪಷ್ಟ ನಿದರ್ಶನವಾಗಿದೆ. ಕುಟುಂಬದಲ್ಲಿ ಸಮಾವೇಶವಾಗುವ ಅನೇಕ ಜನರ ಮನೋವೈಚಿತ್ರ್ಯಗಳನ್ನು ಹೃದ್ಯವಾಗಿ ಚಿತ್ರಿಸಿರುವುದರಿಂದ ಇದಕ್ಕೆ ಸಾಮಾಜಿಕ ಕಾದಂಬರಿಯ ಸ್ವರೂಪವೂ ಆಗೀಗ ಪ್ರಾಪ್ತವಾಗಿದೆ. ತಮ್ಮ ವಿಚಾರ ಮಂಡನೆಯಲ್ಲಿ ಅವರು ತೋರಿದ ವಾದವೈಖರಿಯು ಬೆರಗುಗೊಳಿಸುವಂತಿದೆ; ನೇರವಾಗಿ ವಾಚಕರ ಮನಸ್ಸಿಗೆ ತಾಗುತ್ತವೆ".[2] ಈ ಮಾತುಗಳಲ್ಲಿ ಹೆಚ್ಚಿನ ಪ್ರಶಂಸೆ ಕಂಡರೂ, ಸತ್ಯಾಂಶವೂ ಇದೆ. ಈ ಎರಡೂ ಪ್ರಬಂಧ ಗಳಲ್ಲಿ 'ಕುಟುಂಬ'ವು ಹೆಚ್ಚು ಜನಪ್ರಿಯವಾಯಿತು. 1918ರಲ್ಲಿಯೇ ಅದರ ಎರಡನೆಯ ಆವೃತ್ತಿಯ ಎರಡು ಸಾವಿರ ಪ್ರತಿಗಳು ಅಚ್ಚಾದುವು. 'ದಾಂಪತ್ಯ'ವು ಮಾತ್ರ ಎರಡನೆಯ ಮುದ್ರಣಕ್ಕಾಗಿ 1951ರ ವರೆಗೆ ಕಾಯಬೇಕಾಯಿತು.

ಗಳಗನಾಥರ **'ಸುಂದರ ಲೇಖ ಸಮುಚ್ಚಯ'**ವು ಅನೇಕ ಪ್ರಬಂಧಗಳನ್ನು ಒಂದು ಗೂಡಿಸಿದ ಸಂಕಲನವಾಗಿದೆ. ಇದರೊಳಗಿನ ಲೇಖನಗಳೆಲ್ಲವೂ 1919ರಲ್ಲಿ ಆರಂಭವಾದ ಅವರ 'ಸದ್ಗುರು' ಮಾಸಪತ್ರಿಕೆಯಲ್ಲಿ ಪ್ರಕಟವಾದವುಗಳೇ ಆಗಿವೆ. ಗ್ರಂಥದ ಮುಖಪುಟದ ಮೇಲೆ "ಲೇಖಕ ಮತ್ತು ಸಂಪಾದಕ"ರೆಂದು ಗಳಗನಾಥರ ಹೆಸರಿದೆ. ಗ್ರಂಥವು "ಹಾವೇರಿಯ

1. ಗಳಗನಾಥ : ಕುಟುಂಬ ( 1 ನೆಯ ಆವೃತ್ತಿ ) ಪ್ರಸ್ತಾವನೆ.
2. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 38

ಶ್ರೀ ವೆಂಕಟೇಶ ಮುದ್ರಣಾಲಯದಲ್ಲಿ ಮುದ್ರಿತವಾಯಿತು" ಎಂದೂ ತಿಳಿಸಿದ ಗಳಗನಾಥರು ಮುದ್ರಣದ ವರ್ಷವನ್ನು ಮಾತ್ರ ಕಾಣಿಸಿಲ್ಲ. ಗ್ರಂಥದಲ್ಲಿ ಎರಡು ದಿನಾಂಕಗಳು ಪ್ರಕಟವಾಗಿವೆ. ಜುಲೈ 1920ರ 'ಸದ್ಗುರು' ಸಂಚಿಕೆಯ ಮುಖಪುಟವೇ ಒಂದೆಡೆ ಬಂದಿದ್ದರೆ, 'ಎಳ್ಳು ಸಕ್ಕರೆಯು' ಎಂಬ ವ್ಯಾಕವ್ಯಂದದ ಕೊನೆಯಲ್ಲಿ 15-1-1920 ಎಂದು ದಿನಾಂಕವನ್ನು ಕೊಡಲಾಗಿದೆ. ಇದರಿಂದ ಈ 'ಸುಂದರ ಲೇಖ ಸಮುಚ್ಚಯ'ವು 1920ರ ಅನಂತರ ಪ್ರಕಟವಾಗಿರಬೇಕೆಂಬುದು ಸ್ಪಷ್ಟವಿದೆ. 'ಸದ್ಗುರು' ಮಾಸಪತ್ರಿಕೆಯ ಎಲ್ಲ ಸಂಚಿಕೆಗಳು ಅಲಭ್ಯವಾದ ಕಾರಣ ಪ್ರತಿಯೊಂದು ಲೇಖನದ ಪ್ರಕಟಣೆಯ ವರ್ಷವನ್ನು ನಿರ್ಧರಿಸುವುದೂ ಸಾಧ್ಯವಿಲ್ಲವಾಗಿದೆ. ಹಾಗಿದ್ದರೂ ಈ ಗ್ರಂಥವು 1920ರ ಅನಂತರವೂ, 1928ರ ಪೂರ್ವದಲ್ಲೂ ಪ್ರಕಟವಾಗಿರಬೇಕೆಂಬುದು ಖಚಿತ. ಯಾಕೆಂದರೆ 1928ರಲ್ಲಿ ಪ್ರಕಟವಾದ ಅವರ 'ಸದ್ಗುರು ಪ್ರಭಾವ'ದ ಕೊನೆಯಲ್ಲಿ ಕೊಟ್ಟ ಗಳಗನಾಥರ ಗ್ರಂಥಗಳ ಪಟ್ಟಿಯಲ್ಲಿ "ಸುಂದರ ಲೇಖ ಸಮುಚ್ಚಯ, ಬೆಲೆ ಎಂಟು ಆಣೆ" ಎಂದಿದೆ. ಇನ್ನೂ ಖಚಿತವಾಗಿ ಹೇಳಬಹುದಾದರೆ, ಈ ಗ್ರಂಥವು 1926 ಮತ್ತು 1928ರ ಮಧ್ಯೆ ಪ್ರಕಟವಾಗಿರಬಹುದೆಂದು ಊಹಿಸಬಹುದಾಗಿದೆ. ಯಾಕೆಂದರೆ 1926ರಲ್ಲಿ ಪ್ರಕಟವಾದ ಅವರ 'ರಾಮಾಯಣಾಮೃತ'ದ ಕೊನೆಯಲ್ಲಿ ಕೊಟ್ಟಿರುವ ಪುಸ್ತಕಗಳ ಪಟ್ಟಿಯಲ್ಲಿ 'ಸುಂದರ ಲೇಖ ಸಮುಚ್ಚಯ'ದ ಹೆಸರು ಕಾಣುವುದಿಲ್ಲ. ಈ ಆಧಾರ ನಂಬಲರ್ಹವೆನ್ನಬಹುದಾದರೂ, ಇದು ನಕಾರಾತ್ಮಕ ಆಧಾರವೇ ಆಗುತ್ತದೆ. ಯಾಕೆಂದರೆ 1926ರ ಪಟ್ಟಿಯಲ್ಲಿ ಈ ಗ್ರಂಥದ ಹೆಸರಿನ ಉಲ್ಲೇಖವಿಲ್ಲ ಎಂಬುದರಿಂದಲೇ, ಅದು ಆ ಮೊದಲೇ ಪ್ರಕಟವಾಗಿರಲಿಲ್ಲ – ಎಂದು ನಿರ್ಧಾರವಾಗಿ ಹೇಳಲಾಗದು. ಆದ್ದರಿಂದ 1920ರ ಅನಂತರ ಮತ್ತು 1928 ಪೂರ್ವದಲ್ಲಿ ಪ್ರಸ್ತುತ 'ಸುಂದರ ಲೇಖ ಸಮುಚ್ಚಯ'ವು ಪ್ರಕಟವಾಯಿತೆಂದು ಹೇಳುವದು, ಬೇರೆ ಖಚಿತ ಆಧಾರಗಳಿಲ್ಲದಿರುವಾಗ, ಹೆಚ್ಚು ಉಚಿತವಾದುದು. ಪುಸ್ತಕ ಎಂದು ಪ್ರಕಟವಾಗಿದ್ದರೂ, ಅಲ್ಲಿಯ ಲೇಖನಗಳೆಲ್ಲ ಸಾಮಾನ್ಯವಾಗಿ 1920–21ರಲ್ಲಿ ಬರೆದವುಗಳೇ ಆಗಿವೆ. ಯಾಕೆಂದರೆ 'ಸದ್ಗುರು' ಮಾಸಪತ್ರಿಕೆ ಆ ಕಾಲಕ್ಕೆ ಮಾತ್ರ ನಿಯಮಿತವಾಗಿ ಪ್ರಕಟವಾಗುತ್ತಿತ್ತು.

'ಸುಂದರ ಲೇಖ ಸಮುಚ್ಚಯ'ವು ಗ್ರಂಥದ ಹೆಸರೇ ಸೂಚಿಸುವಂತೆ ಅನೇಕ ಸುಂದರವಾದ ಲೇಖನಗಳ ಸಂಕಲನವಾಗಿದೆ. ಇವುಗಳಲ್ಲಿ ಸಮಾವೇಶವಾದ ಕೆಲವು ಲೇಖನಗಳು ತುಂಬ ದೊಡ್ಡವೂ ಆಗಿವೆ. 'ಕಲಿತಾಂಡವ ಅಥವಾ ಬ್ರಾಹ್ಮಣ–ಬ್ರಾಹ್ಮಣೇತರ ಕೋಟೆಗಳು' ಎಂಬುದು 26 ಪುಟಗಳಷ್ಟಿದ್ದರೆ, 'ಧರ್ಮ'ಎಂಬುದು 34 ಪುಟಗಳನ್ನು ವ್ಯಾಪಿಸಿದೆ. 'ಕಲಿಕಾಲ ಮಹಿಮೆ' 14 ಪುಟ, 'ಪುತ್ರಬಲಿ' 16 ಪುಟ, 'ಗೃಹಶಿಕ್ಷಣ' 8 ಪುಟ ಮತ್ತು 'ಅಥಣಿಯ ಶ್ರೀಶಿವಯೋಗಿ ವೈಭವವು' 8 ಪುಟಗಳ ಲೇಖನಗಳು; ಉಳಿದುವು ಚಿಕ್ಕವು. ಗಳಗನಾಥರು ತಮ್ಮ ಗುರುಗಳಾದ ಶೇಷಾಚಲ ಸ್ವಾಮಿಗಳನ್ನು ಕುರಿತು, ಅವರ ಉಪದೇಶವನ್ನು ಕುರಿತು 'ಸದ್ಗುರು' ಮತ್ತು 'ಸದ್ಗುರು ಸೂಕ್ತಿಮಾಲೆ' ಎಂದು ಕೆಲವು ಪುಟಗಳನ್ನು ಬರೆದಿರುವರು. ಹಾವೇರಿಯಲ್ಲಿ ತಾವು ಆರಂಭಿಸಿದ 'ಶೇಷಾಚಲ ವೇದ ಮತ್ತು ಸಂಸ್ಕೃತ ಪಾಠಶಾಲೆ'ಯನ್ನು ಕುರಿತು ಬರೆದ ಒಂದು ಲೇಖನವೂ ಉಂಟು.

ಇಲ್ಲಿ ಬಂದಿರುವ ಲೇಖನಗಳಲ್ಲಿ ಧರ್ಮ-ಸಮಾಜಗಳನ್ನು ಕುರಿತಾದವುಗಳೇ ಹೆಚ್ಚಾಗಿವೆ. ಗಳಗನಾಥರು ಧರ್ಮದ ವಿಶಾಲ ಅರ್ಥವನ್ನು ಕೊಡಲು ಯತ್ನಿಸಿರುವರು. ಅವರು ತಮ್ಮ

ಒಂದು ಲೇಖನದಲ್ಲಿ ಜಗದೀಶಚಂದ್ರ ಬೋಸರ ಪ್ರಸ್ತಾಪವನ್ನು ಮಾಡಿ, "ಆ ಮಹಾತ್ಮರು ಗಿಡಗಂಟಿಗಳ ಬಗ್ಗೆ ಮೇಲೆ ಹೇಳಿದ ಭೃಗುಮುನಿಗಳ ಸಿದ್ಧಾಂತವನ್ನೇ ಅದ್ಯಾಪಿ ಪ್ರಯೋಗ ಮಾಡಿ ತೋರಿಸಿರುತ್ತಾರೆ" ಎಂದು ಹೇಳಿ ಪಾಶ್ಚಾತ್ಯರೂ ಇವರಿಂದ ಬೆರಗಾದವರೆಂದೂ, ಭಾರತದಲ್ಲಿ ಇಂಥ ರತ್ನಪ್ರಾಯರಾದ ಮಹಾಪುರುಷರು ಜನಿಸಿರುವರೆಂದೂ ಅಭಿಮಾನದಿಂದ ಹೇಳಿರುವರು. "ಲೋಕದಲ್ಲಿರುವ ಧರ್ಮಗಳಿಗೆಲ್ಲ ವೈದಿಕ ಧರ್ಮವೇ ಮಿಗಿಲಾದದ್ದೆಂಬ ಸಿದ್ಧಾಂತವನ್ನು ಎಲ್ಲರೂ ಒಪ್ಪಿಕೊಳ್ಳುವಂತೆ ಮಾಡಿದ" ವಿವೇಕಾನಂದರನ್ನೂ, ವಿದ್ಯಾರಣ್ಯರನ್ನೂ ಗಳಗನಾಥರು ಎತ್ತಿ ತೋರಿಸಿರುವರು. 'ಕಲಿಕಾಲ ಮಹಿಮೆ' ಮತ್ತು 'ಕಲಿತಾಂಡವ' ಎಂಬ ಎರಡೂ ಲೇಖನಗಳು ಬ್ರಾಹ್ಮಣ ಎಂಬ ಶಬ್ದದ ನಿಜವಾದ ಅರ್ಥವನ್ನೂ, ಜನರು ಮಾಡುವ ಅಪಾರ್ಥವನ್ನೂ, ಬ್ರಾಹ್ಮಣರ ನಿಜವಾದ ಕರ್ತವ್ಯವನ್ನೂ, ಬ್ರಾಹ್ಮಣ-ಬ್ರಾಹ್ಮಣೇತರರಲ್ಲಿರಬೇಕಾದ ಸೌಹಾರ್ದಭಾವವನ್ನೂ ಕುರಿತು ವಿವರಿಸಿರುವವು. ಅವರು ಈ ಮೊದಲೇ 'ಮಾನವ ಸರ್ವಸ್ವ' ಅಥವಾ 'ಬ್ರಾಹ್ಮಣರೂ-ಬ್ರಾಹ್ಮಣೇತರರೂ' ಎಂಬ ಲೇಖವನ್ನು ಬರೆಯಬೇಕೆಂದು ಮಾಡಿದ್ದರು. ಆ ವಿಚಾರಗಳನ್ನೇ ಇಲ್ಲಿ 'ಕಲಿತಾಂಡವ'ದಲ್ಲಿ ನಿರೂಪಿಸಿರುವರು. 'ಸದ್ಗುರು ಶ್ರೀಶೇಷಮುನಿಗಳು' ಎಂಬ ಲೇಖನಮಾಲೆಯನ್ನೇ ಬರೆಯಬೇಕೆಂದು ಅಪೇಕ್ಷಿಸಿದ್ದ ಗಳಗನಾಥರು ಇಲ್ಲಿ 'ಉಪೋದ್ಘಾತ'ವನ್ನು ಮಾತ್ರ ಕೊಟ್ಟಿರುವರು. ಇದರಲ್ಲಿ ಶೇಷಗುರುಗಳ ಬಗ್ಗೆ ಗಳಗನಾಥರಲ್ಲಿದ್ದ ಅಪಾರವಾದ ಶ್ರದ್ಧೆಯನ್ನೂ, ಅದರ ಜೊತೆಗೇ ಗಳಗನಾಥರ ವಸ್ತುನಿಷ್ಠ ದೃಷ್ಟಿಯನ್ನೂ ಕಾಣಬಹುದಾಗಿದೆ. "ಸಿಕ್ಕ ಹಾಗೆ ಚರಿತ್ರಗಳಲ್ಲಿ ಕೃತ್ರಿಮ ಮಹಿಮೆಗಳ ಸಂಗ್ರಹಮಾಡುವದು ಸರಿಯಲ್ಲ. ಅದು ಒಂದು ಬಗೆಯ ಪಾಪವಾಗಿರುವದೆಂದು ನಾವು ತಿಳಿಯುತ್ತೇವೆ. ಅನ್ನಕ್ಕಿಂತ ತವಿಯೇ ಘನವಾಯಿತೆನ್ನುವಂತೆ, ಸನ್ಮಾರ್ಗ ದರ್ಶನಕ್ಕಿಂತ ಮಹಿಮಾದರ್ಶನವನ್ನೇ ಮುಂದೆಮಾಡಿ ಚರಿತ್ರ ಬರೆಯುವದು ಈಗಿನ ಕಿಟಿಕಿಟಿಯ ಅವಿಶ್ವಾಸದ ಕಾಲಕ್ಕಾದರೂ ಉಪಯುಕ್ತವಾಗಿ ಪರಿಣಮಿಸಲಿಕ್ಕಿಲ್ಲ" ಎಂಬ ಅವರ ವಿಚಾರಗಳು ಅವರ ದೃಷ್ಟಿಕೋನವನ್ನು ಸೂಚಿಸುತ್ತವೆ.

'ಗೃಹಶಿಕ್ಷಣ'ಎಂಬ ಲೇಖನದಲ್ಲಿ ತಂದೆ ತಾಯಿಗಳು ಮನೆಯಲ್ಲಿ ಮಕ್ಕಳಿಗೆ ಒದಗಿಸಬೇಕಾದ ಸದಾಚಾರ-ಸದ್ಗುಣಗಳ ಬಗ್ಗೆ ವಿವರಿಸಿರುವರು. ಇದು ಗಳಗನಾಥರ ಸ್ವಾನುಭವದ ಸ್ವತಂತ್ರ ವಿಚಾರಗಳ ನಿರೂಪಣೆ. ಗಳಗನಾಥರು ಮುಂದೆ ಬರೆಯಬೇಕೆಂದಿದ್ದ ವಿಸ್ತೃತ ಲೇಖನದ ರೂಪರೇಷೆ ಮಾತ್ರ ಇಲ್ಲಿದೆ. 'ಅಥಣಿಯ ಶ್ರೀ ಶಿವಯೋಗಿ-ವೈಭವವು' ಎಂಬುದು ಗಳಗನಾಥರ ವಿಶಾಲ ದೃಷ್ಟಿಗೆ ಸಾಕ್ಷಿಯಾದ ಲೇಖನವು. ಅವರು ತಮ್ಮ ಶೇಷಗುರುಗಳಿಗೂ, ಶಿವಯೋಗಿಗಳಿಗೂ ಅಭೇದವನ್ನು ಕಂಡಿರುವರು. ಲೇಖನವು ಅಪೂರ್ಣವಾಗಿದೆ. ಈ ಸಂಗ್ರಹದಲ್ಲಿ 'ಪುತ್ರಬಲಿ' ಎಂಬ ಒಂದೇ ಒಂದು ಕಥೆಯೂ ಇದೆ. 16 ಪುಟಗಳ ಈ ಕಥೆಯನ್ನು ಓದಿದರೆ, ಶೈಲಿಯ ದೃಷ್ಟಿಯಿಂದ ಪರೀಕ್ಷಿಸಿದರೆ ಅದು ಗಳಗನಾಥರದೆಂದು ಕಾಣುವುದಿಲ್ಲ. ಬಂಗಾಲದ ಹಿನ್ನೆಲೆಯಲ್ಲಿ ಬರೆದ ಈ ಕಥೆಯು ಪ್ರಾಣಿವಧೆ ತ್ಯಾಜ್ಯವೆಂದು ಬೋಧಿಸುತ್ತದೆ. ಬಹುಶಃ ಇದು ಬಂಗಾಲಿ ಕಥೆಯೊಂದರ ಅನುವಾದವಿರಬೇಕು. ಬೇರೆ ಲೇಖಕರು ಭಾಷಾಂತರಿಸಿದ್ದ ಮತ್ತು 'ಸದ್ಗುರು' ಮಾಸಪತ್ರಿಕೆಯಲ್ಲಿ ಪ್ರಕಟವಾಗಿದ್ದ ಈ ಕಥೆಯನ್ನು ಗಳಗನಾಥರು ಈ ಸಂಗ್ರಹದಲ್ಲಿ ಸೇರಿಸಿರಬಹುದು.

ಅಂತೂ ಈ 'ಸುಂದರ ಲೇಖ ಸಮುಚ್ಚಯ'ವು ಗಳಗನಾಥರು ಬರೆದ ಮತ್ತು

ಸಂಪಾದಿಸಿದ 'ಸದ್ಗುರು' ಮಾಸಪತ್ರಿಕೆಯ ಬಿಡಿ ಲೇಖನಗಳ ಸಂಗ್ರಹ. ಈ ಸಂಗ್ರಹಕ್ಕಾಗಿಯೇ ಬರೆದ ಲೇಖನಗಳು ಅದರಲ್ಲಿಲ್ಲ. ಬಹುಶಃ ಮಾರಾಟವಾಗದೆ ಉಳಿದ 'ಸದ್ಗುರು' ಮಾಸ ಪತ್ರಿಕೆಯ ಹಳೆಯ ಸಂಚಿಕೆಗಳಿಂದ ಈ ಬಿಡಿ ಲೇಖನಗಳನ್ನು ಆಯ್ದು ಅವನ್ನೇ ಪುಸ್ತಕ ರೂಪದಲ್ಲಿ ಪ್ರಕಟಿಸಿರಬೇಕೆಂಬ ಊಹೆಗೆ ಆಸ್ಪದವಿದೆ. ಈ ಪುಸ್ತಕದಲ್ಲಿಯ ಪುಟಗಳಿಗೆಲ್ಲ ಅನುಕ್ರಮ ಸಂಖ್ಯೆಗಳೇ ಇಲ್ಲ. ಪ್ರತಿಯೊಂದು ಲೇಖನಕ್ಕೂ ಸ್ವತಂತ್ರವಾದ ಅನುಕ್ರಮ ಪುಟ ಸಂಖ್ಯೆಗಳಿವೆ.

1928ರಲ್ಲಿ ಪ್ರಕಟವಾದ ಗಳಗನಾಥರ **'ಸದ್ಗುರು ಪ್ರಭಾವ'**ವು ಅನೇಕ ರೀತಿಯಿಂದ ಮಹತ್ತ್ವದ ಗ್ರಂಥವಾಗಿದೆ. ಗಳಗನಾಥರ ಆತ್ಮಚರಿತ್ರೆಯ ಹಲವು ಅಂಶಗಳನ್ನು ಇದು ಒಳಗೊಂಡಿದೆ. ಪುಸ್ತಕಗಳ ಮಾರಾಟಕ್ಕಾಗಿ ಬೆಂಗಳೂರಿಗೆ ಹೋಗಿದ್ದ ಗಳಗನಾಥರು ಅಲ್ಲಿ ನಾಲ್ಕು ತಿಂಗಳು ವಾಸಮಾಡಿ ಸುಮಾರು 700 ಪುಟಗಳ ಸಾಹಿತ್ಯವನ್ನು ಬರೆದು, ಅಲ್ಲಿಯೇ ಮುದ್ರಿಸಿದರು. ಆ ನಾಲ್ಕು ಗ್ರಂಥಗಳಲ್ಲಿ 'ಸದ್ಗುರು ಪ್ರಭಾವ'ವೆಂಬ ಪ್ರಬಂಧ ಗ್ರಂಥವೂ ಒಂದು. ಇದನ್ನು ಗಳಗನಾಥರು "ಸುರಸ ಪ್ರಬಂಧರೂಪ ತುಲಸೀಪತ್ರ" ಎಂದು ಕರೆದಿರು ವರು. 127 ಪುಟಗಳ ಈ ಗ್ರಂಥವು ಗಳಗನಾಥರ ಜೀವನ ಚರಿತ್ರೆಯನ್ನೂ ಅವರ ಗ್ರಂಥೋ ದ್ಯಮವನ್ನೂ ತಿಳಿಯಲು ಬಹು ಉಪಯುಕ್ತವಾಗಿದೆ. ಇದರಲ್ಲಿಯ 'ಪೀಠಿಕೆ', 'ನನ್ನ ಸದ್ಗುರು', 'ಬೆಂಗಳೂರ ಧನೌದಾರ್ಯ', 'ಬೆಂಗಳೂರ ಗುಣೌದಾರ್ಯ', 'ಗಳಗನಾಥರ ಪುಸ್ತಕಗಳು', 'ಗಳಗನಾಥನ ಆಶೆ', 'ವಿನಯದ ಬೇಡಿಕೆ' ಮತ್ತು 'ಪುಸ್ತಕಗಳ ಸಂಕ್ಷಿಪ್ತವರ್ಣನೆ' –ಎಂಬ ಎಂಟು ಅಧ್ಯಾಯಗಳಿಂದ ಗಳಗನಾಥರ ಶಿಕ್ಷಣ, ಶಿಕ್ಷಕವೃತ್ತಿ ಅವರ ಗುರುಭಕ್ತಿ, ಬೆಂಗಳೂರಿನ ಬಗ್ಗೆ ಅವರಲ್ಲಿದ್ದ ಆದರ, ಅದಕ್ಕೆ ಕಾರಣ, ಅವರು ಪುಸ್ತಕಗಳನ್ನು ಬರೆದುದರ ಉದ್ದೇಶ, ಬರೆಯಬೇಕೆಂದು ಯೋಜಿಸಿದ ಪುಸ್ತಕಗಳ ರೂಪರೇಷೆಗಳು, ಧನಸಹಾಯಕ್ಕಾಗಿ ಅವರ ಯಾಚನೆಯ ಆವಶ್ಯಕತೆ ಮತ್ತು ಆಗಲೇ ಪ್ರಕಟವಾದ ಅವರ ಪುಸ್ತಕಗಳ ಪರಿಚಯ— ಇವೆಲ್ಲ ತಿಳಿಯುತ್ತವೆ. ಮುಖ್ಯವಾಗಿ ಗಳಗನಾಥರ ಮನೋಧರ್ಮ ಮತ್ತು ಅವರ ಇಡಿಯ ವ್ಯಕ್ತಿತ್ವವನ್ನೇ ತಿಳಿಯಲು ಅವರ ಈ 'ಸದ್ಗುರು ಪ್ರಭಾವ'ವು ತುಂಬ ಸಹಾಯಕವಾಗಿದೆ. ಈ ಗ್ರಂಥವನ್ನು ಡಾ. ಬೆಟಗೇರಿಯವರು "ಸತ್ಪುರುಷರ ಚರಿತ್ರೆ"ಗಳ ಮಾಲಿಕೆಯಲ್ಲಿ ಸೇರಿಸಿ ದ್ದಾರೆ.[1] ಆದರೆ ಇದನ್ನು "ನಿಬಂಧ-ಪ್ರಬಂಧ" ವಿಭಾಗದಲ್ಲಿ ಸೇರಿಸುವುದೇ ವಿಹಿತ. ಇದು ಗಳಗನಾಥರ ಆತ್ಮಚರಿತ್ರೆ ಇದ್ದಂತಿದೆಯಲ್ಲದೆ, ಅವರು ಬರೆದ 'ನಿರ್ಯಾಣ ಮಹೋತ್ಸವ' ಮತ್ತು 'ಕಲಿ ಕುಠಾರ' ಮೊದಲಾದ ಗ್ರಂಥಗಳ ಮಾದರಿಯ ಕೃತಿಯಲ್ಲ.

ಬೆಂಗಳೂರಿನಲ್ಲಿರುವಾಗಲೇ (1927–28) ಗಳಗನಾಥರು **'ಗೀತೆಯ ಶ್ರವಣಾಧಿ ಕಾರ'** ಮತ್ತು **'ಶ್ರೀ ವಿವೇಕಾನಂದರು ವೈದಿಕರಿಗೆ ಯಾರು?'** ಎಂಬ ಎರಡು ಚಿಕ್ಕ ಪ್ರಬಂಧಗಳನ್ನೂ ಪ್ರಕಟಿಸಿದರು. ಬೆಂಗಳೂರಿನಲ್ಲಿ ಅವರು ಮಾಡಿದ ಭಾಷಣಗಳೇ ಈ ಚಿಕ್ಕ ಗ್ರಂಥಗಳು. "ಕಾದಂಬರಿಯ ವಿಷಯವಲ್ಲದೆ ಪ್ರಬಂಧರೂಪದ 144 ಪುಟದ ವಿಷಯವನ್ನು ಬರೆದಿರುವೆನು. ಇದರಲ್ಲಿ ಈ 'ಸದ್ಗುರು ಪ್ರಭಾವ'ವು ಒಂದಾಗಿದ್ದು ಇನ್ನೆರಡು ಸಣ್ಣ ಭಾಷಣಗಳಿರುವವು. ಅವು 'ಗೀತೆಯ ಶ್ರವಣಾಧಿಕಾರ', 'ಶ್ರೀ ವಿವೇಕಾನಂದರು ವೈದಿಕರಿಗೆ

1. ಕರ್ನಾಟಕ ಭಾರತಿ, 1–2 ಪುಟ 112

ಯಾರು ?' ಎಂಬವು. ಒಟ್ಟಿಗೆ, ಪ್ರಬಂಧದ ಪುಟಗಳೆಲ್ಲ ಪ್ರಿಂಟಾಗಿರುವವೆಂದು ಹೇಳಬಹುದು"[1] ಎಂದು ಅವರೇ ತಿಳಿಸಿರುವರು. ಆದರೆ ಈ ಎರಡೂ ಚಿಕ್ಕ ಗ್ರಂಥಗಳು ಈಗ ದೊರೆಯುವುದಿಲ್ಲ. ಆ ಕಾಲಕ್ಕೆ ಅವರು ಬೆಂಗಳೂರಿನಲ್ಲಿ ಕೆಲವೆಡೆ ಭಾಷಣಗಳನ್ನೂ ಮಾಡಿದರು. ಪುಸ್ತಕ ಮಾರಾಟದ ಕಾರ್ಯದಲ್ಲಿ ಸಹಾಯಕರಾಗಿ ಆಗ ಅವರ ಜೊತೆಗೆ ಹೋಗಿದ್ದ ಹಾವೇರಿಯ ಶ್ರೀ ದತ್ತಾತ್ರೇಯ ವಿರೂಪಾಕ್ಷ ಸಿಂದಗಿ ಅವರು "ಗಳಗನಾಥ ಮಾಸ್ತರರು ಬೆಂಗಳೂರಿನ ಕಲಾಮಂದಿರದಲ್ಲಿ ಗೀತಾಶ್ರವಣಾಧಿಕಾರ ಎಂಬ ವಿಷಯದ ಮೇಲೆ ಭಾಷಣ ಮಾಡಿದರು. ಭಾಷಣವನ್ನು ಪ್ರಿಂಟೇ ಮಾಡಿಸಿದರು. ಅವರ ಭಾಷಣದಿಂದ ಜನರು ಪ್ರಭಾವಿತರಾಗಿ ಪುಸ್ತಕ ಪ್ರಚಾರವು ಹೆಚ್ಚಾಯಿತು"[2] ಎಂದು ತಿಳಿಸಿದ್ದಾರೆ. ಇಂಥ ಭಾಷಣಗಳನ್ನು ಕೇಳಿದವರಲ್ಲಿ ಡಾ. ಬೆಟಗೇರಿ ಕೃಷ್ಣಶರ್ಮಾ ಅವರೂ ಒಬ್ಬರು.[3]

ಗಳಗನಾಥರ **'ರಹಸ್ಯಗಳು'** ಎಂಬುದು 92 ಪುಟಗಳ ಚಿಕ್ಕ ಗ್ರಂಥ. ಇದರಲ್ಲಿ 'ಮಹಾಭಾರತಾಮೃತ'ದ ಸಭಾಪರ್ವದ ರಹಸ್ಯಗಳನ್ನೇ ಕೊಡಲಾಗಿದೆ. ಆ ಮೂಲ ಗ್ರಂಥವು ಪ್ರಕಟವಾಗುವುದಕ್ಕಿಂತ ಹತ್ತು ದಿನ ಮೊದಲೇ ಅಂದರೆ ದಿನಾಂಕ 7-10-1933 ರಂದು ಗಳಗನಾಥರು ಇದನ್ನು ಪ್ರಕಟಿಸಿದರು. ಪ್ರಸ್ತಾವನೆಯಲ್ಲಿ "ಈಗಿನ ಕಾಲಕ್ಕೆ ರಾಷ್ಟ್ರಹಿತ ಮಾಡುವವರಿಗೆ, ಐದನೆಯ ವೇದವೆನಿಸುವ ಮಹಾಭಾರತದೊಳಗಿನ ಭಗವಾನ್ ವೇದವ್ಯಾಸರ ವಿವಿಧ ವಿಷಯಗಳ ರಹಸ್ಯಜ್ಞಾನವಾಗುವದು ಅವಶ್ಯವಿರುತ್ತದೆ. ನಾವು ಪ್ರಾಮುಖ್ಯವಾಗಿ ಇದೇ ಉದ್ದೇಶದಿಂದಲೇ ಮಹಾಭಾರತಾಮೃತವನ್ನು ಭಾಗಶಃ ಬರೆಯತೊಡಗಿರುವೆವು. ಸಂಪೂರ್ಣ ಮಹಾಭಾರತಾಮೃತವನ್ನು ಕೊಳ್ಳುವವರಿಗೆ ಅದರ ರಹಸ್ಯಗಳ ಪ್ರಾಪ್ತಿಯು ಸಹಜವಾಗಿಯೇ ಆಗುವದು. ಆದರೆ ಇಡಿಯ ಭಾರತ ಕೊಳ್ಳಲು ಶಕ್ತಿಯಿಲ್ಲದವರು ಬರಿಯ ರಹಸ್ಯಗಳನ್ನಾದರೂ ಅವಲೋಕಿಸಲೆಂದು ಬುದ್ಧಿಪೂರ್ವಕವಾಗಿ ಎರಡನೆಯ ಭಾಗವಾದ ಸಭಾಪರ್ವದ ರಹಸ್ಯಗಳನ್ನಷ್ಟೇ ಒಟ್ಟುಗೂಡಿಸಿ ಈ ಸ್ವಂತತ್ರ ಪುಸ್ತಕ ಮಾಡಿರುತ್ತೇವೆ. ಇದರಿಂದ ಭಾರತದ ಹಿತಕಾರಕ ರಹಸ್ಯಗಳ ಪ್ರಸಾರವು ಕರ್ನಾಟಕದ ತುಂಬೆಲ್ಲ ಆಗುವದೆಂದು ನಾವು ತಿಳಿದಿರುವೆವು" ಎಂದು ಗಳಗನಾಥರು ತಿಳಿಸಿರುವರು. ಮೂಲಗ್ರಂಥದೊಳಗಿನ ವಿಷಯವು ಇಲ್ಲಿ ಯಥಾವತ್ತಾಗಿ ಏನೂ ವ್ಯತ್ಯಾಸವಿಲ್ಲದೆ ಬಂದಿದೆ.

ಶ್ರೀ ಜೋಶಿಯವರ ಪಟ್ಟಿಯಲ್ಲಿಯೂ ಡಾ. ಬೆಟಗೇರಿಯವರ ಪಟ್ಟಿಯಲ್ಲಿಯೂ 'ಬ್ರಾಹ್ಮಣಪ್ರಾಪ್ತಿಸಾಧನೆ' ಎಂದು ಇರುವ ಪುಸ್ತಕದ ನಿಜವಾದ ಹೆಸರು **'ಬ್ರಾಹ್ಮಣ್ಯ ಪ್ರಾಪ್ತಿಸಾಧನೆ'.** ಈ ಚಿಕ್ಕ ಪ್ರಬಂಧವೂ ಈಗ ದೊರೆಯುವುದಿಲ್ಲ. ಇದರ ಪ್ರಕಟಣೆಯ ವರ್ಷದ ಬಗ್ಗೆಯೂ ಖಚಿತವಾಗಿ ಹೇಳಲಾಗುವುದಿಲ್ಲ. ಆದರೂ ಈ ಗ್ರಂಥವು 1923ರ ಪೂರ್ವದಲ್ಲಿಯೇ ಅಚ್ಚಾಗಿರಬೇಕೆಂಬಲ್ಲಿ ಸಂದೇಹವಿಲ್ಲ. 1923ರಲ್ಲಿ ಪ್ರಕಟವಾದ ಗಳಗನಾಥರ 'ಶೈವಸುಧಾರ್ಣವ' ಗ್ರಂಥದ ಕೊನೆಗೆ ಕೊಟ್ಟ "ನಮ್ಮಲ್ಲಿ ದೊರೆಯುವ ಪುಸ್ತಕಗಳು" ಎಂಬ ಪಟ್ಟಿಯಲ್ಲಿ ಈ ಗ್ರಂಥದ ಹೆಸರೂ ಇದೆ. ಆಗ ಅದರ ಬೆಲೆ ಕೇವಲ ಆರು ಆಣೆ.

---

1. ಗಳಗನಾಥ : ಸದ್ಗುರು ಪ್ರಭಾವ, ಪುಟ 21
2. ಶ್ರೀ ಸಿಂದಗಿ ಅವರನ್ನು ಜೂನ 1970ರಂದು ಕಂಡಾಗ ಅವರು ಗಳಗನಾಥರ ಬಗ್ಗೆ ಅನೇಕ ವಿಚಾರಗಳನ್ನು ತಿಳಿಸಿದರು.
3. 'ಕರ್ಮವೀರ', ದಿನಾಂಕ 5–1–1969, ಪುಟ 21

ಗ್ರಂಥವೇ ಲಭ್ಯವಿಲ್ಲದ್ದರಿಂದ ಅದರಲ್ಲಿಯ ವಿಷಯದ ಬಗ್ಗೆ ಹೇಳಲು ಸಾಧ್ಯವಿಲ್ಲ. ಆದರೂ ಗಳಗನಾಥರ ಸನಾತನ ಧರ್ಮಪ್ರೇಮವನ್ನೂ, ಬ್ರಾಹ್ಮಣ ವರ್ಣದ ಬಗ್ಗೆ ಅವರ ವಿಚಾರಗಳನ್ನೂ ಅವರು ಈ ಗ್ರಂಥದಲ್ಲಿ ನಿರೂಪಿಸಿರಲಿಕ್ಕೆ ಸಾಕು. ಜಾತಿಯಿಂದ ಬ್ರಾಹ್ಮಣ ನಾದರೆ ಸಾಲದು, ಧರ್ಮ-ಕರ್ಮಗಳಿಂದಲೂ ಬ್ರಾಹ್ಮಣನಾಗಿರಬೇಕೆಂದು ಅವರು ಪದೇ ಪದೇ ಹೇಳಿರುವರು. ಈ ವಿಚಾರಗಳೇ ಈ ಚಿಕ್ಕ ಪ್ರಬಂಧದಲ್ಲಿ ನಿರೂಪಿತವಾಗಿರಬಹುದು.

**'ಕನ್ಯಾಶಿಕ್ಷಕ'**ವೆಂಬ ಚಿಕ್ಕ ಪುಸ್ತಕವೂ ಈಗ ಉಪಲಬ್ಧವಿಲ್ಲ. 1920ರಲ್ಲಿ ಗಳಗ ನಾಥರು ತಮ್ಮ ಹಿರಿಯ ಮಗಳು ಸುಬ್ಬಕ್ಕನ ಲಗ್ನವನ್ನು ಮಾಡಿದರು. ಮುಂದೆ ಅವಳ ಹೆಸರಿನಿಂದ ಬರೆದ ಪತ್ರಗಳನ್ನೇ 'ಕನ್ಯಾಶಿಕ್ಷಕ'ವೆಂಬ ಲೇಖನಮಾಲೆಯಾಗಿ ತಮ್ಮ 'ಸದ್ಗುರು' ಮಾಸಪತ್ರಿಕೆಯಲ್ಲಿ ಪ್ರತಿತಿಂಗಳೂ ಪ್ರಕಟಿಸತೊಡಗಿದರು. ಅದೇ ಮುಂದೆ ಪುಸ್ತಕರೂಪವಾಗಿ ಪ್ರಕಟವಾಯಿತು. ಇದರಲ್ಲಿ ಆದರ್ಶ ವೈವಾಹಿಕ ಜೀವನವನ್ನು ಕುರಿತು ಗಳಗನಾಥರ ವಿಚಾರ ಗಳು ವ್ಯಕ್ತವಾಗಿವೆ. ಹೆಣ್ಣುಮಕ್ಕಳು ಬಾಲ್ಯದಲ್ಲಿ ತಂದೆತಾಯಿಗಳ ಮನೆಯಲ್ಲಿ ಬೆಳೆಯುವ ರೀತಿ, ಲಗ್ನವಾದ ಅನಂತರ ಪತಿಗೃಹದಲ್ಲಿರಬೇಕಾದ ರೀತಿ, ಸಂಸಾರಸುಗಮತೆಯ ಮಾರ್ಗ, ಸಂತಾನ ಪಾಲನೆ, ನಿತ್ಯಧರ್ಮಾಚರಣೆ ಮೊದಲಾದವುಗಳನ್ನು ವಿವರಿಸಿರುವರು. 'ಶಾಕುಂತಲ' ನಾಟಕದಲ್ಲಿ ಕಣ್ವರು ಶಕುಂತಲೆಗೆ ಪತಿಗೃಹಕ್ಕೆ ಹೊರಟಾಗ ಮಾಡಿದ ಉಪದೇಶವು ಗಳಗ ನಾಥರಿಗೆ ಈ ಲೇಖನಮಾಲೆ ಬರೆಯುವಂತೆ ಪ್ರೇರಣೆ ನೀಡಿರಬಹುದು. ಆದರೆ ಕೆಲವರು "ತಂಗಿ ಸುಬ್ಬಕ್ಕನಿಗೆ" ಎಂದು ಸಂಬೋಧಿಸಿ ಬರೆದ ಈ ಲೇಖನಗಳ ಬಗ್ಗೆ ಆಕ್ಷೇಪಿಸಿದರು. "ಲೇಖಕರಿಗೆ ತಮ್ಮವರ ಹೊರತು ಬೇರೆ ಯಾವ ಉದಾಹರಣೆಗಳು ಸಿಗಲಿಲ್ಲವೇ ?" ಎಂಬುದೇ ಮುಖ್ಯ ತಕರಾರು.

ಇನ್ನು, ಇತರ ಗ್ರಂಥಗಳಲ್ಲಿ ಗಳಗನಾಥರ ಮರಣಾನಂತರ 1949ರಲ್ಲಿ ಪ್ರಕಟವಾದ **'ವೀರ ಪ್ರತಾಪ'**ವೆಂಬ ಐತಿಹಾಸಿಕ ಕಥೆಯನ್ನೂ ಗಳಗನಾಥರೇ ಬರೆದಿರುವ ಸಂಭವ ಹೆಚ್ಚಾಗಿದೆ. ಅಚ್ಯುತ ಕೃಷ್ಣರಾವ ಹುಯಿಲಗೋಳ ಅವರು ಈ ಚಿಕ್ಕ (20 ಪುಟಗಳ) ಪುಸ್ತಕಕ್ಕೆ ಪುಟ್ಟ ಮುನ್ನುಡಿಯನ್ನೂ ಬರೆದಿರುವರು. ಈ ಕಥೆ ಮೊದಲು 'ಸದ್ಗುರು' ಮಾಸ ಪತ್ರಿಕೆಯಲ್ಲಿ ಪ್ರಕಟವಾಗಿರುವ ಸಂಭವವಿದೆ. ಆದರೆ 'ಸದ್ಗುರು' ಪತ್ರಿಕೆಯ ಎಲ್ಲ ಸಂಚಿಕೆ ಗಳು ಈಗ ಲಭ್ಯವಿಲ್ಲದ್ದರಿಂದ ಖಚಿತವಾಗಿ ಏನೂ ಹೇಳಲು ಬರುವಂತಿಲ್ಲ.

'ವೀರ ಪ್ರತಾಪ' ಅಥವಾ 'ಸ್ವಾಭಿಮಾನ–ಸಂಭ್ರಮ' ಎಂಬುದು ಮಹಾರಾಣಾ ಪ್ರತಾ ಪನ ಜೀವನಕ್ಕೆ ಸಂಬಂಧಿಸಿದ ಕಥೆಯು. ಆತನು ಮೊಗಲ ಸಲೀಮನ ಜೊತೆ ಯುದ್ಧದಲ್ಲಿ ತೊಡಗಿರುವಾಗ, ಕಾಂಚನಪುರದ ರಾಜಕನ್ಯೆಯಾದ ವಿಮಲೆ ಸಲೀಮನ ಬಂಧನದಿಂದ ಬಿಡು ಗಡೆಯಾದುದು ಇಲ್ಲಿ ವರ್ಣಿತವಾಗಿದೆ. ಅವಳನ್ನು ಅನ್ಯಾಯವಾಗಿ ಮೋಸದಿಂದ ಬಂಧಿಸಿ. ಒಯ್ದು ಸಲೀಮನಿಗೆ ಒಪ್ಪಿಸಿದ ರಜಪೂತ ವಿಲಾಸನಗರದ ಠಾಕೂರನನ್ನು ಪ್ರತಾಪನು ಹಿಡಿದು ತಂದು ಕೊಲ್ಲಿಸಿದನು. ಅನಂತರ ರಜಪೂತ ತರುಣಿಯೋರ್ವಳನ್ನು ಸಲೀಮನು ಒತ್ತಾಯ ದಿಂದ ನಿಕಾಮಾಡಿಕೊಳ್ಳುವುದನ್ನು ತಪ್ಪಿಸುವುದಕ್ಕಾಗಿ, ತನ್ನ ಸೈನ್ಯಸಿದ್ಧತೆ ಕಡಿಮೆಯಿದ್ದರೂ ಮೊಗಲರ ಮೇಲೆ ದಂಡೆತ್ತಿ ಹೋಗಿ, ಜೀವದ ಹಂಗುದೊರೆದು ವಿಮಲೆಯನ್ನು ಬಿಡಿಸಿ ತಂದನು. ಈ ಕಥೆಯಲ್ಲಿ ಹೆಚ್ಚಿನ ಸ್ವಾರಸ್ಯವಿಲ್ಲ. ಇದನ್ನು ಗಳಗನಾಥರೇ ಬರೆದರೆ? ಅಥವಾ ಬೇರೆಯವರು ಬರೆದು, ಗಳಗನಾಥರ ಹೆಸರಿನಿಂದ ಇದು ಅನಂತರ ಪ್ರಕಟವಾಗಿದೆಯೆ? ಎಂಬ

ಸಂದೇಹಕ್ಕೂ ಎಡೆಯಿಲ್ಲದಿಲ್ಲ. ಆದರೆ ಪ್ರಕಾಶಕರಲ್ಲದೆ, ಗಳಗನಾಥರ ಶಿಷ್ಯರಾದ ಅಚ್ಯುತರಾವ ಹೂಯಿಲಗೋಳ ಅವರೂ ಇದು ಗಳಗನಾಥರೇ ಬರೆದ ಕಥೆಯೆಂದು ಹೇಳಿರುವರು. ಅಲ್ಲದೆ ಶೈಲಿಯಲ್ಲಿ ಕೂಡ ಗಳಗನಾಥರ ಸರಣಿ ಕಂಡು ಬರುತ್ತದೆ. "ಅವರ ಕುದುರೆಗಳೂ ಅವರೂ ಬೆವತು ಶಗಣಿಯಾಗಿದ್ದರು." (ಪುಟ–1) "ಸಾಕು, ನಿನ್ನ ಬಡಬಡಿಕೆಯು" (ಪುಟ–10). "ಪ್ರತಾಪಸಿಂಹನ ತೇಜಸ್ವಿಯಾದ ಮೋರೆಯು ಹಂಚು ಬಡಿದಂತಾಯಿತು" (ಪುಟ–11) ಎಂಬಂಥ ಮಾತುಗಳನ್ನು ಗಮನಿಸಿದರೆ ಇದು ಗಳಗನಾಥರ ಶೈಲಿಯೇ ಎಂದು ತೋರುತ್ತದೆ.

ಕನ್ನಡದ ಐತಿಹಾಸಿಕ ಕಾದಂಬರಿಗಳ ಸಮೀಕ್ಷೆ ಮಾಡಿ ಬರೆದ ಲೇಖನವೊಂದರಲ್ಲಿ ಶ್ರೀ ಗುರುನಾಥ ಜೋಶಿ ಅವರು 'ವೀರಪ್ರತಾಪ'ವನ್ನು ಗಳಗನಾಥರ ಅನುವಾದಿತ ಕಾದಂಬರಿ ಎಂದು ಕರೆದಿರುವರು.[1] 'ವೀರಪ್ರತಾಪ'ವು ಅನುವಾದಿತವೇ ಆಗಿರಲಿ, ಅಥವಾ ಸ್ವತಂತ್ರವೇ ಆಗಿರಲಿ, ಅದನ್ನು ಕಾದಂಬರಿ ಎಂದು ಕರೆಯುವುದು ತೀರಾ ಅಸಮಂಜಸ. ಅದೊಂದು ಚಿಕ್ಕ ಕಥೆ ಮಾತ್ರ.

ಒಟ್ಟಿನಲ್ಲಿ ಗ್ರಂಥರೂಪದಲ್ಲಿ ಪ್ರಕಟವಾದ ಗಳಗನಾಥರ ಕೃತಿಗಳು ಹೀಗಿವೆ :

| | | |
|---|---|---|
| 1) | ಪೌರಾಣಿಕ ಗ್ರಂಥಗಳು | 9 |
| 2) | ಸತ್ಪುರುಷರ ಚರಿತ್ರೆಗಳು | 5 |
| 3) | ನಿಬಂಧ–ಪ್ರಬಂಧಗಳು | 13 |
| 4) | ಕಾದಂಬರಿಗಳು | 22 |
| 5) | ಕಥೆ (ಗ್ರಂಥರೂಪದಲ್ಲಿ ಪ್ರಕಟಿತ) | 1 |
| | | 50 |

ಇವುಗಳಲ್ಲಿ 'ರಾಜನಿಷ್ಠೆ', 'ವೀರ ಪ್ರತಾಪ'ದಂಥ ಚಿಕ್ಕ ಪುಸ್ತಕಗಳೂ ಇವೆ. 'ಭಾಗವತಾಮೃತ', 'ಶೈವ ಸುಧಾರ್ಣವ', 'ಮಾಧವ ಕರುಣಾವಿಲಾಸ'ದಂಥ ಹೆಬ್ಬೊತ್ತಿಗೆಗಳೂ ಸೇರಿವೆ.

ಈ ಗ್ರಂಥಗಳನ್ನಲ್ಲದೆ ಗಳಗನಾಥರು 'ಸದ್ಬೋಧ ಚಂದ್ರಿಕೆ'ಯಲ್ಲೂ, 'ಸದ್ಗುರು'ವಿನಲ್ಲೂ ಅನೇಕ ಲೇಖನಗಳನ್ನು ಬರೆದಿರುವರು. ಕಾದಂಬರಿಗಳನ್ನಲ್ಲದೆ ತಾವು ಬರೆದ ಇತರ ಪುಸ್ತಕಗಳ ಬಗ್ಗೆ ಹೇಳುತ್ತ ಗಳಗನಾಥರೇ "ಇವಲ್ಲದೆ ಗೃಹಶಿಕ್ಷಣ, ನಮ್ಮ ದೇವರ ಪೂಜೆ, ದುಡ್ಡು, ಕಲಿತಾಂಡವ ಮೊದಲಾದ ಹತ್ತಿಪ್ಪತ್ತು ಸ್ಫುಟ ಲೇಖನಗಳನ್ನು ಬರೆದಿರುವೆನು. ಮನಸ್ಸಿದ್ದರೂ ಹೆಚ್ಚಿನ ದೊಡ್ಡ ಪ್ರಬಂಧಗಳನ್ನು ಬರೆಯಲಿಕ್ಕೆ ನನಗೆ ಆಸ್ಪದವು ದೊರೆಯಲಿಲ್ಲ."[2] ಎಂದೂ ಮಿಡುಕಿರುವರು.

ಇನ್ನು, ಅವರ ಬಿಡಿ ಲೇಖನಗಳಲ್ಲಿ ಕೆಲವು ಉಲ್ಲೇಖನೀಯವಾಗಿವೆ. ಅಂಥವುಗಳಲ್ಲಿ **'ಜೀವನ ಚರಿತ್ರ'** ಎಂಬುದು 1911ರಲ್ಲಿ 'ಸದ್ಬೋಧ ಚಂದ್ರಿಕೆ'ಯಲ್ಲಿ ಲೇಖನ ಮಾಲೆಯಾಗಿ ಪ್ರಕಟವಾಯಿತು. ಇದರಲ್ಲಿ ಮಾನವನ ಉತ್ಪತ್ತಿಯನ್ನು ಲೇಖಕರು ವಿವರಿಸಿರುವರು. ಸ್ತ್ರೀ-

1. ಗುರುನಾಥ ಜೋಶಿ : ಕನ್ನಡ ಐತಿಹಾಸಿಕ ಕಾದಂಬರಿಗಳು, ಕನ್ನಡ ನುಡಿ–22 (1959) ಪುಟ 54
2. ಗಳಗನಾಥ : ಸದ್ಗುರು–ಪ್ರಭಾವ, ಪುಟ 36

ಪುರುಷರ ಸಂಭೋಗ, ಅದರಿಂದ ಆಗುವ ಗರ್ಭಧಾರಣೆ, ಗರ್ಭಿಣಿಯ ಕಷ್ಟಮಯ ಸ್ಥಿತಿ, ಗರ್ಭಿಣಿಯ ವಾಸನೆಗಳು, ಶಿಶುವಿನ ಜನನ, ಹುರಿಕೊಯ್ಯುವುದು ಮೊದಲಾವ ವಿಷಯಗಳನ್ನು ಗಳಗನಾಥರು ವಿವರವಾಗಿ ಬರೆದಿರುವುದನ್ನು ನೋಡಿದರೆ ಅಚ್ಚರಿಯಾಗುವಂತಿದೆ. ಅದರಂತೆ 'ಸುಂದರಲೇಖ ಸಮುಚ್ಚಯದ' ಎಲ್ಲ ಲೇಖನಗಳೂ ಮೊದಲು ಮಾಸಪತ್ರಿಕೆಯಲ್ಲಿ ಪ್ರಕಟ ವಾದವುಗಳೇ ಆಗಿವೆ. ಅಲ್ಲದೆ ಗಳಗನಾಥರು 'ಚಂದ್ರಿಕೆ'ಯಲ್ಲೂ 'ಸದ್ಗುರು'ವಿನಲ್ಲೂ ತಮ್ಮ ಹೆಸರು ಕಾಣಿಸದೆ ಕೂಡ ಹಲವು ಲೇಖನಗಳನ್ನು ಬರೆದುದುಂಟು. ಆದರೆ ಅವು ಮುಂದೆ ಗ್ರಂಥರೂಪದಲ್ಲಿ ಪ್ರಕಟವಾಗಲಿಲ್ಲ. ಆದ್ದರಿಂದ ಅವುಗಳ ಬಗ್ಗೆ ಈಗ ಏನೂ ಹೇಳಲು ಸಾಧ್ಯವಿಲ್ಲವಾಗಿದೆ.

'ಸದ್ಬೋಧ ಚಂದ್ರಿಕೆ' ಮತ್ತು 'ಸದ್ಗುರು'ಗಳಲ್ಲಿ ಮಾತ್ರವಲ್ಲದೆ ಗಳಗನಾಥರು ಧಾರವಾಡದ 'ಶಾಲಾಪತ್ರಕ'ದಲ್ಲೂ ಕೆಲವು ಲೇಖನಗಳನ್ನು ಬರೆದರು. ಅವುಗಳಲ್ಲಿ ಕೆರೂರ ವಾಸುದೇವಾಚಾರ್ಯರ **'ಇಂದಿರಾ' ಕಾದಂಬರಿಯ ವಿಮರ್ಶೆ** ಹಾಗು **'ಶಿಕ್ಷೆ'**ಯನ್ನು ಕುರಿತು ಬರೆದ ಲೇಖನಗಳು ಮಹತ್ತ್ವದವಾಗಿವೆ. ಇವೆರಡೂ ಲೇಖನಗಳು 'ಶಾಲಾಪತ್ರಿ'ಕೆಯ 'ಪತ್ರವ್ಯವಹಾರ' ವಿಭಾಗದಲ್ಲಿ ಪ್ರಕಟವಾಗಿವೆ.

ವಾಸುದೇವಾಚಾರ್ಯರ 'ಇಂದಿರಾ' 1908ರಲ್ಲಿ ಪ್ರಕಟವಾಯಿತು. ಗಳಗನಾಥರು ಅದರ ವಿಮರ್ಶೆಯನ್ನು 1909ರ ಮಾರ್ಚ ತಿಂಗಳಲ್ಲಿ ಬರೆದರು. ನಾಲ್ಕು ಪುಟಗಳ ಈ ಲೇಖನವು ಅನೇಕ ರೀತಿಯಿಂದ ಗಮನಾರ್ಹವಾಗಿದೆ.

"ಒಟ್ಟಿಗೆ ಕಾದಂಬರಿಯು ನೆಟ್ಟಗಿದೆ. ಪಾತ್ರಗಳ ಮಾತುಗಳು ವಿಶೇಷವಾಗಿ ಇಂದಿರೆಯ ಮಾತುಗಳು ಸವಿಯಾಗಿರುವವು....ಇಂದಿರಾ–ರಮಾಕಾಂತರ ಆಚರಣೆಯು ನಮ್ಮ ಸಮಾಜಕ್ಕೆ ವಿಚಿತ್ರವಾಗಿ ತೋರಿದರೂ, ಅದರಲ್ಲಿ ಕಲಿಯತಕ್ಕ ಮಾತುಗಳು ಬಹಳ ಇರುವವು. ಹಲವು ಉದಾತ್ತ ವಿಚಾರಗಳು ಆ ಪಾತ್ರಗಳ ಮುಖದಿಂದ ಹೊರಬಿದ್ದಿರುತ್ತವೆ....ಪ್ರೀತಿಯ ಪ್ರೌಢ ವಿವಾಹವನ್ನು ಶ್ಲಾಘಿಸಲು ಈ ಕಾದಂಬರಿಯಲ್ಲಿ ಯತ್ನಮಾಡಲ್ಪಟ್ಟಿರುತ್ತದೆ. ಆ ಯತ್ನವು ಸರ್ವಸಮ್ಮತವಾಗದಿದ್ದರೂ ಹಲವಂಶದಿಂದ ಸಮಾಜಕ್ಕೆ ಹಿತಕರವಾಗಿರುತ್ತದೆಂಬದರಲ್ಲಿ ಸಂಶಯ ವಿಲ್ಲ. ಪುಸ್ತಕವು ಗಂಡಸರಿಗೂ, ಹೆಂಗಸರಿಗೂ, ಹುಡುಗರಿಗೂ ಓದಲಿಕ್ಕೆ ತಕ್ಕದ್ದಾಗಿದೆ...ಕಾದಂಬರಿ ಯಲ್ಲಿ ಕೆಲವು ದೋಷಗಳೂ ಇರುವವು...."ಸ್ತ್ರೀಯಳು, ಮನೋಹಾರಿಯಳು, ಗೆಲೆಯುವ, ಮನವಲಿಸು" ಇಂಥ ಅಶುದ್ಧ ಶಬ್ದಗಳನ್ನು ಪ್ರಯೋಗಿಸುವದರಿಂದ ಬರಹದ ಗೌರವವು ಕಡಿಮೆ ಯಾಗುತ್ತದೆ....ಆದರೆ ಇಂಥ ಭಾಷಾದೋಷಗಳಿಗೆ ಬರೆಯುವವರು ಕೈಕಾಲುಗೆಡಬಾರದೆಂದು ಹೇಳುವದು ಆಪ್ತಾಲೋಚನೆಯ ಮಾತು....ನಮ್ಮ ಪ್ರಾಂತದಲ್ಲಿ ಬಹುತರ ಸಾಮಾಜಿಕ ಕಾದಂಬರಿಯನ್ನು ಮೊಟ್ಟಮೊದಲು ಬರೆದು ಕನ್ನಡಿಗರ ಸೇವೆಯನ್ನು ಮಾಡುವದಕ್ಕಾಗಿ ಪಕ್ಕನೆ ಹೊರಬಿದ್ದಿರುವ ರಾ. ರಾ. ವಾಸುದೇವಾಚಾರ್ಯರನ್ನು ಪ್ರೋತ್ಸಾಹಿಸಿ, ಅವರಿಂದ ಇದಕ್ಕೂ ಹೆಚ್ಚಿನ ಲಾಭಗಳನ್ನು ಪಡೆಯುವದು ಕನ್ನಡಿಗರ ಹಿತದ ಮಾತೆಂದು ನಾವು ಹೇಳುವ ಕಾರಣವಿಲ್ಲ."[1]

ಗಳಗನಾಥರ ಈ ಮಾತುಗಳಲ್ಲಿ ಅವರ ವಿಮರ್ಶಾಗುಣವನ್ನು ಕಾಣಬಹುದಾಗಿದೆ. ಅವರು ಉತ್ತಮ ಸಹೃದಯರಾಗಿ 'ಇಂದಿರೆ'ಯನ್ನು ಕಂಡಿದ್ದಾರೆ. ಮೊದಲು ಕಾದಂಬರಿಯ

1. ಶಾಲಾಪತ್ರಕ, ಮಾರ್ಚ 1919, ಪುಟ 84-87.

ಗುಣಗ್ರಹಣವನ್ನೇ ಮಾಡಿರುವರು. ಪಾತ್ರಗಳು ಮತ್ತು ಅವುಗಳ ಮಾತುಗಳು ಗಳಗನಾಥರ ಗಮನವನ್ನು ಸೆಳೆದಿವೆ. ಆರ್ಯಧರ್ಮಕ್ಕೆ ವಾಸುದೇವಾಚಾರ್ಯರಿಂದ ಎಲ್ಲಾದರೂ ಬಾಧೆ ಬಂದಿದೆಯೆ ಎಂದು ಅವರು ಪರೀಕ್ಷಿಸಿದ್ದಾರೆ. "ಇಂದಿರಾ ಕಾದಂಬರಿಯನ್ನು ಸಮಗ್ರವಾಗಿ ಓದಿದೆವು. ಒಟ್ಟಿಗೆ ಕಾದಂಬರಿಯು ನೆಟ್ಟಗಿದೆ" ಎನ್ನುವಲ್ಲಿ ಸಮಗ್ರ ಕಾದಂಬರಿ ಮೂಡಿಸುವ ಒಟ್ಟಾಭಿಪ್ರಾಯವೇ ಮುಖ್ಯವೆಂಬ ಧ್ವನಿ ವ್ಯಕ್ತವಾಗಿದೆ. ಆದರೂ ಗಳಗನಾಥರು ಕಾದಂಬರಿಯ ಕೆಲವು ಸನ್ನಿವೇಶಗಳಲ್ಲಿಯ ದೋಷಗಳನ್ನೂ ಸೂಚಿಸಿರುವರು. ಅದರಂತೆ ವಾಕ್ಯದೋಷಗಳನ್ನೂ, ಪದದೋಷಗಳನ್ನೂ ಎತ್ತಿ ತೋರಿಸುವಲ್ಲಿ ಗಳಗನಾಥರ ಶಿಕ್ಷಕ–ಸ್ವಭಾವವು ವ್ಯಕ್ತವಾಗಿದೆಯಾದರೂ, ಅವರ ಪ್ರೋತ್ಸಾಹದ ಮಾತುಗಳನ್ನೂ ಗಮನಿಸಬೇಕು. ಆ ಕಾಲದಲ್ಲಿ ಅದೂ ಗಳಗನಾಥರಂಥ ಸಮರ್ಥ ಶಿಕ್ಷಕರಿಂದ, ಬಂದ ಈ ಮಾತುಗಳು ನಿಜವಾಗಿಯೂ ಪ್ರೋತ್ಸಾಹಕರವಾಗಿವೆ. ಅವರು ಒಂದು ರೀತಿಯ 'ಪ್ಯುರಿಟನ್' ಇದ್ದಂತಿದ್ದರು. ಆದರೂ,

...."ಎಲ್ಲರೂ ಭಾಷಾಪ್ರಾವೀಣ್ಯವನ್ನು ಸಂಪೂರ್ಣವಾಗಿ ಸಂಪಾದಿಸಿಯೇ ಬರೆಯ ತೊಡಗಬೇಕೆಂಬ ವಿಚಾರವು ನಮಗೆ ಸಮ್ಮತವಿಲ್ಲ. ಈ ಪ್ರಾವೀಣ್ಯವಿಲ್ಲೆಂಬ ನೆವದಿಂದ ಕನ್ನಡಿಗರು, ವಿಶೇಷವಾಗಿ ಪದವೀಧರರು ಏನೂ ಬರೆಯದೆ ಕೈಮುಚ್ಚಿಕೊಂಡು ಕುಳಿತದ್ದರಿಂದ ಕನ್ನಡಿಗರ ಹಾನಿಯಾಗಹತ್ತಿರುತ್ತದೆ. ಯೋಗ್ಯತೆಯಿದ್ದವರೂ ಹೀಗೆ ಸುಮ್ಮನೆ ಕುಳಿತುಕೊಂಡರೆ ಕನ್ನಡ ಸಮಾಜವು ವಿಚಾರಪುಷ್ಟವಾಗುವ ಬಗೆಯೇನು ?"[1]

ಗಳಗನಾಥರು ಈ ರೀತಿ ಭಾಷಾದೋಷಗಳನ್ನು ಅಗಣ್ಯವೆಂದು ಭಾವಿಸಿ, ಹೊಸ ಲೇಖಕರನ್ನು ಪ್ರೋತ್ಸಾಹಿಸಿದುದು ನಿಜವಾಗಿಯೂ ಶ್ಲಾಘನೀಯವಾಗಿದೆ. ಇದು ಗಳಗನಾಥರ ಉದಾರ, ಉದಾತ್ತ ಸ್ವಭಾವಕ್ಕೆ ತಕ್ಕುದಾಗಿದೆ. ಅಲ್ಲದೆ ಪದವೀಧರರೂ ಕನ್ನಡ ಲೇಖನಕ್ಕೆ ತೊಡಗಬೇಕೆಂಬ ಗಳಗನಾಥರ ಕಳಕಳಿಯೂ ಇಲ್ಲಿ ವ್ಯಕ್ತವಾಗಿದೆ. ಅದರಂತೆ, ಗಳಗನಾಥರು ಸ್ವತಃ ಸಾಮಾಜಿಕ ಕಾದಂಬರಿಗಳನ್ನು ಬರೆಯದಿದ್ದರೂ, ಸಾಮಾಜಿಕ ಕಾದಂಬರಿಯೊಂದನ್ನು ಅವರು ವಿರೋಧಿಸಲಿಲ್ಲವೆಂಬುದೂ ಇಲ್ಲಿ ಲಕ್ಷಿಸಬೇಕಾದ ಅಂಶ.

"ಈ ಕಾದಂಬರಿಯು ವಾಚನಾಭಿರುಚಿಯಿಲ್ಲದ ನಮ್ಮ ಕನ್ನಡಿಗರಿಗೆ ಎರಡು ಬಗೆಯ ತೊಂದರೆಗಳನ್ನುಂಟು ಮಾಡುತ್ತದೆ. ಸಾಮಾನ್ಯ ಜನರಿಗೆ ನೀಗಲಾರದ ಅದರ ಬೆಲೆಯು ಒಂದನೆಯ ತೊಂದರೆಯು; ದಕ್ಷತೆಯಿಂದ ಓದಿದಾಗ ಮಾತ್ರ ಮುಗಿಯುವಷ್ಟು ಅದು ದೊಡ್ಡದಾಗಿರುವದು ಎರಡನೆಯ ತೊಂದರೆಯು. ಈ ಎರಡೂ ತೊಂದರೆಗಳ ಕಡೆಗೆ ಕನ್ನಡ ಲೇಖಕರು ಸದ್ಯಕ್ಕಾದರೂ ಲಕ್ಷ ಪೂರಯಿಸಬೇಕಾಗಿದೆ"[2] ಎಂಬ ಮಾತುಗಳಿಂದ, ಗಳಗನಾಥರು ಕಾದಂಬರಿಯನ್ನು ಸಾಮಾನ್ಯ ವಾಚಕರ ದೃಷ್ಟಿಯಿಂದಲೂ ಪರೀಕ್ಷಿಸಿದ್ದಾರೆಂಬುದು ವ್ಯಕ್ತವಾಗುತ್ತದೆ.

ಒಟ್ಟಿನಲ್ಲಿ, ಗಳಗನಾಥರು ಸಹೃದಯ ವಿಮರ್ಶಕನ ಗುಣಗಳನ್ನು ಪಡೆದಿದ್ದರೆಂಬುದು ಈ ಲೇಖನದಿಂದ ಸುಸ್ಪಷ್ಟವಾಗುತ್ತದೆ. ಆ ದೃಷ್ಟಿಯಿಂದ ಇದು ಗಳಗನಾಥರ ಮಹತ್ತ್ವದ ಲೇಖನಗಳಲ್ಲಿ ಒಂದಾಗಿದೆ. ಅವರ ಈ ವಿಮರ್ಶಕ ಗುಣವು ಅವರ ಕೃತಿಗಳಲ್ಲೂ, ಕೃತಿಗಳಿಗೆ ಬರೆದ 'ಪ್ರಸ್ತಾವನೆ'ಗಳಲ್ಲಿಯೂ ಸಾಕಷ್ಟು ವ್ಯಕ್ತವಾಗಿದೆ.

---

1. ಅದೇ, ಪುಟ 85.
2. ಅದೇ, ಪುಟ 86.

ಗಳಗನಾಥರ 'ಇಂದಿರಾ' ಕಾದಂಬರಿಯ ವಿಮರ್ಶೆ ಒಂದು ರೀತಿ ಮಹತ್ತ್ವದ್ದಾದರೆ, ಅವರ 'ಶಿಕ್ಷೆ' ಎಂಬ ಲೇಖನ ಬೇರೊಂದು ದೃಷ್ಟಿಯಿಂದ ಗಮನಾರ್ಹವಾಗಿದೆ. ಇದೂ ಕೂಡ 'ಶಾಲಾಪತ್ರಕ'ದ ಪತ್ರವ್ಯವಹಾರ ವಿಭಾಗದಲ್ಲಿ ಅಚ್ಚಾಗಿದೆ. ಆದರೆ ಈ ಲೇಖನ ತುಂಬ ದೊಡ್ಡದಾಗಿದ್ದು "ಶಾಲಾಪತ್ರಕ"ದಲ್ಲಿ ಎಪ್ರಿಲ 1900ರಿಂದ ಮುಂದೆ ಐದು ಸಂಚಿಕೆಗಳಲ್ಲಿ ಮುಂದುವರಿದಿದೆ. ಈ ಲೇಖನವು ಗಳಗನಾಥರು ಎಂಥ ಆದರ್ಶ ಶಿಕ್ಷಕರಾಗಿದ್ದರೆಂಬುದನ್ನೂ ಸೂಚಿಸುತ್ತದೆ. ಇಡೀ ಲೇಖನವೇ ಉದ್ಬೋಧಕವಾಗಿದೆ.

ಲೇಖಸದಲ್ಲಿ ಗಳಗನಾಥರು " (1) ಶಿಕ್ಷೆಯೆಂದರೇನು, ಶಿಕ್ಷೆಯ ಪ್ರಕಾರಗಳು (2) ಶಿಕ್ಷೆ ಮಾಡುವ ಪ್ರಸಂಗಗಳು (3) ಮಿತಿಮೀರಿದ ಹಾಗು ಅವ್ಯವಸ್ಥಿತವಾದ ನೀಚತರದ ದೇಹ ದಂಡದ ದುಷ್ಪರಿಣಾಮವು (4) ದೇಹದಂಡದ ಹಿತಕರವಾದ ಯೋಜನೆಯು (5) ಉಪ ಸಂಹಾರ" ಎಂದು ವಿಭಾಗಗಳನ್ನು ಮಾಡಿರುವರು.

"ಮಾಡಿದ ತಪ್ಪಿಗೆ ವಿದ್ಯಾರ್ಥಿಗಳ ಮನಸ್ಸು ನೊಂದು ಅವರಾಗಲಿ ಆ ವರ್ಗದ ಬೇರೆ ಯವರಾಗಲಿ ಅಂಥ ತಪ್ಪು ಮಾಡಬಾರದೆಂಬುದಕ್ಕೆ ಮಾಸ್ತರನು ಮಾಡುವ ಉಪಾಯಗಳೆಲ್ಲ ಶಿಕ್ಷೆಗಳೆನಿಸುವವು. ಆದರೆ ಸಾಧಾರಣ ತಿಳುವಳಿಕೆಯ ಅಧ್ಯಾಪಕರು ದೇಹದಂಡವು ಮಾತ್ರ ಶಿಕ್ಷೆಯೆಂದು ತಿಳಿಯುವರು"[1] ಎಂದು ಹೇಳಿದ ಗಳಗನಾಥರು ಶಿಕ್ಷಣತಜ್ಞನಾದ ಫೌಲರನು ಸೂಚಿಸಿದ ಶಿಕ್ಷೆಯ ವಿಧಾನಗಳನ್ನೆಲ್ಲ ಚರ್ಚಿಸಿರುವರು. ಅವರ ಪ್ರಕಾರ ದೇಹದಂಡನವು ಕೊನೆಯ ಉಪಾಯವಾಗಬೇಕು.

"....ನೀಚಶಿಕ್ಷೆಯಾದ ದೇಹದಂಡವನ್ನು ಮಾಡದೆ ಒಂದು ತಾಸಾದರೂ ಕೆಲಸ ನಡಿಸ ಲಾರದ ಅಸತ್ ಶಿಕ್ಷಕರ ವಿಷಯವಾಗಿ ನನ್ನಲ್ಲಿ ತಿರಸ್ಕಾರವು ಉಂಟಾಗಿದೆ...."[2] ಎನ್ನುವ ಗಳಗನಾಥರು, ಹುಡುಗರು ಶಿಕ್ಷೆಗೆ ಗುರಿಯಾಗುವ ಪ್ರಸಂಗಗಳು ಉದ್ಭವಿಸಲಿಕ್ಕೆ ಅನೇಕ ಸಲ ಶಿಕ್ಷಕರೇ ಕಾರಣರೆಂದು ದೂರಿರುವರು.

"ಬೇಕಾದಾಗ ಶಾಲೆಗೆ ಬರುವ, ಮೇಜಿನ ಮೇಲೆ ಕಾಲು ಚಾಚಿ ಖುರ್ಚಿಯ ಮೇಲೆ ಬೊಕ್ಕತಲೆಯಿಂದ ಕುಳಿತು ಎಲೆಯಡಿಕೆ ತಿನ್ನುವ, ಅಂಗಿಯ ಕಸಿಯನ್ನು ಕಟ್ಟಿಕೊಳ್ಳದ, ವಿದ್ಯಾರ್ಥಿಗಳ ಸ್ವೇಚ್ಛಾಚಾರವನ್ನು ಪ್ರತಿಬಂಧಿಸಲಾರದ ಮಾಸ್ತರರು ತಿದ್ದುವಿಕೆಯ ಕಲ್ಪನೆಯನ್ನು ಸಹ ಮನಸ್ಸಿನಲ್ಲಿ ತರಲಾಗದು....ಹಟಮಾರಿತನ, ತುಂಟತನ ಮೊದಲಾದ ದುರ್ಗುಣಗಳು ವಿದ್ಯಾರ್ಥಿಗಳಲ್ಲಿ ಉತ್ಪನ್ನವಾಗಲಿಕ್ಕೆ ಬಹುತರ ಮಾಸ್ತರನು ಕಾರಣನಾಗುತ್ತಾನೆ...."[3]

" (ಕೆಲವು ಶಿಕ್ಷಕರು).... ಛಡಿಯಿಂದ, ಗುದ್ದಿನಿಂದ, ತಪರಾಕಿಯಿಂದ, ಸಿಟ್ಟು ಬಹಳ ಬಂದಿದ್ದರೆ ಕಾಲಿನಿಂದ ಇನ್ನೂ ಬೇಕಾದದ್ದರಿಂದ ತಾಡನಮಾಡುವರು. ಅಹಹಾ, ಇದೆಂಥ ಪ್ರಸಂಗ ! ಮನಸ್ಸು ಶಾಂತವಿದ್ದಾಗ ವಿಷಯವನ್ನು ಗ್ರಹಿಸಲಾರದ ಮತ್ತು ಗ್ರಹಿಸಿದ್ದನ್ನು ವ್ಯಕ್ತಮಾಡಲಾರದ ವಿದ್ಯಾರ್ಥಿಗಳ ಬುದ್ಧಿಯು ಮನಸ್ಸು ದೇಹದಂಡನೆಯ ಯಾತನೆಯಿಂದ ಕಳವಳಗೊಂಡಾಗ ಹಾಗೆ ಮಾಡಬಹುದೊ ?"[4] ಎಂದು ಮನಮಿಡುಕಿ ಕೇಳುವಲ್ಲಿ, ಗಳಗನಾಥರು

1. ಮತ್ತು 2 : ಶಾಲಾ ಪತ್ರಕ, ಎಪ್ರಿಲ 1900, ಪುಟ 92
3. ಅದೇ, ಪುಟ 94
4. ಅದೇ, ಪುಟ 140

ಬಾಲಮನೋಭಾವವನ್ನು ಚೆನ್ನಾಗಿ ಅರಿತ ಶಿಕ್ಷಕರೆಂಬುದು ಸೂಚಿತವಾಗುತ್ತದೆ. ಒಂದೆರಡು ಸಲ ತಾವೂ ಇಂಥ ಶಿಕ್ಷೆಯ ಪ್ರಯೋಗ ಮಾಡಿದ್ದನ್ನೂ ಅನಂತರ ಪಶ್ಚಾತ್ತಾಪ ಪಟ್ಟದ್ದನ್ನೂ ಕೂಡ ಅವರು ಇಲ್ಲಿ ಹೇಳದೆ ಬಿಟ್ಟಿಲ್ಲ.

"ಅಂಥ ಕ್ರೂರ ಶಿಕ್ಷೆಗಳನ್ನು ದನಕಾಯುವವರು ದನಗಳಿಗೆ ಕೊಡುವದು ಅಪರೂಪವು. ಅಂದ ಬಳಿಕ ನಾನಾಗಲಿ ನನ್ನ ಬಂಧುಗಳಾಗಲಿ ಇಂಥ ಕ್ರೂರ ಶಿಕ್ಷೆಯನ್ನು ಕೊಟ್ಟರೆ ನಮ್ಮನ್ನು ಯಾವ ವರ್ಗದಲ್ಲಿ ಸೇರಿಸಬೇಕಾಗುವದು ?".... "ಆಜ್ಞಾಭಂಗದ ಮೂಲವು ಅಪ್ರೀತಿಯು." ಇಂಥ ಮೊದಲಾದ ಮಾತುಗಳಲ್ಲಿ ಗಳಗನಾಥ ಮಾಸ್ತರರು ಎದ್ದು ಕಾಣುತ್ತಾರೆ.

ಕೊನೆಯಲ್ಲಿ ಅವರು ದೇಹದಂಡನೆಯ ಶಿಕ್ಷೆಯನ್ನು ಶಿಕ್ಷಕರು ತೀರ ಅನಿವಾರ್ಯ ಪ್ರಸಂಗಗಳಲ್ಲಿ ಮಾತ್ರ ಬಳಸಬಹುದೆಂದೂ, ಅದೂ ಸಹ ಸೌಮ್ಯವಾಗಿರಬೇಕೆಂದೂ ಅಭಿಪ್ರಾಯಪಡುವರು. ಅವರ ಈ ಲೇಖನದಿಂದ ಹಳೆಯ ತಲೆಮಾರಿನ ಗಳಗನಾಥ ಮಾಸ್ತರರಲ್ಲಿ ಹೊಸ ವಿಚಾರಗಳೂ, ಮಾರ್ಗಗಳೂ ರೂಪಿತವಾಗಿದ್ದುವೆಂಬುದು ವ್ಯಕ್ತವಾಗುತ್ತದೆ. ವಿದ್ಯಾರ್ಥಿಗಳಲ್ಲಿಯ ಅಶಿಸ್ತಿನ ಸಮಸ್ಯೆ ಬೃಹದಾಕಾರವಾಗಿ ಬೆಳೆಯುತ್ತಿರುವ ಈ ಕಾಲಕ್ಕೆ ಅವರ ಯೋಚನೆಗಳು ವಿಚಾರಣೀಯವಾಗಿವೆ. ಮುಖ್ಯವಾಗಿ ಶಿಕ್ಷಕನು ಸ್ವತಃ ಆದರ್ಶನಾಗಿ ಬಾಳಬೇಕೆಂಬುದು ಅವರ ತತ್ತ್ವ. ಅವರು ಅದನ್ನು ಅಕ್ಷರಶಃ ಪಾಲಿಸಿಯೂ ತೋರಿಸಿದರೆಂಬುದು ವಿದಿತವೇ ಆಗಿದೆ.

ಹೀಗೆ ಹಲವು ಬಿಡಿಲೇಖನಗಳನ್ನು ಬರೆದು ಪ್ರಕಟಿಸಿದ ಗಳಗನಾಥರು ಇನ್ನೂ ಕೆಲವು ಲೇಖನಗಳನ್ನೂ ಗ್ರಂಥಗಳನ್ನೂ ಬರೆಯಬೇಕೆಂದು ಯೋಜಿಸಿದ್ದರು. ಅವರ ಯೋಜನೆಯ ಕೆಲವು ವಿಚಾರಗಳೂ ತಿಳಿದುಬರುತ್ತವೆ. 1928ರಲ್ಲಿ ಅವರು ಪ್ರಕಟಿಸಿದ 'ಸದ್ಗುರು ಪ್ರಭಾವ' ದಲ್ಲಿಯ 'ಗಳಗನಾಥನ ಆಶೆ' ಎಂಬ ಪ್ರಕರಣದಲ್ಲಿ ಈ ಸೂಚನೆಗಳಿವೆ. ಆಗ ಅವರು ಕೆಲವು ತಿಂಗಳುಗಳ ಕಾಲ ಬೆಂಗಳೂರಿನಲ್ಲಿ ವಾಸವಾಗಿದ್ದರಷ್ಟೇ. ಬೇರೆ ಬೇರೆ ಪುಸ್ತಕಗಳನ್ನು ಬರೆಯುವ ವಿಚಾರವು, ಅವರಿಗೆ ಬೆಂಗಳೂರಿನಲ್ಲಿ ವಾಸವಾಗಿದ್ದ ಕಾಲಕ್ಕೆ ಸ್ಫುರಿಸಿತ್ತು. "ಬೆಂಗಳೂರಿನ ವಿದ್ವತ್ಸಮಾಗಮದಿಂದ ನನ್ನ ಮನಸ್ಸು ಉತ್ತೇಜಿತವಾಗಲು, ವಿವಿಧ ವಿಷಯಗಳನ್ನು ಬರೆಯುವ ಸ್ಫೂರ್ತಿಯು ನನ್ನಲ್ಲಿ ಉಂಟಾಯಿತು.[1] ಎಂದು ಅವರು ತಿಳಿಸಿರುವರು. ಆಗ ಅವರು ಹತ್ತು ಪುಸ್ತಕಗಳ ಯೋಜನೆಯನ್ನು ಪ್ರಕಟಿಸಿದ್ದರಷ್ಟೇ ಅಲ್ಲದೆ, ತಾವು ಬರೆಯಬೇಕೆಂದಿರುವ ಪುಸ್ತಕಗಳ ರೂಪರೇಷೆಗಳನ್ನೂ ತಿಳಿಸಿರುವರು.

(1) ಸರಾಜಕತಾ ಅಥವಾ ಸತ್ತೆಗಳ ಸೌಂದರ್ಯಸಾರ (2) ಗೃಹ ಶಿಕ್ಷಣ ಅಥವಾ ಹಿರಿಯರ ಪುಣ್ಯ (3) ದಂಪತಿಗಳು ಅಥವಾ ಸಂಸಾರ ಸರ್ವಸ್ವ (4) ಕುಟುಂಬ ಅಥವಾ ಶಿಕ್ಷಣ ಸರ್ವಸ್ವ (5) ಸಮಾಜ ಅಥವಾ ಕರ್ತವ್ಯ–ಸರ್ವಸ್ವ (6) ರಾಷ್ಟ್ರ ಅಥವಾ ಸುಖಸರ್ವಸ್ವ (7) ವಿಶ್ವ ಅಥವಾ ಆನಂದಸರ್ವಸ್ವ (8) ಲೇಖಕರು ಅಥವಾ ಭವಿತವ್ಯತಾ ಸರ್ವಸ್ವ (9) ವಿದ್ಯಾರ್ಥಿ ಅಥವಾ ರಾಷ್ಟ್ರೀಯ ಭವಿತವ್ಯತಾ ಮತ್ತು (10) ಪ್ರಬಂಧ ಶಿಕ್ಷಣ–ಈ ಹತ್ತು ಪುಸ್ತಕಗಳನ್ನು ಬರೆಯಬೇಕೆಂದು ಗಳಗನಾಥರು ಆಶಿಸಿದ್ದರು. ಅಲ್ಲದೆ ಸುಮಾರು 65 ಪುಟಗಳಲ್ಲಿ ಈ ಎಲ್ಲ ಪುಸ್ತಕಗಳ ವಿಷಯವನ್ನೂ ಸೂಚಿಸಿರುವರು.

ಇವುಗಳಲ್ಲಿ ಕೆಲವು ರೂಪರೇಷೆಗಳು ಸ್ವತಂತ್ರ ಪ್ರಬಂಧಗಳ ರೂಪದಲ್ಲಿಯೇ ಇವೆ.

1. ಗಳಗನಾಥ : ಸದ್ಗುರು ಪ್ರಭಾವ, ಪುಟ 46

ಉದಾಹರಣೆಗಾಗಿ 'ಗೃಹಶಿಕ್ಷಣ ಅಥವಾ ಹಿರಿಯರ ಪುಣ್ಯ'ವನ್ನು ನೋಡಬಹುದು. ಇದು ಅವರು ಬರೆಯಲಿರುವ ಗ್ರಂಥದ ಮೊದಲನೆಯ ಪ್ರಕರಣವೇ ಆಗಿದೆ. ಅಲ್ಲದೆ ಈ ಪ್ರಬಂಧವು 'ಸದ್ಗುರು' ಮಾಸ ಪತ್ರಿಕೆಯಲ್ಲಿ ಪ್ರಕಟವಾಗಿ, ಅನಂತರ 'ಸುಂದರಲೇಖ ಸಮುಚ್ಚಯ'ದಲ್ಲೂ ಸಂಗ್ರಹಿತವಾಗಿದೆ. ಅಲ್ಲಿಯ ಲೇಖನಕ್ಕೂ ಇಲ್ಲಿಯ ಲೇಖನಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಕೇವಲ "....ನಾನು ಈಗ 'ಗೃಹಶಿಕ್ಷಣ'ವೆಂಬ ವಿಷಯವನ್ನು ಯಥಾಮತಿ ಬರೆಯಲು ಉಪಕ್ರಮಿಸಿರುತ್ತೇನೆ" ಎಂಬ ಕೊನೆಯ ವಾಕ್ಯದಲ್ಲಿಯ 'ನಾನು' ಎಂಬ ಉತ್ತಮ ಪುರುಷ ಏಕವಚನ ಸರ್ವನಾಮದ ಬದಲು ಅಲ್ಲಿ 'ನಾವು' ಎಂದು ಬಂದಿತ್ತು.

ಇಲ್ಲಿಯ ಹತ್ತು ಪುಸ್ತಕಗಳಲ್ಲಿ 'ದಂಪತಿಗಳು', 'ಕುಟುಂಬ', 'ಸಮಾಜ', 'ರಾಷ್ಟ್ರ' ಮತ್ತು 'ವಿಶ್ವ' ಇವುಗಳನ್ನು ಅವರು 'ಸರ್ವಸ್ವ-ಪಂಚಕ' ಎಂದು ಕರೆದು "ಈ ಐದೂ ಪುಸ್ತಕಗಳೂ ಅತ್ಯಂತ ಗಂಭೀರವಾದವುಗಳು"[1] ಎಂದು ತಿಳಿಸಿರುವರು. ಕೊನೆಯ 'ಪ್ರಬಂಧ ಶಿಕ್ಷಣ'ವನ್ನು ಕುರಿತು "ಇದು ಅತ್ಯುಪಯುಕ್ತವಾದ ಮಹತ್ವದ ಪುಸ್ತಕವು. ಪ್ರಾಥಮಿಕ ಶಾಲೆಗಳಲ್ಲಿಯ ಚಿಕ್ಕ ವಿದ್ಯಾರ್ಥಿಗಳಿಂದ ಟ್ರೇನಿಂಗ ಕಾಲೇಜದ 3ನೇ ವರ್ಷದಲ್ಲಿಯ ಪ್ರೌಢ ವಿದ್ಯಾರ್ಥಿಗಳ ವರೆಗೆ ನಾನು ಪ್ರಬಂಧಗಳನ್ನು ಕಲಿಸುವಾಗ ಆದ ಅನುಭವದ ಸಹಾಯದಿಂದಲೂ, ನನ್ನ ಲೇಖನ ವ್ಯವಸಾಯದಲ್ಲಿ ಬಂದ ಅನುಭವದ ಸಹಾಯದಿಂದಲೂ ಇದನ್ನು ಬರೆಯ ತೊಡಗಿರುವೆನು"[2] ಎಂದು ತಿಳಿಸಿರುವರು. ಆದರೆ ಅವರು ಕೊಟ್ಟಿರುವ ರೂಪರೇಷೆಗಳನು ಗಮನಿಸಿದಾಗ, ಇದು ಅವರೇ 'ಶಾಲಾಪತ್ರಕ'ದಲ್ಲಿ 1909–10ರಲ್ಲಿ ಪ್ರಕಟಿಸಿದ 'ನಿಬಂಧ ಶಿಕ್ಷಣ'ದ ಸುಧಾರಿತ ಪ್ರತಿರೂಪವಿರಬೇಕೆಂದು ತೋರುತ್ತದೆ.[3]

ಅದೇನೇ ಇದ್ದರೂ, 1928ರಲ್ಲಿ ಗಳಗನಾಥರು ಈ ಯೋಜನೆಯನ್ನು ಪ್ರಕಟಿಸಿದ್ದರೂ, ಅನಂತರ 1942ರ ವರೆಗೂ ಇವುಗಳಲ್ಲಿಯ ಒಂದು ಪುಸ್ತಕವನ್ನೂ ಬರೆದು ಪ್ರಕಟಿಸಲಿಕ್ಕೆ ಅವರಿಗೆ ಸಾಧ್ಯವಾಗಲಿಲ್ಲ.

ಧಾರವಾಡ ಕನ್ನಡ ಮತ್ತು ಮೈಸೂರು ಕನ್ನಡಗಳಲ್ಲಿ ಏಕರೂಪತೆಯನ್ನು ತರಬೇಕೆಂಬ ವಿಚಾರ ಗಳಗನಾಥರಲ್ಲಿದ್ದಿತು. ಅವರ ಕಾದಂಬರಿಗಳು ಉತ್ತರ ಕರ್ನಾಟಕದಲ್ಲಿಯಂತೆ ಆಗಿನ ಮೈಸೂರು ಸಂಸ್ಥಾನದಲ್ಲಿಯೂ ಜನಪ್ರಿಯವಾಗಿದ್ದುವು. ಅದಕ್ಕೆ ಅವರ ಉತ್ತರ ಕರ್ನಾಟಕದ ಭಾಷೆ ಅಡ್ಡ ಬಂದಿರಲಿಲ್ಲ. ಆದರೂ ಅವರು ತಮ್ಮ ಕಾದಂಬರಿಗಳ ಮೈಸೂರು ಕನ್ನಡದ ಆವೃತ್ತಿಯನ್ನೂ ಹೊರತರಲು ಮನಸ್ಸು ಮಾಡಿದ್ದರು. ತಮ್ಮ ಕೆಲವು ಪುಸ್ತಕಗಳನ್ನು ಮೈಸೂರ ಪ್ರಾಂತದಲ್ಲಿ ಶಾಲೆ-ಕಾಲೇಜುಗಳಲ್ಲಿ ಪಠ್ಯವಾಗಿ ನಿಯಮಿಸಬೇಕೆಂದು ಸೂಚಿಸುವಾಗ ಅವರು "ಬೇಕಾದರೆ ಅವನ್ನು (ಕಾದಂಬರಿಗಳನ್ನು) ಇಲ್ಲಿಯ (ಮೈಸೂರಲ್ಲಿಯ) ಭಾಷಾಪಂಡಿತರ ಸೂಚನೆಯಂತೆ ತಿದ್ದಿ ಹೊಸ ಆವೃತ್ತಿಯನ್ನು ಹೊರಡಿಸುವೆನು"[4] ಎಂದು ತಿಳಿಸಿದ್ದರು.

ಆದರೆ ತಿದ್ದಿ ಬರೆಯುವ ಅವಶ್ಯಕತೆ ಬೀಳದಂತೆಯೇ ಹೊಸ ಪ್ರಬಂಧ ಪುಸ್ತಕವೊಂದನ್ನು ಬರೆಯಬೇಕೆಂದೂ ಅವರು ಯೋಜನೆ ಹಾಕಿಕೊಂಡಿದ್ದರು. ಅದರ ಹೆಸರು–'ಕನ್ನಡ ಭಾಷೆಯ

1. ಗಳಗನಾಥ : ಸದ್ಗುರು ಪ್ರಭಾವ, ಪುಟ 69
2. ಅದೇ, ಪುಟ 103
3. ಈ ಗ್ರಂಥದ ಹಸ್ತಪ್ರತಿಯ 3 ರಿಂದ 13 ಮತ್ತು 36 ರಿಂದ 53 ಪುಟಗಳು ಲಭ್ಯವಾಗಿವೆ.
4. ಗಳಗನಾಥ : ಸದ್ಗುರು ಪ್ರಭಾವ, ಪುಟ 113

ಏಕೀಕರಣ ಸಾಧನವಾದ ಉದ್ಬೋಧಕ ಗದ್ಯ–ಪದ್ಯ ರತ್ನಮಾಲಾ.' ಇದರಲ್ಲಿ ಅವರು ನೀತಿಮತ್ತೆ, ದೈವೀಭಾವ, ದೇಹರಕ್ಷಣ, ಧಾರ್ಮಿಕ ಬುದ್ಧಿ, ಶೀಲಸಂವರ್ಧನ, ಭಕ್ತಿ, ಪೌರುಷ, ಔದಾರ್ಯ, ತ್ಯಾಗಬುದ್ಧಿ, ನಿಸ್ಪೃಹತೆ, ವೈರಾಗ್ಯ, ಶಾಂತಿ ಮೊದಲಾದ ಪ್ರಬಂಧಗಳನ್ನು ಬರೆಯಬೇಕೆಂದಿದ್ದರು; ಕಾರ್ಯಪ್ರವೃತ್ತರೂ ಆಗಿದ್ದರು. ಈ ಗ್ರಂಥದ 16 ಪುಟಗಳ ಹಸ್ತಪ್ರತಿ ಮಾತ್ರ ಲಭ್ಯವಾಗಿದೆ. ಆದರೆ ಇಲ್ಲಿ ಅವರ ಭಾಷೆಯಲ್ಲಿ ಹೆಚ್ಚಿನ ಬದಲಾವಣೆಯಾದಂತೆ ಮಾತ್ರ ಕಾಣುವುದಿಲ್ಲ. ಉದಾಹರಣೆಗಾಗಿ 'ದೇಹರಕ್ಷಣೆ' ಎಂಬ ಪ್ರಬಂಧದ,

"ಮನುಷ್ಯನಲ್ಲಿಯ ಅಪಾರವಾದ ಅನ್ನರೂಪ ಧನಸಂಗ್ರಹ ಮಾಡುವ ದುರಾಶೆ, ಕೃತ್ರಿಮ ಸವಿಸವಿ ತಿನಿಸಿನ ಕೆಟ್ಟ ಚಟ, ಅಳತೆಗೆಟ್ಟು ತಿನ್ನುವ ದುರಭ್ಯಾಸ ಇವುಗಳ ಮೂಲಕ ಮನುಷ್ಯರಲ್ಲಿಯೇ ಹಲವರಿಗೆ ಅನ್ನದ ಕೊರತೆಯಾಗುತ್ತದೆ....ಅನ್ನಕ್ಕಾಗಿ ದೇವರ ಅಥವಾ ಅನ್ಯರ ಹೆಸರಿನಿಂದ ಕಲ್ಲು ಒಡೆಯುವ ಡೋಕಾರತನವೂ ಮನುಷ್ಯಪ್ರಾಣಿಯ ಪಾಲಿಗೇ ಯಾಕೆ ಬಂದಿರಬಹುದು ? "

— ಎಂಬಂಥ ವಾಕ್ಯಗಳನ್ನು ಗಮನಿಸಿದರೆ ಗಳಗನಾಥರ ಉತ್ತರ ಕರ್ನಾಟಕದ ಮಾತಿನ ಒಗರು ಕಡಿಮೆಯಾದಂತೆ ಕಾಣುವುದಿಲ್ಲ.

ಅದೇನೇ ಇದ್ದರೂ ಈ ಯೋಜಿತ ಗ್ರಂಥವು ಪೂರ್ತಿಯಾಗಲಿಲ್ಲ. ಆದರೂ, ಅವರು 1940ರಲ್ಲಿಕೂಡ, ಪುಸ್ತಕಗಳನ್ನು ಬರೆಯುವ ಯೋಜನೆಗಳನ್ನು ಹಾಕಿಕೊಳ್ಳುತ್ತಲೇ ಇದ್ದರೆಂಬುದಾಗಿ ತಿಳಿದುಬರುತ್ತದೆ.

ಮೈಸೂರು ರಾಜರನ್ನು ಕುರಿತು '**ನುಮ್ಮಡಿ ಶ್ರೀಕೃಷ್ಣರಾಜ ಒಡೆಯರು ಅರ್ಥಾತ್ ಪ್ರಜಾದರ್ಶ**' ಎಂಬ ಗ್ರಂಥದ ಹೊಳವನ್ನು ಹಾಕಿದ್ದರಲ್ಲದೆ, ಗಳಗನಾಥರು ಅದರ ವಿಷಯಾನುಕ್ರಮಣಿಕೆಯನ್ನೂ ಕೂಡ ಸಿದ್ಧಮಾಡಿದ್ದರು. "ಉಪೋದ್ಘಾತ, ಸಿಂಹಾಸನಾರೋಹಣ ಸಮಾರಂಭ, ಪ್ರಜಾಹಿತಾಂಗಗಳು, ರಾಜರ್ಷಿತ್ವ, ಪ್ರಜಾವಾತ್ಸಲ್ಯ ವೈಭವ, ಕಾರ್ಯಕುಶಲತೆ, ರಾಜ್ಯಪಾಲರ ಪದ್ಧತಿಯಲ್ಲಿಯ ಅಪೂರ್ವತೆ, ರಾಜನಿಷ್ಠಾ ಪ್ರದರ್ಶನಗಳು, ಸದ್ಭಾವ ಸೌಂದರ್ಯ, ಶೀಲಸಂಪತ್ತು, ಪುಣ್ಯಪ್ರಭಾವ, ನಾವಿಷ್ಣುಃ ಪೃಥಿವೀ ಪತಿಃ" ಮೊದಲಾದುವು ಅವರ ಯೋಜಿತ ಗ್ರಂಥದಲ್ಲಿಯ 35 ಪ್ರಕರಣಗಳಲ್ಲಿ ಕೆಲವು. ಗಳಗನಾಥರಿಗೆ 1927–28ರಿಂದ ಮೈಸೂರ ಅರಸರಲ್ಲಿ ಗೌರವಾದರಗಳು ಹುಟ್ಟಿಕೊಂಡವು. ಅವರು ಆಗ ಬೆಂಗಳೂರಲ್ಲಿ ಬರೆದ "ರಾಣೀಮೃಣಾಲಿನಿ ಎಂಬ ಪುಸ್ತಕವನ್ನು ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಬಹಾದ್ದೂರವರ, ಹಾಗು ರಾಣಾ ರಾಜಸಿಂಹ ಎಂಬ ಪುಸ್ತಕವನ್ನು ಶ್ರೀಮದ್ರಾಜಕುಮಾರ ಜಯಚಾಮರಾಜ ಒಡೆಯರ್ ಬಹಾದ್ದೂರವರ ಅಭ್ಯುದಯಕ್ಕಾಗಿ ಶ್ರೀ ಲಕ್ಷ್ಮೀ ವೇಂಕಟೇಶನ ದಿವ್ಯಚರಣಗಳಲ್ಲಿ ಮಲ್ಲಿಕಾಚಂಪಕ ಕುಸುಮಗಳಾಗಿ" ಅರ್ಪಿಸಿದ್ದರು. ಅಲ್ಲದೆ 'ಧಾರ್ಮಿಕ ತೇಜ' ಮತ್ತು 'ಸದ್ಗುರು ಪ್ರಭಾವ'ಗಳನ್ನು ನಾಲ್ವಡಿ ಕೃಷ್ಣರಾಜ ಒಡೆಯರ್ ಬಹಾದ್ದೂರವರ ಅಭ್ಯುದಯಕ್ಕಾಗಿ ಅರ್ಪಿಸಲಿದ್ದರು.[1] ಈಗ ಮೈಸೂರ ರಾಜರೊಬ್ಬರ ಚರಿತ್ರೆಯನ್ನೇ ಬರೆಯಹೊರಟಿದ್ದರು. ಗಳಗನಾಥರು ಪ್ರಜಾಸತ್ತೆಗಿಂತ ಪ್ರಜಾಹಿತವು ಹೆಚ್ಚು ಮಹತ್ತ್ವದ್ದೆಂದೂ, ಧರ್ಮಪಾಲನೆಯಲ್ಲಿಯೇ ಪ್ರಜಾಹಿತವೆಂದೂ ತಿಳಿದಿದ್ದರು. "ಅಶಾಂತವಾದ ರಾಜಸತ್ತೆಯಾಗಲಿ, ಲೋಕಸತ್ತೆಗಳಾಗಲಿ ನಿಜವಾದ ಸತ್ತೆಗಳೇ ಅಲ್ಲ.

1. ಗಳಗನಾಥ : ಸದ್ಗುರು ಪ್ರಭಾವ, ಪ್ರಸ್ತಾವನೆ

ಧರ್ಮಿಷ್ಠವಾದ ರಾಜಸತ್ತೆಯೂ ಪ್ರಜಾಕ್ಷೇಮಕರವು, ಧರ್ಮಿಷ್ಠವಾದ ಲೋಕಸತ್ತೆಯೂ ಪ್ರಜಾಕ್ಷೇಮಕರವು"[1] ಎಂದು ಅವರು ತಮ್ಮ 'ಸರಾಜಕತಾ' ಎಂಬ ಗ್ರಂಥದಲ್ಲಿ ಪ್ರತಿಪಾದಿಸಲು ಯೋಜಿಸಿದ್ದರು. "ಸನಾತನ ಧರ್ಮವನ್ನು ಎತ್ತಿ ಹಿಡಿದು ಅಸಂಖ್ಯ ದಾನಧರ್ಮಾದಿಗಳನ್ನು ಮಾಡುತ್ತಿದ್ದ ಹಾಗೂ ಅನೇಕ ಪೌರಾಣಿಕ ಕೃತಿಗಳನ್ನು ಪ್ರಕಟಿಸಿದ ಮುಮ್ಮಡಿಯವರು ಗಳಗನಾಥರಿಗೆ ಆದರ್ಶ ರಾಜರಾಗಿ ಕಂಡದ್ದು ಸಹಜವೇ. ಗಳಗನಾಥರು ಮುಖ್ಯತಃ ಸನಾತನ ರಾಜರ್ಷಿಗಳ ಹಿನ್ನೆಲೆಯಲ್ಲಿ ಮುಮ್ಮಡಿಯವರ ಪ್ರಜಾಹಿತಾದರ್ಶವನ್ನು ಕೊಡಬಯಸಿದ್ದರು."[2]

1938ರಲ್ಲಿ ಗಳಗನಾಥರು ಪ್ರಕಟಿಸಿದ 'ಕಲಿಕುಠಾರ 2ನೆಯ ಭಾಗ'ದ ಕೊನೆಯ ಪುಟದಲ್ಲಿ ಪ್ರಿಂಟಿನಲ್ಲಿರುವ ಪುಸ್ತಕಗಳ ಒಂದು ಪಟ್ಟಿಯನ್ನೇ ಕೊಟ್ಟಿರುವರು. ಅವುಗಳಲ್ಲಿ (1) ದುರ್ಗದ ಬಿಚ್ಚುಗತ್ತಿ 1 ನೆಯ ಭಾಗ (2) ನಳಚರಿತ್ರ (3) ದಾಂಪತ್ಯ (4) ಸಾಹಿತ್ಯ ಎಂಬ ಪುಸ್ತಕಗಳಿವೆ. ಇವುಗಳಲ್ಲಿ 'ದುರ್ಗದ ಬಿಚ್ಚುಗತ್ತಿ' 1ನೆಯ ಭಾಗ ಮತ್ತು 'ನಳ ಚರಿತ್ರ' ಇವು 1938ರಲ್ಲಿಯೇ ಪ್ರಕಟವಾದುವು; 'ದಾಂಪತ್ಯ'ವು 1912ರಲ್ಲಿಯೇ ಪ್ರಕಟವಾಗಿತ್ತು. ಅದರ ಎರಡನೆಯ ಆವೃತ್ತಿಯು 1951ರಲ್ಲಿ ಹೊರಬಂದಿತು. ಆದರೆ 'ಸಾಹಿತ್ಯ'ವು ಮಾತ್ರ ಪ್ರಕಟವಾಗಲೇ ಇಲ್ಲ. ಗಳಗನಾಥರ ಸಂಬಂಧಿಕರ ಹತ್ತಿರವೂ ಈ ಗ್ರಂಥದ ಹಸ್ತಪ್ರತಿಯು ದೊರೆಯುವುದಿಲ್ಲ. ಆದ್ದರಿಂದ ಗಳಗನಾಥರು ಬರೆಯಬೇಕೆಂದು ಯೋಚಿಸಿದ ಗ್ರಂಥಗಳ ಪಟ್ಟಿಯಲ್ಲಿಯೇ ಈ 'ಸಾಹಿತ್ಯ'ವನ್ನೂ ಸೇರಿಸಬೇಕಾಗುತ್ತದೆ. ಅದರಂತೆ ಬೆಳಗಾವಿ ಜಿಲ್ಲೆಯ ಮೂಡಲಗಿ ಕ್ಷೇತ್ರದ ರಂಗಬೋಧ ಸ್ವಾಮಿ, ಅದ್ವಯ ಬೋಧಸ್ವಾಮಿ ಮತ್ತು ಶಿವಬೋಧ ಸ್ವಾಮಿಗಳ ಚರಿತ್ರೆಯನ್ನೂ ಬರೆಯಬೇಕೆಂದು ಅವರು 1933ರಲ್ಲಿ ನಿರ್ಧರಿಸಿದ್ದರು. "ಈ ಪೀಠ ಪರಂಪರೆಯ ಈ ವರೆಗಿನ ಮಹಾಪುರುಷರ ಚರಿತ್ರವು 'ದೇಶಿಕ ಚರಿತ್ರ'ವೆಂಬ ಹೆಸರಿನಿಂದ ಮಹಾರಾಷ್ಟ್ರ ಭಾಷೆಯಲ್ಲಿ ಓವೀಬದ್ಧವಾಗಿರುವದನ್ನು ಶ್ರೀಮಠದಲ್ಲಿ ನಾನು ಅವಲೋಕಿಸಿದೆನು. ಆ ದೇಶಿಕ ಚರಿತ್ರವನ್ನು ಕನ್ನಡದಲ್ಲಿ ಬರೆದು ಕೃತಾರ್ಥನಾಗುವ ಕುತೂಹಲವು ನನಗೆ ಬಹಳವಾಗಿದೆ"[3] ಎಂದು ಗಳಗನಾಥರೇ ತಿಳಿಸಿರುವರು.

ಹಾಗಲ್ಲದೆ, ಕದಂಬ, ಚಾಲುಕ್ಯ, ಹೊಯ್ಸಳ, ವಿಜಯನಗರ ರಾಜರ ಕಥೆಗಳನ್ನೊಳಗೊಂಡ ಸ್ವತಂತ್ರವಾದ ಐತಿಹಾಸಿಕ ಕಾದಂಬರಿಗಳನ್ನು ಬರೆಯಬೇಕೆಂದೂ ಅವರು ಬಯಸಿದ್ದರು. ಅದನ್ನು 'ಕುಮುದಿನಿ', 'ಕನ್ನಡಿಗರ ಕರ್ಮಕಥೆ'ಗಳ ಪ್ರಸ್ತಾವನೆಯಲ್ಲಿ ಸೂಚಿಸಿದ್ದರು. ಅದರಂತೆ ಮೈಸೂರು ರಾಜ್ಯವನ್ನು ಆಳಿದ ಟೀಪೂಸುಲ್ತಾನನನ್ನು ಕುರಿತೂ ಒಂದು ಕಾದಂಬರಿಯನ್ನು ಬರೆಯಬೇಕೆಂದಿದ್ದರು. ಅದಕ್ಕಾಗಿ ಆಪಟೆಯವರ 'ಮೈಸೂರಚಾ ವಾಘ'ವನ್ನು ತರಿಸಿ ಓದಿದ್ದರು. ಆದರೆ "ಶ್ರೀರಂಗಪಟ್ಟಣವನ್ನು ನೋಡಿ ಬಂದು ಬರೆಯೋಣ" ಎಂದರು.[4] ಆದರೆ ಅದು ಕಾರ್ಯರೂಪಕ್ಕೆ ಇಳಿಯಲಿಲ್ಲ.

ಗಳಗನಾಥರ ಪ್ರಕಟಿತ ಸಾಹಿತ್ಯವೇ ವಿಪುಲವಾಗಿದ್ದರೂ ಅವರ ಅಪ್ರಕಟಿತ ಸಾಹಿತ್ಯವೂ

---

1. ಅದೇ, ಪುಟ 56
2. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 113
3. ಗಳಗನಾಥ : ಮಹಾಭಾರತಾಮೃತ ವನಪರ್ವ, ಪ್ರಸ್ತಾವನೆ, ಪುಟ 2
4. ಪುಸ್ತಕ ಮಾರಾಟದ ಕಾರ್ಯದಲ್ಲಿ ಅವರ ಸಹಕಾರಿಗಳಾಗಿದ್ದ ಶ್ರೀ ಶಿದ್ದಪ್ಪ ಸಿಂದಗಿ ಅವರಿಂದ ತಿಳಿದ ವಿಚಾರ.

ಕಡಿಮೆಯೇನಲ್ಲ. ಗಳಗನಾಥರು ಬರೆದ ಅಥವಾ ಅನುವಾದಿಸಿದ ಪೌರಾಣಿಕ ಗ್ರಂಥಗಳಲ್ಲಿ 'ಹರಿವಂಶ'ವೂ ಸಮಾವೇಶವಾಗುತ್ತದೆ. ''ಮಹಾಭಾರತಾಮೃತವನ್ನು ಹದಿನೆಂಟು ಪರ್ವ ಪೂರ್ಣ ಬರೆದು ಮುಗಿಸಿರುವೆನಲ್ಲದೆ, ಹರಿವಂಶವನ್ನೂ ಅರ್ಧದ ಮೇಲೆ ಬರೆದಿರುವನು" ಎಂದು ಸ್ವತಃ ಗಳಗನಾಥರೇ 1933ರಲ್ಲಿ ತಿಳಿಸಿದ್ದರು.[1] ಆದರೆ ಅದು ಪೂಣಗೊಂಡು ಪ್ರಕಟವಾಗಲಿಲ್ಲ. ಅದರಂತೆ ಅವರು 'ಮಹಾಭಾರತಾಮೃತ'ದ ಹದಿನೆಂಟೂ ಪರ್ವಗಳನ್ನು ಬರೆದು ಮುಗಿಸಿದ್ದರೂ, ಅವುಗಳಲ್ಲಿ ಎರಡು ಸಂಪುಟಗಳು ಮಾತ್ರ ಪ್ರಕಟವಾದುವು. ಅವುಗಳಲ್ಲಿ ಆದಿಪರ್ವ, ಸಭಾಪರ್ವ ಮತ್ತು ವನಪರ್ವದ ಅರ್ಧಭಾಗ ಮಾತ್ರ ಸಮಾವೇಶವಾಗಿವೆ. ಉಳಿದ ಪರ್ವಗಳೆಲ್ಲ ಇನ್ನೂ ಹಸ್ತಪ್ರತಿಯ ರೂಪದಲ್ಲಿಯೇ ಉಳಿದಿವೆ. ಆ ಹಸ್ತಪ್ರತಿಯ ಕೆಲವು ಪುಟಗಳನ್ನು ಅಲ್ಲಲ್ಲಿ ಹುಳ ತಿನ್ನತೊಡಗಿವೆ. ತಮ್ಮ ಎರಡು ಮೊಮ್ಮಕ್ಕಳನ್ನೇ ಬಲಿಕೊಟ್ಟು ಬರೆದು ಮುಗಿಸಿದ 'ಮಹಾಭಾರತಾಮೃತ'ವು ಸಂಪೂರ್ಣವಾಗಿ ಕೊನೆಗೂ ಪ್ರಕಟವಾಗದೆ ಇದ್ದುದನ್ನು ಕಂಡು ಗಳಗನಾಥರು ಬಹುವಾಗಿ ನೊಂದಿರಬಹುದು.

ಗಳಗನಾಥರು ಬರೆದು ಮುಗಿಸಿದ್ದರೂ ಪ್ರಕಟವಾಗದಿದ್ದ ಗ್ರಂಥಗಳಲ್ಲಿ 'ದುರ್ಗದ ಬಿಚ್ಚುಗತ್ತಿ, 2ನೆಯ ಭಾಗ' ಮತ್ತು 'ಕಲಿ ಕುಠಾರ–ಭಕ್ತಿಯೋಗ ಪ್ರಧಾನ ಖಂಡ' ಇವುಗಳೂ ಸಮಾವೇಶವಾಗುತ್ತವೆ. ಇವುಗಳ ಹಸ್ತಪ್ರತಿಗಳೂ ಈಗ ಉಪಲಬ್ಧವಿಲ್ಲ.[2]

ಹೀಗೆ ಗಳಗನಾಥರು ಬರೆದು ಪ್ರಕಟಿಸಿದ, ಬರೆದರೂ ಪ್ರಕಟಿಸಲಾರದ ಮತ್ತು ಬರೆಯಬೇಕೆಂದು ಯೋಜಿಸಿದ ಲೇಖನಗಳ ಮತ್ತು ಗ್ರಂಥಗಳ ಒಟ್ಟು ಗಾತ್ರವನ್ನು ನೆನೆದರೆ ಆ ಕನ್ನಡ ಶಾಲೆಯ ಮಾಸ್ತರರ ಪ್ರತಿಭೆ ಮತ್ತು ಜಿಗುಟುತನಗಳ ಕಲ್ಪನೆ ಬಂದೀತು!

---

1. ಗಳಗನಾಥ : ಮಹಾಭಾರತಾಮೃತ ಸಭಾಪರ್ವ, ಪ್ರಸ್ತಾವನೆ, ಪುಟ 3
2. ''ಅವು ಎಲ್ಲಿಯೋ ಕಳೆದುಹೋಗಿವೆ'' ಎಂದು ಗಳಗನಾಥರ ಮಗ ಶ್ರೀ ಬಿಷ್ಟಪ್ಪನವರೇ ಹೇಳುತ್ತಾರೆ.

# ಗಳಗನಾಥರ ಗದ್ಯಶೈಲಿ

ಗಳಗನಾಥರನ್ನು ಹೊಸಗನ್ನಡದ ಗದ್ಯಪ್ರವರ್ತಕರೆಂದು ಕರೆಯಲಾಗುತ್ತದೆ. ಈ ಬಿರುದಿಗೆ ಅವರು ಎಷ್ಟರ ಮಟ್ಟಿಗೆ ಅರ್ಹರು, ಅವರ ಗದ್ಯಶೈಲಿಯ ವೈಶಿಷ್ಟ್ಯಗಳೇನು ಎಂಬುದನ್ನು ವಿಚಾರಿಸುವುದು ಈಗ ಕ್ರಮಪ್ರಾಪ್ತವಾಗುತ್ತದೆ.

ಇತ್ತೀಚೆಗೆ ಅನೇಕ ಲೇಖಕರನ್ನು ಕುರಿತು "ಅವರಿಗೆ ತಮ್ಮದೇ ಆದ ಶೈಲಿಯಿದೆ" ಎಂದು ಹೇಳಲಾಗುತ್ತಿದೆ. ಆದರೆ ನಿಜವಾಗಿ ವಿಚಾರಿಸಿದರೆ ಹೀಗೆ ತಮ್ಮದೇ ಆದ ಶೈಲಿ ಇರುವವರು ಬಹಳ ಕಡಿಮೆ ಸಂಖ್ಯೆಯ ಲೇಖಕರು. ಅಂಥ ವಿರಳರಲ್ಲಿ ಗಳಗನಾಥರೂ ಒಬ್ಬರೆನ್ನುವಲ್ಲಿ ಸಂದೇಹವಿಲ್ಲ.

ಒಂದು ಸಾಹಿತ್ಯ ಕೃತಿಯನ್ನು ಗದ್ಯದಲ್ಲಾಗಲಿ ಪದ್ಯದಲ್ಲಾಗಲಿ ಅಭಿವ್ಯಕ್ತಗೊಳಿಸಲು ಸಾಹಿತಿಯು ಬಳಸುವ ಭಾಷೆಯನ್ನು ಶೈಲಿ ಎಂದು ಕರೆಯಬಹುದು. ಆಂಗ್ಲ ಪಂಡಿತರು ಈ ಶೈಲಿಯ ಬಗ್ಗೆ ಬಹಳವಾಗಿ ವಿಚಾರಿಸಿರುವರು. "ಆಲೋಚನೆಯ ಉಡಿಗೆಯೇ ಶೈಲಿ", "ಶೈಲಿ ಲೇಖಕನ ಅಂಗಿಯಲ್ಲ, ತೊಗಲು", "ಸುಂದರ ಕಾವ್ಯದೇವಿಯ ಮುಖಬಣ್ಣದ ಹೊಳಪೇ ಶೈಲಿ" ಎಂದು ಹಲವು ತೆರನಾಗಿ ಹೇಳುತ್ತ "ಕವಿಯೇ ಶೈಲಿ" ಎಂದೂ ನುಡಿದಿರುವರು.[1] ಲೇಖಕನ ವಿಚಾರಗಳಾಗಲಿ, ಅವನ ಭಾವನೆಗಳಾಗಲಿ, ಅನುಭವಗಳಾಗಲಿ ಸಾಹಿತ್ಯದಲ್ಲಿ ವ್ಯಕ್ತವಾಗುವುದು, ನಿರೂಪಿತವಾಗುವುದು ಭಾಷೆಯ ಮೂಲಕವೇ. ಈ ಭಾಷೆಯ ಬೆಡಗು ವ್ಯಕ್ತಿವ್ಯಕ್ತಿಗೆ ಭಿನ್ನವಾಗಬಹುದು. ಈ ಬೆಡಗು ಆತ ಬಳಸುವ ಪದಗಳು, ಮಾಡುವ ಪದಸಂಯೋಜನೆ. ಒಟ್ಟಂದದಲ್ಲಿ ಉಂಟುಮಾಡುವ ಪ್ರಭಾವಗಳಲ್ಲಿ ಅಡಕವಾಗಿರುತ್ತದೆ. ಎಲ್ಲ ಕಾಲಕ್ಕೂ ಈ ಬೆಡಗು ಬರವಣಿಗೆಯಲ್ಲಿ ಕಂಡೇ ಕಾಣುತ್ತದೆ ಎಂದೇನೂ ಇಲ್ಲ, ಕೆಲವರಲ್ಲಿ ಅದು ತೀರ ರೂಕ್ಷವಾಗಿರಬಹುದು. ಕೆಲವರಲ್ಲಿ ಅತಿ ನಾಟಕೀಯವಾಗಿರಬಹುದು. ಕೆಲವರಲ್ಲಿ ಕಾಲಕಾಲಕ್ಕೆ ಸನ್ನಿವೇಶಕ್ಕೆ ತಕ್ಕಂತೆ ಭಿನ್ನವಾಗಲೂಬಹುದು. ಕೆಲವರ ಶೈಲಿ ಒಟ್ಟಿನಲ್ಲಿ ವಾಚಕರನ್ನು ಮೋಹ ಜಾಲದಲ್ಲಿ ಸಿಕ್ಕಿಸುತ್ತದೆ, ಇನ್ನು ಕೆಲವರದು ಓದಲಿಕ್ಕೇ ಬೇಸರ ತರಿಸುತ್ತದೆ. ಅಂತೂ ಪ್ರತಿಯೊಬ್ಬ ಸಾಹಿತಿಗೆ ಇಂಥ ಒಂದು ಶೈಲಿ ಇರುತ್ತದೆ. ಕೆಲವರಲ್ಲಿ ಅವರವೇ ಆದ ವೈಶಿಷ್ಟ್ಯಗಳಿರುತ್ತವೆ. ಹಲವರಲ್ಲಿ ಯಾವ ವೈಶಿಷ್ಟ್ಯಗಳೂ ಇರುವುದಿಲ್ಲ. ಬಹಳ ಜನರು ಅನುಕರಣಶೀಲರೇ ಆಗಿರುತ್ತಾರೆ. ಹೀಗಿರುವಾಗ ನಿಜವಾಗಿಯೂ ತನ್ನದೇ ಆದ ಶೈಲಿ ಇದ್ದವನು ಗಣ್ಯನೇ ಸರಿ. "The style of a really gifted man belongs to none but himself" ಎಂದು ಒಬ್ಬ ಆಂಗ್ಲ ಪಂಡಿತನು ಹೇಳಿರುವುದನ್ನು ಇಲ್ಲಿ ನೆನೆಯಬಹುದು.

---

1. ಎಸ್. ವಿ. ರಂಗಣ್ಣ : ಶೈಲಿ 1–2–3, ಪುಟ 6 7.

ಗಳಗನಾಥರಿಗೆ ಹೀಗೆ ತಮ್ಮದೇ ಆದ ಶೈಲಿ ಇದ್ದಿತೆಂದು ಧಾರಾಳವಾಗಿ ಹೇಳಬಹುದು. ಅಂಥ ಒಂದು ಶೈಲಿಯನ್ನು ಅವರೇ ನಿರ್ಮಿಸಿದರೆಂದೂ ಹೇಳಲಡ್ಡಿಯಿಲ್ಲ, ಗಳಗನಾಥರ ಆ ತಮ್ಮದೇ ಆದ ಶೈಲಿಯ ಲಕ್ಷಣಗಳೇನು ಎಂದು ವಿಚಾರಿಸುವ ಮೊದಲು ಇಂಥ ಶೈಲಿಯನ್ನು ಹೇಗೆ ಗುರುತಿಸಬಹುದೆಂದು ವಿಚಾರಿಸಬೇಕು.

"Style means that personal idiosyncracy of expression by which we recognise a writer."[1] "Whatever goes to make a man's writing recognizable is included in his style."[2]

ಲೇಖಕನೊಬ್ಬನ ಅಭಿವ್ಯಕ್ತಿಯಲ್ಲಿ ಸ್ಪಷ್ಟವಾಗಿ ಕಂಡುಬರುವ ವ್ಯಕ್ತಿ ವೈಲಕ್ಷಣ್ಯಗಳನ್ನು, ಸ್ವಭಾವ ವೈಚಿತ್ರ್ಯಗಳನ್ನು ಆತನ ಶೈಲಿ ಎಂದು ಕರೆಯಬಹುದು. ಇದು ಇಂಥವನದೇ ಬರಹ ಎಂದು ಗುರುತಿಸಲಿಕ್ಕೆ ಸಹಾಯಕವಾಗುವ ಅಂಶಗಳೆಲ್ಲವನ್ನೂ ಆತನ ಶೈಲಿ ಎಂದು ಹೇಳಬಹುದು. ಆದರೆ ಹೀಗೆ ಗುರುತಿಸಲಿಕ್ಕೆ ಬರುವಂತಹ ವೈಚಿತ್ರ್ಯಗಳಿಂದ, ವೈಲಕ್ಷಣ್ಯಗಳಿಂದ ಕೂಡಿರುವದೇ ಒಳ್ಳೆಯ ಶೈಲಿ ಎಂದೇನೂ ತಿಳಿಯಬೇಕಾಗಿಲ್ಲ. ಇಂಥ ಯಾವ ವೈಲಕ್ಷಣ್ಯಗಳಿಲ್ಲದೆಯೂ ಲೇಖಕನೊಬ್ಬ ನಿಜವಾಗಿಯೂ ಸುಂದರವಾದ ಶೈಲಿಯಲ್ಲಿ ಬರೆದಿರಬಹುದು. ಆದರೂ ಸಾಮಾನ್ಯವಾಗಿ ಹಿರಿಯ ಲೇಖಕರಲ್ಲಿ ಇಂಥ ಒಂದಿಲ್ಲ ಒಂದು ವೈಲಕ್ಷಣ್ಯಗಳು ಇರುತ್ತವೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಹಿತಮಿತವಾದ ಮಾರ್ಗ-ದೇಶಿಗಳ ಸಮನ್ವಯದ ಪಂಪ; ರಸಾವೇಶದ, ರೂಪಕಗಳ ಸುರಿಮಳೆ ಸುರಿಸುವ ಆತ್ಮೀಯ ಶೈಲಿಯ ಕುಮಾರವ್ಯಾಸ; ಜಾನಪದ ಶೈಲಿಯ ಜೀವನಾಡಿಯನ್ನು ಕರಗತಮಾಡಿಕೊಂಡ ಬೇಂದ್ರೆ; ಸಂಸ್ಕೃತ ಭೂಯಿಷ್ಠ ಪ್ರೌಢ ಗಂಭೀರ ಶೈಲಿಯ ಕುವೆಂಪು; ಪುಟ್ಟಪುಟ್ಟ, ಕ್ರಿಯಾಪದರಹಿತ ಚುರುಕು ವಾಕ್ಯಗಳ ಸಿದ್ದವನಹಳ್ಳಿ ಕೃಷ್ಣಶರ್ಮ- ಹೀಗೆ ಹಲವರ ಶೈಲಿಯ ಕುರುಹುಗಳು ಕಣ್ಣಿಗೆ ಒಡೆದು ಕಾಣುವಷ್ಟು ಸ್ಪಷ್ಟವಾಗಿರುತ್ತವೆ. ನಮ್ಮ ಪ್ರಾಚೀನ ಲಾಕ್ಷಣಿಕರೂ ವೈದರ್ಭಿ, ಗೌಡಿ ಎಂದು ಮೊದಲಾಗಿ ಶೈಲಿಯನ್ನು ಅಭ್ಯಸಿಸಿದ್ದಾರೆ; ಶೈಲಿಯಲ್ಲಿಯ ಓಜಸ್ಸು, ಕಾಂತಿ ಮೊದಲಾದ ಗುಣಗಳನ್ನು ಗುರುತಿಸಿದ್ದಾರೆ.

ನಿಜವಾದ ಪ್ರತಿಭಾವಂತ ಲೇಖಕನಿಗೆ ಈ ಶೈಲಿ ಒಂದು ಸಮಸ್ಯೆಯೇ ಆಗಿರುವುದಿಲ್ಲ. ಆತನ ಪ್ರತಿಭೆಗೆ ಹೊಳೆದ ಕಥಾವಸ್ತು ತಕ್ಕ ರೂಪ-ಪರಿಕರಗಳೊಂದಿಗೇ ಅವನಿಗೆ ಹೊಳೆದಿರುತ್ತದೆ. ಉತ್ತಮವಾಗಿ ಯೋಚಿಸಿದುದು ಅಥವಾ ಭಾವಿಸಿದುದು ಅಷ್ಟೇ ಉತ್ತಮವಾಗಿಯೇ ನಿರೂಪಿತವಾಗುತ್ತದೆ. ಅಂಥ ನಿರೂಪಣೆಯ ಶೈಲಿ ಸನ್ನಿವೇಶಕ್ಕೆ ತಕ್ಕಂತೆ ಭಿನ್ನವೂ ಆಗಬಹುದು. ಅದುವೇ ನಿಜವಾದ, ಸಹಜವಾದ ಶೈಲಿ ಎನ್ನಬೇಕು. ಎಲ್ಲ ಪ್ರಸಂಗಗಳಲ್ಲಿಯೂ ಎಲ್ಲ ಸನ್ನಿವೇಶಗಳಲ್ಲಿಯೂ ಒಂದೇ ರೀತಿಯಾಗಿ ಬರೆಯುವವರು ಕೃತ್ರಿಮವಾಗಿ ಬರೆಯುತ್ತಾರೆ ಎಂದೇ ಹೇಳಬೇಕು.

ಶೈಲಿ ಸಹಜವಾಗಿರಬೇಕು ಎಂದು ಹೇಳಿದರೂ, ಅದಕ್ಕೆ ಕೆಲವು ಸಾಮಾನ್ಯ ನಿಯಮಗಳು

1. J. Middleton Murry : The problem of style, page 4
2. ಅದೇ, ಪುಟ 5

ಇದ್ದೇ ಇರುತ್ತವೆ. ಉದಾಹರಣೆಗಾಗಿ ಲೇಖನದಲ್ಲಿ ವ್ಯಾಕರಣ ದೋಷಗಳು ಇರಬಾರದು, ಅರ್ಥವು ಸ್ಪಷ್ಟವಾಗುವಂತೆ ಇರಬೇಕು, ಅಪಪ್ರಯೋಗಗಳನ್ನೂ ಅಸಭ್ಯ ಪ್ರಯೋಗಗಳನ್ನೂ ಬಳಸಬಾರದು.[1] ಅದರಂತೆ ಶೈಲಿಯು ವಿನಾಕಾರಣ ಆಲಂಕಾರಿಕವೂ, ವಿನಾಕಾರಣ ಅತಿಸುಲಭವೂ ಆಗಿರಕೂಡದು. ಅದರಿಂದ ವಾಚಕರು ವಿಷಯವನ್ನು ಅಲಕ್ಷಿಸಿ ಶೈಲಿಯ ಕಡೆಗೇ ಹೆಚ್ಚು ಗಮನ ಕೊಡುವ ಅಪಾಯವಿರುತ್ತದೆ. ತನ್ನ ವಾಚಕರಿಗೆ ತಿಳಿಯುವಂತೆ, ವಿಷಯವು ಬೋಧವಾಗುವಂತೆ, ಒಟ್ಟಿನಲ್ಲಿ ಶೈಲಿಯು ಪಾರದರ್ಶಕವಾಗಿ ಇರಬೇಕೆಂಬುದು ಲೇಖಕನು ಗಮನಿಸಬೇಕಾದ ಮುಖ್ಯ ಎಚ್ಚರಿಕೆ.

ಸ್ಥೂಲವಾದ ಈ ತತ್ತ್ವಗಳ ಹಿನ್ನೆಲೆಯಲ್ಲಿ ಗಳಗನಾಥರ ಶೈಲಿಯ ಗುಣಲಕ್ಷಣಗಳನ್ನು ಗುರುತಿಸಲು ಯತ್ನಿಸಬಹುದು. ಗಳಗನಾಥರು ಬರೆಯಲು ತೊಡಗಿದುದು 1890ರ ದಶಕದಲ್ಲಿ. ಆ ಕಾಲಕ್ಕೆ ಕನ್ನಡ ಗದ್ಯವು ಇನ್ನೂ ಒಂದು ವ್ಯವಸ್ಥಿತವಾದ ರೂಪವನ್ನು ಪಡೆದಿರಲಿಲ್ಲ. 1875ರ ಸುಮಾರಕ್ಕೆ ಪ್ರಕಟವಾದ ತುರಮುರಿಯವರ ಕಾದಂಬರಿಯ ಅನುವಾದವೇ ಆ ಕಾಲಕ್ಕೆ ಆದರ್ಶಗದ್ಯವಾಗಿತ್ತು.

''ಈ ಮೇರೆಗೆ ಮನೋಹರವಾದ ಬನದೊಳಗಿಂದ ಮುಂದಕ್ಕೆ ಹೋಗಲು, ತ್ರೈಲೋಕ್ಯ ಲಕ್ಷ್ಮಿಯು ತನ್ನ ಸೌಂದರ್ಯವನ್ನು ನೋಡಿಕೊಳ್ಳುವದಕ್ಕೆ ಮಾಡಿಟ್ಟ ಕನ್ನಡಿಯೋ, ಭೂದೇವಿಯು ಕ್ರೀಡಿಸುವದಕ್ಕೆ ನಿರ್ಮಾಣ ಮಾಡಿದ ಸ್ಫಟಿಕದ ನೆಲಮನೆಯೋ, ಮಹಾಸಾಗರಗಳ ಉಗಮಸ್ಥಾನವೋ, ಉದಕದ ಅವತಾರವನ್ನು ತಾಳಿ ನೆಲಕ್ಕಿಳಿದ ಆಕಾಶವೋ, ಚಳಿ ಕರಗಿ ಮಡುಗಟ್ಟಿದ ಬೆಟ್ಟವೋ, ಒಬ್ಬುಳಿಗೂಡಿ ಸರೋವರದ ರೂಪತಾಳಿದ ತ್ರಿಭುವನದ ಪುಣ್ಯ ರಾಶಿಯೋ, ರಸರೂಪವನ್ನು ಹೊಂದಿದ ಬೆಳದಿಂಗಳೋ, ಜಲರೂಪವನ್ನಾಂತ ಪರಮೇಶ್ವರನ ಅಟ್ಟಹಾಸವೋ ........ ಏನೊ ಅನ್ನುವ ಹಾಗೆ ತುಂಬಿ ತುಳುಕುವಂಥ ವಿಸ್ತೀರ್ಣವಾದದ್ದೊಂದು ನೆಲೆಯಿಲ್ಲದ ತಂಗೊಳವು ಅತಿ ರಮಣೀಯವಾಗಿ ಕಂಗೊಳಿಸಿತು.''[2]

ಅಚ್ಛೋದ ಸರೋವರದ ಈ ವರ್ಣನೆಯಲ್ಲಿ ತುರಮುರಿಯವರೂ ಬಾಣನ ಪ್ರೌಢಶೈಲಿಯ ಪ್ರಭಾವದಿಂದ ಸಂಪೂರ್ಣವಾಗಿ ಪಾರಾಗಿಲ್ಲವೆಂದು ತೋರುತ್ತದೆ. ಆದರೆ,

"ಆ ರಕ್ಕಸನಂಥ ಬೇಡ ಬಂದದ್ದನ್ನು ಕಂಡು ನಮ್ಮ ತಂದೆಯು ಸಾಯುವ ಹೊತ್ತು ಬಂತೆಂದು ಹೌಹಾರಿ, ಇನ್ನೇನು ಮಾಡಲೆಂದು ಕಣ್ಣು ತುಂಬ ನೀರು ತಂದು ಗದಗದನೆ ನಡುಗಿದನು. ಕಣ್ಣಿಗೆ ಕತ್ತಲೆಗವಿದು, ಕುತ್ತಿಗೆ ನರಲುಬ್ಬಿ ಬಾಯಿಂದ ಮಾತುಗಳೇ ಬರಲೊಲ್ಲವು.''[3]

—ಎಂಬಂಥ ವರ್ಣನೆಗಳಲ್ಲಿ ತುರಮುರಿಯವರ ಸರಳ ಹಾಗು ಲಲಿತ ಕನ್ನಡ ಶೈಲಿ ಸೊಗಸಾಗಿದೆ. ಅದು ಕಾರಣವೇ ತುರಮುರಿಯವರ ಗದ್ಯವು ಆ ಕಾಲಕ್ಕೆ ಆದರ್ಶ ಗದ್ಯವೆನಿಸಿ ಕೊಂಡಿತು. ಆದರೆ ಆ ಕಾಲಕ್ಕೆ, ಮತ್ತು ಆ ತರುವಾಯ ರಚಿತವಾದ ಗದ್ಯವೆಲ್ಲ ಇದೇ ರೀತಿ ಯಾಗಿರಲಿಲ್ಲ. ಹಲವರು ವ್ಯಾಕರಣ ನಿಯಮುಗಳನ್ನು ಕೂಡ ಪಾಲಿಸಲಿಲ್ಲ.

1. ಇಂದಿನ ಪ್ರಸಿದ್ಧ ಲೇಖಕರಲ್ಲಿ ಕೂಡ ಇಂಥ ದೋಷಗಳು ಕಾಣುತ್ತವೆ.
2. ಗಂಗಾಧರ ಮಡಿವಾಳೇಶ್ವರ ತುರಮರಿ : ಬಾಣ ಕಾದಂಬರೀ ಕಥೆ, ಪುಟ 12.
3. ಅದೇ, ಪುಟ 20.

1896ರಲ್ಲಿ ಪ್ರಕಟವಾದ ಗುಬ್ಬಿ ಮುರಿಗಾರಾಧ್ಯ ಎಂಬವರ ಸ್ವತಂತ್ರ ಕಾದಂಬರಿ 'ಶೃಂಗಾರ ಚಾತುರ್ಯೋಲ್ಲಾಸಿನಿ'ಯು ಅಶುದ್ಧ ಭಾಷೆಯಿಂದ ತುಂಬಿಹೋಗಿದೆ.

"ಪಾತಕರೆ ! ನಿಮಗೆ ಚಂಚಲ ದ್ರಿಷ್ಟಿಯಲ್ಲಿ ಇಷ್ಟವಿಲ್ಲವೆ ? ಹಾಗಿದ್ದರೆ ಮುತ್ತುಗಳ ರಾಶಿಯನ್ನು ನೋಡಿದ್ದೀರಾ ? ಅದರ ಮೇಲ್ಭಾಗದಲ್ಲಿ ಪ್ರಕಾಶಿಸುವ ಹೊಳಪಿನಂತೆ ಅನಂಗ ಲಲನೆಯ ಕಟಾಕ್ಷವು ಕಾಂತಿಯುಳ್ಳದ್ದಾಗಿತ್ತು. ಮುಖವು ಗುಂಡಾಗಿಯೂ ಕಾಂತಿಯುಕ್ತ ವಾಗಿಯೂ ಕಳಂಕರಹಿತವಾಗಿಯೂ ಇದ್ದುದನ್ನು ಚಂದ್ರನು ನೋಡಿ ಲೋಕಕ್ಕೆ ಮೊಗ ದೋರಿಸಲು ನಾಚಿ ರಾತ್ರಿ ಕಾಲಗಳಲ್ಲಿಯೇ ಸಂಚರಿಸಲುಪಕ್ರಮಿಸಿದನು. ಹಂಸೆಯು ಈಕೆಯ ನಡಿಗೆಯನ್ನು ನೋಡಲಾರದೆ ಅಸೂಯೆಯಿಂದ ಕೊಳಗಳ ಧಡವನ್ನೆ........ಶೇರಿಬಿಟ್ಟವೋ........ ಕಾಮಶಾಸ್ತ್ರ ಪ್ರಕಾರೇಣ ಈ ಕಾಮಿನಿಯ ಭುಜಗಳು ಅತಿ ನಮ್ರಗಳಾಗಿರುವದರಿಂದ ಸುಂದರಿ ಯೆಂದು ಹೇಳುವಲ್ಲಿ....ಸಂದೇಹವೇನು....?"[1] (ಪುಟ 7)

ಇಂಥ ಅಶುದ್ಧ ಭಾಷೆಯ ಮತ್ತು ಸಾಂಪ್ರದಾಯಿಕ ವರ್ಣನೆಗಳು ಈ ಕಾದಂಬರಿಯಲ್ಲಿ ಹೇರಳವಾಗಿವೆ. ಆದರೆ ಎಲ್ಲರೂ ಹೀಗೆಯೇ ಅಶುದ್ಧವಾಗಿ ಬರೆಯುತ್ತಿದ್ದರು ಎನ್ನಬೇಕಾಗಿಲ್ಲ. 'ಶಾಲಾಪತ್ರಿಕ'ದ ಭಾಷೆ ಸಾಕಷ್ಟು ಶುದ್ಧವೂ ಸರಳವೂ ಆಗಿತ್ತು. ಆದರೆ ಸಾಮಾನ್ಯ ವ್ಯಾವಹಾರಿಕ ಭಾಷೆ ಮಾತ್ರ ಅಶುದ್ಧವಾಗಿಯೇ ಇದ್ದಿತು. ಪತ್ರವ್ಯವಹಾರ ಮತ್ತು ಕೋರ್ಟು-ಕಚೇರಿಗಳ ಭಾಷೆಯೂ ಬೇಕಾದಷ್ಟು ಅಶುದ್ಧ ಪದ-ಪ್ರಯೋಗಗಳಿಂದ ಕೂಡಿರುತ್ತಿತ್ತು. ಆದ್ದರಿಂದಲೇ ಈ ಶತಮಾನದ ಆರಂಭದಲ್ಲೂ ತುರಮುರಿಯವರ ಗದ್ಯವೇ ಆದರ್ಶಗದ್ಯವೆಂದು ಪರಿಗಣಿಸಲ್ಪಟ್ಟಿತ್ತು.

ಗಳಗನಾಥರು ತಮ್ಮ 'ಪದ್ಯಾರ್ಥಸಾರ' ಮೊದಲಾದ 1890ರ ದಶಕದಲ್ಲಿ ಬರೆದ ಶಾಲೋಪಯೋಗಿ ಗ್ರಂಥಗಳಲ್ಲಿ ಸರಳ ಸುಲಭ ಮತ್ತು ಶುದ್ಧ ಕನ್ನಡವನ್ನೇ ಬಳಸಿದ್ದಾರೆ. ಅವರ 'ಪದ್ಮನಯನಾ' (1898) ಮಾತ್ರ ತುಸು ನಾಟಕೀಯವಾದ ಗದ್ಯಶೈಲಿಯನ್ನು ಒಳಗೊಂಡಿದೆ.

"ಪ್ರಾಣಪ್ರಿಯರೇ, ತಮ್ಮ ಮಾತುಗಳು ಕಡುಗಲಿಗಳಿಗೆ ಸಹ ಸೋಜಿಗವನ್ನುಂಟುಮಾಡದೆ ಇರಲಾರವು. ಯಾಕಂದರೆ, ರಾಕ್ಷಸನ ಭಯಂಕರ ರೂಪವನ್ನು ಕಣ್ಣಿನಿಂದ ನೋಡುವದೂ ದುಃಸಹವಾಗಿರಲು, ಅವನಿಗೆ ಎದುರಾಗಿ ಯುದ್ಧಮಾಡುವದೆಂದರೆ ಎಂಥ ಶೌರ್‍ಯದ ಮಾತು!"[2]

"ಅಷ್ಟರಲ್ಲಿ ಅಧಿಕ ಲಾವಣ್ಯಯುಕ್ತಳಾದ ಮತ್ತೊಬ್ಬ ಸ್ತ್ರೀಯು, ತಾರಾಗಣದ ನಡುವಿನ ಚಂದ್ರನಂತೆ ಅಧಿಕ ಮೋಹಕಳಾಗಿ ದಾಸಿಯರೊಡನೆ ಅಲ್ಲಿಗೆ ಬಂದಳು, ನಾನು ಬಹುಜನ ರಾಜಪುತ್ರಿಯರನ್ನು ನಿರಾಕರಿಸಿದವನಾಗಿದ್ದರೂ, ಆ ಭುವನಸುಂದರಿಯ ರೂಪವೂ, ಸೌಮ್ಯ ಮುದ್ರೆಯೂ ನನ್ನ ಮನಸ್ಸನ್ನು ಎಳೆಕೊಳ್ಳದೆ ಬಿಡಲಿಲ್ಲ. ಆ ಮೋಹಕ ಮೂರ್ತಿಯಲ್ಲಿ ನಟ್ಟ ನನ್ನ ದೃಷ್ಟಿಗಳನ್ನು ತಕ್ಕೊಳ್ಳುವದಕ್ಕೆ ವಿಶ್ವಪ್ರಯತ್ನ ಮಾಡಿದರೂ ಅವು ನನ್ನ ಆಧೀನವಾಗಲಿಲ್ಲ. ಅವಳ ಸುಂದರವಾದ ಅವಯವಗಳೂ, ಸೂಕ್ಷ್ಮತನುವೂ, ಮೈಸೊಬಗೂ, ಮುಖದ ಕಾಂತಿಯೂ ನನ್ನಲ್ಲಿ ಕಾಮವಿಕಾರವನ್ನುಂಟು ಮಾಡಿದವು !"[3]

1. ಶ್ರೀನಿವಾಸ ಹಾವನೂರ : ಹೊಸಗನ್ನಡದ ಅರುಣೋದಯ, ಪುಟ 547 (ದಿಂದ ಪುನರುದ್ಧೃತ)
2. ಗಳಗನಾಥ : ಪ್ರಬುದ್ಧ ಪದ್ಮನಯನಾ, ಪುಟ 87.
3. ಅದೇ, ಪುಟ 56.

–ಎಂಬಂಥ ವರ್ಣನೆಗಳಲ್ಲಿ ತುರಮರಿಯವರ ಅಲಂಕೃತ ಗದ್ಯದ ಪ್ರಭಾವವನ್ನು ಸಹಜವಾಗಿ ಗುರುತಿಸಬಹುದಾಗಿದೆ. ಆದರೆ ಗಳಗನಾಥರು ಈ ಪ್ರಭಾವದಿಂದ ಬೇಗನೇ ಪಾರಾಗಿ, ತಮ್ಮದೇ ಆದ ಗದ್ಯದ ದಾರಿಯನ್ನು ಕಂಡುಕೊಂಡರು; ಅದನ್ನೇ ರೂಢಿಸಿಕೊಂಡರು.

'ಕಮಲ ಕುಮಾರಿ'ಯನ್ನು (1908) ಭಾಷಾಂತರಿಸತೊಡಗಿದ ಗಳಗನಾಥರ ಶೈಲಿ ಮರಾಠಿಯ ಪ್ರಭಾವಕ್ಕೂ ತುಸುಮಟ್ಟಿಗೆ ಒಳಗಾಯಿತು. ಆದರೂ ಗಳಗನಾಥರು ಕನ್ನಡದ ಒಗರನ್ನು ಎಂದೂ ಕಳೆದುಕೊಳ್ಳಲಿಲ್ಲವೆಂಬುದನ್ನು ಅವರ ಅನುವಾದಿತ ಕಾದಂಬರಿಗಳ ಬಗ್ಗೆ ವಿಚಾರಿಸುವಾಗ ಅರಿತುಕೊಳ್ಳಲಾಗಿದೆ. ಅವರ 'ಭಾಷಾಂತರ'ದಲ್ಲಿದ್ದ ಮರಾಠಿಯ ಪ್ರಭಾವ 'ಅನುವಾದ'ಗಳಲ್ಲಿ ಬಹುಮಟ್ಟಿಗೆ ಕಡಿಮೆಯಾಗಿದೆ. ಅವರ ಸ್ವತಂತ್ರ ಕಾದಂಬರಿಗಳಲ್ಲಿ ಈ ಮರಾಠಿಯ ಪ್ರಭಾವವು ಅತಿ ಅಪರೂಪವಾಗಿ ಕಾಣುತ್ತದೆ. ಅದನ್ನು ಮರಾಠಿಯ ಪ್ರಭಾವ ಎನ್ನುವುದಕ್ಕಿಂತ ಧಾರವಾಡ ಭಾಗದ ಕನ್ನಡ ಭಾಷೆಯ ಸಹಜರೂಪವೆಂದೇ ಹೇಳಬೇಕು. ಗಳಗನಾಥರು ಬಳಸಿದ ಅನೇಕ ಮರಾಠಿಯ ಪದಗಳು ಧಾರವಾಡ ಭಾಗದ ಜನರ ಮಾತಿನಲ್ಲಿ ಸೇರಿಕೊಂಡು ಬಿಟ್ಟಿದ್ದುವು.

ಗಳಗನಾಥರ ಗದ್ಯದಲ್ಲಿ ಮರಾಠಿಯಂತೆ ಸಂಸ್ಕೃತ ಭಾಷೆಯ ಪ್ರಭಾವವೂ ಕಂಡುಬರುತ್ತದೆ; ಆದರೂ ಅಚ್ಚ ಕನ್ನಡ ಭಾಷೆಯ ಸೊಗಡನ್ನು ಅದು ಎಂದೂ ಕಳೆದುಕೊಳ್ಳಲಿಲ್ಲವೆಂಬುದು ಗಮನಾರ್ಹವಾಗಿದೆ. ಅದರಂತೆ ಅವರ ಗದ್ಯವು ವ್ಯಾಕರಣ ದೃಷ್ಟಿಯಿಂದ ಶುದ್ಧವಾಗಿದ್ದರೂ, ಜನಬಳಕೆಯ ಮಾತುಗಳನ್ನೂ ಗಾದೆಗಳನ್ನೂ ಪಡೆನುಡಿಗಳನ್ನೂ ಅವರು ಸಮಯೋಚಿತವಾಗಿ ಹೇರಳವಾಗಿ ಬಳಸಿದ್ದರಿಂದ ಅವರ ಗದ್ಯ ಒಂದು ರೀತಿಯಾಗಿ ಶಕ್ತಿಸಂಪನ್ನವಾಯಿತು. ಗಳಗನಾಥರು ಹೆಚ್ಚಾಗಿ ವ್ಯಾಕರಣಬದ್ಧವಾದ, ಗ್ರಾಂಥಿಕವೆಂಬಂಥ ತುರಮರಿಯವರ ಗದ್ಯ ಮತ್ತು ಅಶುದ್ಧ ಗ್ರಾಮ್ಯವಾದ ರೂಢಿಯ ಗದ್ಯ[1]–ಇವುಗಳಲ್ಲಿ ಮಧ್ಯದ ದಾರಿಯನ್ನು ಹಿಡಿದರು.

ಗಳಗನಾಥರ ಶೈಲಿಯ ಬಗ್ಗೆ ಬರೆಯುತ್ತ ಡಾ.ಬೆಟಗೇರಿಯವರು, "ದಿ. ಗಳಗನಾಥರಿಗಿಂತ ಮೊದಲು ಹೊಸಗನ್ನಡದ ಗದ್ಯಶೈಲಿ ಇನ್ನೂ ಪ್ರಯೋಗಾವಸ್ಥೆಯಲ್ಲಿಯೆ ಇದ್ದಿತು. ದಿವಂಗತ ವೆಂಕಟರಂಗೋ ಕಟ್ಟಿಯವರನ್ನು ಬಿಟ್ಟರೆ ಗಳಗನಾಥರ ವರೆಗೆ ಯಾವ ಕನ್ನಡ ಲೇಖಕನೂ ಶೈಲಿಯ ವ್ಯಕ್ತಿತ್ವವನ್ನು ಪಡೆದಿರಲಿಲ್ಲ. ಗಳಗನಾಥರು ದಿ. ಕಟ್ಟಿಯವರಿಗಿಂತ ಹೆಚ್ಚಿನ ಹದವನ್ನು ಕನ್ನಡಕ್ಕೆ ತಂದುಕೊಟ್ಟಿದ್ದಾರೆ. ವ್ಯಾಕರಣದ ನಿಯಮಗಳನ್ನು ಮೀರಿ ನಡೆದಿಲ್ಲವಾದರೂ, ದೇಶಿಯ ಮೆರುಗನ್ನು ಪರಿಶುದ್ಧ ಭಾಷಾಶೈಲಿಗೆ ಅಳವಡಿಸಿ, ಇವರು ತಮ್ಮದೇ ಆದ ಶೈಲಿಯನ್ನು ನಿರ್ಮಿಸಿಕೊಂಡಿದ್ದಾರೆ. ಸಹಜವಾದ ವಾಕ್ಯರಚನಾ ಪದ್ಧತಿ, ಸುಲಭಾರ್ಥ ಬೋಧಕವಾದ ಉಚಿತ ಶಬ್ದಗಳು, ಭಾವೋಚಿತವಾದ ಪರಿಮಿತದ ಧ್ವನಿಯ ಬಳಕೆ, ಪಂಡಿತ ಪಾಮರರಿಬ್ಬರ ಮನಸ್ಸನ್ನೂ ಸೆರೆಹಿಡಿಯುವಂತಹ ಪರಿಶುದ್ಧವೂ ಸುಲಭವೂ ಆದ ಶೈಲಿ! ಇವರ ಹೆಚ್ಚಿನ ಕಾದಂಬರಿಗಳು ಪರಭಾಷೆಯ ಅನುವಾದಗಳಾಗಿ ಬಂದಿದ್ದರೂ, ಅನುವಾದ ಕಾರ್ಯದಲ್ಲಿ ಕನ್ನಡ ನುಡಿಯ ಮೂಲಸ್ವರೂಪವನ್ನು ಕೆಡಿಸಿಲ್ಲ"[2] ಎಂದು ಹೇಳಿರುವುದು ಉಚಿತವೇ ಆಗಿದೆ.

1. 'ಗಳಗನಾಥರ ಪರಿಸರ' ಎಂಬ ಪ್ರಕರಣದಲ್ಲಿ ಉದ್ಧರಿಸಿದ 'ಕರ್ನಾಟಕ ವಿದ್ಯಾವರ್ಧಕ ಸಂಘ'ದ ನಿರ್ಣಯಗಳ ಭಾಷೆಯನ್ನು ಇಂಥ ರೂಢಿಯ ಗದ್ಯ ಎನ್ನಬಹುದು.
2. ಬೆಟಗೇರಿ ಕೃಷ್ಣಶರ್ಮಾ : ಕನ್ನಡಕ್ಕೆ ಗಳಗನಾಥರ ಕಾಣಿಕೆ, 'ಕರ್ಮವೀರ', ದಿ. 5-1-1969, ಪುಟ 22

ಲೇಖಕನೊಬ್ಬನ ವ್ಯಕ್ತಿತ್ವ, ಅವನ ಅಭ್ಯಾಸ, ಜೀವನದೃಷ್ಟಿ, ಆತ ಆಯ್ದುಕೊಂಡ ವಿಷಯ ಇವುಗಳ ಜೊತೆಗೆ ಲೇಖಕ ಬಾಳಿದ ಕಾಲದ ಪರಿಣಾಮವೂ ಅವನ ಶೈಲಿಯ ಮೇಲೆ ಆಗುತ್ತದೆ. ಭಾಷಾಂತರಕಾರನ ವಿಷಯದಲ್ಲಂತೂ ಈ ಮಾತು ಇನ್ನೂ ಹೆಚ್ಚಾಗಿ ಅನ್ವಯವಾಗಬಹುದು.

"Style is influenced both by the personality of the writer and also by the period of history in which he lives"[1] ಎಂಬ ಅಭಿಪ್ರಾಯವನ್ನೂ ಗಮನಿಸಬೇಕು.

ಸುಸಂಸ್ಕೃತವಾದರೂ ಹಳ್ಳಿಯ ಮನೆತನದಲ್ಲಿ ಜನನ, ಪರಂಪರೆಯಿಂದ ಕಲಿತ ಸಂಸ್ಕೃತ ಭಾಷೆಯ ಪ್ರಭಾವದೊಂದಿಗೆ ಕನ್ನಡ ಟ್ರೇನಿಂಗ ಕಾಲೇಜಿನಲ್ಲಿ ಮೂರು ವರ್ಷಗಳ ಕನ್ನಡ–ಸಂಸ್ಕೃತ ಭಾಷೆಗಳ ಅಧ್ಯಯನ, ಧಾರವಾಡದ ಪ್ರಾಂತದಲ್ಲಿದ್ದ ಮರಾಠಿಯ ಪ್ರಭಾವದ ಜೊತೆಗೇ ಕೊಂಕಣಸ್ಥ ಮರಾಠಿ ಗೃಹಸ್ಥರ ಸಹವಾಸ, ಮರಾಠಿ ಪತ್ರಿಕೆ-ಗ್ರಂಥಗಳ ವಾಚನ, ಕನ್ನಡದ ಅಭಿಮಾನ–ಇಂಥ ಹಲವು ಅಂಶಗಳಿಂದ ರೂಪುಗೊಂಡ ಗಳಗನಾಥರ ವ್ಯಕ್ತಿತ್ವವು ಅವರ ಶೈಲಿಯ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿದೆ. ಅಲ್ಲದೆ ಆ ಕಾಲಕ್ಕೆ ಒಳ್ಳೆಯ ಗ್ರಂಥಗಳೆಂದು ಕರೆಯಿಸಿಕೊಂಡ ತುರಮರಿಯವರ 'ಕಾದಂಬರೀ ಕಥೆ', ವೆಂಕಟಾಚಾರ್ಯರ ಕಾದಂಬರಿಗಳು ಅಷ್ಟೇ ಅಲ್ಲದೆ ಒಳ್ಳೆಯ ಶೈಲಿಗಾಗಿ ಖ್ಯಾತರಾಗಿದ್ದ ಚ. ವಾಸುದೇವಯ್ಯನವರ ಗ್ರಂಥಗಳೂ, ಗಳಗನಾಥರ ಮೇಲೆ ಪ್ರಭಾವ ಬೀರಿರುವ ಸಂಭವವಿದೆ.

ತಮ್ಮ ಗದ್ಯಶೈಲಿಯ ಬಗ್ಗೆ ಗಳಗನಾಥರೇ ಒಂದೆಡೆ ಹೇಳಿದ ವಿಚಾರಗಳನ್ನೂ ನೋಡಬಹುದು. "ಯಾವ ಪ್ರಾಂತದ ಭಾಷೆಯ ಅಧಿಕಾರಕ್ಕೂ ನಾನು ಒಳಗಾದವನಲ್ಲ. ನಾನು ನನ್ನ ಯೋಗ್ಯತೆಯಂತೆ ಬೇರೆ ಬೇರೆ ಪ್ರಾಂತಗಳ ಪ್ರಸಿದ್ಧ ಲೇಖಕರ ಕನ್ನಡ ಗ್ರಂಥಗಳನ್ನು ಓದುವಾಗ ನನ್ನಲ್ಲುಂಟಾದ ಭಾಷೆಗಳ ಪರಿಪಾಕದ ಸ್ವಾಭಾವಿಕವಾದ ಪ್ರಭುತ್ವದಿಂದ ನಾನು ಕಾದಂಬರಿಗಳನ್ನು ಬರೆದಿರುವೆನು. ನಾನು ಭಾಷೆಯ ಏಕೀಕರಣದ ಗೊಡವೆಗೂ ಹೋದವನಲ್ಲ; ಭಾಷೆಯ ಸಂಕರೀಕರಣದ ಗೊಡವೆಗೂ ಹೋದವನಲ್ಲ. ಭಿನ್ನ ಭಿನ್ನ ಭಾಷಾಸರಣಿಗಳ ಸುಪರಿಣಾಮದಿಂದ ನನ್ನ ಹುಟ್ಟು ಭಾಷೆಯಲ್ಲಾದ ಸಂಜೀವನೀಕರಣದ ಭಾಷೆಯಿಂದ ನಾನು ಕಾದಂಬರಿಗಳನ್ನು ಬರೆದಿರುತ್ತೇನೆ."[2]

ಆಗಲೇ ನೋಡಿದಂತೆ ಗಳಗನಾಥರ ಅಭ್ಯಾಸ, ಅವರ ಪರಿಸರಗಳಿಂದ ಅವರ ಭಾಷೆಯ 'ಸಂಜೀವನೀಕರಣ'ವಾಯಿತು. ಅವರು ಬಳಸಿದ ಸಂಜೀವನೀಕರಣ ಎಂಬ ಪದವು ಅತ್ಯಂತ ಉಚಿತವಾಗಿದೆ. ಆ ಕಾಲದಲ್ಲಿ ರೂಢಿಯಲ್ಲಿದ್ದ ಭಾಷೆಗೆ ಅವರು ತಮ್ಮ ಸಂಜೀವನೀಕರಣದಿಂದ ಒಂದು ಹೊಸ ಜೀವನವನ್ನೇ ತಂದುಕೊಟ್ಟರು. ಗಳಗನಾಥರ ಇಂಥ ಸಂಜೀವನೀಕೃತ ಭಾಷೆಯ ಸ್ವರೂಪ ಹೇಗಿದ್ದಿತೆಂಬುದನ್ನು, ಅದನ್ನು ಅವರು ಹೇಗೆ ಬಳಸಿಕೊಂಡರೆಂಬುದನ್ನು ಈಗ ನೋಡಬಹುದು.

ಗಳಗನಾಥರ ಮೇಲೆ ಮರಾಠಿ ಭಾಷೆಯ ಪ್ರಭಾವ ಸಾಕಷ್ಟು ಆಗಿತ್ತೆಂಬುದನ್ನು ಅವರ ಅನುವಾದಗಳನ್ನು ಅಭ್ಯಸಿಸುವಾಗ ನೋಡಲಾಗಿದೆ. ಕೆಲವು ಮರಾಠಿ ಪದಗಳ ಬಳಕೆಯಲ್ಲದೆ,

---

1. Theodore Savory : The Art of Translation, p 55
2. ಗಳಗನಾಥ : ಸದ್ಗುರು ಪ್ರಭಾವ, ಪುಟ 38.

ಮರಾಠಿಯ ವಾಕ್ಯರಚನಾ ಪದ್ಧತಿ ಮತ್ತು ನಡೆನುಡಿಗಳ ಛಾಯೆಯನ್ನೂ ಗಳಗನಾಥರ ಭಾಷೆಯಲ್ಲಿ ಕಾಣಬಹುದಾಗಿದೆ.

'ವಾಟಾಘಾಟ', 'ಪಾಳತಿ', 'ರಾಮ ರಾಮ ಮಾಡಿ', 'ಗೋಲಂದಾಜ' ಮೊದಲಾದ ಪದಗಳು ಅನುವಾದಗಳಲ್ಲಿಯಂತೆ ಕೆಲವು ಸಲ ಸ್ವತಂತ್ರ ಕಾದಂಬರಿಗಳಲ್ಲಿಯೂ ಕಂಡಿವೆ. ಅಂಥವುಗಳಲ್ಲಿ 'ಅಂದೇಶ' ಎಂಬುದನ್ನು ನೋಡಬಹುದು. ಮರಾಠಿಯಲ್ಲಿ 'ಅಂದೇಶಾ' ಎಂದರೆ ಹೆದರಿಕೆ, ಸಂದೇಹ ಎಂಬರ್ಥವಿದೆ. ಗಳಗನಾಥರು ಇದನ್ನು ಹಲವಾರು ಕಾದಂಬರಿಗಳಲ್ಲಿ ಅಲ್ಲದೆ, 'ಮಹಾಭಾರತಾಮೃತ'ದ ತಮ್ಮ ಪ್ರಸ್ತಾವನೆಯಲ್ಲಿ ಕೂಡ ಬಳಸಿರುವರು. ಆದರೆ 'ಗುಡಗೀ ಚಣ್ಣ'ಎಂಬ ಪದಪ್ರಯೋಗವು ಗಳನಾಥರ 'ಸ್ವರಾಜ್ಯ ಸುಗಂಧ' ಮತ್ತು 'ದುರ್ಗದ ಬಿಚ್ಚುಗತ್ತಿ' ಎಂಬ ಎರಡೇ ಕಾದಂಬರಿಗಳಲ್ಲಿ ಕಂಡುಬರುತ್ತದೆ. (ಇವೆರಡೂ ಕಾದಂಬರಿಗಳು 1938ರಲ್ಲಿಯೇ ರಚಿತವಾಗಿವೆ.) ಗುಡಗೀ ಚಣ್ಣವೆಂದರೆ ಮೊಣಕಾಲ ವರೆಗಿನ ಚಣ್ಣ.

"ಗಲ್ಲದಲ್ಲಿಯೇ ನಕ್ಕು"[1] (ಈಶ್ವರೀಸೂತ್ರ, ಪುಟ 24)

"ಆ ಮರಾಟನ ಮನಸ್ಸು ಉದಾಸವಾಯಿತು" (ಈಶ್ವರೀಸೂತ್ರ, ಪುಟ 44)

"ಇದೇನು ಲಚಕಂಡವವ್ವಾ ಇದು" (ಗೃಹಕಲಹ, ಪುಟ 63)

"ನಾನು ದೊಡ್ಡವನಾದೆನೆಂದರೆ ನನ್ನ ಶಸ್ತ್ರದ ನೀರನ್ನು ಮುಸಲ್ಮಾನರಿಗೆ ಚನ್ನಾಗಿ ಕುಡಿಸಿ ದೇಶವನ್ನು ಉದ್ಧಾರ ಮಾಡುವೆನು–ಎಂದು ರೂ ಹಾಕುತ್ತಲಿದ್ದನು." (ಸ್ವರಾಜ್ಯ ಸುಗಂಧ, ಪುಟ 6)

"ಮುಚ್ಚಿದ ಮುಷ್ಟಿ ಲಕ್ಷ ರೂಪಾಯಿಗಳದೆನ್ನುವಂತೆ" (ಸ್ವರಾಜ್ಯ ಸುಗಂಧ, ಪುಟ 176)

"ಯಾರಿಗೆ ಆನೆ, ಯಾರಿಗೆ ಕುದುರೆ, ಯಾರಿಗೆ ಅಲಂಕಾರಗಳು, ಯಾರಿಗೆ ವಸ್ತ್ರಗಳು, ಯಾರಿಗೆ ಪಲ್ಲಕ್ಕಿಗಳು, ಯಾರಿಗೆ ನೌಬತ್ತುಗಳು, ಯಾರಿಗೆ ಶಸ್ತ್ರಗಳು, ಯಾರಿಗೆ ಛತ್ರಗಳು, ಯಾರಿಗೆ ಅಬದಾರಿಗಳು, ಹೀಗೆ ಅವರವರ ಯೋಗ್ಯತೆಯಂತೆ ವಸ್ತುಗಳು ಕೊಡಲ್ಪಟ್ಟವು." (ಗೃಹಕಲಹ, ಪುಟ 115). ಇಂಥ "ಯಾರಿಗೆ ಯಾರಿಗೆ" ಎಂದು ಬಳಸಿರುವ ವಾಕ್ಯಗಳು ಗಳಗನಾಥರ ಸ್ವತಂತ್ರ ಕಾದಂಬರಿಗಳಲ್ಲಿಯೂ ವಿಪುಲವಾಗಿ ದೊರೆಯುತ್ತವೆ. ಇದೊಂದು ಗಳಗನಾಥರ ವಾಕ್ಯರಚನಾ ಪದ್ಧತಿಯೇ ಆಗಿತ್ತೆಂದರೂ ತಪ್ಪಲ್ಲ.

ಹೀಗೆ ಮರಾಠಿ ಪದಗಳ ಮತ್ತು ಪಡೆನುಡಿಗಳ ಬಳಕೆ ಉತ್ತರ ಕರ್ನಾಟಕದ ಜನಕ್ಕೆ ಪರಿಚಿತವೆನಿಸಿದರೂ, ಮೈಸೂರು ಭಾಗದ ವಾಚಕರು ಅದನ್ನು ತುಸು ಕಷ್ಟಪಟ್ಟು ಅರ್ಥಮಾಡಿ ಕೊಂಡಿರಬಹುದು. ಆದರೆ ಗಳಗನಾಥರ ಸ್ವತಂತ್ರ ಕಾದಂಬರಿಗಳಲ್ಲಿ ಈ ಮರಾಠಿಯ ಪ್ರಭಾವ ಬಹಳೇ ಕಡಿಮೆ. ಆದರೆ ಅವರ ಅನುವಾದಿತ ಕಾದಂಬರಿಗಳ ಸಂಖ್ಯೆಯೇ ಹೆಚ್ಚು.

ಇನ್ನು, ಗಳಗನಾಥರು ಸಾಕಷ್ಟು ಸಂಸ್ಕೃತವನ್ನೂ ಬಲ್ಲವರಾಗಿದ್ದರು. ಅವರು ಟ್ರೇನಿಂಗ ಕಾಲೇಜಿನಲ್ಲಿ ಕನ್ನಡದ ಜೊತೆಗೆ ಸಂಸ್ಕೃತವನ್ನೂ ಕಲಿಸುತ್ತಿದ್ದರು. ಆದರೂ ಅವರ ಭಾಷೆಯ ಮೇಲೆ ಮರಾಠಿಯಷ್ಟು ಸಂಸ್ಕೃತದ ಪ್ರಭಾವ ಕಾಣುವುದಿಲ್ಲ. ಅವರು ತಮ್ಮ ಕಾದಂಬರಿಗಳಲ್ಲಿ ಅಲ್ಲಲ್ಲಿ ವಾಚಕರಿಗೆ ಬೋಧಿಸುವಾಗ ತಂದಿರುವ ಸಂಸ್ಕೃತ ಸೂಕ್ತಿಗಳು ಮಾತ್ರ ಹೇರಳವಾಗಿವೆ. ಅವುಗಳಲ್ಲಿ "ವಿನಾಶಕಾಲೇ ವಿಪರೀತ ಬುದ್ಧಿಃ" ಎಂಬಂಥ ಸುಲಭವಾಗಿ ಅರ್ಥವಾಗುವ

1. ಮುಗುಳು ನಕ್ಕು ಎಂಬರ್ಥದಲ್ಲಿ ಮರಾಠಿಯಲ್ಲಿ "ಗಾಲಾಂತ ಹಸೂನ" ಎಂದು ಹೇಳುತ್ತಾರೆ.

ಮಾತುಗಳೇ ಹೆಚ್ಚು. ಸಾಮಾನ್ಯ ವಾಚಕರಿಗೂ ಇವುಗಳನ್ನು ತಿಳಿದುಕೊಳ್ಳಲು ತೊಂದರೆಯಾಗಲಿಲ್ಲ. ಆದರೆ "ಮಾರ್ಗತ್ವೇನ ಅಲ್ಲಿಗೆ ಬರುತ್ತಾರೆ" (ಈಶ್ವರೀಸೂತ್ರ, ಪುಟ 55), "ತಮ್ಮಿಂದ ಸಹಿತವಾಗಿ" (ಅದೇ, ಪುಟ 181), "ಅಣ್ಣಾಜಿ ದತ್ತೋಪಂತನಿಂದ ಸಹಿತವಾಗಿ" (ಗೃಹಕಲಹ, ಪುಟ 205), "ಕಿಂಬಹುನಾ ಅಲ್ಲಿ ಅವರು ಪ್ರವೇಶಿಸುವುದೇ ದುರ್ಘಟ" (ಸತ್ವಸಾರ) ಎಂಬಂಥ ಸಂಸ್ಕೃತ ಪದಗಳ ಬಳಕೆ ಮತ್ತು ವಾಕ್ಯರಚನಾಪದ್ಧತಿಯ ಅನುಸರಣೆ ಬಹಳ ಅಪರೂಪವಾಗಿ ಕಂಡಿವೆ. ಒಟ್ಟಿನಲ್ಲಿ ಸಂಸ್ಕೃತದ ಆಡಂಬರಯುಕ್ತವಾದ ವಾಕ್ಯಗಳು ಗಳಗನಾಥರಲ್ಲಿ ಹೆಚ್ಚಾಗಿಲ್ಲವೆಂದೇ ಹೇಳಬೇಕು. ಸಂಸ್ಕೃತ ಪದಗಳನ್ನು ಅನಾವಶ್ಯಕ ಬಳಸಬಾರದೆಂದು 1899ರಲ್ಲಿ ಪ್ರಕಟಿಸಿದ ತಮ್ಮ 'ಲಘು ನಿಬಂಧ ಸಂಗ್ರಹ'ದಲ್ಲಿ ಗಳಗನಾಥರು ಅಭಿಪ್ರಾಯಪಟ್ಟಿದ್ದರಷ್ಟೇ. ಹಾಗೆ, ಅವರು ವಿದ್ಯಾರ್ಥಿಗಳಿಗೆ ಮಾಡಿದ ಉಪದೇಶವನ್ನು ತಾವೂ ಸ್ವತಃ ಪಾಲಿಸಿದರು.

ಆ ಕಾಲದ ಇನ್ನೊಬ್ಬ ಪ್ರಸಿದ್ಧ ಲೇಖಕರೂ ಗದ್ಯಕಾರರೂ ಆದ ಕೆರೂರ ವಾಸುದೇವಾಚಾರ್ಯರ ಗದ್ಯದಲ್ಲಿ ಸಂಸ್ಕೃತದ ಬಳಕೆಯು ಗಳಗನಾಥರ ಗದ್ಯದಲ್ಲಿಯಕ್ಕಿಂತ ಬಹು ಗಣನೀಯವಾಗಿ ಹೆಚ್ಚಾಗಿದೆ. ಗಳಗನಾಥರ 'ಮಾಧವ ಕರುಣಾವಿಲಾಸ'ದ ಭಾಷೆ ಮಾತ್ರ ಹೆಚ್ಚು ಸಂಸ್ಕೃತಮಯವಾಗಿ, ಉಳಿದ ಕಾದಂಬರಿಗಳಿಗಿಂತ ಪ್ರೌಢವೆನಿಸುತ್ತದೆ.

ನಿಜವಾಗಿ, ಗಳಗನಾಥರ ಗದ್ಯಶೈಲಿಯ ಶಕ್ತಿಯೆಲ್ಲವೂ ಅವರು ಬಳಸುವ ಕನ್ನಡ ದೇಸಿಯಲ್ಲಿದೆ. ಅವರು ಮಾತು ಮಾತಿಗೆ ಬಳಸುವ ಪಡೆನುಡಿಗಳು, ಗಾದೆಯ ಮಾತುಗಳು ಅವರ ಶೈಲಿಯನ್ನು ವಾಚಕರಿಗೆ ಆತ್ಮೀಯವಾಗಿಸುತ್ತವೆ. ಈ ಶೈಲಿಯು ಗಳಗನಾಥರ ಸ್ವತಂತ್ರ ಕಾದಂಬರಿಗಳಂತೆ ಅನುವಾದಗಳಲ್ಲಿಯೂ ಅದೇ ಪ್ರಮಾಣದಲ್ಲಿ ಕಂಡುಬರುತ್ತದೆ. ಗಳಗನಾಥರ ಕಾದಂಬರಿಗಳಲ್ಲಿಯ ಈ ಕನ್ನಡ ದೇಸಿಯ ಸೊಗಡು ಓದುವಂತೆಯೇ ವಾಚಕರ ಅನುಭವಕ್ಕೆ ಬರುವಂತಿದೆ-

"ಎಚ್ಚಮನಾಯಕನು ಈ ಉನ್ಮತ್ತತನದ ಮಾತುಗಳಿಗೆ ಸೊಪ್ಪು ಹಾಕುವಂಥ ಹೇಡಿಯಾಗಿದ್ದಿಲ್ಲ" (ಕುಮುದಿನಿ, ಪುಟ 78)

"ಗೆದ್ದ ಎತ್ತಿನ ಬಾಲ ಹಿಡಿಯುವ ಜನರೇ ಯಾವಾಗಲೂ ವಿಶೇಷವಾಗಿರುವರು" (ಕುಮುದಿನಿ, ಪುಟ 77)

"ದೊಡ್ಡ ಅಧಿಕಾರಸ್ಥನಿಂದ ಸರ್ವಸಾಧಾರಣ ಸಿಪಾಯಿಯ ವರೆಗೆ ಎಲ್ಲರೂ ಲಂಚ ಬೊಕ್ಕರಿಸುವವರೇ ಆಗಿದ್ದರು" (ಕುಮುದಿನಿ, ಪುಟ 144)

"ನಿಂತ ಕಾಲಲ್ಲಿ ಆ ಕೆಲಸವನ್ನು ಸಾಧಿಸುವೆನು" (ಕುಮುದಿನಿ, ಪುಟ 123)

"ಪುರುಷರು ಕೂಡ ಬಟ್ಟು ಕಚ್ಚಬಹುದಾಗಿದೆ" (ಕುಮುದಿನಿ, ಪುಟ 88)

"ಉಂಡ ಮನೆ ಗಳ ಎಣಿಸಿ...." (ದುರ್ಗದ ಬಿಚ್ಚುಗತ್ತಿ, ಪುಟ 60)

"ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ನೋಡುತ್ತಿರುವೆನು" (ಅದೇ, ಪುಟ 37)

"ಹುಚ್ಚೆದ್ದು ಹರಿಯುವವನಂತೆ ಆಚರಿಸತೊಡಗಿದನು" (ಮಾಧವ ಕರುಣಾವಿಲಾಸ ಪುಟ 325)

"ಹಿಂದೂ ಜನರ ಮುಗದಾಣವೇ ನಮ್ಮ ಕೈಯಲ್ಲಿದೆ" (ಅದೇ, ಪುಟ 325)

"ಮುಸಲ್ಮಾನ ಸೈನ್ಯದ ಪ್ರತಾಪಕ್ಕೆ ಅಂಜಿ ತತ್ತೀ ಹಾಕುತ್ತಿದ್ದ ಕನ್ನಡ ಸೈನಿಕರಿಗೆ" (ಮಾಧವ ಕರುಣಾವಿಲಾಸ, ಪುಟ 123)

"ಅಖಂಡ ಒಂದು ತಿಂಗಳಿನಿಂದ ಕಾಸಿಮನ ಮೂಗಿಗೆ ತುಪ್ಪ ಹಚ್ಚಿ ಕುಳ್ಳಿರಿಸಿದ ಹಾಗೆ ಮಾಡಿ" (ಅದೇ, ಪುಟ 230)

"ಸುಲಭಸಾಧ್ಯವೆಂದು ಮನಸ್ಸಿನಲ್ಲಿ ಮಂಡಿಗೆ ತಿನ್ನುತ್ತಿದ್ದರು" (ಕುಮುದಿನಿ, ಪುಟ 85)

"ಗಾಯಪಟ್ಟು ಬಿದ್ದವನು ಸತ್ತು ಸತ್ತು ಉಳಿದನು" (ಈಶ್ವರೀಸೂತ್ರ, ಪುಟ 226)

"ನಮ್ಮ ಸುತ್ತ ಕೈ ತೊಳಕೊಂಡು ಬೆನ್ನು ಹತ್ತತಕ್ಕವನೇ" (ಮರಾಠರ ಅಭ್ಯುದಯ, ಪುಟ 232)

"ಬಾದಶಹನು ಪತ್ರದಲ್ಲಿ ಸಕ್ಕರೆಯ ಚೀಲಗಳನ್ನು ಉರುಳಿಸಿದ್ದನು" (ಛತ್ರಪತಿ, ಪುಟ 137)

"ಇವರಿಗೆ ಚಳ್ಳಹಣ್ಣು ತಿನ್ನಿಸುವದು ಸುಲಭವಲ್ಲ" (ಅದೇ, ಪುಟ 61)

"ಬ್ರಾಹ್ಮಣರ ಜನ್ಮಸಿದ್ಧವಾದ ಬಡತನವು ಅನಂತಮಿಶ್ರರ ಬೆನ್ನುಹತ್ತಿಯೇ ಇರುತ್ತಿತ್ತು" (ರಾಣಾರಾಜಸಿಂಹ, ಪುಟ 24)

"ಆ ವೃದ್ಧವೀರನು ಮಗಳನ್ನು ಕಂಡರೆ ಬಿದ್ದು ಸಾಯುತ್ತಿದ್ದನು" (ಅದೇ, ಪುಟ 3)

"ಆತನು ಖಂಡೋಪಂತನ ತಲೆಯ ಮೇಲೆ ಮಣ ಮಣ ಭಾರದ ಕಲ್ಲುಗಳನ್ನು ಇಡಿಸಿದನು. ಆಗ ಖಂಡೋಪಂತನ ಕಣ್ಣುಗಳಲ್ಲಿ ದೀಪ ಹಚ್ಚಿದಂತಾಯಿತು." (ಶಿವಪ್ರಭುವಿನ ಪುಣ್ಯ, ಪುಟ 244)

"ಪಿತ್ತವು ನೆತ್ತಿಗೇರಿ ಮನಬಂದಂತೆ ನಿಂದಿಸತೊಡಗಿದನು." (ವೈಭವ, ಪುಟ 38)

"ಆಕೆಯ ನಡತೆ ಶುದ್ಧವಾಗಿಲ್ಲೆಂದು ಅರಸನ ಕಿವಿಯನ್ನು ಊದಿದರು." (ಅದೇ, ಪುಟ 26)

"ಎಷ್ಟು ಪಂಚಾಂಗ ಉಚ್ಚಿದೆಯಲ್ಲ !" (ಈಶ್ವರೀಸೂತ್ರ, ಪುಟ 107)

ಇಂಥ ನಡೆನುಡಿಗಳನ್ನು ಗಳಗನಾಥರು ವಿಪುಲವಾಗಿ ಬಳಸಿರುವದರಿಂದ ಅವರ ಗದ್ಯಕ್ಕೆ ಹೆಚ್ಚಿನ ಮೆರುಗು ಬಂದಿದೆ. ಗಳಗನಾಥರು ಗಾದೆಗಳ ಮಹತ್ತ್ವವನ್ನು ಮನವರಿಕೆ ಮಾಡಿಕೊಂಡಿರಬೇಕು. ಆದ್ದರಿಂದಲೇ ಅವರ ಮಾತುಗಳಲ್ಲಿ ಗಾದೆಗಳು ಅಲ್ಲಲ್ಲಿ ಬಂದೇ ಇವೆ; ಅದರಂತೆ ಅವುಗಳನ್ನು ಅವರು ಸಮಯೋಚಿತವಾಗಿಯೂ ಉಪಯೋಗಿಸುವರೆಂಬುದು ಮೆಚ್ಚಬೇಕಾದ ಅಂಶ. ಉದಾಹರಣೆಗಾಗಿ ಕೆಲವನ್ನು ನೋಡಬಹುದು.

"ಗಂಡನಿಗೆ ಸೇರದ್ದು ಗುಂಡಕಲ್ಲಿಗೂ ಸೇರದೆಂಬ ಲೋಕೋಕ್ತಿಯಂತೆ, ಗಂಡನಿಗೆ ಬೇಡಾದ ನಾನು ಎಲ್ಲರಿಗೂ ಬೇಡಾಗಲಿಕ್ಕಿಲ್ಲವೇ ?" ಎಂದು 'ಮಾಧವಕರುಣಾವಿಲಾಸ'ದ ಚಿನ್ನಮ್ಮ ಚಿಂತಿಸಿದಳು (ಪುಟ 39). —

ಫಲಮಂತ್ರಾಕ್ಷತೆಯ ಗಂಟನ್ನು ಕಳೆದುಕೊಂಡದ್ದು "ತರುಣನಾಯಕನಿಗೆ ಮೊದಲ ತುತ್ತಿಗೇ ನೊಣ ತಿಂದಂತಾಯಿತು." (ಕುಮುದಿನಿ, 16) ಅಲ್ಲದೆ "ನವಾಜ ಮಾಡುವಲ್ಲಿ

ಮಸೂತಿ ಕೊರಳಿಗೆ ಬಿತ್ತೆನ್ನುವಂತೆ, ತಂದೆಯ ವ್ರತವನ್ನು ಕೈಕೊಳ್ಳುವದಕ್ಕಾಗಿ ಬಂದ ತಾನು, ಸ್ವಜನಘಾತದ ದೋಷಕ್ಕೆ ಪಾತ್ರನಾಗುವ ಪ್ರಸಂಗ ಬಂದಿತೆಂದು ಅಸಮಾಧಾನಪಟ್ಟನು" (ಅದೇ, ಪುಟ 21)

"ಅಂಗಾಲಿಗೆ ಹೇಸಿಗೆಯಿಲ್ಲ, ಕರುಳಿಗೆ ನಾಚಿಕೆಯಿಲ್ಲ ಎಂಬಂತೆ ಅಕಬರನು ಪುನಃ ಸೆಲೀಮನನ್ನು ಪ್ರೀತಿಸತೊಡಗಿದನು" (ಸಂಸಾರ ಸುಖ, ಪುಟ 157)

"ಬಲವಿಲ್ಲದಾಗ ನೆಲವೆದ್ದು ಬಡಿಯಿತೆಂಬ ಮಾತು ಸುಳ್ಳಲ್ಲ" (ಅದೇ, ಪುಟ 161)

"ಸತ್ತ ಎಮ್ಮೆಗೆ ಸೇರು ತುಪ್ಪ ಎಂಬಂತೆ" (ಅದೇ, ಪುಟ 221)

"ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲ ಎಂಬಂತೆ ಆಗ ಮಹಾರಾಷ್ಟ್ರದ ತರುಣರೆಲ್ಲ ರಾಷ್ಟ್ರ ಮುಖಂಡನಾದ ಆ ಶಿವಾಜಿಯಂತೆ ತಾವೂ ಆಗಬೇಕೆಂದು ಯತ್ನಿಸುತ್ತಿದ್ದರು" (ಸ್ವರಾಜ್ಯ ಸುಗಂಧ, ಪುಟ 11)

ದೇವರನ್ನು ಮರೆತಂಥ ಲೌಕಿಕರ ಬಗ್ಗೆ ಬರೆಯುತ್ತ ಗಳಗನಾಥರು "ಇಂಥವರ ಸ್ಥಿತಿಯು ಮೂಗುತಿಯ ಮಬ್ಬಿಗೆ ಮೋಹಿಸಿ, ಮೂಗು ಕೊಟ್ಟವನನ್ನು ಮರೆತಂತೆ ಆಗಿರುತ್ತದೆ" ಎಂದು ಬರೆದರು (ಸ್ವರಾಜ್ಯ ಸುಗಂಧ, ಪುಟ 104).

ಹೀಗೆ ಹಲವಾರು ಚಿರಪರಿಚಿತವಾದ ಗಾದೆ ಮಾತುಗಳನ್ನು ಬಳಸಿರುವುದರಿಂದ ಗಳಗನಾಥರ ಗದ್ಯವು ಸಾಮಾನ್ಯ ವಾಚಕರಿಗೂ ಕೂಡ ಅರ್ಥವಾಯಿತು; ಅರ್ಥಪೂರ್ಣವೂ ಆಗಿ ಕಂಡಿತು.

ಅಲ್ಲದೆ ಗಳಗನಾಥರು ಕೆಲವು ಸಲ "ಗಂಡರಾಮಿ, ಕುತ್ತಿಗೆಗೊಯ್ಕತನ, ಡೋಕಾರಿತನ, ಹೊಯ್ಮಾಲಿತನ, ಕವಡಿಗಂಟುತನ, ಲಂಡತನ, ಪಾಂಡತನ, ಮಸಲತ್ತು, ಮುರವತ್ತು, ಉಸಾಬರಿ, ಸೊಂಡಿ ಒಣಗು, ಗಂಟಲ ಹರಕೊಳ್ಳು, ಜಮದಗ್ನಿಯ ಅವತಾರ" ಇವೇ ಮೊದಲಾದ ಅರ್ಥಪೂರ್ಣವಾದ ಪದಗಳನ್ನು ಸಮುಚಿತವಾಗಿ ಬಳಸಿ, ಒಂದು ಚಿತ್ರವನ್ನೊ ಸನ್ನಿವೇಶವನ್ನೊ ಇನ್ನೂ ಹೆಚ್ಚು ಮನದಟ್ಟಾಗುವಂತೆ ಬರೆಯುವರು. "ಹೊಯ್ಮಾಲಿತನ, ಡೋಕಾರಿತನ"ದಂಥ ಪದಗಳು ಗಳಗನಾಥರಿಗೆ ಬಹಳೇ ಪ್ರಿಯವಾದವುಗಳು.

ಗಳಗನಾಥರ ಪಾತ್ರಗಳೆಲ್ಲ ಹೆಚ್ಚಾಗಿ ನಾಗರಿಕ ಭಾಷೆಯನ್ನೇ ಬಳಸುತ್ತವೆ. ಎಂಥ ಗ್ರಾಮೀಣ ಪಾತ್ರಗಳೂ ಕೂಡ ನಾಗರಿಕ ಭಾಷೆಯನ್ನೇ ಆಡುತ್ತವೆ. ಆದರೆ ಕೆಲವು ಕಡೆಗಳಲ್ಲಿ ಗಳಗನಾಥರು ಆ ಗ್ರಾಮೀಣ ಭಾಷೆಯನ್ನೇ ಬಳಸಿದ್ದೂ ಉಂಟು. ನಿದರ್ಶನಕ್ಕಾಗಿ ಕೆಳಗಿನ ಕೆಲವನ್ನು ನೋಡಬಹುದು :

"ಬರ್‍ರಿ ಮಕ್ಕಳಿರಾ, ಹೊತ್ತಿಗೆ ಬಂದಿರಿ, ಬರ್‍ರಿ; ಏಳಿರಿ ಮಕ ತೊಳೆಯಿರಿ. ಬೇಗನೇ ಊಟ ಮಾಡಿರಿ. ನಿಬ್ಬಣ ಹೊರಡಲಿಕ್ಕೆ ತಡವಾಗುವದು" (ಸ್ವರಾಜ್ಯ ಸುಗಂಧ, ಪುಟ 14).

"ಹೌದಲೇ ಆ ಕೆಟ್ಟ ಮುಸಲರ ಅಂಜಿಕೆ ಬಹಳ" (ಅದೇ, ಪುಟ 14)

"ಕಟ್ಟಿರೆಲೆ ಬಂಡಿಯ ಕೊರಳು" (ಅದೇ, ಪುಟ 14)

"ಸಾಕೋ ನಮ್ಮಪ್ಪಾ ಈ ಕುಸ್ತಿಯ ಸುಖ" (ಮಾಧವ ಕರುಣಾವಿಲಾಸ, ಪುಟ 147).

"ನಾವು ಕುರುಬರು, ಒಂದು ಲಂಗಟ, ಮೈಮೇಲೊಂದು ಗೊಂಗಡಿ, ತಲೆಯ ಮೇಲೊಂದು ಚಿಂದಿ...." (ಅದೇ, ಪುಟ 191)

ಆದರೆ ಇಂಥ ಗ್ರಾಮೀಣ ಪಾತ್ರಗಳು ಯಾವಾಗಲೂ ತಮಗೆ ಸಹಜವಾದ ಗ್ರಾಮ್ಯ ಭಾಷೆಯನ್ನೇ ಆಡುವುದಿಲ್ಲ. ಹಾಗೆ ಆಗಿದ್ದರೆ, ಕಾದಂಬರಿಯ ನೈಜತೆಗೆ ಒಂದು ಕಳೆ ಬರ ಬಹುದಿತ್ತು. ಆದ್ದರಿಂದಲೇ,

"ಉತ್ತರ ಕರ್ನಾಟಕದ ಆಡುಭಾಷೆಯನ್ನು ಯಶಸ್ವಿಯಾಗಿ ಬಳಸಿರುವವರನ್ನು ಗಳಗನಾಥರ ಕೃತಿಗಳಲ್ಲಿ ಕಾಣಬಹುದು. ಏನೇ ಆದರೂ ಗಳಗನಾಥರ ಭಾಷೆಯ ಬಳಕೆ ಒಮ್ಮುಖವಾದುದು, ವೈವಿಧ್ಯಮಯವಲ್ಲ."[1]

—ಎಂಬ ಟೀಕೆಗೂ ಅವರು ಗುರಿಯಾಗಬೇಕಾಯಿತು. ಆ ಟೀಕೆಯಲ್ಲಿ ಬಹಳಷ್ಟು ಅರ್ಥವಿದೆ. ಆದರೆ ಭಾಷೆಯ ರೀತಿ ಒಂದೇ ಇದ್ದರೂ ಗಳಗನಾಥರು ಈ ಭಾಷೆಯನ್ನು ಬೇರೆ ಬೇರೆ ಸನ್ನಿವೇಶಗಳ ನಿರೂಪಣೆಯಲ್ಲಿ ಸಮರ್ಪಕವಾಗಿ ದುಡಿಸಿಕೊಂಡಿದ್ದಾರೆ ಎಂಬುದೂ ಗಮನಾರ್ಹವಾಗಿದೆ.

"ತಾಯಿಗಂಡರಿರಾ, ಲಂಚ ಬೊಕ್ಕರಿಸಿ, ಎಲ್ಲವನ್ನೂ ಅವರಿಗೆ ಒಪ್ಪಿಸಿ ನನ್ನ ಮುಂದೆ ಅಳಲಿಕ್ಕೆ ಬಂದಿರುತ್ತೀರಾ ?" ಎಂದು ಕೋಟೆಯ ಅಧಿಪತಿ ಅಪ್ಪಾಸಾಹೇಬನು ನುಡಿಯುವಲ್ಲಿ ಆತನ ತಿರಸ್ಕಾರ, ಕ್ರೋಧಗಳು ಚೆನ್ನಾಗಿ ವ್ಯಕ್ತವಾಗಿವೆ. (ಈಶ್ವರೀಸೂತ್ರ)

"ಎಲ ಎಲಾ ಆ ತುಕಡಿ ಮುರುಕ ಹಾರುವನ ಕುಟಿಲತನವೆಷ್ಟರದು" (ಮಾಧವ ಕರುಣಾ ವಿಲಾಸ) ಎಂಬಲ್ಲಿ ತಿರಸ್ಕಾರದ, ಅವಹೇಳನದ ಧ್ವನಿ ಸ್ಪಷ್ಟವಾಗಿ ಕೇಳಿ ಬರುತ್ತದೆ.

"ಅಷ್ಟರಲ್ಲಿ ಒಬ್ಬ ಕಟುಕನು ಆಕಳ ಹಸಿಯ ತೊಗಲನ್ನು ತಂದು ದೊಪ್ಪನೆ ನೀರಲ್ಲಿ ಚೆಲ್ಲಿಕೊಟ್ಟನು. ಅದರಿಂದ ಬ್ರಾಹ್ಮಣನಿಗೆ ನೀರು ಸಿಡಿದು, ಆಕಳ ತೊಗಲು ಕಣ್ಣಿಗೆ ಬಿದ್ದುದ ರಿಂದ ಬ್ರಾಹ್ಮಣನ ಮೈ ಜುಮ್ಮೆಂದು ಆತನ ಮುಖದಿಂದ, 'ಎಲ ಎಲ ಚಾಂಡಾಲಾ, ಈ ಪಾಪವನ್ನು ಹೇಗೆ ಕಳಕೊಂಡೀ' ಎಂಬ ಶಬ್ದಗಳು ಹೊರಟವು" (ಈಶ್ವರೀಸೂತ್ರ). ಈ ಮಾತು ಗಳಲ್ಲಿಯ ಮಹಮ್ಮದೀಯನ ದರ್ಪ, ಬ್ರಾಹ್ಮಣನ ಅಸಹಾಯಕತೆಗಳು ತಾವೇ ಧ್ವನಿತ ವಾಗುತ್ತವೆ.

"ಮಾತೇ, ಭವಾನೀ, ಏನು ನಿನ್ನ ಅವಸ್ಥೆಯು ! ಎಂದು ನುಡಿಯುವಾಗ ರಾವುತನ ಕಂಠವು ಬಿಗಿದು ನೇತ್ರಗಳಿಂದ ಅಶ್ರುಗಳು ಉದುರಿದವು. ಆಗ ಸಭಿಕರ ಮುಖಮಂಡಲಗಳು ಕೋಪಾಗ್ನಿಯಿಂದ ಕೆಂಪಾದವು. ಪ್ರತಾಪಸಿಂಹನ ಕೆಂಪಡರಿದ ಕಣ್ಣುಗಳಿಂದ ಕಿಡಿಗಳು ಹಾರು ತ್ತಿರುವಂತೆ ತೋರಿತು. ಆತನ ಸರ್ವಾಂಗವು ಕ್ರೋಧದಿಂದ ಕಂಪಿತಗೊಂಡಿತು" (ಸತ್ವಸಾರ) ಎಂಬಂಥ ಗಳಗನಾಥರ ಮಾತುಗಳಿಂದ ವಾಚಕರು ರೋಮಾಂಚನಗೊಂಡರು.

"ಎಲೈ ಕುಲಕಂಟಕನಾದ ಮಾನಸಿಂಹಾ ! ದಿಲ್ಲಿಯ ನಾಯಿಯೇ, ಮೊಗಲರ ಪ್ರಚಂಡ ಸೈನ್ಯದ ಯೋಗದಿಂದಲೇ ಇಂದು ನಿನ್ನ ಪ್ರಾಣರಕ್ಷಣವಾಗಿರುತ್ತದೆ. ದಿಲ್ಲೀಶ್ವರನ ಸೇವಾರೂಪ ವಾದ ರೊಜ್ಜಿನಲ್ಲಿ ಹೊರಳಾಡುವ ನೀನು, ಈ ರಜಪೂತ ಧರ್ಮವನ್ನು ಮರೆತುಬಿಟ್ಟಿರುತ್ತೀ"

1. 'ಕನ್ನಡ ವಿಶ್ವಕೋಶ', ಸಂಪುಟ–3 ಪುಟ 713

(ಸತ್ವಸಾರ) ಎಂಬಲ್ಲಿ ಪ್ರತಾಪಸಿಂಹನ ಕ್ರೋಧವು ಕರ್ಕಶಸ್ವರದಿಂದ ತಿರಸ್ಕಾರಯುಕ್ತವಾಗಿ ವ್ಯಕ್ತವಾಗಿದೆ.

"ಗಯ್ಯಾಳಿ, ಸ್ಪರ್ಶಮಾತ್ರದಿಂದ ಪ್ರಾಣತ್ಯಾಗ ಮಾಡುವೆನೆಂದು ಬೆದರಿಕೆ ಹಾಕುತ್ತೀಯಾ? ಈ ಕಾಸೀಮನ ಕೈಯನ್ನು ನಿನಗೆ ತೋರಿಸುವೆನು, ನೋಡು" (ಮಾಧವ ಕರುಣಾವಿಲಾಸ) ಎಂಬ ಕಾಸೀಮನ ಈ ಅಧಮ ಮಾತುಗಳಿಂದ ಆತನ ಸಂಸ್ಕೃತಿಯೇ ವ್ಯಕ್ತವಾಗಿದೆ. ಕೆಲವು ಸಲ ಹೀಗೆ ಗಳಗನಾಥರು ಅವರವರ ಮಾತುಗಳಿಂದಲೇ ಪಾತ್ರಗಳನ್ನು ಚಿತ್ರಿಸುವಲ್ಲಿ ಯಶಸ್ವಿಯಾಗಿರುವರು.

"ಮುಗಿಬಿದ್ದು ನೋಡುವ ಅವಸರದಲ್ಲಿ ಜನರ ಕಾಲ ತುಳಿತವನ್ನೂ, ನೂಕು ನುಗ್ಗಲ ವನ್ನೂ, ಹೊಡೆತ ಬಡೆತಗಳನ್ನೂ ಯಾರೂ ಲೆಕ್ಕಿಸಲಿಲ್ಲ. ಹುಡುಗರು–ಹುಪ್ಪಡಿಗಳು ಗದ್ದಲ ದಲ್ಲಿ ಸಿಕ್ಕು ಕಕ್ಕಾಬಿಕ್ಕಿಯಾಗಿ ಚೀರಹತ್ತಿದವು. ಮುದುಕರು–ತದಕರು ನೂಕು ನುಗ್ಗಲು ತಡೆಯ ಲಿಕ್ಕೆ ಶಕ್ತಿಸಾಲದೆ ಹಾಯ್‌ಗುಟ್ಟಿದರು...."(ಮಾಧವ ಕರುಣಾವಿಲಾಸ) ಎಂಬಲ್ಲಿ ಜನಜಂಗುಳಿಯ ರೇಖಾಚಿತ್ರ ಕಾಣುತ್ತದೆ.

"ಮಹಾತ್ಮರ ತಪೋವನದ ಪುಣ್ಯಾಶ್ರಮವು. ಅದು ಮನುಷ್ಯ ವಸತಿಯಿಂದ ಅರಣ್ಯದಲ್ಲಿ ಬಹುದೂರ ಇದ್ದದ್ದರಿಂದ ಅಲ್ಲಿ ಲೌಕಿಕ ವ್ಯವಹಾರದ ಆಡಂಬರಕ್ಕೆ ಆಸ್ಪದ ಇಲ್ಲದಾಗಿದೆ. ಅತಿಥಿಸತ್ಕಾರ, ಪಾಠ ಪ್ರವಚನಗಳು, ಗೋಸೇವೆ, ಭಗವದಾರಾಧನ, ನಿತ್ಯಕರ್ಮಾನುಷ್ಠಾನ ಮೊದಲಾದ ಪವಿತ್ರ ಸತ್ಕರ್ಮಗಳ ಅವಲೋಕನದಿಂದ, ನೋಡುವವರ ಮನಸ್ಸು ಸುಪ್ರಸನ್ನ ವಾಗುತ್ತದೆ (ಮಾಧವ ಕರುಣಾವಿಲಾಸ). ಇಂಥ ಒಂದಿಲ್ಲೊಂದು ವರ್ಣನೆಗಳು ಗಳಗನಾಥರ ಪ್ರತಿಯೊಂದು ಕಾದಂಬರಿಯ ಆರಂಭದಲ್ಲಿ ಇದ್ದೇ ಇರುತ್ತವೆ. ಇವು ಪ್ರತಿಸಲವೂ ಸಮ ಯೋಚಿತ ಅಥವಾ ಅರ್ಥಪೂರ್ಣವಾಗಿವೆಯೆನ್ನಲು ಬಾರದು. ಆದರೂ ಅದು ಗಳಗನಾಥರ ಸಂಪ್ರದಾಯ. ಸ್ಕಾಟ್ ಕೂಡ ತನ್ನ ಕಾದಂಬರಿಗಳನ್ನು ವರ್ಣನೆಯಿಂದಲೇ ಆರಂಭಿಸುತ್ತಿದ್ದನು. ತನ್ನ ಕಥೆಗಳನ್ನು ವರ್ಣನೆಯ ಬದಲಾಗಿ ಸಂಭಾಷಣೆಗಳಿಂದ ಆರಂಭಿಸಿದ್ದರೆ ಆತ ಇಂದಿಗೂ ವಾಚಕರನ್ನು ಆಕರ್ಷಿಸಬಹುದಿತ್ತು[1] ಎಂದು ಹೇಳಲಾಗಿದೆ. ಈ ಮಾತು ಗಳಗನಾಥರಿಗೂ ಅನ್ವಯಿಸುತ್ತದೆ ಎನ್ನಬಹುದು.

ಗಳಗನಾಥರ ಬೇರೆ ಕೆಲವು ವರ್ಣನೆಗಳು ಮಾತ್ರ ತುಂಬ ಉಚಿತವಾಗಿವೆ, ಆಕರ್ಷಕ ವಾಗಿವೆ. ಕೆಲವು ಸಲ ಗಳಗನಾಥರು ತೀರ ಸಹಜವಾಗಿ, ಅನಾಯಾಸವಾಗಿ ವರ್ಣಿಸುವ ರೀತಿ ಮಾರ್ಮಿಕವಾಗಿರುತ್ತದೆ.

"ವೀರ ಮಲ್ಲನು ಮಲಿಕನನ್ನು ಅನಾಯಾಸವಾಗಿ ಹೋಳಿಗೆ ತಿರುವಿ ಹಾಕಿದಂತೆ ನೆಲಕ್ಕೆ ಅಂಗಾತ ತಿರುವಿಹಾಕಿ, ಎದೆಯ ಮೇಲೆ ಕುಳಿತುಕೊಂಡನು"[2] ಎಂಬಲ್ಲಿ ಗಳಗನಾಥರು ಅನಾಯಾಸವಾಗಿ ದೊರಕಿಸಿದ ಸಾದೃಶ್ಯವು ಅತ್ಯಂತ ಅರ್ಥಪೂರ್ಣವಾಗಿದೆ. ಹೋಳಿಗೆ ತಿರುವಿ ಹಾಕುವುದು ಕಠಿಣವಾದರೂ ಆ ಕಲೆ ಬಲ್ಲವರಿಗೆ ಅದು ತೀರ ಸುಲಭ. ಅದರಂತೆ ಇಲ್ಲಿ ಮಲ್ಲ ಗಾಳಗದಲ್ಲಿ ಪರಿಣತನಾದ ಮಲ್ಲನಿಗೆ ಮಲಿಕನನ್ನು ಅಂಗಾತ ತಿರುವಿ ಹಾಕುವುದು ಅಷ್ಟೇ ಸುಲಭ ವಾಯಿತು. ಗಳಗನಾಥರ ಅನುಭವವು ಇಂಥ ವರ್ಣನೆಗಳಲ್ಲಿ ಸಾರ್ಥಕವಾಗಿದೆ.

1. Grierson Sir Herbert and others : Sir Walter Scott—Lectures.
2. ಗಳಗನಾಥ : ಮಾಧವ ಕರುಣಾವಿಲಾಸ, ಪುಟ 155

3. "ವೇಗದಿಂದ ಸಾಗಿದ್ದ ಉಗಿಬಂಡಿಯು ಗಕ್ಕನೆ ನಿಂತಂತೆ ಪದ್ಮಿನಿಯು ಸುಮ್ಮನಾಗಲು, ಪದ್ಮಿನಿಯ ವಾಗ್ವಿಲಾಸದ ವೈಭವದಿಂದ ಪರವಶನಾಗಿದ್ದ ಆ ಯವನವೀರನು, ಈಗ ಈ ದೈವೀ ತೇಜಸ್ಸಿನ ತರುಣಿಯ ಮುಂದೆ ಏನು ಮಾತಾಡಬೇಕೆಂಬುದನ್ನು ಸರ್ವಥಾ ತಿಳಿಯದಾದನು"[1] ಇಲ್ಲಿ ಗಳಗನಾಥರ ವಾಗ್ವಿಲಾಸದ ವೈಭವವೂ ಮಿಂಚಿದೆ. ಉಗಿಬಂಡಿಯ ನವೀನ ಅರ್ಥಪೂರ್ಣ ಸಾದೃಶ್ಯವೂ ವಾಚಕರನ್ನು ಆಕರ್ಷಿಸುತ್ತದೆ.

"ಬೇಸಗೆಯು ಕಾಲವಾದದ್ದರಿಂದ ಬಿಸಿಲು ರಣಗುಟ್ಟುತ್ತಿತ್ತು. ಐದು ತಾಸು ತುಂಬಿ ಆರರ ಅಮಲು ಆಗಿರಬಹುದು"[2] (ಅದೇ, ಪುಟ 310) ಎಂಬಲ್ಲಿ 'ಅಮಲು' ಪದವನ್ನು ಗಳಗನಾಥರು ದುಡಿಸಿಕೊಂಡ ರೀತಿ ಹೊಸದು. ಅದೇ ರೀತಿ ಭೂಗೋಲ ಶಾಸ್ತ್ರದಲ್ಲಿಯ 'ಭರತಿ' ಪದವನ್ನು ಗಳಗನಾಥ ಮಾಸ್ತರರು ಬಳಸಿಕೊಂಡ ಬಗೆಯೂ ರೋಚಕವಾಗಿದೆ. "ಈ ಚತುರಳು ಏನಾದರೂ ಹಂಚಿಕೆ ಮಾಡಿ ತನ್ನ ಸಂಕಟವನ್ನು ದೂರ ಮಾಡದೆ ಬಿಡಳೆಂದು ಆಕೆಯು ಧೈರ್ಯಗೊಂಡಳು. ಅಂದಿನ ರಾತ್ರಿ ಪದ್ಮಿನಿಯ ಆನಂದಕ್ಕೆ ಭರತಿಯುಂಟಾಯಿತು."[3]

"ಆ ಕ್ಷುದ್ರ ಮನಸ್ಸಿನಲ್ಲಿ ಹಲಕೆಲವು ಸದ್ಗುಣಗಳಿದ್ದರೂ ಗೆದ್ದಲಿ ತಿಂದ ಕಟ್ಟಿಗೆಯಂತೆ ಆ ಸದ್ಗುಣಗಳು ಕೆಲಸಕ್ಕೆ ಬಾರದವಾಗಿ,"[4] ಎಂಬಲ್ಲಿ ಗಳಗನಾಥರು ಕೊಡುವ ಸಾದೃಶ್ಯ ಅತ್ಯಂತ ಉಚಿತವಾಗಿದೆ.

ಹೀಗೆ ಗಳಗನಾಥರು ಪಡೆನುಡಿಗಳ, ಗಾದೆಮಾತುಗಳ ಪ್ರಯೋಜನವನ್ನು ಪಡೆದು ಅನೇಕ ನವೀನ ಸಾದೃಶ್ಯಗಳನ್ನು ಸಮಯೋಚಿತವಾಗಿ ಬಳಸಿ ತಮ್ಮ ಗದ್ಯಶೈಲಿಗೆ ಒಂದು ಹೊಸತನವನ್ನು ತಂದುಕೊಂಡರು. ಅದರಿಂದ ಅನೇಕ ದೃಶ್ಯಗಳನ್ನು ಭಾವಪೂರ್ಣವಾಗಿ ಚಿತ್ರಿಸಲು ಅವರು ಸಮರ್ಥರಾದರು.

ಆದರೆ ಗಳಗನಾಥರಿಗೆ ಗದ್ಯಶೈಲಿಯನ್ನು ಒಂದು ಪರಿಪೂರ್ಣತೆಗೆ ಒಯ್ದು ಮುಟ್ಟಿಸಲಾಗಲಿಲ್ಲ. ಅದಕ್ಕೆ ಅವರಿಗೆ ಅವಕಾಶವೂ ಇರಲಿಲ್ಲ. ಸಾಲ ತೀರಿಸುವುದಕ್ಕಾಗಿ ಬೇಗ ಬೇಗನೇ ಪುಸ್ತಕ ಬರೆಯುವ ಭರದಲ್ಲಿ ಶೈಲಿಯ ಕಡೆಗೆ ಸಾಕಷ್ಟು ಗಮನಕೊಡಲು ಅವರಿಗೆ ಸಾಧ್ಯವಾಗಲಿಲ್ಲ. ಅದರಿಂದ ಅವರ ಶೈಲಿಯಲ್ಲಿ ಕೆಲವು ಸಲ ವಿಷಮತೆಯೂ ಕಾಣುತ್ತದೆ. ದೇಸಿಯ ಪಡಿಕಟ್ಟಿನಲ್ಲಿ ಹೊರಟಿದ್ದ ಶೈಲಿ ಒಮ್ಮೆಲೇ ಕೆಲವು ಸಲ ಪ್ರೌಢವಾಗಿ ಬಿಡುತ್ತದೆ. ಅದರಂತೆ ಗಂಭೀರವಾದ ಗದ್ಯ ಒಮ್ಮೆಲೇ ಕೆಳಮಟ್ಟಕ್ಕೆ ಇಳಿದು, ಕೆಲವು ಸಲ ಹಾಸ್ಯಾಸ್ಪದವೂ ಆಗಿದೆ. ಅವರ ಅನೇಕ ವೀರಧೀರ ಸ್ತ್ರೀಪಾತ್ರಗಳು ಒಮ್ಮೆಲೆ "ಅವ್ವಯ್ಯ" ಎಂದು ಉದ್ಗಾರ ತೆಗೆಯುವದನ್ನು ಇಲ್ಲಿ ನೆನೆಯಬಹುದು.

ಅಂತೂ ಅವರ ಗದ್ಯ ಇನ್ನೂ ಪ್ರಯೋಗಾವಸ್ಥೆಯಲ್ಲಿಯೇ ಇದ್ದಿತೆಂದು ಹೇಳಬೇಕಾಗುತ್ತದೆ. ಹೀಗೆ ಹೊಸ ಪ್ರಯೋಗಗಳನ್ನು ಮಾಡುವವನು ಅದನ್ನು ಪರಿಪೂರ್ಣತೆಗೆ ಒಯ್ದು ಮುಟ್ಟಿಸುವದು ಅಪರೂಪ.

---

1. ಗಳಗನಾಥ : ಮಾಧವ ಕರುಣಾವಿಲಾಸ, ಪುಟ 263
2. ಅದೇ, ಪುಟ 310
3. ಅದೇ, ಪುಟ 277
4. ಗಳಗನಾಥ : ಸಂಸಾರ ಸುಖ, ಪುಟ 60

"But no man can invent a form, create taste for it, and perfect it too"[1] ಎಂದು ಎಲಿಯಟ್‌ನು ಸರಳರಗಳೆಯ ಬಗ್ಗೆ ಹೇಳಿದ ಮಾತು ಗದ್ಯ ಶೈಲಿಗೂ ಅನ್ವಯಿಸುತ್ತದೆ.

ವಿವಿಧ ಭಾವಗಳ, ವರ್ಣನೆಗಳ, ಪಾತ್ರಗಳ ಚಿತ್ರವನ್ನು ಸಹಜಸುಂದರವಾಗಿ ಕೊಡುವಲ್ಲಿ ಗಳಗನಾಥರ ಗದ್ಯವು ಅನೇಕ ಸಲ ಸಫಲವಾಗಿದ್ದರೂ, ಸಂಭಾಷಣೆಯನ್ನು ಕೊಡುವಲ್ಲಿ ಅದು ಬಹಳ ಸಲ ಕೃತಕವೆನಿಸುತ್ತದೆ. ಅವರದು ಹೆಚ್ಚಾಗಿ ನೀರಸವಾದ ಕಥನಕ್ರಮವೇ ಆಗಿದೆ. ಅವರಲ್ಲಿ ಸಂಭಾಷಣೆಗಳು ಹೆಚ್ಚಾಗಿ ಬರುವುದೇ ಇಲ್ಲ. ಅಂಥ ಕೆಲವೇ ಸಂಭಾಷಣೆಗಳಲ್ಲಿ ಅಶಿಕ್ಷಿತ ವ್ಯಕ್ತಿಗಳೂ ಕೂಡ ಶಿಷ್ಟವಾದ ಭಾಷೆಯನ್ನೇ ಬಳಸುವುದರಿಂದ ಮತ್ತು ಪ್ರೌಢವಾದ ವಿಚಾರಗಳನ್ನು ಹೇಳುವುದರಿಂದ ಇಡೀ ಸನ್ನಿವೇಶವೇ ಅಸಹಜವಾಗಿ ಬಿಡುತ್ತದೆ. ಮಹಮ್ಮದೀಯ ಪಾತ್ರಗಳೂ ಕೂಡ ಸಂಸ್ಕೃತ ಸೂಕ್ತಿಗಳನ್ನು ಬಳಸುವ ಹಾಸ್ಯಾಸ್ಪದ ಸನ್ನಿವೇಶಗಳನ್ನು ಇಲ್ಲಿ ನೆನೆಯಬಹುದು. ಕುರುಬರ ಹೆಗ್ಗ ತಪ್ಪಿ ಒಂದೆರಡು ಕಡೆಗೆ ಗ್ರಾಮ್ಯ ಪದಗಳನ್ನು ಬಳಸಿದರೂ, ಆತ ಹೆಚ್ಚಾಗಿ ಶಿಷ್ಟ ಭಾಷೆಗೇ ಅಂಟಿಕೊಂಡಿದ್ದಾನೆ. ಪಾತ್ರಗಳಿಗೆ ತಕ್ಕಂತೆ ಭಾಷೆಯಲ್ಲೂ ಬದಲಾವಣೆಯನ್ನು ಗಳಗನಾಥರು ತಂದಿದ್ದರೆ ಗಳಗನಾಥರ ಶೈಲಿ ಇನ್ನೂ ಶಕ್ತಿಯುತವಾಗುತ್ತಿತ್ತು.

ಅಂತೂ, ಇನ್ನೂ ಬಹಳಷ್ಟು ಪ್ರಯೋಗಾವಸ್ಥೆಯಲ್ಲಿದ್ದ ಗದ್ಯಕ್ಕೆ ಗಳಗನಾಥರು ಒಂದು ಸ್ವರೂಪವನ್ನು ತಂದುಕೊಡಲು ಯತ್ನಿಸಿದರು. ಅವರ ಕಾಲದ "ಭಾಷೆ ಇನ್ನೂ ಬೆಳೆಯುವ ಅವಸ್ಥೆಯಲ್ಲಿ ಇದ್ದದ್ದರಿಂದ ಅಲ್ಲಲ್ಲಿ ಹುಡುಗಾಟಿಕೆ ಹಾಗು ವಿದಗ್ಧತೆಗಳ ಬೆರಕೆ, ಅಹಿತಕರವಾದ ಪ್ರಯೋಗಗಳು ಉಳಿದುಕೊಂಡಿವೆ"[2] ಆದರೆ ಈ ರೀತಿಯ ಬೆರಕೆ ಗಳಗನಾಥರಿಗಿಂತ ಕೆರೂರ ವಾಸುದೇವಾಚಾರ್ಯರ ಭಾಷೆಯಲ್ಲಿ ಹೆಚ್ಚು ಪ್ರಮಾಣದಿಂದ ಕಂಡುಬರುತ್ತದೆ. ಕೆರೂರರ ಗದ್ಯದ ವೈಶಿಷ್ಟ್ಯವೆಂದರೆ ಸಂಸ್ಕೃತ ಭೂಯಿಷ್ಠತೆ. "ಮುಖ್ಯವಾಗಿ ಸಂಸ್ಕೃತ ಸಾಹಿತ್ಯ ಮತ್ತು ಉತ್ತರ ಕರ್ನಾಟಕದ ದೇಸಿ ಇವೆರಡರ ಗಾಢ ಸಂಸ್ಕಾರಗಳ ಗರ್ಭದಲ್ಲಿ ಅವರ ವಿಶಿಷ್ಟ ಶೈಲಿ ಜನ್ಮ ತಾಳಿದೆ ಎಂದು ಹೇಳಬಹುದು....ಶುದ್ಧ ಪ್ರೌಢ ಶೈಲಿಯೊಡನೆ ಶಿಥಿಲವಾದ ಅಶುದ್ಧ ಶೈಲಿ ಬೆರೆತುಕೊಂಡಿದೆ."[3]

ಗಳಗನಾಥರ ಇತರ ಸಮಕಾಲೀನ ಗದ್ಯಕಾರರಾದ ಉತ್ತರ ಕರ್ನಾಟಕದ ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿ (1869–1918), ಗ. ಹು. ಹೊನ್ನಾಪುರಮಠ (1870–1937) ಮತ್ತು ವಲ್ಲಭ ಮಹಲಿಂಗ ತಟ್ಟಿ (1870–1922) ಈ ಮೊದಲಾದವರ ಗದ್ಯಶೈಲಿಯನ್ನೂ ಅವಲೋಕಿಸಿದರೆ ಗಳಗನಾಥರ ಗದ್ಯಕ್ಕೆ ವಿಶಿಷ್ಟತೆ ಇರುವದು ಒಡೆದು ಕಾಣುತ್ತದೆ. ಕುಲಕರ್ಣಿಯವರ 'ನಾಡ ನೆಲೆಗಾರ'ದ ತಿಳಿಗನ್ನಡ ಶೈಲಿ ತುಂಬ ಲಲಿತವಾಗಿದೆ. ಅದರಲ್ಲಿ ಸಂಸ್ಕೃತದಂತೆ ದೇಸಿಯ ಪ್ರಭಾವವೂ ಕಡಿಮೆಯಿದೆ. ಹೊನ್ನಾಪುರಮಠರ 'ನೀತಿಮಂಜರಿ'ಯಂತೂ ತಿಳಿ

1. T. S. Eliot: 'The possibility of poetic drama', The Sacred Wood, p-62.
2. ಕೆ. ಡಿ. ಕುರ್ತಕೋಟಿ : ಯುಗಧರ್ಮ ಹಾಗು ಸಾಹಿತ್ಯ ದರ್ಶನ. ಪುಟ 184.
3. ಕುರ್ತಕೋಟಿ ಕೆ. ಡಿ. ಮತ್ತು ಜೋಶಿ ಜಿ. ಬಿ. (ಸಂ.) : 'ವಾಸುದೇವ ಪ್ರಶಸ್ತಿ'ಯಲ್ಲಿ ರಂ. ಶ್ರೀ ಮುಗಳಿ ಅವರ ಲೇಖನ 'ವಾಸುದೇವಾಚಾರ್ಯರ ಶೈಲಿ', ಪುಟ 230

ಗನ್ನಡ ಶೈಲಿಗೆ ಒಳ್ಳೆಯ ಉದಾಹರಣೆ. ತಟ್ಟಿಯವರ ಭಾಷೆ ಆ ದೃಷ್ಟಿಯಿಂದ ತುಸು ಪ್ರೌಢ ವೆನ್ನಬಹುದು. ಈ ಮೂವರಲ್ಲಿಯೂ ಆಡುನುಡಿಯ ದೇಸಿಯ ಬಳಕೆ ಅತಿ ಕಡಿಮೆಯಾಗಿದೆ. ಅವರದು ಶುದ್ಧವಾದ, ತಿಳಿಯಾದ ಭಾಷೆ; ಓದುತ್ತಿರುವಂತೆ ಅದು ಉದ್ದೇಶಪೂರ್ವಕ ಬರೆದುದು ಎಂದು ತೋರುತ್ತದೆ. ಅಲ್ಲದೆ 'ನಾಡ ನೆಲೆಗಾರ,' 'ನೀತಿ ಮಂಜರಿ' ಮೊದಲಾ-ದವು ಶಾಲಾಬಾಲಕರನ್ನೇ ಕಣ್ಣೆದುರಿಗೆ ಇಟ್ಟುಕೊಂಡು ಬರೆದವುಗಳಾದ್ದರಿಂದ, ಅವರು ತಮ್ಮ ಭಾಷೆ ಶುದ್ಧವೂ, ಸಹಜ ಬೋಧಕವೂ ಆಗಿರುವ ಕಾಳಜಿಯನ್ನು ತೆಗೆದುಕೊಂಡರು. ಗಳಗನಾಥರು ಇಂಥ ಯಾವ ಕಾಳಜಿಯನ್ನೂ ವಹಿಸಲಿಲ್ಲ. ಆದರೂ ಅವರ ಭಾಷೆ ಅಶುದ್ಧ ಅಥವಾ ಗ್ರಾಮ್ಯ ಮಟ್ಟಕ್ಕಿಳಿಯಲಿಲ್ಲ. ಗಳಗನಾಥರಿಗಿಂತ ಹಿರಿಯರಾದ ಮತ್ತು ಹೆಚ್ಚು ಗದ್ಯ ವನ್ನು ಬರೆದ ವೆಂಕಟ ರಂಗೋ ಕಟ್ಟಿಯವರ ಶೈಲಿಯನ್ನು ಗಮನಿಸಿದರೆ ಅದು ಬಹಳೇ ಪ್ರಯೋಗಾವಸ್ಥೆಯಲ್ಲಿದ್ದುದು ಕಂಡು ಬರುತ್ತದೆ. ಅವರಲ್ಲಿ ಅಶುದ್ಧತೆಯೂ ಒಡೆದು ಕಾಣು ತ್ತದೆ. ಕಟ್ಟಿಯವರ ಗದ್ಯದಲ್ಲಿ "ಹ್ಯಾಗೆ, ಯೇಳೆಂಟು, ವೊಬ್ಬ, ಯೆಲೆಗಳನ್ನು, ಕೂತಿರುವದನ್ನು, ಯೇನೂ ಇದ್ದಿಲ್ಲ, ವೊಂದು" ಎಂಬಂಥ ಅಶುದ್ಧ ಪ್ರಯೋಗಗಳು ಬೇಕಾದಷ್ಟು ಕಾಣದೊರೆ ಯುತ್ತವೆ. ಗಳಗನಾಥರೂ 'ಹ್ಯಾಗೆ' ಎಂಬುದನ್ನೇ ಬಳಸಿದ್ದರೂ, ಇಂಥ ಪದಗಳ ಬಳಕೆ ಅವರಲ್ಲಿ ತೀರ ಕಡಿಮೆಯಾಗಿದೆ. ನುರಿತ, ಟ್ರೇಂಡ ಮತ್ತು ಪ್ಯುರಿಟನ್ ಮನೋಭಾವದ ಶಿಕ್ಷಕ ರಾದ ಅವರು ಅಶಿಷ್ಟ ಪದಗಳನ್ನು ಬಳಸುವ ಸಾಧ್ಯತೆಯೇ ಇರಲಿಲ್ಲ.

ಒಟ್ಟಿನಲ್ಲಿ, ಗಳಗನಾಥರ ಗದ್ಯಶೈಲಿ ತುಸು ಮರಾಠಿಯ ಪ್ರಭಾವವನ್ನು ಹೊಂದಿ ದ್ದರೂ ಅದರಲ್ಲಿ ಕನ್ನಡ ದೇಸಿಯ ಸತ್ತ್ವವೇ ಹೆಚ್ಚು. ದೇಸಿಯನ್ನು ವಿಪುಲವಾಗಿ ಬಳಸಿಯೂ ಅವರ ಗದ್ಯ ಶುದ್ಧವಾಗಿಯೇ ಉಳಿದಿದೆ. ಆದರೆ ಶುದ್ಧವೆಂದು ಅದು ತೀರ ಗ್ರಾಂಥಿಕವೂ ಆಗಲಿಲ್ಲ. ಅವರ ಕಾಲದ ಶಿವರುದ್ರಪ್ಪ ಕುಲಕರ್ಣಿ ಅಥವಾ ಅವರಿಗಿಂತ ಪೂರ್ವದ ತುರಮರಿ ಯವರಂತೆ ಅವರ ಗದ್ಯವು ಕೇವಲ ತಿಳಿಗನ್ನಡವಾಗಿ, ಲಲಿತವಾಗಿ, ಒಂದು ರೀತಿ ಕಾವ್ಯಮಯ ವಾಗಿ ಉಳಿಯಲಿಲ್ಲ. ಅದು ಗದ್ಯದ ಗಡಸುತನವನ್ನು ಧಾರಾಳವಾಗಿ ಪಡೆದಿದೆ. ಆದರೆ ಕಟ್ಟಿಯವರ, ಕೆರೂರರ ಗದ್ಯದಂತೆ ಅದು ಕೆಲವು ಸಲ ಅಶುದ್ಧ ಮತ್ತು ಕೆಲವು ಸಲ ತೀರ ಅಶಿಷ್ಟವಾಗಿಯೂ ಮಾರ್ಪಡಲಿಲ್ಲ. ಕಟ್ಟಿ, ಕೆರೂರ, ಕುಲಕರ್ಣಿ, ಹೊನ್ನಾಪುರಮಠ ಇವರ ಗದ್ಯವನ್ನು ಅನೇಕರು ಅನುಸರಿಸಲಿಲ್ಲ. ಆದರೆ ಗಳಗನಾಥರ ಗದ್ಯವು ಕಾದಂಬರಿಗಳಿಗೆ ಮಾದರಿ ಯಾಗಿ ಬಹುಕಾಲ ಉಳಿಯಿತು. ಅದಕ್ಕೆ ಮುಖ್ಯ ಕಾರಣವೆಂದರೆ ಅವರ ಸಾಹಿತ್ಯದ ವಿಪುಲತೆ ಮತ್ತು ಜನಪ್ರಿಯತೆ. ಶ್ರೀ ಕುರ್ತಕೋಟಿಯವರೂ ಈ ಅಂಶವನ್ನು ಗುರುತಿಸಿರುವರು. "ಒಂದಾದ ಮೇಲೊಂದರಂತೆ ಹತ್ತಾರು ಕಾದಂಬರಿಗಳನ್ನು ಬರೆದು ಗಳಗನಾಥರು ಈ ಶೈಲಿಗೆ ಸ್ಥಿರತೆಯನ್ನು ತಂದುಕೊಟ್ಟರು. ಉತ್ತರ ಕರ್ನಾಟಕದಲ್ಲಿ ಮುಂದೆ ಪ್ರಕಟವಾದ ಎಷ್ಟೋ ಕಾದಂಬರಿಗಳು (ಕುರುಡುಧರ್ಮ, ಗ್ರಾಮಪಂಚಾನನ ಇತ್ಯಾದಿ) ಇವೇ ಶೈಲಿಯನ್ನು ಮುಂದು ವರಿಸಿದ್ದು ಈ ಮಾತಿಗೆ ಸಾಕ್ಷಿಯಾಗಿದೆ."[1]

ಗಳಗನಾಥರ ಜೊತೆಗೇ ಆರಂಭದ ಕಾದಂಬರಿಕಾರರೆಂದು ನಾವು ನೆನೆಯುವ ಇನ್ನೊಂದು ಹೆಸರು ಬಿ. ವೆಂಕಟಾಚಾರ್ಯರದು.[2] ಅವರು ಗಳಗನಾಥರಿಗಿಂತ ತುಸು ಹಿರಿಯರು (1845–

1. ಕೆ. ಡಿ. ಕುರ್ತಕೋಟಿ : ಯುಗಧರ್ಮ ಹಾಗು ಸಾಹಿತ್ಯದರ್ಶನ, ಪುಟ 185
2. ಈ ಇಬ್ಬರು ಲೇಖಕರ ತೌಲನಿಕ ಪರಿಶೀಲನೆಗಾಗಿ 'ವೆಂಕಟಾಚಾರ್ಯರು ಮತ್ತು ಗಳಗನಾಥರು' ಎಂಬ ಪ್ರಕರಣವನ್ನು ನೋಡಬೇಕು.

1914). ಅವರ ಭಾಷಾಂತರ ಕಾರ್ಯವೂ ಗಳಗನಾಥರಿಗಿಂತ ಮೊದಲೇ ಆರಂಭವಾಗಿತ್ತು. ಅವರ ಭಾಷಾಂತರಿತ ಕಾದಂಬರಿ 'ದುರ್ಗೇಶ ನಂದಿನಿ' 1885ರಲ್ಲಿ ಪ್ರಕಟವಾಗಿತ್ತು. ವೆಂಕಟಾಚಾರ್ಯರೂ ಅತ್ಯಂತ ಜನಪ್ರಿಯ ಲೇಖಕರು. ಆದರೆ ಅವರ ಗದ್ಯಶೈಲಿಗೂ ಗಳಗನಾಥರ ಶೈಲಿಗೂ ತುಂಬ ವ್ಯತ್ಯಾಸ. ಇದಕ್ಕೆ ಮುಖ್ಯ ಕಾರಣ ವೆಂಕಟಾಚಾರ್ಯರು ಮೈಸೂರು ಕಡೆಯ ಭಾಷೆಯನ್ನೂ ಗಳಗನಾಥರು ಉತ್ತರ ಕರ್ನಾಟಕದ ಭಾಷೆಯನ್ನೂ ಬಳಸಿದರೆಂಬುದು ನಿಜವಾದರೂ, ವೆಂಕಟಾಚಾರ್ಯರು ಕೇವಲ ಭಾಷಾಂತರಕಾರರು, ಗಳಗನಾಥರು ಸ್ವತಂತ್ರ ಹಾಗು ಸೃಜನಶೀಲ ಅನುವಾದಕರೆಂಬುದೂ ಒಂದು ಕಾರಣವಾಯಿತು. ಅಲ್ಲದೆ ಭಾಷಾಂತರ ಮಾರ್ಗದಲ್ಲಿಯೂ ಇಬ್ಬರೂ ಭಿನ್ನ ರೀತಿಗಳನ್ನು ಅನುಸರಿಸಿದರು. ಗಳಗನಾಥರು ಮರಾಠಿಯಿಂದ ಭಾಷಾಂತರ ಮಾಡಿದಾಗ, ಅದು ಕನ್ನಡ ಭಾಷೆಗೆ ಒಗ್ಗುವಂತೆ ನೋಡಿಕೊಂಡರು. ಆದರೆ ವೆಂಕಟಾಚಾರ್ಯರು ಬಂಗಾಲಿ ಗದ್ಯದ ಮಾದರಿಯಲ್ಲಿಯೇ ಕನ್ನಡದಲ್ಲಿಯೂ ಬರೆದರು. ಅಲ್ಲದೆ ಬಂಗಾಲಿ ಭಾಷೆಯು ಮರಾಠಿ ಭಾಷೆಯಷ್ಟು ಕನ್ನಡಕ್ಕೆ ಸಮೀಪವೂ ಅಲ್ಲ. ಬಂಗಾಲಿ ಭಾಷೆಯ ಸಂಸ್ಕೃತ ಭೂಯಿಷ್ಠತೆಯನ್ನು, ಪ್ರೌಢತೆಯನ್ನು ವೆಂಕಟಾಚಾರ್ಯರು ಇದ್ದಕ್ಕಿದ್ದಂತೆಯೇ ಕನ್ನಡದಲ್ಲಿ ತಂದಾಗ, ಆ ಕನ್ನಡ ಕೇವಲ ಪಂಡಿತರಿಗೆ ಮಾತ್ರ ಅರ್ಥವಾಗುವಂತಾಯಿತು. ತೀರ ಸಾಮಾನ್ಯ ವಾಚಕರೂ ಕಥೆಯ ಅದ್ಭುತ ರಮ್ಯತೆಯನ್ನು ಬಹುವಾಗಿ ಮೆಚ್ಚಿದರೂ, ವೆಂಕಟಾಚಾರ್ಯರ ಭಾಷೆ ಅವರಿಗೆ ಅರ್ಥವಾಗಲಿಲ್ಲ. ಆದ್ದರಿಂದ ವೆಂಕಟಾಚಾರ್ಯರ ಕಾದಂಬರಿಗಳು ಉತ್ತರ ಕರ್ನಾಟಕಕ್ಕೆ ಬಂದಿದ್ದರೂ, ಕೇವಲ ಕೆಲವೇ ಬಲ್ಲವರು ಮಾತ್ರ ಅವುಗಳನ್ನು ಓದಿ ಹರ್ಷಪುಲಕಿತರಾದರು. ಗಳಗನಾಥರ ಕಾದಂಬರಿಗಳು ಮಾತ್ರ ಮುಖ್ಯವಾಗಿ ಅವರ ಭಾಷೆಯ ಮೂಲಕ–ಸಾಮಾನ್ಯ ಜನರ ವರೆಗೂ ಹೋಗಿ ಮುಟ್ಟಿದವು. ಉತ್ತರ ಕರ್ನಾಟಕದಂತೆ ಅವರ ಕಾದಂರಿಗಳ ವಾಚಕರು ಮೈಸೂರು ಭಾಗದಲ್ಲಿಯೂ ಗಣನೀಯ ಸಂಖ್ಯೆಯಲ್ಲಿಯೇ ಇದ್ದರೆಂಬುದು ತಿಳಿದ ಮಾತೇ ಆಗಿದೆ.

ಗಳಗನಾಥರ ಶೈಲಿಯ ವೈಶಿಷ್ಟ್ಯಗಳನ್ನು ಕುರಿತು ಹೇಳುತ್ತ ಶ್ರೀ ಕೃಷ್ಣಕುಮಾರ ಕಲ್ಲೂರರು ಹೇಳಿದ ಮಾತುಗಳನ್ನು ಇಲ್ಲಿ ನೆನೆಯಬಹುದು.

"ಭಾಷಾಂತರಗಳಿಗೂ ಮೆರಗು ಕೊಟ್ಟ ಆ ಶೈಲಿ ಮುಂದೆ ಅವರ ಕೃತಿಗಳಲ್ಲಂತೂ ಕಳೆಕಟ್ಟಿಬಿಟ್ಟಿತು. ಕನ್ನಡಿಗರ ಎದೆ ಜುಮ್ಮೆನಿಸುವ ಅವರ ಜಲಪ್ರಪಾತದಂಥ ಶೈಲಿಯನ್ನು ಅವರ 'ಕುಮುದಿನಿ', 'ಕರ್ಮಕಥೆ', 'ಮಾಧವ ಕರುಣಾವಿಲಾಸ'ಗಳಲ್ಲಿ ಪುಟ ತಿರತಿರುವಿದತ್ತ ನೋಡಬಹುದು. ಅಲ್ಲಿ ಅವರ ಬಣ್ಣನೆಯ ಸಲ್ಮೆ ಹಾಗು ಭಾವಾವೇಶಗಳು ನೆರೆಗೊಂಡು ಸೂಸಾಡಿ ಶೈಲಿಯ ಓಘವನ್ನು ಪರಿಣತಿಗೆ ಮುಟ್ಟಿಸುತ್ತವೆ. ಗಳಗನಾಥರು ತಮ್ಮ ಕಾಲದಲ್ಲಿ 'ಬೆಳಗುವ ಬರಹಗಾರ'ರಾದದ್ದು ಅವರ ಶೈಲಿಯಿಂದಲೇ. ಜನಮನಕ್ಕೆ ಹಿಡಿಯುವಂತಾಗಿಯೂ ಸಾಕಷ್ಟು ಪ್ರೌಢವಾಗಿ, ಪ್ರೌಢವಾಗಿದ್ದರೂ ನಾಡಬಾಳನ್ನು ಎಚ್ಚರಿಸಬಲ್ಲುದಾಗಿದ್ದ ಶೈಲಿ ಆ ಕಾಲಕ್ಕೆ ಗಳಗನಾಥರೊಬ್ಬರದೇ ಆಗಿತ್ತು. ಅಂತೇ ಆಗ ಅವರು ಶೈಲಿಯ ಅರಸಾಗಿದ್ದರು. ಹಲವು ಬರಹಗಾರರಿಗೆ ಅವರ ಶೈಲಿ ಒಂದು ಮಟ್ಟದ ಮಾದರಿಯ ಮೇಲ್ಪಂಕ್ತಿಯಾಗಿತ್ತು. ಕಲ್ಪಕತೆ, ಭಾವೋದ್ರೇಕ, ಸ್ವಾವಿಷ್ಕರಣದ ಆವೇಗ, ದೇಶಾಭಿಮಾನದ ಆವೇಶ, ಐತಿಹಾಸಿಕ ಉಜ್ವಲತೆಗಳನ್ನೊಳಗೊಂಡ ಅವರ ಶೈಲಿ ಹದಿನಾರಾಣೆಯ ಗಂಡು ಶೈಲಿ. ಆದರೂ ಕಲ್ಪಕತೆ ಪ್ರಧಾನವಾದ ಅವರ ಶೈಲಿಯಲ್ಲಿ ರಾಮಣೀಯಕತೆ ಇಲ್ಲದಿಲ್ಲ."[1]

1. ಕೃಷ್ಣಕುಮಾರ ಕಲ್ಲೂರ: ಕನ್ನಡಕ್ಕೆ ಗಳಗನಾಥರ ಕಾಣಿಕೆ. 'ಜೀವನ' 6–6 (ಅಕ್ಟೋಬರ. 1945)ಪುಟ71

ಶ್ರೀ ಕಲ್ಲೂರ ಅವರ ಮಾತಿನಲ್ಲಿ ಹೆಚ್ಚಿನ ಉತ್ಸಾಹ, ಅತಿಪ್ರಶಂಸೆ ಕಂಡುಬಂದರೂ, ಒಟ್ಟಿನಲ್ಲಿ ಅವರ ಅಭಿಪ್ರಾಯವನ್ನು ಒಪ್ಪಿಕೊಳ್ಳಬಹುದು. ಸ್ವತಃ ಗಳಗನಾಥರೇ "ಭಾಷಾ ಶೈಲಿಯು ಆವೇಶಯುಕ್ತವಾಗಿರಬೇಕು. ಅಳಬುರುಕ ಭಾಷೆಯನ್ನು ಓದುವದಕ್ಕೆ ಮನಸ್ಸಿಗೆ ಉತ್ಸಾಹವಾಗುವದಿಲ್ಲ" ಎಂದು 1899ರಲ್ಲಿಯೇ– ತಮ್ಮ 'ಲಘುನಿಬಂಧ ಸಂಗ್ರಹ ಮತು ಪತ್ರವ್ಯವಹಾರ' ಎಂಬ ಗ್ರಂಥದಲ್ಲಿ–ಅಭಿಪ್ರಾಯ ಪಟ್ಟಿದ್ದರು. ಅವರ ಭಾಷೆ ನಿಜವಾಗಿಯೂ 'ಅಳಬುರಕ'ವಾಗಿಲ್ಲವೆಂಬುದು ಅನುಭವಗಮ್ಯ ಮಾತಾಗಿದೆ.

ಗಳಗನಾಥರ ಶೈಲಿಯ ಬಗ್ಗೆ ನಾವು ಇಷ್ಟೆಲ್ಲ ಚರ್ಚಿಸಿದರೂ ಸ್ವತಃ ಅವರೇ ತಮ್ಮ ಶೈಲಿಯ ಬಗ್ಗೆ ಹೆಚ್ಚಿನ ಮಹತ್ತ್ವ ಕೊಟ್ಟಿದ್ದಿಲ್ಲವೆಂಬುದು ಅವರ ಮಾತುಗಳಿಂದಲೇ ತಿಳಿದು ಬರುತ್ತದೆ. ತಮ್ಮ ಭಾಷೆಯ ಸಂಜೀವನೀಕರಣವನ್ನು ಕುರಿತು ಬರೆದ ಅವರು,

"ತಿರುಗಿ ಕೇಳಿದರೆ, ನನ್ನ ಕಾದಂಬರಿಗಳ ಲೋಕಪ್ರಿಯತೆಗೆ ನನ್ನ ಭಾಷಾಸರಣಿಯಾಗಲಿ, ನನ್ನ ಭಾಷಾಪಾಂಡಿತ್ಯ–ಪ್ರಾವೀಣ್ಯಗಳಾಗಲಿ ಕಾರಣಗಳಲ್ಲವೇ ಅಲ್ಲ. ಕೆಲವು ಪ್ರಾಂತಗಳಲ್ಲಿ ಕೆಲ ಮಟ್ಟಿಗೆ, ಕೆಲವು ಪ್ರಾಂತಗಳಲ್ಲಿ ಬಹುಮಟ್ಟಿಗೆ, ಕೆಲವು ಪ್ರಾಂತಗಳಲ್ಲಿ ಸರ್ವಾಂಶದಿಂದ ನನ್ನ ಭಾಷೆಯು ಲೋಕಪ್ರಿಯವಾಗಿದ್ದರೂ, ನನ್ನ ಕಾದಂಬರಿಗಳ ಲೋಕಪ್ರಿಯತೆಗೆ ಆ ಭಾಷಾ ಮಾನ್ಯತೆಯು ಗೌಣಕಾರಣವೇ ಸರಿ. ನನ್ನ ಕಾದಂಬರಿಗಳ ಲೋಕಪ್ರಿಯತೆಯ ಮುಖ್ಯ ಕಾರಣವೆಂದರೆ ಸಮಾಜವು ಮೆಚ್ಚುವಂತಹ ಕಾದಂಬರಿಗಳನ್ನೇ ಆರಿಸಿ, ಆ ಕಾದಂಬರಿಗಳಲ್ಲಿಯ ವಿಷಯಗಳ ಯೋಜನೆಯನ್ನು ವಾಚಕರ ಅನುಭವಕ್ಕೆ ನಡುವಂತೆ ಸಮರ್ಪಕವಾಗಿಯೂ, ಸುಂದರವಾಗಿಯೂ ಅಚ್ಚುಕಟ್ಟಿನಲ್ಲಿ ಮಾಡಿದ್ದು. ಲೇಖಕನು ಆರಿಸಿಕೊಂಡ ವಿಷಯಗಳ ಸೌಷ್ಟವದಲ್ಲಿ ಅವನ ಭಾಷೆಯ ಹುಳುಕುಗಳು ಮುಚ್ಚಿ ಹೋಗುವವೆಂಬುದನ್ನು ನಾನು ಅನು ಭವದಿಂದ ಅರಿತಿರುವೆನು"[1] ಎಂದಿರುವರು.

ಆಧುನಿಕ ವಿಮರ್ಶಕರು ಗಳಗನಾಥರ ಈ ವಿಚಾರವನ್ನೇ ಬೇರೆ ರೀತಿಯಿಂದ, ಉತ್ತಮ ವಾಗಿ ಹೊಳೆದ ಕಥೆ ಉತ್ತಮವಾಗಿಯೇ ಬರೆಯಲ್ಪಟ್ಟಿರುತ್ತದೆ ಎಂದು ಹೇಳುವರು.

"If a story or a poem is really well conceived, it is immune from the danger of being badly written; for to conceive a work of creative literature is to conceive it in its particularity."[2]

ಗಳಗನಾಥರು ಈ ತತ್ತ್ವವನ್ನೇ ಸುಂದರವಾದ ಕಥೆಯಲ್ಲಿ ಭಾಷೆಯ ಹುಳುಕುಗಳು ಮುಚ್ಚಿಹೋಗುತ್ತವೆ ಎಂದು ಹೇಳಿದರು. ನಿಜವಾಗಿ ಹೇಳಬೇಕೆಂದರೆ, ಅವರು ಎಲ್ಲೆಲ್ಲಿ ಕಥೆ ಯನ್ನು ಸುಂದರವಾಗಿ ಹೇಳಿರುವರೋ ಅಲ್ಲಿ ಅವರ ಭಾಷಾಶೈಲಿ ಅವರಿಗೆ ಸಂಪೂರ್ಣವಾಗಿ ಒಲಿದು ಬಂದಂತೆ ಕಾಣುತ್ತದೆ; ಅದು ಅವರ ಭಾವಕ್ಕೆ, ಕಲ್ಪಕತೆಗೆ ಮೂರ್ತಸ್ವರೂಪವನ್ನು ಕೊಡುವಲ್ಲಿ ಯಶಸ್ವಿಯಾಗಿದೆ. ಈ ಕೆಳಗಿನ ಕೆಲವು ನಿದರ್ಶನಗಳನ್ನು ನೋಡಬಹುದು.

"ಆಗ ಚಂದ್ರಾವತಿಯು ಖಾನನ ಆಗ್ರಹಕ್ಕೆ ಲಕ್ಷ ಕೊಡದೆ ಚಟ್ಟನೆ ಎದ್ದು ಹೊರಟು ಹೋದಳು. ಅದರಿಂದ ಖಾನನು ಬಹಳ ಅಸಮಾಧಾನ ಪಟ್ಟು, ರಾತ್ರಿ ಊಟವನ್ನು ಕೂಡ

1. ಗಳಗನಾಥ : ಸದ್ಗುರು ಪ್ರಭಾವ, ಪುಟ 38

2. J. Middleton Murry : The Problem of Style, p. 6

ಮಾಡದೆ, ತನ್ನ ಪಲ್ಲಂಗದ ಮೇಲೆ ಗುದ್ದು ಕೊಳದ ಗಾದಿಯ ಮೇಲೆ ಬಿದ್ದುಕೊಂಡನು. ಏನು ಮಾಡಿದರೂ ಅವನಿಗೆ ನಿದ್ರೆಯು ಬರಲೊಲ್ಲದು. ಆತನು ಹಾಸಿಗೆಯ ಮೇಲೆ ಎದ್ದು ಕುಳಿತು ಕೊಂಡನು. ರಾಹುಟಿಯಲ್ಲಿ ಅತ್ತಿತ್ತ ಓಡಾಡಿದನು."[1]

"ಹೀಗೆ ಶಹಾಜಾಜಖಾನನು ತನ್ನನ್ನು ಎಷ್ಟು ಜರಿದಾಡಿ ನುಡಿದರೂ ದೇವರಾಯನಿಗೆ ನಾಚಿಕೆ ಬರಲಿಲ್ಲ. ನಾಯಿಯಂತೆ ಬಾಲ ಗುಂಡಾಡಿಸುವ ಅಧಮರ ರೀತಿಯೇ ಹೀಗೆ. ಅವರು ಹೇವನಾಚಿಕೆಗಳನ್ನು ಪೂರಾ ಬಿಟ್ಟಿರುವರು. ನ್ಯಾಯಾನ್ಯಾಯಗಳ ವಿಚಾರವು ಅವರಲ್ಲಿರು ವದಿಲ್ಲ. ಪಾಪ–ಪುಣ್ಯಗಳ ಭಯವನ್ನು ಅವರು ತೊರೆದಿರುವರು. ಏನೇ ಆಗಲಿ ತಮ್ಮ ಹೋಳಿಗೆ ಯಷ್ಟು ತುಪ್ಪದಲ್ಲಿ ಬಿದ್ದರೆ ತೀರಿತೆಂದು ಅವರು ತಿಳಿದಿರುವರು."[2]

"ಕುರುಕ್ಷೇತ್ರದ ಮಹಾಯುದ್ಧವು ಹದಿನೆಂಟು ದಿವಸಗಳಲ್ಲಿ ಮುಗಿಯಿತು; ಆದರೆ ಪ್ರತಾ ಪನು ಒಂದೇ ಸವನೇ ಪ್ರಬಲ ಶತ್ರುವಿನೊಡನೆ ಇಪ್ಪತ್ತೈದು ವರ್ಷ ಕಾದಿ, ಯುದ್ಧ ಮಾಡುವ ಇಚ್ಛೆಯು ತೃಪ್ತಿಯಾಗದೆ, ತಳಮಳಿಸುತ್ತ ಪ್ರಾಣಬಿಟ್ಟನು; ಆದರೆ ತನ್ನ ದೇಶದ ಸ್ವಾತಂತ್ರ್ಯ ವನ್ನು ಕಳೆದುಕೊಳ್ಳಲಿಲ್ಲ."[3]

"ಹೆಚ್ಚಿದ ಚಿಂತೆಯಿಂದ ಅವರಿಗೆ ಯಾವದೂ ಬೇಡವಾಗಿತ್ತು. ಆದರೆ ಚಪಲೆಯಾದ ನಮ್ಮ ನಾಗಲಾಂಬಿಕೆಯು ಅಲ್ಪ ಕಾಲವೇ ಆಗಲೊಲ್ಲದೇಕೆ, ಆ ರಾಜಕುಟುಂಬದ ಚಿಂತೆಯನ್ನು ದೂರಮಾಡಿ ಆನಂದವನ್ನುಂಟು ಮಾಡಿದಳು. ಆ ಕೂಸಿಗೆ ಅದೇ ಎರಡು ತುಂಬಿ ಮೂರರಲ್ಲಿ ಬಿದ್ದುದರಿಂದ ನಗುವಾಗ ಕಾಣುವ ಆ ಕೂಸಿನ ಸಂದರವಾದ ಮೊಳಕೆಯ ಹಲ್ಲುಗಳೂ, ಕಿವಿಗೆ ಇಂಪಾಗಿ ತೋರುವ ಅದರ ಅಸಂಬದ್ಧವಾದ ಮುದ್ದುಮಾತುಗಳೂ, ಸುಳಿದಾಡುವ ಮುಂಗು ರುಳುಗಳಿಂದ ಸುಮನೋಹರವಾಗಿ ಒಪ್ಪುವ ಅದರ ಸುಂದರ ಮುಖವೂ ಆ ರಾಜಕುಟುಂಬವನ್ನು ಸಂತೋಷಪಡಿಸುತ್ತಿದ್ದವು. ಆ ಚಿಕ್ಕ ಮಗುವು ದಿಗ್ಗನೆ ಎದ್ದು ಅಕ್ಕನ ಬಳಿಯಿಂದ ತಾಯಿಯ ಬಳಿಗೂ, ತಾಯಿಯ ಬಳಿಯಿಂದ ತಂದೆಯ ಬಳಿಗೂ, ತಂದೆಯ ಬಳಿಯಿಂದ ಅಣ್ಣನ ಬಳಿಗೂ, ಓಡುತ್ತಹೋಗಿ ಅವರನ್ನು ಅಪ್ಪಿಕೊಳ್ಳುವಾಗ, ಅವರ ಚಿಂತೆಯೆಲ್ಲ ನಷ್ಟವಾಗಿ, ರೋಮಾಂಚನ ಗಳೆದ್ದು, ಕ್ಷಣಮಾತ್ರ ಅವರು ಸ್ವರ್ಗಸುಖಾನುಭವದಿಂದ ಮತ್ತರಾದರು!"[4]

"ನಾಲ್ಕು ದಿನವಾಯಿತು, ಎಂಟು ದಿನವಾಯಿತು. ತಿಂಗಳಾಯಿತು, ಆದರೂ ನಾಯಕನ ದುಃಖವು ಕಡಿಮೆಯಾಗಲಿಲ್ಲ; ಅವನ ಮುಖವು ನಿಸ್ತೇಜವಾಯಿತು, ದೇಹವು ಕ್ಷೀಣವಾಯಿತು, ಉತ್ಸಾಹವು ಭಂಗವಾಯಿತು."[5]

"ಭರಮನಾಯಕನು ರಭಸದಿಂದ ದುರ್ಗದ ಕಡೆಗೆ ಸಾಗುತ್ತಿರಲು, ಆಗ ಜಗತ್ತಿನ ಹಂಗು ಆತನಿಗೆ ಇದ್ದಂತೆ ತೋರಲಿಲ್ಲ; ಆಗ ಆತನು ತಾನೇ ತಾನಾಗಿದ್ದನು; ಕಗ್ಗತ್ತಲೆಯಲ್ಲಿ ಆತನು ತಡವರಿಸಲಿಲ್ಲ; ಹುಳಹುಪ್ಪಡಿಗಳನ್ನು ಆತನು ಲಕ್ಷಿಸಲಿಲ್ಲ; ಕ್ರೂರ ಮೃಗಗಳಿಗೆ ಆತನು ಬೆದರಲಿಲ್ಲ;

1. ಗಳಗನಾಥ : ಈಶ್ವರೀ ಸೂತ್ರ, ಪುಟ 106
2. ಗಳಗನಾಥ : ಸತ್ವಸಾರ, ಪುಟ 127
3. ಅದೇ, ಪುಟ 134
4. ಗಳಗನಾಥ : ಕುಮುದಿನಿ, ಪುಟ 149, 150
5. ಅದೇ, ಪುಟ 156

ಭೂತಪಿಶಾಚಗಳ ಲಕ್ಷವು ಆತನಿಗಿರಲಿಲ್ಲ. ಅಹಹ! ಚಿತ್ರದುರ್ಗದ ನಾಯಕರ ಎದೆಯೇ ಅಷ್ಟು ಕೆಚ್ಚುಗಟ್ಟಿದ್ದು!"[1]

"ಎಲೇ, ಈಗ ಮುಸಲರು ಬರಲಿ, ಒದ್ದು ಎರಡು ಹೆಣ ಕೆಡವದಿದ್ದರೆ ಮಾಳನೆಂದು ಕರೆಯಬೇಡ. ಅಯ್ಯೋ! ಏನು ಮಾಡಲಿ, ಹೊಟ್ಟೆಯೊಳಗಿನ ರೊಚ್ಚು ಏಳುತ್ತದೆ. ನನ್ನ ಬಂಗಾರದಂಥ ಸೊಸೆಯನ್ನು ಮುಸಲರು ಮೋಸದಿಂದ ಎತ್ತಿಕೊಂಡು ಹೋದರು. ಈ ಸೇಡು ತೀರಿಸಿಕೊಳ್ಳದೆ ಬಿಡುವೆನೆ?....ಮಾತಾಡುತ್ತಾಡುತ್ತಾ ಮಾಳನ ಕಣ್ಣುಗಳು ಕೆಂಪಾದವು. ಅವನ ಸಂತಾಪವು ಹೆಚ್ಚಿತು."[2]

ಮೇಲಿನ ವರ್ಣನೆಗಳಲ್ಲಿ, ನಿರಾಸೆಗೊಂಡು ಕಾಮಾತುರದಿಂದ ಉದ್ವಿಗ್ನನಾದವನೊಬ್ಬನ ಮನಸ್ಸು, ಕೃತಘ್ನನೊಬ್ಬನ ಸ್ವಭಾವ, ದೇಶಪ್ರೇಮಿಯ ಕೆಚ್ಚು-ಬಲಿದಾನಗಳು, ಬಾಲಲೀಲೆಯ ಸಹಜ ಸುಂದರ ಚಿತ್ರ, ಚಿಂತಾಮಗ್ನನ ಸ್ವರೂಪ, ಶೂರನೊಬ್ಬನ ಉಕ್ಕುವ ಉತ್ಸಾಹದ ಭರ, ದಲಿತನೊಬ್ಬನ ಸೇಡಿನ ಆವೇಶ-ಇವುಗಳನ್ನು ಗಳಗನಾಥರ ಗದ್ಯವು ಸಮರ್ಥವಾಗಿ ನಿರೂಪಿಸಿದೆ. ಇಲ್ಲಿ ಆಲಂಕಾರಿಕ ಭಾಷೆಯ ಆಡಂಬರವಿಲ್ಲ, ಸಂಸ್ಕೃತದ ತಲೆಭಾರವೂ ಇಲ್ಲ. ಆದರೆ ಭಾಷೆ ಅತಿ ಸಪ್ಪೆಯೂ ಆಗಿಲ್ಲ. ಸಹಜ ದೇಸಿಯ ಶಕ್ತಿಯನ್ನು ಗಳಗನಾಥರು ಅಷ್ಟೇ ಸಹಜವಾಗಿ ಬಳಸಿಕೊಂಡಿರುವರು.

ಇಂಥ ಸುಂದರ, ಕೃತಕೃತ್ಯ ಗದ್ಯಶೈಲಿಗೆ ನಿದರ್ಶನವಾಗುವ ನೂರಾರು ಅವತರಣಿಕೆಗಳನ್ನು ಗಳಗನಾಥರಿಂದ ಆಯ್ದುಕೊಡಬಹುದು; ಆದರೆ ಆಯ್ದುಕೊಳ್ಳಬೇಕು. ಅಂದರೆ ಈ ಗದ್ಯ ಶೈಲಿಯ ಸಾತತ್ಯ, ನಿರಂತರತೆ ಅವರಲ್ಲಿ ಕಾಣುವದಿಲ್ಲ. ಅದಕ್ಕೆ ಕಾರಣ, ಮರೆ (Murry) ಅವರು ಹೇಳಿದಂತೆ, ಗಳಗನಾಥರ ಎಲ್ಲ ಬರವಣಿಗೆಯೂ ಸಹಜವಾಗಿ ಹೊಳೆದುದಲ್ಲ. ಆದ್ದರಿಂದಲೇ ಎಲ್ಲ ಪುಟಗಳೂ ಇಷ್ಟೇ ಆಕರ್ಷಕವೂ, ಹೃದ್ಯವೂ ಆಗುವದಿಲ್ಲ. ಅದಕ್ಕೇ ಬಹುಶಃ ಡಾ. ಜಿ. ಎಸ್. ಶಿವರುದ್ರಪ್ಪನವರು ಗಳಗನಾಥರ ಶೈಲಿಯನ್ನು "ಪ್ರವಚನ ಶೈಲಿ" ಎಂದು ಕರೆದಿರಬಹುದು. ಆದರೆ ಅವರು ಗಳಗನಾಥರ ಗದ್ಯದ ಗುಣವನ್ನು ಗುರುತಿಸಲು ಮರೆತಿಲ್ಲ.

"....ಗಳಗನಾಥರದೂ ಬಹುಪಾಲು ಅನುವಾದವಾದರೂ ಅವರು ಉತ್ತರ ಕರ್ನಾಟಕದ ಸಹಜ ಭಾಷೆಯನ್ನು ತಮ್ಮ ಕಾದಂಬರಿಗಳಲ್ಲಿ ಬಳಸಿ ಒಂದು ರೀತಿಯ ಪ್ರಾದೇಶಿಕತೆಯನ್ನು ಪರಿಚಯಮಾಡಿಕೊಡುತ್ತಾರೆ. ಅವರದು ಒಂದು ಬಗೆಯ ಪ್ರವಚನ ಶೈಲಿ ಎಂದು ಇವತ್ತು ನಮಗೆ ಅನಿಸಿದರೂ, ಆ ಕಾಲಕ್ಕೆ ಅದು ರೂಪುಗೊಂಡ ರೀತಿ ಸ್ವಾಭಾವಿಕವಾಗಿಯೇ ತೋರುತ್ತದೆ."[3]

ಕನ್ನಡ ಕಾದಂಬರಿಗಳ ಭಾಷೆಯನ್ನು ಕುರಿತು ವಿಚಾರಿಸಿದ ಡಾ. ಶಿವರುದ್ರಪ್ಪನವರು, "ಕನ್ನಡ ಕಾದಂಬರಿಗಳ ಭಾಷೆ ಶೈಲಿಗಳನ್ನು ಗಮನಿಸಿದರೆ ಅದರ ಕಥೆ ಸ್ವಾರಸ್ಯವಾಗಿದೆ. ಇವತ್ತು ನಾವು ಕಾಣುವ ಭಾಷೆಯ ಹದವನ್ನು ಮೆಚ್ಚಿಕೊಳ್ಳುವ ಮುನ್ನ, ಇದಕ್ಕೆ ಪೂರ್ವಭಾವಿಯಾಗಿ ಈ ಭಾಷೆಯನ್ನು ಇಂತಹ ಹದಕ್ಕೆ ತರಲು ಎಷ್ಟೊಂದು ಕೃಷಿ ನಡೆದಿದೆ ಎನ್ನುವದನ್ನು ಗಮನಿಸ

1. ಗಳಗನಾಥ : ದುರ್ಗದ ಬಿಚ್ಚುಗತ್ತಿ, ಪುಟ 31
2. ಗಳಗನಾಥ : ಮಾಧವ ಕರುಣಾವಿಲಾಸ, ಪುಟ 24
3. ಡಾ. ಜಿ. ಎಸ್. ಶಿವರುದ್ರಪ್ಪ : 'ಕನ್ನಡ ಕಾದಂಬರಿಗಳ ಭಾಷೆ–ಶೈಲಿ', ಗತಿಬಿಂಬ ಪುಟ 104.

ದಿದ್ದರೆ ತಪ್ಪಾಗುತ್ತದೆ. ಹೊಸಗನ್ನಡ ಕಾದಂಬರಿಯ ನವೋದಯಕ್ಕೆ ಸುಮಾರು ಅರ್ಧ ಶತಮಾನದಷ್ಟು ಹಿಂದಿನಿಂದಲೂ ಕಥಾನಿರೂಪಣೆಗೆ ತಕ್ಕ ಗದ್ಯಭಾಷೆಯೊಂದನ್ನು ಸಿದ್ಧಪಡಿಸಲು ಶ್ರಮಿಸಿದ ಕೆಲವು ವ್ಯಕ್ತಿಗಳ ಸಾಧನೆಯನ್ನು ನೆನೆಯುವದು ಅಗತ್ಯವಾಗಿದೆ."[1]

ಇಂಥ ಸಾಧಕರಲ್ಲಿ ಗಳಗನಾಥರು ಅಗ್ರಗಣ್ಯರಾಗಿರುವರು. ಉತ್ತರ ಕರ್ನಾಟಕದಲ್ಲಂತೂ ಅವರು ಗದ್ಯದ ಗುರುವಾದರು. ಅವರ ಕಾದಂಬರಿಯ ಶೈಲಿಯನ್ನು ನವೋದಯ ಕಾಲದ ಕಾದಂಬರಿಕಾರರು ಹೆಚ್ಚಾಗಿ ಅನುಸರಿಸಲಿಲ್ಲವಾದರೂ, ಅವರ ಗದ್ಯದ ಪ್ರಭಾವ ಮಾತ್ರ ಬಹು ಕಾಲದ ವರೆಗೆ ಉಳಿದುಕೊಂಡಿತು. ಆದ್ದರಿಂದಲೇ ಅವರನ್ನು 'ಹೊಸಗನ್ನಡದ ಗದ್ಯಪ್ರವರ್ತಕ'ರೆಂದು ಕರೆಯುವದು ಉಚಿತವಾಗುತ್ತದೆ.

ಅದು ಕಾರಣವೇ ಶ್ರೀ ಕೃಷ್ಣಮೂರ್ತಿ ಪುರಾಣಿಕ ಅವರು 'ಗಳಗನಾಥರಿಗೆ' ಎಂಬ ತಮ್ಮ 'ಸುನೀತ'ದಲ್ಲಿ,

"ನಿಮ್ಮ ಗದ್ಯದ ಶೈಲಿ ಕನ್ನಡದ ಜವಕಿತ್ತ
ದಿವ್ಯಕಾಣಿಕೆಯಾಯ್ತು; ಹೆಸರು ಶಾಸನವಾಯ್ತು"[2]

ಎಂದು ತಮ್ಮ ಪುಷ್ಪಾಂಜಲಿಯನ್ನು ಅರ್ಪಿಸಿದರು.

1. ಡಾ॥ ಜಿ. ಎಸ್. ಶಿವರುದ್ರಪ್ಪ : ಕನ್ನಡ ಕಾದಂಬರಿಗಳ ಭಾಷೆ ಶೈಲಿ. ಗಡಿಬೆಂಬ ಪುಟ 104.
2. 'ಗಳಗನಾಥ' (1946). ಮುಖಪುಟ.

# ಗಳಗನಾಥರ ಜೀವನದರ್ಶನ

ಪ್ರತಿಭಾವಂತ ಲೇಖಕರ ದೃಷ್ಟಿ ಸಾಮಾನ್ಯರಿಗಿಂತ ಹೆಚ್ಚು ಸೂಕ್ಷ್ಮಗ್ರಾಹಿಯಾಗಿರುತ್ತದೆ. ತಾವು ಜೀವನವನ್ನು ಕಂಡು, ಅನುಭವಿಸಿ, ಕಂಡುಕೊಂಡ ಜೀವನದ ಸತ್ಯವನ್ನು, ಗೂಢವನ್ನು, ಜೀವನದ ಬಗ್ಗೆ ತಮಗಿರುವ ಅಭಿಪ್ರಾಯವನ್ನು, ಒಟ್ಟಿನಲ್ಲಿ ಜೀವನದರ್ಶನವನ್ನು ಅವರು ತಮ್ಮ ಕೃತಿಗಳಲ್ಲಿ ಸೂಚ್ಯವಾಗಿ ನಿರೂಪಿಸುವರು. ಒಬ್ಬ ಲೇಖಕ ಆಯ್ದುಕೊಳ್ಳುವ ವಸ್ತು, ಅದನ್ನು ನಿರೂಪಿಸುವ ರೀತಿ, ಸೃಷ್ಟಿಸುವ ಪಾತ್ರಗಳು ಮೊದಲಾದವುಗಳಲ್ಲಿ ಅವನ ಜೀವನದೃಷ್ಟಿ ಸೂಚಿತವಾಗಿರುತ್ತದೆ. ಈ ಮಾತು ಕಾದಂಬರಿಕಾರರಿಗೂ ಅನ್ವಯಿಸುತ್ತದೆ.[1]

ಕೆಲವು ಲೇಖಕರು ಜೀವನದ ಬಗ್ಗೆ ಆಳವಾಗಿ ವಿಚಾರ ಮಾಡಿದವರೂ ಇರುತ್ತಾರೆ. ನಾವು ಅವರ ವಿಚಾರಗಳನ್ನು ತಿಳಿಯುವುದಕ್ಕಾಗಿಯೇ ಕಾದಂಬರಿಗಳನ್ನು ಓದುವುದಿಲ್ಲವಾದರೂ, ಓದಿದ ನಂತರ ಆ ಕಾದಂಬರಿ ನಮ್ಮ ಮೇಲೆ ಪ್ರಭಾವವನ್ನು ಬೀರದೆ ಇರಲಾರದು. ನಾಟಕಕಾರನು ತನ್ನ ವಿಚಾರಗಳನ್ನು ನೇರವಾಗಿ ನಿವೇದಿಸಲಾರ. ಕಥಾವಸ್ತುವಿನ ಆಯ್ಕೆ, ಆತ ಕೆಲವೆಡೆ ಕೊಡುವ ಒತ್ತು, ಕಥೆಯನ್ನು ಮತ್ತು ಪಾತ್ರಗಳನ್ನು ಬೆಳೆಯಿಸಿಕೊಂಡು ಹೋಗುವ ರೀತಿ ಇವುಗಳಿಂದಲೇ ಆತ ತನ್ನ ಜೀವನದ ದೃಷ್ಟಿಯನ್ನು ವ್ಯಕ್ತಮಾಡಿರುತ್ತಾನೆ. ಆದರೆ ಕಾದಂಬರಿಕಾರನಿಗೆ ಈ ಸೂಚ್ಯವಾದ ಮತ್ತು ಕಲಾತ್ಮಕವಾದ ಮಾರ್ಗವಲ್ಲದೆ, ತಾನೇ ನೇರವಾಗಿ ಮಧ್ಯೆ ಪ್ರವೇಶಿಸಿ, ತನ್ನ ವಿಚಾರಗಳನ್ನು ವಾಚಕರ ಮುಂದೆ ಮಂಡಿಸುವ ಅನುಕೂಲತೆಯೂ ಇದೆ. ನಿಜವಾಗಿ ಇದು ಅನುಕೂಲತೆಯೇನೂ ಅಲ್ಲ; ಅದರಿಂದ ಕಲೆಗೆ ಬಾಧೆಯೇ ಬರುತ್ತದೆ. ಆದರೂ ಹಾಗೆ ಮಾಡಿದ ಕೆಲವು ಪ್ರಾಚೀನ ಕಾದಂಬರಿಕಾರರೂ ಇದ್ದಾರೆ. ಅವರಲ್ಲಿ ಗಳಗನಾಥರೂ ಒಬ್ಬರು.

ಗಳಗನಾಥರು ಕಾದಂಬರಿಗಳನ್ನು ಬರೆಯಲು ತೊಡಗಿದಾಗ ಖಚಿತವಾದ ಉದ್ದೇಶವನ್ನು ಇಟ್ಟುಕೊಂಡಿದ್ದರು. ಅವುಗಳಲ್ಲಿ ನೀತಿಬೋಧೆಯನ್ನು ಮಾಡುವುದೂ ಒಂದು ಪ್ರಮುಖ ಉದ್ದೇಶವಾಗಿತ್ತು. ಇದನ್ನು ಅವರು ತಮ್ಮ ಎಲ್ಲ ಸ್ವತಂತ್ರ ಮತ್ತು ಅನುವಾದಿತ ಕಾದಂಬರಿಗಳಲ್ಲಿಯೂ ಸಾಧಿಸಿರುವರು. ಗಳಗನಾಥರ ಜೀವನವನ್ನು ಅವಲೋಕಿಸಿದಾಗ ಅವರಲ್ಲಿದ್ದ ಧಾರ್ಮಿಕ ಮತ್ತು ನೈತಿಕ ನಿಷ್ಠೆ ನಿಚ್ಚಳವಾಗಿ ಕಾಣುತ್ತದೆ. ಇದು ಅವರ ಕಾದಂಬರಿಗಳಲ್ಲಿಯೂ ಅವರ ಇತರ ಧಾರ್ಮಿಕ ಮತ್ತು ಚರಿತ್ರ ಗ್ರಂಥಗಳಲ್ಲಿಯೂ ಸ್ಪಷ್ಟವಾಗಿ ನಿರೂಪಿತವಾಗಿದೆ. ಅವರು ತಾವಾಗಿಯೇ ಈ ಮಾತನ್ನು ತಿಳಿಸಿಯೂ ಇರುವರು.

"ಕರ್ನಾಟಕವು ಪ್ರಾಮುಖ್ಯವಾಗಿ ನನ್ನನ್ನು ಕಾದಂಬರಿಕಾರನೆಂದು ಗುರುತಿಸುತ್ತಿರುವದು

1. W.H. Hudson : An Introduction to the Study of Literature, p-217.

ನನಗೆ ಅಭಿಮಾನದ ಸಂಗತಿಯು. ಆದರೂ ನನ್ನ ಮನಸ್ಸಿನ ಒಲವು ನೈತಿಕ–ಧಾರ್ಮಿಕ ಸುಲಭ ತತ್ವದ ವ್ಯವಹಾರೋಪಯುಕ್ತ ವಿಷಯಗಳ ಕಡೆಗೆ ವಿಶೇಷವಾಗಿ ಇರುವದು. ಈ ಮಾತಿನ ಜುಳುಕನ್ನು 'ಸತ್ವಸಾರ', 'ಕುಮುದಿನಿ'ಯಂತಹ ನನ್ನ ಸ್ವತಂತ್ರ ಕಾದಂಬರಿಗಳಲ್ಲಿ ಅಲ್ಲಲ್ಲಿ ನೋಡಬಹುದಾಗಿದ್ದರೂ, 'ಮಾಧವ ಕರುಣಾವಿಲಾಸ'ವೆಂಬ ನನ್ನ ವಿಸ್ತೃತವಾದ ಸ್ವತಂತ್ರ ಕಾದಂಬರಿಯ ಮಧ್ಯದಲ್ಲಿರುವ ಇಪ್ಪತ್ತೈದು ಪ್ರಕರಣಗಳು ಈ ಮಾತಿಗೆ ಸಾಕ್ಷಿಯನ್ನು ಕೊಡ ಬಹುದು. ಅಲ್ಲದೆ, ನನ್ನ ರೂಪಾಂತರದ ಅಥವಾ ಭಾಷಾಂತರದ ಉಳಿದ ಕಾದಂಬರಿಗಳಲ್ಲಿಯೂ ಅಲ್ಲಲ್ಲಿ ಸುಲಭ ಬೋಧಪ್ರದ ವಿಷಯಗಳನ್ನು ಬುದ್ಧಿಪೂರ್ವಕವಾಗಿ ನಾನು ಸೇರಿಸಿರುವೆನು."[1]

ನೀತಿಬೋಧೆಯ ಮಾತುಗಳನ್ನು ಕಾದಂಬರಿಯ ಮಧ್ಯೆ ತಂದರೆ ಕಲೆಗೆ ಬಾಧೆ ಬರುವು ದೆಂದು ಅವರು ಚಿಂತಿಸಲಿಲ್ಲ. ಅದಕ್ಕಾಗಿಯೇ ಅವರು ತಮ್ಮ ಪ್ರತಿಯೊಂದು ಸ್ವತಂತ್ರ ಅಥವಾ ಅನುವಾದಿತ ಕಾದಂಬರಿಯಲ್ಲಿ ಒಬ್ಬ ಸದ್ಗುರುವನ್ನು ತಂದೇ ತರುವರು. "ನನ್ನ ಕಾದಂಬರಿ ಗಳಲ್ಲಿ ಬಹುತರ ಒಬ್ಬ ಸತ್ಪುರುಷನು ಇದ್ದೇ ಇರುವನು. ಆತನ ಯೋಗದಿಂದ ಸದ್ಬೋಧಗಳ ಲಾಭವು ವಾಚಕರಿಗೆ ಆಗುತ್ತಿರುತ್ತದೆ"[2] ಎನ್ನುವ ಗಳಗನಾಥರ ಸ್ವಂತ ಜೀವನದಲ್ಲಿ ಕೂಡ ಗುರುಭಕ್ತಿ ಅತ್ಯಂತ ಆಳವಾಗಿತ್ತು. ಅವರು ಅಗಡಿಯ ಆನಂದವನದ ಶೇಷಾಚಲ ಸ್ವಾಮಿ ಗಳನ್ನು ಕಾಣುವ ಮೊದಲೇ ಬರೆದ 'ಪದ್ಮನಯನಾ' ಕಾದಂಬರಿಯಲ್ಲಿ ಕೂಡ, ಅವರು ಸೃಷ್ಟಿಸಿ ರುವ ಕಪಿಂಜಲನ ಪಾತ್ರವನ್ನು ಇಲ್ಲಿ ನೆನೆಯಬಹುದು; ಅದರಂತೆ ಅವರ ಕೊನೆಯ ಕಾದಂಬರಿ 'ದುರ್ಗದ ಬಿಚ್ಚುಗತ್ತಿ'ಯಲ್ಲಿಯೂ ಬಂದಿರುವ ಮುರಗೀಶ ಗುರುಗಳ ವರೆಗೆ ಅವರು ತಂದಿರುವ ಎಲ್ಲ ಸದ್ಗುರುಗಳನ್ನು ಇಲ್ಲಿ ನೆನೆಯಬಹುದು. ಸತ್‌ಸಮಾಗಮದ ಪ್ರಭಾವವನ್ನು ಅವರು ಪ್ರತಿಯೊಂದು ಕಾದಂಬರಿಯಲ್ಲಿಯೂ ಬಣ್ಣಿಸಿರುವರು. ಅವರ ಕಾದಂಬರಿಗಳ ಅನೇಕ ಪ್ರಕರಣಗಳ ಹೆಸರೇ 'ಸತ್ಸಮಾಗಮ ಪ್ರಭಾವ'; ಒಂದು ಕಾದಂಬರಿಯ ಹೆಸರು ಕೂಡ 'ಧರ್ಮ ರಹಸ್ಯ ಅಥವಾ ಸತ್ಸಮಾಗಮ ಪ್ರಭಾವ' ಎಂದೇ ಇದೆ. ಅದರಂತೆ, ಗುರುಗಳ ವಿಷಯದಲ್ಲಿ ಗಳಗನಾಥರು ಜಾತಿ–ಪಂಥಗಳನ್ನು ಎಣಿಸುವವರಲ್ಲ. ಜೀವನದಲ್ಲಿ ಹೇಗೋ ಹಾಗೆಯೇ ಅವರು ಕಾದಂಬರಿಗಳಲ್ಲಿ ಕೂಡ ಎಲ್ಲ ಧರ್ಮದ ಗುರುಗಳನ್ನೂ ಗೌರವ-ಭಕ್ತಿಗಳಿಂದಲೇ ಕಂಡಿರುವರು. 'ಮಾಧವ ಕರುಣಾವಿಲಾಸ'ದಲ್ಲಿ ಸರ್ವಜ್ಞ ವಿಷ್ಣುಶರ್ಮ ಗುರುಗಳು ಮಹಮ್ಮದ ಪೈಗಂಬರರ ಬಗ್ಗೆ ಆಡುವ ಗೌರವದ ಮಾತುಗಳು ಗಳಗನಾಥರ ಮನೋಧರ್ಮಕ್ಕೆ ಸಾಕ್ಷಿ ಯಾಗಿವೆ. ಇದು ಗಳಗನಾಥರ ಪರಧರ್ಮ ಸಹಿಷ್ಣುತೆಯ ದ್ಯೋತಕವಾಗಿದೆ.

ಈ ವಿಷಯದಲ್ಲಿ ಗಳಗನಾಥರು ತಮ್ಮ ಸಾಹಿತ್ಯ ಗುರುಗಳಾದ ಆಪಟೆಯವರಿಂದ ತುಸು ಭಿನ್ನವಾದ ದೃಷ್ಟಿಕೋನವುಳ್ಳವರು. ಆಪಟೆಯವರ ಕಾದಂಬರಿಗಳಲ್ಲಿ ಹಿಂದೂಧರ್ಮ ಪ್ರೇಮ, ಸ್ವಾತಂತ್ರ್ಯ ಪ್ರೇಮಗಳು ನಿರೂಪಿತವಾಗಿವೆ. ಆದರೆ ಆ ಕಾದಂಬರಿಗಳಲ್ಲಿಯ ಪಾತ್ರಗಳು ಹೆಚ್ಚಾಗಿ ಮಹಮ್ಮದೀಯರ ವೈರಿಗಳು. ಮಹಮ್ಮದೀಯರು ಗೈದ ಅನ್ಯಾಯ, ಅತ್ಯಾಚಾರ ಗಳನ್ನು ಕಂಡು ಅವರ ಹಿಂದೂ ಪಾತ್ರಗಳು ಸಿಡಿದೇಳುತ್ತವೆ. ಅದು ಆ ಕಾಲದ ಮರಾಠಾ ಮತ್ತು ರಜಪೂತ ವೀರರ ಮನೋಧರ್ಮವನ್ನು ಅತ್ಯಂತ ವಾಸ್ತವವಾಗಿ ಚಿತ್ರಿಸುತ್ತದೆ ಎಂದೂ ಹೇಳಬಹುದು. ಆದರೆ ಗಳಗನಾಥರು ತಮ್ಮ ಸ್ವತಂತ್ರ ಕಾದಂಬರಿಗಳಲ್ಲಿ ಈ ಮಹಮ್ಮದೀಯ

1. ಗಳಗನಾಥ: ಸದ್ಗುರು ಪ್ರಭಾವ, ಪುಟ 35, 36
2. ಅದೇ, ಪುಟ 36

ದ್ವೇಷವನ್ನು ಚಿತ್ರಿಸಿಲ್ಲ, ಅವರು ಮಹಮ್ಮದೀಯರ ಅನ್ಯಾಯ, ಅತ್ಯಾಚಾರಗಳನ್ನು ಖಂಡಿಸಿದರೂ, ಅವರ ಎಲ್ಲ ಮಹಮ್ಮದೀಯ ಸರದಾರರೂ ದುಷ್ಟರಾಗಿಯೇ ಚಿತ್ರಿತವಾಗಿಲ್ಲ. ಮಲಿಕನಾಯಬರಂಥ ಗೌರವಾನ್ವಿತ ಮಹಮ್ಮದೀಯ ಸರದಾರರನ್ನೂ ಗಳಗನಾಥರು ಸೃಷ್ಟಿಸಿರುವರು. 'ಕುಮುದಿನಿ'ಯ ಚಾಂದಖಾನ, 'ಮಾಧವ ಕರುಣಾವಿಲಾಸ'ದ ಬಖತ್ಯಾರಖಾನ, ರಹಿಮಾನಖಾನ ಮತ್ತು ಅಬ್ದುಲ್‌ಸಾಹೇಬ ಇವರನ್ನು ಇಲ್ಲಿ ನೆನೆಯಬಹುದು. ಇವರು ಹಿಂದೂ ವೀರರಾದ ಎಚ್ಚಮ ಮತ್ತು ಬುಕ್ಕ ಇವರ ಸ್ನೇಹಿತರಾಗಿ ಹಿಂದೂ ರಾಜ್ಯಸ್ಥಾಪನೆಗೆ ಸಹಾಯ ಮಾಡುವರು. ಅಲ್ಲದೆ ಮಾಧವಾಚಾರ್ಯ ಮತ್ತು ವಿರೂಪಾಕ್ಷಾರ್ಯರ ಮಾತುಗಳನ್ನು ಕೇಳಿ ಕಾಸೀಂಖಾನನಂಥ ಕ್ರೂರ, ದುಷ್ಟ ಸರದಾರರೂ ಹಿಂದುಗಳ ಮಿತ್ರರಾಗುವರು. ಇದು ಆ ಕಾಲದ ನೈಜತೆಗೆ ವಿರೋಧವಾಗಿರುವ ಸಂಭವವೇ ಹೆಚ್ಚಾಗಿದೆ. ಎಲ್ಲ ಧರ್ಮ-ಜಾತಿಯವರಲ್ಲಿಯೂ ಕೆಟ್ಟವರಿರುವಂತೆ ಒಳ್ಳೆಯವರೂ ಇರುವರೆಂದು ಗಳಗನಾಥರು ಗಾಢವಾಗಿ ನಂಬಿದ್ದರು; ಅದನ್ನೇ ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿರುವರು. ತಮ್ಮ 'ಮಾಧವ ಕರುಣಾವಿಲಾಸ'ದಲ್ಲಿ ಅವರು 'ಕನ್ನಡ ಸೈನ್ಯ' ಎಂದು ಕರೆದಿದ್ದಾರಲ್ಲದೆ, 'ಹಿಂದೂ ಸೈನ್ಯ' ಎಂದು ಕರೆದಿಲ್ಲ. ಜಾತಿದ್ವೇಷ ಬೆಳೆಯಬಾರದೆಂಬುದೇ ಅವರ ಉದ್ದೇಶವಾಗಿತ್ತು.

'ಪದ್ಮನಯನಾ' ಎಂಬ ಅವರ ಪ್ರಥಮ ಕಾದಂಬರಿಯನ್ನುಳಿದರೆ, ಅವರು ಬರೆದ ಎಲ್ಲ ಕಾದಂಬರಿಗಳೂ ಐತಿಹಾಸಿಕವೇ ಆಗಿವೆಯೆಂಬುದು ಕೂಡ ಗಳಗನಾಥರ ಮನೋಧರ್ಮವನ್ನೇ ಸೂಚಿಸುತ್ತದೆ. "ಒಂದು ಉದಾತ್ತವಾದ ಭಾವನೆಯಿಂದ, ದಿವ್ಯವಾದ ಆದರ್ಶದಿಂದ, ಅದ್ಭುತವಾದ ದೃಷ್ಟಿಯಿಂದ ಜನರಲ್ಲಿ ಪ್ರೇಮ ದಯೆ ತ್ಯಾಗ ಸ್ವಾತಂತ್ರ್ಯ ಸ್ವಾಭಿಮಾನಗಳು ಒಡಮೂಡಬೇಕು, ನೆಲೆನಿಲ್ಲಬೇಕು, ಬೆಳಗಬೇಕು ಎಂಬ ಹೆಗ್ಗುರಿಯಿಂದ ಗಳಗನಾಥರು ಸಾಹಿತ್ಯವನ್ನು ಸೃಜಿಸಿದರು. ಪ್ರಾಯಶಃ ಇದೇ ಕಾರಣದಿಂದ ಇವರು ಸಮಕಾಲೀನ ಚಿತ್ರವನ್ನು ಕೊಡುವ ಸಾಮಾಜಿಕ ಕಾದಂಬರಿಯನ್ನು ರಚಿಸಲಿಲ್ಲವೆಂದು ತೋರುತ್ತದೆ"[1] ಎಂಬ ವಿಚಾರ ಸರಿಯಾಗಿದೆ. ಹರಿ ನಾರಾಯಣ ಆಪಟೆಯವರು ಐತಿಹಾಸಿಕ ಕಾದಂಬರಿಗಳಂತೆ ಸಾಮಾಜಿಕ ಕಾದಂಬರಿಗಳನ್ನೂ ಬರೆದರು. ಅವು ತುಂಬ ಒಳ್ಳೆಯ ಕಾದಂಬರಿಗಳೂ ಆಗಿದ್ದವು. ಆದರೆ ಗಳಗನಾಥರು ಮಾತ್ರ ಅವುಗಳಲ್ಲಿ ಒಂದನ್ನೂ ಅನುವಾದಿಸಲಿಲ್ಲವೆಂಬುದು ಗಮನಾರ್ಹವಾಗಿದೆ. ಇದು ಕೇವಲ ಆಕಸ್ಮಿಕವಲ್ಲ; ಬುದ್ಧಿಪೂರ್ವಕವಾದುದು. ಆಪಟೆಯವರ ಸಾಮಾಜಿಕ ಕಾದಂಬರಿಗಳಲ್ಲಿ ನಿರೂಪಿತವಾದ ಸಮಾಜ ಸುಧಾರಣೆಯ ನವೀನ ವಿಚಾರವನ್ನು ಸನಾತನ ಆಚಾರ-ವಿಚಾರಗಳಲ್ಲಿ ನಂಬುಗೆಯುಳ್ಳ ಗಳಗನಾಥರು ಮೆಚ್ಚದೆ ಹೋದರು.

"ನನ್ನ ಕಾದಂಬರಿಗಳು ಇಷ್ಟು ಲೋಕಪ್ರಿಯವಾದದ್ದರ ಗುಟ್ಟನ್ನು ನಾನು ಈಗ ಹೇಳದೆ ಇರಲಾರೆನು. ಅಪ್ರಸಿದ್ಧ ನಾಯಕರಿದ್ದ ಕಾದಂಬರಿಗಳನ್ನು ಈ ವರೆಗೆ ನಾನು ಬರೆಯಲೇ ಇಲ್ಲ. ನನ್ನ ಕಾದಂಬರಿಗಳೊಳಗಿನ ನಾಯಕರೆಂದರೆ, ವಿಜಯನಗರದ ರಾಜ್ಯಸ್ಥಾಪಕರಾದ ಮಾಧವಾಚಾರ್ಯರು, ಮಹಾರಾಷ್ಟ್ರ ರಾಜ್ಯ ಸ್ಥಾಪಕನಾದ ಶಿವಾಜಿ, ಅಕಬರನ ಕಾಲದಲ್ಲಿಯೂ ತನ್ನ ಸ್ವಾತಂತ್ರ್ಯವನ್ನು ಕಾಯ್ದುಕೊಂಡ ಮಹಾರಾಣಾ ಪ್ರತಾಪಸಿಂಹ, ಸುಪ್ರಸಿದ್ಧ ಪ್ರಾಚೀನ ಚಕ್ರವರ್ತಿಗಳಾದ ಅಶೋಕ-ಚಂದ್ರಗುಪ್ತರು, ಔರಂಗಜೇಬನಿಗೂ ತನ್ನ ಕೈ ತೋರಿಸಿದ ಸಾಧ್ವಿ ಚಂದ್ರಾವತೀ ರಾಣಿ, ಔರಂಗಜೇಬನ ಕಾಲದಲ್ಲಿಯೂ ಸ್ವಾತಂತ್ರ್ಯವನ್ನು ಸ್ಥಾಪಿಸಿದ ಛತ್ರಸಾಲ,

1. ಕನ್ನಡ ವಿಶ್ವಕೋಶ, ಸಂಪುಟ 6, ಪುಟ 146

ಕ್ಷತ್ರಿಯೋತ್ತಮನಾದ ರಾಣಾ ರಾಜಸಿಂಹ, ತಾಳಿಕೋಟೆಯ ಕಾಳಗದ ರಾಮರಾಜ ಮುಂತಾದ ಪ್ರಸಿದ್ಧ ಐತಿಹಾಸಿಕ ಪುರುಷರು! ಇವರ ಹೆಸರುಗಳನ್ನು ಕೇಳಿದ ಮಾತ್ರದಿಂದಲೇ ಜನರ ಮನಸ್ಸಿನಲ್ಲಿ ಆದರ-ಭಕ್ತಿಗಳು ಉತ್ಪನ್ನವಾಗುವವು. ಇಂತಹ ಪ್ರಸಿದ್ಧ ಐತಿಹಾಸಿಕ ಪುರುಷರಿಗೆ ಸಂಬಂಧಿಸಿದ ಪ್ರಸಂಗಗಳಿಂದಲೇ ವಾಚಕರಲ್ಲಿ ಉದಾತ್ತ ಗುಣಗಳ ಬೀಜಾರೋಪಣ ಪೋಷಣ ಸಂವರ್ಧನಗಳು ಆಗುವವೆಂದು ನನ್ನ ನಂಬಿಗೆ. ಈ ನಂಬಿಗೆಯ ಮೂಲಕವಾಗಿಯೇ ಈ ವರೆಗೆ ನಾನು ಅಪ್ರಸಿದ್ಧ ಕಲ್ಪಿತ ಸಾಮಾನ್ಯ ಜನರು ನಾಯಕರಾಗಿದ್ದ ಸಾಮಾಜಿಕ ಕಾದಂಬರಿಗಳನ್ನು ಒಂದೂ ಬರೆಯದಿರುವದು"[1] ಎಂದು ಸ್ವತಃ ಗಳಗನಾಥರೇ ಹೇಳಿರುವರು.

ಇಂಥ ಶ್ರೇಷ್ಠರ, ಸತ್ಪುರುಷರ, ವೀರರ ಕಥೆಗಳನ್ನು ಓದಿದ ಕನ್ನಡಿಗರಲ್ಲಿ ಅಂಥ ಗುಣಗಳೇ ಆದರ್ಶವಾಗಿ ತೋರಿ, ಸತ್ಪರಿಣಾಮವಾಗುವವೆಂದು ಗಳಗನಾಥರು ಭಾವಿಸಿದ್ದರು. "ಯಾಕಂದರೆ ಉಂಡದ್ದೇ ತೇಗಿನಲ್ಲಿ ಬರುವದು ವಾಡಿಕೆಯ ನಿಯಮವಾಗಿರುವದು. ಆದ್ದರಿಂದ ಇಂತಹ ಮನಃಸಂಸ್ಕರಣದ, ಹಾಗು ಮನ ಉಜ್ಜೀವನೀಕರಣದ ಕಾದಂಬರಿಗಳನ್ನು ಓದುವದರಿಂದ ಮನುಷ್ಯನ ಮನೋಭೂಮಿಯಲ್ಲಿ ಸ್ವಾಭಿಮಾನದ ಅಂಕುರವು ಉತ್ಪನ್ನವಾಗುವದು....ಒಟ್ಟಿಗೆ ಇಂಥ ಕಾದಂಬರಿಗಳನ್ನು ಓದುವವರು ಧರ್ಮಶ್ರದ್ಧೆಯುಳ್ಳವರೂ, ರಾಜನಿಷ್ಠರೂ, ಗುರು-ಹಿರಿಯರನ್ನು ಮನ್ನಿಸುವವರೂ, ಪರೋಪಕಾರದ ಬುದ್ಧಿಯುಳ್ಳವರೂ, ತೇಜಸ್ವಿಗಳೂ. ದುಷ್ಟ ಶಾಸನ ಧುರೀಣರೂ ಕಾದಂಬರಿ ಓದುತ್ತಿರುವಾಗಿನ ಮಟ್ಟಿಗಾದರೂ ನಿಶ್ಚಯವಾಗಿ ಆಗಿರುವರೆಂದು ಅನುಭವದಿಂದ ಹೇಳಬಹುದು."[2] ಆದ್ದರಿಂದಲೇ ಅವರು "ತಾತ್ವಿಕ ವಿಷಯಗಳೆಂಬ ಸಣ್ಣ ಕಹಿ ಗುಳಿಗೆಗಳನ್ನು ನವರಸಗಳ ಕಷಾಯದಲ್ಲಿ ಕೂಡಿಸಿ ಸರ್ವಗ್ರಾಹ್ಯವಾಗುವಂತೆ ಪೌಷ್ಟಿಕ ರಸಾಯನ ಮಾಡುವ ಕಾದಂಬರಿ"[3]ಗಳನ್ನು ಬರೆಯ ಹೊರಟರು. ಆದರೆ ಅವರ ಕಾದಂಬರಿಗಳಲ್ಲಿ ನವರಸಾಯನದ ಬದಲು ಅಥವಾ ಅದರ ಜೊತೆಗೇ ಕಹಿ ಗುಳಿಗೆಯ ರುಚಿ ಇನ್ನೂ ಕಟುವಾಗಿಯೇ ಉಳಿದುಕೊಂಡಿದೆಯೆಂಬ ಮಾತು ಬೇರೆ. ಆದರೆ ಇದು ಅವರ ಉದ್ದೇಶವನ್ನು ಮಾತ್ರ ಸ್ಪಷ್ಟವಾಗಿ ತಿಳಿಸುತ್ತದೆ.

ಅವರ ಕಾದಂಬರಿಗಳಲ್ಲಿ ಕೇವಲ ವೀರವೊಂದೇ ಪ್ರಧಾನವಾಗಿರಲಿಲ್ಲವೆಂಬುದೂ ಲಕ್ಷಿಸಬೇಕಾದ ಅಂಶ. ಶೃಂಗಾರಕ್ಕೂ ಗಳಗನಾಥರು ಆಸ್ಪದ ಕೊಟ್ಟಿದ್ದಾರೆ. ಶೃಂಗಾರದಿಂದ ರಮ್ಯವಾಗದ ಕಾದಂಬರಿಗಳನ್ನು ಯಾರು ಓದುವರು ? ಎಂದೂ ಅವರು ತಿಳಿದಿದ್ದರು. ಆದರೆ 'ಪದ್ಮನಯನೆ'ಯಲ್ಲಿ ಕೆಲವು ಶೃಂಗಾರ ಸನ್ನಿವೇಶಗಳಿದ್ದರೂ, 'ಕುಮುದಿನಿ'ಯಲ್ಲಿ 'ಶೃಂಗಾರ ಸಾಗರ' ವೆಂಬ ಒಂದು ಪ್ರಕರಣವೇ ಇದ್ದರೂ, ಎಲ್ಲಿಯೂ ಅಶ್ಲೀಲವಿಲ್ಲವೆಂಬುದನ್ನು ಕಾಣಬಹುದು.

"ಗಳಗನಾಥರಂಥ ಶ್ರದ್ಧಾವಂತ, ದೇವಭಕ್ತ, ಧರ್ಮನಿಷ್ಠ ಕಾದಂಬರಿಕಾರರ ಕೈಯಲ್ಲಿ ಎಂತಹ ಶೃಂಗಾರದ ಸನ್ನಿವೇಶವೂ ಉದಾತ್ತ ಮಟ್ಟವನ್ನು ಬಿಟ್ಟು ಕೆಳಗಿಳಿಯುವದಿಲ್ಲ. ಅತಿ ಶೃಂಗಾರಕ್ಕೆ ಕೈಚಾಚುವ ಲೇಖನಿ ಗಳಗನಾಥರದಲ್ಲ. ಅಂತೆಯೇ ಮನೆಯ ಹೆಣ್ಣುಮಗಳು ಅವರ ಕಾದಂಬರಿಗಳನ್ನು ಏಕಾಂತದಲ್ಲಿಯೂ ಓದಬಹುದು ಎಂಬ ವಿಶ್ವಾಸ ತಂದೆ ತಾಯಿಗಳದು"[4] ಎಂಬ ಶ್ರೀ ಎಸ್. ಕೆ. ಕುಲಕರ್ಣಿ ಅವರ ಮಾತಿನಲ್ಲಿ ಅತಿಶಯೋಕ್ತಿಯಿಲ್ಲ.

1. ಗಳಗನಾಥ : ಸದ್ಗುರು ಪ್ರಭಾವ, ಪುಟ 37
2. ಅದೇ, ಪುಟ 44, 45
3. ಅದೇ, ಪುಟ 41
4. ಕರ್ಮವೀರ, ದಿನಾಂಕ 5-1-1969, ಪುಟ 16

"ಹಾಸ್ಯರಸವೊಂದನ್ನು ಬಿಟ್ಟು ಉಳಿದ ರಸಗಳೆಲ್ಲ ಬಹುತರ ಈ ಕಾದಂಬರಿಯಲ್ಲಿ ಇರುತ್ತವೆಂದು ಹೇಳಬಹುದು"[1] ಎಂದು ತಮ್ಮ ಒಂದು ಕಾದಂಬರಿಯ ಪ್ರಸ್ತಾವನೆಯಲ್ಲಿ ಗಳಗನಾಥರು ಹೇಳಿರುವ ಮಾತು ಬಹುಶಃ ಅವರ ಎಲ್ಲ ಕಾದಂಬರಿಗಳಿಗೂ ಅನ್ವಯಿಸುತ್ತದೆ. ಗಂಭೀರ ಸ್ವಭಾವದ ಗಳಗನಾಥರು ಹಾಸ್ಯಕ್ಕೆ ಒಲಿಯಲಿಲ್ಲವೆಂಬುದು ಸಹಜವೇ ಆಗಿದೆ.

ನೈತಿಕ ಪತಾಕೆಯನ್ನೇ ಎತ್ತಿ ಹಿಡಿಯುವಂಥ ಕಾದಂಬರಿಗಳನ್ನು ರಸಭರಿತವಾಗಿ ಬರೆದೆನೆಂಬ ತೃಪ್ತಿಯಿದ್ದರೂ, ಗಳಗನಾಥರಿಗೆ ಅಷ್ಟರಿಂದಲೇ ಕೃತಕೃತ್ಯತೆಯ ಭಾವ ಮೂಡಲಿಲ್ಲ. ಆದ್ದರಿಂದ ಅವರು ಧಾರ್ಮಿಕ, ಆಧ್ಯಾತ್ಮಿಕ ವಿಚಾರಗಳನ್ನು ಪ್ರತಿಪಾದಿಸುವ ಧಾರ್ಮಿಕ ಗ್ರಂಥ ಲೇಖನಕ್ಕೆ ತೊಡಗಿದರು. 'ಮಾಧವ ಕರುಣಾವಿಲಾಸ'ವನ್ನು ಅರ್ಧಕ್ಕೆ ನಿಲಿಸಿ, ಭಾಗವತವನ್ನು ಓದಿದ ಗಳಗನಾಥರು ಭಾಗವತದ ಅನುವಾದವನ್ನೇ ಮಾಡಿಬಿಟ್ಟರು. ಪ್ರಸ್ತಾವನೆಯಲ್ಲಿ "ಕಾದಂಬರೀ ರೂಪವಾದ ರುಚಿಕರ ದ್ರಾಕ್ಷಾಸವವನ್ನು ಕುಡಿದು ಬಾಯಿ ಚಪ್ಪರಿಸಿದ ಮಾತ್ರದಿಂದ ಶರೀರದ ಸಾಂಗೋಪಾಂಗ ಸಂಗೋಪನವಾಗಬಹುದೊ ? " ಎಂದು ಅವರು ಕೇಳಿರುವಲ್ಲಿ, ಅವರ ಪರಿಪೂರ್ಣ ವ್ಯಕ್ತಿತ್ವದ ಕಲ್ಪನೆಯೇನು ಎಂಬುದು ತಿಳಿಯುವಂತಿದೆ. ಮಾನವನಿಗೆ ನವರಸಭರಿತವಾದ ಕಾದಂಬರಿಗಳಂತೆ ಶಾಸ್ತ್ರೀಯ, ಧಾರ್ಮಿಕ, ನೈತಿಕ, ಆಧ್ಯಾತ್ಮಿಕ ಗ್ರಂಥಗಳೂ ಅವಶ್ಯವೆಂದು ಅವರು ದೃಢವಾಗಿ ನಂಬಿದ್ದರು. ಅದಕ್ಕಾಗಿಯೇ ಅವರ ಗ್ರಂಥಗಳಲ್ಲಿ ಕಾದಂಬರಿಗಳಂತೆ, ಉಳಿದ ಗ್ರಂಥಗಳ ಸಂಖ್ಯೆಯೂ ಗಣನೀಯವೇ ಇದೆ.

ಕೇವಲ ಕಾದಂಬರೀ ಲೇಖನದಿಂದ ಅವರಿಗೆ ತೃಪ್ತಿಯಿರಲಿಲ್ಲವೆಂಬುದನ್ನು 'ಸದ್ಗುರು' ದಲ್ಲಿಯ ಒಂದು 'ಪತ್ರಕ್ಕೆ ಉತ್ತರ'ವೂ ತಿಳಿಸುತ್ತದೆ. ಅದರಲ್ಲಿ ಅವರು "ನಮ್ಮ ದಾವಣಗೇರಿಯ ಒಬ್ಬ ಆಶ್ರಯದಾತೃಗಳು, 'ಕೈಯಲ್ಲಿ ಹಿಡಿದ ಪುಸ್ತಕವನ್ನು ಓದದೆ ಕೆಳಗೆ ಇಡದಂಥ ವಿಷಯ ಕೊಡುವದಿದ್ದರೆ ಕೊಡಿರಿ, ಇಲ್ಲವಾದರೆ ಬೇಡ' ಎಂದು ಬರೆದಿರುತ್ತಾರೆ. ಆದರೆ ನಾವು ಅವರಿಗೂ ಯಾವತ್ತೂ ಕನ್ನಡಿಗರಿಗೂ ವಿನಯದಿಂದ ಹೇಳುವದೇನೆಂದರೆ—ಇಂಥ ವಿಷಯಗಳನ್ನು ಬರೆಯುವದರಲ್ಲಿ ನಮ್ಮ ಹನ್ನೆರಡು ವರ್ಷಗಳು ಕಳೆದುಹೋಗಿರುವವು. 20ಕ್ಕಿಂತ ಹೆಚ್ಚು ಕಾದಂಬರಿಗಳು ಸಿದ್ಧವಾಗಿವೆ. ಹೀಗೆ ಚಹಾದಂಗಡಿಯ ಸವಿ ತಿನಸುಗಳಂಥ ಕಾದಂಬರಿಗಳಲ್ಲಿಯೇ ನಮ್ಮ ಜನ್ಮವನ್ನು ನಾವು ಕಳೆಯಲಾರೆವು; ಕಳೆಯುವದು ಸಮಾಜಕ್ಕೆ ಹಿತಕರವೂ ಅಲ್ಲವು"[2] ಎಂದು ತಿಳಿಸಿ 'ಸದ್ಗುರು'ವಿನಲ್ಲಿ ಧಾರ್ಮಿಕ ನೈತಿಕ ವಿಚಾರಗಳನ್ನು ಪ್ರತಿಪಾದಿಸುವ ಲೇಖನಗಳನ್ನೇ ಹೆಚ್ಚಾಗಿ ಪ್ರಕಟಿಸುವದಾಗಿ ತಿಳಿಸಿದರು. ಅದರಂತೆ ತಮ್ಮ ಧೋರಣೆಗೆ ಪೂರಕವಾದ 'ಮಾಧವ ಕರುಣಾವಿಲಾಸ' ಕಾದಂಬರಿಯನ್ನೂ ಅವರು 'ಸದ್ಗುರು'ವಿನಲ್ಲಿ ಕ್ರಮಶಃ ಪ್ರಕಟಿಸಿದರು.

ಇನ್ನು, ಗಳಗನಾಥರ ರಾಜನಿಷ್ಠೆಯನ್ನು ಕುರಿತೂ ಎರಡು ಮಾತು ಹೇಳುವುದು ಅವಶ್ಯವಾಗಿದೆ. ಕೃಷ್ಣಾಜಿ ಶಂಕರ ಇಂಗಳಿಗೆ ಎಂಬವರ ಜೊತೆಗೆ ಅವರು 1911ರಲ್ಲಿ 'ರಾಜನಿಷ್ಠೆಯೂ ನಮ್ಮ ಪುಣ್ಯಶಾಲಿಗಳಾದ ಸಾರ್ವಭೌಮರೂ' ಎಂಬ ಒಂದು ಚಿಕ್ಕ ಪುಸ್ತಿಕೆಯನ್ನು ಬರೆದರು. ಅಲ್ಲದೆ ಅವರು ತಮ್ಮ ಕೆಲವು ಕಾದಂಬರಿಗಳಲ್ಲಿಯೂ, ಪ್ರಸ್ತಾವನೆಗಳಲ್ಲಿಯೂ ಈ ರಾಜನಿಷ್ಠೆಯ ಬಗ್ಗೆ ಬರೆದಿರುವರು. 'ಶೇಷಾಚಲ ಗ್ರಂಥಮಾಲೆ' ಮತ್ತು 'ಗಳಗನಾಥ ಸುರಸ ಗ್ರಂಥಮಾಲೆ'

1. ಗಳಗನಾಥ : ಕುಮುದಿನಿ, ಪ್ರಸ್ತಾವನೆ
2. ಗಳಗನಾಥ : ಸುಂದರ ಲೇಖ ಸಮುಚ್ಚಯ, (ಅನುಕ್ರಮ ಪುಟಸಂಖ್ಯೆ ಲಭ್ಯವಿಲ್ಲ)

ಗಳಂತೆ ಅವರು '5ನೆಯ ಜಾರ್ಜ ಸದ್ಬೋಧಾವಲಿ' ಎಂಬ ಗ್ರಂಥಮಾಲೆಯನ್ನೂ ಆರಂಭಿಸಿದ್ದರು. ಅಲ್ಲದೆ ಅವರು 'ಕುಮುದಿನಿ'ಯ ಕೊನೆಗೆ ಋಷೀಶ್ವರನಿಂದ ಬ್ರಿಟಿಶರ ಆಗಮನದ ಭವಿಷ್ಯವನ್ನೇ ನುಡಿಸಿರುವದೂ ಗಮನಾರ್ಹವಾಗಿದೆ. ಅದರಲ್ಲಿ,

"ಈ ಪುಣ್ಯಭೂಮಿಯನ್ನು ಉದ್ಧರಿಸುವದಕ್ಕಾಗಿ ಆಂಗ್ಲಭೂಮಿಯಿಂದ ಯೋಗ್ಯರಾದ ಗುರುಗಳು ಬಂದು ಭರತಭೂಮಿಯ ಆಧಿಪತ್ಯವನ್ನು ಸಂಪಾದಿಸುವರು....ಅವರಿಂದಲೇ ಹಿಂದು ಸ್ಥಾನದ ಉದ್ಧಾರವಾಗಬೇಕೆಂದು ಭಗವತ್ ಸಂಕೇತವಿರುತ್ತದೆ.... ಭಾರತೀಯರು ಅಸೂಯಾ ಭಾವವನ್ನು ತ್ಯಜಿಸಿ ರಾಜನಿಷ್ಠರಾಗಿ....(ಇರಬೇಕು). ಅಂದರೆ ಆಂಗ್ಲ ಗುರುಗಳ ಶಿಷ್ಯತ್ವದ ಪ್ರಯೋಜನವಾದಂತಾಗುವದು"[1] ಎಂದು ಗಳಗನಾಥರು ಋಷಿವರ್ಯನ ಮುಖದಿಂದ ಹೇಳಿಸಿದ್ದರೂ, ಇದು ಗಳಗನಾಥರ ವಿಚಾರವೆನ್ನುವಲ್ಲಿ ಸಂದೇಹವಿಲ್ಲ.

ಅದರಂತೆ ಅವರ 'ನಿಬಂಧ ಶಿಕ್ಷಣ'ದಲ್ಲಿ ವಿದ್ಯಾರ್ಥಿಗಳಿಂದ ಹೇಗೆ ನಿಬಂಧ ಬರೆಯಿಸಬೇಕೆಂಬ ಸೂಚನೆಗಳನ್ನು ಶಿಕ್ಷಕರಿಗೆ ಕೊಡುತ್ತ ಗಳಗನಾಥರು "ವಿದ್ಯಾರ್ಥಿಗಳು ಯಾವನೊಬ್ಬ ವ್ಯಕ್ತಿಗೆ ಇಲ್ಲವೆ ಯಾವದೊಂದು ಸಮಾಜಕ್ಕೆ ಅಥವಾ ಸರಕಾರಕ್ಕೆ ವಿರುದ್ಧವಾದ ಸಂಗತಿಗಳನ್ನು ತಮ್ಮ ಬರಹದಲ್ಲಿ ಉಪಯೋಗಿಸದಂತೆ ಶಿಕ್ಷಕರು ಕಟ್ಟು ಮಾಡಬೇಕು"[2] ಎಂದೂ ಬರೆದಿರುವರು.



"ಯುದ್ಧವು ಆರಂಭವಾದ ಕೂಡಲೇ ನಮ್ಮ ಸದ್ಗುರುವು ಬಾಯಿಬಿಟ್ಟು 'ನಮ್ಮ ಸರಕಾರವು ಪುಣ್ಯಶಾಲಿಯು' ಎಂದು ಭವಿಷ್ಯ ಸೂಚಿಸಿದ್ದನು. ಆತನ ಆ ಸೂಚನೆಯ ಸತ್ಯತೆಯು ನಮ್ಮ ನಿದರ್ಶನಕ್ಕೆ ಬಂದಿತು. ಮಹಿಮಾಶಾಲಿಯಾದ ಸದ್ಗುರುವೇ, ನಮ್ಮ ಸಾರ್ವಭೌಮ ಸರಕಾರದ ಸ್ಥಿರವಾದ ಆಳಿಕೆಯು ನಮ್ಮ ಉತ್ಕರ್ಷಮೂಲವಾಗುವಂತೆ ಅನುಗ್ರಹಿಸು !"[3] ಎಂದು ಗಳಗನಾಥರು 'ಸದ್ಗುರು' ಮಾಸಪತ್ರಿಕೆಯಲ್ಲಿ ಮೊದಲನೆಯ ಜಾಗತಿಕ ಯುದ್ಧವು ನಿಂತ ಸಮಯಕ್ಕೆ ಬರೆದರು.

ಗಳಗನಾಥರ ಈ ಬ್ರಿಟಿಶ್ ನಿಷ್ಠೆಯು 1919ರಲ್ಲಿ ಪ್ರಕಟವಾದ ಅವರ 'ಕುರುಕ್ಷೇತ್ರ' ಕಾದಂಬರಿಯಲ್ಲಿಯೂ ಸೂಚಿತವಾಗಿದೆ. ಆಗ ಮೊದಲನೆಯ ಜಾಗತಿಕ ಮಹಾಯುದ್ಧ ಅದೇ ಕೊನೆಗೊಂಡಿತ್ತು; ಬ್ರಿಟಿಶರಿಗೆ ಜಯವೂ ದೊರೆತಿತ್ತು. ಅದನ್ನು ಗಳಗನಾಥರು ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿ, "ನಮ್ಮ ಸಾರ್ವಭೌಮ ಸರಕಾರದ ವಿವೇಕದ ಸಾಮರ್ಥ್ಯದಿಂದ ಕೇಸರ ಬಾದಶಹನ ಗರ್ವವು ಅಡಗಿ ಹೋಗಿರುವದರಿಂದ, ಇಡಿಯ ಜಗತ್ತೇ ಸುಖದ ಹಾದಿಯ ಹಿಡಿದಿರುವದೆಂದು ಹೇಳಬಹುದು. ಈ ಭಾಗ್ಯೋದಯದ ಶ್ರೇಯಸ್ಸಿಗೆ ನಮ್ಮ ಸಾರ್ವಭೌಮ ಸರಕಾರವು ದೊಡ್ಡ ಪ್ರಮಾಣದಿಂದ ಪಾಲುಗಾರವಾಗಿರುತ್ತದೆಂದು ನಾವು ಸಂತೋಷದಿಂದ ಹೇಳುವೆವು....ನಮ್ಮ ಸರಕಾರದ ಈ ಔದಾರ್ಯದ ಕೃತಿಯ ಒಂದು ಬಗೆಯ ಸ್ಮಾರಕಕ್ಕಾಗಿಯೇ ಈ 'ಕುರುಕ್ಷೇತ್ರ'ವೆಂಬ ಕಾದಂಬರಿಯನ್ನು ಸದ್ಗುರುವು ಬರೆಸಿರುವನೆಂದು ನಾವು ತಿಳಿಯುತ್ತೇವೆ"[4] ಎಂದು ಬ್ರಿಟಿಶ ಸರಕಾರವನ್ನು ಅಭಿನಂದಿಸಿರುವರು.

---

1. ಗಳಗನಾಥ : ಕುಮುದಿನಿ, ಪುಟ 197
2. ಗಳಗನಾಥ : 'ನಿಬಂಧ ಶಿಕ್ಷಣ,' ಶಾಲಾಪತ್ರಕ, ಅಕ್ಟೋಬರ 1909, ಪುಟ 306
3. ಗಳಗನಾಥ : ಸುಂದರ ಲೇಖ ಸಮುಚ್ಚಯ, (ಅನುಕ್ರಮ ಪುಟಸಂಖ್ಯೆ ಲಭ್ಯವಿಲ್ಲ)
4. ಗಳಗನಾಥ : ಕುರುಕ್ಷೇತ್ರ, ಪ್ರಸ್ತಾವನೆ.

ಮೇಲಿನ ಮಾತುಗಳನ್ನು ನೋಡಿದರೆ ಗಳಗನಾಥರು ಬ್ರಿಟಿಶರಿಗೆ ನಿಷ್ಠರಾಗಿದ್ದರೆಂಬುದು ವಿದಿತವಾಗುತ್ತದೆ. ಅವರು ಸರಕಾರಿ ನೌಕರಿಯನ್ನು ಮಾಡಿದವರು; ಅಲ್ಲದೆ ಅದಕ್ಕಿಂತ ಹೆಚ್ಚಾಗಿ, ರಾಜನೆಂದರೆ ವಿಷ್ಣುವಿನ ಅವತಾರವೇ ಎಂಬ ಸನಾತನ ತತ್ತ್ವದಲ್ಲಿ ವಿಶ್ವಾಸವುಳ್ಳವರು. ಹಾಗಿರುವದರಿಂದಲೇ, ಆ ಕಾಲಕ್ಕೆ ದೇಶವನ್ನು ಆಳುತ್ತಿದ್ದ ರಾಜರಲ್ಲಿ ಅವರು ನಿಷ್ಠೆ ವ್ಯಕ್ತಮಾಡಿದರೆಂದು ನಾವು ತಿಳಿಯಬೇಕಾಗುತ್ತದೆ. 'ಸ್ವರಾಜ್ಯ ಸುಗಂಧ'ದ ಪ್ರಸ್ತಾವನೆಯಲ್ಲಿ ಈ ಮಾತಿಗೆ ಆಧಾರವೂ ಇದೆ.

ಶ್ರೀ ಬಂಡೋಪಂತ ಜೋಗ ಎಂಬವರ ಮನೆಯ ಅಂಗಳದಲ್ಲಿಯೇ ಸ್ಫೂರ್ತಿಯುಂಟಾಗಿ, ಗಳಗನಾಥರು ತಮ್ಮ 'ಸ್ವರಾಜ್ಯ ಸುಗಂಧ' ಕಾದಂಬರಿಯಲ್ಲಿಯ 'ರಾಜನಿಷ್ಠೆಯ ವೈಭವ' ಎಂಬ 14ನೆಯ ಪ್ರಕರಣವನ್ನು ಬರೆದು ಮುಗಿಸಿದರು; ಅದನ್ನು ಜೋಗರಿಗೆ ತಿಳಿಸಿ ಕೃತಜ್ಞತೆಗಳನ್ನು ಅರ್ಪಿಸಿದರು. ಆಗ, ಕಾಂಗ್ರೆಸವಾದಿಗಳಾದ ಜೋಗ ಅವರು ತಮ್ಮ ಅಂಗಳದಲ್ಲಿ 'ರಾಜನಿಷ್ಠೆಯ ವೈಭವ' ಬರೆಯಲು ಸ್ಫೂರ್ತಿಯಾದುದಕ್ಕೆ ಅಚ್ಚರಿ ವ್ಯಕ್ತಪಡಿಸಿದರು. ಅದಕ್ಕೆ ಗಳಗನಾಥರು,

"ಸನಾತನಿಗಳಾದ ನಮಗೆ ವಂಶಪರಂಪರಾಗತ ರಾಜರೂ ಮಾನ್ಯರೇ, ಕಾಂಗ್ರೆಸ್ಸಿನ ಅಪ್ಪರ ಮಟ್ಟಿಗಿನ ರಾಜರೂ ಮಾನ್ಯರೇ, ಯಾಕೆಂದರೆ ಅವರಿಬ್ಬರೂ ಪ್ರಜಾಪಾಲಕರೇ ಆದದ್ದರಿಂದ, ಅವರಿಬ್ಬರು ಸೃಷ್ಟಿಯ ಪಾಲಕನೆನಿಸುವ ಶ್ರೀವಿಷ್ಣುವಿನ ಸ್ವರೂಪರೇ ಆಗಿರುವರು"[1] ಎಂದು ತಿಳಿಸಿದರು. ಗಳಗನಾಥರು ಕೇವಲ ಬ್ರಿಟಿಶ ಸರಕಾರದ ಬಾಲ ಬಡಕರಾಗಿದ್ದಿಲ್ಲ. ಆಳರಸರೆಲ್ಲರೂ ಅವರಿಗೆ ಪೂಜ್ಯರೇ ಆಗಿದ್ದರು. ಅಲ್ಲದೆ, ಭಾರತವು ಪಾರತಂತ್ರ್ಯದಿಂದ ಸ್ವಾತಂತ್ರ್ಯವನ್ನು ಪಡೆಯಬೇಕೆಂಬ ಆಸೆ ಅವರಲ್ಲಿಯೂ ಇದ್ದಿತೆಂಬುದರ ಸೂಚನೆಗಳನ್ನೂ ನಾವು ಕಾಣಬಹುದಾಗಿದೆ.

"ಮುಸಲ್ಮಾನ, ಜಂಗಮ, ಬ್ರಾಹ್ಮಣ, ಒಬ್ಬ ಹೊಲೆಯ ಈ ನಾಲ್ವರು ಜತ್ತಾದರೆ ಜಗತ್ತೇ ಜತ್ತಾದಂತಾಗುವದು! ಈ ನಾಲ್ಕು ವರ್ಗದ ಜನರು ಸ್ವರಾಜ್ಯಕ್ಕಾಗಿ ಹ್ಯಾಗೆ ಒಂದಾಗಬೇಕೆಂಬುದನ್ನು ಈ ಕಾದಂಬರಿಯಲ್ಲಿ ಶ್ರೀ ಮಾಧವಾಚಾರ್ಯರು ತೋರಿಸಿರುವದನ್ನು ವಾಚಕರು ಮಾರ್ಮಿಕ ರೀತಿಯಿಂದ ಅರಿತುಕೊಳ್ಳದಿದ್ದರೆ, ಮಹಾತ್ಮರಾದ ಮಾಧವಾಚಾರ್ಯರು ಈ ಕಾದಂಬರಿಯನ್ನು ಬರೆಸಿದ್ದೂ, ಪಾಮರನಾದ ನಾನು ಬಹು ಕಷ್ಟಪಟ್ಟು ಬರೆದದ್ದೂ, ವಾಚಕರು 'ಕಾದಂಬರಿಯು ಬಲು ಸವಿ' ಎಂದು ಶ್ಲಾಘಿಸಿದ್ದೂ ವ್ಯರ್ಥವೇ ಸರಿ!"[2] ಎಂದು ಗಳಗನಾಥರು ಸ್ಪಷ್ಟವಾಗಿ ಹೇಳಿರುವದನ್ನು ಗಮನಿಸಬೇಕು.

ಗಳಗನಾಥರು ಬ್ರಿಟಿಶ ಸರಕಾರದ ದಾಸ್ಯದಲ್ಲಿಯೇ ಕೊಳೆಯಬೇಕೆಂದು ಬಯಸಿದವರಲ್ಲ. ಸ್ವರಾಜ್ಯದ ಚಿಂತೆ ಅವರಲ್ಲಿಯೂ ಇದ್ದಿತೆಂಬುದು 'ಮಾಧವ ಕರುಣಾವಿಲಾಸ'ದ ಮೇಲಿನ ಅವತರಣಿಕೆಯಲ್ಲಿ ಸೂಚಿತವಾಗಿದೆ. ಅದು 'ಕುರುಕ್ಷೇತ್ರ'ದಲ್ಲಿ ಸ್ಪಷ್ಟವೂ ಆಗಿದೆ. ಕಾದಂಬರಿಯ ಕೊನೆಯಲ್ಲಿ ಗಳಗನಾಥರು, "ಹೀಗೆ ಮಹಾರಾಷ್ಟ್ರರು ಎಷ್ಟು ಪ್ರತಾಪವಂತರಾಗಿದ್ದರೂ ಅವರನ್ನು ಜಾತಿಮತ್ಸರವು ಅಂತರಂಗದಲ್ಲಿ ಸುಡುತ್ತಿತ್ತು. ಈ ಅನರ್ಥಕಾರಕ ಸ್ಥಿತಿಯ ನಿವಾರಣಕ್ಕಾಗಿಯೇ ಪರಮೇಶ್ವರನು ಇಂಗ್ಲೀಷ ಸರಕಾರದ ಧರ್ಮೋದಾರ್ಯದ ಆಳಿಕೆಯನ್ನು ಒದಗಿಸಿಕೊಟ್ಟನು....ಕುರುಕ್ಷೇತ್ರದ ಈ ಘೋರ ಸಂಗ್ರಾಮದ ಶ್ರವಣದಿಂದ ನಾವು ಜಾಣರಾಗಿ,

1. ಗಳಗನಾಥ : ಸ್ವರಾಜ್ಯ ಸುಗಂಧ, ಪ್ರಸ್ತಾವನೆ. ಪುಟ 6
2. ಗಳಗನಾಥ : ಮಾಧವ ಕರುಣಾವಿಲಾಸ, ಪ್ರಸ್ತಾವನೆ, ಪುಟ 8

ಗರ್ವಕ್ಕೆ ಆಸ್ಪದ ಕೊಡದೆ. ಅತಿಪ್ರಸಂಗಗಳಿಗೆ ಹೋಗದೆ, ರಾಜನಿಷ್ಠಾಪೂರ್ವಕವಾದ ಸತ್ವವನ್ನು ತೋರಿಸಿ ನಮ್ಮ ಉದಾರಮತದ ಸಾರ್ವಭೌಮ ಸರಕಾರದಿಂದ ಆಂಗ್ಲ ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು ಪಡೆಯುವ ಸುಯೋಗವನ್ನು ಬೇಗನೆ ತಂದುಕೊಡೆಂದು ಶ್ರೀಸದ್ಗುರುವನ್ನು ಪ್ರಾರ್ಥಿಸುವೆವು"[1] ಎಂದು ಬರೆದಿರುವರು. ಗಳಗನಾಥರು ಸ್ವರಾಜ್ಯ ಬೇಕೆನ್ನುವವರೇ; ಆದರೆ ಅದು ಕ್ರಾಂತಿಯಿಂದಲ್ಲ; ಅಸಹಕಾರದಿಂದಲೂ ಅಲ್ಲ. ಅವರು ಬಯಸಿದ್ದು ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು. ಅಂತೂ, ಗಳಗನಾಥರ ರಾಜನಿಷ್ಠೆಯಲ್ಲಿಯೂ ಸ್ವರಾಜ್ಯದ ಬಯಕೆಯಿದ್ದಿತೆಂಬುದು ಸ್ಪಷ್ಟ.

ಇನ್ನು, ಸನಾತನಿಗಳಾದ ಗಳಗನಾಥರಲ್ಲಿ ಬ್ರಾಹ್ಮಣ ಧರ್ಮದ ಬಗ್ಗೆ ಹೆಚ್ಚಿನ ವಿಶ್ವಾಸವಿದ್ದಿತೆಂಬುದು ಅವರ ಕೆಲವು ಗ್ರಂಥಗಳಲ್ಲಿ ವ್ಯಕ್ತವಾಗಿದೆ. 'ಬ್ರಾಹ್ಮಣ್ಯಪ್ರಾಪ್ತಿ ಸಾಧನೆ' ಎಂಬ ಒಂದು ಚಿಕ್ಕ ಗ್ರಂಥವನ್ನೂ ಅವರು ಬರೆದಿದ್ದರು. ಆದರೆ ಅವರು ಬ್ರಾಹ್ಮಣರೇದರೆ ಜಾತಿಯಿಂದ ಬಂದವರಲ್ಲ, ಗುಣದಿಂದ ಬ್ರಾಹ್ಮಣರಾದವರೇ ಶ್ರೇಷ್ಠರೆಂಬ ಅಭಿಪ್ರಾಯವನ್ನು ಹೊಂದಿದವರಾಗಿದ್ದರು. ಅವರ 'ಸುಂದರ ಲೇಖ ಸಮುಚ್ಚಯ'ದ 'ಧರ್ಮ', 'ಕಲಿಕಾಲ ಮಹಿಮೆ', 'ಕಲಿತಾಂಡವ ಅಥವಾ ಬ್ರಾಹ್ಮಣ–ಬ್ರಾಹ್ಮಣೇತರ–ಕೋಟಿಗಳು', 'ಲೋಕಭ್ರಮ' ಮೊದಲಾದ ಲೇಖನಗಳು ಗಳಗಳನಾಥರ ಈ ಮನೋಧರ್ಮವನ್ನು ಸೂಚಿಸುತ್ತವೆ. ಅಲ್ಲದೆ ಅವರು ಪರಮತ ಸಹಿಷ್ಣುಗಳೂ ಆಗಿದ್ದರೆಂಬುದು ಅವರ ಕಾದಂಬರಿಗಳಲ್ಲಿಯೇ ವ್ಯಕ್ತವಾಗಿದೆ. ಹಾಗೆ ನೋಡಿದರೆ ಅವರು ತಮ್ಮ 'ಮಾಧವ ಕರುಣಾವಿಲಾಸ'ದಲ್ಲಿ ವಿರೂಪಾಕ್ಷಾರ್ಯ, ಚನ್ನಬಸವಾರ್ಯರಂಥ ಪಾತ್ರಗಳನ್ನು ಸೃಷ್ಟಿಸಿರುವುದು ಇದೇ ಉದ್ದೇಶದಿಂದ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಬ್ರಾಹ್ಮಣರು ಇತರ ಮತದವರೊಂದಿಗೆ ಹೊಂದಿಕೊಂಡು ನಡೆಯಬೇಕೆಂಬ ನೀತಿಯೂ ಗಳಗನಾಥರದಾಗಿತ್ತು.

"ಬ್ರಾಹ್ಮಣ ಬ್ರಾಹ್ಮಣೇತರರೆಂಬ ಭಾರತ ಭೂಮಾತೆಯ ಮಕ್ಕಳು ನಾವು"[2] "ಜನ್ಮಭೂಮಿಯ ಸಂಬಂಧದಿಂದ ದೇಶಬಾಂಧವರೆನಿಸಿಕೊಳ್ಳುವ ನಮ್ಮಲ್ಲಿ ಕಲಹವಿರುವದು ಸರ್ವಥಾ ಹಿತವಲ್ಲ. ಆದ್ದರಿಂದ ನಾವು ಬ್ರಾಹ್ಮಣ–ಬ್ರಾಹ್ಮಣೇತರವೆಂಬ ಶುಷ್ಕಪಂಗಡ ಮಾಡಿಕೊಂಡು ಪರಸ್ಪರ ಕಲಹ ಬೆಳಿಸಿ ಆತ್ಮಘಾತದ ಹಾದಿಯನ್ನು ಹಿಡಿಯಬಾರದೆಂದು ನಾವು ಕೇಳಿಕೊಳ್ಳುವೆವು. ನಮ್ಮಲ್ಲಿಯ ತಪ್ಪುಗಳನ್ನು ತಿದ್ದಲಿಕ್ಕೆ ಮಂದಿಯೇಕೆ ? ನಾವೇ ನಮ್ಮ ನಮ್ಮೊಳಗೆ ಕಿವಿ ಹಿಂಡಿ ತಿದ್ದಿಕೊಂಡರಾಯಿತು"[3] ಎಂಬ ಗಳಗನಾಥರ ಮಾತುಗಳೂ ಗಮನಾರ್ಹವಾಗಿವೆ.

ಕಟ್ಟಾ ಸನಾತನಿಗಳಾದ ಗಳಗನಾಥರು ಇಂಥ ಮಾತುಗಳನ್ನು ಹೇಳಿರುವುದಲ್ಲದೆ, ಅದನ್ನು ತಮ್ಮ ಜೀವನದಲ್ಲಿ ಆಚರಿಸಿ ತೋರಿಸಿದರೆಂಬುದೂ ಗಮನಿಸಬೇಕಾದ ಅಂಶ.[4] ಗಳಗನಾಥರ 'ಸ್ವರಾಜ್ಯ ಸುಗಂಧ'ದಲ್ಲಿ ಸ್ವಾಮಿಕಾರ್ಯಕ್ಕಾಗಿ ಧರ್ಮಭ್ರಷ್ಟನಾಗಿ ಮುಸಲ್ಮಾನನಾಗಿದ್ದ ವೆಂಕಾಜಿ ವಾಘನು ರಾಮದಾಸ ಸ್ವಾಮಿಗಳ ಅಪ್ಪಣೆಯಂತೆ ಪುನಃ ಹಿಂದುವಾಗುವನು. ಗಳಗನಾಥರು ಇಲ್ಲಿ ತೋರಿದ ಉದಾರ ಮನೋಭಾವ ಹೆಚ್ಚಿನದೇ ಎನ್ನಬೇಕು. ಯಾಕಂದರೆ 1923ರಲ್ಲಿ

1. ಗಳಗನಾಥ : ಕುರುಕ್ಷೇತ್ರ, ಪುಟ 185, 186
2. ಗಳಗನಾಥ ; ಗೃಹಕಲಹ, ಪುಟ 219
3. ಅದೇ, ಪ್ರಸ್ತಾವನೆ, ಪುಟ 3, 4
4. ಕೃಷ್ಣಮೂರ್ತಿ ಕಿತ್ತೂರ : 'ಉದಾರಚರಿತ ಗಳಗನಾಥರು', ಕರ್ಮವೀರ, 5-1-1939, ಪುಟ 10

ಅವರು ಬರೆದ 'ಮಾಧವ ಕರುಣಾವಿಲಾಸ'ದಲ್ಲಿ ಅವರ ಮನೋಭಾವ ಹೆಚ್ಚು ಸನಾತನವಾಗಿತ್ತು. "ಮನುಷ್ಯನು ಎಂಥ ತೇಜಸ್ವಿಯಿದ್ದರೂ, ಎಂಥ ನಿಸ್ಪೃಹನಿದ್ದರೂ, ಎಂಥ ಸದ್ಗುಣಿಯಿದ್ದರೂ, ಎಂಥ ಪರೋಪಕಾರಿಯಿದ್ದರೂ, ಎಂಥ ವಿದ್ವಾಂಸನಿದ್ದರೂ ಧಾರ್ಮಿಕ ವ್ಯವಹಾರದಲ್ಲಿ ಕೈಹಾಕಲು ಆತನು ಸರ್ವಥಾ ಅಧಿಕಾರಿಯಲ್ಲವೆಂಬುದನ್ನು ಚೆನ್ನಾಗಿ ಲಕ್ಷದಲ್ಲಿಡತಕ್ಕದ್ದು. ಇಂಥ ಅನಧಿಕಾರಿಗಳು ರಾಜಕೀಯ ಸ್ವಾತಂತ್ರ್ಯ ಪ್ರಾಪ್ತಿಯ ಆವೇಶದಿಂದ ವರ್ಣಾಶ್ರಮ ಧರ್ಮಗಳನ್ನು ಪಾಲಿಸುವವರ ಸಹಾನುಭೂತಿಯನ್ನು ಪಡೆಯುವದಕ್ಕಾಗಿ ವರ್ಣಾಶ್ರಮ ಧರ್ಮಗಳ ಗೌರವದ ಗಾಯನಮಾಡಿ, ಅದರಂತೆ ತಾವು ಸ್ವತಃ ನಡೆಯದೆ, ವರ್ಣಾಶ್ರಮ ಧರ್ಮಗಳನ್ನು ಪಾಲಿಸಬೇಕೆನ್ನುವವರನ್ನು ಕುರಿತು–'ನೀವು ವರ್ಣಾಶ್ರಮ ಧರ್ಮಗಳನ್ನು ಪಾಲಿಸಿರಿ; ಆದರೆ ಅಸ್ಪೃಶ್ಯತಾ ತತ್ತ್ವವು ಅನುದಾರವಾದದ್ದರಿಂದ ಅದನ್ನು ತೆಗೆದು ಹಾಕಿರಿ' ಇತ್ಯಾದಿ....ತಮ್ಮ ಆಸ್ತಿಕಾಭಾಸ ನಾಸ್ತಿಕತತ್ವವನ್ನು ತೋರಿಸಲಿಕ್ಕೂ ಹಿಂದೆ ಮುಂದೆ ನೋಡಲಿಕ್ಕಿಲ್ಲ" (ಮಾ.ಕ.ವಿ. ಪುಟ 769) ಎಂದು ಮಾಧವಾಚಾರ್ಯರ ಮುಖದಿಂದ ಭವಿಷ್ಯಕಥನವನ್ನು ಹೇಳಿಸಿದ್ದರು. ಇದು ಗಳಗನಾಥರ ಅನುದಾರ ವೃತ್ತಿ ಎಂದು 1975ರ ನಾವು ಕರೆಯಬಹುದು. ಆದರೆ 1920ರ ಕಾಲವನ್ನು ನಾವು ನೆನೆದರೆ. ಗಳಗನಾಥರ ಸನಾತನ ಧರ್ಮಾಭಿಮಾನ–ಶ್ರದ್ಧೆಗಳು ನಮಗೆ ಅರ್ಥವಾಗಬಹುದು.

ಹೀಗೆ ಗಳಗನಾಥರ ಕಾದಂಬರಿಗಳ ಅಭ್ಯಾಸದಿಂದ ಅವರ ಜೀವನ ದೃಷ್ಟಿಯನ್ನು ಅರಿತುಕೊಳ್ಳಲು ಸಾಧ್ಯವಿದೆ. ಕಾದಂಬರಿಕಾರನು ತಾನು ಸೃಷ್ಟಿಸಿದ ಪಾತ್ರ, ಸನ್ನಿವೇಶ, ವಾತಾವರಣಗಳಲ್ಲಿ ತನ್ನನ್ನೇ ತಾನು ಚಿತ್ರಿಸಿಕೊಂಡಿರುತ್ತಾನೆ–ಎಂದು ಖ್ಯಾತ ಆಂಗ್ಲ ಕಾದಂಬರಿಕಾರನಾದ ಸಮರಸೆಟ್ ಮಾಮ್ ಒಂದೆಡೆ ಹೇಳಿರುವನು.[1] ಉನ್ನತ ಮಟ್ಟದ ಕಾದಂಬರಿಕಾರನಲ್ಲಿ ತನ್ನನ್ನು ಚಿತ್ರಿಸುವ– ಅಂದರೆ ತನ್ನ ಜೀವನದರ್ಶನವನ್ನು ಪ್ರತಿಬಿಂಬಿಸುವ– ಕಾರ್ಯವು ಅತ್ಯಂತ ಸೂಚ್ಯವಾಗಿ, ಕಲಾತ್ಮಕವಾಗಿ ನಡೆದಿರುತ್ತದೆ. ಗಳಗನಾಥರು ಅಂಥ ಉಚ್ಚ ಮಟ್ಟದ ಕಾದಂಬರಿಕಾರರಲ್ಲ, ಅಲ್ಲದೆ ಅವರದು ಶುದ್ಧ ಕಲಾದೃಷ್ಟಿಯೂ ಅಲ್ಲ. ಆದ್ದರಿಂದ ಅವರ ಕಾದಂಬರಿಗಳಲ್ಲಿ ಅವರು ತಮ್ಮ ಜೀವನ ದೃಷ್ಟಿಯನ್ನು ಬಿಚ್ಚುಮಾತುಗಳಲ್ಲಿಯೇ ಹೇಳಿರುವರು.

ಅಲ್ಲದೆ ರೋಮ್ಯಾಂಟಿಕ್ ಯುಗದ ಕಾದಂಬರಿಗಳಲ್ಲಿ ಇದೊಂದು ದೋಷವೆಂದು ಅಷ್ಟಾಗಿ ಪರಿಗಣಿತವಾಗಲೂ ಇಲ್ಲ. ಆ ಕಾಲದ ಕಥೆ–ಕಾದಂಬರಿ–ಕಾವ್ಯಗಳಲ್ಲೆಲ್ಲ ಲೇಖಕರು ತಮಗೆ ಹೇಳಬೇಕಾದುದನ್ನು ಸಾಕಷ್ಟು ನೇರವಾಗಿ ಸೂಚಿಸುತ್ತಿದ್ದರು. ಆದರೆ ಗಳಗನಾಥರಲ್ಲಿ ಅದು ಇನ್ನೂ ಸ್ಪಷ್ಟವಾಗಿ ಬಂದಿದೆ. "ಉತ್ತಮ ಕಾದಂಬರಿಕಾರ ಪಾತ್ರ, ಸನ್ನಿವೇಶ, ಪರಿಸರಗಳ ಮೂಲಕವಾಗಿಯೇ ತನ್ನ ವೈಚಾರಿಕತೆಯ ಶಕ್ತಿ ನಮಗೆ ಅರಿವಾಗುವಂತೆ ಮಾಡುತ್ತಾನೆ."[2] ನಿಜ; ಈ ಮಾನದಂಡದಿಂದ ನೋಡಿದಾಗ ತಮ್ಮ ನೈತಿಕ, ಧಾರ್ಮಿಕ ವಿಚಾರಗಳನ್ನು ಕಾದಂಬರಿಯ ಪಾತ್ರ, ಸನ್ನಿವೇಶ ಮೊದಲಾದವುಗಳ ಮುಖಾಂತರವಾಗಿ ಪ್ರಕಟಿಸುವುದಕ್ಕಿಂತ ಹೆಚ್ಚಾಗಿ, ಅಲ್ಲಲ್ಲಿ ತಾವೇ ವ್ಯಾಖ್ಯಾನಿಸುವ ಗಳಗನಾಥರನ್ನು ಶ್ರೇಷ್ಠ ಕಾದಂಬರಿಕಾರರೆಂದು ಕರೆಯುವುದು ಕಠಿಣ.

ಅವರು ಆರಂಭಿಸಿದ ಎರಡು ಮಾಸಪತ್ರಿಕೆಗಳ ಹೆಸರುಗಳೂ ಕೂಡ ಅವರ ಈ ಮನೋ

1. W. Somerset Maugham : The Summing up, page 183
2. ಜಿ. ಬಿ. ಜೋಶಿ (ಸಂ) : ಮನ್ವಂತರ 7ರಲ್ಲಿ ಗಿರಡ್ಡಿ ಗೋವಿಂದರಾಜ, 'ಕಾದಂಬರಿಯಲ್ಲಿ ವೈಚಾರಿಕತೆ', ಪುಟ 39

ಧರ್ಮ ಸೂಚಕವೇ ಆಗಿವೆಯೆನ್ನಬಹುದು. 'ಸದ್ಬೋಧ ಚಂದ್ರಿಕೆ'ಯು ಬೋಧಿಸಬೇಕೆಂದೂ, ಒಳ್ಳೆಯದನ್ನೇ ಬೋಧಿಸಬೇಕೆಂದೂ ಹೊರಟ ಗಳಗನಾಥರ ಮನೋಧರ್ಮವನ್ನು ಸೂಚಿಸಿದರೆ, ಅದಕ್ಕಾಗಿ ಗುರುವಿನ ಆವಶ್ಯಕತೆಯನ್ನೂ, ಗುರುವಿನಿಂದಲೇ ಮಾನವನ ಉದ್ಧಾರವೆಂಬುದನ್ನೂ ಅವರ 'ಸದ್ಗುರು'ವು ಸೂಚಿಸುತ್ತದೆ.

ಹೀಗೆ ಗಳಗನಾಥರ ಕಾದಂಬರಿಗಳಲ್ಲಿಯೂ ಅವರ ಇತರ ಗ್ರಂಥಗಳಲ್ಲಿಯೂ ವ್ಯಕ್ತವಾದ ಅವರ ಜೀವನದರ್ಶನವನ್ನು 'ನೈತಿಕ' ಮತ್ತು ವಿಶಾಲಾರ್ಥದಲ್ಲಿ 'ಧಾರ್ಮಿಕ' ಎಂಬೆರಡು ಪದ ಗಳಿಂದ ಸೂಚಿಸಿ, ಅವರ ವ್ಯಕ್ತಿತ್ವದಲ್ಲಿಯ ಬೋಧಕನ ತೀವ್ರ ಕಳಕಳಿಯನ್ನು ಗುರುತಿಸಬಹುದು. ಶಿಕ್ಷಕರಾಗಿ ಜೀವನವನ್ನು ಆರಂಭಿಸಿದ ಗಳಗನಾಥರು ಕಡೆತನಕ ಬೋಧನೆಯನ್ನೇ ಮಾಡಿದರು. ಶಿಕ್ಷಕರಾಗಿ ಶಾಲೆಯ ವಿದ್ಯಾರ್ಥಿಗಳಿಗೆ ಬೋಧಿಸಿದರು, ಲೇಖಕರಾಗಿ ಇಡೀ ಕನ್ನಡ ಸಮಾಜಕ್ಕೇ ಬೋಧಿಸಿದರು. ಉಪನ್ಯಾಸವೀಯಬೇಕೆಂದಿದ್ದ ಕೈಲಾಸಂ ಅವರು ನಾಟಕಗಳನ್ನು ಬರೆದಂತೆ, ಬೋಧಿಸಬೇಕೆಂದಿದ್ದ ಗಳಗನಾಥರು ಕಾದಂಬರಿಗಳನ್ನು ಬರೆದರು.

# ಬಿ. ವೆಂಕಟಾಚಾರ್ಯರು ಮತ್ತು ಗಳಗನಾಥರು

ಗಳಗನಾಥರಂತೆಯೇ ಕಾದಂಬರೀ ಪಿತಾಮಹರೆಂದು ಕರೆಯಿಸಿಕೊಳ್ಳಲು ಅರ್ಹರಾದವರು ಬಿ. ವೆಂಕಟಾಚಾರ್ಯರು. ಈ ಇಬ್ಬರಲ್ಲಿ ಅನೇಕ ಸಾದೃಶ್ಯಗಳಿವೆ; ವೈದೃಶ್ಯಗಳೂ ಇಲ್ಲದಿಲ್ಲ. ಕನ್ನಡ ಕಾದಂಬರೀ ಸಾಹಿತ್ಯದ ಇತಿಹಾಸದಲ್ಲಿ ಇವರಿಬ್ಬರ ಹೆಸರುಗಳು ಜೊತೆಜೊತೆಯಾಗಿಯೇ ಉಲ್ಲೇಖನೀಯವಾಗಿವೆ. ಅದಕ್ಕೇ, ಹಲವು ಪಂಡಿತರು ಇವರಿಬ್ಬರ ಕನ್ನಡದ ಸೇವೆಯನ್ನು ಒಂದೇ ಉಸಿರಿನಲ್ಲಿ ನೆನೆದಿರುವರು.

ಕನ್ನಡ ಐತಿಹಾಸಿಕ ಕಾದಂಬರಿಗಳನ್ನು ಕುರಿತು, ಬರೆಯುತ್ತ ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು, "ಈ ಸಾಹಿತ್ಯ ವಿಶೇಷವನ್ನು ಕನ್ನಡದಲ್ಲಿ ಪ್ರಚಾರಕ್ಕೆ ತಂದವರು ಮ. ವೆಂಕಟಾಚಾರ್ಯರು. ನಮ್ಮ ಕಡೆ (ಮೈಸೂರು ಪ್ರಾಂತದಲ್ಲಿ) ಇಷ್ಟು ಪ್ರಸಿದ್ಧರಲ್ಲದಿದ್ದರೂ ಅಷ್ಟೇ ಪ್ರಸಿದ್ಧಿಗೆ ಯೋಗ್ಯರಾದವರು ಮತ್ತೊಬ್ಬರು ಇದ್ದಾರೆ. ಇವರು ಮ. ವೆಂಕಟೇಶ ತಿರಕೋ ಕುಲಕರ್ಣಿ (ಗಳಗನಾಥ) ಎಂಬವರು"[1] ಎಂದು ಹೇಳಿದ್ದಾರೆ.

ಡಾ. ರಂ. ಶ್ರೀ ಮುಗಳಿಯವರು ಸಹ ಹೀಗೆಯೇ ಇಬ್ಬರ ಹೆಸರನ್ನೂ ಒಮ್ಮೆಗೇ ಸ್ಮರಿಸಿದ್ದಾರೆ. "ಚಿರಸ್ಮರಣೀಯರಾದ ಬಿ. ವೆಂಕಟಾಚಾರ್ಯರೂ, ಗಳಗನಾಥರೂ ಬಂಗಾಲಿ ಮರಾಠಿ ಸಾಹಿತ್ಯ ಭಂಡಾರದಿಂದ ಬೆಲೆಯುಳ್ಳ ಕೃತಿಗಳನ್ನು ತಂದು, ತೆರವಾಗಿದ್ದ ಕನ್ನಡದ ಕಣಜವನ್ನು ರಾಸಿಯಾಗಿ ತುಂಬಿದರು. ಭಾಷಾಂತರಿತ ಕಾದಂಬರಿಗಳೇ ಹೊಸಗನ್ನಡದ ಮೊದಲಗಿತ್ತಿಯರಂತೆ ಮೆರೆದುವು. ಹೊಸ ಅಭಿರುಚಿಗೆ ಅವೇ ಕಾರಣವಾದುವು."[2]

ಹೀಗೆ ಕನ್ನಡ ಕಾದಂಬರಿಗಳನ್ನು ಕುರಿತು ಬರೆದವರೆಲ್ಲರೂ ಪ್ರಾರಂಭದ ಆಚಾರ್ಯ ಪುರುಷರಂತಿದ್ದ ಬಿ. ವೆಂಕಟಾಚಾರ್ಯರನ್ನೂ ಗಳಗನಾಥರನ್ನೂ ಕೂಡಿಯೇ ಸ್ಮರಿಸಿ, ಅವರ ಕಾದಂಬರಿಗಳ ಗುಣದೋಷಗಳನ್ನೂ, ಅವು ಕನ್ನಡಿಗರಲ್ಲಿ ಉಂಟುಮಾಡಿದ ಪ್ರಭಾವವನ್ನೂ ತಪ್ಪದೇ ನೆನೆದಿರುವರು.

"ಕನ್ನಡ ಕಾದಂಬರೀ ಪ್ರವರ್ತಕರೆಂಬ ಹೆಸರನ್ನು ವಿಮರ್ಶಕರು ಬೇರೆ ಬೇರೆ ಅರ್ಥದಲ್ಲಿ ಬೇರೆ ಬೇರೆ ಲೇಖಕರಿಗೆ ಅನ್ವಯಿಸುತ್ತಾರೆ. ಕನ್ನಡದ ಮೊದಲ ಸ್ವತಂತ್ರ ಕಾದಂಬರಿ 'ಇಂದಿರಾಬಾಯಿ'ಯನ್ನು ಬರೆದರೆಂದು ಶ್ರೀ ಗುಳವಾಡಿ ವೆಂಕಟರಾಯರಿಗೆ ಆ ಕೀರ್ತಿಯನ್ನು ಕೆಲವರು ಸಲ್ಲಿಸುತ್ತಾರೆ. ಕನ್ನಡತನವನ್ನು ತಮ್ಮ ಕಾದಂಬರಿಗಳಲ್ಲಿ ಪ್ರದರ್ಶಿಸಿದರೆಂದು ಶ್ರೀ ಎಂ. ಎಸ್. ಪುಟ್ಟಣ್ಣನವರಿಗೆ ಗೌರವವನ್ನು ಸಲ್ಲಿಸುವವರು ಮತ್ತೆ ಕೆಲವರು. ಶ್ರೀ ಬಿ. ವೆಂಕಟಾಚಾರ್ಯರು

1. ಎ, ಆರ್. ಕೃಷ್ಣಶಾಸ್ತ್ರೀ : ಭಾಷಣಗಳು ಮತ್ತು ಲೇಖನಗಳು, ಪುಟ 230
2. ರಂ. ಶ್ರೀ. ಮುಗಳಿ : 'ಕನ್ನಡ ಕಾದಂಬರಿಗಳು', ಸಾಹಿತ್ಯೋಪಾಸನೆ, ಪುಟ 40

ವಂಗಭಾಷೆಯಿಂದ ಅನೇಕ ಗ್ರಂಥಗಳನ್ನು ಅನುವಾದ ಮಾಡಿ ಕಾದಂಬರಿಯ ಮಾರ್ಗವನ್ನು ಸಮೆದರೆಂದು ಅವರಿಗೂ ಈ ಮನ್ನಣೆ ಸಂದಿದೆ. ಶ್ರೀ ಗಳಗನಾಥರ ಹೆಸರಿಗೂ ಈ ಕೀರ್ತಿಯು ಹೊಂದಿಕೊಂಡಿದೆ.. ವೆಂಕಟಾಚಾರ್ಯರು ತಮ್ಮ ಮೊದಲ ಅನುವಾದವನ್ನು ಮಾಡಿದುದು ಸುಮಾರು 1880ರಲ್ಲಿ.[1] ಎಂ. ಎಸ್. ಪುಟ್ಟಣ್ಣನವರೂ ಗಳಗನಾಥರೂ ಕಾಲಮಾನದಲ್ಲಿ ಈಚಿನವರು. ಆದರೆ ಅವರ ಗ್ರಂಥಗಳ ಪರಿಣಾಮಗಳು ಅಗಾಧವಾಗಿವೆ. ಈ ಕಾರಣಗಳಿಂದ ಇವರೆಲ್ಲರೂ ನಮಗೆ ಗೌರವಾರ್ಹರಾಗಿದ್ದಾರೆ"[2] ಎಂದು ಶ್ರೀ ವೆಂಕಟಸುಬ್ಬಯ್ಯನವರು ವೆಂಕಟಾಚಾರ್ಯರನ್ನೂ ಗಳಗನಾಥರನ್ನೂ ಕನ್ನಡ ಕಾದಂಬರೀ ಪ್ರವರ್ತಕರಲ್ಲಿ ಸೇರಿಸಿರುವರು.

ಗುಳವಾಡಿಯವರಂತೆ, ಪುಟ್ಟಣ್ಣನವರಂತೆ ಇವರಿಬ್ಬರೂ ಸ್ವತಂತ್ರ, ಸಾಮಾಜಿಕ ಕಾದಂಬರಿಗಳನ್ನು ಬರೆಯಲಿಲ್ಲವಾದರೂ, ಕನ್ನಡದಲ್ಲಿ ಕಾದಂಬರೀ ಸಾಹಿತ್ಯವನ್ನು ಪ್ರಚಾರಕ್ಕೆ ತಂದವರೇ ಇವರಿಬ್ಬರು. ಆದ್ದರಿಂದಲೇ ಇವರಿಬ್ಬರ ಹೆಸರುಗಳೂ ಜೊತೆಜೊತೆಯಾಗಿಯೇ ಉಕ್ತವಾಗಿರುವದು ಉಚಿತವಾಗಿದೆ.

'ಗಳಗನಾಥರು ಮತ್ತು ಅವರ ಕಾದಂಬರಿಗಳು' ಎಂಬ ಈ ಪ್ರಬಂಧದಲ್ಲಿ ಬಿ. ವೆಂಕಟಾಚಾರ್ಯರನ್ನೂ ಅವರ ಕಾದಂಬರಿಗಳನ್ನೂ ಕುರಿತು ಪ್ರಸ್ತಾಪಿಸುವುದು ಆ ದೃಷ್ಟಿಯಿಂದ ಉಚಿತವೂ ಆಗಿದೆ, ಆವಶ್ಯಕವೂ ಆಗಿದೆ.

ವೆಂಕಟಾಚಾರ್ಯರು ಗಳಗನಾಥರಿಗಿಂತ ತುಸು ಹಿರಿಯರು. ಬಿಂಡಿಗನವಲೆ ಗರುಡಾಚಾರ್ಯರ ಮಕ್ಕಳಾದ ವೆಂಕಟಾಚಾರ್ಯರ ಜನನ 1845ರಲ್ಲಿ ವೇದಪಂಡಿತರಾದ ಗರುಡಾಚಾರ್ಯರಿಂದ ವೆಂಕಟಾಚಾರ್ಯರಿಗೆ ಬಾಲ್ಯದಲ್ಲಿಯೇ ಸಂಸ್ಕೃತ ಅಭ್ಯಾಸದ ದೀಕ್ಷೆ ಲಭಿಸಿದ್ದರೂ, ಅವರು ಆಂಗ್ಲ ಭಾಷೆಯಲ್ಲಿಯೂ ಶಿಕ್ಷಣವನ್ನು ಪಡೆದು ಸರಕಾರೀ ಕಚೇರಿಯಲ್ಲಿ ಕೆಲಸಕ್ಕೆ ಸೇರಿಕೊಂಡರು. ಗುಮಾಸ್ತರಾಗಿ ಸೇರಿಕೊಂಡ ವೆಂಕಟಾಚಾರ್ಯರು 'ಅಕೌಂಟಂಟ'ರಾದರು, 'ಹೆಡ್ ಮುನಶಿ' ಆದರು, ಕೊನೆಗೆ 1902ರಲ್ಲಿ ಒಂದನೆಯ ವರ್ಗದ 'ಮುನಸೀಫ್'ಹುದ್ದೆಯಿಂದ ನಿವೃತ್ತರಾದರು.

ಹೀಗೆ ಸರಕಾರಿ ಸೇವೆಯಲ್ಲಿದ್ದ ವೆಂಕಟಾಚಾರ್ಯರು ಸಾಹಿತ್ಯ ಸೇವೆಯಲ್ಲಿ ತೊಡಗಿದುದು ಒಂದು ಅಕಲ್ಪಿತ ಯೋಗಾಯೋಗವೇ ಸರಿ. "ವಂಗಭಾಷೆಯ ಬಗ್ಗೆ ಅವರ ಆಸಕ್ತಿಯನ್ನು ಕೆರಳಿಸಿದ ಒಂದು ಸಂಗತಿಯೂ ಕೇಳಿಕೆಯಲ್ಲಿದೆ. ಕಲಕತ್ತೆಯಿಂದ ಅವರು ಕೆಲವು ಔಷಧಿಗಳನ್ನು ತರಿಸಿದ್ದರು. ಅವುಗಳನ್ನು ಸುತ್ತಿದ್ದು ವಂಗಭಾಷೆಯ ಹಳೆಯ ಕಾಗದದಲ್ಲಿ. ಆ ಲಿಪಿ ವೆಂಕಟಾಚಾರ್ಯರ ಮನಸ್ಸನ್ನು ಆಕರ್ಷಿಸಿತಂತೆ. ವಂಗಭಾಷೆಯನ್ನು ಕಲಿಯಬೇಕೆಂಬ ಆಶೆ ಅವರಲ್ಲಿ ಮೂಡಿದ್ದು ಆಗ;"[3]

1874–75ರಲ್ಲಿ ವೆಂಕಟಾಚಾರ್ಯರು ಶಿವಮೊಗ್ಗದಲ್ಲಿ ಹೆಡ್ ಮುನ್ಶಿ ಕೆಲಸದಲ್ಲಿದ್ದರು, ಆಗ ಅಲ್ಲಿ ಶಿರಸ್ತೇದಾರರಾಗಿದ್ದ ಬಿ. ಸತ್ಯನಾರಾಯಣ ಅಯ್ಯಂಗಾರ ಎಂಬವರು ಕೆಲವು

---

1. ಇದು ಸರಿಯಲ್ಲ; ಅವರ ಮೊದಲ ಭಾಷಾಂತರ 1876ರಲ್ಲಿ ಪ್ರಕಟವಾಗಿದೆ.
2. ಜಿ. ವೆಂಕಟಸುಬ್ಬಯ್ಯ : 'ಬಿ. ವೆಂಕಟಾಚಾರ್ಯರು,' ಜೀವನ, 24-2 (ಜೂನ-1963), ಪುಟ 45
3. ವೆಂಕಟೇಶ ಸಾಂಗಲಿ : 'ಕರ್ನಾಟಕದ ಬಂಕಿಮಚಂದ್ರ ಬಿ. ವೆಂಕಟಾಚಾರ್ಯರು,' ಕರ್ಮವೀರ, 6–7–1969

ಬಂಗಾಲಿ ಗ್ರಂಥಗಳನ್ನು ತರಿಸಿ ವೆಂಕಟಾಚಾರ್ಯರಿಗೆ ಕೊಟ್ಟರು. ಮುಂದೆ ವೆಂಕಟಾಚಾರ್ಯರು ಸುಪ್ರಸಿದ್ಧ ವಿದ್ವಾಂಸರಾದ ಈಶ್ವರಚಂದ್ರ ವಿದ್ಯಾಸಾಗರ ಅವರ ಜೊತೆಗೆ ಇಂಗ್ಲೀಷಿನಲ್ಲಿ ಪತ್ರ ವ್ಯವಹಾರ ನಡೆಸಿ ಬಂಗಾಲಿ ಭಾಷೆಯನ್ನು ಕಲಿತುಕೊಂಡರು. "ಕೇವಲ ಆರು ತಿಂಗಳಲ್ಲೇ ಶ್ರೀ ವೆಂಕಟಾಚಾರ್ಯರು ಬಂಗಾಳಿ ಭಾಷೆಯಲ್ಲಿ ಸಾಕಷ್ಟು ವ್ಯುತ್ಪತ್ತಿ ಪಡೆಯಲು ಈಶ್ವರಚಂದ್ರ ವಿದ್ಯಾಸಾಗರರು ಸಹಾಯ ಮಾಡಿದರು. ಮತ್ತೆ ತಾವು ರಚಿಸಿದ್ದ 'ಭ್ರಾಂತಿವಿಲಾಸ' ಎಂಬ ಬಂಗಾಳೀಭಾಷಾ ಕಾದಂಬರೀ ಗ್ರಂಥವನ್ನು ಶ್ರೀ ವೆಂಕಟಾಚಾರ್ಯರಿಗೆ ಕಳುಹಿಸಿಕೊಟ್ಟರು."[1]

ವೆಂಕಟಾಚಾರ್ಯರು ಏಕಲವ್ಯನಂತೆ ಗುರುಭಕ್ತಿಯಿಂದ ಬಂಗಾಳಿಯನ್ನು ಕಲಿತರು. ಅದೇ ಭಕ್ತಿಯಿಂದ ತಮ್ಮ ಗುರುಗಳ 'ಭ್ರಾಂತಿವಿಲಾಸ'ವನ್ನು ಅವರು ಕನ್ನಡಕ್ಕೆ 1876ರಲ್ಲಿ ಪರಿವರ್ತಿಸಿದರು. ಅದನ್ನು ಕಂಡು ಸುಪ್ರೀತರಾದ ವಿದ್ಯಾಸಾಗರರು ತಮ್ಮ ಅನೇಕ ಗ್ರಂಥಗಳನ್ನು ವೆಂಕಟಾಚಾರ್ಯರಿಗೆ ಕಳುಹಿಸಿಕೊಟ್ಟು ಭಾಷಾಂತರಿಸುವಂತೆ ಪ್ರೋತ್ಸಾಹಿಸಿದರು.

"ಆಗ ಜನರಿಗೆ ಕನ್ನಡ ಸಾಹಿತ್ಯದಲ್ಲಿ ಉತ್ಸಾಹ ಕಡಿಮೆಯಾಗಿದ್ದಿತು. ಜನಸಾಮಾನ್ಯರ ಮನಸ್ಸನ್ನು ಭಾಷಾಸಾಹಿತ್ಯದ ಕಡೆಗೆ ಸೆಳೆಯಲು ಕಾದಂಬರಿಗಳ ಮೂಲಕವೇ ಸಾಧ್ಯವೆಂದು ಶ್ರೀ ವೆಂಕಟಾಚಾರ್ಯರಿಗೆ ಮನದಟ್ಟಾಯಿತು. ಆಗ ಕನ್ನಡದಲ್ಲಿ ಕಾದಂಬರಿಗಳು ತೀರ ವಿರಳವಾಗಿದ್ದುವು. ಅವರು ಕನ್ನಡ ಕಾದಂಬರೀ ಲೇಖಕರಲ್ಲಿ ಪ್ರಪ್ರಥಮ ಸಾಹಸಿಗಳಂತೆ ಶ್ರಮಪಡಬೇಕಾಗಿ ಬಂತು."[2]

ಆದರೆ 'ಭ್ರಾಂತಿವಿಲಾಸ'ದ ನಾವೀನ್ಯವು ಕನ್ನಡಿಗರನ್ನು ಆಕರ್ಷಿಸಿತು. ಅಷ್ಟೇ ಅಲ್ಲದೆ, ಅದು ಮದ್ರಾಸ ವಿಶ್ವವಿದ್ಯಾಲಯದ ಅನೇಕ ಪರೀಕ್ಷೆಗಳಿಗೆ ಪಠ್ಯವೂ ಆಯಿತು. ಅದರಿಂದ ವೆಂಕಟಾಚಾರ್ಯರು ಇನ್ನೂ ಪ್ರೋತ್ಸಾಹಿತರಾಗಿ, ವಿದ್ಯಾಸಾಗರರ 'ಸೀತಾವನವಾಸ' ಮತ್ತು 'ಶಾಕುಂತಳ'ಗಳನ್ನೂ ಕನ್ನಡಕ್ಕೆ ಭಾಷಾಂತರಿಸಿದರು. 'ಭ್ರಾಂತಿವಿಲಾಸ'ವು ಶೇಕ್ಸಪಿಯರನ 'ಕಾಮೆಡಿ ಆಫ್ ಎರರ್ಸ್'ದ ಗದ್ಯರೂಪಾನುವಾದವು. ಅದು ವೆಂಕಟಾಚಾರ್ಯರಿಗೆ ಒಳ್ಳೆ ಆಕರ್ಷಕವಾಗಿ ಕಂಡಿತ್ತು. "ಅದನ್ನು ನಾನು ನೋಡುವಲ್ಲಿ ಬಹಳ ಚಮತ್ಕಾರಯುಕ್ತವಾಗಿಯೂ, ಭ್ರಾಂತಿಪೋಷಕವಾದ ಅದರೊಳಗಣ ಪ್ರತಿ ಸಂದರ್ಭವೂ ಅತಿ ಚಿತ್ರವಾಗಿಯೂ, ಕಾಣಬರಲು ಅದು ಈ ದೇಶೀಯರಿಗೆ ಓದುವುದಕ್ಕೆ ಯೋಗ್ಯವಾಗಿರುವುದೆಂದು ಯೋಚಿಸಿ ಕನ್ನಡದಲ್ಲಿ ಬರೆದೆನು" ಎಂದು ಅವರು ಪೀಠಿಕೆಯಲ್ಲಿ ಹೇಳಿರುವರು. ಆದರೆ 'ಭ್ರಾಂತಿವಿಲಾಸ'ವನ್ನು ಕಾದಂಬರಿ ಎಂದು ಕರೆಯುವುದು ಅಷ್ಟು ಸಮಂಜಸವಾಗಲಾರದು.

ವೆಂಕಟಾಚಾರ್ಯರು ಭಾಷಾಂತರಿಸಿದ ನಿಜವಾದ ಮೊದಲ ಕಾದಂಬರಿಯೆಂದರೆ ಬಂಕಿಮಚಂದ್ರರ 'ದುರ್ಗೇಶ ನಂದಿನಿ'. 1885ರಲ್ಲಿ ಅದನ್ನು ಭಾಷಾಂತರಿಸಿದ ವೆಂಕಟಾಚಾರ್ಯರು 'ವಿಜ್ಞಾಪನೆ'ಯಲ್ಲಿ ಕಾದಂಬರೀ ಸಾಹಿತ್ಯದ ಬಗ್ಗೆ, ಅದು ಆಂಗ್ಲಭಾಷೆಯಲ್ಲಿ ಬೆಳೆದ ಬಗ್ಗೆ, ಬಂಕಿಮಚಂದ್ರರ ಬಗ್ಗೆ, ಕನ್ನಡ ಭಾಷೆಯ ಅಂದಿನ ಸ್ಥಿತಿಯ ಬಗ್ಗೆ ಅನೇಕ ಮಾತುಗಳನ್ನು ಹೇಳಿರುವರು.

---

1. ಜಯಂತಿ, 15-10 (ಮಾರ್ಚ 1953)ರಲ್ಲಿ 'ಸಾಹಿತ್ಯವಿಹಾರ'ದಲ್ಲಿ "ವೆಂಕಟಾಚಾರ್ಯರು ಬಂಗಾಳಿಯನ್ನು ಕಲಿತುದು ಹೇಗೆ" ಎಂಬ ಲೇಖ, ಪುಟ 398–400
2. ಅದೇ, ಪುಟ 399

"ನಾವೆಲ್ ಎಂದರೆ ಉಪನ್ಯಾಸವು. ನಾವೆಲ್ ಎಂಬುದು ಇಂಗ್ಲೀಷಿನಲ್ಲೊಂದು ಸಾಹಿತ್ಯ ವಿಶೇಷವು. ಈಚೆಗೆ ಸ್ವಲ್ಪಕಾಲದಿಂದ ಅದರ ಪ್ರಾಬಲ್ಯವುಂಟಾಯಿತು....ಇಂಗ್ಲಾಂಡು ದೇಶದಲ್ಲಿ ಪ್ರಥಮತಃ ಫೀಲ್ಡಿಂಗ್, ಸರ್ ವಾಲ್ಟರ ಸ್ಕಾಟ್ ಎಂಬವರು ಹೊಸ ಪದ್ಧತಿಯನ್ನವಲಂಬಿಸಿ, ನಾವೆಲುಗಳನ್ನು ಬರೆದರು. ತದಾರಭ್ಯ ಇಂಗ್ಲೀಷು ಸಾಹಿತ್ಯದಲ್ಲಿ ನಾವೆಲಯುಗವು ಪ್ರಾರಂಭವಾಯಿತು. ಬಳಿಕ ಇತರ ಅನೇಕ ಲೇಖಕರು ನಾವೆಲಗಳನ್ನು ಬರೆಯಲು ಪ್ರಾರಂಭಿಸಿ, ಈಗ ಇಂಗ್ಲೀಷು ಭಾಷೆಯಲ್ಲಿ ನಾವೆಲುಗಳು ಅಸಂಖ್ಯಾತವಾಗಿ ನಕ್ಷತ್ರಗಳಂತೆ ತುಂಬಿವೆ.... ಇಂಗ್ಲೀಷು ಸಾಹಿತ್ಯ ಪ್ರಭಾವದಿಂದ ಈಗ್ಗೆ ಪ್ರಾಯಶಃ 50 ವರ್ಷಗಳಿಂದ ವಂಗಭಾಷೆಯು ಸಾಹಿತ್ಯದಲ್ಲಿಯೂ ಸಂಪೂರ್ಣವಾದ ಬದಲಾವಣೆಗಳುಂಟಾಗಿವೆ."[1]

"ನಮ್ಮೀ ಕರ್ನಾಟಕ ದೇಶದಲ್ಲಿ ಇಂಗ್ಲೀಷು ಭಾಷೆಯು ಪ್ರಾಚುರ್ಯವು ಕಡಿಮೆಯಾಗಿಲ್ಲದಿದ್ದರೂ ದೇಶಭಾಷೆಯು ಮಾತ್ರ ಹಿಂದುಸ್ತಾನ ದೇಶದ ಇತರ ದೇಶಗಳಂತೆ ಕಾಲಾನುಗುಣ್ಯವಾದ ವೃದ್ಧಿಯನ್ನು ಹೊಂದದಿರುವುದು ಕೇವಲ ವಿಷಾದಕ್ಕೆ ಕಾರಣವಾಗಿದೆ....ನಮ್ಮಲ್ಲಿ ಇಂಗ್ಲೀಷು ಭಾಷಾಭಿಜ್ಞರಾದವರು ತಾವು ಓದುವ ವಿದ್ಯಾಲಯದ ಉಪಾಧಿಗಳನ್ನು ಸಂಪಾದಿಸಿಬಿಟ್ಟರೆ ಕೃತಕಾರ್ಯರಾದೆವೆಂದು ತಿಳಿದುಕೊಂಡು ತಟಸ್ಥರಾಗಿ, ದೇಶಭಾಷೆಯ ಅಭಿವೃದ್ಧಿಯ ವಿಚಾರದಲ್ಲಿ ಸ್ವಲ್ಪವೂ ಲಕ್ಷಕೊಡದೆ ಉದಾಸೀನರಾಗಿರುವುದೇ ಶೋಚನೀಯವಾದೀ ಸ್ಥಿತಿಗೆ ಕಾರಣವೆಂದು ತೋರುತ್ತದೆ."[2]

ಆಂಗ್ಲ ವಿದ್ಯಾಭ್ಯಾಸ ಮಾಡಿದವರಿಂದಲೇ ಕನ್ನಡದ ಉದ್ಧಾರ ಸಾಧ್ಯವೆಂದು ವೆಂಕಟಾಚಾರ್ಯರು ಬಲವಾಗಿ ಪ್ರತಿಪಾದಿಸಿ, ಅವರನ್ನು ಆ ಕಾರ್ಯಕ್ಕೆ ಪ್ರೋತ್ಸಾಹಿಸಿರುವರು. ಅಲ್ಲದೆ. "ನಮ್ಮ ಸಂಸ್ಕೃತ ಪಂಡಿತರಿಂದೀ ಕಾರ್ಯಸಾಧನೆಯಾಗುವದೆಂದು ನಿರೀಕ್ಷಿಸಕೂಡದು.... ಅತಏವ, ಇಂಗ್ಲೀಷಿನಲ್ಲಿ ಪಾರಾಂಗತರಾದ ಪಂಡಿತರಿಂದಲೇ ಈ ಕಾರ್ಯಸಿದ್ಧಿಯಾಗಬೇಕು"[3] ಎಂದು ಮತ್ತೊಮ್ಮೆ ಒತ್ತಿ ಹೇಳಿರುವರು.

ಕಾದಂಬರಿಗಳನ್ನು ಕುರಿತು "ನಾವೆಲ ಎಂಬುದು ಸಮಾಜದ ಹಾಗು ಮನುಷ್ಯ ಚರಿತ್ರೆಯ ಪ್ರತಿಚಿತ್ರವಾಗಿ ಪ್ರತಿ ಒಬ್ಬ ಪಾಠಕರ ಮನಸ್ಸಿಗೂ ಮುಕುರ ಸ್ವರೂಪವಾಗಿರಬೇಕು. ನಾವೆಲಗಳಾ ಉದ್ದಿಷ್ಟ ಫಲಸಿದ್ಧಿಗೆ ಎಷ್ಟರ ಮಟ್ಟಿಗೆ ಸಾಧಕವಾಗುತ್ತವೆಂಬುದರ ಮೇಲೆ ಅವುಗಳ ಉತ್ಕರ್ಷಾಪಕರ್ಷವನ್ನು ಮಾಡಬೇಕು"[4] ಎಂದು ಹೇಳಿದ ಆಚಾರ್ಯರು, ಮುಂದೆ ಬಂಕಿಮಚಂದ್ರರ ಗುಣಗಾನವನ್ನು ಮಾಡಿ, "ನನ್ನದೊಂದು ಪ್ರಾರ್ಥನೆ:– ನಮ್ಮ ಪಾಠಕ ಮಹಾಶಯರು ನನ್ನೀ ಕನ್ನಡ ಗ್ರಂಥವನ್ನೋದಿ ಮೂಲಗ್ರಂಥದ ಉತ್ಕರ್ಷಾಪಕರ್ಷವನ್ನು ಮಾಡಕೂಡದು. ಏಕೆಂದರೆ ಕನ್ನಡ ಭಾಷೆಯು ವಂಗಭಾಷೆಯು ಹೊಂದಿರುವಷ್ಟು ಉನ್ನತಿಯನ್ನು ಹೊಂದಿಲ್ಲವಲ್ಲದೆ, ಗ್ರಂಥವನ್ನು ರಚನೆಯಂಗೈದೆನಗೆ ಕನ್ನಡದಲ್ಲಿ ಪಾಂಡಿತ್ಯವೂ ಇಲ್ಲ. ನಾನಾ ಗ್ರಂಥಗಳಲ್ಲಿ

1. ಬಿ. ವೆಂಕಟಾಚಾರ್ಯ: ದುರ್ಗೇಶ ನಂದಿನಿ, ವಿಜ್ಞಾಪನೆ, ಪುಟ 9

2. ಅದೇ, ಪುಟ 10

3. ಅದೇ, ಪುಟ 11

4. ಅದೇ, ಪುಟ 12

ಅತ್ಯುತ್ಕೃಷ್ಟವಾದ ವಾಗ್ವಿಜೃಂಭಣೆಯಿಂದ ಸತೇಜವಾಗಿ ಚಿತ್ರಿಸಲ್ಪಟ್ಟಿರುವ ಚಿತ್ರವನ್ನು ಅನುಕರಣ ಮಾಡಲು ಪ್ರಯತ್ನ ಪಟ್ಟಿದ್ದೇನೆ"[1] ಎಂದೂ ನುಡಿದಿರುವರು.

'ಭ್ರಾಂತಿವಿಲಾಸ'ವನ್ನು 1876ರಲ್ಲಿ ಭಾಷಾಂತರಿಸಿದಾಗಲೇ ವೆಂಕಟಾಚಾರ್ಯರು ಕನ್ನಡಿಗರಿಗೆ ಹೊಸ ರುಚಿಯನ್ನು ಉಂಟುಮಾಡಿದ್ದರೂ, 1885ರಲ್ಲಿ 'ದುರ್ಗೇಶ ನಂದಿನಿ'ಯ ಭಾಷಾಂತರದಿಂದ ಅವರು ಒಂದು ಹೊಸ ಯುಗವನ್ನೇ ಆರಂಭಿಸಿದರೆನ್ನಬೇಕು. ಮುಂದೆ ಅವರು ಅನೇಕ ಬಂಗಾಲಿ ಲೇಖಕರ ಕಾದಂಬರಿಗಳನ್ನೂ, ಇತರ ಗ್ರಂಥಗಳನ್ನೂ ಭಾಷಾಂತರಿಸಿದರೂ, ಬಂಕಿಮಚಂದ್ರರ ಕಾದಂಬರಿಗಳೇ ಹೆಚ್ಚು ಪ್ರಾಮುಖ್ಯವನ್ನೂ ಪ್ರಚಾರವನ್ನೂ ಪಡೆದುವು. ವೆಂಕಟಾಚಾರ್ಯರು ಕನ್ನಡ ಜನಕ್ಕೆ ನಾವೆಲುಗಳ ಹುಚ್ಚನ್ನೇ ಹಿಡಿಸಿದರು. ಅವರ ಭಾಷಾಂತರ ಕಾರ್ಯವು ಹಾಗೆಯೇ ಅಖಂಡವಾಗಿ ಸಾಗಿತು. 1902ರಲ್ಲಿ ಸರಕಾರೀ ಕೆಲಸದಿಂದ ನಿವೃತ್ತರಾದ ಅನಂತರ ಕೂಡ ಅವರು ಭಾಷಾಂತರ ಕಾರ್ಯವನ್ನು ಮುಂದುವರಿಸಿದರು.

ಆದರೂ ತಮ್ಮ ಗ್ರಂಥಗಳಿಗೆ ಹೆಚ್ಚಿನ ಪ್ರೋತ್ಸಾಹ ದೊರೆಯಲಿಲ್ಲವೆಂಬ ಕೊರಗಿನ ಧ್ವನಿ ಅವರಿಂದ ಹೊರಟಿದೆ. 1910ರಲ್ಲಿ 'ದುರ್ಗೇಶ ನಂದಿನಿ'ಯ ಎರಡನೆಯ ಆವೃತ್ತಿ ಪ್ರಕಟವಾಯಿತು. ಬಂಕಿಮಚಂದ್ರರು ಆಗಲೇ (1894) ತೀರಿಕೊಂಡರು. ವೆಂಕಟಾಚಾರ್ಯರು 'ವಿಜ್ಞಾಪನೆ'ಯಲ್ಲಿ,

"ಅವರ (ಬಂಕಿಮರ) ಗ್ರಂಥಗಳ ಸ್ವತ್ವಾಧಿಕಾರವನ್ನು 'ವಸುಮತಿ'ಎಂಬ ಪತ್ರಿಕೆಯವರು ಈಗ್ಗೆ ಎರಡು ವರ್ಷಗಳಲ್ಲಿ ಎರಡು ಲಕ್ಷ ರೂಪಾಯಿಗಳ ಬೆಲೆಗೆ ಕೊಂಡುಕೊಂಡಿದ್ದಾರೆ. ಅವರಿಂದಲೇ ಬಂಕಿಮ ಬಾಬೂಯವರ ಗ್ರಂಥಗಳ ಉತ್ಕರ್ಷೆಯನ್ನೂ, ಸ್ವದೇಶಭಾಷಾಸೇವಿಗಳಾದಾದೇಶದವರ ಅಭಿರುಚಿಯನ್ನೂ ಸುಲಭವಾಗಿ ಊಹಿಸಬಹುದು. ಕನ್ನಡಿಗರಲ್ಲಿ ಅಂತಹ ಗ್ರಂಥವನ್ನು ಕಾಸಿಗೆ ಕೊಟ್ಟರೂ ಕೊಂಬುವವರಿಲ್ಲ!! ಇದು ಶೋಚನೀಯವಾದುದೆಂದು ಚಿಂತಾಶೀಲರು ತಿಳಿಯದಿರರು"[2] ಎಂದು ವೆಂಕಟಾಚಾರ್ಯರು ಹೇಳಿರುವುದನ್ನು ಗಮನಿಸಿದರೆ ಕನ್ನಡದಲ್ಲಿ ಪುಸ್ತಕಗಳನ್ನು ಕೊಂಡು ಓದುವವರ ಸಂಖ್ಯೆ ಆಗ ಬಹಳೇ ಕಡಿಮೆಯಾಗಿದ್ದಿತೆಂದು ಅರ್ಥವಾಗುತ್ತದೆ. ಆದರೂ ವೆಂಕಟಾಚಾರ್ಯರ ಕಾದಂಬರಿಗಳು ಹೆಚ್ಚಿನ ಜನಪ್ರಿಯತೆಯನ್ನು ಪಡೆದುವು. ಆದ್ದರಿಂದಲೇ ಅವರು ಅಷ್ಟು ವಿಪುಲ ಸಂಖ್ಯೆಯಲ್ಲಿ ಗ್ರಂಥಗಳನ್ನು ಬರೆಯಲಿಕ್ಕೆ ಸಾಧ್ಯವಾಯಿತು.

ಗಳಗನಾಥರಂತೆ ವೆಂಕಟಾಚಾರ್ಯರ ಕೃತಿಗಳ ಸಂಖ್ಯೆಯೂ ಇನ್ನೂ ಅನಿರ್ಣೀತವಾಗಿಯೇ ಉಳಿದಿದೆ. ಆದರೂ ಡಾ. ಶ್ರೀನಿವಾಸ ಹಾವನೂರ ಅವರು 'ವೆಂಕಟಾಚಾರ್ಯರ ಕೃತಿಗಳು' ಮತ್ತು ಶ್ರೀ ಎಸ್. ಶಿವಣ್ಣ ಅವರು 'ವೆಂಕಟಾಚಾರ್ಯರ ಅನುಕ್ತ ಕೃತಿಗಳು' ಎಂಬ ಲೇಖನಗಳನ್ನು ಬರೆದು ವೆಂಕಟಾಚಾರ್ಯರ ಕೃತಿಗಳನ್ನು ನಿರ್ಣಯಿಸಲು ಯತ್ನಿಸಿರುವರು.[3] ಇವರಿಬ್ಬರು ಮಾಡಿರುವ ಪಟ್ಟಿಯ ಪ್ರಕಾರ ವೆಂಕಟಾಚಾರ್ಯರ ಕೃತಿಗಳು 80ಕ್ಕೂ ಹೆಚ್ಚಾಗಿವೆ. ಇವುಗಳಲ್ಲಿ ಸುಮಾರು 60 ಕಥೆ–ಕಾದಂಬರಿಗಳೇ ಇವೆ. ಇವುಗಳಲ್ಲಿ ಬಂಕಿಮಚಂದ್ರರ ಕಾದಂಬರಿಗಳ

1. ಬಿ. ವೆಂಕಟಾಚಾರ್ಯ : ದುರ್ಗೇಶ ನಂದಿನಿ ವಿಜ್ಞಾಪನೆ ಪುಟ 13
2. ಬಿ. ವೆಂಕಟಾಚಾರ್ಯ : 'ದುರ್ಗೇಶ ನಂದಿನಿ' 2ನೆಯ ಆವೃತ್ತಿಯ (1910) ಪ್ರಸ್ತಾವನೆ
3. 'ಕನ್ನಡ ನುಡಿ' ಎಪ್ರಿಲ–ಮೇ 1969; ಮತ್ತು 'ಕನ್ನಡ ನುಡಿ' ಅಗಷ್ಟ 1969.

ಭಾಷಾಂತರಗಳಾದ 'ಆನಂದ ಮಠ,' 'ಇಂದಿರೆ,' 'ಕಪಾಲ ಕುಂಡಲ,' 'ಕಮಲಾಕಾಂತ,' 'ಕೃಷ್ಣಕಾಂತನ ಉಯಿಲು,' 'ಚಂದ್ರಶೇಖರ,' 'ದುರ್ಗೇಶ ನಂದಿನಿ,' 'ದೇವಿ ಚೌಧುರಾಣಿ,' 'ರಜನೀ,' 'ರಾಜಸಿಂಹ,' 'ವಿಷವೃಕ್ಷ,' 'ಸೀತಾರಾಮ' ಮೊದಲಾದುವುಗಳು ತುಂಬ ಜನಪ್ರಿಯ ವಾದುವು. ಈ ಕಾದಂಬರಿಗಳಿಂದಲೇ ವೆಂಕಟಾಚಾರ್ಯರು ಜನಪ್ರಿಯ ಲೇಖಕರಾದರು.

ಬಂಕಿಮಚಂದ್ರರಲ್ಲದೆ ವೆಂಕಟಾಚಾರ್ಯರು, ನಾಗೇಂದ್ರನಾಥ ಚಟ್ಟೋಪಾಧ್ಯಾಯ, ನನಿಲಾಲ ವಂದ್ಯೋಪಾಧ್ಯಾಯ, ಯೋಗೀಂದ್ರ ಬಸು, ಸತೀಶಚಂದ್ರ, ಹರಪ್ರಸಾದ ಶಾಸ್ತ್ರೀ, ಸಂಜೀವ ಚಂದ್ರ, ಆರ್. ಸಿ. ದತ್ತ, ಈಶ್ವರಚಂದ್ರ ವಿದ್ಯಾಸಾಗರ, ಸತ್ಯೇಂದ್ರನಾಥ ಕುಮಾರ, ಸುಧೀಂದ್ರನಾಥ ಠಾಕೂರ ಮೊದಲಾದವರ ಚಿಕ್ಕ-ದೊಡ್ಡ ಗ್ರಂಥಗಳನ್ನು ಭಾಷಾಂತರಿಸಿದರು. ಕಾದಂಬರಿಗಳಲ್ಲದೆ ಕೆಲವು ಐತಿಹಾಸಿಕ ಗ್ರಂಥಗಳೂ, ಇತರ ಪ್ರಬಂಧಗಳೂ, ಪೌರಾಣಿಕ ಕಥೆಗಳೂ ವೆಂಕಟಾಚಾರ್ಯರಿಂದ ಭಾಷಾಂತರಗೊಂಡಿವೆ. ಕಾದಂಬರಿಗಳಲ್ಲಿ ಐತಿಹಾಸಿಕ ಕಾದಂಬರಿಗಳಂತೆ ಸಾಮಾಜಿಕ ಕಾದಂಬರಿಗಳೂ ಇವೆ; ಅಲ್ಲದೆ ಪತ್ತೆದಾರೀ ಕಾದಂಬರಿಗಳನ್ನೂ ವೆಂಕಟಾಚಾರ್ಯರು ನಿರಾಕರಿಸಿಲ್ಲ. ಈ ಬಂಗಾಲೀ ಭಾಷಾಂತರಗಳಲ್ಲದೆ ವೆಂಕಟಾಚಾರ್ಯರು ಕೆಲವು ಸ್ತೋತ್ರ ಗಳನ್ನೂ, ಪ್ರಬಂಧಗಳನ್ನೂ ಸ್ವತಂತ್ರವಾಗಿಯೂ ಬರೆದಿರುವರು. ಅಲ್ಲದೆ 'ಯವನಯಾಮಿನೀ ವಿನೋದಗಳು', 'ವೆನಿಸುನಗರದ ವಣಿಕ'ದಂಥ ಇಂಗ್ಲೀಷ ಕೃತಿಗಳ ಅನುವಾದಗಳನ್ನೂ ಮಾಡಿ ರುವರು. ಆದರೆ ಈಗ ಅವರ ಬಹುಸಂಖ್ಯೆ ಕೃತಿಗಳು ದೊರೆಯದಿರುವುದೇ ವಿಷಾದದ ಸಂಗತಿ. ವೆಂಕಟಾಚಾರ್ಯರ ಅಭಿಮಾನಿಗಳು ಈ ಬಗ್ಗೆ ಮಿಡುಕಿರುವುದೂ ಸಕಾರಣವಾಗಿದೆ.[1]

ಅದೇನೇ ಇದ್ದರೂ ವೆಂಕಟಾಚಾರ್ಯರ ಕೃತಿಗಳ ಸಂಖ್ಯೆ ಮತ್ತು ಅವುಗಳ ವೈವಿಧ್ಯ ಬೆರಗುಗೊಳಿಸುವಂಥದು. ಅಲ್ಲದೆ ಅವರ 'ದುರ್ಗೇಶ ನಂದಿನಿ', 'ಆನಂದ ಮಠ', 'ವಿಷವೃಕ್ಷ' ಮೊದಲಾದ ಕಾದಂಬರಿಗಳು ಕನ್ನಡಿಗರಲ್ಲಿ ಅನನ್ಯವಾದ ಪ್ರಭಾವವನ್ನು ಬೀರಲು ಸಮರ್ಥ ವಾದುವು. ಕನ್ನಡಿಗರಲ್ಲಿ ಕಾದಂಬರಿಯ ರುಚಿಯನ್ನು ಹಚ್ಚಿದ ವೆಂಕಟಾಚಾರ್ಯರು ಬಂಕಿಮ ಚಂದ್ರರಂಥ ಉಜ್ವಲ ವ್ಯಕ್ತಿಯ ಪರಿಚಯವನ್ನೂ ಮಾಡಿಕೊಟ್ಟರು. ದಿವಂಗತ ಎ. ಆರ್. ಕೃಷ್ಣಶಾಸ್ತ್ರಿಗಳಂಥವರೂ ಕೂಡ ಅವರ ಈ ಉಪಕಾರವನ್ನು ಸ್ಮರಿಸಿರುವರು.

ಈ ಶತಮಾನದ ಪ್ರಥಮ ದಶಕದಲ್ಲಿ ಕೃಷ್ಣಶಾಸ್ತ್ರಿಗಳು ಇನ್ನೂ ಮಾಧ್ಯಮಿಕ ಶಾಲಾಬಾಲಕ ರಾಗಿದ್ದರು. ಆಗ ಅವರಿಗೆ ದೊರೆತ ಪ್ರಥಮ ವಿದ್ಯಾರ್ಥಿ ವೇತನದಿಂದ ಅವರು 'ಆನಂದಮಠ' ವನ್ನು ಕೊಂಡುಕೊಂಡರು. ಅದನ್ನು ನೆನೆಯುತ್ತ ಅವರು,

"ಅದರಿಂದ ('ಆನಂದಮಠ'ದಿಂದ) ಏನೋ ಆನಂದವಾಗುತ್ತದೆಂಬುದು ನನ್ನ ಭಾವನೆ. ....ಏನೋ ಜಯವನ್ನು ಸಾಧಿಸಿದವನಂತೆ ಮನೆಗೆ ಬಂದು ಅಂದೇ ಆದಷ್ಟು ಓದಿದೆ. ಅರ್ಥವಾಗು ವಷ್ಟು ಆಯಿತು. ಆದರೆ ಅದರ ಮೊದಲ ಪುಟದ ಶೈಲಿ ನವೀನವಾಗಿ ಆಕರ್ಷಕವಾಗಿ ಕಂಡಿತು. ಹೀಗೆ ಬರೆದರೆ 'ನಾವೆಲ್ಲು' ಎಂದುಕೊಂಡೆ. ಬಹಳ ದಿನದವರೆಗೆ ಆ ವಾಕ್ಯಗಳು ಜ್ಞಾಪಕದಲ್ಲಿ ದ್ದುವು. ಬಂಕಿಮ ಸಾಹಿತ್ಯಕ್ಕೆ ನನಗೆ ಪ್ರವೇಶವಾದದ್ದು ಹೀಗೆ. ಅದು ಬಂಕಿಮಚಂದ್ರನ ಗ್ರಂಥವೆಂದು ಆಗ ಗೊತ್ತಿರಲಿಲ್ಲ. ಅದು 'ವೆಂಕಟಾಚಾರ್ಯರ ನಾವೆಲ್ಲು' ಮಾತ್ರ. ಇಂದಿಗೂ

1. ಜಿ. ಜಿ. ಮಂಜುನಾಥನ್ : 'ಬಿ. ವೆಂಕಟಾಚಾರ್ಯ, ವ್ಯಕ್ತಿ ಮತ್ತು ಸಾಹಿತ್ಯ', ಇಕ್ಷು-ಕಾವೇರಿ, ಮಂಡ್ಯ ಸಾಹಿತ್ಯ ಸಮ್ಮೇಲನದ ನೆನಪಿನ ಸಂಚಿಕೆ, ಪುಟ 252

ಅನೇಕರಿಗೆ ಹಾಗೆಯೇ"[1] ಎಂದು ಹೇಳಿ ತಮಗೆ ಬಂಕಿಮಚಂದ್ರರ ಶ್ರೇಷ್ಠ ಸಾಹಿತ್ಯದ ಸವಿಯನ್ನು ಬಾಲ್ಯದಲ್ಲಿಯೇ ಉಂಟು ಮಾಡಿದ ವೆಂಕಟಾಚಾರ್ಯರಿಗೆ ತಮ್ಮ ಶ್ರೇಷ್ಠ ಕೃತಿ 'ಬಂಕಿಮಚಂದ್ರ' ವನ್ನು ಭಕ್ತಿಯಿಂದ ಅರ್ಪಿಸಿರುವರು. ಆ ಅರ್ಪಣೆಯ ಮಾತುಗಳೂ ಮನನೀಯವಾಗಿವೆ.

"ಸುಪ್ರಸಿದ್ಧ ಬಂಗಾಳಿ ಲೇಖಕರಾದ ಬಂಕಿಮಚಂದ್ರ ಚಟ್ಟೋಪಾಧ್ಯಾಯರ ಕಾದಂಬರಿಗಳನ್ನು ಅವು ಬರುಬರುತ್ತಿದ್ದ ಹಾಗೇ ಮೂಲ ಬಂಗಾಳಿಯಲ್ಲಿ ಓದಿ ಅವುಗಳ ರಸವನ್ನು ಸವಿದು ಕಳೆದ ಶತಮಾನದಲ್ಲಿಯೇ ಕನ್ನಡಿಗರಿಗೆ ಅವುಗಳ ಭಾಷಾಂತರಗಳನ್ನು ಮಾಡಿಕೊಟ್ಟು ಆಧುನಿಕ ಕನ್ನಡ ಸಾಹಿತ್ಯ ಸಂಪತ್ತನ್ನು ಬೆಳೆಸಿದ ದಿವಂಗತ ಬಿ. ವೆಂಕಟಾಚಾರ್ಯರ (1845–1914) ಪುಣ್ಯಸ್ಮರಣೆಗಾಗಿ, ಕನ್ನಡಿಗರ ಕೃತಜ್ಞತೆಯ ರೂಪವಾಗಿ ಅರ್ಪಣೆ" ಎಂದು ಹೇಳಿದ ಕೃಷ್ಣಶಾಸ್ತ್ರಿಗಳ ಮಾತಿನಲ್ಲಿ ವೆಂಕಟಾಚಾರ್ಯರ ಸೇವೆಯ ಮಹತಿಯ ಸ್ಮರಣೆಯಿದೆ.

ವೆಂಕಟಾಚಾರ್ಯರ ಸೇವೆಯ ಮಹತ್ತ್ವವನ್ನು ನೆನೆಯುತ್ತ ಡಾ. ಶ್ರೀನಿವಾಸ ಹಾವನೂರ ಅವರು, "ಇಂತು ಒಂದರ ಮೇಲೊಂದು ಪ್ರಕಟವಾಗುತ್ತ ನಡೆದ ಈ ಕಾದಂಬರಿಗಳಲ್ಲಿ ಕನ್ನಡಿಗರು ನವೀನ ಪ್ರಪಂಚವನ್ನೇ ಕಂಡರು....ನಡುಗನ್ನಡದ ಜನಪ್ರಿಯ ಕಾವ್ಯಗಳು ಮತ್ತು 'ಬತ್ತೀಸ ಪುತ್ಥಳಿ'ಯಂಥ ಕಥನಗಳಿಗೆ ಸೀಮಿತವಾಗಿದ್ದ ಅಂದಿನ ಕನ್ನಡಿಗರ ವಾಚನಾಭಿರುಚಿಯನ್ನು ಹೆಚ್ಚಿಸುವುದಕ್ಕೆ ವೆಂಕಟಾಚಾರ್ಯನಿಂದ ಸಂದ ಸೇವೆಯು ಅವಿಸ್ಮರಣೀಯವಾದುದು. ಜೊತೆಗೆ ಮಧ್ಯಮ ವರ್ಗದ ಜನತೆಯ ಭಾವವಿಕಾಸಕ್ಕೂ ಅವನು ಕಾರಣನಾದನು. ಕಾದಂಬರಿ(ನಾವೆಲು) ಎಂಬ ಸಾಹಿತ್ಯ ಪ್ರಕಾರವನ್ನು ಕನ್ನಡ ಸಾಹಿತ್ಯದಲ್ಲಿ ನೆಲೆಗೊಳಿಸಿದ ಶ್ರೇಯಸ್ಸು ಅವನಿಗೆ ಸಲ್ಲಬೇಕು."[2] ಎಂದಿರುವುದು ಉಚಿತವೇ ಆಗಿದೆ.

ಹೀಗೆ ಮುಖ್ಯವಾಗಿ ವೆಂಕಟಾಚಾರ್ಯರು ಬಂಗಾಳಿ ಕಾದಂಬರಿಗಳ ಭಾಷಾಂತರಗಳಿಂದ ಕನ್ನಡದಲ್ಲಿ ಕಾದಂಬರೀ ಸಾಹಿತ್ಯದ ಪರಿಚಯವನ್ನು ಮಾಡಿಕೊಟ್ಟ ಮೊದಲಿಗರು. ಮೈಸೂರು ಪ್ರದೇಶದಲ್ಲಂತೂ ಅವರ ಕಾದಂಬರಿಗಳು ಅತ್ಯಂತ ಜನಪ್ರಿಯವಾದುವು. ಉತ್ತರ ಕರ್ನಾಟಕದಲ್ಲಿ ಕೂಡ ಅವರ ಕಾದಂಬರಿಗಳು ಬಂದರೂ, ಅವು ಹೆಚ್ಚು ಕಲಿತವರಿಗೆ ಮಾತ್ರ ಸೀಮಿತವಾಗಿ ಉಳಿದುವು. ಗಳಗನಾಥರ ಕಾದಂಬರಿಗಳಂತೆ ವೆಂಕಟಾಚಾರ್ಯರ ಕೃತಿಗಳು ಸಾಮಾನ್ಯ ವಾಚಕರನ್ನೂ ಆಕರ್ಷಿಸಲಿಲ್ಲ. ಹಾಗೆ ನೋಡಿದರೆ, ರಮ್ಯತೆಯ ದೃಷ್ಟಿಯಿಂದ ವೆಂಕಟಾಚಾರ್ಯರ ಕಾದಂಬರಿಗಳು ನಿಜವಾಗಿಯೂ ಹೆಚ್ಚು ಹೃದ್ಯವಾಗಿವೆ. ಆದರೆ ಅವರ ಸಂಸ್ಕೃತ ಭೂಯಿಷ್ಠವಾದ ಕನ್ನಡವು ಸಾಮಾನ್ಯ ಜನರಿಗೆ ಗಂಟಲಲ್ಲಿ ಇಳಿಯದ ಕಡುಬಿನಂತಾಯಿತು.

ವೆಂಕಟಾಚಾರ್ಯರ ಗದ್ಯದಲ್ಲಿ ಸಂಸ್ಕೃತ ಪದಗಳು ವಿಪುಲವಾಗಿರುವಂತೆ, ವಾಕ್ಯರಚನೆಯಲ್ಲಿ ಕೂಡ ಸಂಸ್ಕೃತದ ಪ್ರಭಾವವನ್ನು ಕಾಣಬಹುದಾಗಿದೆ. ವೆಂಕಟಾಚಾರ್ಯರ ಶೈಲಿಯು ಬಂಗಾಲಿ ಭಾಷಾಶೈಲಿಯಿಂದಲೂ ಪ್ರಭಾವಿತವಾಗಿದೆ. ಈ ಪ್ರಭಾವವು ಸ್ಪಷ್ಟವಾಗಿ ಒಡೆದು ಕಾಣುವಷ್ಟು ಸ್ಫುಟವಾಗಿದೆ.

ವೆಂಕಟಾಚಾರ್ಯರ ಕನ್ನಡದಲ್ಲಿ ಪ್ರಾಯೇಣ, ಪೈತ್ರಿಕ, ಅತಏವ, ಏವಂಚ, ಜ್ಞಾತವ್ಯ, ಸ್ವಾಮಿತ್ವೇನ, ಪಾರಾವತ, ಧರಾಶಾಯಿ, ವಿಚಾರ್ಯಮಾಣವಾದ–ಎಂಬ ಮೊದಲಾದ ಸಂಸ್ಕೃತ ಪದಗಳು ಇದ್ದಕ್ಕಿದ್ದಂತೆ ನುಸುಳಿಕೊಂಡು ಬಂದುಬಿಡುತ್ತವೆ. ನಿದರ್ಶನಕ್ಕಾಗಿ :

1. ಎ. ಆರ್. ಕೃಷ್ಣಶಾಸ್ತ್ರೀ : ಬಂಕಿಮಚಂದ್ರ, ಗ್ರಂಥಕರ್ತನ ಬಿನ್ನಹ. ಪುಟ 13
2. ಶ್ರೀನಿವಾಸ ಹಾವನೂರ : ಹೊಸಗನ್ನಡದ ಅರುಣೋದಯ, ಪುಟ 284

"ಅವರಂಗಜೇಬನು ಪುನಃ ಪರಾಜಿತನಾಗಿ ಅವಮಾನಿತನಾಗಿ ವೇತ್ರಾಹತ ಕುಕ್ಕುರದೋಪಾದಿಯಲ್ಲಿ ಪಲಾಯನವಾಗಿ ಹೋದನು."

"ಇತ್ತಲಾಗಿ ತನ್ನ ಜನನೀ ಭ್ರಾತೃಗಳನ್ನು ಹುಡುಕುವುದಕ್ಕೆ ಸಲುವಾಗಿ ತಂದೆಯನ್ನು ಬಿಟ್ಟು ಹೋಗಿದ್ದ ಕನಿಷ್ಠ ಚಿರಂಜೀವಿಯನ್ನೂ ಕನಿಷ್ಠ ಕಿಂಕರನನ್ನೂ ಎಲ್ಲಿ ಹುಡುಕಿದರೂ ಕಾಣದೆ ದುಃಖಾವಿಷ್ಟಚಿತ್ತನಾಗಿದ್ದ ಸೋಮಗುಪ್ತನು...."

"ಜೋತ್ಸ್ನಾಲೋಕದಲ್ಲಿ ಶ್ವೇತ ಸೈಕತ ಪುಳಿನ ಮಧ್ಯದಲ್ಲಿ ಪ್ರವಹಿಸುವ ನೀಲ ಸಲಿಲವುಳ್ಳ ಯಮುನಾ ನದಿಯ ಉಪಕೂಲದಲ್ಲಿ ನಗರಗಳಲ್ಲಿ ಪ್ರಧಾನವಾದ ಮಹಾನಗರವಾದ ದಿಲ್ಲೀ ನಗರವು ಮಣಿಖಂಡದ ಹಾಗೆ ಪ್ರಕಾಶಿಸುತ್ತಲಿದ್ದಿತು."

"ಷೋಡಶಾಂಕನಾದ ವಿಕ್ರಮಸಿಂಹನು ಈ ಭೀಷಣವಾದ ಅಭಿಸಂಪಾತವನ್ನು ಬರೆದು, ಒಂದು ಪಂಕ್ತಿಯಲ್ಲಿ...."

"ಚಿರಸ್ಮರಣೀಯವಾದ ನಾಮೋಲ್ಲೇಖ ಮಾತ್ರದಿಂದಾರು ಸಕಲ ವಿದ್ಯಾವಿಶಾರವರೆಂತಲೂ ಅನೇಕ ಗೌರವಪದಸ್ಥರಾಗಿದ್ದವರೆಂತಲೂ ದೇಶವಿದೇಶಗಳಲ್ಲಿ ಸಮ್ಮಾನಿತರಾಗಿ ಖ್ಯಾತಿಗೊಂಡಿದ್ದವರೆಂತಲೂ ತಿಳಿಯುವೆವೋ ಮಹಾಪಂಡಿತ ಶ್ರೇಷ್ಠರಾಗಿದ್ದಾ ಶ್ರೀ ರಮೇಶಚಂದ್ರದತ್ತ ಮಹಾಶಯರ ಮೂಲಗ್ರಂಥವನವಲಂಬಿಸಿ ಈ ಗ್ರಂಥವು ಕನ್ನಡಿಸಲ್ಪಟ್ಟಿದೆ.

"ಅವರ ಉಸದೃಶ ಆದರ್ಶಾರ್ಹವಾದ ಅಸಾಮಾನ್ಯ ಅಧ್ಯವಸಾಯವೆಂದು ಹೇಳಬೇಕಾಗಿದೆ.''

ಇಂಥ ಹಲವಾರು ವಾಕ್ಯಗಳು ವೆಂಕಟಾಚಾರ್ಯರ ಪ್ರತಿಯೊಂದು ಗ್ರಂಥದಲ್ಲಿಯೂ ವಿಪುಲವಾಗಿ ಕಾಣದೊರೆಯುತ್ತವೆ.

ಈ ಸಂಸ್ಕೃತದ ಪ್ರಭಾವದಂತೆ ಅವರ ಗದ್ಯದಲ್ಲಿ ಹಳಗನ್ನಡದ ಛಾಯೆಯೂ ಅಲ್ಲಲ್ಲಿ ಗೋಚರಿಸುತ್ತದೆ.

"ಈ ಭೂಮಂಡಲದಲ್ಲಿ ಪೂರ್ವಕಾಲದೊಳ್"....

"ಪ್ರಸಿದ್ಧಿಯಂ ಹೊಂದಿದ...."

"ಇದಾ ಮಹನೀಯರ ಎರಡನೆಯ ಗ್ರಂಥ"

"ಸೂಕ್ಷ್ಮವಾದಾ ಅಧರೋಷ್ಠಗಳು...."

"ಅವನಂ ನ್ಯಾಯಸ್ಥಾನಕ್ಕೊಯ್ಯುವಂತೆ ರಾಜದೂತನ ವಶಮಾಡಲವನದೇ ಮೇರೆಗೆ ವಸುಪ್ರಿಯನಂ ನಿರ್ಬಂಧಿಸಿದನು."

"ವರ್ತಕನು ಚಿರಂಜೀವಿಯಂ ಕುರಿತು...."

"ನಿರತಿಶಯಾನಂದರಸ ತುಂದಿಲ ಹೃದಯೆಯಾದ ಸುಂದರಿ, ಈ ಮಹೋತ್ಸವವಂ ರಾತ್ರಿಯೆಲ್ಲವೂ...."

"ಹೆಂಗಸರನ್ನು ಅತ್ಯಂತ ಜಾಗರೂಕತೆಯಿಂದ ರಕ್ಷಣೆಯಂ ಮಾಡತಕ್ಕುದು ಆವಶ್ಯಕವಾದುದು."

ಅಲ್ಲದೆ ಅಶುದ್ಧವೆನ್ನುವಂಥ ಕೆಲವು ಪ್ರಯೋಗಗಳನ್ನೂ ವೆಂಕಟಾಚಾರ್ಯರು ಮಾಡಿರುವರು.

ದನದ ಭೂತ ಎನ್ನುವುದಕ್ಕೆ "ದನವಿನ ಭೂತ" (ಚಿತ್ರ ವಿಚಿತ್ರ 1ನೆಯ ಭಾಗ, ಪುಟ 67)

ಹೀಗೆಯೇ ಎಂಬುದಕ್ಕೆ 'ಹೀಗೆವೇ' ಎಂಬುದು ಅನೇಕ ಕಡೆಗೆ ಬರುತ್ತದೆ.

"ಗುಣವತಿಗಳಾದ ರಮಣೀಗಳನ್ನು" (ಭಾರತ ಮಹಿಳಾ, ಪುಟ 73)

"ಸ್ವಂತ ಮಗಳಿನ ಹಾಗೆ ಪ್ರತಿಪಾಲನೆಯನ್ನು ಮಾಡಿದರು" (ಭಾರತ ಮಹಿಳಾ, ಪುಟ 66)

"ರಮಣಿಯರನ್ನು ಉದಾಹಾರವಾಗಿ ಹೇಳಲ್ಪಟ್ಟಿತು"; "ಅತಏವ ಸ್ತ್ರೀಯರ ಪ್ರಶಂಸೆಯಲ್ಲಿ ಅವರ ಸ್ನೇಹಪ್ರವೃತ್ತಿಯು ಸರ್ವಪ್ರಕಾರದಿಂದಲೂ ಸಮುನ್ನತಿ ಲಾಭವನ್ನುಂಟಾಗುವುದು" (ಭಾರತ ಮಹಿಳಾ, ಪುಟ 47 ಮತ್ತು 5). ಇಲ್ಲಿ ವಾಕ್ಯರಚನೆ ಸದೋಷವಾಗಿದೆ. ಇಂಥ ಉದಾಹರಣೆಗಳು ಹೆಚ್ಚಾಗಿಲ್ಲವಾದರೂ ಅಲ್ಲಲ್ಲಿ ಕೆಲವು ಕಾಣದೊರೆಯುತ್ತವೆ.

ವೆಂಕಟಾಚಾರ್ಯರಲ್ಲಿ ಕೆಲವು ಸಲ ವಿಚಿತ್ರ ರೀತಿಯ ವಿಭಕ್ತಿಪಲ್ಲಟ ಗೋಚರವಾಗುತ್ತದೆ.

"ಆ ದೇಶದವರ ಪ್ರೀತಿಲಾಭಕ್ಕೆ ಸಲುವಾಗಿ"

"ಕಾರ್ಯಕ್ಷಮತೆಗೆ ಸಲುವಾಗಿ"

"ಪಿತನಿಗೆ ಸಲುವಾಗಿಯೂ, ಪರರುಪಕಾರಕ್ಕೆ ಸಲುವಾಗಿಯೂ"; "ಸ್ತ್ರೀಯರಿಗೆ ಕರ್ತವ್ಯ ಕೆಲಸ".

ಎಂಬಂತೆ ಹಲವು ಕಡೆಗೆ ಷಷ್ಠಿಗೆ ಬದಲಾಗಿ ಚತುರ್ಥೀ ಪ್ರಯೋಗವಾಗಿದೆ.[1]

ವೆಂಕಟಾಚಾರ್ಯರು ಕೆಲವೆಡೆ 'ತುಲನೆ' ಎಂಬುದನ್ನು 'ತೂಲನಾ' ಎಂದಿದ್ದಾರೆ. ಆದರೆ 'ಬಾಬುರವರ' ಎಂಬುದಕ್ಕೆ ಬದಲಾಗಿ ಎಲ್ಲ ಕಡೆಗೂ "ಬಾಬುಯವರ" ಎಂದೇ ಬಳಸಿದ್ದಾರೆ. ಇಂಥ ಕೆಲವು ಅಪಪ್ರಯೋಗಗಳು ಅಲ್ಲಲ್ಲಿ ಕಾಣುತ್ತವೆ. ಇವು ಆ ಕಾಲದ ಪರಿವರ್ತನಗೊಳ್ಳುತ್ತಿದ್ದ ಕನ್ನಡ ಭಾಷೆಯ ಸ್ಥಿತಿಯ ದ್ಯೋತಕವೆನ್ನಬಹುದು. ಯಾಕೆಂದರೆ ಇಂಥ ಪ್ರಯೋಗಗಳು ವೆಂಕಟಾಚಾರ್ಯರ ಮೊದಲಿನ ಕೃತಿಗಳಲ್ಲಿ ಕಂಡುಬರುವಂತೆ, ಅನಂತರದ ಕೃತಿಗಳಲ್ಲಿ ಹೆಚ್ಚಾಗಿ ಕಾಣುವುದಿಲ್ಲ. ವೆಂಕಟಾಚಾರ್ಯರು 1913ರಲ್ಲಿ ಭಾಷಾಂತರಿಸಿದ 'ವಂಗವಿಜೇತ'ದಲ್ಲಿ ಸಂಸ್ಕೃತಮಯವಾದ ಕನ್ನಡವಿದೆ, ಅಲ್ಲಲ್ಲಿ ಹಳಗನ್ನಡದ ಛಾಯೆಯೂ ಇದೆ. ಆದರೆ ಅಶುದ್ಧ ಪ್ರಯೋಗಗಳು ಮಾತ್ರ ಹೆಚ್ಚಾಗಿ ಕಾಣುವುದಿಲ್ಲ.

ಈ ವಿಶಿಷ್ಟ ಗುಣದೋಷಗಳಿದ್ದರೂ ವೆಂಕಟಾಚಾರ್ಯರ ಗದ್ಯದಲ್ಲಿ ಒಂದು ರಮ್ಯವಾದ ಕಾವ್ಯಗುಣವಿದೆ. ಇದನ್ನೇ ಶ್ರೀ ಕುರ್ತಕೋಟಿಯವರು, "ಅವರ (ವೆಂಕಟಾಚಾರ್ಯರ) ಸಂಸ್ಕೃತಭೂಯಿಷ್ಠವಾದ ಭಾಷೆಗೆ ವಂಗಭಾಷೆಯಲ್ಲಿ ಆಗಿನ ಕಾಲಕ್ಕೆ ರೂಢವಾಗಿದ್ದ ಒಂದು

1. ಇದು ಬಂಗಾಲಿ ಭಾಷೆಯ ಪ್ರಭಾವವೆಂದು ದಿ. ಪ್ರಹ್ಲಾದ ನರೇಗಲ್ಲ ಅವರು ಈ ಪ್ರಬಂಧಕಾರನಿಗೆ ತಿಳಿಸಿದ್ದರು.

ಕೃತ್ರಿಮವಾದ ಕೋಮಲತೆ ಇದೆ."[1] ಎಂದಿರುವರು. ಆದರೆ ಅವರು ಅದೇ ಉಸಿರಿನಲ್ಲಿ "ವೆಂಕಟಾಚಾರ್ಯರು ಸರಳವಾದ ಕನ್ನಡವನ್ನೇ ಉಪಯೋಗಿಸಿದರು"[2] ಎಂದೂ ಹೇಳುವುದನ್ನು ಮಾತ್ರ ಒಪ್ಪುವುದು ಕಠಿಣವಾಗುತ್ತದೆ.

ಈ ವಿಷಯದಲ್ಲಿ ಡಾ. ಜಿ. ಎಸ್. ಶಿವರುದ್ರಪ್ಪನವರು, "ವೆಂಕಟಾಚಾರ್ಯರ ಕಾದಂಬರಿಗಳಲ್ಲಿ ಕಂಡುಬರುವ ಭಾಷೆ, ನೋಡುವುದಕ್ಕೆ ಕನ್ನಡ, ಆದರೆ ಶೈಲಿ ವಂಗ ಭಾಷೆಯದು, ಅದು ಕನ್ನಡಕ್ಕೆ ಅನುವಾದಿತವಾದ ಬಂಕಿಮಚಂದ್ರರ ಶೈಲಿ ಎನ್ನಬೇಕು. ಆದುದರಿಂದ ಆ ಶೈಲಿಯ ಬಗ್ಗೆ ಏನನ್ನಾದರೂ ಹೇಳುವುದು, ಬಂಕಿಮಚಂದ್ರರ ಶೈಲಿಯನ್ನು ಕುರಿತ ಮಾತಾಗಬಹುದು. ಆದರೂ ಸಂಸ್ಕೃತ ಮಿಶ್ರಿತವಾದ ಕನ್ನಡ ತನ್ನ ರಮ್ಯತೆಯಿಂದ ಅವುಗಳಲ್ಲಿ ಮನಸ್ಸನ್ನು ಸೆರೆ ಹಿಡಿಯುತ್ತದೆ"[3] ಎಂದಿರುವರು.

ವೆಂಕಟಾಚಾರ್ಯರ ಗದ್ಯಶೈಲಿಯ ಗುಣದೋಷಗಳು ಏನೇ ಇದ್ದರೂ, ಅವರ ಕಾದಂಬರಿಗಳು ಮಾತ್ರ, ತುರುಮರಿಯವರ ಕನ್ನಡ ಕಾದಂಬರಿಯಂತೆ, ಆ ಕಾಲದ ವಾಚಕರನ್ನು ರಮ್ಯಲೋಕಕ್ಕೆ ಕರೆದೊಯ್ದವು.

" 'ಆನಂದಮಠ,' 'ವಿಷವೃಕ್ಷ' ಮೊದಲಾದ ಕಾದಂಬರಿಗಳಲ್ಲಿಯ ಪ್ರಕೃತಿವರ್ಣನೆ ಹಾಗೂ ಸ್ತ್ರೀವರ್ಣನೆಗಳು ಸಂಪ್ರದಾಯಬದ್ಧವಾಗಿ ಕೇವಲ ಶಬ್ದಪ್ರೌಢಿಮೆಯಿಂದಲೇ ಶೋಭಾಯಮಾನವಾಗಿವೆ. ಆದರೆ ಕುತೂಹಲಜನಕವಾದ ಕಥೆಯ ವಿಸ್ತಾರ, ಸನ್ನಿವೇಶಗಳ ಚಮತ್ಕೃತಿ ಈ ಕಾದಂಬರಿಗಳ ಒಳ್ಳೆಯ ಲಕ್ಷಣಗಳಾಗಿವೆ. 'ದೇವಿ ಚೌಧುರಾಣಿ'ಯಂಥ ಕೃತಿಗಳು ಸ್ವತಂತ್ರವೆನ್ನಿಸುವಷ್ಟು ಜೀವಂತವಾಗಿವೆ. ಆದರೆ ಸಂಭಾಷಣೆ, ವಾತಾವರಣ ಇವುಗಳಲ್ಲಿ ವಿದೇಶೀಯತೆಯ ಪ್ರಭಾವ ಎಲ್ಲ ಕಾದಂಬರಿಗಳಲ್ಲಿಯೂ ಅನುಭವಕ್ಕೆ ಬರುತ್ತದೆ. ಕಥಾನಕದ ಹೊಸತನ, ಇತಿಹಾಸದ ಅದ್ಭುತರಮ್ಯತೆ, ಗದ್ಯಕ್ಕೆ ಸಹಜವಾಗಿರುವ ಆತ್ಮೀಯತೆ ಇವು ಜನರ ಮನಸ್ಸನ್ನು ಸೂರೆಗೊಂಡದ್ದರಿಂದ, ಈ ಕೊರತೆಗಳು ಆಗಿನ ಕಾಲಕ್ಕೆ ಈಗಿನಷ್ಟು ಪ್ರಮುಖವಾಗಿ ಕಂಡುಬಂದಿರಲಿಕ್ಕಿಲ್ಲ"[4] ಎಂದು ಶ್ರೀ ಕುರ್ತಕೋಟಿಯವರು ಅಭಿಪ್ರಾಯ ಪಟ್ಟಿರುವರು.

ಆದರೆ ಕಥಾನಕ, ಪಾತ್ರಗಳು, ಸಂಭಾಷಣೆ, ವಾತಾವರಣ ಈ ಮೊದಲಾದವುಗಳಲ್ಲಿ ಕಂಡು ಬಂದ 'ವಿದೇಶೀಯ' ರಮ್ಯತೆಯೇ ವೆಂಕಟಾಚಾರ್ಯರ ಕಾದಂಬರಿಗಳ ಆಕರ್ಷಣೆಗೆ ಪ್ರಮುಖ ಕಾರಣವೆನ್ನಬಹುದು. ಅಲ್ಲದೆ ಬಂಕಿಮಚಂದ್ರರ ಸ್ವದೇಶ ಮತ್ತು ಸ್ವಧರ್ಮಪ್ರೇಮಗಳ ಉಜ್ವಲ ನಿರೂಪಣೆಯೂ ವಾಚಕರನ್ನು ರೋಮಾಂಚನಗೊಳಿಸಿತು. ಆದರಿಂದ ಜನರು ವೆಂಕಟಾಚಾರ್ಯರ ಕಾದಂಬರಿಗಳನ್ನು ಇಂದಿಗೂ ಹುಡುಕಿಕೊಂಡು ಹೋಗುವಂತಾಗಿದೆ.

"ಇಂದು ಹೊಸ ಕಾದಂಬರಿಗಳನ್ನು ಓದುವ ಜನ ಹೆಚ್ಚಾಗಿರಬಹುದು; ಸಾವಿರಾರು ಆಧುನಿಕ ಕಾದಂಬರಿಗಳು ಮಾರಾಟಕ್ಕೆ ಸಿದ್ಧವಾಗಿದ್ದರೂ 'ವಿಷವೃಕ್ಷ'ವನ್ನೂ, 'ವಂಗವಿಜೇತ'ವನ್ನೂ 'ದೇವಿ ಚೌಧುರಾಣಿ'ಯನ್ನೂ ಹುಡುಕಿಕೊಂಡು ಹೋಗುವ ವಾಚಕರು ಇದ್ದೇಇದ್ದಾರೆ."[5]

---

1. ಮತ್ತು 2. ಕೆ. ಡಿ. ಕುರ್ತಕೋಟಿ : ಯುಗಧರ್ಮ ಹಾಗೂ ಸಾಹಿತ್ಯದರ್ಶನ, ಪುಟ 184
3. ಜಿ. ಎಸ್. ಶಿವರುದ್ರಪ್ಪ : ಗತಿಬಿಂಬ, ಪುಟ 104
4. ಕೆ. ಡಿ. ಕುರ್ತಕೋಟಿ : ಯುಗಧರ್ಮ ಹಾಗು ಸಾಹಿತ್ಯದರ್ಶನ, ಪುಟ 184
5. ಜಿ. ವೆಂಕಟಸುಬ್ಬಯ್ಯ : 'ಬಿ. ವೆಂಕಟಾಚಾರ್ಯರು.' ಜೀವನ, 24–2 (ಜೂನ 1963). ಪುಟ 45

"ವೆಂಕಟಾಚಾರ್ಯರು ಗತಿಸಿ 50ವರ್ಷಗಳಾದರೂ, ಅವರ ಗ್ರಂಥಗಳ ಶೈಲಿಯು ನಮಗೆ ಹಳದಾಗಿ ಕಾಣುತ್ತಿಲ್ಲ. ಮೂಲವನ್ನು ಅನುಕರಿಸಿರುವುದರಿಂದ ಶೈಲಿಯ ಗುಣವು ಮೂಲಕ್ಕೆ ಸಲ್ಲಬೇಕಾದರೂ, ಕನ್ನಡದ ಬಿಗಿಯಲ್ಲಿ ವೆಂಕಟಾಚಾರ್ಯರ ವಿದ್ವತ್ತನ್ನೂ ಕಲ್ಪನೆಯನ್ನೂ ಕಾಣ ಬಹುದು. ಅವರ ಕಾದಂಬರಿಗಳಲ್ಲಿ ಇಂದಿಗೂ ಅಚ್ಚಳಿಯದ ತಾರುಣ್ಯ, ರಮ್ಯತೆ, ರುಚಿಗಳು ಅಡಗಿವೆ."[1]

ಎಂಬ ಮಾತುಗಳಲ್ಲಿ ತುಸು ಅತಿಶಯೋಕ್ತಿ ಇದೆಯಾದರೂ "ಕನ್ನಡದಲ್ಲಿ ವಾಚನಾಭಿರುಚಿ ಬೆಳೆಯುವಂತೆಯೂ, ಸ್ವಭಾಷಾಪ್ರೇಮವು ಮೂಡುವಂತೆಯೂ, ಕಾದಂಬರಿಗಳೆಂಬ ನೂತನ ಕಥಾಸೃಷ್ಟಿಯಲ್ಲಿ ಸಾಹಿತಿಗಳ ಮನಸ್ಸು ಪ್ರವಹಿಸುವಂತೆಯೂ ಮಾಡಿದ ಹಿಂದಣವರಲ್ಲಿ ನಾವು ವೆಂಕಟಾಚಾರ್ಯರನ್ನು ಸರ್ವದಾ ನೆನೆಯಬೇಕು."[2]

ಇದೇ ರೀತಿ, ಕನ್ನಡಿಗರಲ್ಲಿ ತಮ್ಮ ಕಾದಂಬರಿಗಳಿಂದ ವಾಚನಾಭಿರುಚಿಯನ್ನು ಹೆಚ್ಚಿಸಿದ ಶ್ರೇಯಸ್ಸು ಗಳಗನಾಥರಿಗೂ ಸಲ್ಲುತ್ತದೆ. ಆದರೆ ಇವರಿಬ್ಬರ ಭಾಷಾಂತರದ ಪದ್ಧತಿಗಳು ಮಾತ್ರ ಭಿನ್ನವಾಗಿವೆ.

"ವೆಂಕಟಾಚಾರ್ಯರು ಯಥಾವತ್ತಾಗಿ ತರ್ಜುಮೆ ಮಾಡಿದ್ದಾರೆ; ಅಥವಾ ಅಲ್ಲಲ್ಲಿ ಒಂದೆರಡು ಮಾತುಗಳನ್ನು ಅಥವಾ ವಾಕ್ಯಗಳನ್ನು ಬದಲಾಯಿಸಿದ್ದರೂ, ಬಿಟ್ಟಿದ್ದರೂ, ಸೇರಿಸಿದ್ದರೂ ಬಂಕಿಮಚಂದ್ರರ ಗ್ರಂಥಗಳಿಗೂ ಇವರ ತರ್ಜುಮೆಗಳಿಗೂ, ಒಟ್ಟು ಅಭಿಪ್ರಾಯಗಳಲ್ಲಿ ಅಥವಾ ಕಾವ್ಯಶೋಭೆಯಲ್ಲಿ ಹೆಚ್ಚು ವ್ಯತ್ಯಾಸವಾಗಲಾರದು. ಗಳಗನಾಥರ ಗ್ರಂಥಗಳು ಇಷ್ಟು ಅಕ್ಷರಶಃ ಮಾಡಿದ ತರ್ಜುಮೆಗಳಲ್ಲ. ಅವರು ಕೆಲವು ಕಥೆಗಳನ್ನು ಸಂಕ್ಷೇಪಿಸಿದ್ದಾರೆ; ಹೊಸದಾಗಿ ಪಾತ್ರಗಳನ್ನು ಸೇರಿಸಿದ್ದಾರೆ, ತಾವು ಬಹಳವಾಗಿ ಮೆಚ್ಚುವ ಕೆಲವು ಅಭಿಪ್ರಾಯಗಳನ್ನು ಹೇಗಾದರೂ ಮಾಡಿ ಅನೇಕ ಗ್ರಂಥಗಳಲ್ಲಿ ತಂದಿದ್ದಾರೆ."[3] ಎಂದು ಶ್ರೀ ಕೃಷ್ಣಶಾಸ್ತ್ರಿಗಳು ಹೇಳಿರುವುದು ಸರಿಯೇ ಆಗಿದೆ.

ಈ ಇಬ್ಬರ ಪರಿವರ್ತನೆಯ ವ್ಯತ್ಯಾಸಗಳಿಂದ ವೆಂಕಟಾಚಾರ್ಯರ ಕಾದಂಬರಿಗಳನ್ನು ಭಾಷಾಂತರಗಳೆಂದೂ ಗಳಗನಾಥರ ಕಾದಂಬರಿಗಳನ್ನು ಅನುವಾದಗಳೆಂದೂ ಕರೆಯಬೇಕು. ಗಳಗನಾಥರ ಅನುವಾದಗಳಲ್ಲಿ ಸಂಕ್ಷಿಪ್ತತೆಯೂ, ವ್ಯತ್ಯಾಸಗಳೂ, ಕೆಲವೆಡೆ ನವೀನ ಅಂಶಗಳೂ ಸೇರಿರುವುದರಿಂದ ಅವರ ಅನುವಾದಗಳನ್ನು ಒಂದು ರೀತಿಯ ಸೃಜನಶೀಲ ಅನುವಾದ ಅಥವಾ ಪುನಃಸೃಷ್ಟಿ ಎಂದೂ ಕರೆಯಬಹುದಾಗಿದೆ. ಆದರೆ ವೆಂಕಟಾಚಾರ್ಯರು ಮಾತ್ರ ಹೆಚ್ಚಾಗಿ ಮೂಲವನ್ನೇ ಅನುಸರಿಸಿ ಭಾಷಾಂತರ ಕಾರ್ಯವನ್ನು ಕೈಕೊಂಡರು. ಮತ್ತು ಈ ಭಾಷಾಂತರ ಕಾರ್ಯವು ವಸ್ತುವನ್ನಷ್ಟೇ ಅಲ್ಲದೆ ಮೂಲದ ಭಾಷಾಶೈಲಿಯನ್ನೂ ಹೆಚ್ಚಾಗಿ ಅನುಸರಿಸಿದೆ. ಅದರಿಂದಲೇ ಅವರ ಭಾಷೆ ಅನೇಕ ಸಲ ನಮಗೆ ಅಸಹಜವೂ, ಪರಕೀಯವೂ ಆಗಿ ತೋರುವಂತಾಗಿದೆ.

---

1. ಜಿ. ವೆಂಕಟಸುಬ್ಬಯ್ಯ : ಬಿ. ವೆಂಕಟಾಚಾರ್ಯರು, ಜೀವನ, 24–2 (ಜೂನ 1963) ಪುಟ 47
2. ಅದೇ, ಪುಟ 47
3. ಎ. ಆರ್. ಕೃಷ್ಣಶಾಸ್ತ್ರೀ : ಭಾಷಣಗಳು ಮತ್ತು ಲೇಖನಗಳು, ಪುಟ 236; ಶ್ರೀಮತಿ ಸಿ. ಎನ್. ಮಂಗಳಾ ಅವರೂ ತಮ್ಮ 'ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳು' ಎಂಬ ಲೇಖನದಲ್ಲಿ ತುಸು ಹೆಚ್ಚು ಕಡಿಮೆ ಇದೇ ಅಭಿಪ್ರಾಯವನ್ನು ಪಟ್ಟಿರುವರು. (ಕನ್ನಡ ನುಡಿ, ಮಾರ್ಚ 1955, ಪುಟ 54)

"ಗಳಗನಾಥರಂತೆ ವೆಂಕಟಾಚಾರ್ಯರು ಮೂಲ ಸಾಹಿತ್ಯದೊಂದಿಗೆ ಹೆಚ್ಚಿನ ಸ್ವಾತಂತ್ರ್ಯವನ್ನು ತೆಗೆದುಕೊಂಡಿಲ್ಲ. ಅದೇ ಅವರ ಅನುವಾದದ ಗುಣದೋಷವೆನ್ನಬಹುದು. ಇದರಿಂದಾಗಿ ಹಲವೆಡೆಗಳಲ್ಲಿ ಮೂಲದ ಶೈಲಿ ಕನ್ನಡಕ್ಕೆ ಬಂದಾಗ ಒಂದಿಷ್ಟು ನೀರಸವೂ ನಿಕೃಷ್ಟವೂ ಆದಂತೆ ತೋರುತ್ತದೆ."[1] ಎಂಬ ಶ್ರೀ ಎನ್. ಕೆ. ಕುಲಕರ್ಣಿ ಅವರ ಅಭಿಪ್ರಾಯಕ್ಕಿಂತಲೂ

"ಬಂಕಿಮರು ಬಂಗಾಳಿ ಸಾಹಿತ್ಯದಲ್ಲಿಯೇ ಹೊಸದೊಂದು ಯುಗವನ್ನು ಪ್ರಾರಂಭಿಸಿದರು. ಅವರ ಕಥನಕಲೆ, ಗತಕಾಲದ ರಂಜಕ ನಿರೂಪಣೆ, ಸ್ವಾರ್ಥತ್ಯಾಗವೇ ಜೀವನದ ಅಡಿಗಲ್ಲು ಎನ್ನುವ ಜೀವನತತ್ವ ಇವು,– ಸಂಸ್ಕೃತವನ್ನು ಬಹುಮಟ್ಟಿಗೆ ನಚ್ಚಿದ ವೆಂಕಟಾಚಾರ್ಯರ ಶೈಲಿಯಲ್ಲಿಯೂ ಕನ್ನಡ ಓದುಗರ ಮನಸ್ಸನ್ನು ಸೆಳೆದುವು."[2] ಎಂದು ಶ್ರೀ ಎಲ್. ಎಸ್. ಶೇಷಗಿರಿ ರಾಯರ ಅಭಿಪ್ರಾಯವೇ ಹೆಚ್ಚು ಸಮಂಜಸವಾಗಿದೆ.

ಶ್ರೀ ಎನ್. ಕೆ. ಕುಲಕರ್ಣಿ ಅವರು ಹೇಳಿದಂತೆ ವೆಂಕಟಾಚಾರ್ಯರ ಶೈಲಿಯನ್ನು 'ನೀರಸ, ನಿಕೃಷ್ಟ' ಎಂದು ಕರೆಯುವುದು ಸರಿಯಾಗಲಾರದು. ಅದನ್ನು ಕನ್ನಡಕ್ಕೆ ಅಷ್ಟು ಸಹಜವಲ್ಲದ ಶೈಲಿ ಎಂದು ಮಾತ್ರ ಹೇಳಬಹುದು. ವೆಂಕಟಾಚಾರ್ಯರ ಶೈಲಿ ಸಾಮಾನ್ಯ ವಾಚಕರಿಗೆ ತುಸು ಕಠಿಣವಾಗಿ ಕಂಡರೂ, ಅವರ ಕಾದಂಬರಿಗಳು ಗಳಗನಾಥರ ಕಾದಂಬರಿಗಳಿಗಿಂತಲೂ ಹೆಚ್ಚು ರಮ್ಯವೂ, ಹೃದ್ಯವೂ, ಆಗಿವೆ. ಅವರು ಮೂಲವನ್ನು ಯಥಾವತ್ತಾಗಿ ಭಾಷಾಂತರಿಸಿದ್ದರಿಂದಲೇ ಬಂಕಿಮಚಂದ್ರರಂಥ ರಮ್ಯ ಲೇಖಕರ ಸವಿಯನ್ನು ಕನ್ನಡಿಗರು ಇಡಿಯಾಗಿ ಅರಿಯಲು ಸಾಧ್ಯವಾಯಿತು.

ಬಂಕಿಮರ ಬಹುಶಃ ಎಲ್ಲ ಕಾದಂಬರಿಗಳನ್ನೂ ವೆಂಕಟಾಚಾರ್ಯರು ಭಾಷಾಂತರಿಸಿರುವರು. ಗಳಗನಾಥರೂ ಬಂಕಿಮರ 'ಮೃಣಾಲಿನಿ' ಮತ್ತು 'ರಾಜಸಿಂಹ'ಗಳನ್ನು, ಮರಾಠಿಯ ಭಾಷಾಂತರಗಳ[3] ಸಹಾಯದಿಂದ ತುಸು ಹೆಚ್ಚುಕಡಿಮೆ ಮಾಡಿಕೊಂಡು ಅನುವಾದಿಸಿದರು. 'ಮೃಣಾಲಿನಿ'ಯಲ್ಲಿ ಅವರು ಮೂಲದಿಂದ ಮಾಡಿಕೊಂಡ ವ್ಯತ್ಯಾಸಗಳನ್ನು ಈ ಪ್ರಬಂಧದ 'ಗಳಗನಾಥರ ಅನುವಾದಿತ ಕಾದಂಬರಿಗಳು' ಎಂಬ ಪ್ರಕರಣದಲ್ಲಿ ವಿವರಿಸಲಾಗಿದೆ. ಅದೇ ರೀತಿ 'ರಾಜಸಿಂಹ'ವು ಗಳಗನಾಥರಲ್ಲಿ 'ರಾಣಾ ರಾಜಸಿಂಹ'ವಾಗಿದೆ. ಅದರಲ್ಲಿ ಗಳಗನಾಥರು 'ರಾಣಿ ಮೃಣಾಲಿನಿ'ಯಲ್ಲಿಯಂತೆ ಕಥೆಯನ್ನೂ ಪಾತ್ರಗಳನ್ನೂ ಬೆಳೆಸಿಲ್ಲ. ಅಲ್ಲಲ್ಲಿ ಕೆಲವು ವಾಕ್ಯಗಳನ್ನು, ವಾಕ್ಯವೃಂದಗಳನ್ನು ಹೆಚ್ಚುಕಡಿಮೆ ಮಾಡಿಕೊಂಡಿದ್ದರೂ, ಅವರ 'ರಾಣಾ ರಾಜಸಿಂಹ'ವು ಸ್ಥೂಲವಾಗಿ ಸಂಕ್ಷಿಪ್ತಾನುವಾದವೇ ಆಗಿದೆ.

ಆದರೆ ವೆಂಕಟಾಚಾರ್ಯರ 'ರಾಜಸಿಂಹ'ವು ಸಂಪೂರ್ಣ ಭಾಷಾಂತರವಾಗಿದೆಯಾದ್ದರಿಂದ, ಇದರಲ್ಲಿ ಬಂಕಿಮಚಂದ್ರರ ಕಥಾನಿರೂಪಣೆಯ, ಪಾತ್ರಸೃಷ್ಟಿಯ ಪ್ರತಿಭೆಯನ್ನು ಚೆನ್ನಾಗಿ ಗುರುತಿಸಲು ಸಾಧ್ಯವಾಗಿದೆ. ಮೂಲ ಕಾದಂಬರಿಯ ಎಂಟು ಭಾಗಗಳನ್ನೂ, ಅದರಲ್ಲಿಯ ಎಲ್ಲ ಪರಿಚ್ಛೇದಗಳನ್ನೂ ವೆಂಕಟಾಚಾರ್ಯರು ಇಟ್ಟುಕೊಂಡಿರುವರಲ್ಲದೆ, ಅವುಗಳ ತಲೆಬರಹಗಳಲ್ಲಿ ಕೂಡ ಏನೂ ವ್ಯತ್ಯಾಸ ಮಾಡಿಕೊಂಡಿಲ್ಲ. ಹಾಗಿರುವುದರಿಂದಲೇ ವೆಂಕಟಾಚಾರ್ಯರ

1. ಶಂಕರ ಪಾಟೀಲ (ಸಂ) : ಕಾದಂಬರಿ ದರ್ಶನ, ಪುಟ 14
2. ಕನ್ನಡ ನುಡಿ, 26–12 (1939), ಪುಟ 29
3. 'ಮೃಣಾಲಿನಿ'ಯನ್ನು ಶ್ರೀ ಕಾಶೀನಾಥ ರಘುನಾಥ ಮಿತ್ರ ಎಂಬವರೂ, 'ರಾಜಾಸಿಂಹ'ವನ್ನು ಶ್ರೀ ವಾ. ಗೋ. ಆಪಟೆ ಎಂಬವರೂ ಮರಾಠಿಗೆ ಭಾಷಾಂತರಿಸಿದ್ದರು.

ಭಾಷಾಂತರದಿಂದ ಮೂಲ ಕಾದಂಬರಿಯ ಕಲ್ಪನೆಯನ್ನು ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಆದರೆ ಗಳಗನಾಥರು ಕೇವಲ ಕಥಾದೃಷ್ಟಿಯನ್ನೇ ಮುಖ್ಯವಾಗಿಟ್ಟುಕೊಂಡಿರುವುದರಿಂದ, ಅನೇಕ ವರ್ಣನೆಗಳನ್ನು, ಸನ್ನಿವೇಶಗಳನ್ನು ಕೈಬಿಟ್ಟರು. ಅದರಿಂದ ಮುಖ್ಯವಾಗಿ ಪಾತ್ರಚಿತ್ರಣದ ದೃಷ್ಟಿಯಿಂದ ಅವರ ಕಾದಂಬರಿಗಳು ಅರಕಳಿಯಾಗಿವೆ. ನಿದರ್ಶನಕ್ಕಾಗಿ ಈ ಕಾದಂಬರಿಯಲ್ಲಿ ಚಿತ್ರಿತವಾದ ಜೇಬ–ಉನ್ನಿಸಳ ಪಾತ್ರಚಿತ್ರಣವನ್ನೇ ನೋಡಬಹುದು.

ಗಳಗನಾಥರು ಕಾದಂಬರಿಯ 'ಬಾದಶಹನ ಜನಾನಖಾನೆ' ಎಂಬ ಮೂರನೆಯ ಪ್ರಕರಣದಲ್ಲಿ 'ಜಿಬುನ್ನಿಸಾ ಬೇಗಮೆ'ಯ ಚಿತ್ರವನ್ನು 2–3 ಪುಟಗಳಲ್ಲಿ ಕೊಟ್ಟು, ಅವಳ ಸ್ವಭಾವದ ಗುಣದೋಷಗಳ ಬಗ್ಗೆ ತಾವೇ ವ್ಯಾಖ್ಯಾನಿಸಿರುವರು. ಮೂಲ ಕಾದಂಬರಿಯ ಎರಡನೆಯ ಭಾಗ 'ನಂದನದಲ್ಲಿ ನರಕ' ಎಂಬುದರ ಏಳು ಪರಿಚ್ಛೇದಗಳ 35 ಪುಟಗಳ ಕಥೆಯನ್ನು ಗಳಗನಾಥರು ಕೇವಲ 6 ಪುಟಗಳಲ್ಲಿ ಹಿಡಿದಿಟ್ಟಿರುವರು. ಅದರಿಂದ ಬಾದಶಹನ ನಂದನವನದಲ್ಲಿಯ ನರಕದ ಕಲ್ಪನೆ ಬರಲು ಸಾಧ್ಯವೇ ಆಗುವುದಿಲ್ಲ. ವೆಂಕಟಾಚಾರ್ಯರ ಭಾಷಾಂತರದಲ್ಲಿ ಇದೆಲ್ಲ ಯಥಾವತ್ತಾಗಿ ಬಂದಿದೆ. 'ಜೇಬ–ಉನ್ನಿಸ'ಳ ಬಗ್ಗೆಯೇ ಒಂದು ಪರಿಚ್ಛೇದವು ಇಲ್ಲಿ ಮೀಸಲಾಗಿದೆ.



ಮುಬಾರಕನ ಮೇಲೆ ಮೋಹವಿದ್ದರೂ, ಆತನಿಂದ ವಿಷಯಸುಖವನ್ನು ಪಡೆಯುತ್ತಿದ್ದರೂ ಆತನನ್ನು ವಿವಾಹವಾಗಲು ನಿರಾಕರಿಸಿ, ಪಾಪಪುಣ್ಯಗಳ ವಿಚಾರವನ್ನು ತಿರಸ್ಕರಿಸುತ್ತ,

"ಅಲ್ಲಾ ಇಂತಹ ಹುಕುಂಗಳನ್ನು ಸಣ್ಣ ಮನುಷ್ಯರಿಗೋಸ್ಕರ ಮಾಡಿದ್ದಾನೆ, ಕಾಫರರಿಗೋಸ್ಕರ. ನಾನು ಹಿಂದು ಬ್ರಾಹ್ಮಣನ ಹೆಣ್ಣೆ ? ಇಲ್ಲ, ರಾಜಪೂತರ ಹೆಣ್ಣೆ ? ಒಂದೇ ಪತಿಯನ್ನು ಮಾಡಿಕೊಂಡು, ಚಿರಕಾಲ ದಾಸಿಯಾಗಿದ್ದು ಕಡೆಗೆ ಬೆಂಕಿಯಲ್ಲಿ ಬಿದ್ದು ಸಾಯುವುದಕ್ಕೆ? ಅಲ್ಲಾ ನನಗೋಸ್ಕರ ಅಂತಹ ವಿಧಿಯನ್ನು ಮಾಡಿದ್ದರೆ ನನ್ನನ್ನು ಯಾವಾಗಲೂ ಬಾದಶಹಜಾದಿಯಾಗಿ ಮಾಡುತ್ತಿರಲಿಲ್ಲ"[1] ಎಂದು ನುಡಿಯುವ ಅಹಂಕಾರದ, ವಿಷಯಾಸಕ್ತ ಜೇಬುನ್ನಿಸೆಯ ಚಿತ್ರ ಗಳಗನಾಥರಲ್ಲಿಲ್ಲ. ಗಳಗನಾಥರಲ್ಲಿ ಇಂಥ ಅನೇಕ ಸನ್ನಿವೇಶಗಳು, ಚಿತ್ರಗಳು, ವರ್ಣನೆಗಳು ಲುಪ್ತವಾಗಿವೆ. ಆದ್ದರಿಂದ ಭಾಷೆಯ ನ್ಯೂನತೆಯನ್ನು ಬಿಟ್ಟರೆ, ವೆಂಕಟಾಚಾರ್ಯರ ಕಾದಂಬರಿಗಳೇ ಹೆಚ್ಚು ರಮ್ಯವಾಗಿವೆ ಎನ್ನಬೇಕಾಗುತ್ತದೆ.

'ಮೃಣಾಲಿನಿ'ಯಲ್ಲಾಗಲಿ 'ರಾಜಸಿಂಹ'ದಲ್ಲಾಗಲಿ ಚಿತ್ರಿತವಾಗಿರುವ ಮಧುರ ಮತ್ತು ರಮ್ಯ ಶೃಂಗಾರವನ್ನು ಮುಖ್ಯವಾಗಿ ಗಳಗನಾಥರು ಕೈಬಿಟ್ಟಿರುವರು. ಆಪಟೆಯವರ ಮರಾಠಾ ವೀರರ ಕಾದಂಬರಿಗಳಲ್ಲಿ ಚಿತ್ರಿತವಾದ ಪರಿಶುದ್ಧ ವೀರವನ್ನು ಮೆಚ್ಚಿದ ಗಳಗನಾಥರು ಬಂಕಿಮರ ಕಾದಂಬರಿಗಳನ್ನು ಅವುಗಳ ರಮ್ಯತೆಗಾಗಿ ಮೆಚ್ಚಿದರೂ, ಅಲ್ಲಿರುವ ರಮ್ಯಶೃಂಗಾರವನ್ನು ಕನ್ನಡ ವಾಚಕರಿಗೆ ಒದಗಿಸಲು ಹಿಂದೆಗೆದರು. ಇದು ಅವರ ಮಡಿವಂತ ಮನೋಧರ್ಮವನ್ನು ಸೂಚಿಸುತ್ತದೆಯಾದರೂ, ಬಂಕಿಮರ ಕಾದಂಬರಿಗಳಲ್ಲಿಯ ರಸಮಯ ಸನ್ನಿವೇಶಗಳಿಗೆ ಅವರು ಎರವಾದುದು ಒಂದು ದೊಡ್ಡ ಕೊರತೆಯೇ ಎನ್ನಬೇಕು.

ಬಂಕಿಮಚಂದ್ರ ಮತ್ತು ಆಪಟೆ ಅವರಲ್ಲಿ ಮೂಲತಃ ಭಿನ್ನವಾದ ವ್ಯಕ್ತಿತ್ವಗಳಿವೆ. ಅದರಿಂದ ಅವರಿಬ್ಬರೂ ಐತಿಹಾಸಿಕ, ವೀರರಸಪ್ರಧಾನವಾದ ಕಾದಂಬರಿಗಳನ್ನೇ ಬರೆದಿದ್ದರೂ.

---

1. ಬಿ. ವೆಂಕಟಾಚಾರ್ಯ : ರಾಜಸಿಂಹ (1929, ದ್ವಿತೀಯ ಮುದ್ರಣ) ಪುಟ 28

ಅವುಗಳ ನಿರೂಪಣೆಯ ಸೊಗಸು ಬೇರೆಬೇರೆಯಾಗಿಯೇ ವ್ಯಕ್ತವಾಯಿತು. ಅವರಿಬ್ಬರ ಮನೋಧರ್ಮಗಳನ್ನು ಡಾ. ಕೃಷ್ಣಶಾಸ್ತ್ರಿಗಳು ತುಂಬ ಸುಂದರವಾಗಿ ವಿಮರ್ಶಿಸಿರುವರು.

"ಬಂಕಿಮಚಂದ್ರರನ್ನು ಇಂಡಿಯಾ ದೇಶದ 'ಸರ್ ವಾಲ್ಟರ್ ಸ್ಕಾಟ್'ರವರೆಂದು ಹೇಳಬಹುದು.... ಬಂಕಿಮಚಂದ್ರರ ಗ್ರಂಥಗಳಲ್ಲಿ ಶೃಂಗಾರ ಮಿಶ್ರವಲ್ಲದ ಶುದ್ಧ ವೀರರಸವನ್ನು ಚಿತ್ರಿಸಿದ ಕಾದಂಬರಿಯೇ ಇಲ್ಲವೆಂದು ಹೇಳಬಹುದು. ಆದರೂ ಅವು ವಜ್ರ ಕೆಂಪು ಕೆತ್ತಿದ ಆಭರಣಗಳಂತೆ ಹೊಂದಿಕೊಂಡು ಸುಂದರವಾಗಿಯೇ ಇವೆ.... ಶೃಂಗಾರದಲ್ಲಿ ಸದಾ ಮುಳುಗಿರುತ್ತ ವಿಷಯಾಸಕ್ತರೆಂಬ ನಿಂದೆಗೆ ಪಾತ್ರರಾದಂಥ ಇವರೇ ಹೃದಯವು ಉಬ್ಬಿ, ಉತ್ಸಾಹದಿಂದ ಮುಖಕ್ಕೆ ಛಿಲ್ಲನೆ ರಕ್ತವು ನುಗ್ಗಿಬರುವಂಥ ವೀರರಸಪೂರ್ಣವಾದ ವರ್ಣನೆಗಳನ್ನು ಕೊಟ್ಟಿದ್ದಾರೆ; ದುರ್ಗೇಶನಂದಿನಿ, ರಾಜಸಿಂಹ, ಕೋಹಿನೂರ ಇವುಗಳಲ್ಲಿ ಇದಕ್ಕೆ ಉದಾಹರಣೆಗಳು ಬೇಕಾದ ಹಾಗೆ ಸಿಕ್ಕುತ್ತವೆ."[1]

"ಆಪಟೆಯವರ ಗ್ರಂಥಗಳಲ್ಲಿ ಶೃಂಗಾರರಸ ಬರುವುದು ಅಪರೂಪ; ಅವು ಅಚ್ಚ ವೀರರಸದಿಂದ ತುಂಬಿ ನಿರ್ದೋಷವಾದ, ನಿರ್ಮಲವಾದ, ಸಾಣೆಗೆ ಕೊಟ್ಟು ತಳತಳನೆ ಹೊಳೆಯುವ ವಜ್ರಗಳಂತಿವೆ."[2] "ಬಂಕಿಮಚಂದ್ರರವರಿಗೂ ಆಪಟೆಯವರಿಗೂ ಇರತಕ್ಕ ಇದೊಂದು ವ್ಯತ್ಯಾಸವನ್ನು ಬಿಟ್ಟರೆ ಇಬ್ಬರಲ್ಲಿಯೂ ಒಂದೇ ವಿಧವಾದ ವೀರರಸವನ್ನು ಚಿತ್ರಿಸುವ ಸಾಮರ್ಥ್ಯ, ಸ್ವದೇಶಾಭಿಮಾನ, ಸ್ವಧರ್ಮಾಭಿಮಾನ, ಉತ್ಸಾಹ ಇವು ತುಂಬಿವೆ ಎಂದು ಹೇಳಬಹುದು."[3]

ಡಾ. ಕೃಷ್ಣಶಾಸ್ತ್ರಿಗಳ ಈ ತೌಲನಿಕ ಉಕ್ತಿಗಳು ವೆಂಕಟಾಚಾರ್ಯ ಮತ್ತು ಗಳಗನಾಥರಿಗೂ ಸ್ಥೂಲವಾಗಿ ಅನ್ವಯಿಸುತ್ತವೆ ಎಂದು ಹೇಳಬಹುದು.

ವೆಂಕಟಾಚಾರ್ಯರೂ ಗಳಗನಾಥರೂ ಕನ್ನಡಕ್ಕೆ ಪರಿವರ್ತಿಸಿದ ಇನ್ನೊಂದು ಬಂಗಾಲಿ ಕಾದಂಬರಿಯೆಂದರೆ, ದಾಮೋದರ ಮುಖ್ಯೋಪಾಧ್ಯಾಯರ 'ನವಾಬ ನಂದಿನಿ'. ವೆಂಕಟಾಚಾರ್ಯರು ಅದನ್ನು ಮೂಲ ಬಂಗಾಲಿಯಿಂದಲೇ ಇದ್ದಕ್ಕಿದ್ದಂತೆಯೇ, ಅದೇ ಹೆಸರಿನಿಂದಲೇ ಭಾಷಾಂತರಿಸಿದರು. ಗಳಗನಾಥರು ಮಾತ್ರ ಕಾಶೀನಾಥ ರಘುನಾಥ ಮಿತ್ರ ಎಂಬವರ ಮರಾಠಿ ಭಾಷಾಂತರವನ್ನು ಅವಲಂಬಿಸಿ 'ತಿಲೋತ್ತಮೆ' ಎಂಬ ಹೆಸರಿನಿಂದ ಸಂಗ್ರಹಾನುವಾದ ಮಾಡಿದರು. ವೆಂಕಟಾಚಾರ್ಯರ 'ನವಾಬ ನಂದಿನಿ'ಯು 250 ಪುಟಗಳನ್ನು ವ್ಯಾಪಿಸಿದ್ದರೆ, ಗಳಗನಾಥರು ತಮ್ಮ 'ತಿಲೋತ್ತಮೆ'ಯನ್ನು 190 ಪುಟಗಳಲ್ಲಿಯೇ ಮುಗಿಸಿರುವರು. ಈ ಕಾದಂಬರಿಯಲ್ಲಿ ಕೂಡ ಮೇಲೆ ಹೇಳಿದ ಗುಣದೋಷಗಳೇ ಕಂಡಿವೆ.

ಇನ್ನು, ವೆಂಕಟಾಚಾರ್ಯರ ಮತ್ತು ಗಳಗನಾಥರ ಅನುವಾದದ ರೀತಿ ಮತ್ತು ಭಾಷಾಶೈಲಿಗಳಲ್ಲಿ ಭಿನ್ನತೆ ಕಂಡರೂ, ಇಬ್ಬರಲ್ಲಿಯೂ ಕನ್ನಡ ಭಾಷೆಯ ಬಗ್ಗೆ, ಕನ್ನಡಿಗರಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸಬೇಕೆಂಬ ಬಗ್ಗೆ ಅದೇ ತೀವ್ರವಾದ ಕಳಕಳಿ ಇದೆ.

---

1. ಎ. ಆರ್. ಕೃಷ್ಣಶಾಸ್ತ್ರೀ: 'ಕನ್ನಡ ಐತಿಹಾಸಿಕ ಕಾದಂಬರಿಗಳು,' ಭಾಷಣಗಳು ಮತ್ತು ಲೇಖನಗಳು, ಪುಟ 233-235
2. ಅದೇ, ಪುಟ 235
3. ಅದೇ, ಪುಟ 236

"A novel in the sense it is understood in English is not familiar to the Kanerese speaking public" ಎಂದು ವೆಂಕಟಾಚಾರ್ಯರು 1885ರಲ್ಲಿ 'ದುರ್ಗೇಶ ನಂದಿನಿ'ಯನ್ನು ಭಾಷಾಂತರಿಸುತ್ತ ಬರೆದರೆ, "ವಾಚನಾಭಿರುಚಿ ಇಲ್ಲದ ಜನರಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸಲಿಕ್ಕೂ.... ಉತ್ತಮ ಕಾದಂಬರಿಗಳು ಬೇಕೇಬೇಕು" ಎಂದು 1898ರಲ್ಲಿ ಗಳಗನಾಥರು ತಮ್ಮ ಪ್ರಥಮ ಕಾದಂಬರಿ 'ಪದ್ಮನಯನೆ'ಯನ್ನು ಬರೆಯುತ್ತ ಹೇಳಿದರೆಂಬುದನ್ನು ಇಲ್ಲಿ ಮತ್ತೆ ನೆನೆಯಬೇಕು. ಮತ್ತು ಈ ಇಬ್ಬರೂ ಮಹನೀಯರು ತಮ್ಮ ಉದ್ದೇಶದಲ್ಲಿ ಸಂಪೂರ್ಣವಾದ ಸಫಲತೆಯನ್ನು ಪಡೆದರೆಂಬುದನ್ನೂ ಅವರಿಬ್ಬರೂ ಕನ್ನಡ ಕಾದಂಬರಿಯ ತಳಪಾಯವನ್ನು ಹಾಕಿದ ಮಹಾಶಿಲ್ಪಿಗಳೆಂಬುದನ್ನೂ ಕನ್ನಡ ಕಾದಂಬರೀ ಸಾಹಿತ್ಯ ಚರಿತ್ರೆ ಎಂದಿಗೂ ಕಡೆಗಣಿಸಲಾರದು. ಅನೇಕರು ಇವರಿಬ್ಬರ ಮಹೋಪಕಾರವನ್ನು ಸ್ಮರಿಸಿಯೂ ಇದ್ದಾರೆ.

'ಕನ್ನಡದ ಮೊತ್ತಮೊದಲ ಸಾಮಾಜಿಕ ಕಾದಂಬರಿ' ಎಂಬ ಲೇಖನ ಬರೆಯುತ್ತ ಶ್ರೀ ವಿದ್ಯಾಶಂಕರ ಅವರು ಕನ್ನಡ ಕಾದಂಬರಿಯ ಮೂಲಪುರುಷರಾದ ವೆಂಕಟಾಚಾರ್ಯ ಮತ್ತು ಗಳಗನಾಥರನ್ನು ನೆನೆಯುತ್ತ,

"ಕನ್ನಡದ ಕ್ಷೇತ್ರ ತೀರ ಅವಜ್ಞೆಗೆ ಒಳಗಾಗಿದ್ದ ಒಂದು ಕಾಲದಲ್ಲಿ ಪರಭಾಷೆಯ ಕೃತಿಗಳಿಂದ ಸ್ಫೂರ್ತಿ ಪಡೆದು ಕನ್ನಡದಲ್ಲಿ ಇವರು ಬರೆಯ ಹೊರಟುದು ಸಾಹಸದ ಮಾತು. ತಮ್ಮ ಮಡಿವಂತಿಕೆಯ ಪಾಂಡಿತ್ಯದ ಸೀಮೆಯಿಂದ ಹೊರಬರದ ಪಂಡಿತವರ್ಗ, ಆಂಗ್ಲ ಸಾಹಿತ್ಯವನ್ನು ಓದಿ ಬಹಳವಾಗಿ ಮೆಚ್ಚಿಕೊಂಡು 'ಕನ್ನಡದಲ್ಲೇನಿದೆ ?' ಎಂದು ಮೂಗು ಮುರಿಯುತ್ತಿದ್ದ ಪರಭಾಷಾ ಪರಪುಟ್ಟಗಳ ವರ್ಗ–ಬಹು ಸಂಖ್ಯಾ ಬಲವುಳ್ಳ ಈ ಎರಡು ವರ್ಗಗಳ ತಾತ್ಸಾರದಿಂದ ಕನ್ನಡ ನರಳಿತು. ಇಂತಹ ಕಾಲದಲ್ಲಿ ಕನ್ನಡದ ಮೇಲಿನ ಅಭಿಮಾನದಿಂದಲೋ, ತಾಯಿಭಾಷೆಯ ಮೇಲಿನ ಮಮತೆಯಿಂದಲೋ ಮೇಲೆ ತಿಳಿಸಿದ ಮಹನೀಯರು ಕನ್ನಡ ಕಾದಂಬರೀ ಕ್ಷೇತ್ರದ ಬೆಳವಣಿಗೆಗೆ ಅಪಾರ ಶ್ರಮವಹಿಸಿದರು.... ಇವರಿಬ್ಬರ ಕೃತಿಗಳು ಜನಮನವನ್ನು ಸೂರೆಗೊಂಡದ್ದಷ್ಟೇ ಅಲ್ಲದೆ ಇಂದಿನ ಸುಪ್ರಸಿದ್ಧ ಬರಹಗಾರರಿಗೆ ಪ್ರಚೋದಕ ಶಕ್ತಿಯಾಗಿ ನಿಂತವು. ಇವರ ಪ್ರಭಾವಕ್ಕೆ ಒಳಗಾಗದ ಕನ್ನಡದ ಕಾದಂಬರಿಕಾರರೇ ಇಲ್ಲವೆನ್ನಬಹುದು."[1] ಎಂದು ತುಂಬ ಅಭಿಮಾನದಿಂದ ನುಡಿದಿರುವರಾದರೂ, ಅವರ ಮಾತಿನಲ್ಲಿ ಸತ್ಯಾಂಶವಿಲ್ಲದಿಲ್ಲ.

ಹೀಗೆ, "ಗಳಗನಾಥರ ಮತ್ತು ಬಿ. ವೆಂಕಟಾಚಾರ್ಯರ ಕಾದಂಬರಿಗಳು ಭಾಷಾಂತರಗಳಾಗಿದ್ದರೂ ಅವುಗಳಿಂದ ಕನ್ನಡ ಸಾಹಿತ್ಯಕ್ಕೆ ಅನೇಕ ಸದುಪಯೋಗಗಳಾದುವು. ಈ ಭಾಷಾಂತರಗಳು ಹೆಚ್ಚು ಹೆಚ್ಚು ಖರ್ಚಾಗುತ್ತಿದ್ದುದು ಕನ್ನಡ ರಸಿಕರಿಗೆ ಉತ್ಸಾಹ ಕೊಟ್ಟಂತಾಗಿ ಸ್ವತಂತ್ರ ಕೃತಿಗಳು ಕನ್ನಡ ಸಾಹಿತ್ಯದಲ್ಲಿ ಬರತೊಡಗಿದುವು."[2]

ಒಟ್ಟಿನಲ್ಲಿ, "ವೆಂಕಟಾಚಾರ್ಯರ ಮತ್ತು ಗಳಗನಾಥರ ಕಾದಂಬರಿಗಳು ಕೇವಲ ಓದುಗರ ಮೇಲೆಯೇ ಅಲ್ಲದೆ ಬರೆಯುವವರ ಮೇಲೆಯೂ ಸಾಕಷ್ಟು ಪ್ರಭಾವವನ್ನು ಬೀರಿದುವು"[3] ಎಂಬುದರಲ್ಲಿ ಸಂದೇಹವಿಲ್ಲ.

---

1. ಕನ್ನಡ ನುಡಿ, ಎಪ್ರಿಲ–ಮೇ 1969, ಪುಟ 16
2. ಎಚ್. ಉಮಾಮೂರ್ತಿ : 'ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳು,' ಕನ್ನಡ ನುಡಿ, ಜೂನ 1955, ಪುಟ 135
3. ಕನ್ನಡ ವಿಶ್ವಕೋಶ, ಸಂಪುಟ 3, ಪುಟ 713

ಇನ್ನು, ವೆಂಕಟಾಚಾರ್ಯರ ಮತ್ತು ಗಳಗನಾಥರ ಮನೋಧರ್ಮದಲ್ಲಿಯೂ ಸಾಮ್ಯವನ್ನು ಕಾಣಬಹುದು. ಸ್ವದೇಶ ಮತ್ತು ಸ್ವಧರ್ಮಗಳ ಬಗ್ಗೆ ಇಬ್ಬರಲ್ಲಿಯೂ ಅಪಾರವಾದ ಶ್ರದ್ಧೆಯಿದ್ದಿತು. ಆದಕ್ಕೆಂತಲೇ ಅವರು ಉಜ್ವಲ ಸ್ವದೇಶಾಭಿಮಾನವನ್ನು ಕೆರಳಿಸುವ ಕಾದಂಬರಿಗಳನ್ನು ಕನ್ನಡದಲ್ಲಿ ತಂದರು. ಪ್ರಾಚೀನ ಭಾರತದ ಸನಾತನ ಧರ್ಮಶ್ರದ್ಧೆಯ ವಿಷಯವಾಗಿ ಇಬ್ಬರಲ್ಲಿಯೂ ಅವೇ ಭಾವನೆಗಳಿವೆ. ಗಳಗನಾಥರು ತಮ್ಮ ಸ್ವತಂತ್ರ ಗ್ರಂಥಗಳಲ್ಲಿಯೂ, ಅನುವಾದಗಳಲ್ಲಿಯೂ ಇದನ್ನು ಪದೇ ಪದೇ ಬರೆದಿರುವರು. ವೆಂಕಟಾಚಾರ್ಯರು ಭಾಷಾಂತರಗಳಲ್ಲಿ ಇಂಥ ತಮ್ಮ ಅಭಿಪ್ರಾಯಗಳನ್ನು ಸೇರಿಸಿಲ್ಲವಾದರೂ, ಅವರು ಭಾಷಾಂತರಿಸಿದ ಗ್ರಂಥಗಳಲ್ಲಿ ಇದು ಸೂಚ್ಯವಾಗಿ ವ್ಯಕ್ತವಾಗಿದೆ. ಅಲ್ಲದೆ ಅವರು ಭಾಷಾಂತರಿಸಿದ ಹರಪ್ರಸಾದ ಶಾಸ್ತ್ರಿ ಅವರ 'ಭಾರತ ಮಹಿಳಾ' (1884) ಎಂಬ ಪ್ರಬಂಧ ಗ್ರಂಥದಲ್ಲಿ ಇದು ಸ್ಪಷ್ಟವಾಗಿಯೇ ವ್ಯಕ್ತವಾಗಿದೆ.

ಆದರೆ, ಗಳಗನಾಥರಂತೆ ವೆಂಕಟಾಚಾರ್ಯರು ಸ್ವತಂತ್ರವಾಗಿ ಹೆಚ್ಚು ಬರೆಯಲಿಲ್ಲ. ಅವರು "ಸ್ವಂತವಾಗಿ ಕೆಲವು ಲೇಖನಗಳನ್ನು ಬರೆದಂತಿದೆ. ಚರಿತ್ರೆ, ಸಮಾಜ ವಿಜ್ಞಾನ, ಸಮಾಜ ಸುಧಾರಣೆ ಇವುಗಳ ವಿಚಾರದಲ್ಲಿರುವ ಗ್ರಂಥಗಳು ಪ್ರಾಯಶಃ ಅವರ ಸ್ವಂತದ್ದಿರಬೇಕು"[1] ಎಂದು ಪ್ರೊ. ಜಿ. ವೆಂಕಟಸುಬ್ಬಯ್ಯನವರು ಊಹಿಸಿರುವರು. ಅಂಥವುಗಳಲ್ಲಿ ವೆಂಕಟಾಚಾರ್ಯರ 'ಚಿತ್ರವಿಚಿತ್ರಾವಳಿ'[2] 1ನೆಯ ಮತ್ತು 2ನೆಯ ಭಾಗಗಳಲ್ಲಿ ಸಂಗ್ರಹಿತವಾದ ಪ್ರಬಂಧಗಳು ವೆಂಕಟಾಚಾರ್ಯರ ಸ್ವತಂತ್ರ ಲೇಖನಗಳಾಗಿರುವ ಸಂಭವವಿದೆ. ಇವುಗಳಲ್ಲಿ ಕೆಲವು ಕಥೆಗಳೂ, ಸಂಭಾಷಣೆಗಳೂ ಇವೆ.

'ಚಿತ್ರವಿಚಿತ್ರಾವಳಿ'ಯ ಎರಡೂ ಭಾಗಗಳಲ್ಲಿ ಸೇರಿ ಒಟ್ಟು 21 ಪ್ರಬಂಧಗಳಿವೆ. ಇವುಗಳಲ್ಲಿ 'ದೇಶಭಾಷೆಯ ಉನ್ನತಿಯ ಆವಶ್ಯಕತೆಯು', 'ಕನ್ನಡ ಗ್ರಂಥಗಳಿಗೆ ಇರುವ ಆದರ,' 'ಆನಂದಮಠ ಮತ್ತು ಸ್ವದೇಶಪ್ರೇಮ' ಮೊದಲಾದ ಲೇಖನಗಳು ಗಮನಾರ್ಹವಾಗಿವೆ. ಇವುಗಳಿಂದ ವೆಂಕಟಾಚಾರ್ಯರ ಮನೋಧರ್ಮವನ್ನು ಗುರುತಿಸಬಹುದಾಗಿದೆ.

"ಕನ್ನಡದಲ್ಲಾರು ಗ್ರಂಥ ಅಥವಾ ಸಾಮಯಿಕ ಪತ್ರವನ್ನು ಪ್ರಚಾರ ಪಡಿಸುವುದಕ್ಕೆ ಪ್ರವೃತ್ತರಾಗುವರೋ ಅಂತಹರು ಬಹಳ ದುರದೃಷ್ಟರು. ಅಂತಹರು ಎಷ್ಟೇ ಪ್ರಯತ್ನಪಟ್ಟರೂ, ನಮ್ಮ ದೇಶದ ಕೃತವಿದ್ಯರಾದವರು ಅವರ ಗ್ರಂಥ ಅಥವಾ ಪತ್ರಗಳನ್ನೋದುವುದರಲ್ಲಿ ವಿಮುಖರಾಗಿರುವರು. ಇಂಗ್ಲಿಷು ಪ್ರಿಯರಾದ ಕೃತವಿದ್ಯ ಸಂಪ್ರದಾಯದವರ ಸ್ಥಿರವಾದ ನಂಬುಗೆ ಏನೆಂದರೆ ತಾವು ಓದುವುದಕ್ಕೆ ಯೋಗ್ಯವಾದುದು ಕನ್ನಡ ಭಾಷೆಯಲ್ಲಿ ಸ್ವಲ್ಪವೂ ಬರೆಯಲ್ಪಡಲಾಗದೆಂದು ನಂಬಿರುವರು. ಅವರ ತಾತ್ಪರ್ಯದಲ್ಲಿ. ಕನ್ನಡ ಭಾಷೆಯಲ್ಲಿ ಬರೆಯಲೆಳಿಸುವವನು ವಿದ್ಯಾಬುದ್ಧಿ ವಿಹೀನನೆಂದೂ, ಬರೆಯುವ ಕೌಶಲವಿಲ್ಲದವನೆಂದೂ ತಿಳಿದುಕೊಂಡಿರುವರಲ್ಲದೆ, ಕನ್ನಡದಲ್ಲಿ ಲಿಪಿಬದ್ಧವಾದುದು ಅಪಾತ್ರವಾದುದೆಂದೂ ನಂಬಿರುವರು. ಸಂಸ್ಕೃತಜ್ಞರಾದ ಪಾಂಡಿತ್ಯಾಭಿಮಾನಿಗಳಿಗೆ ದೇಶಭಾಷೆಯಲ್ಲಿರುವ ಶ್ರದ್ಧೆಯ ವಿಚಾರದಲ್ಲಿ ಹೆಚ್ಚು ಹೇಳಬೇಕಾದುದಿಲ್ಲವು."[3]

1. ಜಿ. ವೆಂಕಟಸುಬ್ಬಯ್ಯ : 'ಬಿ. ವೆಂಕಟಾಚಾರ್ಯರು,' ಜೀವನ, ಜೂನ 1903, ಪುಟ 46
2. 'ಚಿತ್ರವಿಚಿತ್ರಾವಳಿ'ಗೆ 'ಅರೇಬಿಯನ್ ನೈಟ್ಸ್'ವು ಮೂಲವಾಗಿದೆಯೆಂದು ಡಾ. ಹಾವನೂರರು (ಕನ್ನಡ ನುಡಿ, ಏಪ್ರಿಲ-ಮೇ 1969) ಬರೆದಿರುವ ವಿಚಾರ ಸರಿಯಲ್ಲ.
3. ಬಿ. ವೆಂಕಟಾಚಾರ್ಯ : ಚಿತ್ರ ವಿಚಿತ್ರ, ಭಾಗ–1, ಪುಟ 1, 2

ವೆಂಕಟಾಚಾರ್ಯರು 1885ರಲ್ಲಿ 'ದುರ್ಗೇಶ ನಂದಿನಿ'ಯ ಪ್ರಸ್ತಾವನೆಯಲ್ಲಿ ವ್ಯಕ್ತ ಪಡಿಸಿದ ವಿಚಾರಗಳನ್ನೇ ಇಲ್ಲಿ ವಿಸ್ತರಿಸಿ ಬರೆದಿರುವರು. ಈ ಪ್ರಬಂಧದ ಕೊನೆಯಲ್ಲಿ ಅವರು, "ಸಮಾಜೋನ್ನತಿಯಾಗಬೇಕಾದರೆ ಭಾವೈಕ್ಯ ಬೇಕು. ಭಾವೈಕ್ಯವುಂಟಾಗಬೇಕಾದರೆ ದೇಶ ಭಾಷೆಯ ಉನ್ನತಿಯುಂಟಾಗಬೇಕು" ಎಂದು ನಿರ್ಣಯಿಸಿರುವರು.[1]

'ಕನ್ನಡ ಗ್ರಂಥಗಳಿಗೆ ಇರುವ ಆದರ' ಎಂಬುದು ಪ್ರಬಂಧವಲ್ಲ; ಉಚ್ಚಶಿಕ್ಷಿತನಾದ ಹೆಚ್ಚುಗಾರಿಕೆಯುಳ್ಳ ಮನುಷ್ಯ ಮತ್ತು ಅವನ ಹೆಂಡತಿ ಇವರ ಮಧ್ಯೆ ನಡೆದ ಒಂದು ಕಾಲ್ಪನಿಕ ಸಂಭಾಷಣೆ ಅದಾಗಿದೆ. ಕನ್ನಡದ ಬಗ್ಗೆ ಉಪೇಕ್ಷೆಯುಳ್ಳ ಆ ಸುಶಿಕ್ಷಿತನಿಗೆ ಆತನ ಹೆಂಡತಿ 'ವಿಷವೃಕ್ಷ'ದಂಥ ಕನ್ನಡ ಗ್ರಂಥಗಳ ಹಿರಿಮೆಯನ್ನು ಎತ್ತಿ ತೋರಿಸುವಳು.

'ಆನಂದಮಠ ಮತ್ತು ಸ್ವದೇಶಪ್ರೇಮ' ಎಂಬ ಪ್ರಬಂಧವು ಬಂಕಿಮಚಂದ್ರರ ವಿಚಾರಗಳನ್ನು ಎತ್ತಿ ಹಿಡಿಯುತ್ತದೆ. "ಸಾಹಿತ್ಯದಿಂದ ದೇಶಕ್ಕೆ ಕಲ್ಯಾಣವುಂಟಾಗಲಾರದೆಂದು ತಿಳಿದಿದ್ದರೆ ನಾನು ಆನಂದಮಠವನ್ನು ಬರೆಯುತ್ತಿರಲಿಲ್ಲ. ಆನಂದಮಠದಲ್ಲಿ ಉಕ್ತರಾದ ಸಂನ್ಯಾಸಿಯರಾದ ಸಂತಾನರು ಇಂಗ್ಲಿಷರ ಸಂಗಡ ಯುದ್ಧಮಾಡಿ ಜಯಿಸಿದ್ದರೂ, ಇಂಗ್ಲಿಷರನ್ನು ದ್ವೇಷಿಸುವುದು ಭಾರತವಾಸಿಗಳಿಗೆ ಅಮಂಗಳಜನಕವಾದುದೆಂಬುದನ್ನು ತಿಳಿಸುವುದೇ ಗ್ರಂಥೋದ್ದೇಶವಾಗಿದೆ. ಹಿಂದೂಗಳು ಮೊದಲು ಯೋಗ್ಯರಾಗಬೇಕು....ಇಂಗ್ಲಿಷರು ಗುರುಗಳು;[2] ನಾವು ಶಿಷ್ಯರು. ಶಿಷ್ಯರಾಗಿ ಗುರುಗಳೊಂದಿಗೆ ವಿವಾದ ಮಾಡಬಾರದು–" ಎಂದು ಬಂಕಿಮರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ವಿವರಿಸಿ ವೆಂಕಟಾಚಾರ್ಯರು, "ಬಂಕಿಮ ಬಾಬುಯವರು ಬಹಳ ಜ್ಞಾನಿಗಳು. ತಮ್ಮ ಭಾವವನ್ನು ಆನಂದಮಠದಲ್ಲಿ ಸುಂದರವಾಗಿ ತಿಳಿಯಹೇಳಿದ್ದಾರೆ"[3] ಎಂದಿರುವರು. ಬಂಕಿಮ ಚಂದ್ರರು 'ಆನಂದಮಠ'ದಲ್ಲಿಯ ಒಂದು ಪಾತ್ರ 'ಮಹಾಪುರುಷ'ನಿಂದ "ಇಂಗ್ಲಿಷರು ಮಿತ್ರರಾಜರು. ಇಂಗ್ಲಿಷರ ಸಂಗಡ ಯುದ್ಧಮಾಡಿ ಜಯಿಸುವುದಕ್ಕೆ ಯಾರಿಗೂ ಶಕ್ತಿ ಇಲ್ಲ"[4] ಎಂದು ಹೇಳಿಸಿರುವುದನ್ನು ಇಲ್ಲಿ ನೆನೆಯಬಹುದು.

ಈ ಪ್ರಬಂಧದಲ್ಲಿ ವೆಂಕಟಾಚಾರ್ಯರು ಮತ್ತೆ ಪ್ರಾದೇಶಿಕ ಭಾಷೆಗಳ ಬೆಳವಣಿಗೆಯ ಪ್ರಸ್ತಾಪ ಮಾಡಿರುವರು.

"ಜನರಲ್ಲಿ ಸ್ವದೇಶ ಪ್ರೇಮವೂ ಭಾವವೂ ಹುಟ್ಟಿ ಅವು ಕಾರ್ಯದಲ್ಲಿ ಪರಿಣಮಿಸಬೇಕಾದರೆ, ಮೊದಲು ದೇಶಭಾಷೋನ್ನತಿಯ ಕಡೆಗೆ ಎಲ್ಲರೂ ದೃಷ್ಟಿಯನ್ನು ಕೊಡಬೇಕು. ಪ್ರಕೃತ, ಬಂಗಾಳಾದಲ್ಲಿ ಪ್ರಚಾರಗೊಂಡಿರುವ ಸ್ವದೇಶದ ಭಾವಕ್ಕೆ ಬಂಕಿಮ ಬಾಬುಯವರು ಮೂಲ ಕಾರಣರಾಗಿದ್ದಾರೆ. ಇಂಗ್ಲಿಷನ್ನು ಕಲಿತು ಕರ್ತವ್ಯಕಾರ್ಯವನ್ನು ಮರೆತಿದ್ದವರನ್ನು ಎಚ್ಚರ ಗೊಳಿಸುವುದಕ್ಕಾಗಿ ಬಂಕಿಮ ಬಾಬುಯವರು 'ಆನಂದಮಠ', 'ಸೀತಾರಾಮ', 'ಚಂದ್ರಶೇಖರ', 'ಚೌಧುರಾಣಿ' ಎಂಬಿವೇ ಮುಂತಾದ ಗ್ರಂಥಗಳನ್ನು ರಚಿಸಿದರು. ಆ ಗ್ರಂಥಗಳ

1. ಬಿ. ವೆಂಕಟಾಚಾರ್ಯ : ಚಿತ್ರವಿಚಿತ್ರ, ಭಾಗ – 1, ಪುಟ 14
2. ಗಳಗನಾಥರು ತಮ್ಮ ಸ್ವತಂತ್ರ ಕಾದಂಬರಿಯಾದ 'ಕುಮುದಿನಿ'ಯಲ್ಲಿಯೂ ಆಂಗ್ಲರನ್ನು ಗುರುಗಳೆಂದು ಕರೆದಿರುವರೆಂಬುದನ್ನು ಇಲ್ಲಿ ನೆನೆಯಬಹುದಾಗಿದೆ.
3. ಬಿ. ವೆಂಕಟಾಚಾರ್ಯ : 'ಆನಂದಮಠ ಮತ್ತು ಸ್ವದೇಶಪ್ರೇಮ', ಚಿತ್ರವಿಚಿತ್ರಾವಳಿ 2ನೆಯ ಭಾಗ, ಪುಟ 60, 61
4. ಬಿ. ವೆಂಕಟಾಚಾರ್ಯ : ಆನಂದಮಠ, ಪುಟ 184

ಲಕ್ಷಾಂತರ ಪ್ರತಿಗಳು ಪ್ರಚಾರವಾದ ಬಳಿಕ ಅಲ್ಲಿಯ ಜನರು ಪ್ರಕೃತ ಕಣ್ದೆರೆದಿದ್ದಾರೆ. ಸ್ವದೇಶೀಭಾವವು ಅವರಲ್ಲಿರುವಂತೆ ಅಷ್ಟೊಂದು ದೃಢವಾಗಿ ನಮ್ಮವರ ಹೃದಯದಲ್ಲಿ ನಾಟಿರಲಾರದು. ಅಂಥಾ ಗ್ರಂಥಗಳು ನಮ್ಮಲ್ಲಿ ಹುಟ್ಟಲಿಲ್ಲ. ಅವೇ ಗ್ರಂಥಗಳು ಕನ್ನಡದಲ್ಲಿದ್ದರೂ ಅವನ್ನೋದಿರುವವರು ಕಡಿಮೆ. ದೇಶಭಾಷೆಯು ಸ್ವದೇಶೀಭಾವದಿಂದ ಪೂರ್ಣವಾಗದಿದ್ದರೆ ದೇಶಕ್ಕೆ ಮಂಗಳವಾಗದು. ನಮ್ಮ ನಡೆನುಡಿಗಳೆಲ್ಲಾ ಟೊಪ್ಪಿಗೆ ಮಾರುವವನನ್ನೂ ಮಂಗಗಳನ್ನೂ ಕುರಿತು ಹೇಳುವ ಕಥೆಯಾಗಿರುವದು."[1]

ಸ್ವಭಾಷಾಜಾಗೃತಿಯು ಕೇವಲ ಸಾಹಿತ್ಯಾಸಕ್ತಿಗೆ ಪರಿಮಿತವಾಗಿರಬೇಕಾಗಿಲ್ಲ. ವೆಂಕಟಾಚಾರ್ಯರ ಅಭಿಪ್ರಾಯದಲ್ಲಿ ಸ್ವದೇಶಪ್ರೇಮ ಜಾಗೃತವಾಗಬೇಕಾದರೆ ಆಯಾ ಪ್ರಾಂತ ಭಾಷೆಗಳಲ್ಲಿ ಅಂಥ ಸಾಹಿತ್ಯನಿರ್ಮಿತಿ ಅವಶ್ಯವಾಗಿತ್ತು. ಅದಕ್ಕೇ ಅವರು ಸ್ವದೇಶಪ್ರೇಮ ಮತ್ತು ಸ್ವಭಾಷಾಪ್ರೇಮಗಳಲ್ಲಿ ಅನಿವಾರ್ಯ ಸಂಬಂಧವನ್ನು ಕಲ್ಪಿಸಿದರು.

ಇನ್ನು, ಗಳಗನಾಥರಲ್ಲಿ ಇಲ್ಲದ ಹಾಸ್ಯಪ್ರಜ್ಞೆ ವೆಂಕಟಾಚಾರ್ಯರಲ್ಲಿ ಕಾಣುತ್ತದೆ. ಅದಕ್ಕೆ ಅವರು ಭಾಷಾಂತರಿಸಿದ ಮೂಲ ಕೃತಿಗಳೂ ಕಾರಣವಾಗಿರುವಂತೆ, ಸ್ವತಃ ಅವರ ಮನೋಭಾವದಲ್ಲಿಯೂ ಈ ವಿನೋದದ ಅಂಶವು ವ್ಯಕ್ತವಾಗಿದೆ. ನಿದರ್ಶನಕ್ಕಾಗಿ 'ಚಿತ್ರವಿಚಿತ್ರಾವಳಿ'ಯ ಕೆಲವು ಪ್ರಬಂಧಗಳು ಈ ಹಾಸ್ಯಪ್ರಜ್ಞೆಯ ದ್ಯೋತಕವಾಗಿವೆ. 'ಯೂಟಿಲಿಟಿ ಅಥವಾ ಉದರ ದರ್ಶನ', 'ಹೊಸವರ್ಷದ ಪ್ರಥಮ ದಿವಸ', 'ಕನ್ನಡ ಗ್ರಂಥಗಳಿಗಿರುವ ಆದರ' ಮತ್ತು 'ಗ್ರಾಮ್ಯಕಥಾ' ಮೊದಲಾದುವುಗಳನ್ನು ನೋಡಬಹುದು.

ಹೀಗೆ ವೆಂಕಟಾಚಾರ್ಯ ಮತ್ತು ಗಳಗನಾಥರ ಕೃತಿಗಳನ್ನು ತೌಲನಿಕವಾಗಿ ನೋಡಿದಾಗ ಅನೇಕ ಸಾದೃಶ್ಯಗಳೂ ವೈದೃಶ್ಯಗಳೂ ಕಂಡು ಬರುತ್ತವೆ. ಆದರೆ ಗಳಗನಾಥರು ಉತ್ತರ ಕರ್ನಾಟಕದಲ್ಲಿಯಂತೆ ನಿಜಾಮ ಸಂಸ್ಥಾನ ಮತ್ತು ಮೈಸೂರು ಸಂಸ್ಥಾನಗಳಲ್ಲಿಯೂ ತಕ್ಕ ಮಟ್ಟಿಗೆ ಚೆನ್ನಾಗಿಯೇ ಪರಿಚಿತರಾದರು. ಅವರ 'ಸದ್ಬೋಧ ಚಂದ್ರಿಕೆ'ಗೆ ಹೆಚ್ಚು ಜನ ಚಂದಾದಾರರು ಮೈಸೂರು ಪ್ರಾಂತದವರೇ ಆಗಿದ್ದರು. ಅವರ ಗ್ರಂಥಗಳ ಪ್ರಚಾರವೂ ಆ ಕಡೆಗೆ ಚೆನ್ನಾಗಿಯೇ ಇದ್ದಿತು. ಮೈಸೂರು–ಬೆಂಗಳೂರು ನಾಗರಿಕರೂ, ಅನೇಕ ಸಂಸ್ಥೆಗಳೂ ಅವರನ್ನು ಗೌರವಿಸಿದ್ದೂ ಉಂಟು.

ಆ ಪ್ರಮಾಣವಲ್ಲಿ ವೆಂಕಟಾಚಾರ್ಯರ ಮತ್ತು ಅವರ ಗ್ರಂಥಗಳ ಪ್ರಚಾರವಾಗಲಿಲ್ಲ. ಅವರ ಕಾಲಕ್ಕೆ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಬಗ್ಗೆ ಪ್ರೀತ್ಯಾದರಗಳು ಜನರಲ್ಲಿ ತೀರ ಕಡಿಮೆಯಾಗಿದ್ದುದೂ ಇದಕ್ಕೆ ಒಂದು ಕಾರಣವಾಗಿರಬಹುದು. ಅದರಂತೆ ವೆಂಕಟಾಚಾರ್ಯರ ಕಾದಂಬರಿಗಳು ಬಹುಜನಪ್ರಿಯವಾಗದಿರಲಿಕ್ಕೆ ಅವರ ಭಾಷೆಯೂ ಕಾರಣವಾಯಿತು. ಅದಕ್ಕೆ ಅವರ ಕಾದಂಬರಿಗಳು ಮೈಸೂರಲ್ಲಿ ಪಡೆದಷ್ಟು ಪ್ರಚಾರವನ್ನು ಉತ್ತರ ಕರ್ನಾಟಕದಲ್ಲಿ ಪಡೆಯಲಿಲ್ಲ. ಆದರೂ ಅವರ 'ಅಮೃತ ಪುಲಿನ'ವನ್ನು ಧಾರವಾಡದ 'ಕರ್ನಾಟಕ ವಿದ್ಯಾವರ್ಧಕ ಸಂಘ'ವು 1908ರಲ್ಲಿ ತನ್ನ 'ವಾಗ್ಭೂಷಣ ಗ್ರಂಥಮಾಲೆ'ಯಲ್ಲಿ ಪ್ರಕಟಿಸಿದ್ದಿತೆಂಬುದು ಗಮನಿಸಬೇಕಾದ ವಿಷಯ. ಅಲ್ಲದೆ ವೆಂಕಟಾಚಾರ್ಯರ ಕೆಲವು ಗ್ರಂಥಗಳಾದರೂ ಅನೇಕ ಸಲ ಪುನರ್ಮುದ್ರಿತವಾಗಿವೆ. 'ಆನಂದಮಠ,' 'ಚೌಧುರಾಣಿ,' 'ವಿಷವೃಕ್ಷ' ಮೊದಲಾದವುಗಳು ಹೆಚ್ಚು ಜನಪ್ರಿಯ

1. ಬಿ. ವೆಂಕಟಾಚಾರ್ಯ : ಚಿತ್ರವಿಚಿತ್ರಾವಳೀ, 2ನೆಯ ಭಾಗ, ಪುಟ 68

ವಾದುವಲ್ಲದೆ, ಗಳಗನಾಥರ ಕಾದಂಬರಿಗಳಂತೆ ಇವುಗಳು ಕೂಡ ಶಾಲೆ-ಕಾಲೇಜುಗಳ ಪರೀಕ್ಷೆಗಳಿಗಾಗಿ ವಿಶ್ವವಿದ್ಯಾಲಯಗಳಿಂದ ಪಠ್ಯವೆಂದು ನಿಯಮಿಸಲ್ಪಟ್ಟವು.

ಗಳಗನಾಥರ ಲೇಖನಕಾರ್ಯದ ವ್ಯಾಪ್ತಿಯು ವೆಂಕಟಾಚಾರ್ಯರದಕ್ಕಿಂತ ಹೆಚ್ಚು ಆಳವೂ, ವಿಸ್ತೃತವೂ ಆಗಿದೆ. ಗಳಗನಾಥರು ಕೆಲವಾದರೂ ಸ್ವತಂತ್ರ ಕಾದಂಬರಿಗಳನ್ನೂ ಇತರ ಗ್ರಂಥಗಳನ್ನೂ ಬರೆದರು. ಅಲ್ಲದೆ ಭಾಷಾಂತರಗಳಲ್ಲಿ ಕೂಡ ಅವರು ಹೆಚ್ಚಿನ ಸ್ವಾತಂತ್ರ್ಯ ವಹಿಸಿ ತಮ್ಮತನವನ್ನು ತೋರಿದರು. ಇದು ಭಾಷೆಯ ವಿಷಯಕ್ಕೆ ಮಾತ್ರ ಸೀಮಿತವಾಗಿ ಉಳಿಯದೆ, ಗ್ರಂಥವಿಷಯವನ್ನು ಬದಲಾವಣೆ ಮಾಡಿಕೊಳ್ಳುವಲ್ಲಿಯೂ ಕಂಡಿತು. ಅದರಿಂದ ಗಳಗನಾಥರ ಸ್ವಂತ ವ್ಯಕ್ತಿತ್ವವು ಅವರ ಕೃತಿಗಳಲ್ಲಿ ವ್ಯಕ್ತವಾಗಲು ಸಾಧ್ಯವಾಯಿತು. ವೆಂಕಟಾಚಾರ್ಯರ ಬಗ್ಗೆ ಈ ಮಾತನ್ನು ಹೇಳಲಾಗುವುದಿಲ್ಲ. ಗಳಗನಾಥರಲ್ಲಿದ್ದ ನೈತಿಕ, ಧಾರ್ಮಿಕ ಮತ್ತು ಬೋಧಕ ಗುಣಗಳು ಅವರ ಕೃತಿಗಳಲ್ಲಿ ಸ್ಪಷ್ಟವಾಗಿ ಮೂಡಿನಿಂತಿವೆ. ಅಲ್ಲದೆ ಅವರು ಭಾಷಾಂತರ ಅಥವಾ ಅನುವಾದಗಳಿಗೆ ಆಯ್ದುಕೊಳ್ಳುವ ಗ್ರಂಥಗಳಲ್ಲಿ ಕೂಡ ಒಂದು ಖಚಿತವಾದ ಉದ್ದೇಶ ವ್ಯಕ್ತವಾಗಿದೆ. ಅದು ಕೇವಲ ವಾಚನಾಭಿರುಚಿಗೇ ಸೀಮಿತವಾಗಿ ಉಳಿಯಲಿಲ್ಲ.

ವೆಂಕಟಾಚಾರ್ಯರು ಅಂಥ ವಿಶಿಷ್ಟ ಉದ್ದೇಶವನ್ನು ಇರಿಸಿಕೊಂಡಿದ್ದರೆಂಬುದು ಸ್ಪಷ್ಟವಾಗುವುದಿಲ್ಲ. ಕನ್ನಡಿಗರಲ್ಲಿ ಒಳ್ಳೆಯ ಕಾದಂಬರಿಗಳನ್ನು ಓದುವ ಕುತೂಹಲವನ್ನು ಅವರು ಕೆರಳಿಸಿದರು. ಆದರೆ ಇದಕ್ಕಿಂತ ಹೆಚ್ಚಾಗಿ ಒಳ್ಳೆಯ ರಸವತ್ತಾದ ಕಾದಂಬರಿಯು ಒಳ್ಳೆಯ ನೀತಿಯನ್ನು ಪ್ರತಿಪಾದಿಸುವಂಥದೂ ಆಗಿರಬೇಕೆಂದು ಗಳಗನಾಥರಂತೆ ಅವರು ಹಟ ತೊಡಲಿಲ್ಲ. ಅವರು ಬಂಕಿಮಚಂದ್ರರನ್ನು ಅಥವಾ ಬೇರೆ ಲೇಖಕರನ್ನು ಇದ್ದಕ್ಕಿದ್ದಂತೆ ಒಪ್ಪಿಕೊಂಡು ಬಿಟ್ಟರು. ಗಳಗನಾಥರು ಆಪಟೆಯವರಿಂದ ಕೂಡ ಅನೇಕ ಸಲ ಭಿನ್ನರಾಗಿ ಕಂಡಿದ್ದಾರೆ. ಹಾಗೆ ಗಳಗನಾಥರಂತೆ ವೆಂಕಟಾಚಾರ್ಯರು ತಮ್ಮ ಭಾಷಾಂತರಗಳಲ್ಲಿ ತಮ್ಮತನವನ್ನು ಮೆರೆಯಲಿಲ್ಲ.

ಈ ತೌಲನಿಕ ವಿಶ್ಲೇಷಣೆಯಲ್ಲಿ ಇವರಿಬ್ಬರ ಮಾರ್ಗಗಳು ಹೇಗೆ ಭಿನ್ನವಾಗಿದ್ದುವೆಂಬುದನ್ನು ಮಾತ್ರ ಪರಿಶೀಲಿಸಲಾಗಿದೆ. ಆದರೂ ಈ ಇಬ್ಬರಲ್ಲಿಯೂ ಒಂದು ಸಾಮ್ಯ ಒಡೆದು ಕಾಣುತ್ತದೆ. ಕನ್ನಡಿಗರಲ್ಲಿ ವಾಚನಾಭಿರುಚಿಯನ್ನು ಬೆಳೆಸಬೇಕು, ಅದಕ್ಕಾಗಿ ಹೊಸ ಕಾದಂಬರಿಗಳನ್ನು ಬೇರೆ ಭಾಷೆಯಿಂದ ಆಮದು ಮಾಡಿಕೊಳ್ಳಬೇಕು- ಎಂಬ ಕಳಕಳಿ ಮಾತ್ರ ಈ ಇಬ್ಬರಲ್ಲಿಯೂ ಅಷ್ಟೇ ತೀವ್ರವಾಗಿದ್ದಿತು.

ಹೀಗೆ ವೆಂಕಟಾಚಾರ್ಯರೂ, ಗಳಗನಾಥರೂ ತಮ್ಮ ವಿಶಿಷ್ಟ ಶೈಲಿಗಳಿಂದ, ತಮ್ಮ ವಿಶಿಷ್ಟ ಕೃತಿಗಳಿಂದ ಬಂಗಾಲಿ ಮತ್ತು ಮರಾಠಿ ಕೃತಿಗಳನ್ನು ಕನ್ನಡಕ್ಕೆ ತಂದು, ಆಗ ಬರಿದಾಗಿದ್ದ ಕನ್ನಡ ಸಾಹಿತ್ಯದ, ಮುಖ್ಯವಾಗಿ ಕಾದಂಬರಿಯ ಕಣಜವನ್ನು ತುಂಬಲು ಯತ್ನಿಸಿದರು. ಇವರಿಬ್ಬರ ಕೃತಿಗಳಿಂದ ಕನ್ನಡಕ್ಕೆ ಹೊಸತನವುಂಟಾಯಿತು; ಹೊಸ ಸಾಹಿತ್ಯ ಸೃಷ್ಟಿಗೆ ಇವರೇ ನಾಂದಿಯನ್ನು ಹಾಡಿದಂತಾಯಿತು.

ಇಂದಿನ ವಿಮರ್ಶಕರು ಈ ಮಹನೀಯರಿಬ್ಬರ ಕೃತಿಗಳಲ್ಲಿ ಹೆಚ್ಚಿನ ಆಸ್ಥೆಯನ್ನು ವಹಿಸದಿದ್ದರೂ ಇವರಿಬ್ಬರ ಐತಿಹಾಸಿಕ ಮಹತ್ತ್ವವು ಎಂದಿಗೂ ಕಡಿಮೆಯಾಗುವುದಿಲ್ಲ.

# ಸಮಾರೋಪ

## ನಾಡ ನಂದಾದೀಪ – ಗಳಗನಾಥರು

ಕನ್ನಡದ ನಾಡು ನುಡಿ ಹೀನದಿಸೆಗಿಳಿದಂದು
ಅದರ ಗತವೈಭವವ ಜನತೆಗರುಹಲು ಎಂದು
ಜನ್ಮ ತಳೆದಿರಿ ನೀವು. ಮಹಾರಾಷ್ಟ್ರ ಸಾಹಿತ್ಯ
ಜನರ ಮೋಹಿಸಿದಾಗ ಕನ್ನಡದ ಕಣಜವನು
ತುಂಬಲೆಳಸಿದ ಶ್ರೇಯ ನಿಮಗೆ ಸಲ್ಲುವುದೆ ಸರಿ !
ಮನರಂಜನೆಯ ಜೊತೆಗೆ ಜಾಗೃತಿಯ ಹುಟ್ಟಿಸುವ
ಗ್ರಂಥಗಳ ರಚಿಸಿದ್ದು ನಿಮ್ಮ ಉಜ್ವಲ ಸೇವೆ.
ಉಚ್ಚ ಶಿಕ್ಷಣವಿಲ್ಲ; ಮೇಲೆ ಬಡ ಶಿಕ್ಷಕರು,
ಆದರೂ ಬರಹಕ್ಕೆ ನಿಮ್ಮ ಜೀವನ ಮುಡಿಪು !
..............................................
ಆನೆ ಹೊರುವಷ್ಟು ಗ್ರಂಥಗಳ ಪ್ರಕಟಿಸಿದ ನೀವು
ಕರ್ನಾಟ ದೇವತೆಯ ಮುಡಿಯ ಸಿಂಗರಿಸುತ್ತ
ಕನ್ನಡಿಗರೆಲ್ಲರಿಗು ಭಾಗ್ಯನಿಧಿ ಎನಿಸಿದಿರಿ ![1]

ಎಂದು ಕವಿ ಶ್ರೀ ಎನ್. ಎಸ್. ಗದಗಕರ ಅವರು ಗಳಗನಾಥರನ್ನು ಕುರಿತು ಹಾಡಿದರು. ಆದರೆ ಹಾಡು ಬರೆಯಲಾರದ ಅಸಂಖ್ಯರು ಗಳಗನಾಥರನ್ನು ಮನದಲ್ಲಿಯೇ ಹಾಡಿ ಹರಸಿದರು.

ಪ್ರಸ್ತುತ ಪ್ರಬಂಧದ 'ಗಳಗನಾಥರ ಪರಿಸರ' ಎಂಬ ಪ್ರಕರಣದಲ್ಲಿ ಗಳಗನಾಥರು ಉದಯವಾಗುವ ಮೊದಲು ಉತ್ತರ ಕರ್ನಾಟಕದಲ್ಲಿ ಕನ್ನಡದ ಸ್ಥಿತಿಗತಿಗಳು ಹೇಗಿದ್ದುವೆಂಬುದನ್ನು ನೋಡಲಾಯಿತು. ಅವರ ಮೊದಲಿನ ಸೂರಿಗಳೆಲ್ಲ ಆಗ ಕನ್ನಡ ಭಾಷೆಯನ್ನು ಪುನಃ ಪ್ರತಿಷ್ಠಾಪಿಸುವಲ್ಲಿಯೇ ತಮ್ಮ ಶಕ್ತಿಯನ್ನೆಲ್ಲ ಮುಡುಪಾಗಿಸಿದ್ದರು. ಗಳಗನಾಥರು ಕಾರ್ಯರಂಗಕ್ಕಿಳಿದಾಗ ಭೂಮಿ ಎಷ್ಟೋ ಮಟ್ಟಿಗೆ ಸಿದ್ಧವಾಗಿತ್ತು, ಹದವಾಗಿತ್ತು. ಅವರು ಜನತೆಗೆ ಬೇಕಾದ ಸಾಹಿತ್ಯವನ್ನು ಕನ್ನಡದಲ್ಲಿ ಒದಗಿಸಿ ಅಪಾರವಾಗಿ ಜನಮನವನ್ನು ತಣಿಸಿದರು. ಬಲ್ಲವರು ಇಂಗ್ಲಿಷಿನಲ್ಲಿ ಅಥವಾ ಮರಾಠಿಯಲ್ಲಿ ಸಾಹಿತ್ಯರಸಪಾನ ಮಾಡಿ ತಣಿಯುತ್ತಿದ್ದರು; ಗಳಗನಾಥರು ಸಾಮಾನ್ಯರಿಗೆ ಕನ್ನಡದಲ್ಲಿಯೇ ಸುರಸ, ಸುಗ್ರಾಸ ಭೋಜನವನ್ನು ಒದಗಿಸಿದರು.

---

1. ಕರ್ಮವೀರ, ವಿಶೇಷ ಸಂಚಿಕೆ, 5-1-1969

ಸಾರ್ಥಕ ಭಾಷಾಂತರವನ್ನು ಕುರಿತು ಶ್ರೀ ಮಾಸ್ತಿಯವರು, "ಭಾಷಾಂತರ ಮೂಲದಷ್ಟು ಸುಂದರವಾಗುವುದು ಸಾಧ್ಯವಿಲ್ಲ. ಆದರೂ ಮೂಲದ ಭಾಷೆಯನ್ನೂ ಭಾಷಾಂತರದ ಭಾಷೆಯನ್ನೂ ಚೆನ್ನಾಗಿ ಅಭ್ಯಾಸ ಮಾಡಿರುವ ಸಾಹಿತಿ ಒಬ್ಬನು ಮಾಡಿದ ಭಾಷಾಂತರ ಅವನ ಭಾಷೆಯ ಜನರಿಗೆ ಮೂಲ ಕೃತಿಯ ಆನಂದದ ಬಹುಭಾಗವನ್ನು ತಂದು ಕೊಡಬಲ್ಲುದು. ಮೂಲದ ನೂರು ಪಾಲಿನ ಸೌಂದರ್ಯ ಆನಂದಗಳ ತೊಂಬತ್ತು, ಎಂಬತ್ತು, ಎಪ್ಪತ್ತು ಪಾಲಿನಷ್ಟು ಸೌಂದರ್ಯ ಆನಂದಗಳು ಬೇರೆ ಭಾಷೆಯ ಜನರಿಗೆ ಹೀಗೆ ದೊರೆತದ್ದಾದರೆ ಭಾಷಾಂತರ ಸಾರ್ಥಕವಾಯಿತು. ಎನ್ನಲಡ್ಡಿಯಿಲ್ಲ"[1] ಎಂದಿರುವರು.

ಮಾಸ್ತಿಯವರ ಈ ಅಳತೆಗೋಲಿನಿಂದ ನೋಡಿದರೆ ಗಳಗನಾಥರ ಭಾಷಾಂತರ– ಅನುವಾದಗಳು ನಿಜವಾಗಿಯೂ ಸಾರ್ಥಕವಾಗಿವೆ; ಅಷ್ಟೇ ಅಲ್ಲ, ಮೂಲ ಕೃತಿಗಳು ಮರಾಠಿ ಜನತೆಯ ಮೇಲೆ ಬೀರಿದ ಪ್ರಭಾವಕ್ಕಿಂತ ಒಂದು ರೀತಿಯಲ್ಲಿ ಹೆಚ್ಚಿನ ಪ್ರಭಾವವನ್ನೂ ಬೀರಿವೆ. ಇವುಗಳನ್ನು ಓದಿ ಕನ್ನಡ ಜನ ಆನಂದ ಪಟ್ಟರಲ್ಲದೆ ಮರಾಠಾ ಮತ್ತು ರಜಪೂತ ವೀರರೂ ನಮ್ಮವರೇ ಎಂಬ ವಿಶಾಲ ಅಭಿಮಾನವನ್ನೂ ತಾಳಿದರು. ಆ ಶ್ರೇಯಸ್ಸು ಗಳಗನಾಥರದಾಯಿತು. ಕನ್ನಡಿಗರಲ್ಲಿ ಈ ದ್ವಿವಿಧವಾದ ಪರಿಣಾಮವನ್ನು ಬೀರಲು ಕಾರಣರಾದ ಗಳಗನಾಥರ ಕಾಣಿಕೆ ಕಡಿಮೆಯದಲ್ಲ.

ಇನ್ನು ಗಳಗನಾಥರು ಕೇವಲ ಭಾಷಾಂತರಕಾರರಾಗಿ, ಅನುವಾದಕರಾಗಿ ಉಳಿಯದೆ ಸ್ವತಂತ್ರ ಕಾದಂಬರಿಗಳನ್ನೂ ಬರೆದರೆಂಬುದನ್ನು ಗಮನಿಸಲಾಗಿದೆ. ಕೆಲವು ವಿಮರ್ಶಕರು ಈ ಸ್ವತಂತ್ರ ಕೃತಿಗಳನ್ನು ಹೆಚ್ಚಾಗಿ ಲಕ್ಷಿಸದಿದ್ದರೂ, ಇನ್ನು ಕೆಲವರು ಇವುಗಳಲ್ಲಿ ಹೆಚ್ಚಿನ ಕಲಾಮಟ್ಟವನ್ನು ಕಾಣದಿದ್ದರೂ, ಆ ಅನುವಾದ ಯುಗದಲ್ಲಿಯೇ ಗಳಗನಾಥರು ಸ್ವತಂತ್ರ ಕಾದಂಬರಿಯ ಹುಟ್ಟು–ಬೆಳವಣಿಗೆಗೆ ಕಾರಣರಾದರೆಂಬುದು ಅವಶ್ಯವಾಗಿ ಲಕ್ಷಿಸಬೇಕಾದ ಮಾತು. ಗಳಗನಾಥರೆಂದರೆ ಅನುವಾದಕರೆಂಬ ಸಾಮಾನ್ಯ ಅಭಿಪ್ರಾಯ ಸಂಪೂರ್ಣ ತಪ್ಪಾದುದೆಂಬುದನ್ನು ಆಗಲೇ ನೋಡಲಾಗಿದೆ.

ಇದಕ್ಕಿಂತಲೂ ಬಹು ಮುಖ್ಯವಾದ ಮಾತೆಂದರೆ ಅವರು ಆ ಕಾಲದ ಜನರಲ್ಲಿ ಹುಟ್ಟಿಸಿದ ವಾಚನಾಭಿರುಚಿ. ಇದಕ್ಕಾಗಿ ಕನ್ನಡಿಗರು ಅವರಿಗೆ ಚಿರಋಣಿಗಳಾಗಿರಬೇಕಾಗಿದೆ. ಎಂಥ ಕಾದಂಬರಿಗಳನ್ನೇ ಬರೆಯಲಿ, ಅವರು ಜನರಲ್ಲಿ ಕಾದಂಬರಿಗಳ ಹುಚ್ಚನ್ನೇ ಹಿಡಿಸಿದರು. ಗಳಗನಾಥರ 'ಪದ್ಮನಯನಾ,' 'ಮೃಣಾಲಿನಿ,' 'ಈಶ್ವರೀ ಸೂತ್ರ'ಗಳನ್ನು ಓದಿ ಮೋಹಿತರಾದ ಕನ್ನಡಿಗರು ಹೊಸಹೊಸ ಕಾದಂಬರಿಗಳಿಗಾಗಿ ಅಕ್ಷರಶಃ ಹಪಾಪಿಸಹತ್ತಿದರು. ಅದರಿಂದಲೇ ಗಳಗನಾಥರು ಪುಂಖಾನುಪುಂಖವಾಗಿ ಕಾದಂಬರಿಗಳನ್ನು ಕೊಡಬೇಕಾಯಿತು. ಗಳಗನಾಥರ ಈ ಉಪಕಾರವನ್ನು ಎಲ್ಲ ವಿಮರ್ಶಕರೂ ಕೃತಜ್ಞತೆಯಿಂದ ನೆನೆದಿರುವರು.

"ಏನನ್ನಾದರೂ ಓದಬೇಕೆಂಬ ಹಂಬಲದಿಂದ ಎಂತೆಂತಹ ಕಗ್ಗಗಳನ್ನೋ ಓದುತ್ತಲಿದ್ದ ಸಾಮಾನ್ಯ ವಾಚಕರಿಗೆ ಗಳಗನಾಥರ ಕಾದಂಬರಿಗಳು ತುಂಬ ಮೆಚ್ಚಿಕೆಯವಾದುವು. ಎಂದೂ ಪುಸ್ತಕವನ್ನು ಕೈಯಿಂದೆತ್ತದ, ವಾಚನದ ಅಭಿರುಚಿಯೇ ಇಲ್ಲದ ಸಾಕ್ಷರಿ ಕನ್ನಡಿಗರೂ ಗಳಗನಾಥರ ಕಾದಂಬರಿಗಳ ಮೇಲೆ ಕಣ್ಣಾಡಿಸತೊಡಗಿದರು. ಅಕ್ಷರಗಳನ್ನು ಅರಿಯದವರೂ ಇವರ ಕಾದಂಬರಿಗಳನ್ನು ತರಿಸಿ ಬೇರೆಯವರ ಬಾಯಿಯಿಂದ ಓದಿಸಿ ಕೇಳಿ ಆನಂದಿಸುತ್ತಿದ್ದರು. ಎಂತಲೇ

1. ಮಾಸ್ತಿ ವೆಂಕಟೇಶ ಅಯ್ಯಂಗಾರ: ಪ್ರಸಂಗ 3; ಪುಟ 181

'ಸದ್ಬೋಧ ಚಂದ್ರಿಕೆ'ಯ ಚಂದಾದಾರರ ಬಳಗ ಎಲ್ಲೆಲ್ಲಿಯೂ ಬೆಳೆದುನಿಂತಿತು; ಗಳಗನಾಥರ ಕಾದಂಬರಿಗಳು ಕನ್ನಡಿಗರ ಮನೆಮನೆಯಲ್ಲಿಯೂ ಕಣ್ಣಿಗೆ ಬೀಳತೊಡಗಿದುವು. ಸಾಮಾನ್ಯರಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸಿದ ಶ್ರೇಯಸ್ಸು ಗಳಗನಾಥರ ಕಾದಂಬರಿಗಳಿಗೆ ಸಲ್ಲುವುದಲ್ಲದೆ, ಬೇರೆ ಯಾರ ಕೃತಿಗಳೂ ಆ ಮನ್ನಣೆಗೆ ಪಾತ್ರವಾಗಲಾರವು"[1] ಎಂದು ಹಳೆಯ ದಿನಗಳನ್ನು ಜ್ಞಾಪಿಸಿಕೊಂಡ ಶ್ರೀ ಬೆಟಗೇರಿ ಕೃಷ್ಣಶರ್ಮಾ ಅವರ ಮಾತಿನಲ್ಲಿ ಅತಿಶಯೋಕ್ತಿಯಿಲ್ಲ. ಅಕ್ಷರ ವರಿಯದ ಹಳ್ಳಿಗರಿಗೆ ಅವರೇ ಸ್ವತಃ ಗಳಗನಾಥರ ಕಾದಂಬರಿಗಳನ್ನು ಓದಿ ಅವರನ್ನು ಸಂತುಷ್ಟ ಪಡಿಸಿದುದನ್ನು ಅವರು ಬೇರೊಂದೆಡೆಗೆ ತಿಳಿಸಿರುವರು.[2]

ಗಳಗನಾಥರು ತಮಗೆ ವಾಚನದ ಹುಚ್ಚನ್ನು ಹೇಗೆ ಹಿಡಿಸಿದ್ದರೆಂಬುದನ್ನು ಶ್ರೀರಂಗರೂ ನೆನೆದಿರುವರು. 13–14ವರ್ಷದ ಬಾಲಕರಾದ ಅವರು 'ಸದ್ಬೋಧ ಚಂದ್ರಿಕೆ'ಯಲ್ಲಿ ಧಾರಾ ವಾಹಿಯಾಗಿ ಬರುತ್ತಿದ್ದ ಗಳಗನಾಥರ ಕಾದಂಬರಿಗಳನ್ನು ಓದುವುದಕ್ಕಾಗಿ ಪ್ರತಿ ತಿಂಗಳು ಮೊದಲ ತಾರೀಕನ್ನು ಚಾತಕ ಪಕ್ಷಿಯಂತೆ ಎದುರು ನೋಡುತ್ತಿದ್ದರು. ಅನೇಕ ಸಲ ಆ ಸಂಚಿಕೆ ಯನ್ನು ಮೊದಲು ತಮಗೆ ಒಪ್ಪಿಸಬೇಕೆಂದು ವಾಚನಾಲಯದ ಕಾರ್ಯದರ್ಶಿಯನ್ನು ಒಪ್ಪಿಸಲು ಅವನಿಗೆ ಚಹದ ಲಂಚವನ್ನೂ ಕೊಡುತ್ತಿದ್ದರು. ಆದರೆ ಕಾದಂಬರಿಗಳನ್ನು ಓದುವುದು ವಿದ್ಯಾರ್ಥಿ ಗಳಿಗೆ ವೇಳೆಯ ಅಪವ್ಯಯವೆಂದು ತಿಳಿದ ಹಿರಿಯರು ಅದಕ್ಕೆ ಅಡ್ಡ ಬರುತ್ತಿದ್ದರು."ಅದ ಕ್ಕಾಗಿ ಅನೇಕ ಸಲ ಅವರನ್ನು ತಪ್ಪಿಸಿ, ಕೆಲವೊಮ್ಮೆ ಅವರಿಂದ ಶಿಕ್ಷೆಯನ್ನು ಸಹಿಸಿ ನಾವು ಓದು ತ್ತಿದ್ದೆವು"[3] ಎಂದಿರುವರು.

ತರುಣರು ಕಾದಂಬರಿಗಳನ್ನು ಓದಬಾರದೆಂಬ ಅಭಿಪ್ರಾಯ ಹಿರಿಯರಲ್ಲಿ ರೂಢವಾಗಿದ್ದ ಕಾಲವದು. ಆದರೆ ಗಳಗನಾಥರ ಕಾದಂಬರಿಗಳು ಆಬಾಲವೃದ್ಧರಿಗೆ ಗುಂಗುಹಿಡಿಸುವ ಮಾದಕ ಗುಳಿಗೆಗಳಂತಾಗಿದ್ದುವು.

"ಕಾದಂಬರೀ ಸಾಹಿತ್ಯ ಪ್ರಕಾರವನ್ನು ನಿರ್ದುಷ್ಟವಾಗಿ ಜನಪ್ರಿಯಗೊಳಿಸಿದ ಶ್ರೇಯಸ್ಸು ಗಳಗನಾಥರಿಗೇ ಸಲ್ಲುತ್ತದೆ. ಅದರ ಮೂಲ ಕಾರಣವೆಂದರೆ, ಗಳಗನಾಥರು ಅತಿ ಸಾಮಾನ್ಯ ವಾಚಕನನ್ನು ತಮ್ಮ ಲೇಖನಿಯ ಲಕ್ಷ್ಯವಾಗಿಟ್ಟುಕೊಂಡಿದ್ದರು. ಇವರ ಕಾಲಾವಧಿಯಲ್ಲಿಯೇ ಹಲವು ಐತಿಹಾಸಿಕ ಕಾದಂಬರಿಕಾರರು ಆಗಿಹೋಗಿದ್ದಾರೆ. ಆದರೆ ಅವರು ಗಳಗನಾಥರ ಮಟ್ಟಕ್ಕೆ ನಿಲ್ಲುವವರಾಗಿರಲಿಲ್ಲ. ಕೆರೂರ ವಾಸುದೇವಾಚಾರ್ಯರಿಗೆ ಆ ಯೋಗ್ಯತೆ ಇದ್ದರೂ ಅವರು ಹೆಚ್ಚು ಕಾದಂಬರಿಗಳನ್ನು ಬರೆಯಲಿಲ್ಲ. ಹೀಗಾಗಿ ಗಳಗನಾಥರು ಸಂಪೂರ್ಣ ಎರಡು ದಶಕಗಳ ವರೆಗೆ (1909–28) ಕನ್ನಡ ಕಾದಂಬರೀ ಕ್ಷೇತ್ರದ ಸಾಮ್ರಾಟರಾಗಿ ಬಾಳಿದರು. ಜೊತೆಗೆ ಕನ್ನಡಿಗರಲ್ಲಿಯ ವಾಚನಾಭಿರುಚಿಯನ್ನು ವ್ಯಾಪಕವಾಗಿ ಹೆಚ್ಚಿಸಿ ಮುಂದಿನ ಕಾದಂಬರಿಕಾರರಿಗೆ. ಇತರ ಲೇಖಕರಿಗೆ ಆ ಮಾರ್ಗವನ್ನು ಸುಗಮವಾಗಿಸಿದರು."[4]

---

1. ಬೆಟಗೇರಿ ಕೃಷ್ಣಶರ್ಮಾ : 'ಕನ್ನಡ ಕಾದಂಬರೀ ಪ್ರಪಂಚಕ್ಕೆ ಗಳಗನಾಥರ ಕೊಡುಗೆ,' ಸದ್ಬೋಧ ಚಂದ್ರಿಕೆ, ವಿಶೇಷಾಂಕ 1969, ಪುಟ 65
2. ಕರ್ಮವೀರ, ದಿ. 5–1–1969, ಪುಟ 18
3. ಹಾ. ಮಾ. ನಾಯಕ (ಸಂ) : 'ಗಳಗನಾಥ'ದಲ್ಲಿ, ಶ್ರೀರಂಗರ ಅಧ್ಯಕ್ಷ ಭಾಷಣ, ಪುಟ 83
4. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 86

ಗಳಗನಾಥರು ಸಾಹಿತ್ಯದಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸಿದರೆಂಬುದನ್ನು ಎಲ್ಲರೂ ಹೇಳಿರುವುದು ನಿಜವಾದರೂ, ಅದು ಸದಭಿರುಚಿಯಾಗಿತ್ತೆಂಬುದನ್ನೂ ನಾವಿಲ್ಲಿ ಅವಶ್ಯವಾಗಿ ನೆನೆಯಬೇಕು. ಗಳಗನಾಥರು ರಸಭರಿತ ಕಾದಂಬರಿಗಳನ್ನು ಬರೆದರು; ಅಷ್ಟೇ ಅಲ್ಲ ಅವು ಸುರಸಭರಿತವೂ ಆಗಿದ್ದುವು. ಅವರ ಗ್ರಂಥಮಾಲೆ 'ಗಳಗನಾಥ ಸುರಸ ಗ್ರಂಥಮಾಲೆ; ಅದುವೇ ಅವರ ಧೋರಣೆಯನ್ನು ಸೂಚಿಸುತ್ತದೆ.

ಹಾಗಿರುವುದರಿಂದಲೇ ಗಳಗನಾಥರ ಕಾದಂಬರಿಗಳ ಬೇಡಿಕೆ ಹೆಚ್ಚುತ್ತಲೇ ಹೋಯಿತು. ಅನುಕೂಲವಿದ್ದವರೆಲ್ಲರೂ'ಸದ್ಬೋಧ ಚಂದ್ರಿಕೆ'ಗೆ ಚಂದಾದಾರರಾದರು; ಅವರ ಕಾದಂಬರಿಗಳನ್ನು ಕೊಂಡರು. ಉಳಿದವರು ನೆರೆಮನೆಯವರಲ್ಲಿ ಓದಿ ತೃಪ್ತರಾದರು. ಗಳಗನಾಥರ ಹೆಸರು ಹಳ್ಳಿಹಳ್ಳಿಗೆ, ಮನೆಮನೆಗೆ ಮುಟ್ಟಿತು. 'ಸದ್ಬೋಧ ಚಂದ್ರಿಕೆ'ಯ ಪ್ರಸಾರವು ಮುಖ್ಯವಾಗಿ ಗಳಗನಾಥರ ಕಾದಂಬರಿಗಳಿಂದಲೇ ಕಲ್ಪನಾತೀತವಾಗಿ ಬೆಳೆಯಿತು. ಏಳು ಸಾವಿರ 'ಸದ್ಬೋಧ ಚಂದ್ರಿಕೆ'ಯ ಪ್ರತಿಗಳನ್ನು ಅಗಡಿಯಿಂದ, ಅಕ್ಷರಶಃ ಚಕ್ಕಡಿಯ ಮೇಲೆ ಹೇರಿಕೊಂಡು, ಹಾವೇರಿಗೆ ಹೋಗಿ ಅಂಚೆಯಿಂದ ಕಳಿಸಬೇಕಾಯಿತು. 'ಚಂದ್ರಿಕೆ'ಯನ್ನು ಏಳು ಸಾವಿರ ಜನರು ಕೊಂಡು ಓದಿದರು, ಹಾಗಿರುವಾಗ ಕೊಳ್ಳದೆ ಓದಿದವರ ಸಂಖ್ಯೆ ಎಷ್ಟೆಂಬುದನ್ನು ಊಹಿಸಿಯೇ ತಿಳಿಯಬೇಕು.

"ನನ್ನ ಈ ಇಪ್ಪತ್ತು ವರ್ಷದ ಕಾದಂಬರೀ ಲೇಖನದಿಂದ ಕರ್ನಾಟಕದಲ್ಲಿ ವಾಚನಾಭಿರುಚಿಯು ಹೆಚ್ಚಿರುವದೆಂದು ಕನ್ನಡಿಗರ ಭಾವನೆಯಾದದ್ದನ್ನು ನಾನು ಕಿವಿಯಿಂದ ಕೇಳಿದ್ದೆನು; ಆದರೆ ಈಗ ಎರಡು ವರ್ಷಗಳಿಂದ ಊರೂರಿಗೆ ಹೋಗಿ ಪುಸ್ತಕ ಮಾರುತ್ತಿರುವಾಗ, ಹಳ್ಳಿಹಳ್ಳಿಗಳಲ್ಲಿಯೂ ನನ್ನ ಪುಸ್ತಕಗಳು ಇರುತ್ತಿರುವದನ್ನೂ ಸಾಧಾರಣವಾಗಿ ಅಕ್ಷರಸ್ತರಾದವರು ನನ್ನ ಒಂದಿಲ್ಲೊಂದು ಕಾದಂಬರಿಯನ್ನು ಓದಿರುವದನ್ನೂ ನೋಡಿ ನನಗೆ ಬಹಳ ಸಮಾಧಾನವಾಗುತ್ತಿರುವದು. ಈ ಮಾತಿನ ಅನುಭವವು ಬೆಂಗಳೂರಿನಲ್ಲಿಯೂ ಪುಸ್ತಕ ಮಾರುತ್ತಿರುವ ನಮ್ಮವರಿಗೆ ಬಂದಿರುತ್ತದೆ. ಒಟ್ಟಿಗೆ ಕಾದಂಬರೀ ಲೇಖನದಿಂದ ಗಳಗನಾಥನು ಎಲ್ಲರ ಪರಿಚಯಸ್ತನಾಗಿರುವನು"[1] ಎಂದು ಸ್ವತಃ ಗಳಗನಾಥರೇ 1928ರಲ್ಲಿ ಬರೆದಿರುವರು.

1898ರಲ್ಲಿ ಗಳಗನಾಥರು ತಮ್ಮ ಪ್ರಪ್ರಥಮ ಕಾದಂಬರಿಯನ್ನು ಪ್ರಕಟಿಸಿದಾಗ ಉತ್ತಮ ಕಾದಂಬರಿಯ ಅವಶ್ಯಕತೆಯ ಮೂರು ಕಾರಣಗಳನ್ನು ಹೇಳಿದ್ದರಷ್ಟೇ. ಅವುಗಳಲ್ಲಿ "ವಾಚನಾಭಿರುಚಿ ಇಲ್ಲದ ಜನರಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸುವ" ಅವರ ಉದ್ದೇಶವು ತಮ್ಮ ಜೀವಿತ ಕಾಲದಲ್ಲಿಯೇ ಸಫಲವಾದುದನ್ನು ಕಂಡ, ಕೇಳಿದ ಗಳಗನಾಥರು ನಿಜವಾಗಿಯೂ ಧನ್ಯರೇ ಸರಿ.

ಗಳಗನಾಥರ ಕಾದಂಬರಿಗಳು ಜನಪ್ರಿಯವಾಗಲಿಕ್ಕೆ ಕಾರಣಗಳೂ ಇದ್ದುವು. ಅದನ್ನು ಅವರೇ ವಿಶ್ಲೇಷಿಸಿರುವರು. ಶ್ರೇಷ್ಠ ನಾಯಕನಿರುವ ಕಥಾವಸ್ತು, ಸಂಜೀವನೀಕೃತ ಭಾಷಾ ಶೈಲಿ, ಮತ್ತು ಓದುಗರೊಂದಿಗೆ ಸಮರಸವಾಗಿ ಅವರ ಅಂತಃಕರಣವನ್ನು ಅರಿತುಕೊಂಡು ಬರೆಯುವ ರೀತಿ–ಇವುಗಳಿಂದ ತಮ್ಮ ಕಾದಂಬರಿಗಳು ಜನಪ್ರಿಯವಾದುವೆಂದು ಗಳಗನಾಥರು ಹೇಳಿರುವರು.[2] ಕಥಾನಾಯಕ ಮತ್ತು ಕಥಾವಸ್ತುವಿನ ಆಯ್ಕೆ ಗಳಗನಾಥರ ಮನೋಧರ್ಮದಂತೆ

1. ಗಳಗನಾಥ : ಸದ್ಗುರು ಪ್ರಭಾವ. ಪುಟ 36
2. ಅದೇ, ಪುಟ 37–39

ಆ ಕಾಲದ ಸಾತ್ತ್ವಿಕ ವಾಚಕರ ಮನೋಧರ್ಮವನ್ನೂ ಸೂಚಿಸುತ್ತದೆ. ವಾಚಕರ ಅಭಿಲಾಷೆಯನ್ನು ಅರಿತು, ತಮ್ಮ ಉದ್ದೇಶವೂ ಈಡೇರುವಂತೆ ರುಚಿಕಟ್ಟಾಗಿ ಬರೆದರೆಂಬುದು ಗಳಗನಾಥರ ಸಮಕಾಲೀನ ಪ್ರಜ್ಞೆಯನ್ನೂ ಸೂಚಿಸುತ್ತದೆ.

"ನಾನು ಶಬರಿಯು, ವಾಚಕರು ಶ್ರೀರಾಮರು"[1] ಎಂದು ವಾಚಕರನ್ನು ಅತ್ಯಂತ ಗೌರವದಿಂದ ಕಂಡ ಗಳಗನಾಥರು, ಕೆಲವರು ಬಯಸಿದರೆಂದು ಹೀನ ಅಭಿರುಚಿಯ "ಚಹಾದಂಗಡಿಯ ಸವಿ ತಿನಸುಗಳಂಥ ಕಾದಂಬರಿ"ಗಳನ್ನು ಬರೆಯಲು ನಿರಾಕರಿಸಿದುದೂ ಗಮನಾರ್ಹವೇ ಸರಿ. 1899ರಲ್ಲಿ ಮಲೆಯಾಳಿಯಿಂದ 'ಸುಕುಮಾರಿ' ಎಂಬ ಕಾದಂಬರಿಯು ಕನ್ನಡಕ್ಕೆ ಪರಿವರ್ತಿತವಾಯಿತು. ಅದರ ಮುನ್ನುಡಿಯಲ್ಲಿ "ಯಾವ ಭಾಷೆಯಲ್ಲಾಗಲಿ ಕಾದಂಬರಿಗಳು ಓದುವವರೆಲ್ಲರ, ಮುಖ್ಯತಃ ಯೌವನ ಪ್ರಾಯದವರ ಮನಸ್ಸನ್ನು ಕೆಡಿಸುವ ವಿಷ ಬೆರಸಿದ್ದಾಗಿರುತ್ತವೆ"[2] ಎಂದು ಹೇಳಲಾಗಿದೆ. ಆದರೆ ಗಳಗನಾಥರು ವಿಷ ಬೆರಸಿದ ಕಾದಂಬರಿಗಳನ್ನು ಬರೆಯಲಿಲ್ಲ. ಧನದ ಆಸೆಗೆ ಬಿದ್ದು ವಾಚಕರು ಬಯಸಿದಂಥ ಹೀನ ರುಚಿಯ ಕಾದಂಬರಿಗಳನ್ನು ಬರೆಯುವುದು ಅಂಥ ಜನಪ್ರಿಯ ಲೇಖಕನಿಗೆ ಕಷ್ಟವಾಗಿರಲಿಲ್ಲ. ಆದರೆ ಹಾಗೆ ಅವರು ಕನ್ನಡಿಗರ ಸದಭಿರುಚಿಯನ್ನು ಕೆಡಿಸಲಿಲ್ಲವೆಂಬುದೂ ಒಂದು ಉಪಕಾರವೇ ಸರಿ. ಇಂದಿನ ಕೆಲವು ಕಾದಂಬಂಬರಿಕಾರರನ್ನು ನೋಡಿದರೆ, ಈ ಮಾತಿನ ಮಹತ್ತ್ವ ಸ್ಪಷ್ಟವಾಗುತ್ತದೆ.

ಗಳಗನಾಥರ ಜನಪ್ರಿಯತೆ ಎಷ್ಟು ಹೆಚ್ಚಾಗಿದ್ದಿತೆಂದರೆ, ಅವರ ಬಹುಶಃ ಎಲ್ಲ ಕಾದಂಬರಿಗಳೂ ಆಗಾಗ ಪುನರ್ಮುದ್ರಣಗೊಳ್ಳುತ್ತಲೇ ಇದ್ದುವು. ಅವರ ಪ್ರತಿಯೊಂದು ಕಾದಂಬರಿಯು ಯಾವ ಯಾವ ವರ್ಷ ಪುನರ್ಮುದ್ರಣಗೊಂಡಿತು, ಪ್ರತಿ ಸಲ ಎಷ್ಟೆಷ್ಟು ಪ್ರತಿಗಳು ಪ್ರಕಟವಾದುವು ಎಂಬುದರ ವಿವರಗಳನ್ನು ತಿಳಿಯುವುದು ಈಗ ಸಾಧ್ಯವಿಲ್ಲ. ದುರ್ದೈವದಿಂದ ನಮ್ಮಲ್ಲಿ ಇಂಥ ವಿವರಗಳನ್ನು ಒದಗಿಸಬೇಕೆಂಬ ವಿಚಾರ ಪ್ರಕಾಶಕರಿಗೆ ಇಲ್ಲ.

ಆದರೂ, ಸಾಮಾನ್ಯವಾಗಿ ಗಳಗನಾಥರ ಪ್ರತಿಯೊಂದು ಕಾದಂಬರಿಯೂ ಕನಿಷ್ಠ ನಾಲ್ಕು ಮುದ್ರಣಗಳನ್ನು ಕಂಡಿದೆ ಎಂದು ಹೇಳಬಹುದು. ಒಂದೆರಡು ಕಾದಂಬರಿಗಳಂತೂ ಏಳೆಂಟು ಮುದ್ರಣಗಳನ್ನು ಕಂಡಿವೆ. ಇದೇನು ಸಾಮಾನ್ಯವಾದ ಸಂಗತಿಯಲ್ಲ. ಗಳಗನಾಥರ ಗ್ರಂಥಗಳು ಪ್ರತಿ ಆವೃತ್ತಿಯಲ್ಲಿ ಐದೈದು ಸಾವಿರ ಅಚ್ಚಾಗುತ್ತಿದ್ದವೆಂದು ದ. ಕೃ. ಭಾರದ್ವಾಜರು ಅಭಿಪ್ರಾಯ ಪಡುವರು.[3] ಆದರೆ ಗಳಗನಾಥರ ಎಲ್ಲ ಗ್ರಂಥಗಳೂ ಪ್ರತಿಯೊಂದು ಆವೃತ್ತಿಯಲ್ಲಿ ಅಥವಾ ಪ್ರಥಮ ಆವೃತ್ತಿಯಲ್ಲಿ ಐದು ಸಾವಿರ ಪ್ರತಿಗಳೇ ಇರುತ್ತಿದ್ದುವೆಂದು ಹೇಳಲಿಕ್ಕೆ ಆಧಾರಗಳಿಲ್ಲ. ಆದರೂ 1931ರಲ್ಲಿ ಪ್ರಕಟವಾದ ಅವರ 'ಮಹಾಭಾರತಾಮೃತ-ಆದಿಪರ್ವ'ದ ಪ್ರಥಮಾವೃತ್ತಿಯಲ್ಲಿ ಅವರು ಐದು ಸಾವಿರ ಪ್ರತಿಗಳನ್ನೇ ಹೊರಡಿಸಿದ್ದರೆಂಬುದು ನಿಜ.

ಗಳಗನಾಥರ ಕೆಲವು ಗ್ರಂಥಗಳ ಪ್ರಥಮಾವೃತ್ತಿಯಲ್ಲಿ ಪ್ರಕಟವಾದ ಪ್ರತಿಗಳು ಎಷ್ಟೆಂಬುದು ತಿಳಿದು ಬರುತ್ತದೆ.

| | | |
|---|---|---|
| ಗಿರಿಜಾಕಲ್ಯಾಣ ಸಾರ (1912).... | 2500 | ಪ್ರತಿಗಳು |
| ದಾಂಪತ್ಯ (1912).... | 2500 | ,, |

1. ಗಳಗನಾಥ : ಸದ್ಗುರು ಪ್ರಭಾವ, ಪುಟ 40
2. ಶ್ರೀನಿವಾಸ ಹಾವನೂರ: ಹೊಸಗನ್ನಡದ ಅರುಣೋದಯ, ಪುಟ 540
3. ದ. ಕೃ. ಭಾರದ್ವಾಜ : 'ಕನ್ನಡ ನುಡಿಭಕ್ತರು–18, ಗಳಗನಾಥರು,' ಕನ್ನಡ ನುಡಿ, ಡಿಸೆಂಬರ 1939

| | | |
|---|---|---|
| ಕುಟುಂಬ (1913).... | 4500 | ಪ್ರತಿಗಳು |
| ಬಂಧವಿಮೋಚನಾಂತರ್ಗತ ಭಗವತೀ ಕಾತ್ಯಾಯನೀ. (1919).... | 5000 | ,, |
| ಭಾಗವತಾಮೃತ (1922).... | 3000 | ,, |
| ಶೈವಸುಧಾರ್ಣವ (1923).... | 2000 | ,, |
| ಮಾಧವ ಕರುಣಾವಿಲಾಸ(1923).... | 5000 | ,, |
| ರಾಮಾಯಣಾಮೃತ (1926).... | 2000 | ,, |
| ಸದ್ಗುರು ಪ್ರಭಾವ (1928).... | 1000 | ,, |
| ಮಹಾಭಾರತಾಮೃತ–ಆದಿಪರ್ವ (1931).... | 5000 | ,, |
| ಮಹಾಭಾರತಾಮೃತ–ಸಭಾಪರ್ವ (1933).... | 3000 | ,, |
| ರಹಸ್ಯಗಳು (1933).... | 1000 | ,, |
| ಕಲಿ ಕುಠಾರ (1938).... | 1000 | ,, |
| ದುರ್ಗದ ಬಿಚ್ಚುಗತ್ತಿ (1938).... | 1500 | ,, |

ಮೇಲೆ ಕಾಣಿಸಿದ ಗ್ರಂಥಗಳ ಪ್ರಥಮಾವೃತ್ತಿಯ ಮುಖಪುಟಗಳ ಮೇಲೆಯೇ ಈ ವಿವರಗಳೆಲ್ಲ ದೊರೆಯುತ್ತವೆ. ಬಹುಶಃ ಗಳಗನಾಥರು ತಮ್ಮ ಜೀವಿತ ಕಾಲದಲ್ಲಿ ಪ್ರಕಟಿಸಿದ ಮತ್ತು ಪುನರ್ಮುದ್ರಿಸಿದ ಎಲ್ಲ ಗ್ರಂಥಗಳ ಮೇಲೆ ಮುದ್ರಣದ ವರ್ಷದ ಜೊತೆಗೆ, ಪ್ರಕಟವಾದ ಪ್ರತಿಗಳ ಸಂಖ್ಯೆಯನ್ನೂ ತಪ್ಪದೆ ಕಾಣಿಸುವ ಸಂಪ್ರದಾಯವನ್ನು ಪಾಲಿಸಿದರು. ಆದರೆ ಅನಂತರದ ಪ್ರಕಾಶಕರು ಆ ಗ್ರಂಥವು ಎಷ್ಟನೆಯ ಮುದ್ರಣ ಎಂಬುದನ್ನು ಮಾತ್ರ ಕಾಣಿಸಿದ್ದಾರಲ್ಲದೆ, ಉಳಿದ ವಿವರಗಳನ್ನು ಕೊಟ್ಟಿಲ್ಲ.

ಗಳಗನಾಥರ ಗ್ರಂಥಗಳು ಮುದ್ರಣಗೊಂಡ ವಿಚಾರದ ಸಮೀಕ್ಷೆಯಿಂದ ತಿಳಿಯುವುದೇನೆಂದರೆ, ಅವರು ಪ್ರಕಟಿಸಿದ ಧಾರ್ಮಿಕ ಮತ್ತು ಇತರ ಗ್ರಂಥಗಳು ಹೆಚ್ಚಾಗಿ ಪುನರ್ಮುದ್ರಣಗೊಳ್ಳಲಿಲ್ಲ. ಕಾದಂಬರಿಗಳು ಅನೇಕ ಸಲ ಮುದ್ರಣಗೊಂಡಿವೆ. ಕಾದಂಬರಿಗಳ ಪ್ರಥಮಾವೃತ್ತಿಯಲ್ಲಿ ಮಾತ್ರ ಗಳಗನಾಥರು ಒಂದು ಸಾವಿರಕ್ಕಿಂತ ಹೆಚ್ಚಿನ ಪ್ರತಿಗಳನ್ನು ಅಚ್ಚು ಮಾಡುತ್ತಿರಬಹುದು.

ಗಳಗನಾಥರ ಕಾದಂಬರಿಗಳು ಜನಪ್ರಿಯವಾಗಿದ್ದುವು; ಹೆಚ್ಚು ಮುದ್ರಣಗಳನ್ನು ಕಂಡವು ಎನ್ನುವುದಕ್ಕಿಂತ ಅವುಗಳಿಗೆ ಬೇರೆ ಹೆಚ್ಚಿನ ಮಹತ್ತ್ವವೂ ಇದೆ.

"ಕನ್ನಡದಲ್ಲಿ ಬರೀ ವಾಚನಾಭಿರುಚಿಯನ್ನು ಅವರು ಹೆಚ್ಚಿಸಿದರು ಎಂದು ಹೇಳುವದು ಅವರ ಶ್ರೇಷ್ಠತೆಯನ್ನು ಸಮರ್ಪಕವಾಗಿ ಅರಿತುಕೊಂಡುದರ ಲಕ್ಷಣವಾಗುವುದಿಲ್ಲ. ಮರಾಠಾ ಮತ್ತು ರಜಪೂತ ವೀರರ ಕತೆಗಳನ್ನು ಅಂದಿನ ಬಾಲಕರಿಗೂ ಸ್ತ್ರೀಯರಿಗೂ ತಿಳಿಯುವಂತಹ ಶೈಲಿಯಲ್ಲಿ ಬರೆದು ಅವರು ಜನಸಾಮಾನ್ಯರಲ್ಲಿ ದೇಶಾಭಿಮಾನದ ಕಿಡಿಯನ್ನು ಪ್ರಜ್ವಲಿಸಿದರು. ದೇಶಾಭಿಮಾನದ ಕಿಡಿ, ಮಹಾರಾಷ್ಟ್ರ ಸಾಮ್ರಾಜ್ಯದ ಇಲ್ಲವೆ ರಜಪೂತರಾಜರ ಬಗ್ಗೆ ಮಾತ್ರ

ಅಭಿಮಾನವಲ್ಲ. ಭಾರತವು ಒಂದು ದೇಶ, ರಜಪೂತ ವೀರರು ನಮ್ಮವರೇ, ಮರಾಠಿ ವೀರರೂ ನಮ್ಮವರೇ, ಭಾರತವೆಂಬುದು ನಮ್ಮ ದೇಶ ಎಂಬ ಭಾವನೆಯು ನಮಗೆ ತಿಳಿಯದೆ ನಮ್ಮಲ್ಲಿ ಮೂಡುತ್ತಿತ್ತು. 'ಕನ್ನಡಿಗರ ಕರ್ಮಕಥೆ' ಕೂಡ ಬರೀ ಕನ್ನಡಿಗರದಲ್ಲ, ಇಡಿಯ ಭಾರತದ್ದು. ಒಕ್ಕಟ್ಟು ಇಲ್ಲದುದಕ್ಕೆ ನಾವು ಪರಕೀಯರ ಆಳಿಕೆಗೆ ತುತ್ತಾಗಿದ್ದೇವೆ ಎಂಬ ಭಾವನೆ ನಮ್ಮಲ್ಲಿ ಮೂಡುತ್ತಿತ್ತು"[1] ಎಂದು ಶ್ರೀರಂಗರು ಹೇಳಿರುವುದು ಅತ್ಯಂತ ಉಚಿತವಾಗಿದೆ. ಇಂಥ ಭಾವನೆ ಯಿಂದಲೇ ಶ್ರೀರಂಗರು 'ಈಶ್ವರೀ ಸೂತ್ರ' ಮತ್ತು 'ಮರಾಠರ ಅಭ್ಯುದಯ'ಗಳನ್ನು 'ಮರೆತು ಹೋದ ಮೆಚ್ಚಿನ ಕೃತಿ'ಗಳೆಂದು ಪ್ರಶಂಸಿಸಿದರು. ಇಂದಿನ ವಿಮರ್ಶಕರ ಉಪೇಕ್ಷೆಗೆ ಈ ಕೃತಿಗಳು ಪಾತ್ರವಾಗಿದ್ದರೂ "ಇಂದು ನಾನು ಅವನ್ನು ನೆನೆದು ನೆನೆದು ಮೆಚ್ಚುತ್ತೇನೆ" ಎಂದು ಶ್ರೀರಂಗರು ಅಭಿಮಾನದಿಂದ ಬರೆದಿರುವರು.[2]

ಇಂಥ ಆಳವಾದ ಪ್ರಭಾವವನ್ನು ಬೀರುವ ಕಾದಂಬರಿಗಳು ಕೇವಲ ಜನಪ್ರಿಯತೆಯ ಬಲದಿಂದ ಬದುಕುವ ಅಗತ್ಯವಿಲ್ಲ. ಹಾಗಿರುವುದರಿಂದಲೇ ಗಳಗನಾಥರು ಒಂದರ ತರುವಾಯ ಇನ್ನೊಂದರಂತೆ ಕಾದಂಬರಿಗಳನ್ನು ಬರೆದಾಗ ವಾಚಕರು "ಈಗ ನೀವು ಪ್ರಕಟಿಸಿದ ಕಾದಂ ಬರಿಯು ಹಿಂದಿನ ಎಲ್ಲ ಕಾದಂಬರಿಗಳಿಗಿಂತ ಸವಿ"[3] ಎಂದು ಗಳಗನಾಥರನ್ನು ಹೊಗಳಿ ಪ್ರೋತ್ಸಾಹಿಸಿದರು. ಆದರಿಂದಲೇ ಗಳಗನಾಥರು ಸುಮಾರು ಐದೂವರೆ ಸಾವಿರ ಪುಟಗಳ ಕಾದಂಬರೀ ಸಾಹಿತ್ಯವನ್ನು ಸೃಷ್ಟಿಸಲು ಸಾಧ್ಯವಾಯಿತು.

ಆದರೆ, ಗಳಗನಾಥರ ಕಾದಂಬರಿಗಳನ್ನು ಆಗ ಬಹುಜನರು ಓದುತ್ತಿದ್ದರು; ಈಗ ಕೆಲವರು ಮಾತ್ರ ಓದುವರು. ಆಧುನಿಕ ಕಾದಂಬರಿ ಮತ್ತು ವಿಮರ್ಶೆಗೆ ಒಲಿದವರು ಗಳಗನಾಥರ ಕಾದಂಬರಿಗಳಲ್ಲಿ ಆಸಕ್ತಿಯನ್ನು ಕಳೆದುಕೊಂಡಿರುವುದು ಸಹಜವೇ ಆಗಿದೆ. ಆದರೆ ಹಳೆಯ ತಲೆಮಾರಿನವರೂ, ಇಂದಿನ ಸಾಮಾನ್ಯ ವಾಚಕರೂ, ತರುಣ ವಯಸ್ಸಿ ನವರೂ ಗಳಗನಾಥರ ಕಾದಂಬರಿಗಳ ಕಥೆಗಳನ್ನೂ, ಅವರ ಶೈಲಿಯನ್ನೂ ಇಂದಿಗೂ ಮೆಚ್ಚ ಬಲ್ಲವರಾಗಿದ್ದಾರೆ. ನಿಜವಾಗಿ ವಿಚಾರ ಮಾಡಿದರೆ, ಗಳಗನಾಥರ ಎಲ್ಲ ಕಾದಂಬರಿಗಳ ಆಧುನಿಕ ಆವೃತ್ತಿಗಳು ಹೊರಬರಬೇಕಾದುದು ಅವಶ್ಯವಾಗಿದೆ. ಈ ಆಧುನಿಕ ಆವೃತ್ತಿಗಳು ಕಲಾ ದೃಷ್ಟಿಯಿಂದ ಬೇಡವಾದ ಭಾಗಗಳನ್ನು ಬಿಟ್ಟುಕೊಟ್ಟ ಸಂಕ್ಷಿಪ್ತಾವೃತ್ತಿಗಳಾಗಿರಬೇಕು. ಆಂಗ್ಲ ಸಾಹಿತ್ಯದಲ್ಲಿ ಹಳೆಯ ಲೇಖಕರ ಗ್ರಂಥಗಳ ಇಂಥ ಹೊಸ ಆವೃತ್ತಿಗಳು ಬರುತ್ತಿರು ವುದನ್ನು ನಾವು ಕಾಣುತ್ತೇವೆ. ಅಂಥ ಪ್ರಯತ್ನ ನಡೆದರೆ ಇಂದಿಗೂ ಗಳಗನಾಥರ ಕಾದಂ ಬರಿಗಳು ಹೆಚ್ಚು ಜನಕ್ಕೆ ಪ್ರಯೋಜನಕರವಾಗಬಹುದು.

ಅದೇನೇ ಇದ್ದರೂ ಇಂದು ಗಳಗನಾಥರ ಜನಪ್ರಿಯತೆ ಕಡಿಮೆಯಾಗುತ್ತಿದೆ. ಅದು ಸ್ವಾಭಾವಿಕವೂ ಅಹುದು. ಇದು ಎಂಥ ಮಹಾ ಕವಿಗಳಿಗೂ ಅನ್ವಯಿಸುವ ಮಾತು. ರವೀಂದ್ರನಾಥ ಠಾಕೂರರು ಕೂಡ ಇದರಿಂದ ತಪ್ಪಿಸಿಕೊಂಡಿಲ್ಲ.

"Even during this short span of fifty years we have seen many of our literary giants quickly vanishing off as

1. ಹಾ. ಮಾ. ನಾಯಕ (ಸಂ) : ಗಳಗನಾಥ, ಪುಟ 83, 84
2. ಶ್ರೀರಂಗ : 'ಮರೆತು ಹೋದ ಮೆಚ್ಚಿನ ಕೃತಿ,' ಪ್ರಜಾವಾಣಿ, ದೀಪಾವಳಿ ಸಂಚಿಕೆ 1972
3. ಗಳಗನಾಥ : ಸದ್ಗುರು ಪ್ರಭಾವ, ಪುಟ 42

soon as their days are over. Even the greatest of our modern Indian poets, Tagore, has suffered a bit of this"[1] ಎಂದು ಹೇಳಿದ ಶ್ರೀ ಎಸ್. ಕೆ. ನಾಯರ್ ಅವರ ಅಭಿಪ್ರಾಯವನ್ನು ಇಲ್ಲಿ ನೆನೆಯಬಹುದು.

ಗಳಗನಾಥರ ಜನಪ್ರಿಯತೆ ಇಂದು ಕಡಿಮೆಯಾಗುತ್ತಿದ್ದರೂ, ಅವರು ತಮ್ಮ ಕಾಲದ ಜನರಲ್ಲಿ ಸ್ವದೇಶಾಭಿಮಾನ, ಸ್ವಾಭಿಮಾನಗಳನ್ನು ತಮ್ಮ ಕಾದಂಬರಿಗಳ ಮೂಲಕ ಜಾಗೃತ ಗೊಳಿಸಿದರು. ಈ ಭಾವನೆಗಳಿಗೂ ಮೂಲವಾಗಿ ಅವರು ನೈತಿಕ ಮೌಲ್ಯಗಳನ್ನು ಎತ್ತಿ ಹಿಡಿದಿರುವರು. ರಸಿಕ ವಾಚಕರ ಮನಸವನ್ನು ತಣಿಸಲಿಕ್ಕೆ ಕಾಬಂಬರಿಗಳನ್ನು ಬರೆದಂತೆ, ಜನಸಾಮಾನ್ಯರಲ್ಲಿಯ ಧಾರ್ಮಿಕ ಭಾವನೆಗಳನ್ನು ತೃಪ್ತಿಪಡಿಸಲು ಅವರು ಸುಲಭ ಶೈಲಿಯಲ್ಲಿ ಹಲವಾರು ಗ್ರಂಥಗಳನ್ನು ಬರೆದುದೂ ಕನ್ನಡಕ್ಕೆ ಅವರು ಮಾಡಿದ ಒಂದು ಉಪಕಾರವೇ ಸರಿ. ಗಳಗನಾಥರ ಈ ಕಾಣಿಕೆಯನ್ನು ಡಾ. ಶ್ರೀನಿವಾಸ ಹಾವನೂರ ಅವರು ಚೆನ್ನಾಗಿಯೇ ಗುರುತಿಸಿರುವರು.

"ಅವರು ಪಂಡಿತರಿಲ್ಲದಿದ್ದರೂ ತಕ್ಕಮಟ್ಟಿಗೆ ಧರ್ಮಶಾಸ್ತ್ರಗಳನ್ನು ಚೆನ್ನಾಗಿ ತಿಳಿದು ಕೊಂಡಿದ್ದರು. ಆ ಬಂಡವಲದ ಅತಿ ಹೆಚ್ಚಿನ ಉಪಯೋಗವನ್ನು ಅವರು ಮಾಡಿಕೊಂಡರು. ಅವುಗಳ ತಾತ್ವಿಕ ವಿವೇಚನೆಗಿಂತ ವ್ಯವಹಾರ ದೃಷ್ಟಿಯನ್ನಿಟ್ಟುಕೊಂಡು, ಪುರಾಣ ಕಥನಗಳ ಮೂಲಕ ಸದ್ಧರ್ಮಬೋಧೆಯನ್ನು ಮಾಡಲೆಳಸಿದರು. ಸುಲಲಿತವಾಗಿ ಧಾರ್ಮಿಕ ವಿಷಯ ಗಳನ್ನು ಬರೆದವರಲ್ಲಿ ಗಳಗನಾಥರೇ ಅಗ್ರಗಣ್ಯರು".[2]

ಗಳಗನಾಥರ ಇನ್ನೊಂದು ಮಹತ್ತ್ವದ ಕಾಣಿಕೆಯೆಂದರೆ ಅವರು ಬೇರೆ ಲೇಖಕರ ಸೃಷ್ಟಿಗೆ ಕಾರಣರಾದುದು. ಅವರ ಸಮಕಾಲೀನರೂ, ಅವರಿಗಿಂತ ತುಸು ಕಿರಿಯರೂ ಆದ ಅನೇಕರು ಗಳಗನಾಥರ ಮೇಲ್ಪಂಕ್ತಿಯಲ್ಲಿ ಕಾದಂಬರಿಗಳನ್ನು ಭಾಷಾಂತರಿಸಲಿಕ್ಕೆ, ಅನು ವಾದಿಸಲಿಕ್ಕೆ ತೊಡಗಿದರು. ಅವರಲ್ಲಿ ವಲ್ಲಭ ಮಹಾಲಿಂಗ ತಟ್ಟಿ, ತಮ್ಮಣ್ಣ ಅಮ್ಮಿನಭಾವಿ, ಸಿ. ರೇ. ಸಬರದ, ಕೃಷ್ಣಾಜಿ ಶಂಕರ ಇಂಗಳಗಿ, ವಾಯ್. ಜಿ. ಕುಲಕರ್ಣಿ, ಬ. ಬ. ಬೂದಿಹಾಳ, ಬಸವಣ್ಣಿಸ್ವಾಮಿ ವಿರಕ್ತಮಠ, ಶ್ರೀಕಂಠಶಾಸ್ತ್ರಿಗಳು, ಶಂಕರ ಅಣ್ಣಾಜಿ ಕುಲಕರ್ಣಿ, ಭಿ. ಪ. ಕಾಳೆ, ಅಚ್ಯುತರಾವ ಹುಯಿಲಗೋಳ, ಭೀಮಾಜಿ ಜೀವಾಜಿ ಹುಲಿಕವಿ, ಕಲ್ಲೋ ಗಣೇಶ ವಿಜಾಪುರ, ಕೇಶವಶರ್ಮಾ ಗಲಗಲಿ ಮೊದಲಾದ ಹಲವರನ್ನು ಇಲ್ಲಿ ನೆನೆಯಬಹುದು. ಇವರಲ್ಲಿ ಕೆಲವರು ಕಾದಂಬರಿಗಳನ್ನೂ ಬೇರೆ ಗ್ರಂಥಗಳನ್ನೂ ಲೇಖನಗಳನ್ನೂ ಬರೆದರು. ಇವರಲ್ಲಿ ಕೆಲವರು ನೇರವಾಗಿ ಗಳಗನಾಥರ ಮಾರ್ಗವನ್ನು ತುಳಿದರೆ, ಕೆಲವರು ಅವರಿಂದ ಸಾಕಷ್ಟು ಪ್ರಭಾವಿತರಾಗಿರುವರು. ಗಳಗನಾಥರು 'ಸದ್ಬೋಧ ಚಂದ್ರಿಕೆ'ಯಲ್ಲಿ ಆಗಾಗ ಲೇಖನಗಳನ್ನು, ಕಥೆಗಳನ್ನು, ಜೀವನ ಚರಿತ್ರೆಗಳನ್ನು ಬರೆಯಲು ಹೊಸ ಲೇಖಕರನ್ನು ಆಹ್ವಾನಿಸುತ್ತಿದ್ದರು, ಪ್ರೋತ್ಸಾಹಿಸುತ್ತಿದ್ದರು. ಅಲ್ಲದೆ, ತಮ್ಮ ಕಾಲದ ಅನೇಕ ಹೊಸಬರ ಗ್ರಂಥಗಳಿಗೆ ಗಳಗನಾಥರು ಪ್ರಸ್ತಾವನೆಗಳನ್ನು ಬರೆದಿರುವ ಸಾಧ್ಯತೆ ಇದೆ. ಅಂಥವುಗಳಲ್ಲಿ ಒಂದು ನಿದರ್ಶನವೆಂದರೆ, ಚನ್ನಬಸವ ವಿರೂಪಾಕ್ಷಾರ್ಯ ಹೀರೆಮಠ ಎಂಬ ಗದುಗಿನ ಗೃಹಸ್ಥರು

1. C. D. Narasimhaih (Ed.) : Indian Literature of Past Fifty Years, page 85
2. ಶ್ರೀನಿವಾಸ ಹಾವನೂರ : ಗಳಗನಾಥ ಮಾಸ್ತರರು, ಪುಟ 115

'ದೇವೀದ್ವಯರ ದರ್ಪ-ಪ್ರಭಾವ' (1928) ಎಂಬ ಒಂದು ಕಾಲ್ಪನಿಕ ಕಾದಂಬರಿಯನ್ನು ಬರೆದು ಗಳಗನಾಥರ ಅವಗಾಹನೆಗೆ ಕಳುಹಿಸಿದ್ದರು. ಆಗ ಗಳಗನಾಥರು ಅವರಿಗೆ ಈ ರೀತಿ ಪ್ರೋತ್ಸಾಹಿಸಿದ್ದರು.

"ಗಳಗನಾಥ ಮಾಸ್ತರರ ಪ್ರೇಮಪೂರ್ವಕ ವಿನಂತಿಯು—

ಪ್ರಥಮದ ನಿಮ್ಮ ಈ ಸ್ವತಂತ್ರ ಕಾದಂಬರಿಯನ್ನು ನೋಡಿ ನಿಮ್ಮಿಂದ ಲೇಖನ ವ್ಯವಸಾಯವು ಯಶಸ್ವಿಯಾಗಿ ಆಗಬಹುದೆಂದು ನಾನು ಭಾವಿಸುವೆನು. ನಿಮ್ಮ ಭಾಷಾ ಸರಣಿಯು ನೆಟ್ಟಗಿದೆ. ಇಷ್ಟು ದೊಡ್ಡ ಪುಸ್ತಕವನ್ನು ಸ್ವತಂತ್ರ ಬರೆದಿರುವದರಿಂದ ನೀವು ಹುಟ್ಟಾ ಲೇಖಕರಿರಬಹುದು. ಇದನ್ನು ಅವಶ್ಯವಾಗಿ ಮುದ್ರಿಸಬಹುದು. ಲೋಭವಿರಬೇಕು."

ಹೀಗೆ, ಗಳಗನಾಥರು ಸ್ವತಃ ಬರೆದುದಲ್ಲದೆ, ಬೇರೆಯವರನ್ನೂ ಬರೆಯುವಂತೆ ಪ್ರತ್ಯಕ್ಷ ವಾಗಿಯೂ ಅಪ್ರತ್ಯಕ್ಷವಾಗಿಯೂ ಪ್ರೋತ್ಸಾಹಿಸಿದರೆಂಬುದು ದೊಡ್ಡ ಮಾತೆಂದೇ ತಿಳಿಯ ಬೇಕು.

ಗಳಗನಾಥರು ಪ್ರೋತ್ಸಾಹಿಸಿ ಬರೆಯಿಸಿದಂತೆ, ಅನೇಕರ ಕಾದಂಬರಿಗಳನ್ನೂ ಬೇರೆ ಗ್ರಂಥಗಳನ್ನೂ ತಮ್ಮ 'ಶೇಷಾಚಲ ಗ್ರಂಥಮಾಲೆ'ಯಲ್ಲಿಯೂ 'ಗಳಗನಾಥ ಸುರಸ ಗ್ರಂಥ ಮಾಲೆ'ಯಲ್ಲಿಯೂ ಪ್ರಕಟಿಸಿದ್ದೂ ಒಂದು ಮಹತ್ತ್ವದ ಕೆಲಸವೇ ಸರಿ. ಆ ಕಾಲಕ್ಕಂತೂ ಪುಸ್ತಕ ಪ್ರಕಟನೆ ಇನ್ನೂ ಕಠಿಣವಾದ ಸಾಹಸವಾಗಿತ್ತು. ಹೀಗೆ ಗಳಗನಾಥರಿಂದ ಪ್ರೋತ್ಸಾಹ ಪಡೆದ ಲೇಖಕರಲ್ಲಿ ಶ್ರೀನಿವಾಸಾಚಾರ್ಯ ಕಾಟೋಟಿ, ಶ್ರೀಕಂಠಶಾಸ್ತ್ರಿ, ವಲ್ಲಭರಾವ ತಟ್ಟಿ, ಕೃಷ್ಣಾಜಿ ಶಂಕರ ಇಂಗಳಗಿ, ವಾಯ್. ಜಿ. ಕುಲಕರ್ಣಿ, ಶಂಕರ ಅಣ್ಣಾಜಿ ಕುಲಕರ್ಣಿ, ಆರ್. ಆರ್. ಗುಡಿಸಾಗರ, ನಾ. ಶ್ರೀ. ರಾಜಪುರೋಹಿತ ಮೊದಲಾದವರನ್ನು ಇಲ್ಲಿ ನೆನೆಯ ಬಹುದು.

ಗಳಗನಾಥರ ಇನ್ನೊಂದು ಕಾಣಿಕೆಯೆಂದರೆ, ಈ ಶತಮಾನದ ಪ್ರಥಮ ದಶಕದಲ್ಲಿಯೇ ಅವರು ವಿಮರ್ಶೆಯ ಮಾರ್ಗವನ್ನು ದಿಗ್ದರ್ಶಿಸಿದರು. 1909ರಲ್ಲಿ ಅವರು ಬರೆದ 'ಇಂದಿರಾ' ಕಾದಂಬರಿಯ ವಿಮರ್ಶೆಯನ್ನು ಇಲ್ಲಿ ಅವಶ್ಯವಾಗಿ ನೆನೆಯಬೇಕು. 'ಸದ್ಬೋಧ ಚಂದ್ರಿಕೆ' ಮತ್ತು 'ಸದ್ಗುರು'ಗಳಲ್ಲಿ ಅವರು ಆಗಾಗ ಇಂಥ ಪುಸ್ತಕಾವಲೋಕನಗಳನ್ನು ಮಾಡುತ್ತಿದ್ದರು. ಆದರೆ ದುರ್ದೈವದಿಂದ ಆ ಎಲ್ಲ ಸಂಚಿಕೆಗಳೂ ಈಗ ಲಭ್ಯವಿಲ್ಲದ್ದರಿಂದ ಆ ಬಗ್ಗೆ ಹೆಚ್ಚಿಗೆ ಹೇಳಲಾಗದು. ಗಳಗನಾಥರು ತಮ್ಮ ಗ್ರಂಥಗಳಿಗೆ ಬರೆದ ಪ್ರಸ್ತಾವನೆಗಳಲ್ಲಿ ಕೂಡ ಅವರ ವಿಮರ್ಶಾಬುದ್ಧಿ ಪ್ರಕಟವಾಗಿದೆ. ಆಯಾ ಕಾದಂಬರಿಯಲ್ಲಿ ಗುಣಗಳೇನು, ಅಲ್ಲಿಯ ಪಾತ್ರ ಗಳ ಗುಣದೋಷಗಳೇನು, ಆ ಕಾದಂಬರಿಯಿಂದ ವಾಚಕರು ಏನನ್ನು ತಿಳಿದುಕೊಳ್ಳಬೇಕು- ಎಂಬ ಮೊದಲಾದ ಮಾತುಗಳನ್ನು ಅವರು ಪ್ರಸ್ತಾವನೆಗಳಲ್ಲಿ ಬರೆಯುತ್ತಿದ್ದರು.

ವಿಮರ್ಶೆಯಲ್ಲಿ ಎಲ್ಲಕ್ಕಿಂತ ಆತ್ಮವಿಮರ್ಶೆ ಹೆಚ್ಚು ಕಠಿಣವಾದುದು. ಗಳಗನಾಥರಲ್ಲಿ ಈ ಗುಣವೂ ಅಲ್ಲಲ್ಲಿ ಕಂಡಿದೆ. "ನನ್ನ ಸರ್ವಕಾದಂಬರಿಗಳೂ ಎಲ್ಲರೂ ಓದತಕ್ಕವಾಗಿರುವ ವೆಂಬುದು ಅನುಭವದ ಸಂಗತಿಯು! ....ಇತ್ತಿತ್ತ ಕಡೆಯ ಒಂದೆರಡು ಕಾದಂಬರಿಗಳ ವಿಷಯ ವಾಗಿ ಕೆಲ ಕೆಲವರು ಅಲ್ಪಸ್ವಲ್ಪ ಮೂಗು ಮುರಿದುದನ್ನು ನಾನು ಬಲ್ಲೆನು. ಮಹನೀಯರೇ ದುಡ್ಡಿಗಾಗಿ ಭರದಿಂದ ಕಾದಂಬರಿಗಳನ್ನು ಬರೆಯತೊಡಗಿದಾಗ ಎಲ್ಲ ಉತ್ತಮ ಕಾದಂಬರಿ

ಗಳನ್ನೇ ಬರೆದೇನೆಂಬ ಪ್ರತಿಜ್ಞೆಯು ನಡೆಯಲಿಕ್ಕಿಲ್ಲವೆಂಬ ಮಾತನ್ನು ನಾನು ಬರೆಯುವ ಕಾರಣವಿಲ್ಲ"[1] ಎಂದು ಗಳಗನಾಥರು ತಮ್ಮ ದೋಷಗಳನ್ನು ಪ್ರಾಂಜಲವಾಗಿ ಒಪ್ಪಿ ಕೊಂಡಿರುವರು.

ಆದರೂ, "ನನ್ನ ಆ ಮೂಗು ಮುರಿಸಿಕೊಂಡ ಕಾದಂಬರಿಗಳು, ನನ್ನ 'ಈಶ್ವರೀ ಸೂತ್ರ', 'ಕಮಲ ಕುಮಾರಿ', 'ಕುಮುದಿನಿ', 'ಧರ್ಮರಹಸ್ಯ'ಗಳಂಥ ಹದಿನೇಳು ಹದಿನೆಂಟು ಸುರಸ ಕಾದಂಬರಿಗಳ ಸ್ವಾದವನ್ನು ಒಂದರ ಹಿಂದೊಂದರಂತೆ ಸವಿದ ನಾಲಗೆಯ ರಸ ವತ್ತತೆಯ ದೃಷ್ಟಿಯಿಂದ ಮೂಗು ಮುರಿಸಿಕೊಂಡಿರುವವೆಂಬುದನ್ನು ಮಾತ್ರ ಮರೆಯ ಬಾರದು!"[2] ಎಂದೂ ಹೇಳಿರುವ ಗಳಗನಾಥರ ಆತ್ಮಾಭಿಮಾನವನ್ನೂ "ಇಷ್ಟು ಸವಿ ಮಾಡಿ ವರ್ಣಿಸಿದ್ದಕ್ಕಾಗಿ ನಾನು ಮಹನೀಯರಲ್ಲಿ ಕ್ಷಮೆಯನ್ನು ಯಾಚಿಸುವೆನು"[3] ಎಂಬಲ್ಲಿ ಅವರ ಆತ್ಮಪ್ರಶಂಸೆಗಾಗಿ ಕ್ಷಮಾಯಾಚನೆಯ ವಿನಯವನ್ನೂ ಕಾಣಬಹುದು. ಒಟ್ಟಿನಲ್ಲಿ ಗಳಗನಾಥರಲ್ಲಿ ವಿಮರ್ಶೆಯ ಪ್ರಜ್ಞೆ ಜಾಗೃತವಾಗಿದ್ದಿತೆಂಬಲ್ಲಿ ಸಂದೇಹವಿಲ್ಲ. ವಿಮರ್ಶಾ ಸಾಹಿತ್ಯಕ್ಕೆ ಇನ್ನೂ ಹೆಚ್ಚಿನ ಕಾಣಿಕೆ ಸಲ್ಲಿಸುವ ಸಾಮರ್ಥ್ಯವೂ ಅವರಲ್ಲಿದ್ದಿತು. ಆದರೆ ಒಬ್ಬನ ಪ್ರತಿಭೆ ಎಷ್ಟು ದಿಕ್ಕಿನಲ್ಲಿ ಕೆಲಸ ಮಾಡಲು ಸಾಧ್ಯ?

ಲೇಖಕರಾಗಿಯೇ ಗಳಗನಾಥರು ಮಾಡಿದ ಕಾರ್ಯಮಹತಿ ಕಡಿಮೆಯದಲ್ಲ. ಅವರ ಲೇಖನದ ವೈವಿಧ್ಯವನ್ನೂ ವೈಪುಲ್ಯವನ್ನೂ ನೋಡಿದರೆ ಅಚ್ಚರಿ ಎನಿಸದಿರದು. ಆದರೆ ಅವರ ಕಾರ್ಯಕ್ಷೇತ್ರ ಕೇವಲ ಲೇಖನ ವ್ಯವಸಾಯಕ್ಕೆ ಸೀಮಿತವಾಗಿ ಉಳಿಯಲಿಲ್ಲ, 'ಸದ್ಬೋಧ ಚಂದ್ರಿಕೆ', 'ಸದ್ಗುರು'ಗಳ ಜನಕರಾದರು, ಸಂಪಾದಕರಾದರು. 'ಚಂದ್ರಿಕೆ' ಯಂತೂ ಅವರಿಂದಲೇ ಅಷ್ಟೊಂದು ಖ್ಯಾತವಾಯಿತೆಂಬುದು ಸರ್ವವಿದಿತ, ಅವರು ಕೆಲ ಕಾಲ 'ಸವಿಗಾರ' ಎಂಬ ವಾರಪತ್ರಿಕೆಯನ್ನೂ ನಡೆಸಿದರೆಂದು ತಿಳಿಯುತ್ತದೆ.

ತಮ್ಮ ಗ್ರಂಥಗಳನ್ನು ಮುದ್ರಿಸಲು ಅವರಿಗೆ ಅಚ್ಚುಕೂಟದ ಕೊರತೆ ಕಂಡಾಗ, ಹಾವೇರಿಯಲ್ಲಿ 'ವೆಂಕಟೇಶ ಮುದ್ರಣಾಲಯ'ವನ್ನೇ ಸ್ಥಾಪಿಸಿದರು. ಅವರ ಬಳಗವೆಲ್ಲವನ್ನೂ ಹೆಣ್ಣುಮಕ್ಕಳು, ಅಳಿಯಂದಿರನ್ನು ಕೂಡ–ಮುದ್ರಣಾಲಯದಲ್ಲಿ ದುಡಿಸಿದರು. ತಮ್ಮ ಗ್ರಂಥ ಗಳನ್ನು ಪ್ರಕಟಿಸಿದಂತೆ ಬೇರೆಯವರ ಗ್ರಂಥಗಳನ್ನೂ ಪ್ರಕಾಶಕ್ಕೆ ತಂದರು. ಹೀಗೆ ಲೇಖಕ, ಮುದ್ರಕ, ಪ್ರಕಾಶಕರಾಗುವುದಲ್ಲದೆ ಅವರು ಮಾರಾಟಗಾರರೂ ಆದರು; ಅದೂ ಸಂಚಾರೀ ಮಾರಾಟಗಾರರಾದರು. ಇವಿಷ್ಟೇ ಅಲ್ಲದೆ ಧರ್ಮಜಾಗೃತಿಗಾಗಿ, ಸಂಸ್ಕೃತಿ ಪ್ರಸಾರಕ್ಕಾಗಿ ಉಪನ್ಯಾಸಗಳನ್ನು ಕೊಟ್ಟರು, ಅನಂತ ಶ್ರದ್ಧೆಯಿಂದ ಗೋಸೇವೆ ಮಾಡಿದರು, ಆತ್ಮತೃಪ್ತಿಗಾಗಿ ವೇದಮಹಾಪಾಠಶಾಲೆಯನ್ನು ನಡೆಸಿದರು. ಅದಕ್ಕಾಗಿ ಸಾಲಮಾಡಿದರು. ಅವರ ವೈವಿಧ್ಯ ಮಯ, ಕಷ್ಟಮಯ, ಆದರೂ ಧ್ಯೇಯವಾದೀ ಜೀವನವು ಒಂದು ಮಹಾಕಾದಂಬರಿಗೇ ವಸ್ತುವಾಗಬಲ್ಲುದು!

---

1. ಗಳಗನಾಥ: ಸದ್ಗುರು ಪ್ರಭಾವ, ಪುಟ 42–43
2. ಅದೇ, ಪುಟ 43
3. ಅದೇ,

"ಗಳಗನಾಥರ ಗುಟ್ಟು ಮಹಾಶ್ರದ್ಧೆ! ದುಡಿತ! ದುಡಿತ!"[1] ಎಂದು ಶ್ರೀ ಬೇಂದ್ರೆಯವರು ತೆಗೆದ ಉದ್ಗಾರ ಅರ್ಥಪೂರ್ಣವಾಗಿದೆ.

ಹೀಗೆ ಗಳಗನಾಥರು ಮಾಡಿದ ಬಹುಮುಖ ಕಾರ್ಯಗಳ ಜೊತೆಗೆ ಅವರು ಅನೇಕ ವಿಷಯದಲ್ಲಿ ಪ್ರಥಮರೂ ಆಗಿದ್ದಾರೆ ಎಂಬುದನ್ನು ನಾವಿಲ್ಲಿ ಗಮನಿಸಬಹುದು.

1. ಉತ್ತರ ಕರ್ನಾಟಕದ ಪ್ರಥಮ ಪ್ರಖ್ಯಾತ ಮತ್ತು ಅತ್ಯಂತ ಜನಪ್ರಿಯ ಕಾದಂಬರಿಕಾರರೆಂದರೆ ಗಳಗನಾಥರೇ!

2. ಏಳೆಂಟು ಸಾವಿರ ಚಂದಾದಾರರುಳ್ಳ ಮಾಸಪತ್ರಿಕೆಯೊಂದನ್ನು ಕನ್ನಡದಲ್ಲಿ ಸ್ಥಾಪಿಸಿ ನಡೆಸಿದ ಪ್ರಥಮರೂ ಗಳಗನಾಥರೇ.

3. ಕನ್ನಡದ ಪ್ರಥಮ ಸ್ವತಂತ್ರ ಐತಿಹಾಸಿಕ ಕಾದಂಬರಿಯನ್ನು ಬರೆದ ಶ್ರೇಯಸ್ಸೂ ಗಳಗನಾಥರಿಗೇ ಸಲ್ಲಬೇಕು.

4. ಕನ್ನಡದಲ್ಲಿ 'ಕಾನೂರು ಸುಬ್ಬಮ್ಮ ಹೆಗ್ಗಡತಿ', 'ಸಮರಸವೇ ಜೀವನ', 'ನಟಸಾರ್ವಭೌಮ' ಮೊದಲಾದ ಬೃಹತ್ ಗಾತ್ರದ ಕಾದಂಬರಿಗಳು ಬಂದಿವೆಯಾದರೂ, ಅಂಥವುಗಳಲ್ಲಿ ಗಳಗನಾಥರ 'ಮಾಧವ ಕರುಣಾವಿಲಾಸ'ವೇ ಕನ್ನಡದ ಪ್ರಥಮ ಬೃಹತ್ ಕಾದಂಬರಿಯಾಗಿದೆ.

5. ಅನಂತರದ ಕಾಲದಲ್ಲಿ ಅ. ನ. ಕೃಷ್ಣರಾಯ, ಶಿವರಾಮ ಕಾರಂತ ಮೊದಲಾದವರು ಸಾವಿರಾರು ಪುಟಗಳ ಸಾಹಿತ್ಯವನ್ನು ನಿರ್ಮಿಸಿರುವರಾದರೂ, ಈ ಶತಮಾನದ ಆದಿಭಾಗದಲ್ಲಿ ವಿಪುಲ ಸಂಖ್ಯೆಯ ಗ್ರಂಥಗಳನ್ನು ಬರೆದ ಶ್ರೇಯಸ್ಸು ಗಳಗನಾಥರದೇ ಆಗಿದೆ. ಅವರ 50 ಗ್ರಂಥಗಳಲ್ಲಿ 22 ಕಾದಂಬರಿಗಳ ಪುಟಸಂಖ್ಯೆಯೇ 5500ಕ್ಕಿಂತ ಹೆಚ್ಚಾಗಿದೆ. ಅಲ್ಲದೆ ಧಾರ್ಮಿಕ ಗ್ರಂಥಗಳು ಬೇರೆ. ಈ ಮಾತನ್ನು ನಮ್ಮ ಇಬ್ಬರು ಹಿರಿಯರು ನೆನೆದಿರುವರು.

"ಕನ್ನಡ ಕಾದಂಬರಿ ಲೇಖಕರಲ್ಲಿ ಗ್ರಂಥ ಪ್ರಮಾಣದಿಂದ ದಿವಂಗತ ಬಿ. ವೆಂಕಟಾಚಾರ್ಯರು ಮತ್ತು ಶ್ರೀ ಗಳಗನಾಥ ಇವರನ್ನು ಸರಿಗಟ್ಟುವವರಾರೂ ಇನ್ನೂ ಹುಟ್ಟಿಲ್ಲ"[2] ಎಂದು ಡಿ. ಕೆ. ಭಾರದ್ವಾಜ ಅವರು 1939ರಲ್ಲಿ ಹೇಳಿರುವರು.

"ನಮ್ಮ ನಾಡಿನಲ್ಲಿ ಗಳಗನಾಥರಷ್ಟು ಮಹಾಗಾತ್ರದಲ್ಲಿ ವಿವಿಧ ರೀತಿಯ ಸಾಹಿತ್ಯವನ್ನು ನಿರ್ಮಿಸಿದವರು ಕಡಿಮೆ. ಅವರಷ್ಟು ಹಣವನ್ನು ಸಂಪಾದಿಸಿದವರೂ ಕಡಿಮೆ"[3] ಎಂದು ಶ್ರೀ ಬೆಟಗೇರಿ ಕೃಷ್ಣಶರ್ಮಾ ಅವರು ಬರೆದಿರುವರು.

6. ಗ್ರಂಥಲೇಖನದಿಂದಲೇ ಉಪಜೀವನವನ್ನು ಸಾಗಿಸಿದ ಪ್ರಥಮ ಕನ್ನಡ ಲೇಖಕರೆಂದರೆ ಗಳಗನಾಥರೇ.

7. ಲೇಖಕ, ಪತ್ರಿಕಾ ಸಂಪಾದಕ, ಗ್ರಂಥಮಾಲಾ ಸಂಪಾದಕ, ಮುದ್ರಕ, ಪ್ರಕಾಶಕ,

---

1. ಸದ್ಬೋಧ ಚಂದ್ರಿಕೆ, ವಿಶೇಷ ಸಂಚಿಕೆ, 1969, ಪುಟ 104
2. ದ. ಕೃ. ಭಾರದ್ವಾಜ : 'ಕನ್ನಡ ನುಡಿಭಕ್ತರು–18, ಶ್ರೀ ಗಳಗನಾಥ ಅವರು', ಕನ್ನಡನುಡಿ, ಡಿಸೆಂಬರ 1939
3. ಕರ್ಮವೀರ, 5-1-1969, ಪುಟ 22

ಮಾರಾಟಗಾರ– ಹೀಗೆ ವೈವಿಧ್ಯಮಯ ಕಾರ್ಯಗಳನ್ನು ಒಬ್ಬರೆ ಮಾಡಿದ ಮೊದಲಿಗರು ಗಳಗನಾಥರೇ ಆಗಿದ್ದಾರೆ.

8. ಅದೇ ತಲೆಯೆತ್ತುತ್ತಿದ್ದ ಅಪಕ್ವ, ಪ್ರಯೋಗಾವಸ್ಥೆಯಲ್ಲಿದ್ದ ಹೊಸಗನ್ನಡ ಗದ್ಯಕ್ಕೆ ಒಂದು ರೂಪವನ್ನು ಕೊಟ್ಟು 'ಗದ್ಯಪ್ರವರ್ತಕ'ರೆನಿಸಿಕೊಂಡ ಪ್ರಥಮರೂ ಗಳಗನಾಥರೇ.

ಹೀಗೆ ಅಷ್ಟಮೂರ್ತಿಯಂತೆ, ಅಷ್ಟು ವಿಧವಾಗಿ ತಮ್ಮ ಪ್ರತಿಭೆಯನ್ನು, ಕಾರ್ಯ ಕ್ಷಮತೆಯನ್ನು ಪ್ರಕಟಿಸಿದ ಗಳಗನಾಥರನ್ನು ಒಬ್ಬ ವ್ಯಕ್ತಿ ಎಂದು ಕರೆಯುವುದಕ್ಕಿಂತ ಒಂದು ಸಂಸ್ಥೆ ಎನ್ನುವುದು ಎಷ್ಟೂ ಅತಿಶಯೋಕ್ತಿಯಲ್ಲ!

ಒಟ್ಟಿನಲ್ಲಿ ಲೇಖಕರಾಗಿ, ಪ್ರಖ್ಯಾತ ಕಾದಂಬರಿಕಾರರಾಗಿ, ಪತ್ರಿಕೋದ್ಯಮಿಯಾಗಿ, ಶ್ರೇಷ್ಠ ಗದ್ಯಕಾರರಾಗಿ ಈ ಧ್ಯೇಯವಾದಿ ಕನ್ನಡದ ಕಳಕಳಿಯ ನಿಷ್ಠಾವಂತ ಶಿಕ್ಷಕರು ಕನ್ನಡಕ್ಕೆ ಸಲ್ಲಿಸಿದ ಕಾಣಿಕೆಗಳು ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ಉಳಿಯುವಂಥವುಗಳು! ಕನ್ನಡ ನಾಡು ನುಡಿಗಳಿಗಾಗಿ ಗಳಗನಾಥರು ಮಾಡಿದ ಸೇವೆಯನ್ನು ಅನೇಕ ಸಂಘಸಂಸ್ಥೆಗಳು, ಕನ್ನಡದ ಗಣ್ಯವ್ಯಕ್ತಿಗಳು ಕೃತಜ್ಞತೆಯಿಂದ ಸ್ಮರಿಸಿರುವರು.[1] ಅವರ ಕೆಲವು ಮಾತುಗಳನ್ನು ಉದ್ಧರಿಸಿ ಈ ಪ್ರಬಂಧವನ್ನು ಮುಕ್ತಾಯಗೊಳಿಸಬಹುದು. ಈ ಅವತರಣಿಕೆಗಳಲ್ಲಿ ಕೆಲವೆಡೆ ಹೆಚ್ಚಿನ ಅಭಿಮಾನ ಕಂಡರೂ, ಈ ಮಾತುಗಳಲ್ಲಿ ಸತ್ಯಾಂಶವಿಲ್ಲದಿಲ್ಲ. ಅಲ್ಲದೆ ಅಂಥ ಅತಿ ಶಯದ ಪ್ರಶಂಸೆಗೆ ಗಳಗನಾಥರು ಅರ್ಹರೂ ಆಗಿದ್ದಾರೆ.

"ಮ. ರಾ. ರಾ. ಗಳಗನಾಥರವರು ಕನ್ನಡ ಭಾಷೆಯಲ್ಲಿ ಅನೇಕ ಪ್ರೌಢ ಗ್ರಂಥಗಳನ್ನು ರಚಿಸಿ, ಅವುಗಳನ್ನು ಪ್ರಕಟಿಸಿ ಅವರು ಮಾಡಿರುವ ಕರ್ನಾಟಕ ವಾಙ್ಮಯ ಸೇವಾತಿಶಯ ಕ್ಕಾಗಿ" ಅವರನ್ನು 1926ರಷ್ಟು ಮೊದಲೇ 250 ರೂಪಾಯಿಗಳ ಸಂಭಾವನೆಯಿಂದ ಗೌರ ವಿಸಿದ ಮೊದಲ ಸಂಸ್ಥೆಯೆಂದರೆ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು.

ಎರಡು ವರ್ಷಗಳ ತರುವಾಯ ಮೈಸೂರಿನ ಮಹಾರಾಜಾ ಕಾಲೇಜಿನ ಕರ್ನಾಟಕ ಸಂಘವು ಅವರನ್ನು ಬರಮಾಡಿಕೊಂಡು, ಮಾನಪತ್ರವನ್ನಿತ್ತು ಗೌರವಿಸಿತು.[2]' ಆ ಮಾನ ಪತ್ರದಲ್ಲಿಯ ಕೆಲವು ಮಾತುಗಳು :

"ನಮ್ಮ ಭಕ್ತಿಯನ್ನು ತಮಗೆ ನಿವೇದಿಸಲು ನಾವು ಉತ್ಸುಕರಾಗಿರುವುದಕ್ಕೆ ಮುಖ್ಯ ಕಾರಣವು ತಮ್ಮ ದೀರ್ಘವೂ, ಸಂತತವೂ ಆದ ಭಾಷಾಸೇವೆ. ಈ ಮೂವತ್ತು ವರ್ಷಗಳ ಹಿಂದಿನಿಂದಲೂ, ಕನ್ನಡಕ್ಕೆ ಈಗಿರುವಷ್ಟು ಪುರಸ್ಕಾರವಿಲ್ಲದಿದ್ದ ಕಾಲದಿಂದಲೂ ತಾವು ನಮ್ಮ ಸಾಹಿತ್ಯದ ಏಳಿಗೆಗಾಗಿ ಶ್ರಮವನ್ನೆಣಿಸದೆ ದುಡಿಯುತ್ತಿದ್ದೀರಿ.

"ತಮ್ಮ ಸರಳವೂ ಉದ್ದೀಪಕವೂ ಆದ ಗದ್ಯಶೈಲಿ ಹೊಸಗನ್ನಡ ಸಾಹಿತ್ಯದಲ್ಲಿ ಶ್ರೇಷ್ಠ ಪದವಿಯನ್ನು ಗಳಿಸಿರುತ್ತದೆ".

"ಕನ್ನಡಿಗರಲ್ಲೆಲ್ಲ ಐಕಮತ್ಯ ಭಾವನೆಯನ್ನು ಬಲಪಡಿಸುವುದರಲ್ಲಿ ತಮ್ಮ ಕಾದಂಬರಿ ಗಳಿಂದ ಸಹಾಯವು ದೊರೆತಿರುವುದನ್ನು ಇಲ್ಲಿ ಹೇಳದಿರಲಾರೆವು. ಉತ್ತರ ಕರ್ನಾಟಕದೊಡನೆ

---

1. ಗಳಗನಾಥರು ತಮ್ಮ ಗ್ರಂಥಗಳಿಗಾಗಿ ಪಡೆದ ಪ್ರಶಸ್ತಿ, ಬಹುಮಾನಗಳ ವಿವರಗಳನ್ನು ಮೊದಲೇ ನೋಡಲಾಗಿದೆ.
2. ಈ ಸನ್ಮಾನ ಸಮಾರಂಭವು 1930ನೆಯ ಮಾರ್ಚ ತಿಂಗಳ 2ನೆಯ ತಾರೀಖಿನಂದು ನಡೆಯಿತು.

ಬಳಿಕ ನಮ್ಮ ಮೈಸೂರಿನವರಿಗೆ ಉಂಟಾದುದು. ಅಲ್ಲಿಯ ಲೇಖಕರಲ್ಲಿ ಅಗ್ರಗಣ್ಯರಾದ ತಮ್ಮ ಮೂಲಕವೇ".

"ವಯಃ ಪರಿಣತಿಯಿಂದಲೂ, ಜ್ಞಾನಸಂಪತ್ತಿನಿಂದಲೂ, ಗ್ರಂಥಸಮೃದ್ಧಿಯಿಂದಲೂ ತಾವು ಅಖಿಲ ಕರ್ನಾಟಕಕ್ಕೆ ಪೂಜ್ಯರಾಗಿದ್ದೀರಿ; ಭೂಷಣರಾಗಿದ್ದೀರಿ. ಈ ವಯಸ್ಸಿನಲ್ಲಿ ಕೂಡ ತಾವು ಉತ್ಸಾಹದಿಂದಲೂ, ಏಕನಿಷ್ಠೆಯಿಂದಲೂ ಮಾಡುತ್ತಿರುವ ಸಾಹಿತ್ಯಸೇವೆಯನ್ನು ನೋಡಿ ತರುಣರಾದ ನಾವೆಲ್ಲರೂ ನಾಚಿ ತಮ್ಮಿಂದ ಉದ್ಯೋಗಶೀಲತೆಯ ಪಾಠವನ್ನು ಕಲಿಯಬೇಕಾಗುತ್ತದೆ."[1] ಈ ಪ್ರಶಸ್ತಿಪ್ರದಾನವು ಬಿ. ಎಂ. ಶ್ರೀಕಂಠಯ್ಯನವರಂಥ ಹಿರಿಯರಿಂದ ನಡೆಯಿತೆಂಬುದನ್ನು ನೆನೆಯಬೇಕು.

'ವಾಗ್ಭೂಷಣ'ವು 1930ನೆಯ ವರ್ಷದ ಮೇ ತಿಂಗಳ ಸಂಚಿಕೆಯಲ್ಲಿ ಗಳಗನಾಥರ ಮೇಲೆ ವಿಶೇಷ ಸಂಪಾದಕೀಯವನ್ನೇ ಬರೆಯಿತು.

"ಶ್ರೀ ಗಳಗನಾಥರು ನಮಗೆ ಯಾವ ರೀತಿಯಿಂದಲೂ ಅಪರಿಚಿತರಲ್ಲ. ಒಳ್ಳೆಯ ಶಿಕ್ಷಕರೆಂದೂ, ಹೆಸರು ಪಡೆದ ವಕ್ತಾರರೆಂದೂ, ಕನ್ನಡದ ಕಟ್ಟಾಭಿಮಾನಿಗಳೆಂದೂ, ಉಚ್ಚತರದ ಕರ್ತೃತ್ವಶಾಲಿಗಳೆಂದೂ, ಅಖಿಲ ಕರ್ನಾಟಕಕ್ಕೂ ಮಾನ್ಯರಾದ ಗ್ರಂಥಕರ್ತರೆಂದೂ ನಾವೆಲ್ಲರೂ ಅವರನ್ನು ನೋಡಿದ್ದೇವೆ; ಆಡಿದ್ದೇವೆ; ಒಪ್ಪಿದ್ದೇವೆ; ಸ್ತುತಿಸಿದ್ದೇವೆ; ಕೊಂಡಾಡಿದ್ದೇವೆ. ಇಂತಹ ಮಹನೀಯರಿಗೆ ಇಂದು ಪರಪ್ರಾಂತದವರು ಮಾನಪತ್ರವನ್ನು ಅರ್ಪಿಸಿ ಸನ್ಮಾನಿಸಿರುವದನ್ನು ಕೇಳಿ ಆನಂದಭರಿತರಾಗಿದ್ದೇವೆ. ಈ ಆನಂದಕ್ಕೆ ಅನೇಕ ಕಾರಣಗಳಿವೆ. ಶ್ರೀ ಗಳಗನಾಥರಂತಹ ಯೋಗ್ಯರಿಗೆ ಯೋಗ್ಯ ಮನ್ನಣೆಯು ದೊರೆಯಿತೆಂಬುದು ಒಂದು; ಹಿಂದೆ ಎಂದೋ ಒಂದು ಕಾಲದಲ್ಲಿ ತಿರುಳಗನ್ನಡ ನಾಡೆಂದು ಹೆಸರು ಪಡೆದ ಉತ್ತರ ಕರ್ನಾಟಕವು ಇತ್ತೀಚೆಗೆ ಪರಕೀಯರ ದಾಳಿದೊಂಬಿಗಳಿಂದ ಗಾಳಿಪಾಲಾಗಿರುವಾಗ ಶ್ರೀ ಗಳಗನಾಥರಂತಹರು ಉದಯಿಸಿ ಅಖಿಲ ಕರ್ನಾಟಕಕ್ಕೂ ಪೂಜ್ಯರಾದರಲ್ಲಾ, ಉತ್ತರ ಕರ್ನಾಟಕದ ಮಾನವನ್ನು ಮರಳಿ ಪಡೆದರಲ್ಲಾ ಎಂಬುದು ಇನ್ನೊಂದು....

"ಶ್ರೀ ಗಳಗನಾಥರವರು ಕನ್ನಡವು ಅತ್ಯಂತ ಅನಾದರ ಹೊಂದಿರುವ ಕಾಲದಿಂದಲೂ ಕನ್ನಡದ ಉದ್ಧಾರಕ್ಕಾಗಿ ಯತ್ನಿಸುತ್ತ ಬಂದಿರುವರು. ಈಗ 30–35 ವರ್ಷಗಳಿಂದಲೂ ಅವರ ಗ್ರಂಥಗಳೂ ಪತ್ರಿಕಾಮುಖೇನ ಅಸಂಖ್ಯ ಲೇಖನಗಳೂ ನಮ್ಮ ಮುಂದೆ ಬಂದಿರುವವು. ಅವರ ಕಾದಂಬರಿಗಳು ಇಲ್ಲದಿರುವ ಮನೆಯು ಕರ್ನಾಟಕದಲ್ಲಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಕನ್ನಡದಲ್ಲಿ ವಾಚನಾಭಿರುಚಿಯಿಲ್ಲವೆಂದು ಕೂಗಿಕೊಳ್ಳುವವರನ್ನು ಶ್ರೀ ಗಳಗನಾಥರು ಕೈಹಿಡಿದು ಕಿವಿಹಿಂಡಿ ಎಚ್ಚರಿಸಿರುವರು.

"ತಮ್ಮ ಪ್ರತಿಭಾಸಂಪನ್ನವಾದ ಗದ್ಯಶೈಲಿ, ಮನಸ್ಸನ್ನು ಆಕರ್ಷಿಸುವ ಕಥಾ ಸಂವಿಧಾನ, ಸರ್ವಮಾನ್ಯವಾದ ಐತಿಹಾಸಿಕ ಸಾಮಾಜಿಕ ವಿಚಾರಗಳು ಇವುಗಳಿಂದ ಕೂಡಿದ ಗ್ರಂಥಗಳು, ಲೇಖನಗಳು ಇವುಗಳ ಮೂಲಕ ಅಖಿಲ ಕರ್ನಾಟಕದಲ್ಲಿಯೂ ಮಾನ್ಯರಾಗಿ ಅಖಿಲ ಕರ್ನಾಟಕದ ಏಕೀಕರಣಕ್ಕೆ ಬಹುಮಟ್ಟಿಗೆ ಕಾರಣೀಭೂತರಾದ ಲೇಖಕರಲ್ಲಿ ಶ್ರೀ ಗಳಗನಾಥರವರು ಮೊದಲಿಗರೆಂದರೆ ಅತಿಶಯೋಕ್ತಿಯಾಗಲಾರದು...."[2]

---

1. ಗಳಗನಾಥ : ಮಹಾಭಾರತಾಮೃತ – ಆದಿಪರ್ವ, ಪ್ರಸ್ತಾವನೆ, ಪುಟ 27-29
2. ವಾಗ್ಭೂಷಣ, ಮೇ, 1930, ಪುಟ 6-7

ಗಳಗನಾಥರು ದಿವಂಗತರಾದಾಗ ಹುಬ್ಬಳ್ಳಿಯ 'ಸಂಯುಕ್ತ ಕರ್ನಾಟಕ'ವು ಸಂಪಾದಕೀಯವನ್ನು ಬರೆಯಿತು.

"ಕನ್ನಡ ನುಡಿಯ ಬಗ್ಗೆ ಅನಾದರವೂ ತಿರಸ್ಕಾರವೂ ಮನೆಮಾಡಿಕೊಂಡಿದ್ದಾಗ ಶ್ರೀ ಗಳಗನಾಥರು ತಮ್ಮ ಲೆಕ್ಕಣಿಕೆಯ ಅಸಾಧಾರಣ ಸಾಮರ್ಥ್ಯದಿಂದ ಕನ್ನಡಿಗರಲ್ಲಿ ಸ್ವಾಭಿಮಾನವನ್ನು ತುಂಬಿದರು. 'ಸದ್ಬೋಧ ಚಂದ್ರಿಕೆ'ಗೆ ಆಗಿನ ಕಾಲಕ್ಕಿದ್ದಷ್ಟು ವ್ಯಾಪ್ತಿಯು ಯಾವ ಮಾಸಪತ್ರಿಕೆಗೂ ಈ ಹೊತ್ತಿಗೂ ಇಲ್ಲೆಂದು ಹೇಳಬಹುದು. ಅವರ ಸರಳ ಪರಿಶುದ್ಧ ಮತ್ತು ಗಂಡು ಭಾಷೆಯು ಉತ್ತರ ಕರ್ನಾಟಕದ ಕನ್ನಡಿಗರನ್ನು ಆಕರ್ಷಿಸಿಬಿಟ್ಟಿತು. ಕನ್ನಡ ಸಾಹಿತ್ಯಕ್ಕೆ ಅವರು ಮಾಡಿದ ಸೇವೆಯು ತೀರ ಅಪೂರ್ವವಾಗಿದೆಯೆಂದು ಹೇಳಬಹುದು. ಕಥೆ ಕಾದಂಬರಿಗಳಲ್ಲದೆ ಭಾಗವತಾದಿ ಗ್ರಂಥಗಳನ್ನು ಕನ್ನಡದಲ್ಲಿ ಭಾಷಾಂತರಿಸಿ ಅನೇಕರನ್ನು ಇವರು ಉಪಕೃತ ಮಾಡಿದ್ದಾರೆ. ಧಾರ್ಮಿಕ ಆಚಾರ ವಿಚಾರಗಳೂ, ಶೀಲವೂ, ನೈತಿಕ ಕಟ್ಟುಗಳೂ ಇವರ ಬಾಳಿನಲ್ಲಿ ಹೆಣೆದುಕೊಂಡುಬಿಟ್ಟಿದ್ದವು. ಇವರ ಜೀವನಕ್ರಮವು ಪುರಾತನ ಕಾಲದ ಋಷಿಗಳ ಜೀವನಕ್ರಮಕ್ಕೆ ಹೋಲುತ್ತಿತ್ತು."[1]

5–1–1969ರಂದು ಗಳಗನಾಥರ ಜನ್ಮಶತಾಬ್ದಿಯ ನಿಮಿತ್ತವಾಗಿ ವಿಶೇಷ ಸಂಚಿಕೆಯನ್ನು ಹೊರಡಿಸಿದ 'ಕರ್ಮವೀರ'ವು ಗಳಗನಾಥರ "ಪುಣ್ಯಸ್ಮರಣೆ"ಯನ್ನು ಮಾಡಿತು. ಅದೇ ಸಮಯಕ್ಕೆ 'ಕರ್ನಾಟಕ ಭಾರತಿ'ಯು ತನ್ನ ಸಂಪಾದಕೀಯದಲ್ಲಿ, "ಕನ್ನಡ ಗದ್ಯಕ್ಕೊಂದು ಮಾದರಿಯನ್ನು ರೂಪಿಸಿ, ಹೊಸಗನ್ನಡ ಲೇಖಕರಿಗೆ ಮಾದರಿಯಾದ ಗಳಗನಾಥರು 'ಕನ್ನಡದಲ್ಲಿ ಏನಾದರೂ ಓದಲು ಇದೆಯೇ?' ಎಂಬ ಶಂಕೆಯಲ್ಲಿದ್ದ ಕನ್ನಡ ನಾಡಿನಲ್ಲಿ, ತಮ್ಮ ಕೃತಿಗಳ ಮೂಲಕ, ಅಪಾರ ವಾಚಕವೃಂದವನ್ನು ನಿರ್ಮಿಸಿ ಕೃತಕೃತ್ಯರಾದವರು· ತಮ್ಮ ಕೃತಿಗಳಿಂದ ದೇಶಭಕ್ತಿಯನ್ನೂ ಭಾರತೀಯ ಸಂಸ್ಕೃತಿಯ ಪುನರುದ್ಧಾರವನ್ನೂ ಸಾಧಿಸಿದ ಮಹಾನುಭಾವರು ಗಳಗನಾಥರು"[2] ಎಂದು ವಂದನೆಗಳನ್ನು ಅರ್ಪಿಸಿತು.

ಕೆಳಗಿನ ಕೆಲವು ಉದ್ಗಾರಗಳನ್ನು ಗಮನಿಸಬಹುದು. ಈ ಮಾತುಗಳೆಲ್ಲ ಕನ್ನಡಕ್ಕೆ ಗಳಗನಾಥರ ಕಾಣಿಕೆ ಏನು ಎಂಬುದನ್ನು ತಿಳಿಸುತ್ತವೆ.

"ನಿಷ್ಠಾವಂತ ಜೀವನವನ್ನು ನಡೆಸಿ, ಪರಮಾರ್ಥ ದೃಷ್ಟಿಯಿಂದ ಕನ್ನಡದ ಸೇವೆ ಸಲ್ಲಿಸಿದ, ಅಗಡಿಯ ಶೇಷಾಚಲ ಸಾಧುಗಳ ಸತ್‌ಶಿಷ್ಯರಾದ ಗಳಗನಾಥರು ಕನ್ನಡಿಗರಿಗೆ ಆದರ್ಶ ಪುರುಷರಾಗಿದ್ದಾರೆ. ಸಾಹಿತ್ಯ ಸೃಷ್ಟಿ ಮತ್ತು ಪ್ರಚಾರದಲ್ಲಿ ಸ್ವಯಂಸೇವಕರಾಗಿ ದುಡಿದು ಸಾಹಿತಿಗಳಿಗೆ ಮಾರ್ಗದರ್ಶಕರಾಗಿದ್ದಾರೆ. ಕನ್ನಡ ಜನತೆಯಲ್ಲಿ ವಿವೇಕವನ್ನು ಮೂಡಿಸಲು, ಕನ್ನಡಿಗರ ಕೆಚ್ಚನ್ನು ಕೆರಳಿಸಲು ಅವರು ಕೊಟ್ಟ ಕಾದಂಬರಿಗಳು– ಭಾಷಾಂತರಗಳಾಗಲಿ, ಸ್ವತಂತ್ರವಾಗಲಿ, ಅನುವಾದವಾಗಲಿ– ಇಂದಿಗೂ ಕನ್ನಡ ಸಾಹಿತ್ಯದಲ್ಲಿ ತಮ್ಮ ಸ್ಥಾನವನ್ನು ಉಳಿಸಿಕೊಂಡಿವೆ."[3]

"ಗಳಗನಾಥರ ಕಥೆ ಕಾದಂಬರಿಗಳೇ ಉತ್ತರ ಕರ್ನಾಟಕದಲ್ಲಿ ಮಾತ್ರವೇ ಅಲ್ಲ,

---

1. ಸಂಯುಕ್ತ ಕರ್ನಾಟಕ, ದಿನಪತ್ರಿಕೆ ದಿ. 26-4-1942, ದ್ವಿತೀಯ ಸಂಪಾದಕೀಯ
2. ಕರ್ನಾಟಕ ಭಾರತಿ, 1-2, ಪುಟ 217
3. ರಂ. ಶ್ರೀ. ಮುಗಳಿ : ಶ್ರೀನಿವಾಸ ಹಾವನೂರರ 'ಗಳಗನಾಥ ಮಾಸ್ತರರು' ಗ್ರಂಥದ ಮುನ್ನುಡಿಯಲ್ಲಿ

ಮೈಸೂರು ಮತ್ತು ಹೈದ್ರಾಬಾದುಗಳಲ್ಲಿ ಕನ್ನಡದ ಅಭಿರುಚಿಯನ್ನು ಬೆಳಿಸುವುದಕ್ಕೆ ಕಾರಣಗಳಾದುವೆಂದು ನಿರ್ವಿವಾದವಾಗಿ ಹೇಳಬಹುದು."[1]

"ಬಂಗಾಲಿ ಸಾಹಿತ್ಯಕ್ಕೆ ಬಂಕಿಮಚಂದ್ರ, ಮರಾಠಿ ಸಾಹಿತ್ಯಕ್ಕೆ ಹರಿ ನಾರಾಯಣ ಆಪ್ಟೆ ಯಾವ ಬಗೆಯ ಸೇವೆಯನ್ನು ಸಲ್ಲಿಸಿದರೊ ಅದೇ ಬಗೆಯ ಸೇವೆಯನ್ನು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದವರಲ್ಲಿ ಗಳಗನಾಥರೂ ಒಬ್ಬ ಪ್ರಮುಖರು."[2]

"20ನೆಯ ಶತಮಾನದ ಮೊದಲ ದಶಕದ ಕೊನೆಯ ಭಾಗದಲ್ಲಿ ಪ್ರಾರಂಭವಾದ ಗಳಗನಾಥರ ಸಾಹಿತ್ಯಕೀರ್ತಿಯ ಭೇರಿ, ಮುಂದಿನ ಎರಡು ದಶಕಗಳಲ್ಲಿ ಅವರ ವಿಜಯ ದುಂದುಭಿಯ ಉತ್ಸಾಹಧ್ವನಿಯಾಗಿ ನಮ್ಮ ನಾಡಿನ ದಿಕ್ಕು-ದಿಕ್ಕುಗಳನ್ನೂ ವ್ಯಾಪಿಸಿ ನಿಂತಿತು....ಆಗ 'ಗಳಗನಾಥ' ಎಂಬ ಹೆಸರು 'ಕಾದಂಬರೀ ಲೇಖಕ' ಎಂಬ ಅರ್ಥವನ್ನು ಕೊಡತೊಡಗಿತು."[3]

ಈ ಪ್ರಶಸ್ತಿಯ ಉಕ್ತಿಮಾಲೆಯನ್ನು ಹೀಗೆಯೇ ಬೆಳೆಸಬಹುದು.

ಒಟ್ಟಿನಲ್ಲಿ ಗಳಗನಾಥರು ಕನ್ನಡ ಕಾದಂಬರೀ ಸೌಧದ ಗಟ್ಟಿಮುಟ್ಟಾದ ತಳಪಾಯವನ್ನು ಹಾಕಿ, ಕನ್ನಡ ಕಾದಂಬರೀ ಪಿತಾಮಹರಾದರು! ಹೊಸಗನ್ನಡ ಗದ್ಯಶೈಲಿಯ ಆದ್ಯ ಪ್ರವರ್ತಕರೂ ಆದರು!

ಗಳಗನಾಥರ ಗುರುಗಳಾದ ಅಗಡಿಯ ಶೇಷಾಚಲ ಸ್ವಾಮಿಗಳು ಅವರನ್ನು ಮಾತನಾಡಿಸುವಾಗಲೆಲ್ಲ "ಏನು ಮಹಾರಾಜಾ," ಎಂದೇ ಸಂಬೋಧಿಸುತ್ತಿದ್ದರು. ಸದ್ಗುರುವಿನ ಮಾತು ಹುಸಿಯಾಗಲಿಲ್ಲ. ಇತಿಹಾಸದಲ್ಲಿ ಶಕಪುರುಷರಾದ ಅನೇಕ ರಾಜಮಹಾರಾಜರಂತೆ ಗಳಗನಾಥರೂ 'ಯುಗಪುರುಷ'ರಾದರು. ಅವರು ಕನ್ನಡ ಕಾದಂಬರಿಯ ಇತಿಹಾಸದಲ್ಲಿ 'ಗಳಗನಾಥ-ಯುಗ'ವನ್ನೇ ಆರಂಭಿಸಿದರು!

"ಇಂದಿನ ಕನ್ನಡಿಗರಿಗೆ 'ಗಳಗನಾಥ-ಯುಗ' ಮುಗಿದುಹೋಗಿರಬಹುದು. ಆದರೆ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ಗಳಗನಾಥ-ಯುಗ'ವೊಂದು ಇದ್ದೇ ಇರುತ್ತದೆ— ಎಂಬುದನ್ನು ನಾವು ಮರೆಯಬಾರದು".[4]

---

1. ಆಲೂರ ವೆಂಕಟರಾಯ : ಗಳಗನಾಥ (1946), ಕೊನೆಯ ಪುಟ
2. ಕನ್ನಡ ವಿಶ್ವಕೋಶ, ಸಂಪುಟ 6, ಪುಟ 146
3. ಬೆಟಗೇರಿ ಕೃಷ್ಣಶರ್ಮಾ : ಕರ್ಮವೀರ ದಿ. 5-1-1969, ಪುಟ 19
4. ಹಾ. ಮಾ. ನಾಯಕ : 'ಗಳಗನಾಥ ಗಾಥಾ', ಕನ್ನಡ ಪ್ರಭ ದಿ. 6-1-1969

# ಸಹಾಯಕ ಸಾಹಿತ್ಯ

## ಕನ್ನಡ ಗ್ರಂಥಗಳು


ಆಲೂರ ವೆಂಕಟರಾಯರು : ನನ್ನ ಜೀವನ ಸ್ಮೃತಿಗಳು, (1974) ಮನೋಹರ ಗ್ರಂಥಮಾಲಾ, ಧಾರವಾಡ

ಕಾಟೋಟಿ ಶ್ರೀನಿವಾಸ ನರಸಿಂಹ : ವೆಂಕಟೇಶ ಮಹಾತ್ಮ್ಯ, (1953) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

ಕಿತ್ತೂರ ಕೃಷ್ಣಮೂರ್ತಿ : ಗಳಗನಾಥರ ಕಾದಂಬರಿಗಳು, (1971) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

,, ,, : ವಿಮರ್ಶೆಯ ವ್ಯಾಪ್ತಿ, (1972) ಸಾಹಿತ್ಯ ಭಂಡಾರ, ಹುಬ್ಬಳ್ಳಿ.

ಕುರ್ತಕೋಟಿ ಕೆ. ಡಿ. : ಯುಗಧರ್ಮ ಹಾಗು ಸಾಹಿತ್ಯದರ್ಶನ, (1962) ಮನೋಹರ ಗ್ರಂಥಮಾಲಾ, ಧಾರವಾಡ

ಕುರ್ತಕೋಟಿ ಕೆ. ಡಿ. ಮತ್ತು ಜೋಶಿ ಜಿ. ಬಿ. (ಸಂ.) : ವಾಸುದೇವ ಪ್ರಶಸ್ತಿ, (1964) ವಾಸುದೇವ ವಿನೋದಿನಿ ನಾಟ್ಯಸಭೆ, ಬಾಗಿಲುಕೋಟೆ

ಕುಲಕರ್ಣಿ ಶಂಕರ ಅಣ್ಣಾಜಿ : ವಿಕಾರ ವಿನಾಶ, (1969) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

ಕುಳ್ಳಿ ಜೆ. ಎಸ್. ಮತ್ತು ಮುರಡಿ ಜಿ. ಪಿ : ಅನುವಾದ ಕಲೆ, (1975) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಕುವೆಂಪು : ವಿಭೂತಿ ಪೂಜೆ, (1970) ಉದಯ ರವಿ ಪ್ರಕಾಶನ, ಮೈಸೂರು

ಕೃಷ್ಣಮೂರ್ತಿ ಕೆ. : ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ, (1 ನೆಯ ಆವೃತ್ತಿ)

ಕೃಷ್ಣಶಾಸ್ತ್ರೀ ಎ. ಆರ್. : ಬಂಕಿಮಚಂದ್ರ, (1960) ಮೈಸೂರು ವಿಶ್ವವಿದ್ಯಾನಿಲಯ

ಕೃಷ್ಣಶಾಸ್ತ್ರೀ ಎ. ಆರ್. : ಭಾಷಣಗಳು ಮತ್ತು ಲೇಖನಗಳು, (1960) ಶಾರದಾ ಮಂದಿರ, ಮೈಸೂರು

ಕೃಷ್ಣಮೂರ್ತಿ ಎಂ. ಜಿ. : ಆಧುನಿಕ ಭಾರತೀಯ ಸಾಹಿತ್ಯ ಮತ್ತು ಇತರ ಲೇಖನಗಳು, (1970) ಅಕ್ಷರ ಪ್ರಕಾಶನ, ಸಾಗರ

ಗಳಗನಾಥ ವೇ. ತಿ. : ಅನುಕರಣೀಯ ದಾಂಪತ್ಯ ಅಥವಾ ಗಿರಿಜಾ ಕಲ್ಯಾಣ ಸಾರ, (1912) ಶೇಷಾಚಲ ಗ್ರಂಥಮಾಲೆ, ಅಗಡಿ

" " : ಈಶ್ವರೀಸೂತ್ರ, (1947) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

" " : ಕನ್ನಡಿಗರ ಕರ್ಮಕಥೆ (1966) ಸಮಾಜ ಪುಸ್ತಕಾಲಯ, ಧಾರವಾಡ

" " : ಕಮಲಕುಮಾರಿ, (1957) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

" " : ಕಲಿಕುಠಾರ ಅಥವಾ ಲೋಕಾಪುರ ಪೀಠಪ್ರಭಾವ (ಎರಡನೆಯ ಭಾಗ), (1938) ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ

" " : ಕಲಿಕುಠಾರ, ಜ್ಞಾನಯೋಗ ಪ್ರಧಾನ ಖಂಡ, (1959) ಸದ್ಗುರು ಕಾರ್ಯಾಲಯ, ಹಾವೇರಿ

" " : ಕಲಿಬಾಧಾನಿವಾರಕ ಸರಹಸ್ಯ ನಳಚರಿತ್ರೆ, (1963) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

" " : ಕುಟುಂಬ, (1913) ಶೇಷಾಚಲ ಗ್ರಂಥಮಾಲೆ, ಅಗಡಿ

" " : ಕುಮುದಿನಿ ಅಥವಾ ಬಾಲಕ್ಕೆ ಬಡಿದಾಟ, (1963) ಸಮಾಜ ಪುಸ್ತಕಾಲಯ, ಧಾರವಾಡ

" " : ಕುರುಕ್ಷೇತ್ರ, (1949) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

" " : ಕ್ಷಾತ್ರತೇಜ ಅಥವಾ ಸ್ವಾಮಿಭಕ್ತಿ ಪ್ರದರ್ಶನ, (1963) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

" " : ಗೃಹಕಲಹ ಅಥವಾ ನೀಚ-ಸ್ವಾರ್ಥ-ಶೂಲ,(1959) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

" " : ಛತ್ರಪತಿ, (1952) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

ಗಳಗನಾಥ ವೇ. ತಿ. : ತಿಲೋತ್ತಮೆ ಅಥವಾ ಸರಸಪ್ರೇಮ, (1965) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

,, ,, : ದಾಂಪತ್ಯ, (1951) ಗಳಗನಾಥ ಸುರಸ ಗ್ರಂಥ ಮಾಲೆ, ಧಾರವಾಡ

,, ,, : ದುರ್ಗದ ಬಿಚ್ಚುಗತ್ತಿ ಅಥವಾ ಶ್ರೀ ಮುರಗೀಶ ಗುರು ಮಹಿಮೆ. (1 ನೆಯ ಭಾಗ) (1938) ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ

,, ,, : ಧರ್ಮರಹಸ್ಯ ಅಥವಾ ಸತ್ಸಮಾಗಮ ಪ್ರಭಾವ, (1933) ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ

,, ,, : ಧಾರ್ಮಿಕ ತೇಜ. (1960) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

,, ,, : ನಿರ್ಯಾಣ ಮಹೋತ್ಸವ ಅಥವಾ ಲೋಕಜಾಗ್ರತಿ, (1915) ಶೇಷಾಚಲ ಗ್ರಂಥಮಾಲೆ, ಅಗಡಿ

,, ,, : ಪದ್ಯಾರ್ಥ ಸಾರ, (2 ನೆಯ ಭಾಗ) (1904) ಕರ್ನಾಟಕ ಬುಕ್ ಡಿಪೋ ಪ್ರೆಸ್, ಧಾರವಾಡ

,, ,, : ಪ್ರಬುದ್ಧ ಪದ್ಮನಯನೆ, (1957) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

,, ,, : ಭಾಗವತಾಮೃತ, (1922) ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ

,, ,, : ಮರಾಠರ ಅಭ್ಯುದಯ, (1962) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

,, ,, : ಮಹಾಭಾರತಾಮೃತ – ಆದಿಪರ್ವ, (1931) ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ

,, ,, : ಮಹಾಭಾರತಾಮೃತ – ಸಭಾಪರ್ವ, (1933) ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ

,, ,, : ಮಾಧವ ಕರುಣಾವಿಲಾಸ, (1964) ಸಮಾಜ ಪುಸ್ತಕಾಲಯ, ಧಾರವಾಡ

,, ,, : ರಹಸ್ಯ, (1933) ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ

,, ,, : ರಾಣಾ ರಾಜಸಿಂಹ, (1952) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

| | | |
|---|---|---|
| ಗಳಗನಾಥ ವೇ. ತಿ. | : | ರಾಣೀ ಮೃಣಾಲಿನಿ, (1958) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ |
| ,, ,, | : | ರಾಮಚರಿತ ಮಾನಸ ಅಥವಾ ತುಲಸೀ ರಾಮಾಯಣ, (1926) ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ |
| ,, ,, | : | ವೀರಪ್ರತಾಪ ಅಥವಾ ಸ್ವಾಭಿಮಾನ ಸಂಭ್ರಮ, (1960) ಗಳಗನಾಥ, ಸುರಸ ಗ್ರಂಥಮಾಲೆ, ಧಾರವಾಡ |
| ,, ,, | : | ವೈಭವ ಅಥವಾ ಚಾಣಕ್ಯನ ಕಾರಸ್ಥಾನ, (1960) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ |
| ,, ,, | : | ಶಿವಪ್ರಭುವಿನ ಪುಣ್ಯ ಅಥವಾ ಕೆಚ್ಚೆದೆಯ ಮರಾಟರು, (1961) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ |
| ,, ,, | : | ಶೌರ್ಯ ಸಂಜೀವನೀ ಅಥವಾ ಸತ್ವಸಾರ, (1955) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ |
| ,, ,, | : | ಸದ್ಗುಣ ಸಂಭ್ರಮ ಅಥವಾ ಭಗವತೀ ಕಾತ್ಯಾಯನೀ, (1955) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ |
| ,, ,, | : | ಸದ್ಗುರು ಪ್ರಭಾವ, (1928) ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ |
| ,, ,, | : | ಸಂಸಾರ ಸುಖ ಅಥವಾ ಲೋಕಭ್ರಮ ವಿಲಾಸ, (1959) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ |
| ,, ,, | : | ಸುಂದರ ಲೇಖ ಸಮುಚ್ಚಯ, (ಪ್ರಥಮ ಮುದ್ರಣ) ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ |
| ,, ,, | : | ಸ್ವರಾಜ ಸುಗಂಧ, (1963) ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ |
| ಗಳಗನಾಥ ಮತ್ತು ಕಿತ್ತೂರ ಗುರುನಾಥ ವೆಂಕಟೇಶ (ಸಂ.) | : | ಶ್ರೀ ಚಿದಂಬರ ಚರಿತ್ರ, (2 ನೆಯ ಆವೃತ್ತಿ) (1909) ಶೇಷಾಚಲ ಗ್ರಂಥಮಾಲೆ, ಅಗಡಿ |
| ಗಳಗನಾಥ ಮತ್ತು ಮ. ಚಿಂ. ಕಕ್ಕನವರ. | : | ಶೈವ ಸುಧಾರ್ಣವ, (1923) ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ |

ಜಂತಲಿ ಮಹಾದೇವಶಾಸ್ತ್ರೀ : ಬಂಧ ವಿಮೋಚನ, (1919) ಗಳಗನಾಥ ಸುರಸ ಗ್ರಂಥಮಾಲೆ, ಹಾವೇರಿ

ಜಾಗಿರದಾರ ಆರ್. ವಿ. : ಐವತ್ತು ವರುಷ, (1941) ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

ಜೋಶಿ ಜಿ. ಬಿ. (ಸಂ.) : ಮನ್ವಂತರ–2. ವಿಚಾರ ಸಂಕಿರಣ ವಿಶೇಷಾಂಕ, (1968) ಮನ್ವಂತರ ಪ್ರಕಾಶನ, ಧಾರವಾಡ

ಜೋಶಿ ಶಾಂತಾರಾಮ (ಸಂ.) : ಶ್ರೀ ಶೇಷಾಚಲ ಸದ್ಗುರೂತ್ತಮರು, (ಸರ್ವಜಿತು ಸಂವತ್ಸರ). ಆನಂದವನ

ತಟ್ಟಿ ವಲ್ಲಭ ಮಹಾಲಿಂಗ : ಕನ್ನಡಿಗರ ಜನ್ಮಸಾರ್ಥಕತೆ, (1899) ವಾಗ್ಭೂಷಣ ಗ್ರಂಥಮಾಲೆ, ಧಾರವಾಡ

ತುರಮರಿ ಗಂಗಾಧರ ಮಡಿವಾಳೇಶ್ವರ : ಬಾಣ ಕಾದಂಬರಿ, (1975) ವಿದ್ಯಾವರ್ಧಕ ಸಂಘ, ಧಾರವಾತ

ಧಾರವಾಡಕರ ರಾ. ಯ. : ಹೊಸಗನ್ನಡ ಸಾಹಿತ್ಯದ ಉದಯಕಾಲ, (1975) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ನಾಯಕ ಹಾ. ಮಾ. (ಸಂ.) : ಕನ್ನಡ ವಿಶ್ವಕೋಶ ಸಂಪುಟ–ಮೂರು.
,, ,, ,, –ಆರು,
ಕನ್ನಡ ಅಧ್ಯಯನಸಂಸ್ಥೆ ಮೈಸೂರು ವಿ. ವಿ. ಮೈಸೂರು

,, ,, : ಗಳಗನಾಥ, (1970) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

,, ,, : ಚಿನ್ನದ ಗರಿ, (1974) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಪಾಟೀಲ ಶಂಕರ (ಸಂ.) : ಕಾದಂಬರೀ ದರ್ಶನ. (1974) ಕೃಷ್ಣಮೂರ್ತಿ ಪುರಾಣಿಕ ಸತ್ಕಾರ ಸಮಿತಿ, ಹುಬ್ಬಳ್ಳಿ

ಪುಟ್ಟಸ್ವಾಮಯ್ಯ ಬಿ. : ಮೃಣಾಳಿನಿ. (1954) ಪ್ರತಿಭಾ ಪ್ರಕಾಶನ, ಬೆಂಗಳೂರು

ಬೇಂದ್ರೆ ದ. ರಾ. : ಸಾಹಿತ್ಯ–ಸಂಶೋಧನ. (1940) ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ

ಭೈರಪ್ಪ ಎಸ್. ಎಲ್. : ಕಥೆ ಮತ್ತು ಕಥಾವಸ್ತು, (1969) ಸಾಹಿತ್ಯ ಭಂಡಾರ, ಬೆಂಗಳೂರು

ಮರಿಯಪ್ಪ ಭಟ್ಟ ಎಂ. : ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ, (1960) ಭಾರತೀ ಪ್ರಕಾಶನ, ಮೈಸೂರು

ಮಾಸ್ತಿ ವೆಂಕಟೇಶ ಅಯ್ಯಂಗಾರ : ಪ್ರಸಂಗ – ಮೂರು, (ಪ್ರಥಮ ಮುದ್ರಣ) (1965)

ಮುಗಳಿ ರಂ. ಶ್ರೀ. (ಸಂ.) : ಆಂಡಯ್ಯ, (1949) ಶಾಂತಿ ಸೇವಾ ಸದನ, ಶೇಡಬಾಳ

ಮುಗಳಿ ರಂ. ಶ್ರೀ. : ಕನ್ನಡ ಸಾಹಿತ್ಯದ ಇತಿಹಾಸ, (1963) ಸಾಹಿತ್ಯ ಅಕಾದೆಮಿ, ನವದೆಹಲಿ

,, ,, : ಕನ್ನಡ ಸಾಹಿತ್ಯ ಚರಿತ್ರೆ, (1964) ಉಷಾ ಸಾಹಿತ್ಯ ಮಾಲೆ, ಮೈಸೂರು

,, ,, : ಸಾಹಿತ್ಯೋಪಾಸನೆ, (1963) ಶಾರದಾ ಮಂದಿರ, ಮೈಸೂರು

ಮುಳಬಾಗಲ ಧೋ.ನ. : ಉತ್ತರರಾಮ ಚರಿತ್ರ ನಾಟಕವು, (1924) ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

ಮೊಕಾಶಿ. ಶಂ. ರಾ. : ಗಂಗವ್ವ ಮತ್ತು ಗಂಗಾಮಾಯಿ, (1956) ಮನೋಹರ ಗ್ರಂಥಮಾಲೆ, ಧಾರವಾಡ

ರಂಗಣ್ಣ ಎಸ್. ವಿ. : ಶೈಲಿ 1-2-3, (1971) ಕಾವ್ಯಾಲಯ, ಮೈಸೂರು

ವಾಸುದೇವಯ್ಯ ಚ. : ಆರ್ಯಕೀರ್ತಿ ( ದ್ವಿತೀಯ ಖಂಡ ) 'ಛತ್ರಪತಿ ಶಿವಾಜಿ', (1949) ಚ. ವಾ. ರಾಘವೇಂದ್ರಯ್ಯ, ಬೆಂಗಳೂರು

,, ,, : ಭೀಷ್ಮಚರಿತ, (1927) ಬೆಂಗಳೂರು

ವಿಜಾಪೂರಕರ ಕಲ್ಲೋ ಗಣೇಶ : ಭೀಷಣ ಚಿತ್ರ, (1919) ಬೆಳಗಾಂವಿ

ವಿವಿಧ ಲೇಖಕರು : ಸಂಭಾವನೆ (1941) ಬಿ. ಎಂ. ಶ್ರೀಕಂಠಯ್ಯ ಅವರಿಗೆ ಅರ್ಪಿಸಿದ ಗ್ರಂಥ, ಬೆಂಗಳೂರು

ವಿವಿಧ ಲೇಖಕರು : ಗಳಗನಾಥ, (1946) ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

ವೀರಪ್ಪ ಕೆ.ಟಿ. ಮತ್ತು ಕೃಷ್ಣಕುಮಾರ ಸಿ. ಪಿ. (ಸಂ.) : ಇಕ್ಷು ಕಾವೇರಿ, (1974) 48ನೆಯ ಕನ್ನಡ ಸಾಹಿತ್ಯ ಸಮ್ಮೇಲನದ ನೆನಪಿನ ಸಂಚಿಕೆ.

ವೆಂಕಟರಮಣಯ್ಯ. ಟಿ. ವಿ. : ಕನ್ನಡ ಭಾಷಾ-ಸಾಹಿತ್ಯ ಲೇಖನ ಸೂಚಿ, (1973) ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ವೆಂಕಟಾಚಾರ್ಯ ಬಿ. : ಅಮೃತ ಪುಲಿನ, (1908) ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

,, ,, : ಆನಂದ ಮಠ, (1959) ಜಿ. ಕೆ. ಎಂಡ್ ಬ್ರದರ್ಸ್, ಬೆಂಗಳೂರು

ವೆಂಕಟಾಚಾರ್ಯ ಬಿ. : ಕಪಾಲ ಕುಂಡಲಾ, (1898)
,, ,, : ಚಿತ್ರ ವಿಚಿತ್ರ ಭಾಗ– 1
,, ,, : ,, ,, ಭಾಗ– 2
,, ,, : ದುರ್ಗೇಶ ನಂದಿನಿ, (1930)
,, ,, : ದೇವೀ ಚೌಧುರಾಣಿ, (1968)
,, ,, : ನೀರದೆ, (1920)
,, ,, : ನವಾಬ ನಂದಿನಿ, ಸಾಹಿತ್ಯ ಮಂದಿರ, ಬೆಂಗಳೂರು
,, ,, : ಭಾರತ ಮಹಿಳಾ, (1933)
,, ,, : ಭ್ರಾಂತಿ ವಿಲಾಸ, (1911)
,, ,, : ರಾಜಸಿಂಹ, (1929)
,, ,, : ಲೀಲೆ, (1960)
,, ,, : ವಂಗವಿಜೇತ, (1930) ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ ಕಂಪೆನಿ
ಶಿವರುದ್ರಪ್ಪ ಜಿ. ಎಸ್. : ಗತಿಬಿಂಬ, (1974) ಸುರುಚಿ ಪ್ರಕಾಶನ, ಮೈಸೂರು
ಶಿವರುದ್ರಪ್ಪ ಜಿ. ಎಸ್. (ಸಂ.) : ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ, (1971) ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು
ಶೇಷಗಿರಿರಾವ್ ಎಲ್. ಎಸ್. : ಕಾದಂಬರಿ-ಸಾಮಾನ್ಯ ಮನುಷ್ಯ, (1957) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
ಶ್ರೀಕಂಠಯ್ಯ ಬಿ. ಎಂ. : ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, (1962) ಕಾವ್ಯಾಲಯ, ಮೈಸೂರು
ಸಾಂಗಲಿ ವೆಂಕಟೇಶ : ಹೊಸಗನ್ನಡದ ಪುಣ್ಯಪುರುಷರು, ಭಾಗ–1. (1972) ದ್ವೈಪಾಯನ ಟ್ರಸ್ಟ್, ಮುಂಬಯಿ
,, ,, : ಸಿರಿಗನ್ನಡ ಗ್ರಂಥಕರ್ತರ ಚರಿತ್ರ ಕೋಶ, (1960) ಉಷಾ ಸಾಹಿತ್ಯ ಮಾಲೆ, ಮೈಸೂರು
ಸೀತಾರಾಮಯ್ಯ ಎಂ. ವಿ. (ಸಂ.) : ಚಿನ್ನದ ಬೆಳಸು, (1970) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
ಹಾವನೂರ ಶ್ರೀನಿವಾಸ : ಗಳಗನಾಥ ಮಾಸ್ತರರು, (1972) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
,, ,, : ಹೊಸಗನ್ನಡದ ಅರುಣೋದಯ, (1974) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಹಿರೇಮಠ ಚನ್ನಬಸವ ವಿರೂಪಾಕ್ಷಯ್ಯ. : ದೇವೀದ್ವಯರ ದರ್ಪ ಪ್ರಭಾವ, (1929) ಗದಗ

## ಮರಾಠಿ ಗ್ರಂಥಗಳು

ಆಪಟೆ ಹರಿ ನಾರಾಯಣ : ಉಷಃಕಾಲ, (1965) ಸರ್ವಿಂಡಿಯಾ ಪ್ರಕಾಶನ, ಪುಣೆ

,, ,, : ಕೇವಳ ಸ್ವರಾಜ್ಯಾ ಸಾಠಿ, (1964) ಆರ್ಯಭೂಷಣ ಮುದ್ರಣಾಲಯ, ಪುಣೆ

,, ,, : ಗಡ ಆಲಾ ಪಣ ಸಿಂಹ ಗೇಲಾ, (1967) ಆರ್ಯಭೂಷಣ ಮುದ್ರಣಾಲಯ, ಪುಣೆ

,, ,, : ಚಂದ್ರಗುಪ್ತ, (1967) ಆರ್ಯಭೂಷಣ ಮುದ್ರಣಾಲಯ, ಪುಣೆ

,, ,, : ರೂಪನಗರಚಿ ರಾಜಕನ್ಯಾ, (1964) ಆರ್ಯಭೂಷಣ ಮುದ್ರಣಾಲಯ, ಪುಣೆ

,, ,, : ವಜ್ರಾಘಾತ, (1964) ಆರ್ಯಭೂಷಣ ಮುದ್ರಣಾಲಯ, ಪುಣೆ

,, ,, : ಸೂರ್ಯಗ್ರಹಣ, (1964) ಆರ್ಯಭೂಷಣ ಮುದ್ರಣಾಲಯ, ಪುಣೆ

,, ,, : ಸೂರ್ಯೋದಯ, (1963) ಆರ್ಯಭೂಷಣ ಮುದ್ರಣಾಲಯ, ಪುಣೆ

ಜೋಗ ರಾ. ಶ್ರೀ. (ಸಂ.) : ಮರಾಠೀ ವಾಜ್ಮಯಾಚಾ ಇತಿಹಾಸ, (1875-1920) ಪಾಚವಾ ಖಂಡ, (1973) ಮಹಾರಾಷ್ಟ್ರ ಸಾಹಿತ್ಯ ಪರಿಷತ್, ಪುಣೆ

ದೇಶಪಾಂಡೆ ಅ. ನಾ. : ಆಧುನಿಕ ಮರಾಠೀ ವಾಜ್ಮಯಾಚಾ ಇತಿಹಾಸ, (1962)

ದೇಶಪಾಂಡೆ ಕುಸುಮಾವತಿ : ಮರಾಠೀ ಕಾದಂಬರಿ, (1850–1950) ಪಹಿಲೀ ಶತಕ, (1953) ಮುಂಬಯಿ ಮರಾಠೀ ಸಂಘ

ಭಿಂಗಾರೆ ಲ. ಮ. : ಹರಿಭಾವು, (1956) ಸ್ಕೂಲ್ ವ ಕಾಲೇಜ್ ಬುಕ್ ಸ್ಟಾಲ್, ಕೊಲ್ಲಾಪುರ

## ಆಂಗ್ಲ ಗ್ರಂಥಗಳು


BAKER EARNEST A : *The History of English Novel Vol. 6* (1969), New York

BROOKS CLEANTH AND WARREN ROBERT PENN } *The Scope of Fiction,* (1960) New York

BUSNAGI RAJANNAN : *Fundamentals of Research,* (1968) American Studies Research Centre, Hydrabad

CATFORD J. C. : *A Linguistic Theory of Translation* (1969)

CRAWFORD THOMAS : *Scott,* (1965) Oliver and Boyd

ELIOT T. S. : *The Sacred Wood* (1969), Methuen & Co. London.

,, : *Selected Prose* (1958), Penguin Books.

EVANS SIR IFOR : *A Short History of English Literature,* (1958) A Pelican Book.

FORSTER E. M. : *Aspects of Novel* (1962), Penguin Books

GOPAL M. H. : *Research Reporting in Social Sciences* (1965), Karnatak University, Dharwad.

GRIERSON SIR HERBERT AND OTHERS : *Sir Walter Scott–Lectures.*

HUDSON W. H. : *An Introduction to the study of Literature* (1932), George G. Harrap and Co. Ltd. London.

KARANDIKAR M. A. : *Hari Narayan Apte* (1968), National Book Trust, New Delhi.

KETTLE ARNOLD : *An Introduction to English Novel, Vol. I*

LUBBOCK PERCY : *The Craft of Fiction* (1968), Jonathan Cape, London

LUKACS GEORGE : *The Historical Novel* (1962), Beacon Press, Baston.

MAUGHAM W. SOMERSET : *The Summing up*, (First Edition)

MURRY J. MIDDLETON : *The Problem of style* (1967), Oxford University Press.

NAIK M. K. : *W. Somerset Maugham* (1966), University of Oklahoma Press, Norman.

NARASIMHAIAH C. D. (Ed.) : *Indian Literature of The Past Fifty Years* (1970), Mysore University, Mysore.

SAVORY THEODORE : *The Art of Translation* (1957), Jonathan Cape, London.

SEWELL ROBERT : *A Forgotten Empire* (1970), National Book Trust, New-Delhi.

TRILLING LIONEL (Ed.) : *The Portable Matthew Arnold* (1963)

****

## ನಿಯತಕಾಲಿಕೆಗಳು

ಕನ್ನಡ ನುಡಿ, ಕನ್ನಡ ಶಾಲಾಪತ್ರಕ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಕರ್ನಾಟಕ ಭಾರತಿ, ಕರ್ಮವೀರ. ಕಸ್ತೂರಿ. ಜಯಕರ್ನಾಟಕ. ಜಯಂತಿ, ಜೀವನ, ಜೀವನ ಶಿಕ್ಷಣ. ಪ್ರಬುದ್ಧ ಕರ್ನಾಟಕ, ವಾಗ್ಭೂಷಣ, ಸದ್ಗುರು, ಸದ್ಬೋಧ ಚಂದ್ರಿಕೆ, ಸಂಕೀರ್ಣ. ಸಂಯುಕ್ತ ಕರ್ನಾಟಕ, ಸುಧಾ.

# ಲೇಖನಗಳು

ಇಂಗಳಗಿ ಕೃಷ್ಣಾಜಿ ಶಂಕರ : 'ಪತ್ರ ವ್ಯವಹಾರ', ಕನ್ನಡ ಶಾಲಾ ಪತ್ರಿಕ, ಮಾರ್ಚ 1908.

ಉತ್ತಂಗಿ ಚನ್ನಪ್ಪ : 'ಸಂದೇಶ', ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957.

ಉಮಾಪತಿ ಎಚ್. : 'ಕನ್ನಡ ಐತಿಹಾಸಿಕ ಕಾದಂಬರಿಗಳು', ಕನ್ನಡ ನುಡಿ, ಜೂನ 1955.

ಕಟ್ಟೀಮನಿ ಬಸವರಾಜ : 'ಕನ್ನಡ ಕಾದಂಬರಿಯ ತಾತ', ಕರ್ಮವೀರ, 5–1–1969.

ಕಲ್ಲೂರ ಕೃಷ್ಣಕುಮಾರ : 'ಕರ್ನಾಟಕಕ್ಕೆ ಗಳಗನಾಥರ ಕಾಣಿಕೆ', ಜೀವನ, ಅಕ್ಟೋಬರ, 1945.

ಕವಲಿ ಪಂಡಿತ ಜೆ. ಎ. : 'ಬರೆಹಗಾರಿಕೆಯ ಬೀಜಾರೋಪಣ', ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957.

ಕಿತ್ತೂರ ಕೃಷ್ಣಮೂರ್ತಿ : 'ಉದಾರ ಚರಿತ ಗಳಗನಾಥರು', ಕರ್ಮವೀರ, 5-1-1969.

,, ,, : 'ಗಳಗನಾಥಕೃತ ಕನ್ನಡಿಗರ ಕಾದಂಬರಿಗಳು', ಕರ್ನಾಟಕ ಭಾರತಿ, 1–2 (1969).

,, ,, : ಗಳಗನಾಥರ ಪ್ರಥಮ ಕಾದಂಬರಿ –ಪ್ರಬುದ್ಧ ಪದ್ಮನಯನೆ', ಸದ್ಬೋಧ ಚಂದ್ರಿಕೆ, ವಿಶೇಷ ಸಂಚಿಕೆ, 1969.

ಕುರಡಿ ಎನ್. ವಿ. : 'ಟ್ರೇನಿಂಗ ಕಾಲೇಜದ ಸವಿನೆನಹುಗಳು', ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957.

ಕುಲಕರ್ಣಿ ಎನ್. ಕೆ. : 'ಗಳಗನಾಥರ ಕರ್ನಾಟಕ ಇತಿಹಾಸದ ಮೂರು ಕಾದಂಬರಿಗಳು', ಕರ್ಮವೀರ 5-1-1969.

,, ,, : 'ಗಳಗನಾಥರ ಕಾಲ ಮತ್ತು ಕನ್ನಡ' ಸದ್ಬೋಧ ಚಂದ್ರಿಕೆ, ವಿಶೇಷ ಸಂಚಿಕೆ, 1969.

,, ,, : 'ಧೋಂಡೋ ನರಸಿಂಹ ಮುಳಬಾಗಲ ಹಾಗು ಅವರ ಸಾಹಿತ್ಯ ಸೇವೆ', ವಾಗ್ಭೂಷಣ, 1973.

ಕುಲಕರ್ಣಿ ಭೀ. ಗು. : 'ಕರ್ನಾಟಕ ವಿದ್ಯಾವರ್ಧಕ ಸಂಘ – ಅಷ್ಟ ದಶಕಗಳ ಬೆಳಕು', ವಾಗ್ಭೂಷಣ, 1973.

ಕುಲಕರ್ಣಿ ವಿಠ್ಠಲ : 'ಶ್ರೇಷ್ಠ ಶೈಲಿಯ ಸೃಷ್ಟಿಕರ್ತ', ಸಂಯುಕ್ತ ಕರ್ನಾಟಕ, ಸಾಪ್ತಾಹಿಕ ಮಂಜರಿ, 5-1-1969.

ಕುಲಕರ್ಣಿ ಶೇ. ಗೋ. : 'ರಾ.ಹ. ದೇಶಪಾಂಡೆಯವರು',ವಾಗ್ಭೂಷಣ, 1973.

ಕೃಷ್ಣಯ್ಯ ಎಂ. ಎಚ್. : 'ಐತಿಹಾಸಿಕ ಕಾದಂಬರಿ, ಒಂದು ಸಮೀಕ್ಷೆ', ಸಂಕೀರ್ಣ, ಮೇ 1971.

ಕೆರೂರ. ದ. ಲ. : 'ಶ್ರೀ ಗಳಗನಾಥರು ಸಾರಿ ತೋರಿದ ಬಾಳಬಟ್ಟೆ', ಕರ್ಮವೀರ, 5-1-1969.

ಕೆಂಪೇಗೌಡ ಕೆ. : 'ಕನ್ನಡ ಭಾಷಾ ವಿಜ್ಞಾನದ ಚರಿತ್ರೆ', ಪ್ರಬುದ್ಧ ಕರ್ಣಾಟಕ 53-3.

ಕೊಪ್ಪಳ ವೀರಭದ್ರಪ್ಪ : 'ಶಾಂತವೀರ ರಾಚಿದೇವ ಕಿತ್ತೂರ', ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957.

ಗದಗಕರ ಎನ್. ಎಸ್. : 'ನಾಡ ನಂದಾದೀಪ ಗಳಗನಾಥರು', ಕರ್ಮವೀರ, 5-1-1969.

ಗಲಗಲಿ ಪಂಡಿತ ಕೇಶವಶರ್ಮಾ : 'ಟ್ರೇನಿಂಗ ಕಾಲೇಜದ ಬಗ್ಗೆ ಮಾತೃಭಾವನೆ', ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957.

ಗಳಗನಾಥ ವೇ. ತಿ. : 'ಇಂದಿರಾ ಕಾದಂಬರಿಯ ಬಗ್ಗೆ ಅಭಿಪ್ರಾಯಗಳು', ಶಾಲಾ ಪತ್ರಕ, 54–3 (ಮಾರ್ಚ–1909)

,, ,, : 'ಚಂದ್ರಿಕೆಗೆ ಏನನ್ನುವರು ?', ಸದ್ಬೋಧ ಚಂದ್ರಿಕೆ, ಅಗಷ್ಟ-ಸಪ್ಟೆಂಬರ 1914.

,, ,, : 'ಜೀವನ ಚರಿತ್ರ', ಸದ್ಬೋಧ ಚಂದ್ರಿಕೆ, ಜನೇವರಿ 1911.

,, ,, : 'ಹೊಸ ಯಂತ್ರಗಳು', ಸದ್ಬೋಧ ಚಂದ್ರಿಕೆ, ಅಗಸ್ಟ–ಸಪ್ಟೆಂಬರ 1914.

ಗೋಕಾಕ ವಿ. ಕೃ. : 'ಸಂದೇಶ', ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957.

ಚಕ್ರವರ್ತಿ ಚಿದಂಬರಮೂರ್ತಿ : 'ಶ್ರೀ ಗಳಗನಾಥರು ಮತ್ತು ಆನಂದವನ'. ಸದ್ಬೋಧ ಚಂದ್ರಿಕೆ, ವಿಶೇಷ ಸಂಚಿಕೆ, 1969.

ಚಿದಂಬರಾನಂದ : 'ಗಳಗನಾಥರ ಋಣಭಾರ',ಕರ್ಮವೀರ 5-1-1969.

ಜಗಳೂರು ಲಕ್ಷ್ಮಣರಾವ : 'ಗಳಗನಾಥರು', ಉತ್ಥಾನ, ಜುಲೈ 1970.

ಜೋಯಿಸ್ರಿ ಶ್ರೀಧರ : 'ಮಮ್ಮಗನ ಮಾತು', ಸದ್ಬೋಧ ಚಂದ್ರಿಕೆ, ವಿಶೇಷ ಸಂಚಿಕೆ, 1969.

ಜೋಶಿ ಗುರುನಾಥ : 'ಆಚಾರ್ಯ ವೆಂಕಟ ರಂಗೋ ಕಟ್ಟಿ' ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957.

| | | |
|---|---|---|
| ಜೋಶಿ ಗುರುನಾಥ | : | 'ಕನ್ನಡ ಐತಿಹಾಸಿಕ ಕಾದಂಬರಿಗಳು', ಕನ್ನಡ ನುಡಿ, 22, (1959) |
| ಜೋಶಿ ಶಂ. ಬಾ. | : | 'ಶ್ರೀ. ರಾ. ಹ. ದೇಶಪಾಂಡೆಯವರು', ವಾಗ್ಭೂಷಣ, 1973. |
| ಜೋಶಿ ಶಂ. ವಿ. | : | 'ಪ್ರಿನ್ಸಿಪಾಲ ವಿನಾಯಕರಾವ ಜೋಶಿಯವರು' ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957. |
| ತಟ್ಟಿ ವಲ್ಲಭ ಮಹಾಲಿಂಗ | : | 'ಸೃಷ್ಟಿಯ ಸದುಪದೇಶ' ಸದ್ಬೋಧ ಚಂದ್ರಿಕೆ, ಜನೇವರಿ 1911. |
| ತಟ್ಟಿ ಶಾಮರಾಯರು | : | 'ದಿ. ಬ. ರೊದ್ದ ಶ್ರೀನಿವಾಸರಾಯರ ಸಂಕ್ಷಿಪ್ತ ಚರಿತ್ರೆ', ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957. |
| ಧಾರವಾಡಕರ ರಾ. ಯ. | : | 'ಪ್ರಭಾತ ಮಾಸಪತ್ರಿಕೆ', ವಾಗ್ಭೂಷಣ, 1973. |
| ಧಾರವಾಡಕರ ಆರ್. ವಾಯ್. | : | 'ಪ್ರಿ. ಹುಯಿಲಗೋಳ ಭುಜಂಗರಾಯರು', ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957. |
| ದೀಕ್ಷಿತ ಚಿ. ಮು. | : | 'ಕನ್ನಡ ಸಾಹಿತ್ಯಾಚಾರ್ಯ ಗಳಗನಾಥರು', ಸದ್ಬೋಧ ಚಂದ್ರಿಕೆ, ಮಾರ್ಚ-ಎಪ್ರಿಲ 1969. |
| ನಂದಿಮಠ ಶಿ. ಚ. | : | 'ಸಂದೇಶ', ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957. |
| ನಾಯಕ ಹಾ. ಮಾ. | : | 'ಗಳಗನಾಥ ಗಾಥಾ', ಕನ್ನಡ ಪ್ರಭ (ಸಾಹಿತ್ಯ ಸಲ್ಲಾಪ), 6-1-1969. |
| ನಿಟ್ಟೂರ ಶ್ರೀನಿವಾಸರಾವ | : | 'ಕನ್ನಡ ಸಾಹಿತ್ಯದಲ್ಲಿ ಐತಿಹಾಸಿಕ ಕಾದಂಬರಿಗಳು', ಜೀವನ, ಮಾರ್ಚ 1951. |
| ಪಾಟೀಲ ಎಸ್. ವಿ. | : | 'ಗಳಗನಾಥರು ಕನ್ನಡದ ಕಣಜವನ್ನು ತುಂಬಿದರು', ಕರ್ಮವೀರ, 5-1-1969. |
| ,, ,, | : | 'ಪತ್ರಿಕೋದ್ಯಮಿ ಗಳಗನಾಥರು', ಸದ್ಬೋಧ ಚಂದ್ರಿಕೆ, ಮಾರ್ಚ-ಎಪ್ರಿಲ 1969. |
| ಪುಟ್ಟಸ್ವಾಮಯ್ಯ ಬಿ. | : | 'ನಾನು ಕಂಡ ಗಳಗನಾಥರು', ಪ್ರಜಾವಾಣಿ, ಸಾಹಿತ್ಯ ಪುರವಣಿ, 5-1-1969. |
| ಬಮಶಿಂ | : | 'ನಮ್ಮ ಮಾಸಿಕ', ಜೀವನ ಶಿಕ್ಷಣ, ಶತಮಾನೋತ್ಸವ ಸಂಚಿಕೆ, ಮಾರ್ಚ 1967. |
| ಬುರ್ಲಿ ಬಿಂದುಮಾಧವ | : | 'ಅಪಮಾನವಾದರೆ ಒಳಿತು', ಸದ್ಬೋಧ ಚಂದ್ರಿಕೆ, ಮಾರ್ಚ-ಎಪ್ರಿಲ 1969. |

ಬೆಟಗೇರಿ ಕೃಷ್ಣಶರ್ಮಾ : 'ಕನ್ನಡ ಕಾದಂಬರೀ ಪ್ರಪಂಚಕ್ಕೆ ಗಳಗನಾಥರ ಕೊಡುಗೆ', ಸದ್ಬೋಧ ಚಂದ್ರಿಕೆ, ಮಾರ್ಚ--ಎಪ್ರಿಲ 1969.

,, ,, : 'ಕನ್ನಡಕ್ಕೆ ಗಳಗನಾಥರ ಕಾಣಿಕೆ', ಕರ್ಮವೀರ, 5-1-1969.

,, ,, : 'ಗಳಗನಾಥರ ಕೃತಿಗಳು (ಸಂಖ್ಯಾನಿರ್ಣಯ)', ಕರ್ನಾಟಕ ಭಾರತಿ 1–2 (1969).

,, ,, : 'ಗಳಗನಾಥರ ಸಾಹಿತ್ಯರಾಶಿ', ಪ್ರಜಾವಾಣಿ (ಸಾಪ್ತಾಹಿಕ ಪುರವಣಿ), 5-1-1969.

ಬೇಂದ್ರೆ ದ. ರಾ. : 'ದಿ. ಗಳಗನಾಥರನ್ನು ನೆನಿಸಿದಾಗ', ಸದ್ಬೋಧ ಚಂದ್ರಿಕೆ, ಮಾರ್ಚ–ಎಪ್ರಿಲ 1969,

ಭಾರದ್ವಾಜ ಡಿ. ಕೆ. : 'ಕನ್ನಡ ನುಡಿಭಕ್ತರು –ಗಳಗನಾಥರು', ಕನ್ನಡ ನುಡಿ, 2–6, (ಡಿಸೆಂಬರ –1939).

ಮಂಗಳಾ ಚಿ. ನ. : 'ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳು', ಕನ್ನಡ ನುಡಿ, ಮಾರ್ಚ 1955.

ಮಂಜುನಾಥನ್ ಜಿ. ಜಿ. : 'ಬಿ. ವೆಂಕಟಾಚಾರ್ಯ –ವ್ಯಕ್ತಿ ಮತ್ತು ಸಾಹಿತ್ಯ', ಇಕ್ಷುಕಾವೇರಿ, 1974

ಮಹಿಷಿ ಬದರೀನಾಥ : 'ಕನ್ನಡದ ಕಾರಣಪುರುಷ ಗಳಗನಾಥರು', ಕನ್ನಡ ಪ್ರಭ, 12-1-1969.

ಮಾಧವ : 'ಕರ್ಮಯೋಗಿ', ಪ್ರಜಾವಾಣಿ (ಸಾಪ್ತಾಹಿಕ ಪುರವಣಿ), 5-1-1969.

ಮಿರ್ಜಿ ಅಣ್ಣಾರಾಯರು : 'ನನ್ನ ಟ್ರೇನಿಂಗ ಕಾಲೇಜಿನ ಅನುಭವಗಳು', ಜೀವನ ಶಿಕ್ಷಣ, ವಿಶೇಷ ಸಂಚಿಕೆ. 1957.

ಮುಗಳಿ ರಂ. ಶ್ರೀ. : 'ಕನ್ನಡ ಗದ್ಯಕ್ಕೆ ಆಲೂರರ ಕಾಣಿಕೆ', ಪ್ರಜಾವಾಣಿ, ದೀಪಾವಳಿ ಸಂಚಿಕೆ, 1966.

ಮುತಾಲಿಕ ದೇಸಾಯಿ ಧ್ರುವರಾಜ : 'ಪ್ರಚ್ಛನ್ನ ಕ್ರಾಂತಿಕಾರಿ ಗಳಗನಾಥ', ಸಂಯುಕ್ತ ಕರ್ನಾಟಕ (ಸಾಪ್ತಾಹಿಕ ಮಂಜರಿ), 5-1-1969.

ರಾಮಕೃಷ್ಣಶಾಸ್ತ್ರಿ ಪ. : 'ಗಳಗನಾಥರು ಬಂದರು' ಕನ್ನಡ ಪ್ರಭ, 24-10-1971

ವಸಂತ : 'ಕನ್ನಡ ಇತಿಹಾಸದ ಜೀವಂತ ಕತೆ, ಮಾಧವ ಕರುಣಾ ವಿಲಾಸ', ಉದಯವಾಣಿ, 12-10-1975.

ವಿದ್ಯಾಶಂಕರ : 'ಕನ್ನಡದ ಮೊತ್ತ ಮೊದಲ ಸಾಮಾಜಿಕ ಕಾದಂಬರಿ', ಕನ್ನಡ ನುಡಿ, ಎಪ್ರಿಲ-ಮೇ 1969.

ವೆಂಕಟಸುಬ್ಬಯ್ಯ ಜಿ. : 'ಬಿ. ವೆಂಕಟಾಚಾರ್ಯರು', ಜೀವನ 24–1 (ಮೇ –1963).

ಶಿವನಂಜಯ್ಯ ಮು. : 'ಮಾಸ್ತಿಯವರ ಚಿಕವೀರರಾಜೇಂದ್ರ', ಪ್ರಬುದ್ಧ ಕರ್ಣಾಟಕ, 55–2 (1973)

ಶಿವಣ್ಣ ಎಸ್. : 'ಬಿ. ವೆಂಕಟಾಚಾರ್ಯರ ಅನುಕ್ತ ಕೃತಿಗಳು', ಕನ್ನಡ ನುಡಿ, ಅಗಷ್ಟ 1969.

ಶಿಂತ್ರಿ ಬಸಪ್ಪನವರು : 'ನಮ್ಮ ಮಾಸಿಕವು', ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957.

,, ,, : 'ಲಿಂಗೈಕ್ಯ ಡೆಪೂಟಿ ಚೆನ್ನಬಸಪ್ಪನವರು', ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957.

ಶ್ರೀರಂಗ : 'ಮರೆತು ಹೋದ ಮೆಚ್ಚಿನ ಕೃತಿ-ಈಶ್ವರೀಸೂತ್ರ, ಮರಾಠರ ಅಭ್ಯುದಯ', ಪ್ರಜಾವಾಣಿ, ದೀಪಾವಳಿ ಸಂಚಿಕೆ, 1972.

ಶೇಷಗಿರಿರಾವ್ ಎಲ್. ಎಸ್. : 'ಸ್ವಾತಂತ್ರ್ಯ ಪೂರ್ವದ ಕನ್ನಡ ಕಾದಂಬರಿ', ಕನ್ನಡ ನುಡಿ, ಡಿಸೆಂಬರ 1963.

ಸಾಲಿ ರಾಮಚಂದ್ರರಾಯರು : 'ಮಾಧವ ಕರುಣಾವಿಲಾಸ', ಸಂಯುಕ್ತ ಕರ್ನಾಟಕ, 27-11-1940. ಮತ್ತು 29-11-1940.

ಸಾಂಗಲಿ ವೆಂಕಟೇಶ : 'ಕರ್ನಾಟಕದ ಬಂಕಿಮಚಂದ್ರ, ಬಿ. ವೆಂಕಟಾಚಾರ್ಯರು', ಕರ್ಮವೀರ, 6-7-1969.

,, ,, : 'ಗಳಗನಾಥ', ಕನ್ನಡ ನುಡಿ, 28–2 (1965.)

ಸುಬ್ಬರಾಯ ಜಿ. ಪಿ. : 'ವಿಶ್ವವಿಖ್ಯಾತ ಸಾಲಗಾರರು', ಸುಧಾ, 6-10-1974.

ಹಣಮಂತ ವೆಂಕಟೇಶ : 'ಪತ್ರವ್ಯವಹಾರ', ಕನ್ನಡ ಶಾಲಾ ಪತ್ರಕ, ಜೂನ, 1888.

ಹಾವನೂರ ಶ್ರೀನಿವಾಸ : 'ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು', ಕಸ್ತೂರಿ, ಮೇ 1970.

,, ,, : 'ಕನ್ನಡ ಪತ್ರಿಕೋದ್ಯಮದ ಮೊದಲ ಹೆಜ್ಜೆಗಳು', ಕಸ್ತೂರಿ, ಎಪ್ರಿಲ 1973.

,, ,, : 'ಬಿ. ವೆಂಕಟಾಚಾರ್ಯರ ಕೃತಿಗಳು', ಕನ್ನಡ ನುಡಿ, ಎಪ್ರಿಲ–ಮೇ 1969

ಹಾವನೂರ ಶ್ರೀನಿವಾಸ : 'ಮಂಗಳೂರು ಸಮಾಚಾರ', ಕಸ್ತೂರಿ, ಮೇ 1969.

,, ,, : 'ಶಿಕ್ಷಕ ಗಳಗನಾಥರು', ಕಸ್ತೂರಿ, ಮೇ 1972

ಹಿರೇಮಠ ಆರ್. ಸಿ. : 'ವಿಲಿಯಂ ಅಲೆನ್ ರಸೆಲ್', ಜೀವನ ಶಿಕ್ಷಣ, ವಿಶೇಷ ಸಂಚಿಕೆ, 1957.

ಹುದ್ದಾರ ಮ. ನ. : ವಾಗ್ಭೂಷಣ ನಡೆದು ಬಂದ ದಾರಿ', ವಾಗ್ಭೂಷಣ 1973

ಹೊಂಬಳ ಕೃಷ್ಣಾಜಿ ಶಂಕರ : 'ನಾನು ಕಂಡ ಗಳಗನಾಥರು', ಸದ್ಬೋಧ ಚಂದ್ರಿಕೆ, ಎಪ್ರಿಲ-ಮೇ 1969.

# ಅಕಾರಾದಿ ಪದಸೂಚಿ

## ಈ



## ಉ



## ಎ



## ಏ



## ಒ



## ಔ



## ಕ

ಖ



ಗ

## ಘ



## ಚ

## ಛ



## ಜ



## ಟ



## ಠ



## ಡ



## ತ

## ಪ

## ಫ



## ಬ



## ಭ



## ಮ

## ಲ



## ವ

## ಶ



## ಷ



## ಸ

## ಹ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| 20 | 4 | ಧಾರವಾಡದ | ಧಾರವಾಡ |
| 20 | 17 | 1956 | 1856 |
| 27 | 8 | ದರ್ಥಿ | ಧರ್ತಿ |
| 29 | 33 | ರಸಲ್ | ರಸೆಲ್ |
| 31 | 3 | ಮಠ ಪತ್ರಿಕೆ | 'ಮಠ ಪತ್ರಿಕೆ' |
| 32 | 19 | ಹುಲಕವಿ | ಹುಲಿಕವಿ |
| 44 | 17 | ಅವರ | ಅದರ |
| 59 | 6 | ವಿಧ್ಯಾರ್ಥಿಯನ್ನು | ವಿದ್ಯಾರ್ಥಿಯನ್ನು |
| 60 | 8 | ಹೋದರು | ಹೋದರೂ |
| 60 | 19 | ಓದುವಂಥಹೆ | ಓದುವಂಥ |
| 60 | ಅಡಿ-ಟಿಪ್ಪಣಿ | ಮರೆಯನು | ಮರೆಯೆನು |
| 63 | 15 | result | results |
| 68 | 13 | ಸದ್ಗುರುನಾಥರ | ಸದ್ಗುರುನಾಥನ |
| 84 | 30 | ಶ್ರೀ ಸದ್ಗುರುವು.... | "ಶ್ರೀ ಸದ್ಗುರುವು.... |
| 112 | 24 | ಮಾಲ್ಹಾರ ಭಟ್ಟ | ಮಲ್ಹಾರಭಟ್ಟ |
| 123 | 26 | ಇಂಗಳೀಕರ | ಇಂಗಳಗಿ |
| 139 | 23 | ಸಂವಾದೀಪದವಾಗುತ್ತದೆ | ಸಂವಾದೀ ಪದವಾಗುತ್ತದೆ |
| 165 | 2 | ಆಪಟೆಯುದರ | ಆಪಟೆಯವರ |
| 168 | 20 | ರಣಮಸ್ತ, | ರಣಮಸ್ತ– |
| 186 | 14 | ಮೊದಲು | ಮೊದಲ |
| 198 | 24 | ತಂದಿದೆ | ತಂದಿವೆ |
| 250 | 12 | ಮೀಸಲಾಗಿದೆ | ಮೀಸಲಾಗಿವೆ |
| 256 | 24 | ವಾಲಟರ್ | ವಾಲ್ಟರ್ |
| 282 | 18 | ಪೋರ್‌ಸ್ಟ್‌ರ್ | ಫಾರ್ಸ್ಟರ್ |
| 300 | 27 | ಮಹಾಮಹೋಪಾಧ್ಯಾಯ, | ಮಹಾಮಹೋಪಾಧ್ಯಾಯ |
| 304 | 25 | ಸದ್ಗುರುವಿನ್ನ | ಸದ್ಗುರುವಿನ |
| 314 | 2 | ಇಂಗಳೀಕರ | ಇಂಗಳಗಿ |

| | | | |
|---|---|---|---|
| 320 | 13 | ಪ್ರಸ್ತಾವನೆಯಲ್ಲಿ | ಪ್ರಸ್ತಾವನೆಯಲ್ಲಿ |
| 328 | 29 | ನಾಲ್ವಡಿ | ನಾಲ್ಮಡಿ |
| 330 | 4 | ಬರೆದಿರುವನು | ಬರೆದಿರುವೆನು |
| 330 | 5 | ಪೂಣಗೊಂಡು | ಪೂರ್ಣಗೊಂಡು |
| 352 | ಅಡಿ-ಟಿಪ್ಪಣಿ-1 | ಗಡಿಬಿಂಬ | ಗತಿಬಿಂಬ |
| 359 | 29 | ಇಂಗಳಿಗೆ | ಇಂಗಳಗಿ |
| 378 | ಅಡಿ-ಟಿಪ್ಪಣಿ-3 | 'ರಾಜಾಸಿಂಹ' | 'ರಾಜಸಿಂಹ' |
| 381 | 19 | ಅಬಿಮಾನದಿಂದಲೋ | ಅಭಿಮಾನದಿಂದಲೋ |
| 383 | ಅಡಿ-ಟಿಪ್ಪಣಿ-4 | ಆನಂವಮಠ | ಆನಂದಮಠ |
| 412 | 19 | ಭೀಪಣ | ಭೀಷಣ |

********

## ಲೇಖಕರನ್ನು ಕುರಿತು—

ಬಿ.ಎ.,ಎಂ.ಎ. ಪರೀಕ್ಷೆಗಳನ್ನು ಉಚ್ಚ ಶ್ರೇಣಿಯಲ್ಲಿ ವಿಶ್ವವಿದ್ಯಾಲಯಕ್ಕೆ ಪ್ರಥಮ ಸ್ಥಾನ ಪಡೆದು ತೇರ್ಗಡೆಯಾದ ಡಾ. ಕೃಷ್ಣಮೂರ್ತಿ ಕಿತ್ತೂರ ಅವರಿಗೆ ವಿದ್ಯಾರ್ಥಿದೆಸೆಯಿಂದಲೇ ಕನ್ನಡ ಸಾಹಿತ್ಯದಲ್ಲಿ ಆಸಕ್ತಿ. ಅವರ ಸೃಜನಶೀಲ ಶಕ್ತಿ ಮತ್ತು ವಿಮರ್ಶಾಪ್ರಜ್ಞೆ ಅವರ ಕೃತಿಗಳಲ್ಲಿ ವ್ಯಕ್ತವಾಗಿದೆ. ಪ್ರಸ್ತುತ 'ಗಳಗನಾಥರು ಮತ್ತು ಅವರ ಕಾದಂಬರಿಗಳು' ಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯವು ಮಾನ್ಯಮಾಡಿ ಅವರಿಗೆ ೧೯೭೬ ರಲ್ಲಿ ಪಿಎಚ್.ಡಿ. ಪದವಿಯನ್ನು ದಯಪಾಲಿಸಿತು.

ಎರಡು ದಶಕಕ್ಕೂ ಹೆಚ್ಚು ಕಾಲವನ್ನು ಅಧ್ಯಾಪಕ ವೃತ್ತಿಯಲ್ಲಿ ಕಳೆದ ಶ್ರೀಯುತರು ೧೯೭೦ ರಿಂದ ಕರ್ನಾಟಕ ವಿಶ್ವವಿದ್ಯಾಲಯದ ಕಲಬುರ್ಗಿಯ ಸ್ನಾತಕೋತ್ತರ ಕೇಂದ್ರದಲ್ಲಿ ಕನ್ನಡದ ಅಧ್ಯಾಪಕರಾಗಿರುವರು.